## ವಿಷಯಸೂಚಿ

(1526 ರವರೆಗೆ)

# ಅರಿಕೆ

ವಿವಿಧ ಜನಾಂಗಗಳ, ಆಕ್ರಮಣಕಾರರ ಯುದ್ಧ ಭೂಮಿಯೂ, ಹೊಸ ಧರ್ಮಗಳು ಉದಯಿಸಿದ ಕ್ಷೇತ್ರವೂ, ವಿವಿಧ ಸಂಸ್ಕೃತಿಗಳು ಸಂಮಿಳನಗೊಂಡ ಪ್ರದೇಶವೂ ಆದ ಭಾರತದ ಇತಿಹಾಸವು-ಅದರಲ್ಲೂ ಆರಂಭ ಕಾಲದಿಂದ ಕ್ರಿ.ಶ. 1526ರವರೆಗಿನ ಅವಧಿಗೆ ಸಂಬಂಧಿಸಿದುದು-ಅತ್ಯಂತ ಜಟಿಲವಾದ ಅಧ್ಯಯನ ಕ್ಷೇತ್ರವಾಗಿದೆ. ಸುಮಾರು ಐದು ಸಹಸ್ರ ವರ್ಷಗಳ ಅವಧಿಯ ಇತಿಹಾಸದ ಸಂಗತಿಗಳನ್ನೂ ಅದರ ಎಲ್ಲ ವೈವಿಧ್ಯಮಯ ವಿಷಯಗಳನ್ನು ಒಳಗೊಂಡಿರುವಂಥದು. ಇಂತಹ ವ್ಯಾಪಕವಾದ ವಿಷಯವನ್ನು ಒಂದು ಇತಿಮಿತಯ ಚೌಕಟ್ಟಿನೊಳಗೆ ಹೆಚ್ಚು ವಿಶದವಾಗಿ ನಿರೂಪಿಸುವುದು ಬಹಳ ಕಷ್ಟದ ಕೆಲಸವಾದರೂ ನನ್ನ ಈ ಕೃತಿಯಲ್ಲಿ ಯಾವುದೇ ಪ್ರಮುಖ ಸಂಗತಿಯನ್ನೂ ಸಾಧ್ಯವಾದ ಮಟ್ಟಿಗೆ ಕೈಬಿಡದೆ ನೋಡಿಕೊಳ್ಳಲಾಗಿದೆ. ಆದ್ದರಿಂದ ಇದೊಂದು ಹರ್ಷದಾಯಕ ಅಧ್ಯಯನವಾಗಬಲ್ಲುದೆಂದು ಭಾವಿಸಲಾಗಿದೆ.

ಯಾವುದೇ ಒಂದು ದೇಶದ ಶ್ರೇಷ್ಠತೆಯನ್ನು ಅಳೆಯುವಾಗ ಅಲ್ಲಿ ಆಳಿದ ಪ್ರತಿಭಾವಂತ ರಾಜಮಹಾರಾಜರುಗಳನ್ನೇ ಅಲ್ಲದೆ ಜೀವನದ ವಿವಿಧ ಕ್ಷೇತ್ರಗಳಿಗೆ ಮಹತ್ವ ಪೂರ್ಣ ಸೇವೆ ಸಲ್ಲಿಸಿ ಭಾರತದ ಸಂಸ್ಕೃತಿಯನ್ನು ಉಜ್ವಲ ಹಾಗೂ ಚಿರಂತನಗೊಳಿಸಿರುವ ದಾರ್ಶನಿಕರು, ಸಮಾಜ ಸುಧಾರಕರು, ಸಾಹಿತಿಗಳು, ವಿಜ್ಞಾನಿಗಳು, ಕಲಾಕಾರರು ಮೊದಲಾದವರ ಕೊಡುಗೆಗಳನ್ನೂ ಪರಿಶೀಲಿಸಬೇಕಾಗುತ್ತದೆ. ಈ ದೃಷ್ಟಿಯನ್ನೂ ಗಮನದಲ್ಲಿಟ್ಟುಕೊಂಡು ಸಾಧ್ಯವಾದಲ್ಲೆಲ್ಲಾ ಅವರ ಪಾತ್ರವನ್ನು ನಿರೂಪಿಸುವ ಪ್ರಯತ್ನವನ್ನೂ ಮಾಡಲಾಗಿದೆ.

ಭಾರತವು ಅನಾದಿಕಾಲದಿಂದಲೂ ಪರಕೀಯರ ಆಕ್ರಮಣಕ್ಕೊಳಗಾಗಿ ರಾಜಕೀಯ ಮತ್ತು ಸಾಂಸ್ಕೃತಿಕ ಅಲ್ಲೋಲ ಕಲ್ಲೋಲಕ್ಕೆ ಸಿಲುಕಿದ ಪ್ರದೇಶವಾಗಿರುತ್ತದೆ. ಆದಾಗ್ಯೂ ಈ ರೀತಿಯ ಅಲ್ಲೋಲ ಕಲ್ಲೋಲಗಳ ನಡುವೆಯೂ ಭಾರತೀಯ ನಾಗರಿಕತೆ ಮತ್ತು ಸಂಸ್ಕೃತಿಯು ತನ್ನ ವಿಶೇಷ ಗುಣಗಳಿಂದ ಅವ್ಯಾಹತವಾಗಿ ಮುಂದುವರಿದುಕೊಂಡು ಬಂದಿರುವ ಬಗೆಯನ್ನೂ ಚಿತ್ರಿಸಲು ಹವಣಿಸಲಾಗಿದೆ.

ಒಂದು ದೇಶದ ಸಂಸ್ಕೃತಿಯು ಕೇವಲ ಕೆಲವೇ ಮಹಾನ್ ವ್ಯಕ್ತಿಗಳ ಸಾಧನೆಗಳ ಮೂಲಕ ಮಾತ್ರವೇ ವ್ಯಕ್ತಪಡಲಾರದು. ಪ್ರತಿಯಾಗಿ ಒಂದು ದೇಶದ ಸಾಂಸ್ಕೃತಿಕ ಸಾಧನೆಗಳು ಜನಸಾಮಾನ್ಯರ ತಿಳುವಳಿಕೆಯ ಮಟ್ಟವನ್ನೂ ಅವಲಂಭಿಸಿರುತ್ತವೆ. ದಾರ್ಶನಿಕರು, ಸಾಧುಸಂತರು ಸತ್ಯಾನ್ವೇಷಣೆಯಲ್ಲೂ, ಸಾಹಿತಿಗಳು ಮತ್ತು ಕಲಾಕಾರರು ಸಾಹಿತ್ಯ ಮತ್ತು ಕಲಾಕೃತಿಗಳ ನಿರ್ಮಾಣದಲ್ಲೂ ತೊಡಗಿದ್ದರೆ, ಸಮಾಜದ ಇತರ ವರ್ಗಕ್ಕೆ ಸೇರಿದವರು ಇವುಗಳಿಗೆ ಪೂರಕವಾಗಿ ಕಷ್ಟಪಟ್ಟು ದುಡಿದು ದೇಶವನ್ನು ಸಂಪದ್ಭರಿತವನ್ನಾಗಿ ಮಾಡಿದರು. ಈ ಸಂಪತ್ತು ಪ್ರಾಚೀನ ಮತ್ತು ಮಧ್ಯಕಾಲೀನ ಯುಗಗಳಲ್ಲಿ ಐಶ್ವರ್ಯಾಕಾಂಕ್ಷಿಗಳೂ, ಆಕ್ರಮಣಕಾರರೂ ಆದ ಪರ್ಶಿಯನ್ನರು, ಗ್ರೀಕರು, ಶಕರು, ಕುಶಾನರು, ಹೂಣರು, ಅರಬ್ಬರು, ಟರ್ಕರು ಮತ್ತು ಆಫ್‌ಘನ್ನರು ಮೊದಲಾದ ವಿದೇಶೀಯರನ್ನು ಆಕರ್ಷಿಸಿತು. ಈ ಆಕ್ರಮಣಕಾರರಲ್ಲಿ ಬಲಶಾಲಿಗಳಾದವರು ರಾಜ್ಯ ಸ್ಥಾಪನೆಯನ್ನು ಮಾಡಿದರು, ಆದರೆ ಈ ರೀತಿಯ

ರಾಜ್ಯಸ್ಥಾಪನೆಯಿಂದ ಭಾರತೀಯರ ಸಂಸ್ಕೃತಿಯು ಹೆಚ್ಚಿನ ಆಘಾತವನ್ನೇನೂ ಅನುಭವಿಸಲಿಲ್ಲ. ಸಹಿಷ್ಣುತಾ ಮನೋಭಾವದವರೂ, ಒಳಿತನ್ನು ಸ್ವೀಕರಿಸುವ ಮನೋವೈಶಾಲ್ಯವುಳ್ಳವರೂ ಆದ ಹಿಂದುಗಳು ಹೊರಗಿನಿಂದ ಬಂದ ವಿಭಿನ್ನ ಜನಾಂಗಗಳ ಸಂಸ್ಕೃತಿಯ ಹಲವಾರು ಉತ್ತಮ ಅಂಶಗಳನ್ನು ತಮ್ಮ ಸಂಸ್ಕೃತಿಯಲ್ಲಿ ಹೊಂದಿಸಿಕೊಂಡು ಭಾರತೀಯ ಸಂಸ್ಕೃತಿಯನ್ನು ಪುಟವಿಟ್ಟ ಚಿನ್ನದಂತೆ ಮಾಡಿರುವುದನ್ನು ಯಾರೂ ಗಮನಿಸದೆ ಇರುವಂತಿಲ್ಲ. ಒಂದೆಡೆ ಟರ್ಕಿ ಸುಲ್ತಾನರುಗಳು ರಾಜ್ಯಾಡಳಿತದಲ್ಲಿ ತೊಡಗಿದ್ದರೆ ಮತ್ತೊಂದು ಕಡೆ ಭಕ್ತಿಪಂಥದ ಮುಂದಾಳುಗಳು ಸಮಾಜ ಸುಧಾರಕರು ಹಾಗೂ ಮುಸ್ಲಿಂ ಸೂಫಿ ಸಂತರು ಹಿಂದೂ ಮತ್ತು ಮುಸ್ಲಿಂ ಜನಾಂಗಗಳ ನಡುವೆ ಸೌಹಾರ್ದತೆ, ಸಹಕಾರ ಮತ್ತು ಸಹಿಷ್ಣುತೆಯನ್ನು ಏರ್ಪಡಿಸಲು ಪ್ರಯತ್ನಿಸಿ ಸಫಲರಾದುದು ಭಾರತದ ಇತಿಹಾಸದಲ್ಲಿ ಮಹತ್ವ ಪೂರ್ಣ ಸಂಗತಿಯಾಗಿರುತ್ತದೆ. ಇಂತಹ ಈ ಧಾರ್ಮಿಕ ಸಾಂಸ್ಕೃತಿಕ ಕ್ರಿಯಾಕಲಾಪಗಳು ರಾಜಕೀಯ ಶಕ್ತಿಗಳು ನಿರ್ಮಿಸಿದ್ದ ಜನಜನಗಳ ಮಧ್ಯದ ಕಂದರಕ್ಕೆ ಸೇತುವೆಯನ್ನು ನಿರ್ಮಿಸುವಲ್ಲಿ ಸಫಲವಾಗುವುದರ ಮೂಲಕ ಭಾರತದ ಇತಿಹಾಸವನ್ನು ಉಜ್ವಲಗೊಳಿಸಿದವು. ಇಂತಹ ಒಂದು ತಿಳಿವಿನ ದೃಷ್ಟಿಯನ್ನು ಮುಂದಿಡುವುದೇ ಈ ಹೊತ್ತಿಗೆಯ ಮುಖ್ಯ ಉದ್ದೇಶವಾಗಿರುತ್ತದೆ.

ಈ ಕೃತಿಯನ್ನು ರಚಿಸುವಲ್ಲಿ ನನಗೆ ನೆರವಾದ ಆಂಗ್ಲ ಭಾಷೆಯಲ್ಲಿನ ಕೆಲವು ಪ್ರಮುಖ ಕೃತಿ, ಕನ್ನಡದಲ್ಲಿ ಲಭ್ಯವಿರುವ ಇತಿಹಾಸ ಕೃತಿ ಹಾಗೂ ಇತರ ಸಾಹಿತ್ಯ ಕೃತಿಗಳ ಕರ್ತೃಗಳೆಲ್ಲರಿಗೂ ಮತ್ತು ಅವುಗಳ ಪ್ರಕಾಶಕರಿಗೂ ನಾನು ಋಣಿಯಾಗಿದ್ದೇನೆ. ಮೈಸೂರು ವಿಶ್ವವಿದ್ಯಾಲಿಯದ ಬಿ.ಎ. ಮತ್ತು ಸ್ನಾತಕೋತ್ತರ ಇತಿಹಾಸ ವಿದ್ಯಾರ್ಥಿಗಳ ಅವಶ್ಯಕತೆಯನ್ನು ಮುಖ್ಯವಾಗಿ ಗಮನದಲ್ಲಿಟ್ಟುಕೊಂಡು ಈ ಕೃತಿಯನ್ನು ರಚಿಸಲಾಗಿದೆ. ಆದಾಗ್ಯೂ ಇದು ಭಾರತದ ಇತಿಹಾಸದ ಮತ್ತು ಸಾಂಸ್ಕೃತಿಕ ಅಧ್ಯಯನದಲ್ಲಿ ಆಸಕ್ತಿಯುಳ್ಳ ಇತರರಿಗೂ ಪ್ರಯೋಜನವಾಗಬಲ್ಲದೆಂದು ಭಾವಿಸಲಾಗಿದೆ.

ಅಧ್ಯಾಯ-1

# ಭಾರತದ ಮೇಲ್ಮೈಲಕ್ಷಣಗಳು ಮತ್ತು ಇತಿಹಾಸದ ಮೇಲೆ ಅವುಗಳ ಪ್ರಭಾವ

ಭಾರತವು ಭೌಗೋಳಿಕವಾಗಿ ವೈವಿಧ್ಯಮಯವಾದ ಮೇಲ್ಮೈಲಕ್ಷಣಗಳನ್ನು ಹೊಂದಿದೆ. ಈ ದೇಶವು ಉನ್ನತವಾದ ಪರ್ವತಗಳನ್ನು ಬಹು ದೊಡ್ಡ ನದಿಗಳನ್ನೂ ಫಲವತ್ತಾದ ಭೂಮಿಯನ್ನು ಮರಳುಗಾಡನ್ನು ದಟ್ಟವಾದ ಅರಣ್ಯಗಳನ್ನು ಹೇರಳವಾದ ಖನಿಜಸಂಪತ್ತು ಮೊದಲಾದವುಗಳನ್ನು ಹೊಂದಿದೆ. ಇದರಿಂದ ಭಾರತದ ಇತಿಹಾಸವು ಭೌಗೋಳಿಕ ಲಕ್ಷಣಗಳಿಂದ ಬಹಳ ಮಟ್ಟಿಗೆ ಪ್ರಭಾವಿತವಾಗಿದೆ. ಇತಿಹಾಸ ಮತ್ತು ಭೂಗೋಳ ಶಾಸ್ತ್ರಕ್ಕೂ ನಿಕಟ ಸಂಬಂಧವಿದೆ. ಇತಿಹಾಸವು ಭೂಮಿಯ ಮೇಲೆ ವಾಸಿಸುವ ಮಾನವರ ವಿಷಯವನ್ನು ತಿಳಿಸಿದರೆ ಭೂಗೋಳ ಶಾಸ್ತ್ರವು ಮಾನವನು ವಾಸಿಸುತ್ತಿರುವ ಭೂಮಿಯ ವಿಷಯವನ್ನು ಕುರಿತು ತಿಳಿಸುತ್ತದೆ. ಭೂಗೋಳ ಮತ್ತು ಕಾಲಗಣನೆಯ ಶಾಸ್ತ್ರಗಳನ್ನು ಇತಿಹಾಸದ ಎರಡು ಕಣ್ಣುಗಳೆಂದು ಕರೆದಿದ್ದಾರೆ. ಭಾರತದ ಮೇಲ್ಮೈಲಕ್ಷಣಗಳಿಗೂ ಮತ್ತು ಭಾರತೀಯರ ಜೀವನ ವಿಧಾನಕ್ಕೂ ನಿಕಟ ಸಂಬಂಧವಿದ್ದು ಅವು ಭಾರತೀಯ ಸಂಸ್ಕೃತಿಯನ್ನು ರೂಪಿಸುವುದರಲ್ಲಿ ಮಹತ್ವ ಪೂರ್ಣ ಪ್ರಭಾವವನ್ನು ಬೀರಿವೆ. ಭೌಗೋಳಿಕ ಅಂಶಗಳು ಬಹಳ ಮಟ್ಟಿಗೆ ಮಾನವನ ಸ್ವಭಾವ, ಚಟುವಟಿಕೆ ಆಹಾರ ಉಡಿಗೆ ತೊಡಿಗೆ ಹಾಗೂ ಅವನ ಸಿದ್ಧಿ ಸಾಧನೆಗಳನ್ನು ನಿರ್ಧರಿಸುತ್ತವೆ. ಅನೇಕ ವೇಳೆ ಒಂದು ರಾಷ್ಟ್ರದ ಇತಿಹಾಸ ರೂಪುಗೊಳ್ಳುವುದು ಮತ್ತು ಅದರ ವಿಕಾಸವು ಅಲ್ಲಿನ ಭೌಗೋಳಿಕ ಅಂಶಗಳನ್ನು ಅವಲಂಭಿಸಿರುತ್ತದೆ. ಉದಾ: ಪ್ರಾಚೀನ ಗ್ರೀಕರು ಇಡೀ ಗ್ರಿಸ್ ದೇಶವನ್ನೆಲ್ಲಾ ಒಟ್ಟುಗೂಡಿಸಿ ರಾಜಕೀಯ ಏಕತೆಯನ್ನು ಏರ್ಪಡಿಸಲು ಸಾಧ್ಯವಾಗಲಿಲ್ಲ. ಗ್ರೀಸ್ ದೇಶವು ಪರ್ವತಮಯ ಪ್ರದೇಶವಾಗಿದ್ದು ಅಲ್ಲಿನ ಪರ್ವತಗಳು ದೇಶದ ರಾಜಕೀಯ ಏಕತೆಗೆ ದೊಡ್ಡ ಅಡಚಣೆಗಳಾಗಿ ಮಾರ್ಪಟ್ಟಿದ್ದುದು ಇದಕ್ಕೆ ಮುಖ್ಯ ಕಾರಣವಾಗಿತ್ತು. ಅಂತೆಯೇ ಸುತ್ತಲೂ ಸಮುದ್ರದಿಂದ ಸುತ್ತುವರಿಯಲ್ಪಟ್ಟಿರುವ ಇಂಗ್ಲೆಂಡ್ ದೇಶವು ತನ್ನ ಭೌಗೋಳಿಕ ಸ್ಥಾನಮಾನದಿಂದಾಗಿ ಅಲ್ಲಿನ ಜನರು ನೌಕಾಯಾನ ಮತ್ತು ವ್ಯಾಪಾರ ವಾಣಿಜ್ಯಗಳಲ್ಲೂ ತೊಡಗಲು ಕಾರಣವಾಗಿತ್ತು. ಇಂಗ್ಲೆಂಡ್ ಒಂದು ಕಾಲದಲ್ಲಿ ವಿಶಾಲವಾದ ಸಾಮ್ರಾಜ್ಯವನ್ನು ಸ್ಥಾಪಿಸುವುದಕ್ಕೆ ಅದರ ಭೌಗೋಳಿಕ ಸ್ಥಾನವು ಮತ್ತು ಪ್ರಬಲ ನೌಕಾಶಕ್ತಿಯು ಕಾರಣವಾಗಿತ್ತು. ಇದೇ ರೀತಿಯಲ್ಲಿ ಭಾರತದ

ಮೇಲ್ಮೈಲಕ್ಷಣಗಳನ್ನು ಗಮನಿಸಿದಾಗ ಅವುಗಳು ಸಹ ಭಾರತದ ಇತಿಹಾಸವನ್ನು ರೂಪಿಸುವುದರಲ್ಲಿ ತಮ್ಮದೇ ಆದ ಪ್ರಭಾವವನ್ನು ಬೀರಿರುವುದು ಗೋಚರವಾಗುತ್ತದೆ.

ಭಾರತವು ಒಂದು ಉಪಖಂಡ. ಇದು ಏಷ್ಯಾಖಂಡದ ದಕ್ಷಿಣ ಭಾಗದಲ್ಲಿದೆ. ಭಾರತವು ಪೂರ್ವ ಪಶ್ಚಿಮವಾಗಿ 2500 ಮೈಲಿಗಳೂ ಉತ್ತರ ಮತ್ತು ದಕ್ಷಿಣಾಭಿಮುಖವಾಗಿ 2000 ಮೈಲಿಗಳ ಉದ್ದಗಲದ ವಿಸ್ತೀರ್ಣದಿಂದ ಕೂಡಿದೆ. ಇದಲ್ಲದೆ ಭಾರತವು 6000 ಮೈಲಿಗಳ ಭೂಗಡಿ ಪ್ರದೇಶವನ್ನು 5000 ಮೈಲಿಗಳ ಸಮುದ್ರಗಡಿ ಪ್ರದೇಶವನ್ನು ಹೊಂದಿದೆ. 1947ರಲ್ಲಿ ದೇಶವು ವಿಭಜನೆಗೊಂಡ ಮೇಲೆ ಭಾರತ ಮತ್ತು ಪಾಕೀಸ್ಥಾನಗಳ ಒಟ್ಟು ವಿಸ್ತೀರ್ಣದಲ್ಲಿ 1/3 ಭಾಗವು ಕಡಿಮೆಯಾಯಿತು. ಆದಾಗ್ಯೂ ಭಾರತವು ವಿಸ್ತೀರ್ಣದಲ್ಲಿ ಇಡೀ ಏಷ್ಯಾ ಖಂಡದಲ್ಲೇ ಬಹು ದೊಡ್ಡ ದೇಶ. ಭಾರತವು ಸಂಪದ್ಭರಿತ ದೇಶ. ಇಲ್ಲಿನ ಭೂಮಿಯು ಫಲವತ್ತಾಗಿದೆ, ಸೌಂದರ್ಯಕ್ಕೆ ಹೆಸರುವಾಸಿಯಾಗಿದೆ. ಭಾರತದಲ್ಲಿ ಉನ್ನತವಾದ ಗಿರಿಶಿಖರಗಳು, ವೇಗವಾಗಿ ಮತ್ತು ನಿಧಾನವಾಗಿ ಹರಿಯುವ ಅನೇಕ ನದಿಗಳು ಇಲ್ಲಿವೆ. ದಟ್ಟವಾದ ಅರಣ್ಯಗಳು, ವಿಶಾಲವಾದ ಮತ್ತು ಸುಂದರವಾದ ಮೈದಾನಗಳು ಕೊಡಗು ಪ್ರದೇಶದಂತ ಸೌಂದರ್ಯದ ತಾಣಗಳು ಮೊದಲಾದುವುಗಳು ಭಾರತದ ಸೌಂದರ್ಯವನ್ನು ಇಮ್ಮಡಿಗೊಳಿಸಿ, ಸಾಂಸ್ಕೃತಿಕ ಪ್ರಗತಿಗೆ ಕಾರಣವಾಗಿವೆ.

ಭಾರತದ ಮೇಲ್ಮೈ ಲಕ್ಷಣಗಳನ್ನು ಮುಖ್ಯವಾಗಿ ನಾಲ್ಕು ವಿಭಾಗಗಳನ್ನಾಗಿ ವಿಂಗಡಿಸಬಹುದು. (1) ಉನ್ನತವಾದ ಹಿಮಾಲಯ ಪರ್ವತ ಶ್ರೇಣಿಗಳು (2) ಸಿಂಧೂ ಗಂಗಾ ಮತ್ತು ಬ್ರಹ್ಮಪುತ್ರ ನದಿಗಳ ನೀರಿನ ಆಸರೆಯಿಂದ ಕೂಡಿರುವ ಫಲವತ್ತಾದ ಬಯಲು ಪ್ರದೇಶ (3) ದಖನ್ ಪ್ರಸ್ಥಭೂಮಿ (ಪೂರ್ವ ಘಟ್ಟಗಳಿಗೂ ಮತ್ತು ಪಶ್ಚಿಮ ಘಟ್ಟಗಳಿಗೂ ನಡುವಿನ ಪ್ರದೇಶ). (4) ತೀರಪ್ರದೇಶಗಳು.

**ಪರ್ವತಗಳು**

ಪ್ರಕೃತಿಯು ಭಾರತಕ್ಕೆ ಸುವ್ಯವಸ್ಥಿತವಾದ ಗಡಿಗಳನ್ನು ದೊರೆಕಿಸಿಕೊಟ್ಟಿದೆ. ಸುಮಾರು 1500 ಮೈಲಿಗಳಿಗೂ ಹೆಚ್ಚಾಗಿ ಪಶ್ಚಿಮದಿಂದ ಪೂರ್ವಾಭಿಮುಖವಾಗಿ ಹಬ್ಬಿರುವ ಹಿಮಾಲಯಪರ್ವತಸ್ತೋಮಗಳು ನಮ್ಮ ದೇಶದ ಇತಿಹಾಸ ಮತ್ತು ನಾಗರಿಕತೆಯ ಬೆಳವಣಿಗೆಯಲ್ಲಿ ವಿಶೇಷ ಪಾತ್ರವಹಿಸಿವೆ. ಪ್ರಪಂಚದಲ್ಲೇ ಅತ್ಯಂತ ಎತ್ತರವಾದ ಗಿರಿಶಿಖರಗಳು ಇಲ್ಲಿವೆ. ಇವು ಸದಾಕಾಲವು ಹಿಮಾಚ್ಛಾದಿತವಾಗಿದ್ದು ದೇಶಕ್ಕೆ ಅನೇಕ ರೀತಿಯಲ್ಲಿ ನೆರವಾಗಿವೆ. ಹಿಮಾಲಯ ಪರ್ವತಸ್ತೋಮಗಳು ಉತ್ತರದ ಕಡೆಯಿಂದ ಭಾರತದ ಮೇಲೆ ಪರಕೀಯರು ಆಕ್ರಮಣ ಮಾಡದಂತೆ ದೊಡ್ಡ ತಡೆಯನ್ನುಂಟು ಮಾಡಿವೆ. ಅಂತೆಯೆ ಉತ್ತರದ ಕಡೆಯಿಂದ ಬೀಸುವ ಶೀತಮಾರುತಗಳನ್ನು ತಡೆದು ದೇಶಕ್ಕೆ ಹಿತಕರವಾದ ವಾಯುಗುಣವನ್ನು ದೊರಕಿಸಿಕೊಟ್ಟಿವೆ. ಇದಲ್ಲದೆ ಹಿಮಾಲಯ ಪರ್ವತ ಶ್ರೇಣಿಗಳು ಉತ್ತರ ಭಾರತದಲ್ಲಿ ಹರಿಯುವ ಅನೇಕ ನದಿಗಳ ಉಗಮಸ್ಥಾನವಾಗಿವೆ. ಸದಾಕಾಲವೂ ತುಂಬಿ ಹರಿಯುವ ಈ ನದಿಗಳು ಭಾರತೀಯರ ಶ್ರೀಮಂತಿಕೆಗೆ ಕಾರಣವಾಗಿವೆ. ಸದಾಕಾಲವೂ ತುಂಬಿ ಹರಿಯುವ ಈ ಜೀವ ನದಿಗಳು ಇಲ್ಲದೆ ಹೋಗಿದ್ದಲ್ಲಿ ಉತ್ತರ ಭಾರತವೆಲ್ಲವೂ ಒಂದುವಿಶಾಲವಾದ ಮರಳುಗಾಡಾಗಿ ಪರಿಣಮಿಸುತ್ತಿತ್ತು. ಮೇಲಾಗಿ ಹಿಮಾಲಯ

ಪರ್ವತಗಳು ಭಾರತೀಯರ ಕಲೆ, ಸಾಹಿತ್ಯ ಮತ್ತು ಧಾರ್ಮಿಕ ಜೀವನದ ಮೇಲೂ ತಮ್ಮ ಪ್ರಭಾವವನ್ನು ಬೀರಿವೆ. ಹಿಮಾಲಯ ಪರ್ವತಗಳಲ್ಲಿನ ಗಿರಿಶಿಖರಗಳು ದೇವಾನು ದೇವತೆಗಳ ವಾಸಸ್ಥಾನಗಳೆಂದು ಭಾರತೀಯರು ನಂಬಿರುತ್ತಾರೆ. ಇಲ್ಲಿನ ಕೈಲಾಸ ಗಿರಿ, ಧವಳಗಿರಿ, ಕಾಂಚನಗಂಗಾ ಅಮರನಾಥ, ಬದರಿನಾಥ, ಕೇದಾರನಾಥ, ಹರಿದ್ವಾರ, ಹೃಷಿಕೇಶ, ಮೊದಲಾದುವುಗಳು ಪುಣ್ಯಸ್ಥಳಗಳಾಗಿದ್ದು ಭಾರತೀಯರು ಅವುಗಳ ಬಗ್ಗೆ ಪೂಜ್ಯಭಾವನೆ ಹೊಂದಿದ್ದಾರೆ. ಹಿಮಾಲಯ ಪರ್ವತಸ್ತೋಮಗಳು ಭಾರತೀಯರ ಚಿಂತನ ಮಂತನಗಳ ಮೇಲೆ ಹೆಚ್ಚಿನ ಪ್ರಭಾವವನ್ನು ಬೀರಿ ಭಾರತದ ಇತಿಹಾಸದಲ್ಲಿ ಪೂಜ್ಯಸ್ಥಾನವನ್ನು ಗಳಿಸಿಕೊಂಡಿವೆ.

ಉತ್ತರ ಭಾಗದಲ್ಲಿ ಹಿಮಾಲಯ ಪರ್ವತ ಸ್ತೋಮಗಳು ಭಾರತದ ಮಹಾರಕ್ಷಣೆ ಗೋಡೆಗಳಂತಿದ್ದರೂ ಭಾರತವು ಏಷ್ಯಾದ ಇತರ ಭಾಗಗಳೊಂದಿಗೆ ಪಶ್ಚಿಮದ ಭಾಗದಲ್ಲಿನ ಕಣಿವೆಗಳ ಮೂಲಕ ಸಂಪರ್ಕವೇರ್ಪಡಿಸಿಕೊಂಡಿರುವುದು ಇತಿಹಾಸದ ಪುಟಗಳಲ್ಲಿ ಸುಸ್ಪಷ್ಟವಾಗಿದೆ. ಅನಾದಿಕಾಲದಿಂದಲೂ ಭಾರತಕ್ಕೆ ಹಲವಾರು ಜನಾಂಗಗಳು ವಾಯವ್ಯ ಭಾಗದಲ್ಲಿನ ಹಿಂದೂಕುಷ್ ಪರ್ವತ ಶ್ರೇಣಿಗಳಲ್ಲಿನ ಖೈಬರ್, ಬೋಲಾನ್ ಮತ್ತು ಗೋಮಾಲ್ ಕಣಿವೆಗಳ ಮೂಲಕ ಪ್ರವೇಶ ಮಾಡಿ ಭಾರತದ ಸಂಸ್ಕೃತಿಯ ವೈಶಿಷ್ಟ್ಯವನ್ನು ಹೆಚ್ಚಿಸಿವೆ. ಹೀಗೆ ಭಾರತವನ್ನು ಆಗಿಂದ್ದಾಗ್ಗೆ ಪ್ರವೇಶಿಸಿ ಭಾರತೀಯ ಸಂಸ್ಕೃತಿಯನ್ನು ಉಜ್ವಲಗೊಳಿಸಿರುವ ಜನಾಂಗಗಳಲ್ಲಿ ಆರ್ಯರು, ಪರ್ಶಿಯನ್ನರು, ಗ್ರೀಕರು, ಶಕರು, ಪಹ್ಲವರು, ಕುಶಾನರು, ಹೂಣರು, ಟರ್ಕರು ಆಫ್‌ಘನ್ನರು ಮತ್ತು ಮೊಗಲರು ಮುಖ್ಯರಾದವರಾಗಿದ್ದಾರೆ.

ಹಿಮಾಲಯ ಪರ್ವತಕ್ಕೆ ಹೆಚ್ಚು ಕಡಿಮೆ ಸಮಾನಾಂತರ ದೂರದಲ್ಲಿ ದೇಶದ ಮಧ್ಯಭಾಗದಲ್ಲಿ ಪಶ್ಚಿಮದಿಂದ ಪೂರ್ವಾಭಿಮುಖವಾಗಿ ಹಬ್ಬಿರುವ ವಿಂಧ್ಯಪರ್ವತ ಶ್ರೇಣಿಗಳು ಉತ್ತರ ಭಾರತವನ್ನು ದಕ್ಷಿಣ ಭಾರತದಿಂದ ಪ್ರತ್ಯೇಕಿಸಿವೆ. ವಿಂಧ್ಯ ಮತ್ತು ಸಾತ್ಪುರ ಬೆಟ್ಟಗಳು ತಮ್ಮ ನೆರೆಹೊರೆಯಲ್ಲಿನ ಅಗಮ್ಯವಾದ ಅರಣ್ಯಗಳೊಂದಿಗೆ ಪ್ರಾಚೀನ ಮತ್ತು ಮಧ್ಯಕಾಲೀನ ಯುಗಗಳಲ್ಲಿ ಕೆಲವು ಪ್ರಬಲ ರಾಜರುಗಳನ್ನು ಬಿಟ್ಟರೆ ದಕ್ಷಿಣ ಭಾರತವನ್ನು ಗೆದ್ದು ಅಖಂಡ ಭಾರತವನ್ನೊಳಗೊಂಡ ವಿಶಾಲ ಸಾಮ್ರಾಜ್ಯವನ್ನು ಸ್ಥಾಪಿಸಲು ದೊಡ್ಡ ಅಡಚಣೆಗಳಾಗಿದ್ದವು. ಆದಾಗ್ಯೂ ಪ್ರಾಚೀನ ಕಾಲದಲ್ಲಿ ಆರ್ಯರ ಧರ್ಮ ಮತ್ತು ಸಂಸ್ಕೃತಿಯು ದಕ್ಷಿಣ ಭಾರತದಲ್ಲೂ ಪ್ರಸಾರವಾಯಿತು. ಆದರೆ ಕೆಲವು ವಿಷಯಗಳಲ್ಲಿ ದಕ್ಷಿಣಭಾರತದಲ್ಲಿ ದ್ರಾವಿಡರ ನಾಗರಿಕತೆಯು ತನ್ನ ಪ್ರತ್ಯೇಕತೆಯನ್ನು ಉಳಿಸಿಕೊಂಡಿರುವುದು ಕಂಡುಬರುತ್ತದೆ. ವಿಂಧ್ಯಪರ್ವತ ಶ್ರೇಣಿಗಳು ದೇಶದ ಮಧ್ಯಭಾಗದಲ್ಲಿ ಅಡಚಣೆಯನ್ನುಂಟುಮಾಡದಿದ್ದ ಪಕ್ಷದಲ್ಲಿ ಉತ್ತರ ಮತ್ತು ದಕ್ಷಿಣ ಭಾರತಗಳ ನಡುವಿನ ಅಂತರವು ಬಹಳ ಮಟ್ಟಿಗೆ ಮುಂದುವರಿಯುವ ಸಾಧ್ಯತೆಯು ಇಲ್ಲವಾಗುತ್ತಿತ್ತು. ಇದಲ್ಲದೆ ದಕ್ಷಿಣ ಭಾರತವು ಸಾಮಾನ್ಯವಾಗಿ ಉತ್ತರ ಭಾರತವು ಆಗಿಂದಾಗ್ಗೆ ಅನುಭವಿಸಬೇಕಾಗಿ ಬಂದ ಆಕ್ರಮಣಗಳು, ಮುತ್ತಿಗೆ, ಕೊಳ್ಳೆ, ಸುಲಿಗೆ ಮತ್ತು ರಾಜಕೀಯವಾದ ದಂಗೆ, ಮೊದಲಾದ ಉಪಟಳಗಳಿಂದ ವಿವರ್ಜಿತವಾಗಿದ್ದುದಾಗಿ ಕಂಡುಬರುತ್ತದೆ. ವಾಯುವ್ಯಭಾಗದಲ್ಲಿನ ಕಣಿವೆಗಳ ಮೂಲಕ ಭಾರತದ ಮೇಲೆ ಧಾಳಿಮಾಡಿದ ಆಕ್ರಮಣಕಾರರು ಉತ್ತರ ಭಾರತದ ಗಂಗಾನದಿ ತೀರವನ್ನು ದಾಟಿ ದಕ್ಷಿಣ ಭಾರತದ

ಮೇಲೆ ಆಕ್ರಮಣ ಮಾಡಿರುವುದಿಲ್ಲ. ಭಾರತದ ಭೂಪ್ರದೇಶದ ರಚನೆಗನುಗುಣವಾಗಿ ಭಾರತದ ಯಾವ ನದಿಯೂ ಸಹ ಉತ್ತರದಿಂದ ದಕ್ಷಿಣಾಭಿಮುಖವಾಗಿ ಆಗಲಿ ಇಲ್ಲವೆ ದಕ್ಷಿಣದಿಂದ ಉತ್ತರಾಭಿ ಮುಖವಾಗಿ ಆಗಲೀ ಹರಿಯದೆ ಇರುವುದರಿಂದ ಆಕ್ರಮಣಕಾರರಿಗೆ ಸ್ವಾಭಾವಿಕವಾದ ಜಲಮಾರ್ಗವು ದೊರೆಯದೆ ಇಡೀ ದೇಶದ ಮೇಲೆ ತಮ್ಮ ಪ್ರಭುತ್ವವನ್ನು ಸ್ಥಾಪಿಸುವುದನ್ನು ಅಸಾಧ್ಯವಾಗಿಸಿದವು.

**ಸಿಂಧೂ ಮತ್ತು ಗಂಗಾ ನದಿಗಳ ಬಯಲು ಪ್ರದೇಶ**

ಒಂದು ದೇಶದ ಇತಿಹಾಸವನ್ನು ರೂಪಿಸುವುದರಲ್ಲಿ ಅಲ್ಲಿನ ನದಿಗಳ ಪಾತ್ರವು ಹಿರಿದಾಗಿರುತ್ತದೆ. ಉತ್ತರ ಭಾರತದಲ್ಲಿ ಹರಿಯುವ ಸಿಂಧೂ, ಗಂಗಾ, ಯಮುನ ಮತ್ತು ಬ್ರಹ್ಮಪುತ್ರಾ ನದಿಗಳು ಇಲ್ಲಿನ ಜನರ ಜೀವನಾಡಿಗಳಾಗಿವೆ. ಸಿಂಧೂ ಮತ್ತು ಗಂಗಾ ನದಿಗಳ ಬಯಲು ಪ್ರದೇಶಕ್ಕೆ ಹಿಂದೂಸ್ಥಾನದ ಬಯಲು ಪ್ರದೇಶ ಎಂಬ ಹೆಸರೂ ಉಂಟು. ಈ ಪ್ರದೇಶಕ್ಕೆ ಸಿಂಧೂ, ಗಂಗಾ ಮತ್ತು ಬ್ರಹ್ಮಪುತ್ರ ನದಿಗಳೂ ಮತ್ತು ಅವುಗಳ ಉಪನದಿಗಳೂ ಸದಾಕಾಲವೂ ನೀರಿನ ಸೌಕರ್ಯವನ್ನು ಒದಗಿಸಿರುವುದಲ್ಲದೆ ಅವುಗಳು ತುಂಬಿ ಹರಿಯುವಾಗ ಮೆಕ್ಕಲು ಮಣ್ಣನ್ನು ಹೊತ್ತು ತಂದು ಹರಡಿ ಈ ಪ್ರದೇಶವನ್ನು ಅತ್ಯಂತ ಫಲವತ್ತನ್ನಾಗಿ ಮಾಡಿವೆ. ಈ ಮೈದಾನ ಪ್ರದೇಶವು ಜನರಿಗೆ ಉತ್ತಮ ಜೀವನ ನಡೆಸಲು ಸೌಲಭ್ಯಗಳನ್ನು ಒದಗಿಸಿಕೊಟ್ಟು ಮಹಾನಾಗರಿಕತೆಯನ್ನು ಮತ್ತು ಸಂಸ್ಕೃತಿಯನ್ನು ಪೋಷಿಸಿದೆ. ಈ ಪ್ರದೇಶದಲ್ಲಿ ರಾಜಕೀಯ, ಸಾಮಾಜಿಕ ಧಾರ್ಮಿಕ ಮತ್ತು ದಾರ್ಶನಿಕ ಅಭಿಪ್ರಾಯಗಳು ವಿಕಸಿತಗೊಂಡು ಉನ್ನತ ಸಂಸ್ಕೃತಿಯು ರೂಪುಗೊಂಡಿದೆ.

**ದಖಿನ್ ಪ್ರಸ್ಥಭೂಮಿ**

ದಖಿನ್ ಪ್ರಸ್ಥಭೂಮಿಯು ಚಪ್ಪಟೆಯಾಗಿದ್ದು ಪಶ್ಚಿಮದಿಂದ ಪೂರ್ವದ ಕಡೆಗೆ ಇಳಿಜಿರಾಗಿ ಮುಂದುವರಿಯುತ್ತದೆ. ಈ ಭಾಗದಲ್ಲಿನ ಪ್ರಮುಖ ನದಿಗಳಾದ ನರ್ಮದ ಮತ್ತು ತಪತಿ ನದಿಗಳು ಪೂರ್ವದಿಂದ ಪಶ್ಚಿಮಕ್ಕೆ ಹರಿಗ ಅರಬ್ಬೀ ಸಮುದ್ರವನ್ನು ಸೇರುತ್ತವೆ. ಉಳಿದ ನದಿಗಳಾದ ಕೃಷ್ಣೆ, ಗೋದಾವರಿ, ಮಹಾನದಿ, ತುಂಗಭದ್ರೆ, ಕಾವೇರಿ ಮೊದಲಾದವುಗಳು ಪಶ್ಚಿಮದಿಂದ ಪೂರ್ವಕ್ಕೆ ಹರಿದು ಬಂಗಾಳಕೊಲ್ಲಿಯನ್ನು ಸೇರುತ್ತವೆ. ಈ ನದಿಗಳು ಉತ್ತರ ಭಾರತದ ನದಿಗಳಂತಲ್ಲದೆ ಬೇಸಿಗೆಯಲ್ಲಿ ಬತ್ತಿಹೋಗುತ್ತವೆ. ಇದರಿಂದಾಗಿ ಇವುಗಳು ದೋಣಿಗಳ ಸಂಚಾರಕ್ಕೆ ಅನುಕೂಲವಾಗಿಲ್ಲ. ಈ ನದಿಗಳು ಮಾತ್ರವಲ್ಲದೆ ಈ ಭಾಗದಲ್ಲಿರುವ ಹಲವಾರು ಬೆಟ್ಟಗುಡ್ಡಗಳು ಮತ್ತು ಕಣಿವೆಗಳು ಸಮಗ್ರ ಪ್ರದೇಶವನ್ನು ಅನೇಕ ಮೈದಾನಗಳನ್ನಾಗಿ ವಿಂಗಡಿಸಿರುವುದು ಗಮನಾರ್ಹ ಅಂಶವಾಗಿದೆ. ಪ್ರಾಚೀನ ಮತ್ತು ಮಧ್ಯಕಾಲೀನ ಯುಗಗಳಲ್ಲಿ ಈ ಭಾಗದಲ್ಲಿ ಹಲವಾರು ರಾಜ್ಯಗಳು ಸ್ಥಾಪಿತವಾಗಿದ್ದುದಕ್ಕೆ ಇದು ಮುಖ್ಯ ಕಾರಣವಾಗಿದ್ದಿತೆಂದು ಹೇಳಬಹುದು. ಇಲ್ಲಿನ ರಾಜಸಂತತಿಗಳು ತಮ್ಮ ತಮ್ಮ ರಾಜ್ಯಗಳ ವಿಸ್ತರಣೆಯ ಉದ್ದೇಶದಿಂದ ಯಾವಾಗಲಾದರೂ ಒಮ್ಮೆ ನಡೆಸಿದ ಪರಸ್ಪರ ಆಕ್ರಮಣಗಳನ್ನು ಬಿಟ್ಟರೆ ಉಳಿದ ಕಾಲದಲ್ಲಿ ಅವುಗಳು ಬಹಳ ಮಟ್ಟಿಗೆ ಪ್ರಕೃತಿಯ ವೈಶಿಷ್ಟ್ಯದಿಂದಲೇ ತಮ್ಮ ಪ್ರತ್ಯೇಕ ಅಸ್ತಿತ್ವವನ್ನು ಹೊಂದಿದ್ದವು.

**ಪೂರ್ವ ಮತ್ತು ಪಶ್ಚಿಮ ಘಟ್ಟಗಳು**

ಪೂರ್ವ ಮತ್ತು ಪಶ್ಚಿಮ ಘಟ್ಟಗಳು ಬಂಗಾಳಕೊಲ್ಲಿ ಮತ್ತು ಅರಬ್ಬೀ ಸಮುದ್ರದ ಅರುಗಿನಲ್ಲಿ ದಕ್ಷಿಣಾಭಿಮುಖವಾಗಿ ಮುಂದುವರಿಯುತ್ತ ಬಂದು ನೀಲಗಿರಿಯ ಬಳಿ ಒಟ್ಟು ಗೂಡಿ ಮುಂದೆ ಏಕಮುಖವಾಗಿ ಮುಂದುವರಿದು ಭಾರತದ ದಕ್ಷಿಣದ ತುತ್ತ ತುದಿಯಾದ ಕನ್ಯಾಕುಮಾರಿ ಭೂಶಿರವನ್ನು ಸೇರುತ್ತವೆ. ಪಶ್ಚಿಮದಲ್ಲಿ ಅರಬ್ಬೀ ಸಮುದ್ರ ಮತ್ತು ಪಶ್ಚಿಮ ಘಟ್ಟಗಳ ನಡುವೆಯೂ ಪೂರ್ವದಲ್ಲಿ ಬಂಗಾಳಕೊಲ್ಲಿ ಮತ್ತು ಪೂರ್ವ ಘಟ್ಟಗಳ ನಡುವೆಯೂ ನೇರವಾದ ಮೈದಾನ ಪ್ರದೇಶಗಳಿವೆ. ಇವು ಸಾವಿರಾರು ಮೈಲಿ ಉದ್ದವಾಗಿವೆ. ಪಶ್ಚಿಮ ಮೈದಾನ ಪ್ರದೇಶದಲ್ಲಿ ಕೊಂಕಣ ಮತ್ತು ಮಲಬಾರ್ ಪ್ರದೇಶದಲ್ಲಿ ಮೈಧಾನ ಪ್ರದೇಶದಲ್ಲಿ ಕೋರಮಂಡಲ ತೀರಪ್ರದೇಶವೂ ಇವೆ. ಪಶ್ಚಿಮ ಘಟ್ಟಗಳ ಮತ್ತು ಅರಬ್ಬೀ ಸಮುದ್ರದ ಮಧ್ಯಭಾಗದಲ್ಲಿರುವ ಕಿರಿದಾದ ಭೂಪ್ರದೇಶವು ಅತ್ಯಂತ ಫಲವತ್ತಾದ ಪ್ರದೇಶವಾಗಿದೆ. ಇಲ್ಲಿನ ಕೊಂಕಣ ಮತ್ತು ಮಲಬಾರ್ ಪ್ರದೇಶಗಳು ಪ್ರಕೃತಿ ಸೌಂದರ್ಯಕ್ಕೆ ಪ್ರಸಿದ್ಧಿಯಾಗಿವೆ. ಇಂತಹ ಪ್ರಕೃತಿ ಸೌಂದರ್ಯವನ್ನು ಹೊಂದಿರುವ ಪಶ್ಚಿಮ ಘಟ್ಟಗಳ ಅವಿಚ್ಛಿನ್ನವಾದ ಸಾಲು 2500 ಅಡಿಗಳಷ್ಟು ಎತ್ತರವಾಗಿದ್ದು ನೀಲಗಿರಿಯ ಬಳಿ 7000 ಅಡಿಗಳಿಗಿಂತಲೂ ಎತ್ತರವಾಗಿರುತ್ತದೆ. ಮತ್ತೊಂದೆಡೆ ಪೂರ್ವ ಘಟ್ಟಗಳು ಎತ್ತರದಲ್ಲಿ ಪಶ್ಚಿಮ ಘಟ್ಟಗಳಿಗಿಂತ ಕಡಿಮೆಯಾಗಿವೆ. ಇದಲ್ಲದೆ ಪೂರ್ವ ಘಟ್ಟಗಳು ಒಂದರೊಡನೊಂದು ಒಟ್ಟುಗೂಡಿದಂತಿಲ್ಲದೆ ಅಲ್ಲಲ್ಲಿ ಚದುರಿ ಹೋಗಿವೆ. ಈ ಎರಡು ಘಟ್ಟಗಳ ನಡುವೆ ಇರುವ ಪ್ರಸ್ಥಭೂಮಿಯು ಸಾಮಾನ್ಯವಾಗಿ 3000 ಅಡಿಗಳಷ್ಟು ಎತ್ತರವಾಗಿದ್ದು ಮೈಸೂರಿನ ಬಳಿ ತನ್ನ ಪರಮಾವಧಿಯನ್ನು ಮುಟ್ಟುತ್ತದೆ. ನದಿಗಳ ನೀರಿನ ಸೌಕರ್ಯವಿರುವ ಭಾಗವು ಫಲವತ್ತಾಗಿದೆ. ನದಿಗಳ ಆಸರೆಯಿಲ್ಲದ ಪ್ರಸ್ಥಭೂಮಿಯ ಉಳಿದ ಭಾಗಗಳು ಬಂಜರು ಭೂಮಿಯಾಗಿ ಉಳಿದಿದೆ. ಮಹಾರಾಷ್ಟ್ರವನ್ನೊಳಗೊಂಡ ಮುಂಬಯಿ ಪ್ರದೇಶದ ಘಟ್ಟ ಪ್ರದೇಶಗಳು ಅಷ್ಟೊಂದು ಫಲವತ್ತಾಗಿಲ್ಲ. ಇಲ್ಲಿ ವ್ಯವಸಾಯವು ಬಹಳ ಕಷ್ಟ. ಈ ಕಾರಣದಿಂದಾಗಿ ಇಲ್ಲಿನ ಘಟ್ಟದ ನಿವಾಸಿಗಳು ದೈಹಿಕವಾಗಿ ಗಟ್ಟಿಮುಟ್ಟಾಗಿಯೂ ಮತ್ತು ಸ್ವಾವಲಂಭಿಗಳಾಗಿಯೂ ಮಾರ್ಪಟ್ಟಿದ್ದಾರೆ. ಅಂತೆಯೆ ತಮಿಳುನಾಡಿನ ತಿರುನೆಲ್ವೇಲಿ, ದಿಂಡಿಗಲ್, ಸೇಲಂ ಬಹುಭಾಗಗಳೂ ಆಂಧ್ರಪ್ರದೇಶದ ರಾಯಲಸೀಮ ಪ್ರಾಂತ್ಯದ ಬಹುಭಾಗಗಳು ವ್ಯವಸಾಯಕ್ಕೆ ಅಷ್ಟೊಂದು ಅನುಕೂಲವಾಗಿಲ್ಲ. ಅಲ್ಲದೆ ಇಲ್ಲಿ ಮಳೆ ಬೀಳುವುದೂ ಕಡಿಮೆ. ದಕ್ಷಿಣ ಭಾರತದ ಬಹುಭಾಗವು ತನ್ನ ಬೆಳೆಗಾಗಿ ಅಕ್ಟೋಬರ್ ತಿಂಗಳಲ್ಲಿ ಈಶಾನ್ಯ ದಿಕ್ಕಿನಿಂದ ಬರುವ ಹಿಂಗಾರು ಮಳೆಯನ್ನು ಆಶ್ರಯಿಸುತ್ತದೆ. ಹಾಗೆಯೆ ಮೇ ತಿಂಗಳ ಅಂತ್ಯದಿಂದ ಆರಂಭವಾಗುವ ಮುಂಗಾರು ಮಳೆಯು (ನೈರುತ್ಯ ಮಾರುತ=ಸೌತ್ ವೆಸ್ಟ್ ಮಾನ್‌ಸೂನ್) ಪ್ರಸ್ಥಭೂಮಿಯಲ್ಲಿ ಆಗೊಮ್ಮೆ ಈಗೊಮ್ಮೆ ಬೀಳುತ್ತದೆ. ಪಶ್ಚಿಮ ತೀರದಲ್ಲಿ ಎಂಬತ್ತು ಅಂಗುಲಗಳಿಗೂ ಹೆಚ್ಚಾಗಿ ಸರಾಸರಿ ಮಳೆ ಬೀಳುತ್ತದೆ. ಆದರೆ ಪಶ್ಚಿಮಘಟ್ಟಗಳ ಪೂರ್ವ ಭಾಗದಲ್ಲಿರುವ ಮೈದಾನ ಪ್ರದೇಶಗಳಲ್ಲಿ ನಲವತ್ತು ಅಂಗುಲಗಳಿಗಿಂತ ಕಡಿಮೆ ಪ್ರಮಾಣದ ಮಳೆ ಬೀಳುತ್ತದೆ. ವ್ಯವಸಾಯವು ಬಹಳ ಮಟ್ಟಿಗೆ ಮಳೆಯನ್ನೇ ಹೊಂದಿಕೊಂಡಿದೆ.

## ವಾಯುಗುಣ ಮತ್ತು ಮಳೆ

ವಾಯುಗುಣ ಮತ್ತು ಮಳೆ ಒಂದುದೇಶದ ಜನಜೀವನವನ್ನು ರೂಪಿಸುವುದರಲ್ಲಿ ತಮ್ಮ ಪ್ರಭಾವವನ್ನು ಬೀರಿರುತ್ತವೆ. ಅತಿಯಾದ ಬಿಸಿಲಿನ ಶಾಖವಿದ್ದ ಕಡೆ ಜನರು ಬಹಳ ಹೊತ್ತು ಕಷ್ಟಪಟ್ಟು ದುಡಿಯಲು ಸಾಧ್ಯವಿಲ್ಲ. ಭಾರತದಲ್ಲಿನ ಉಷ್ಣವಲಯದ ವಾಯುಗುಣವು ಭಾರತೀಯರನ್ನು ಶೀತವಲಯದ ಜನಗಳಂತೆ ಚಟುವಟಿಕೆಯುಳ್ಳವರನ್ನಾಗಿ ಮಾಡಿರುವುದಿಲ್ಲ. ಭಾರತದ ವಾಯುಗುಣದಲ್ಲಿ ವೈಪರೀತ್ಯವು ಕಂಡುಬರುತ್ತದೆ. ಭಾರತದ ಕೆಲವು ಭಾಗಗಳಲ್ಲಿ ಶೀತ ವಾಯುಗುಣವೂ ಮತ್ತೆ ಕೆಲವು ಭಾಗಗಳಲ್ಲಿ ಶಾಖದಿಂದ ಕೂಡಿದ ವಾಯುಗುಣವೂ ಕಂಡುಬರುವುದು. ಈ ಅಂಶವು ಮಳೆಯ ಬಗ್ಗೆಯೂ ಸ್ಪಷ್ಟವಾಗಿದೆ. ಭಾರತದ ಕೆಲವು ಭಾಗಗಳಲ್ಲಿ ಅತಿಯಾದ ಮಳೆಯೂ ಮತ್ತೆ ಕೆಲವು ಭಾಗಗಳಲ್ಲಿ ಅಲ್ಪಸ್ವಲ್ಪ ಮಳೆಯೂ ಬೀಳುವುದನ್ನು ನಾವು ನೋಡುತ್ತೇವೆ. ಇದರಿಂದಾಗಿ ಭಾರತದ ವ್ಯವಸಾಯವು ಪ್ರಕೃತಿಯೊಂದಿಗೆ ನಡೆಸುವ ದ್ಯೂತವೇ ಆಗಿದ್ದು ಭಾರತದಲ್ಲಿ ಆಗಾಗ್ಗೆ ಕ್ಷಾಮ ಡಾಮರಗಳನ್ನು ಅತಿವೃಷ್ಟಿ ಮತ್ತು ಅನಾವೃಷ್ಟಿಯ ಪರಿಸ್ಥಿತಿಯನ್ನು ನಾವು ಕಾಣುತ್ತೇವೆ.

## ಸಮುದ್ರಗಳು

ಭಾರತವು ಪೂರ್ವದಲ್ಲಿ ಬಂಗಾಳಕೊಲ್ಲಿಯಿಂದಲೂ ಪಶ್ಚಿಮದಲ್ಲಿ ಅರಬ್ಬೀ ಸಮುದ್ರದಿಂದಲೂ ಮತ್ತು ದಕ್ಷಿಣದಲ್ಲಿ ಹಿಂದೂಮಹಾಸಾಗರದಿಂದಲೂ ಆವೃತವಾಗಿದೆ. ಆದರೆ ಇವುಗಳು ಪ್ರಶಾಂತವಾಗಿಲ್ಲದಿರುವುದರಿಂದ ಯೂರೋಪಿನ ರಾಜ್ಯಗಳ ಸಮುದ್ರತೀರಗಳಲ್ಲಿ ಕಂಡು ಬರುವಷ್ಟು ಬಂದರುಗಳು ಕಂಡುಬರುವುದಿಲ್ಲ. ಆದಾಗ್ಯೂ ತೀರಪ್ರದೇಶಗಳಲ್ಲಿನ ಭಾರತೀಯರು ಪ್ರಾಚೀನ ಗ್ರೀಕರು ಮತ್ತು ಆಧುನಿಕ ಕಾಲದ ಇಂಗ್ಲೀಷರಂತೆ ವ್ಯಾಪಾರಕ್ಕಾಗಿ ಸಮುದ್ರ ಸಂಚಾರ ಮಾಡುತ್ತಿದ್ದುದು ಸುಸ್ಪಷ್ಟವಾಗಿದೆ. ಭಾರತೀಯರು ಬರ್ಮಾ, ಸುಮಾತ್ರ, ಜಾವಾ, ಕಾಂಬೋಡಿಯ ದೇಶಗಳೊಂದಿಗೆ ಸಮುದ್ರದ ಮೂಲಕ ವ್ಯಾಪಾರ ಮಾಡುತ್ತಿದ್ದರು. ರಾಜೇಂದ್ರ ಚೋಳನ ನೌಕಾಪಡೆಯು ಅಂಡಮಾನ್ ನಿಕೋಬಾರ್ ಮತ್ತು ಸಿಂಹಳ ದ್ವೀಪಗಳನ್ನೇ ಅಲ್ಲದೆ ಬರ್ಮಾ ಸುಮಾತ್ರ ಮತ್ತು ಮಲಯಗಳ ಕೆಲವು ಭಾಗಗಳನ್ನು ಗೆದ್ದುದಾಗಿ ತಿಳಿದು ಬರುತ್ತದೆ. ಶಿವಾಜಿಯ ಆಳ್ವಿಕೆಯ ಕಾಲದಲ್ಲಿ ಮರಾಠರು ನೌಕಾಪಡೆಗೆ ಹೆಚ್ಚಿನ ಮಹತ್ವಕೊಟ್ಟಿದ್ದು ಭಾರತದ ಪಶ್ಚಿಮ ತೀರ ಪ್ರದೇಶದ ಮೇಲೆ ತಮ್ಮ ಪ್ರಾಬಲ್ಯವನ್ನು ಸ್ಥಾಪಿಸಿದ್ದರು.

ಹೊರ ದೇಶಗಳಲ್ಲಿ ಭಾರತೀಯರು ಅಧಿಕಾರ ಮತ್ತು ವ್ಯಾಪಾರದ ವಸಾಹತುಗಳನ್ನು ಸ್ಥಾಪಿಸುವುದರಲ್ಲಿ ದಕ್ಷಿಣ ಭಾರತದ ರಾಜರುಗಳು ಹೊಂದಿದ್ದಷ್ಟು ಆಸಕ್ತಿಯನ್ನು ಉತ್ತರಭಾರತದ ರಾಜರುಗಳು ಹೊಂದಿರಲಿಲ್ಲ. ಇದಕ್ಕೆ ಉತ್ತರಭಾರತದ ರಾಜ್ಯಗಳು ಸಮುದ್ರಕ್ಕೆ ಬಹಳ ದೂರವಿದುದ್ದು ಮುಖ್ಯಕಾರಣವಾಗಿತ್ತು. ಮೊಗಲ್‌ಚಕ್ರವರ್ತಿಗಳು ನೌಕಾಪಡೆಯ ನಿರ್ಮಾಣಕ್ಕೆ ಸ್ವಲ್ಪವೂ ಗಮನ ಕೊಟ್ಟಿರಲಿಲ್ಲ. ಇದರಿಂದಾಗಿ ಯೂರೋಪಿನ ವರ್ತಕರು ಮುಖ್ಯವಾಗಿ ಪೋರ್ಚುಗೀಸರು ಮತ್ತು ಇಂಗ್ಲಿಷರು ಅರಬ್ಬೀ ಸಮುದ್ರ ಹಾಗೂ ಹಿಂದೂಮಹಾಸಾಗರದ ಮೇಲೆ ತಮ್ಮ ಪ್ರಾಬಲ್ಯವನ್ನು ಹೊಂದು ವಂತಾಯಿತು. ಇದರ ಪರಿಣಾಮವಾಗಿ ಅರಬ್ಬೀ ವರ್ತಕರು

ಬಹಳ ಕಾಲದಿಂದಲೂ ಭಾರತದ ವ್ಯಾಪಾರ ವಾಣಿಜ್ಯಗಳ ಮೇಲೆ ಹೊಂದಿದ್ದ ಪ್ರಭುತ್ವವು ಕೊನೆಗೊಂಡು ಭಾರತದ ವಿದೇಶಿ ವ್ಯಾಪಾರವು ಪೋರ್ಚುಗೀಸರ, ಡಚ್ಚರ ಇಂಗ್ಲಿಷರ ಮತ್ತು ಫ್ರೆಂಚರ ಕೈವಶವಾಯಿತು. ಮೊಗಲರು ಬಲವಾದ ನೌಕಾಪಡೆಯನ್ನು ನಿರ್ಮಿಸದಿದ್ದುದು ಬ್ರಿಟಿಷರು ಭಾರತದಲ್ಲಿ ಸಾಮ್ರಾಜ್ಯ ಸ್ಥಾಪನೆ ಮಾಡುವುದಕ್ಕೆ ಕಾರಣವಾಗಿದ್ದ ಪ್ರಮುಖ ಅಂಶಗಳಲ್ಲಿ ಒಂದಾಗಿದ್ದಿತು.

**ಭೌಗೋಳಿಕ ಅಂಶಗಳ ವೈಶಿಷ್ಟ**

ಒಂದು ದೇಶದ ಸಂಸ್ಕೃತಿ ಮತ್ತು ನಾಗರಿಕತೆಯ ಬೆಳವಣಿಗೆಯ ಮೇಲೆ ಭೌಗೋಳಿಕ ಲಕ್ಷಣಗಳು ತಮ್ಮ ಪ್ರಭಾವವನ್ನು ಬೀರಿರುತ್ತವೆಂಬುದನ್ನು ಮರೆಯಲಾಗದು. ಮಾನವ ಇತಿಹಾಸವನ್ನು ರೂಪಿಸುವ ಹಲವಾರು ಅಂಶಗಳಲ್ಲಿ ಭೌಗೋಳಿಕ ಅಂಶಗಳೂ ಮಹತ್ವ ಪೂರ್ಣ ಪ್ರಭಾವವನ್ನು ಬೀರುತ್ತವೆ. ಪ್ರಾಚೀನ ನಾಗರಿಕತೆಗಳೆಲ್ಲವೂ ಸಾಮಾನ್ಯವಾಗಿ ಪ್ರಕೃತಿಯು ಹೇರಳವಾಗಿ ಒದಗಿಸಿದ ಸೌಲಭ್ಯಗಳಿದ್ದ ಪ್ರದೇಶಗಳಲ್ಲಿಯೆ ರೂಪುಗೊಂಡಿರುವುದನ್ನು ನಾವು ಇತಿಹಾಸದುದ್ದಕ್ಕೂ ಕಾಣುತ್ತೇವೆ. ಭಾರತವನ್ನು ಗಮನದಲ್ಲಿಟ್ಟುಕೊಂಡು ನೋಡಿದಾಗ ಭಾರತದ ಅನುಕೂಲಕರವಾದ ಭೌಗೋಳಿಕ ಲಕ್ಷಣಗಳು ಶ್ರೀಮಂತ ಸಂಸ್ಕೃತಿ ಮತ್ತು ನಾಗರಿಕತೆಯ ಬೆಳವಣಿಗೆಗೆ ಕಾರಣವಾಗಿವೆ. ಭಾರತದ ಭೌಗೋಳಿಕ ಅಂಶಗಳು ಭಾರತೀಯ ರೈತರು, ವರ್ತಕರು, ಹೆಚ್ಚಿಗೆ ಪದಾರ್ಥಗಳನ್ನು ಉತ್ಪಾದಿಸುವುದಕ್ಕೂ, ಬಲಶಾಲಿಗಳಾದವರು ರಾಜ್ಯಗಳನ್ನು ನಿರ್ಮಿಸುವುದಕ್ಕೂ ವಿದ್ವಾಂಸರು, ಋಷಿಗಳು, ಸಾಧುಸಂತರು ದಾರ್ಶನಿಕರು ಮೊದಲಾದವರು ಬೌದ್ಧಿಕ ಮತ್ತು ಸಾಂಸ್ಕೃತಿಕ ಪ್ರಪಂಚಕ್ಕೆ ಮಹತ್ವಪೂರ್ಣ ಕೊಡುಗೆಗಳನ್ನು ನೀಡುವುದಕ್ಕೂ ಕಾರಣಗಳಾಗಿವೆ. ನೈಸರ್ಗಿಕವಾದ ಅನುಕೂಲಗಳಿಲ್ಲದ ಕಡೆಗಳಲ್ಲಿ ಜನರ ಬದುಕು ಕಷ್ಟಸಾಧ್ಯವಾಗಿದ್ದು ಅವರಿಗೆ ಜೀವನ ಸಾಗಿಸುವುದೇ ಒಂದು ಬಹುಮುಖ್ಯ ಸಮಸ್ಯೆಯಾಗುತ್ತದೆ. ಇಂತಹ ಸನ್ನಿವೇಶಗಳಲ್ಲಿ ಜನರಿಗೆ ಯಾವುದೇ ಸೃಷ್ಟ್ಯಾತ್ಮಕ ಸಾಧನೆಗಳಲ್ಲಿ ತೊಡಗುವುದು ಕಷ್ಟವಾಗುತ್ತದೆ. ಆದರೆ ಭಾರತದ ಭೌಗೋಳಿಕ ಅಂಶಗಳು ಅನುಕೂಲಕರವಾಗಿದ್ದು ಭಾರತದಲ್ಲಿ ಉನ್ನತ ಮಟ್ಟದ ಸಂಸ್ಕೃತಿ ಮತ್ತು ನಾಗರಿಕತೆಯು ಬೆಳೆಯಲು ಸಾಧ್ಯವಾಯಿತು.

ಭಾರತದ ಇತಿಹಾಸದ ಮೇಲೆ ಮೇಲ್ಮೈ ಲಕ್ಷಣಗಳ ಪ್ರಭಾವವು ಸುಸ್ಪಷ್ಟವಾಗಿದೆ. 1.ಉತ್ತರ ಭಾಗದಲ್ಲಿ ಹಿಮಾಲಯ ಪರ್ವತಗಳು ಮತ್ತು ಉಳಿದ ಮೂರು ಕಡೆಗಳಲ್ಲಿನ ಸಮುದ್ರಗಳು ಭಾರತಕ್ಕೆ ರಕ್ಷಣೆಯನ್ನು ಒದಗಿಸಿಕೊಟ್ಟಿವೆ. ಆದರೆ ಇವುಗಳಿಂದ ಪ್ರಪಂಚದ ಇತರ ಭಾಗಗಳೊಂದಿಗೆ ಭಾರತದ ಸಂಪರ್ಕವು ತಪ್ಪಿರುವುದಿಲ್ಲ. ವಾಯುವ್ಯ ಭಾಗದಲ್ಲಿನ ಕಣಿವೆಗಳು ಮತ್ತು ಹರವಾದ ಸಮುದ್ರಗಳ ಮೂಲಕ ಭಾರತೀಯರು ವ್ಯಾಪಾರ ವಾಣಿಜ್ಯಗಳ ಮತ್ತು ಸಾಂಸ್ಕೃತಿಕ ಸಂಪರ್ಕಗಳನ್ನು ಯುಗಯುಗಾಂತರಗಳಿಂದಲೂ ಹೊಂದಿದ್ದಾರೆ. ಆದರೆ ಹಿಮಾಲಯ ಪರ್ವತ ಶ್ರೇಣಿಗಳು ಉತ್ತರಭಾಗದಿಂದ ನೆರೆಯ ರಾಜ್ಯಗಳು ಆಕ್ರಮಣ ಮಾಡಲು ಅವಕಾಶವಿಲ್ಲದಂತೆ ರಕ್ಷಣಾಗೋಡೆಗಳಾಗಿ ಮಾರ್ಪಟ್ಟಿವೆ. 2. ಸಂಘಟಿತ ಸಂಸ್ಕೃತಿ. ಭಾರತೀಯ ಸಂಘಟಿತ ಸಂಸ್ಕೃತಿಯ ವಿಕಾಸದಲ್ಲಿ ಮೇಲ್ಮೈ ಲಕ್ಷಣಗಳು ಬಹುಮುಖ್ಯ ಪಾತ್ರವಹಿಸಿವೆ. ಏಷ್ಯಾಖಂಡದ ಇತರ ಭಾಗಗಳಿಂದ ಭಾರತವನ್ನು ಪ್ರತ್ಯೇಕಿಸಿರುವ

ಭೌಗೋಳಿಕ ಅಂಶಗಳು ಭಾರತದಲ್ಲಿ ತನ್ನದೇ ಆದ ಪ್ರತ್ಯೇಕ ಸಂಸ್ಕೃತಿಯು ರೂಪುಗೊಳ್ಳುವುದಕ್ಕೆ ಬಹುಮಟ್ಟಿಗೆ ಕಾರಣವಾಗಿವೆ. ಹಾಗೆಯೇ ದೇಶದ ಒಳಭಾಗದಲ್ಲಿರುವ ಭೌಗೋಳಿಕವಾದ ವಿಭಾಗಗಳು ವಿವಿಧ ಭಾಗಗಳಲ್ಲಿನ ಜನರು ಸಾಂಸ್ಕೃತಿಕ ವ್ಯತ್ಯಾಸಗಳನ್ನು ಹೊಂದಿರಲು ಕಾರಣವಾಗಿವೆ. ಆದರೆ ಈ ವ್ಯತ್ಯಾಸಗಳು ಪ್ರಮುಖವಾದವುಗಳಲ್ಲ. ಒಂದು ವಿಧದಲ್ಲಿ ಈ ಭೌಗೋಳಿಕ ವಿಭಾಗಗಳು ಭಾರತದ ಮೂಲಭೂತ ಸಾಂಸ್ಕೃತಿಕ ಏಕತೆಯ ಚೌಕಟ್ಟಿನೊಳಗೆ ವೈವಿಧ್ಯತೆಯ ಸಂಸ್ಕೃತಿಯು ರೂಪಗೊಳ್ಳುವಂತೆ ಮಾಡಿವೆ. 3. ರಾಜಕೀಯ ಏಕತೆಯನ್ನು ಕಷ್ಟವಾಗಿಸಿದೆ. ಭಾರತವು ಒಂದು ವಿಶಾಲದೇಶವಾಗಿರುವುದರಿಂದಲೂ ಮತ್ತು ದೇಶವನ್ನು ಪರ್ವತಗಳು, ನದಿಗಳು, ಮರುಭೂಮಿಗಳು ಮತ್ತು ದಟ್ಟವಾದ ಕಾಡುಗಳು ವಿಭಜಿಸಿ ರಾಜಕೀಯ ಏಕತೆಯನ್ನು ಪ್ರಾಚೀನ ಮತ್ತು ಮಧ್ಯಕಾಲೀನ ಯುಗಗಳಲ್ಲಿ ಕಷ್ಟಸಾಧ್ಯವನ್ನಾಗಿ ಮಾಡಿದ್ದವು. ಇಡೀ ಭಾರತವನ್ನು ಪ್ರಾಚೀನ ಮತ್ತು ಮಧ್ಯಕಾಲೀನ ಯುಗಗಳಲ್ಲಿ ಒಂದು ರಾಜದಂಡಕ್ಕೆ ಒಳಪಡಿಸಲು ಹಲವಾರು ರಾಜರುಗಳು ಪ್ರಯತ್ನಿಸಿ ವಿಫಲರಾಗಿರುವುದನ್ನು ಭಾರತದ ಇತಿಹಾಸದಲ್ಲಿ ನಾವು ಕಾಣುತ್ತೇವೆ. ಪ್ರಾಚೀನಕಾಲದಲ್ಲಿ ಅಶೋಕ ಮತ್ತು ಸಮುದ್ರಗುಪ್ತ ಮೊದಲಾದವರು ವಿಶಾಲ ಪ್ರದೇಶದ ಮೇಲೆ ತಮ್ಮ ಅಧಿಕಾರವನ್ನು ಸ್ಥಾಪಿಸಿದ್ದರೇ ಹೊರತು ಇಡೀ ಭಾರತದ ಮೇಲೆ ತಮ್ಮ ಪ್ರಭುತ್ವವನ್ನು ಸ್ಥಾಪಿಸಲು ಅವರಿಗೆ ಸಾಧ್ಯವಾಗಿರಲಿಲ್ಲ. ಹಾಗೆಯೇ ಮಧ್ಯಕಾಲೀನ ಯುಗದಲ್ಲಿ ಅಲ್ಲಾವುದ್ದೀನ್ ಖಿಲ್ಜಿ ಮತ್ತು ತರುವಾಯದಲ್ಲಿ ಅಕ್ಬರ್ ಚಕ್ರವರ್ತಿಗಳಿಂದಲೂ ಇದು ಸಾಧ್ಯವಾಗಲಿಲ್ಲ. ಆದರೆ ಆಧುನಿಕ ಕಾಲದಲ್ಲಿ ಉತ್ತಮ ರೀತಿಯ ಸಾರಿಗೆ ಸಂಪರ್ಕಗಳಿಂದಾಗಿ ಬ್ರಿಟಿಷರು ಇಡೀ ಭಾರತದ ಮೇಲೆ ತಮ್ಮ ಪ್ರಭುತ್ವವನ್ನು ಹೊಂದಿ ರಾಜಕೀಯ ಏಕತೆಯನ್ನು ಸ್ಥಾಪಿಸಿದರು. ಭಾರತವು ಸ್ವತಂತ್ರವಾದ ಮೇಲೆ ಸರ್ದಾರ್ ವಲ್ಲಭಾಯಿ ಪಟೇಲರ ಕಾರ್ಯ ಕೌಶಲದಿಂದ ಭಾರತದಲ್ಲಿದ್ದ ಆರುನೂರು ದೇಶೀಯ ಸಂಸ್ಥಾನಗಳು ಭಾರತ ಒಕ್ಕೂಟದಲ್ಲಿ ಸೇರಿ ರಾಷ್ಟ್ರೀಯ ಏಕತೆಯು ಸಾಧಿತವಾದುದು ಅತ್ಯಂತ ಹೆಮ್ಮೆಯ ವಿಷಯ, 4. ಪ್ರಾಚೀನ ಮತ್ತು ಮಧ್ಯಕಾಲೀನ ಯುಗಗಳಲ್ಲಿ ಭಾರತದ ರಾಜರುಗಳು ತಮ್ಮ ತಮ್ಮ ಮಿಲಿಟರಿ ಶಕ್ತಿ ಸಾಮರ್ಥ್ಯಗಳನ್ನು ಪ್ರದರ್ಶಿಸಲು ಭಾರತವೇ ಸಾಕಷ್ಟು ವಿಶಾಲವಾಗಿದ್ದುದರಿಂದ ಅವರು ದೇಶದ ಹೊರಗೆ ದಂಡಯಾತ್ರೆಗಳನ್ನು ಕೈಗೊಳ್ಳುವ ಆವಶ್ಯಕತೆಯನ್ನು ಕಾಣಲಿಲ್ಲ. ಪಾಂಪೆ, ಸೀಸರ್‌ರಂತಹ ರೋಮಿನ ಶ್ರೇಷ್ಠ ದಂಡನಾಯಕರುಗಳಿಗೆ ಇಟಲಿಯು ಬಹಳ ಚಿಕ್ಕದಾಗಿದ್ದುದರಿಂದ ಅವರು ಹೊರದೇಶಗಳ ಮೇಲೆ ದಂಡಯಾತ್ರೆಗಳನ್ನು ಕೈಗೊಳ್ಳಬೇಕಾಯಿತು. ಆದರೆ ಭಾರತದ ರಾಜರುಗಳು ದೇಶದ ಒಳಗೆ ತಮ್ಮ ಶಕ್ತಿ ಸಾಮರ್ಥ್ಯಗಳನ್ನು ಪ್ರದರ್ಶಿಸುವ ಮನೋಪ್ರವೃತಿಯುಳ್ಳವರಾಗಿದ್ದು ಹೊರಗಿನ ಪ್ರಪಂಚದಲ್ಲಿನ ಆಗು ಹೋಗುಗಳ ಬಗ್ಗೆ ಹೆಚ್ಚಿನ ಆಸಕ್ತಿ ತೋರಿಸಲಿಲ್ಲ. ಆದರೆ ಈ ಅನಾಸಕ್ತಿಯು ರಾಜಕೀಯವಾಗಿದ್ದಿತೇ ಹೊರತು ಸಾಂಸ್ಕೃತಿಕ ಮತ್ತು ವ್ಯಾಪಾರ ವಾಣಿಜ್ಯ ಕ್ಷೇತ್ರಗಳಿಗೆ ಸಂಬಂಧಿಸಿರಲಿಲ್ಲ. 5. ಭಾರತದಲ್ಲಿನ ಹೇರಳವಾದ ಪ್ರಾಕೃತಿಕ ಸಂಪತ್ತು ಮತ್ತು ಜೀವನ ಸೌಲಭ್ಯಗಳು ಭಾರತೀಯರು ದೈಹಿಕವಾಗಿ ಹೆಚ್ಚು ಶ್ರಮಪಡದಂತೆ ಮಾಡಿವೆ. ಭಾರತದಲ್ಲಿನ ಅಪಾರ ಐಶ್ವರ್ಯವು ಪರಕೀಯರನ್ನು ಆಕರ್ಷಿಸಿ ಅವರು ಐಶ್ವರ್ಯ ಸಂಪಾದನೆಗಾಗಿ ಅನೇಕ ಧಾಳಿಗಳನ್ನು ಮಾಡಲು ಕಾರಣವಾಗಿದೆ. ಆಧುನಿಕ ಕಾಲದಲ್ಲಿ ಉತ್ತಮ ತಾಂತ್ರಿಕ ಸಲಕರಣೆಗಳನ್ನು ಹೊಂದಿದ್ದ ಪಾಶ್ಚಿಮಾತ್ಯ ರಾಷ್ಟ್ರಗಳು ಭಾರತವನ್ನು ತಮ್ಮ ಆರ್ಥಿಕ

ಶೋಷಣೆಗೆ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡಿದ್ದವು. ಮುಸ್ಲಿಮರು ಭಾರತದ ಮೇಲೆ ಧಾಳಿಮಾಡಿ ಅಧಿಕಾರ ಸ್ಥಾಪಿಸಿ ಆರುನೂರು ವರ್ಷಗಳ ಕಾಲ ಆಳ್ವಿಕೆ ನಡೆಸಿದರು. ಅಂತೆಯೆ ಬ್ರಿಟಿಷರು ಸುಮಾರು ನೂರೈವತ್ತು ವರ್ಷಗಳ ಕಾಲ ಭಾರತವನ್ನು ತಮ್ಮ ಪ್ರಭುತ್ವಕ್ಕೊಳಪಡಿಸಿಕೊಂಡಿದ್ದರು.

**ವೈವಿಧ್ಯತೆಯಲ್ಲಿ ಏಕತೆ**

ಭಾರತವು ವೈವಿಧ್ಯತೆಯಲ್ಲಿ ಏಕತೆಯನ್ನು ಹೊಂದಿರುವ ದೇಶವಾಗಿದೆ. ಭಾರತೀಯರು ತಾವೆಲ್ಲರೂ ಒಂದೇ ಮತ್ತು ತಮ್ಮೆಲ್ಲರ ಸಂಸ್ಕೃತಿಯೂ ಒಂದೇ ಎಂಬ ಭಾವನೆಯು ಬೆಳೆಯುವುದಕ್ಕೆ ಹಲವಾರು ಅಂಶಗಳು ಕಾರಣವಾಗಿವೆ. ಹಿಂದೂಗಳು ಇಂಡಿಯಾವನ್ನು ಪೌರಾಣಿಕ ವ್ಯಕ್ತಿ 'ಭಾರತ'ನ ಹೆಸರಿನಿಂದ ಭರತವರ್ಷ ಎಂದು ಸಂಬೋಧಿಸುತ್ತಿದ್ದರು. 'ಭಾರತವರ್ಷ' ಎಂಬ ಈ ಹೆಸರು ಐತಿಹಾಸಿಕ ಮಹತ್ವವುಳ್ಳದಾಗಿದ್ದು ಭಾರತೀಯರ ಏಕತೆಯ ಭಾವನೆಯನ್ನು ಪ್ರತಿಬಿಂಬಿಸುತ್ತದೆ. ಪರ್ಶಿಯನ್ನರ ಅವೆಸ್ತ ಗ್ರಂಥದಲ್ಲಿ ಸಿಂಧೂನದಿಗೆ 'ಹಿಂದೂ' ಎಂಬ ಪರ್ಶಿಯನ್ ಪದವನ್ನು ಬಳಸಿ ಕರೆದಿರುವುದಾಗಿ ತಿಳಿದು ಬರುತ್ತದೆ. ಪುರಾತನ ಪರ್ಶಿಯರು ಸಿಂಧೂನದಿಯನ್ನು 'ಹಿಂದು' ಎಂದು ಸಂಭೋಧಿಸುತ್ತಿದ್ದರು. ಸಂಸ್ಕೃತದಲ್ಲಿರುವ ಸಕಾರಗಳೆಲ್ಲವೂ ಪುರಾತನ ಪರ್ಶಿಯನ್ ಭಾಷೆಯಲ್ಲಿ 'ಹ'ಕಾರವಾಗಿ ಸಿಂಧು ಎನ್ನುವುದು ಹಿಂದು ಎಂದು ಉಚ್ಚರಿಸಲ್ಪಟ್ಟಿತು. ಪರ್ಶಿಯನ್ನರು ಸಿಂಧೂನದಿಯ ಪೂರ್ವಕ್ಕೆ ಇದ್ದ ಜನರನ್ನು 'ಹಿಂದೂ' ನದಿಯ ದಡದವರು ಎಂದು ಕರೆದರು. ಪರ್ಶಿಯನ್ನರ ನಂತರ ಮುಂದೆ ಬಂದ ಗ್ರೀಕರು ಇಂಡಿಯಾವನ್ನು ಇಂಡೋಸ್ ಎಂಬುದಾಗಿ ಕರೆದರು. ಹಿಂದು ಎನ್ನುವುದು ಇಂಡೋಯಿ ಎಂದು ಸಂಭೋಧಿಸಲ್ಪಟ್ಟು ಅದು ಕೊನೆಗೆ 'ಇಂಡಿಯಾ' ಎಂದಾಯಿತು. ಮುಸ್ಲಿಮರ ಆಳ್ವಿಕೆಯಲ್ಲಿ ಹಿಂದೂ ಎಂಬ ಪದವನ್ನು ಹೆಚ್ಚು ಹೆಚ್ಚು ಬಳಸಲಾಯಿತು. ಕೊನೆಗೆ ಭಾರತೀಯರಿಗೆ ಹಿಂದೂ ಎಂಬ ಹೆಸರು ರೂಢಿಯಾಯಿತು. ಇಂಡಿಯಾದಲ್ಲಿ ವಾಸಮಾಡುತ್ತಿರುವ ಜನಗಳು ಹಿಂದೂಗಳಾಗಿರುವುದರಿಂದ ಈ ದೇಶವು 'ಹಿಂದೂಸ್ಥಾನ' ಎಂಬ ಹೆಸರನ್ನೂ ಪಡೆದುಕೊಂಡಿದೆ. ಸ್ವತಂತ್ರ ಭಾರತದ ಸಂವಿಧಾನದಲ್ಲಿ ನಮ್ಮ ದೇಶಕ್ಕೆ 'ಭಾರತ' ಅರ್ಥಾಥ್ ಇಂಡಿಯಾ ಎಂದು ನಾಮಕರಣ ಮಾಡಲಾಗಿದೆ.

ಭಾರತೀಯರ ವೈವಿಧ್ಯಮಯ ಸಂಸ್ಕೃತಿಯಲ್ಲಿ ಏಕತೆಯನ್ನುಂಟು ಮಾಡುವುದರಲ್ಲಿ ಹಲವಾರು ಅಂಶಗಳು ಸಹಕಾರಿಯಾಗಿವೆ. ಭಾರತಕ್ಕೆ ಬಂದು ನೆಲೆಸಿದ ಜನಗಳೆಲ್ಲರೂ ಕಾಲಾನುಕ್ರಮದಲ್ಲಿ ಹೆಚ್ಚು ಕಡಿಮೆ ಒಂದೇ ರೀತಿಯ ಜೀವನ ವಿಧಾನವನ್ನು ಅಳವಡಿಸಿಕೊಂಡಿರುವುದನ್ನು ನಾವು ಕಾಣಬಹುದಾಗಿದೆ. ಭಾರತೀಯರ ಸಂಪ್ರದಾಯ ಮತ್ತು ಆಚರಣೆಗಳಲ್ಲಿ ಒಂದು ಬಾಗದ ಜನರಿಗೂ ಮತ್ತೊಂದು ಭಾಗದ ಜನರಿಗೂ ವ್ಯತ್ಯಾಸಗಳು ಕಂಡುಬಂದರೂ ಅವರ ಜೀವನ ವಿಧಾನದಲ್ಲಿ ಮೂಲಭೂತ ವ್ಯತ್ಯಾಸಗಳೇನೂ ಕಂಡುಬರುವುದಿಲ್ಲ. ಭಾರತೀಯರ ಧಾರ್ಮಿಕ ಸಾಮಾಜಿಕ, ಆರ್ಥಿಕ ಜೀವನ, ಭಾಷೆ, ಸಂಪ್ರದಾಯ ಮೊದಲಾದ ಆಚರಣೆಗಳಲ್ಲಿ ವೈವಿಧ್ಯತೆಯು ಹೊರ ನೋಟಕ್ಕೆ ಕಂಡು ಬರುವುದಾದರೂ ಹಿಮಾಲಯದಿಂದ ಕನ್ಯಾಕುಮಾರಿಯವರೆಗೂ ಒಂದೇ ತೆರನಾದ ಜೀವನ ಕ್ರಮವನ್ನು

ಕಾಣಬಹುದಾಗಿದೆ. ಭಾರತೀಯರಲ್ಲಿ ಪ್ರಬಲವಾದ ಏಕತಾಮನೋಭಾವನೆ ಯನ್ನುಂಟುಮಾಡುವುದರಲ್ಲಿ ಬಹುಸಂಖ್ಯಾತರ ಧರ್ಮವಾಗಿರುವ ಹಿಂದೂ ಧರ್ಮವು ಪ್ರಮುಖ ಪ್ರಭಾವ ಬೀರಿದೆ. ವೈದಿಕ, ಸಾಹಿತ್ಯ ಮಹಾಕಾವ್ಯಗಳಾದ ರಾಮಾಯಣ ಮತ್ತು ಮಹಾಭಾರತ, ಪುರಾಣಗಳು, ಧರ್ಮಶಾಸ್ತ್ರ ಗ್ರಂಥಗಳು ಹಿಂದೂಗಳೆಲ್ಲರಿಗೂ ಪವಿತ್ರ ಗ್ರಂಥಗಳಾಗಿದ್ದು ಹಿಂದೂಗಳನ್ನು ಒಂದು ಗೂಡಿಸುವುದರಲ್ಲಿ ತಮ್ಮದೇ ಆದ ಪ್ರಭಾವ ಬೀರಿವೆ. ಇದೇ ರೀತಿಯಲ್ಲಿ ಹಿಂದೂಗಳ ಪ್ರಮುಖ ಹಬ್ಬಗಳಾದ ದೀಪಾವಳಿ ಹೋಳಿ, ಮತ್ತು ಉತ್ಸವಗಳಾದ ನವರಾತ್ರಿ ಉತ್ಸವ ಮೊದಲಾದುವುಗಳು ಹಿಂದೂಗಳಲ್ಲಿ ಏಕತೆಯನ್ನುಂಟುಮಾಡಿವೆ. ಅಂತೆಯೆ ಬೆನಾರಿಸ್ ಹರಿದ್ವಾರ, ಅಮರನಾಥ ಕೇದಾರನಾಥ, ಮೊದಲಾದ ಪುಣ್ಯ ಸ್ಥಳಗಳು, ಗಂಗಾ, ಯಮುನಾ ಕೃಷ್ಣೆ ಗೋದಾವರಿ, ಕಾವೇರಿ ಮೊದಲಾದ ಪವಿತ್ರ ನದಿಗಳು ಮತಾಚಾರ್ಯರುಗಳು ಸ್ಥಾಪಿಸಿರುವ ಮಠಗಳು ಹಿಂದೂಗಳೆಲ್ಲರಿಗೂ ಪೂಜ್ಯವಾಗಿದ್ದು ಭಾರತೀಯರಲ್ಲಿ ಏಕತೆಯನ್ನುಂಟುಮಾಡಿವೆ. ಅಯೋಧ್ಯೆ ಅಲಹಾಬಾದ್, ಬೆನಾರಿಸ್ ಮೊದಲಾದ ಪುಣ್ಯ ಕ್ಷೇತ್ರಗಳು ಈ ನದಿಗಳ ದಂಡೆಯ ಮೇಲಿವೆ. ಹಿಂದೂ ಧರ್ಮವು ಒಂದು ಧರ್ಮವೂ ಮತ್ತು ಅದೊಂದು ಜೀವನ ವಿಧಾನವೂ ಆಗಿದ್ದು ಅದೊಂದು ಜಾತಿಯನ್ನಾಗಲೀ ಅಥವ ಸಂಕುಚಿತ ಅರ್ಥದಲ್ಲಿ ಒಂದು ಮತವನ್ನಾಗಲೀ ಸೂಚಿಸುವುದಿಲ್ಲ.

ಭೌಗೋಳಿಕ ಅಂಶಗಳು ಸಹ ಒಂದು ರೀತಿಯಲ್ಲಿ ದೇಶದಲ್ಲಿ ಏಕತೆಯ ಭಾವನೆಯು ಬೆಳೆಯಲು ಪ್ರೋತ್ಸಾಹಿಸಿವೆ. ಸ್ಥಿತ್ಯಂತರಗೊಳ್ಳದ ಹಿಮಾಲಯ ಪರ್ವತಶ್ರೇಣಿಗಳ ದಕ್ಷಿಣದಲ್ಲಿ ವಾಸಿಸುತ್ತಿರುವ ಜನಗಳು ತಮ್ಮದೇ ಆದ ಸಂಸ್ಕೃತಿಯನ್ನು ಹೊಂದಿರುವ ದೇಶಕ್ಕೆ ತಾವೆಲ್ಲರೂ ಸೇರಿದವರೆಂಬ ಭಾವನೆಯು ಬೆಳೆಯುವಂತೆ ಮಾಡಿವೆ. ಹಿಮಾಲಯವು ಭಾರತಕ್ಕೆ ಪ್ರತ್ಯೇಕ ಸ್ಥಾನವನ್ನು ಕಲ್ಪಿಸಿ ಭಾರತೀಯರಲ್ಲಿ ಒಂದೇ ರೀತಿಯ ಮನೋಭಾವನೆಯೂ ನಂಬಿಕೆಗಳೂ ಮತ್ತು ಸಂಪ್ರದಾಯಗಳೂ ಬೆಳೆಯುವಂತೆ ಮಾಡಿವೆ. ಇದೇ ರೀತಿಯಲ್ಲಿ ಪ್ರಾಚೀನ ಕಾಲದಿಂದಲೂ ಭಾರತೀಯ ರಾಜರುಗಳಿಗೆ ಅನ್ವಯಿಸುತ್ತಿದ್ದ 'ಚಕ್ರವರ್ತಿ' ಎಂಬ ಪದದ ಅರ್ಥವೂ ಕೂಡ ಭಾರತದ ವಿಶಾಲ ಪ್ರದೇಶದ ಮೇಲೆ ಹೊಂದದ್ದ ಅಧಿಕಾರದ ವ್ಯಾಪ್ತಿಯನ್ನು ಸೂಚಿಸುತ್ತದೆ, ಬ್ರಿಟಿಷರ ಕಾಲದಲ್ಲಿ ಭಾರತವು ಹಿಂದೆಂದೂ ಕಾಣದಿದ್ದ ಆಡಳಿತ ಏಕತೆಯನ್ನು ಪಡೆಯಿತು, ಬ್ರಿಟಿಷರು ಭಾರತದಲ್ಲಿ ಜಾರಿಗೆ ತಂದ ಇಂಗ್ಲಿಷ್ ಭಾಷೆ, ಏಕರೀತಿಯ ಆಡಳಿತ ಪದ್ಧತಿ, ವಿಶ್ವವಿದ್ಯಾನಿಲಯಗಳ ಸ್ಥಾಪನೆ, ರೈಲುಮಾರ್ಗಗಳ ಸ್ಥಾಪನೆ, ತಂತಿ ಮತ್ತು ಅಂಚೆ ವ್ಯವಸ್ಥೆ ಮೊದಲಾದವುಗಳು ಭಾರತೀಯರನ್ನು ಒಂದುಗೂಡಿಸುವುದರಲ್ಲಿ ಪ್ರಮುಖ ಪಾತ್ರವಹಿಸಿದವು. ಸ್ವಾತಂತ್ರ್ಯಾ ನಂತರ ಕೇಂದ್ರ ಗೃಹಸಚಿವರಾಗಿದ್ದ ಸರ್ದಾರ್ ವಲ್ಲಭಾಯ್ ಪಟೇಲರು ದಿಟ್ಟ ಕ್ರಮ ಕೈಗೊಂಡು ಭಾರತದಲ್ಲಿದ್ದ ಹಲವಾರು ದೇಶೀಯ ಸಂಸ್ಥಾನಗಳನ್ನು ಭಾರತದ ಒಕ್ಕೂಟದಲ್ಲಿ ಸೇರಿಸಿ ರಾಷ್ಟ್ರೈಕ್ಯತೆ ಮತ್ತು ಭಾವೈಕ್ಯತೆಯನ್ನು ಬಲಪಡಿಸಿದರು.

## ಅಧ್ಯಾಯ-2

## ಇತಿಹಾಸದ ಆಧಾರಗಳು

ಆಧಾರಗಳಿಲ್ಲದೆ ಇತಿಹಾಸದ ರಚನೆಯಾಗಲೀ ಮತ್ತು ಅಧ್ಯಯನವಾಗಲೀ ಸಾಧ್ಯವಿಲ್ಲ. ಇತಿಹಾಸವು ಮುಖ್ಯವಾಗಿ ಹಿಂದೆ ನಡೆದ ಸರ್ವಸಂಗತಿಗಳ ಮತ್ತು ಘಟನೆಗಳ ಪುನರ್ರಚನೆಯಾಗಿರುತ್ತದೆ. ಆದರೆ ಹಿಂದೆ ನಡೆದುದೆಲ್ಲವನ್ನೂ ಇತಿಹಾಸದ ಚೌಕಟ್ಟಿನೊಳಗೆ ನಿರೂಪಿಸಲು ಸಾಧ್ಯವಿಲ್ಲ. ಆದ್ದರಿಂದ ಇತಿಹಾಸ ರಚನೆಕಾರನು ಯಾವ ಘಟನೆಗಳು ಮಾನವ ನಾಗರಿಕತೆಯ ಮುನ್ನಡೆಗೆ ಸಹಾಯಕವಾದವೋ ಅಂತಹ ಘಟನೆಗಳನ್ನು ಆಯ್ದು ಇತಿಹಾಸವನ್ನು ರಚಿಸಬೇಕಾಗುತ್ತದೆ. ಇಂತಹ ಘಟನೆಗಳನ್ನು ತಿಳಿಯಲು ಇತಿಹಾಸಕಾರರು ವಿವಿಧ ರೀತಿಯ ಆಧಾರಗಳನ್ನು ಅವಲಂಬಿಸಬೇಕಾಗುತ್ತದೆ ಮತ್ತು ಅವುಗಳನ್ನು ವಿಮರ್ಶಾತ್ಮಕವಾಗಿ ಅಧ್ಯಯನ ಮಾಡಿ ಇತಿಹಾಸವನ್ನು ರಚಿಸಬೇಕಾಗುತ್ತದೆ.

ಭಾರತದ ಇತಿಹಾಸವನ್ನು ಅಧ್ಯಯನದ ಅನುಕೂಲಕ್ಕಾಗಿ ಪ್ರಾಚೀನ ಯುಗ. ಮಧ್ಯಕಾಲೀನ ಯುಗ ಮತ್ತು ಆಧುನಿಕ ಯುಗ ಎಂದು ಮೂರು ಭಾಗ ಮಾಡಲಾಗಿದೆ. ಒಂದೊಂದು ಕಾಲದ ಅಧ್ಯಯನಕ್ಕೂ ಒಂದೊಂದು ರೀತಿಯ ಆಧಾರಗಳು ನಮಗೆ ದೊರೆಯುತ್ತವೆ. ಪ್ರಾಚೀನ ಭಾರತದ ಇತಿಹಾಸವನ್ನು ತಿಳಿಯಲು ಪ್ರಾಕ್ತನ ಶಾಸ್ತ್ರಾಧಾರಗಳು. ಸಂಸ್ಕೃತ ಮತ್ತು ಪಾಳಿ ಭಾಷೆಗಳಲ್ಲಿ ರಚಿತವಾಗಿರುವ ಗ್ರಂಥಗಳು ನಮಗೆ ಮುಖ್ಯ ಆಧಾರಗಳಾಗಿರುತ್ತವೆ. ಆದರೆ ಈ ಆಧಾರಗಳು ಪ್ರಾಚೀನ ಗ್ರೀಸ್ ಮತ್ತು ರೋಮನ್ನರಂತೆ ಕ್ರಮಬದ್ಧವಾಗಿ ಇಡಲ್ಪಟ್ಟಿರುವುದಿಲ್ಲ. ಇದೊಂದು ವಿಷಾದನೀಯ ಸಂಗತಿ. ಇಂದೂ ಕೂಡ ನಮಗೆ ಪ್ರಾಚೀನ ಭಾರತದ ಬಗೆಗಿನ ಸುಸ್ಪಷ್ಟ ಚಿತ್ರವು ದೊರೆತಿರುವುದಿಲ್ಲ. ಭಾರತದ ಇತಿಹಾಸ ರಚನೆಕಾರನು ಮಧ್ಯಕಾಲೀನ ಮತ್ತು ಆಧುನಿಕ ಭಾರತದ ಇತಿಹಾಸದ ಬಗ್ಗೆ ಕರಾರುವಾಕ್ಕಾಗಿ ಹೇಳಲು ಸಾಧ್ಯತೆಯುಳ್ಳವನಾಗಿದ್ದಾನೆ. ಆದರೆ ಪ್ರಾಚೀನ ಭಾರತದ ಬಗ್ಗೆ ಹೇಳುವಾಗ ಆಧಾರಗಳ ಕೊರತೆಯಿಂದಾಗಿ ಕ್ಲಿಷ್ಟ ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ಪ್ರಾಚೀನ ಭಾರತೀಯರು ಶ್ರೀಮಂತವೂ ಮತ್ತು ವೈವಿಧ್ಯಮಯವೂ ಆದ ಸಾಹಿತ್ಯವನ್ನು ರಚಿಸಿದ್ದರೂ ಅದರಲ್ಲಿ ಐತಿಹಾಸಿಕ ಸಂಗತಿಯ ನಿರೂಪಣೆಯ ದೃಷ್ಟಿಯ ಕೊರತೆಯು ಕಂಡುಬರುತ್ತದೆ. ಪ್ರಾಚೀನ ಭಾರತಕ್ಕೆ ಸಂಬಂಧಿಸಿದಂತೆ ವೈದಿಕ ಸಾಹಿತ್ಯ ಕೃತಿಗಳನ್ನಾಗಲೀ ಅಥವಾ ಜೈನ ಮತ್ತು ಬೌದ್ಧರ ಸಾಹಿತ್ಯ ಕೃತಿಗಳನ್ನಾಗಲೀ ವಿಮರ್ಶಿಸಿ

ನೋಡಿದಾಗ 'ಬುಕ್ ಆಫ್ ಕಿಂಗ್ಸ್' ಅಥವ ರೋಮನ್ ಇತಿಹಾಸಕಾರನಾದ ಲಿವಿಯ 'ಆನಟ್ಸ್' ಅಥವ ಗ್ರೀಕ್ ಇತಿಹಾಸ ಕಾರನಾದ ಹೆರೊಡೋಟಸ್‌ನ 'ಹಿಸ್ಟಾರಿಕ'ಗಳಿಗೆ ಹೋಲಿಸುವಂತಹ ಕೃತಿಗಳು ನಮಗೆ ದೊರೆತಿರುವುದಿಲ್ಲ. ಆದರೆ ಮಧ್ಯಕಾಲೀನ ಭಾರತದ ಇತಿಹಾಸ ರಚನೆಗೆ ಪರ್ಶಿಯನ್ ಭಾಷೆಯಲ್ಲಿ ಆಧಾರಗಳು ವಿಪುಲವಾಗಿ ದೊರೆಯುತ್ತವೆ. ಅಂತೆಯೆ ಬ್ರಿಟಿಷರ ಕಾಲದ ಭಾರತದ ಇತಿಹಾಸ ರಚನೆಗೆ ಸರ್ಕಾರದ ಅಧಿಕೃತ ಕಾಗದ ಪತ್ರಗಳು ದೊರೆಯುತ್ತವೆ. ಇತಿಹಾಸಕಾರರು ಈ ಎಲ್ಲ ಆಧಾರಗಳನ್ನು ಸಂಗ್ರಹಿಸಿ ಅವುಗಳನ್ನು ವಿಮರ್ಶಾತ್ಮಕವಾಗಿ ಅಧ್ಯಯನ ಮಾಡಿ ಭಾರತದ ಇತಿಹಾಸವನ್ನು ರಚಿಸಿದ್ದಾರೆ.

ಭಾರತದ ಇತಿಹಾಸದ ಅಧ್ಯಯನದ ಆಧಾರಗಳನ್ನು ಮುಖ್ಯವಾಗಿ ಪ್ರಾಕ್ತನ ಶಾಸ್ತ್ರಾಧಾರಗಳು ಮತ್ತು ಸಾಹಿತ್ಯಾಧಾರಗಳು ಎಂದು ಎರಡು ಭಾಗಗಳಾಗಿ ವಿಂಗಡಿಸಬಹುದಾಗಿದೆ.

**ಪ್ರಾಕ್ತನ ಶಾಸ್ತ್ರಾಧಾರಗಳು**

1. ಪ್ರಾಕ್ತನ ಶಾಸ್ತ್ರಾಧಾರಗಳನ್ನು ಮುಖ್ಯವಾಗಿ ನಾಲ್ಕು ಭಾಗಗಳನ್ನಾಗಿ ವಿಂಗಡಿಸಲಾಗಿದೆ ಅವುಗಳೆಂದರೆ: 1. ಭೂಸಂಶೋಧನೆ 2. ಶಾಸನಗಳು, 3. ನಾಣ್ಯಗಳು, 4. ಸ್ಮಾರಕಗಳು. ಪ್ರಾಕ್ಚಾರಿತ್ರಿಕ ಯುಗದ ಭಾರತದ ಇತಿಹಾಸದ ರಚನೆಗೆ ಬರವಣಿಗೆಯ ರೂಪದಲ್ಲಿ ಕ್ರಮಬದ್ಧ ದಾಖಲೆಗಳು ಇಲ್ಲದಿರುವುದರಿಂದ ಪ್ರಾಕ್ತನ ಶಾಸ್ತ್ರದ ಆಧಾರಗಳು ನಮಗೆ ಮುಖ್ಯ ಆಧಾರಗಳಾಗಿವೆ. ಇವುಗಳಲ್ಲಿ ಮೊದಲನೆಯದಾದ ಭೂಸಂಶೋಧನೆಗಳು ಪ್ರಾಕ್ಚಾರಿತ್ರಿಕ ಭಾರತದ ಇತಿಹಾಸ ರಚನೆಯಲ್ಲಿ ಬಹುಮುಖ್ಯ ಪಾತ್ರವಹಿಸಿವೆ. 1922ರಲ್ಲಿ ಮೊಹೆಂಜೊದಾರೋ ಮತ್ತು ಹರಪ್ಪಗಳಲ್ಲಿ ನಡೆದ ಭೂಸಂಶೋಧನೆಗಳು ಪ್ರಾಕ್ಚಾರಿತ್ರಿಕ ಸಿಂಧೂ ಕಣಿವೆಯ ನಾಗರಿಕತೆಯ ಬಗ್ಗೆ ಕುತೂಹಲಕಾರಿಯೂ ಮತ್ತು ಉಪಯುಕ್ತವೂ ಆದ ಮಾಹಿತಿಗಳನ್ನು ದೊರೆಕಿಸಿಕೊಟ್ಟಿವೆ. ಮೊದಲಿಗೆ ಈ ಸ್ಥಳಗಳಲ್ಲಿ ಬೌದ್ಧಮತಕ್ಕೆ ಸಂಬಂಧಿಸಿದಂತೆ ಭಗ್ನಾವಶೇಷಗಳನ್ನು ಪತ್ತೆಹಚ್ಚಲು ಅಗೆತನವನ್ನು ಆರಂಭಿಸಲಾಯಿತು. ಈ ಸಂದರ್ಭದಲ್ಲಿ ವೇದಗಳ ಕಾಲದ ನಾಗರಿಕತೆಗಿಂತಲೂ ಸಾವಿರಾರು ವರ್ಷಗಳಿಗಿಂತಲೂ ಹಿಂದೆ ಭವ್ಯ ನಾಗರಿಕತೆಯೊಂದು ಭಾರತದಲ್ಲಿ ರೂಪುಗೊಂಡಿದ್ದಿತೆಂಬ ಅಂಶವು ಯಾರಿಗೂ ಗೊತ್ತಿರಲಿಲ್ಲ. ಮೊಹೆಂಜೊದಾರೊ ಮತ್ತು ಹರಪ್ಪ ನಿವೇಶನಗಳಲ್ಲಿ ಮಾರ್ಟಿಮೋರ್ ವ್ಹೀಲರ್, ಸರ್‌ಜಾನ್ ಮಾರ್ಷಲ್, ಅರ್ನೆಸ್ಟ್ ಮೆಕ್ಕೆ, ಆರ್.ಡಿ. ಬ್ಯಾನರ್ಜಿ, ದಯಾರಾಮ್ ಸಹಾನಿ ಮೊದಲಾದ ಪಾಶ್ಚಿಮಾತ್ಯ ಮತ್ತು ಭಾರತೀಯ ಭೂಸಂಶೋಧನ ಶಾಸ್ತ್ರಜ್ಞರು ನಡೆಸಿದ ಭೂಸಂಶೋಧನೆಗಳಿಂದ ಬೌದ್ಧ ಮತಕ್ಕೆ ಸಂಬಂಧಿಸಿದ ಅವಶೇಷಗಳೇ ಅಲ್ಲದೆ ಪ್ರಾಕ್ಚಾರಿತ್ರಿಕ ಯುಗಕ್ಕೆ ಸಂಬಂಧಿಸಿದ ಅವಶೇಷಗಳು ಬೆಳಕಿಗೆ ಬಂದವು. ಈ ಸಂಶೋಧನೆಗಳಿಂದ ಭಾರತದ ಇತಿಹಾಸದ ಅಧ್ಯಾಯದಲ್ಲಿ ಒಂದು ಹೊಸ ಅಧ್ಯಾಯವು ಆರಂಭವಾಯಿತು. ಇಲ್ಲಿನ ಜನರ ನಗರ ನಿರ್ಮಾಣ ಕಲೆ, ಒಳಚರಂಡಿ ವ್ಯವಸ್ಥೆ ಮತ್ತು ಗೃಹಗಳ ನಿರ್ಮಾಣ ಮೊದಲಾದ ಅಂಶಗಳು ವಿದ್ವಾಂಸರನ್ನು

ಚಕಿತಗೊಳಿಸಿದವು. ಇದೇ ರೀತಿಯಲ್ಲಿ ಬೌದ್ಧಗಯೆ ಸಾರನಾಥ ತಕ್ಷಶಿಲೆ, ಪಾಟಲೀಪುತ್ರ ಲೋಥಾಲ್, ಕಾಲಿಬಂಗನ್ ಮೊದಲಾದ ಕಡೆಗಳಲ್ಲಿ ನಡೆಸಿದ ಭೂಸಂಶೋಧನೆಗಳು ಪ್ರಾಚೀನ ಭಾರತದ ಬಗ್ಗೆ ಅನೇಕ ಐತಿಹಾಸಿಕ ಸಂಗತಿಗಳನ್ನು ಹೊರಗೆಡವಿದವು. ಅಂತೆಯೆ ದಕ್ಷಿಣ ಭಾರತದ ಆಡಿಚನೆಲ್ಲೂರು, ತಿನ್ನವೆಲ್ಲಿ, ಚಂದ್ರವಳ್ಳಿ, ಬ್ರಹ್ಮಗಿರಿ ಮತ್ತು ಪಾಂಡಿಚೇರಿಯ ಅರಿಕಮೇಡು ಮೊದಲಾದ ಕಡೆಗಳಲ್ಲೂ ಭೂ ಸಂಶೋಧಕರು ನಡೆಸಿದ ಸಂಶೋಧನೆಗಳ ಪರಿಣಾಮವಾಗಿ ಶಿಲಾಯುಗ ಮತ್ತು ತಾಮ್ರಯುಗಕ್ಕೆ ಸೇರಿದ ಸಂಸ್ಕೃತಿಗಳು ಬೆಳಕಿಗೆ ಬಂದಿವೆ.

**ಶಾಸನಗಳು**

ಶಾಸನಗಳು ಮುಖ್ಯವಾಗಿ ಪ್ರಾಚೀನ ಭಾರತದ ಇತಿಹಾಸ ರಚನೆಗೆ ಬಹು ಉಪಯುಕ್ತ ಆಧಾರಗಳಾಗಿವೆ. ಶಾಸನಗಳನ್ನು ಕಲ್ಲುಬಂಡೆಗಳು ಸ್ಥಂಭಗಳು ಹಿತ್ತಾಳೆ, ತಾಮ್ರ ಹಾಗೂ ಮತ್ತಿತರ ಲೋಹಗಳ ತಗಡಿನಹಲಗೆಗಳ ಮೇಲೆ ಕೆತ್ತಲಾಗಿದೆ. ತಾಮ್ರ ಮತ್ತು ಹಿತ್ತಾಳೆಯ ತಗಡಿನ ಹಲಗೆಗಳ ಮೇಲೆ ಕೆತ್ತಲಾಗಿರುವ ಶಾಸನಗಳ ಸಂಖ್ಯೆಗಿಂತ ಕಲ್ಲುಬಂಡೆಗಳ ಮೇಲೆ ಕೆತ್ತಲಾಗಿರುವ ಶಾಸನಗಳ ಸಂಖ್ಯೆ ಕಡಿಮೆ. ಅಶೋಕನು ಪರ್ಶಿಯನ್ನರಿಂದ ಪ್ರಭಾವಿತನಾಗಿ ಮೊಟ್ಟಮೊದಲ ಬಾರಿಗೆ ಶಾಸನ ಪದ್ಧತಿಯನ್ನು ಜಾರಿಗೆ ತಂದನು. ಅಶೋಕನ ಪ್ರಧಾನ ಶಿಲಾಶಾಸನಗಳ ಸಂಖ್ಯೆ ಹದಿನಾಲ್ಕು, ಇವುಗಳಲ್ಲದೆ ಅಶೋಕನ ಉಪ ಶಿಲಾಶಾಸನಗಳನ್ನು ಮತ್ತು ಸ್ಥಂಭಶಾಸನಗಳನ್ನು ಭಾರತದ ಮತ್ತು ಪಾಕೀಸ್ಥಾನದ ವಿವಿಧ ಭಾಗಗಳಲ್ಲಿ ಇಂದೂಕೂಡ ನಾವು ನೋಡಬಹುದಾಗಿದೆ. ಈ ಶಾಸನಗಳೆಲ್ಲವನ್ನೂ ಅಂದಿನ ಜನಸಾಮಾನ್ಯರು ಆಡುತ್ತಿದ್ದ ಭಾಷೆಗಳಲ್ಲಿ ಕೆತ್ತಲಾಗಿದೆ. ಅಶೋಕನ ಶಾಸನಗಳು ಅಂದು ಬಳಕೆಯಲ್ಲಿದ್ದ ಬ್ರಾಹ್ಮಿ ಮತ್ತು ಖರೋಸ್ಟಿ ಲಿಪಿಯಲ್ಲಿವೆ ಈಸ್ಟ್ ಇಂಡಿಯಾ ಕಂಪನಿಯ ಜೇಮ್ಸ್ ಪ್ರಿನ್ಸೆಫ್ ಎಂಬ ಆಂಗ್ಲ ಅಧಿಕಾರಿಯು ಮೊದಲ ಬಾರಿಗೆ ಈ ಲಿಪಿಗಳನ್ನು ಓದಿ ಅವುಗಳ ಅರ್ಥವನ್ನು ವಿವರಿಸಿದನು. ಅಶೋಕನ ಶಾಸನಗಳು ಇಲ್ಲದಿದ್ದ ಪಕ್ಷದಲ್ಲಿ ಅವನ ಸಾಧನೆಗಳ ಬಹುಮುಖ ಚಿತ್ರವು ನಮಗೆ ದೊರೆಯುತ್ತಿರಲಿಲ್ಲ. ಅಶೋಕನೇ ಅಲ್ಲದೆ ಪ್ರಾಚೀನ ಭಾರತವನ್ನಾಳಿದ ಇತರ ರಾಜರುಗಳೂ ಸಹ ಈ ರೀತಿಯ ಶಾಸನಗಳನ್ನು ಕೆತ್ತಿಸಿದ್ದಾರೆ. ಆದರೆ ಇವುಗಳೆಲ್ಲವೂ ಬಹಳ ಮಟ್ಟಿಗೆ ಸಂಸ್ಕೃತ ಭಾಷೆಯಲ್ಲಿವೆ. ಇವುಗಳಲ್ಲಿ ಅಶೋಕನ ಅಲಹಾಬಾದ್ ಶಿಲಾಶಾಸನವು ಅತ್ಯಂತ ಮುಖ್ಯವಾದುದು. ಇದೇ ಸ್ಥಂಭದ ಮೇಲೆ ಗುಪ್ತರ ಚಕ್ರವರ್ತಿ ಸಮುದ್ರ ಗುಪ್ತನ ಆಸ್ಥಾನ ಕವಿಯಾಗಿದ್ದ ಹರಿಸೇಣನು ಸಮುದ್ರಗುಪ್ತನ ಸಾಧನೆಗಳನ್ನು ಕಾವ್ಯ ರೂಪದಲ್ಲಿ ಸಂಸ್ಕೃತ ಭಾಷೆಯಲ್ಲಿ ಕೆತ್ತಿದ್ದಾನೆ. ಅಂತೆಯೆ ದೆಹಲಿಯ ಮೆಹರಾಲಿಯಲ್ಲಿರುವ ಕಬ್ಬಿಣದ ಸ್ಥಂಭದ ಮೇಲೆ ಎರಡನೇ ಚಂದ್ರಗುಪ್ತನ ಸಾಧನೆಗಳನ್ನು ಕೆತ್ತಲಾಗಿದೆ. ಶಕರ ದೊರೆಯಾದ ರುದ್ರದಾಮನು ಸೌರಾಷ್ಟ್ರದ ಜುನ್ನಾಗಢ್ ಎಂಬಲ್ಲಿ ಬಂಡೆಯ ಮೇಲೆ ತನ್ನ ಶಾಸನವನ್ನು ಕೆತ್ತಿಸಿದ್ದಾನೆ. ಈ ಶಾಸನವೂ ಬಹು ಉಪಯುಕ್ತವಾದ ಶಾಸನವಾಗಿರುತ್ತದೆ.

ಬಂಡೆಗಳ ಮತ್ತು ಸ್ಥಂಭಗಳ ಮೇಲಿನ ಶಾಸನಗಳಂತೆ ಲೋಹದ ತಗಡುಗಳ ಮೇಲೆ ಕೆತ್ತಲಾಗಿರುವ ಶಾಸನಗಳೂ ಇತಿಹಾಸಕಾರನಿಗೆ ಉಪಯುಕ್ತ ವಿಷಯಗಳನ್ನೊದಗಿಸುತ್ತವೆ. ಇಂದಿನ ಕಾಲದಲ್ಲಿ ಜಮೀನು ಮತ್ತಿತರ ಸ್ಥಿರ ಆಸ್ತಿಪಾಸ್ತಿಗಳಿಗೆ ಸಂಬಂಧ ಪಟ್ಟ ವ್ಯವಹಾರಗಳ ದಾಖಲೆಗಳನ್ನು ಸರ್ಕಾರಿ ಪತ್ರಗಳ ಮೇಲೆ ಬರೆಯಲಾಗುತ್ತಿದೆ. ಕಾಗದದ ಬಳಕೆಯು ಇಲ್ಲದಿದ್ದ ಹಿಂದಿನ ಕಾಲದಲ್ಲಿ ಇಂತಹ ವ್ಯವಹಾರಗಳನ್ನು ತಾಮ್ರದ ಮತ್ತು ಹಿತ್ತಾಳೆಯ ತಗಡಿನ ಹಲಗೆಗಳ ಮೇಲೆ ಬರೆಯುತ್ತಿದ್ದರು. ರಾಜರುಗಳು, ಅಧಿಕಾರಿಗಳು ಮತ್ತಿತರರು ಬರೆಯಿಸಿದ ಇಂತಹ ಸಹಸ್ರಾರು ಶಾಸನಗಳು ಭಾರತದ ವಿವಿಧ ಭಾಗಗಳಲ್ಲಿ ದೊರಕಿವೆ. ಈ ಶಾಸನಗಳು ಅನೇಕ ವೇಳೆ ರಾಜರ ಹೆಸರುಗಳು, ವಂಶಾವಳಿ, ಅವರ ಆಳ್ವಿಕೆಯ ಕಾಲ ರಾಜ್ಯದ ಗಡಿ ಹಾಗೂ ಯುದ್ಧದ ಕಾರಣ ಮತ್ತು ಪರಿಣಾಮಗಳ ಬಗ್ಗೆಯೂ ಹಾಗೂ ಸ್ಥಳೀಯ ಆಡಳಿತ, ಆರ್ಥಿಕ, ಸಾಮಾಜಿಕ ಹಾಗೂ ಧಾರ್ಮಿಕ ಸ್ಥಿತಿಗತಿಗಳು, ವ್ಯಾಪಾರಕ್ಕೆ ಸಂಬಂಧಿಸಿದ ಸಂಘಸಂಸ್ಥೆಗಳು ಮೊದಲಾದವುಗಳ ಬಗ್ಗೆಯೂ ಉಪಯುಕ್ತ ವಿಷಯಗಳನ್ನು ಒದಗಿಸುತ್ತವೆ.

### ನಾಣ್ಯಗಳು

ಶಾಸನಗಳಂತೆ ನಾಣ್ಯಗಳೂ ಕೂಡ ಇತಿಹಾಸ ರಚನೆಗೆ ಅತ್ಯುಪಯುಕ್ತ ಆಧಾರಗಳಾಗಿವೆ.

ಪ್ರಾಚೀನ ಕಾಲದಲ್ಲಿ ಚಿನ್ನ, ಬೆಳ್ಳಿ, ತಾಮ್ರ ಸೀಸ ಮೊದಲಾದ ಲೋಹಗಳಿಂದ ನಾಣ್ಯಗಳನ್ನು ತಯಾರಿಸಲಾಗುತ್ತಿತ್ತು. ನಾಣ್ಯಗಳು ಬಹು ಮುಖ್ಯವಾಗಿ ರಾಜರುಗಳ ಹೆಸರುಗಳು ಮತ್ತು ಅವರ ಆಳ್ವಿಕೆಯ ಕಾಲದ ಅವಧಿಯ ಬಗ್ಗೆ ಹಾಗೂ ಆರ್ಥಿಕ ಸ್ಥಿತಿಯ ಬಗ್ಗೆ ಉಪಯುಕ್ತ ಮಾಹಿತಿ ನೀಡುತ್ತವೆ. ಪ್ರಾಚೀನ ಕಾಲದಲ್ಲಿ ಭಾರತದ ವಾಯುವ್ಯ ಭಾಗದಲ್ಲಿ ಆಳುತ್ತಿದ್ದ ಗ್ರೀಕರ ಮತ್ತು ಶಕರ ಬಗ್ಗೆ ಅವರ ನಾಣ್ಯಗಳಿಂದ ತಿಳಿದುಬರುವಷ್ಟು ವಿಷಯವು ಮತ್ತಾವ ಆಧಾರಗಳಿಂದಲೂ ತಿಳಿದುಬರುವುದಿಲ್ಲ. ನಾಣ್ಯಗಳ ಮೇಲೆ ಅನೇಕ ವೇಳೆ ಕಂಡುಬರುವ ಚಿತ್ರಗಳು ರಾಜರುಗಳ ಧಾರ್ಮಿಕ ನಂಬಿಕೆ ಮತ್ತು ಆಡಳಿತ ನೀತಿಯ ಬಗ್ಗೆಯೂ ಪರೋಕ್ಷವಾಗಿ ಬೆಳಕನ್ನು ಚೆಲ್ಲುತ್ತವೆ. ಉದಾ: ಕುಶಾನರ ಕೆಲವು ದೊರೆಗಳ ನಾಣ್ಯಗಳ ಮೇಲೆ ಶಿವನ ವಾಹನವಾದ ನಂದಿಯ ಚಿತ್ರವು ಕಂಡುಬರುತ್ತದೆ. ಆದ್ದರಿಂದ ಈ ದೊರೆಗಳು ಶಿವನ ಆರಾಧಕರಾಗಿದ್ದರೆಂದು ತಿಳಿಯಬಹುದಾಗಿದೆ. ಇದೇ ರೀತಿಯಲ್ಲಿ ಗುಪ್ತರ ದೊರೆಗಳು ಜಾರಿಗೆ ತಂದ ನಾಣ್ಯಗಳು ಮತ್ತು ಅವುಗಳ ಮೇಲಿನ ಚಿತ್ರಗಳು ಈ ಸಂತತಿಯ ರಾಜರುಗಳಾದ ಸಮುದ್ರ ಗುಪ್ತ ಮೊದಲಾದವರ ಬಹುಮುಖ ಪ್ರತಿಭೆಗಳನ್ನು ತಿಳಿದುಕೊಳ್ಳಲು ಉಪಯುಕ್ತವಾಗಿವೆ. ನಾಣ್ಯಗಳು ಅಂದಿನ ರಾಜರುಗಳ ರಾಜ್ಯಗಳ ಗಡಿಗಳನ್ನು ಅವರ ದಿಗ್ವಿಜಯಗಳನ್ನು ಗುರುತಿಸುವುದಕ್ಕೂ ಸಹಾಯಕವಾಗಿವೆ. ನಾಣ್ಯಗಳು ವ್ಯಾಪಾರ ವಾಣಿಜ್ಯ ಪದ್ಧತಿಯ ಬಗ್ಗೆ ತಿಳಿಯುವುದಕ್ಕೂ ಸಹಾಯ ಮಾಡುತ್ತವೆ. ಇತ್ತೀಚಿನ ವರ್ಷಗಳಲ್ಲಿ ಪ್ರಾಚೀನ ರೋಮನ್ನರ ನಾಣ್ಯಗಳು

ತಮಿಳುನಾಡಿನ ತಿರುನಲ್ವೇಲಿ ಮತ್ತು ಕರ್ನಾಟಕ ರಾಜ್ಯದ ಬೆಂಗಳೂರಿನ ಯಶವಂತಪುರ ಬಡಾವಣೆಯಲ್ಲಿ ದೊರೆತಿರುವುದರಿಂದ ರೋಮ್ ಮತ್ತು ಭಾರತ ದೇಶಗಳೊಂದಿಗೆ ಇದ್ದ ವ್ಯಾಪಾರ ಸಂಬಂಧಗಳನ್ನು ತಿಳಿದುಕೊಳ್ಳಬಹುದಾಗಿದೆ.

### ಸ್ಮಾರಕಗಳು

ಪ್ರಾಚೀನ ಮತ್ತು ಮಧ್ಯಕಾಲೀನ ಭಾರತದ ಇತಿಹಾಸ ರಚನೆಗೆ ಶಾಸನಗಳು ಮತ್ತು ನಾಣ್ಯಗಳಷ್ಟೇ ಸ್ಮಾರಕಗಳೂ ಉಪಯುಕ್ತವಾಗಿವೆ. ಭವ್ಯವಾದ ಮತ್ತು ಸುಂದರವಾದ ಸ್ಮಾರಕಗಳನ್ನು ನಿರ್ಮಿಸುವ ಕಾರ್ಯವು ಭಾರತದಲ್ಲಿ ಜೈನ ಮತ್ತು ಬೌದ್ಧಮತಗಳ ಹುಟ್ಟು ಮತ್ತು ಹರಡುವಿಕೆಯಿಂದ ಆರಂಭವಾಯಿತೆಂದು ಹೇಳಬಹುದು. ಜೈನರ ಗುರುಗಳ ಮತ್ತು ತೀರ್ಥಂಕರರ ಹಾಗೂ ಬುದ್ಧನ ಮತ್ತು ಬೋಧಿ ಸತ್ವರ ನೆನಪಿಗಾಗಿ ಸ್ತೂಪಗಳು, ವಿಹಾರಗಳು ಚೈತನ್ಯಗಳು ಮತ್ತು ಬಸದಿಗಳು ನಿರ್ಮಾಣ ಗೊಂಡವು. ಅಂತೆಯೆ ಕಾಲಾನುಕ್ರಮದಲ್ಲಿ ಹಿಂದುಗಳು ಜೈನ ಮತ್ತು ಬೌದ್ಧ ಧರ್ಮೀಯರನ್ನು ಅನುಸರಿಸಿ ತಮ್ಮ ದೇವತೆಗಳಿಗಾಗಿ ದೇವಾಲಯಗಳನ್ನು ನಿರ್ಮಿಸಿದರು ಇದರ ಪರಿಣಾಮವಾಗಿ ಸಹಸ್ರಾರು ದೇವಾಲಯಗಳು ದೇಶದ ವಿವಿಧ ಭಾಗಗಳಲ್ಲಿ ರಾಜರುಗಳಿಂದ ಮತ್ತು ಧನಿಕರಿಂದ ನಿರ್ಮಿಸಲ್ಪಟ್ಟು ಭಾರತೀಯರ ಧರ್ಮವನ್ನು ಭದ್ರವಾದ ಚೌಕಟ್ಟಿನಲ್ಲಿ ನಿಲ್ಲಿಸಿವೆ. ಭಾರತೀಯರ ಭವ್ಯ ಕಲಾಪರಂಪರೆಯ ನಿಧಿಗಳಾಗಿರುವ ಈ ದೇವಾಲಯಗಳನ್ನು ಕುರಿತು ಬಹಳ ತಾಳ್ಮೆಯಿಂದ ಇತಿಹಾಸಕಾರನು ಅಧ್ಯಯನ ಮಾಡುವುದಾದರೆ ಅವುಗಳ ನಿರ್ಮಾಪಕರು ವಾಸ್ತುಶಿಲ್ಪದ ವಿನ್ಯಾಸದ ಬಗ್ಗೆ ಹೊಂದಿದ್ದ ತಾಂತ್ರಿಕ ಜ್ಞಾನವನ್ನೇ ಅಲ್ಲದೆ ಈ ದೇವಾಲಯಗಳ ಗೋಡೆಗಳ ಮೇಲೆ ಕೆತ್ತಲಾಗಿರುವ ಚಿತ್ರಗಳಿಂದ ಅಂದಿನ ಧಾರ್ಮಿಕ ಆರ್ಥಿಕ ಮತ್ತು ಸಾಮಾಜಿಕ ಜೀವನವನ್ನು ತಿಳಿದುಕೊಳ್ಳಬಹುದಾಗಿದೆ ಈ ದೇವಾಲಯಗಳು ಅಂದಿನ ರಾಜರ ಆಸ್ಥಾನ. ಜನರ ವಸ್ತ್ರಾಭರಣಗಳು, ಸೌಂದರ್ಯ ಕಲ್ಪನೆ, ಸೈನಿಕರು ಯುದ್ಧದಲ್ಲಿ ಉಪಯೋಗಿಸುತ್ತಿದ್ದ ವಿವಿಧ ಆಯುಧಗಳು ನೃತ್ಯ ಮತ್ತು ಸಂಗೀತದ ಉಪಕರಣಗಳು ಮೊದಲಾದವುಗಳ ಚಿತ್ರವನ್ನು ಮುಂದಿಡುತ್ತವೆ. ಇಂದಿಗೂ ಭಾರತೀಯರ ಭವ್ಯಕಲಾಸಂಪತ್ತಿನ ಕುರುಹಾಗಿ ದೆಹಲಿ, ಆಗ್ರಾ, ಸಾಂಚಿ, ಬರಹತ್, ಎಲ್ಲೋರ ಅಜಂತ, ಕೊನಾರಕ್ ಖಾಜುರಾಹೋ, ಮಹಾಬಲಿಪುರಂ, ನಾಸಿಕ್, ಕಾರ್ಲೆ, ಶ್ರವಣಬೆಳಗೊಳ, ಬೇಲೂರು. ಹಳೇಬೀಡು, ಮೊದಲಾದೆಡೆಗಳಲ್ಲಿ ಕಾಣಬರುವ ಸ್ಮಾರಕಗಳು ಇತಿಹಾಸಕಾರನಿಗೆ ಅತ್ಯಅಮೂಲ್ಯ ವಿಷಯಗಳನ್ನೊದಗಿಸುತ್ತವೆ.

### ಸಾಹಿತ್ಯಾಧಾರಗಳು

ಪ್ರಾಕ್ತನ ಶಾಸ್ತ್ರಾಧಾರಗಳಂತೆ ಸಾಹಿತ್ಯ ಕೃತಿಗಳೂ ಕೂಡ ಇತಿಹಾಸ ರಚನೆಗೆ ಅನೇಕ ಮಾಹಿತಿಗಳನ್ನೊದಗಿಸುತ್ತವೆ. ಸಾಹಿತ್ಯಾಧಾರಗಳನ್ನು ಅಧ್ಯಯನದ ಅನುಕೂಲಕ್ಕಾಗಿ ದೇಶೀಯ ಸಾಹಿತ್ಯ ಮತ್ತು ವಿದೇಶೀಯ ಸಾಹಿತ್ಯವೆಂದು ಎರಡು ವರ್ಗಗಳನ್ನಾಗಿ ವಿಂಗಡಿಸಿಕೊಳ್ಳಲಾಗಿದೆ. ಇತಿಹಾಸಕಾರನು ಕಾಲಕಾಲಕ್ಕೆ ವಿವಿಧ

ಭಾಷೆಗಳಲ್ಲಿ ರಚಿತವಾಗಿರುವ ವೈವಿಧ್ಯಮಯ ಸಾಹಿತ್ಯ ರಾಶಿಯನ್ನು ಅವಲೋಕಿಸಿ ವಿಷಯಗಳನ್ನು ಆಯ್ದು ನಿರೂಪಿಸಬೇಕಾಗುತ್ತದೆ.

**ದೇಶೀಯ ಸಾಹಿತ್ಯ**

ಪ್ರಾಚೀನ ಭಾರತದ ಇತಿಹಾಸ ರಚನೆಗೆ ಕೆಲವೊಮ್ಮೆ ಶಾಸನಾಧಾರಗಳು ಇರುವುದಿಲ್ಲ. ಆರ್ಯರ ಹಾಗೂ ಬೌದ್ಧರ ಕಾಲದ ಭಾರತದ ಇತಿಹಾಸವನ್ನು ತಿಳಿಯಲು ನಾವು ಮುಖ್ಯವಾಗಿ ವೇದಗಳು, ಮಹಾಕಾವ್ಯಗಳು, ಪುರಾಣಗಳು ಹಾಗೂ ಬೌದ್ಧಧರ್ಮ ಗ್ರಂಥಗಳನ್ನು ಅವಲಂಬಿಸಬೇಕಾಗುತ್ತದೆ. ಆರ್ಯರಿಂದ ರಚಿಸಲ್ಪಟ್ಟಿರುವ ಋಗ್ವೇದ, ಯಜುರ್ವೇದ, ಸಾಮವೇದ ಮತ್ತು ಅಥರ್ವಣವೇದಗಳು ಆರ್ಯರ ರಾಜಕೀಯ, ಸಾಮಾಜಿಕ, ಆರ್ಥಿಕ ಮತ್ತು ಧಾರ್ಮಿಕ ವಿಷಯಗಳ ಬಗ್ಗೆ ತಿಳಿಯಲು ಪರಮಪ್ರಮಾಣ ಗ್ರಂಥಗಳಾಗಿವೆ. ಕೊನೆಯ ವೇದಗಳ ಕಾಲದ ಆರ್ಯರ ನಾಗರಿಕತೆಯನ್ನು ತಿಳಿಯಲು ಬ್ರಾಹ್ಮಣಗಳು, ಅರಣ್ಯಕಗಳು, ಉಪನಿಷತ್ತುಗಳು ಮಹಾಕಾವ್ಯಗಳಾದ ರಾಮಾಯಣ, ಮಹಾಭಾರತ ಮತ್ತು ಪುರಾಣಗಳು ಅನೇಕ ವಿಷಯಗಳನ್ನೊದಗಿಸುತ್ತವೆ. ಈ ಕೃತಿಗಳು ಪ್ರಮುಖವಾಗಿ ಧಾರ್ಮಿಕ ಗ್ರಂಥಗಳಾಗಿದ್ದರೂ ಆ ಕಾಲದ ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ಜೀವನಕ್ಕೆ ಸಂಬಂಧಿಸಿದಂತೆ ಪರೋಕ್ಷವಾಗಿ ಹಲವಾರು ಐತಿಹಾಸಿಕ ವಿಷಯಗಳನ್ನು ಒದಗಿಸುತ್ತವೆ.

ಜೈನ ಮತ್ತು ಬೌದ್ಧ ಧರ್ಮಗಳ ಕಾಲದ ಇತಿಹಾಸವನ್ನು ತಿಳಿಯಲು ಅರ್ಧ ಮಾಗದಿ, ಪ್ರಾಕೃತ, ಸಂಸ್ಕೃತ ಮತ್ತು ಪಾಳೀ ಭಾಷೆಗಳಲ್ಲಿ ರಚಿತವಾಗಿರುವ ಧಾರ್ಮಿಕ ಕೃತಿಗಳು ಮುಖ್ಯ ಆಧಾರಗಳಾಗಿವೆ. ಜೈನ ವಿದ್ವಾಂಸರು ರಚಿಸಿರುವ ಅಂಗಗಳು, ಉಪಾಂಗಗಳು ಪ್ರಕರಣಗಳು ಸೂತ್ರಗಳು, ಭಾಷ್ಯಗಳು ಚರಿತ್ರೆಗಳು ಪ್ರಬಂದಗಳು ಮೊದಲಾದವುಗಳು ಜೈನಧರ್ಮದ ಬಗೆಗೆ ವಿಪುಲವಾದ ಮಾಹಿತಿಗಳನ್ನು ನೀಡುತ್ತವೆ. ಅಂತೆಯೆ ಬೌದ್ಧ ಧರ್ಮಕ್ಕೆ ಸಂಬಂಧಿಸಿದಂತೆ ಪಾಳಿ, ಮತ್ತು ಸಂಸ್ಕೃತ ಭಾಷೆಗಳಲ್ಲಿ ಬೌದ್ಧ ವಿದ್ವಾಂಸರು ರಚಿಸಿರುವ ವಿನಯಪಿಟಕ, ಸುತ್ತಪಿಟಕ ಮತ್ತು ಅಭಿಧಮ್ಮಪಿಟಕಗಳು ಇವುಗಳಿಗೆ ಸಂಬಂಧಿಸಿದಂತೆ ರಚಿತವಾಗಿರುವ ವ್ಯಾಖ್ಯಾನಕೃತಿಗಳು ಬೌದ್ಧ ಜಾತಕಗಳು ಮತ್ತು ಮಂಜು ಶ್ರೀ ಮೂಲಕಲ್ಪ, ಬುದ್ಧ ಚರಿತ ಮೊದಲಾದ ಕೃತಿಗಳು ಬೌದ್ಧ ಧರ್ಮದ ಮೇಲೆ ಅಪಾರ ಬೆಳಕನ್ನು ಚೆಲ್ಲುತ್ತವೆ. ಅಂತೆಯೆ ಸಿಲೋನಿಗಳು ಪಾಳೀ ಭಾಷೆಯಲ್ಲಿ ರಚಿಸಿರುವ 'ದೀಪವಂಶ' ಮತ್ತು 'ಮಹಾವಂಶ ಕೃತಿಗಳು ಬೌದ್ಧ ಧರ್ಮದ ಬಗ್ಗೆ ತಿಳಿಯಲು ಉಪಯುಕ್ತ ಕೃತಿಗಳಾಗಿವೆ. ಪಾಣಿನಿಯ ಅಷ್ಟಾಧ್ಯಾಯಿ ಪತಂಜಲಿಯ ಮಹಾಭ್ಯಾಸ, ಗಾರ್ಗಿಯ 'ಗಾರ್ಗಿಸಂಹಿತ' ಕೃತಿಗಳು ಸಮಕಾಲೀನ ಭಾರತದ ಇತಿಹಾಸ ರಚನೆಗೆ ಮಾಹಿತಿ ನೀಡುತ್ತವೆ.

ಮೌರ್ಯರ ಮತ್ತು ಕುಶಾನರ ಭಾರತದ ಇತಿಹಾಸವನ್ನು ರಚಿಸಲು ದೇಶೀಯ ಮತ್ತು ವಿದೇಶೀಯ ಸಾಹಿತ್ಯ ಕೃತಿಗಳು ಅಮೂಲ್ಯ ವಿಷಯಗಳನ್ನು ಒದಗಿಸುತ್ತವೆ. ದೇಶೀಯ ಸಾಹಿತ್ಯ ಕೃತಿಗಳಲ್ಲಿ, ಕೌಟಿಲ್ಯನ ಅರ್ಥಶಾಸ್ತ್ರ, ವಿಶಾಕದತ್ತನ ಮುದ್ರಾರಾಕ್ಷಸ ಜೈನರ ಪರಿಶಿಷ್ಟ ಪರ್ವ ಮೊದಲಾದ ಕೃತಿಗಳು ಮೌರ್ಯರ ಬಗೆಗಿನ ಇತಿಹಾಸ

ರಚನೆಗೆ ಸಹಾಯಕವಾಗಿವೆ. ಕುಶಾನರ ಇತಿಹಾಸಕ್ಕೆ ಸಂಬಂಧಿಸಿದಂತೆ ಅಶ್ವಘೋಷನ 'ಬುದ್ಧಚರಿತ' 'ಸೌಂದರಾನಂದ' 'ವಜ್ರಸೂಚಿ' ಸಾರಿಪುತ್ರಪ್ರಕರಣ, ಚೀನೀ ಭಾಷಾಂತರವಾದ ಶ್ರೀ ಧರ್ಮ ಪೀಟಿಕಾನಿಧಾನಸೂತ್ರ, ಬೌದ್ಧರ ಮಹಾಯಾನ ಕೃತಿಗಳಾದ ಸಧರ್ಮಪುಂಡರಿಕ, ಲಲಿತವಿಸ್ತಾರ ಮಿಳಿಂದಪನ್ಹ, ಕೃತಿಗಳು ಉಪಯುಕ್ತ ವಿವರಗಳನ್ನೊದಗಿಸುತ್ತವೆ.

ಗುಪ್ತರ ಕಾಲವು ಪ್ರಾಚೀನ ಭಾರತದಲ್ಲಿ ಸಂಸ್ಕೃತ ಸಾಹಿತ್ಯದ ಸುವರ್ಣಯುಗವಾಗಿದ್ದು ಕಾವ್ಯಗಳು ಪುರಾಣಗಳು. ನಾಟಕಗಳೇ ಮೊದಲಾದ ಸುಪ್ರಸಿದ್ಧ ಕೃತಿಗಳು ರಚಿತವಾದವು. ಇವುಗಳಲ್ಲಿ ಕೆಲವು ಐತಿಹಾಸಿಕ ಸಂಗತಿಗಳು ಇತಿಹಾಸಕಾರನಿಗೆ ದೊರೆಯುತ್ತವೆ. ಗುಪ್ತರ ಆಳ್ವಿಕೆಯ ಕೊನೆಯ ಭಾಗಕ್ಕೆ ಸೇರಿದ ಭಾಸಕವಿಯು ಸಂಸ್ಕೃತದಲ್ಲಿ ರಚಿಸಿರುವ ಹದಿಮೂರು ನಾಟಕಗಳನ್ನು 1909ರಲ್ಲಿ ತಿರುವಾಂಕೂರಿನ ಪಂಡಿತ ಟಿ. ಗಣಪತಿ ಶಾಸ್ತ್ರಿಯವರು ಪತ್ತೆ ಹಚ್ಚಿದರು. ಅವುಗಳಲ್ಲಿ ಸ್ವಪ್ನವಾಸವದತ್ತ, ಚಾರುದತ್ತ ಮತ್ತು ಪ್ರತಿಮಾನಾಟಕಗಳು, ಹೆಚ್ಚು ಹೆಸರುವಾಸಿಯಾದವುಗಳಾಗಿದ್ದು ಅಂದಿನ ಸಾಮಾಜಿಕ ಜೀವನವನ್ನು ತಿಳಿಯಲು ಸಹಕಾರಿಯಾಗಿವೆ. ಇವುಗಳಲ್ಲದೆ ವಿಜ್ಜಿಕ ಎಂಬ ಸ್ತ್ರೀಯು ರಚಿಸಿರುವ ಕೌಮುದಿ ಮಹೋತ್ಸವ, ವಿಶಾಕದತ್ತನ ಮುದ್ರಾರಾಕ್ಷಸ, ಶೂದ್ರಕನ 'ಮೃಚ್ಛಕಟಿಕ', ಭವಭೂತಿಯ 'ಮಹಾವೀರ ಚರಿತಂ'. 'ಮಾಲತಿ ಮಾಧವ' ಮತ್ತು ಉತ್ತರ ರಾಮಚರಿತಂ, ವರಹಮೀರನ 'ಬೃಹಜ್ಜಾತಕ' ಹಾಗೂ ಪಂಚತಂತ್ರ ಮೊದಲಾದ ಕೃತಿಗಳು ಐತಿಹಾಸಿಕ ಸಂಗತಿಗಳನ್ನೊಗೊಂಡಿದ್ದು ಅಂದಿನ ಸಾಮಾಜಿಕ, ವೈಜ್ಞಾನಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ವಿಷಯಗಳ ಮೇಲೆ ಅಪೂರ್ವ ಮಾಹಿತಿಗಳನ್ನು ನೀಡುತ್ತವೆ.

ಗುಪ್ತ ಸಂತತಿಯವರ ನಂತರ ಪ್ರಾಚೀನ ಭಾರತವನ್ನಾಳಿದ ಹಿಂದೂ ಸಾಮ್ರಾಟರುಗಳಲ್ಲಿ ಶ್ರೀ ಹರ್ಷ ಚಕ್ರವರ್ತಿಯು ಕೊನೆಯವನು. ಇವನ ಕಾಲದ ಇತಿಹಾಸ ರಚನೆಗೆ ಇವನ ಆಸ್ಥಾನ ಕವಿ ಬಾಣನು ರಚಿಸಿರುವ 'ಹರ್ಷಚರಿತ'ವು ಸಾಕ್ಷ್ಯಾಧಾರಗಳನ್ನು ಒದಗಿಸುತ್ತದೆ. ಹರ್ಷನ ತರುವಾಯ ಉತ್ತರ ಭಾರತದಲ್ಲಿ ಹಲವಾರು ಸಣ್ಣ ಪುಟ್ಟ ರಾಜ್ಯಗಳು ಅಸ್ತಿತ್ವಕ್ಕೆ ಬಂದವು. ಈ ರಾಜ್ಯಗಳಲ್ಲಿನ ಅರಸರ ಆಸ್ಥಾನ ಕವಿಗಳು ರಚಿಸಿರುವ ಹಲವಾರು ಕೃತಿಗಳು ಅಂದಿನ ಸ್ಥಿತಿಗತಿಗಳನ್ನು ತಿಳಿಯಲು ಸಹಾಯಕವಾಗಿವೆ. ಇವುಗಳಲ್ಲಿ ಮುಖ್ಯವಾದವುಗಳು ಕಲ್ಹಣನ 'ರಾಜತರಂಗಿಣಿ' ಅವನ ಸೋದರ ಬಿಲ್ಹಣನ 'ವಿಕ್ರಮಾಂಕದೇವ ಚರಿತ', ಸಂಧ್ಯಾಕರನಂದಿಯ ರಾಮಚರಿತ, ವಾಕ್ಪತಿಯ 'ಗೌಡವಾಹೋ', ರಾಜಶೇಖರನ ಕರ್ಪೂರ ಮಂಜರಿ. ಹೇಮಚಂದ್ರನ 'ಕುಮಾರಪಾಲಚರಿತ' ಚಾಂದ್‌ಬರ್ದಾಯಿಯ 'ಪೃಥ್ವಿರಾಜರಾಸೋ' ನಯಚಂದ್ರನ 'ಹಮ್ಮೀರ ಕಾವ್ಯ' ಮೊದಲಾದ ಕೃತಿಗಳು ಅನೇಕ ವಿಷಯಗಳನ್ನೊದಗಿಸುತ್ತವೆ. ಅಂತೆಯೇ ಪ್ರಾಂತೀಯ ಭಾಷೆಗಳಾದ, ಕನ್ನಡ, ತೆಲುಗು, ತಮಿಳು, ಮಲೆಯಾಳಂ, ಗುಜರಾತಿ, ಮರಾಠಿ ಮತ್ತು ಬಂಗಾಳಿ ಮೊದಲಾದ ಭಾಷೆಗಳಲ್ಲಿ ರಚಿತವಾಗಿರುವ ನೂರಾರು ಕೃತಿಗಳು ಇತಿಹಾಸ ರಚನೆಗೆ ನೆರವಾಗುತ್ತವೆ.

**ವಿದೇಶಿಯರ ಬರವಣಿಗೆಗಳು**

ದೇಶೀಯ ಸಾಹಿತ್ಯಾಧಾರಗಳಂತೆ ವಿದೇಶೀ ಸಾಹಿತ್ಯಾಧಾರಗಳೂ ಇತಿಹಾಸ ರಚನೆಗೆ ನೆರವಾಗಿವೆ. ಪ್ರಾಚೀನ ಕಾಲದಿಂದಲೂ ಭಾರತವು ವಿವಿಧ ದೇಶಗಳಿಂದ ರಾಜ್ಯಾಕಾಂಕ್ಷಿಗಳನ್ನು ವರ್ತಕರನ್ನು ಮತ್ತು ಸಂದರ್ಶಕರನ್ನು ಆಕರ್ಷಿಸಿರುವುದು ಸಾಮಾನ್ಯವಾಗಿ ಕಂಡುಬರುವ ವಿಷಯವಾಗಿದೆ. ಇವರೆಲ್ಲರೂ ತಾವು ಭಾರತದಲ್ಲಿ ಕಂಡು ಕೇಳಿದ ಹಲವಾರು ವಿಷಯಗಳನ್ನು ಬರೆದಿಟ್ಟಿದ್ದಾರೆ. ಇವುಗಳು ಗ್ರೀಕ್, ರೋಮನ್, ಚೀನೀ ಪರ್ಶಿಯನ್ ಮತ್ತು ಆರಬ್ಬೀ ಭಾಷೆಗಳಲ್ಲಿವೆ. ಇತಿಹಾಸಕಾರರ ಪಿತಾಮಹನೆನಿಸಿದ ಗ್ರೀಕ್ ಇತಿಹಾಸಕಾರ ಹೆರೊಡೋಟಸ್ಸನು 'ಹಿಸ್ಟಾರಿಕ' ಎಂಬ ಕೃತಿಯಲ್ಲಿ ಪರ್ಶಿಯನ್ನರ ದೊರೆಗಳಾದ ಡೇರಿಯಸ್ ಮತ್ತು ಜರ್‌ಕ್ಸಿಸ್‌ರು ಹೇಗೆ ವಾಯುವ್ಯ ಭಾರತದ ಮೇಲೆ ತಮ್ಮ ಅಧಿಕಾರವನ್ನು ಸ್ಥಾಪಿಸಿದರೆಂಬುದನ್ನು ತಿಳಿಸುತ್ತಾನೆ. ಜನೊಫಾನ್ (Xenophon)ನ ಸೈರೋಪಿಡಿಯಾ. ಕೃತಿಯು ಕೈರಸ್ಸನು ಬ್ಯಾಕ್ಟಿರೀಯ ಮತ್ತು ವಾಯುವ್ಯ ಭಾರತವನ್ನು ಗೆದ್ದು ತನ್ನ ಸಾಮ್ರಾಜ್ಯವನ್ನು ಸಿರಿಯಾದಿಂದ ಎರಿತಿರಿಯನ್‌ಸಿ (ಹಿಂದೂ ಮಹಾಸಾಗರ) ವರೆಗೆ ವಿಸ್ತರಿಸಿದ್ದುದನ್ನು ತಿಳಿಸುತ್ತಾನೆ. ಅಲೆಗ್ಸಾಂಡರನ ದಂಡಯಾತ್ರೆಗೆ ಸಂಬಂಧಿಸಿದ ವಿಷಯಗಳನ್ನು ಅವನ ಇತಿಹಾಸಕಾರರಾದ ಆರಿಸ್ಟೋಬುಲಸ್. ನಿಯರ್‌ಕಸ್, ಮತ್ತು ಒನೆಸಿಕ್ರಿಟಸ್‌ರು ರಚಿಸಿರುವ ಕೃತಿಗಳಿಂದ ತಿಳಿಯಬಹುದು. ಅಲೆಗ್ಸಾಂಡರನ ಮರಣಾನಂತರ ಅವನ ಸಾಮ್ರಾಜ್ಯದ ಸಿರಿಯ ಭಾಗಕ್ಕೆ ರಾಜನಾದ ಸೆಲ್ಯೂಕಸ್ಸನು ತನ್ನ ರಾಯಬಾರಿಯಾಗಿ ಮೆಗಸ್ತಾನೀಸ್ ಎಂಬವನನ್ನು ಚಂದ್ರಗುಪ್ತಮೌರ್ಯನ ಆಸ್ಥಾನಕ್ಕೆ ಕಳುಹಿಸಿದ್ದನು. ಮೆಗಾಸ್ತನೀಸ್‌ನು ಚಂದ್ರಗುಪ್ತಮೌರ್ಯನ ಆಸ್ಥಾನದಲ್ಲಿ ಬಹಳ ವರ್ಷಗಳಿದ್ದು 'ಇಂಡಿಕಾ' ಎಂಬ ಗ್ರಂಥವನ್ನು ರಚಿಸಿದ್ದನು. ಈ ಕೃತಿಯು ಒಂದು ಅಪೂರ್ವ ಕೃತಿಯಾಗಿದ್ದು ಮೌರ್ಯರ ಕಾಲದ ರಾಜಕೀಯ ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳ ಮೇಲೆ ಅಪಾರ ಬೆಳಕನ್ನು ಚೆಲ್ಲುತ್ತದೆ. ಆದರೆ 'ಇಂಡಿಕ'ದ ಮೂಲಕೃತಿಯು ಹಾಳಾಗಿ ಹೋಗಿದ್ದು ಅದರಲ್ಲಿನ ಹಲವಾರು ವಿಷಯಗಳನ್ನು ತರುವಾಯದ ಗ್ರೀಕ್ ಮತ್ತು ರೋಮನ್ ಇತಿಹಾಸಕಾರರಾದ ಏರಿಯನ್, ಜಸ್ಟಿನ್, ಸ್ಟ್ರಾಬೊ. ಪ್ಲಿನಿ ಮೊದಲಾದವರು ತಮ್ಮ ಕೃತಿಗಳಲ್ಲಿ ಉಲ್ಲೇಖಿಸಿದ್ದಾರೆ. ಇದಲ್ಲದೆ ಇವರ ಕೃತಿಗಳಲ್ಲಿ ಭಾರತ ದೊಂದಿಗೆ ಗ್ರೀಕರು ಮತ್ತು ರೋಮನ್ನರು ಇಟ್ಟುಕೊಂಡಿದ್ದ ವ್ಯಾಪಾರ ಮತ್ತು ಸಾಂಸ್ಕೃತಿಕ ಸಂಬಂಧಗಳ ವಿಷಯವೂ ನಿರೂಪಿತವಾಗಿದೆ. ಇದೇ ರೀತಿಯಲ್ಲಿ ಅನಾಮಧೇಯ ನಾವಿಕನೊಬ್ಬನಿಂದ ರಚಿತವಾಗಿರುವ 'ಪೆರಿಪ್ಲಸ್ ಆಫ್ ದಿ ಎರಿತರೇನಿಯಿನ್ ಸಿ' ಎಂಬ ಗ್ರಂಥವು ವಿದೇಶಗಳೊಂದಿಗೆ ಭಾರತದ ವ್ಯಾಪಾರ ಸಂಪರ್ಕವನ್ನು ಕುರಿತು ತಿಳಿಸುತ್ತದೆ. ಅಂತೆಯೆ, ಟಾಲಮಿಯ ಭೂಗೋಳ ಶಾಸ್ತ್ರ ಗ್ರಂಥವು ಪ್ರಾಚೀನ ಭಾರತಕ್ಕೆ ಸಂಬಂಧಿಸಿದಂತೆ ಕೆಲವು ಐತಿಹಾಸಿಕ ವಿಷಯಗಳನ್ನು ಒದಗಿಸುತ್ತದೆ.

ಗ್ರೀಕ್ ಮತ್ತು ರೋಮನ್ ಬರಹಗಾರರ ಬರವಣಿಗೆಗಳನ್ನು ಬಿಟ್ಟರೆ ಚೀನೀ ಪ್ರವಾಸಿಗರ ಬರವಣಿಗೆಗಳು ಪ್ರಾಚೀನ ಭಾರತದ ಇತಿಹಾಸ ರಚನೆಗೆ ಬಹು

ಉಪಯುಕ್ತವಾಗಿವೆ. ಭಾರತದಲ್ಲಿ ಬೌದ್ಧಮತವು ಅಶೋಕ, ಕಾನಿಷ್ಕ, ಹರ್ಷ ಮೊದಲಾದವರ ಪ್ರೋತ್ಸಾಹದಿಂದ ಜನಪ್ರಿಯವಾದುದಲ್ಲದೆ ಭಾರತದ ಹೊರಗೂ ಮಧ್ಯ ಏಷ್ಯಾ, ಟಿಬೆಟ್, ಚೀನಾ, ಕೊರಿಯ ಮತ್ತು ಜಾವ ಮೊದಲಾದ ರಾಜ್ಯಗಳಲ್ಲೂ ಹರಡಿ ಅನೇಕ ಸಂದರ್ಶಕರನ್ನು ಆಕರ್ಷಿಸಿತು. ಹೀಗೆ ಬೌದ್ಧ ಮತದಿಂದ ಆಕರ್ಷಿತರಾಗಿ ಭಾರತಕ್ಕೆ ಭೇಟಿ ಕೊಡಲು ಬಂದ ಚೀನೀ ಯಾತ್ರಿಕರಲ್ಲಿ ಫಾಹಿಯಾನ್, ಹ್ಯೂಯನ್‌ತ್ಸಾಂಗ್ ಮತ್ತು ಈತ್ಸಿಂಗ್ ಪ್ರಸಿದ್ಧರಾದವರು. ಫಾಹಿಯಾನನು ಗುಪ್ತರ ಚಕ್ರವರ್ತಿ ಎರಡನೆ ಚಂದ್ರ ಗುಪ್ತನ ಕಾಲದಲ್ಲಿ ಭಾರತಕ್ಕೆ ಭೇಟಿ ನೀಡಿದ್ದನು. ಇವನು ಉತ್ತರ ಭಾರತದಲ್ಲೆಲ್ಲಾ ಪ್ರವಾಸಮಾಡಿ ಬೌದ್ಧಧರ್ಮದ ಬಗೆಗೆ ಅನೇಕ ಮಾಹಿತಿಗಳನ್ನು ಸಂಗ್ರಹಿಸಿಕೊಂಡು ಕ್ರಿ.ಶ. 414ರಲ್ಲಿ ಚೀನಾಕ್ಕೆ ಹಿಂದಿರುಗಿದನು. ಫಾಹಿಯಾನನು ಹಿಂದಿರುಗಿ ಹೋದ ಸುಮಾರು ಇನ್ನೂರ ಇಪ್ಪತ್ತು ವರ್ಷಗಳ ನಂತರದಲ್ಲಿ ಹ್ಯೂಯನ್‌ತ್ಸಾಂಗ್ ಎಂಬ ಮತ್ತೊಬ್ಬ ಚೀನೀ ಯಾತ್ರಿಕನು ಶ್ರೀಹರ್ಷ ಚಕ್ರವರ್ತಿಯ ಕಾಲದಲ್ಲಿ ಭಾರತಕ್ಕೆ ಭೇಟಿ ನೀಡಿದನು. ಹ್ಯೂಯನ್‌ತ್ಸಾಂಗನು ಕ್ರಿ.ಶ. 629ರಲ್ಲಿ ಚೀನಾದಿಂದ ಹೊರಟು ಫಾಹಿಯಾನನು ಒಂದು ಮಾರ್ಗದಲ್ಲೇ ಪ್ರವಾಸ ಮಾಡಿ ಭಾರತವನ್ನು ತಲುಪಿದನು. ಇವನು ಭಾರತದಲ್ಲಿ ಹದಿನಾರು ವರ್ಷಗಳ ಕಾಲವಿದ್ದನು. ಹ್ಯೂಯನ್‌ತ್ಸಾಂಗನು ಉತ್ತರ ಭಾರತದ ಹಾಗೂ ದಕ್ಷಿಣ ಭಾರತದ ಅನೇಕ ರಾಜರುಗಳ ಆಸ್ಥಾನಗಳನ್ನು ಸಂದರ್ಶಿಸಿದನು. ಅಲ್ಲದೆ ಹರ್ಷಚಕ್ರವರ್ತಿಯ ಹಾಗೂ ಕಾಮರೂಪದ ಭಾಸ್ಕರ ವರ್ಮನ ಅತಿಥಿಯೂ ಆಗಿದ್ದನು. ನಳಂದ ವಿಶ್ವವಿದ್ಯಾನಿಲಯದಲ್ಲಿ ಐದು ವರ್ಷಗಳ ಕಾಲ ಅಧ್ಯಯನ ಮಾಡಿದನು. ಹ್ಯೂಯನ್‌ತ್ಸಾಂಗನ ಬರವಣಿಗೆಯು ಬೌದ್ಧ ಧರ್ಮದ ಬಗ್ಗೆ ಅಲ್ಲದೆ ಅಂದಿನ ಸಾಮಾಜಿಕ ಆರ್ಥಿಕ ಮತ್ತು ಧಾರ್ಮಿಕ ಸ್ಥಿತಿಗಳ ಮೇಲೂ ಬೆಳಕನ್ನು ಚೆಲ್ಲುತ್ತದೆ. ಹ್ಯೂಯನ್‌ತ್ಸಾಂಗನು ಕ್ರಿ.ಶ. 645ರಲ್ಲಿ ಚೀನಾಕ್ಕೆ ಹಿಂದಿರುಗಿದನು. ಹೂಯನ್‌ತ್ಸಾಂಗನ ನಂತರ ಭಾರತಕ್ಕೆ ಭೇಟಿಕೊಟ್ಟ ಚೀನೀ ಪ್ರವಾಸಿಗರಲ್ಲಿ ಈತ್ಸಿಂಗನು ಕೊನೆಯವನು. ಕ್ರಿ.ಶ. 671ರಲ್ಲಿ ಚೀನಾದಿಂದ ಹೊರಟು ಇಂಡೋನೇಷಿಯಾದ ಮೂಲಕ ಸಮುದ್ರ ಮಾರ್ಗವಾಗಿ ಬಂದು ಭಾರತವನ್ನು ತಲುಪಿದನು. ಈತ್ಸಿಂಗನು ನಳಂದ ವಿಶ್ವವಿದ್ಯಾನಿಲಯದಲ್ಲಿ ಹತ್ತುವರ್ಷಗಳ ಕಾಲ ಅಧ್ಯಯನ ಮಾಡಿದ ನಂತರ ಕ್ರಿ.ಶ. 695ರಲ್ಲಿ ಚೀನಾಕ್ಕೆ ಹಿಂದಿರುಗಿದನು.

ಈ ಮೂವರು ಚೀನೀ ಪ್ರವಾಸಿಗಳ ಬರವಣಿಗೆಗಳು ಕ್ರಿ.ಶ. 5, 6 ಮತ್ತು 7ನೇ ಶತಮಾನಗಳಲ್ಲಿ ಭಾರತದಲ್ಲಿ ಬೌದ್ಧ ಮತದ ಸ್ಥಿತಿಗತಿಗಳ ಬಗ್ಗೆ ಸಾಕಷ್ಟು ವಿಷಯಗಳನ್ನು ದೊರಕಿಸಿಕೊಡುತ್ತವೆ. ಇದಲ್ಲದೆ ಇವರ ಬರವಣಿಗೆಗಳ ಮೂಲಕ, ಎರಡನೇ ಚಂದ್ರಗುಪ್ತ, ಶ್ರೀಹರ್ಷ, ಇಮ್ಮಡಿ ಪುಲಿಕೇಶಿ ಮೊದಲಾದ ಘನವಂತ ವ್ಯಕ್ತಿಗಳ ಸಾಧನೆಗಳ ಬಗ್ಗೆಯೂ ಅನೇಕ ವಿಷಯಗಳು ಸಿಗುತ್ತದೆ. ಮೇಲಾಗಿ ಈ ಮೂವರ ಬರವಣಿಗೆಗಳ ಪರಸ್ಪರ ಹೋಲಿಕೆಯಿಂದ ಅಂದಿನ ಭಾರತದ ಸಾಮಾಜಿಕ ಆರ್ಥಿಕ ಧಾರ್ಮಿಕ ಸ್ಥಿತಿಗಳ ಬಗ್ಗೆ ಅನೇಕ ವಿಷಯಗಳನ್ನು ತಿಳಿಯಬಹುದು.

ಕ್ರಿ.ಶ. ಎಂಟನೇ ಶತಮಾನದಿಂದ ಅರೇಬಿಯಾ ಹಾಗೂ ಮತ್ತಿತರ ಮುಸ್ಲಿಮ್ ರಾಜ್ಯಗಳಿಂದ ಪ್ರವಾಸಿಗಳು ಮತ್ತು ವರ್ತಕರು ಭಾರತಕ್ಕೆ ಭೇಟಿಕೊಡಲಾರಂಭಿಸಿದರು ಇವರಲ್ಲಿ ಮುಖ್ಯರಾದವರು. ಸುಲೈಮಾನ್ (ಕ್ರಿ.ಶ. 851) ಮಸೂದಿ ಇಬ್ನ ಹಕೂಲ್ ಮತ್ತು ಅಬುಜಿಯಾದ್. ಈ ವರ್ತಕರ ಪ್ರವಾಸ ಕಥನಗಳಲ್ಲಿ ಹಲವಾರು ಸಂಗತಿಗಳು ದೊರೆಯುತ್ತವೆ. ಮಹಮದ್ ಘಸ್ನಿಯು ಭಾರತದ ಮೇಲೆ ದಂಡಯಾತ್ರೆ ಕೈಗೊಂಡಿದ್ದಾಗ ಅವನ ಜೊತೆಯಲ್ಲಿ ಘನ ವಿದ್ವಾಂಸನಾದ ಅಲ್ಬರೂನಿಯು ಬಂದಿದ್ದನು, ಅಲ್ಬರೂನಿಯು ಹಿಂದೂಗಳ ಧರ್ಮ ಮತ್ತು ಸಾಮಾಜಿಕ ವಿಷಯಗಳನ್ನು ತಿಳಿದುಕೊಳ್ಳುವ ಸಲುವಾಗಿ ಸಂಸ್ಕೃತ ಭಾಷೆಯನ್ನು ಕಲಿತು ಅನೇಕ ಗ್ರಂಥಗಳನ್ನು ಅಭ್ಯಸಿಸಿದನು. ಭಾರತವನ್ನು ಕುರಿತು ಇವನು ರಚಿಸಿರುವ 'ಅಲ್‌ಹಿಂದ್' ಎಂಬ ಕೃತಿಯು ಕ್ರಿ.ಶ. ಹನ್ನೊಂದನೆ ಶತಮಾನದಲ್ಲಿ ಹಿಂದೂಗಳ ಸಾಮಾಜಿಕ, ಧಾರ್ಮಿಕ ಆಚರಣೆಗಳು ಮತ್ತು ಸಂಪ್ರದಾಯಗಳು ಹಾಗೂ ವಿದ್ಯಾಭ್ಯಾಸ ಪದ್ಧತಿಯ ಬಗ್ಗೆ ಉಪಯುಕ್ತ ವಿವರಣೆಗಳನ್ನೊದಗಿಸುತ್ತದೆ.

ಭಾರತದಲ್ಲಿ ಮುಸ್ಲಿಮರ ಆಳ್ವಿಕೆಯು ಆರಂಭವಾದ ಮೇಲೆ ಅನೇಕ ಐತಿಹಾಸಿಕ ಕೃತಿಗಳು ಪರ್ಶಿಯನ್ ಭಾಷೆಯಲ್ಲಿ ರಚಿಸಲ್ಪಟ್ಟವು ಮಿನ್‌ಹಾಜ್-ಉದ್ದೀನ್‌ನ 'ತಬಾಕತ್-ಇ-ನಾಸಿರಿ' ಕೃತಿಯು ಘಸ್ನಿ ಮತ್ತು ಘೋರಿ ಸಂತತಿಯವರ ಬಗೆಗಿನ ವಿವರಗಳನ್ನು ನೀಡುತ್ತದೆ. ಮಧ್ಯಕಾಲೀನ ಯುಗದ ಸುಪ್ರಿಸಿದ್ಧ ಇತಿಹಾಸಕಾರನಾದ ಜಿಯಾ ಉದ್ದೀನ್-ಭರಣಿಯು ರಚಿಸಿರುವ ತಾರಿಕ್-ಇ-ಫಿರೂಜ್ ಷಾಹಿ ಗ್ರಂಥವು ಬಲ್ಬನ್ನನ ಆಳ್ವಿಕೆಯಿಂದ ಹಿಡಿದು ಫಿರೋಜ್‌ಷಹನ ಆಳ್ವಿಕೆಯ ಮೊದಲ ಕೆಲವು ವರ್ಷಗಳವರೆಗಿನ ಘಟನೆಗಳ ವಿವರಗಳನ್ನು ಒಳಗೊಂಡಿದೆ. ಮತ್ತೊಬ್ಬ ಪ್ರಸಿದ್ಧ ಇತಿಹಾಸಕಾರನಾದ ಆಮೀರ್ ಖುಸ್ರುವು ರಚಿಸಿರುವ 'ಖಜೈನ್-ಉಲ್-ಫುತುಹ್, ಮತ್ತು ಖಿರಾನ್-ಉಸ್-ಸದೈನ್ ಕೃತಿಗಳು, ಗುಲಾಮಿ ಸಂತತಿ, ಖಿಲ್ಜಿ ಸಂತತಿಯವರ ಬಗ್ಗೆ ತಿಳಿಸುತ್ತವೆ. 'ತುಗ್ಲಖ್ ನಾಮ'ವು ತೊಗ್ಲಖ್ ಸಂತತಿಯವರ ಇತಿಹಾಸದ ಮೇಲೆ ಬೆಳಕನ್ನು ನೀಡುತ್ತದೆ. ಷಂಷುದ್ದೀನ್ ಸಿರಾಜ್ ಅಫೀಪ್‌ನ ತಾರಿಖ್-ಇ-ಫಿರೋಜ್‌ಷಾಹಿ, ಯಹ್ಯಾಬಿನ್-ಅಹಮದ್ ಸರ್ ಹಿಂದಿಯ 'ತಾರಿಖ್-ಇ-ಮುಬಾರಕ್ ಷಾಹಿ' ಇಸಾಮಿಯ 'ಫುತುಹ್-ಅಲ್-ಸಲಾತಿನ್ ಕೃತಿಗಳು ಮುಸ್ಲಿಮರ ಆಳ್ವಿಕೆಯ ಕಾಲದ ಇತಿಹಾಸ ರಚನೆಗೆ ಅತ್ಯುಪಯುಕ್ತ ಆಧಾರಗಳಾಗಿವೆ ಇವುಗಳಲ್ಲದೆ ಫರಿಸ್ತ, ನಿಜಾಮುದ್ದೀನ್ ಬದೌನಿ, ತಬಾತಬಿಯವರ ಕೃತಿಗಳಲ್ಲೂ ಇತಿಹಾಸಕ್ಕೆ ಸಂಬಂಧಿಸಿದ ಮಾಹಿತಿಗಳು ದೊರೆಯುತ್ತವೆ. ಇದೇ ರೀತಿಯಲ್ಲಿ ವಿದೇಶೀ ಪ್ರವಾಸಿಗರಾಗಿ ಬಂದ ಇಬನ್ ಬಟೂಟ, ಅಬ್ದುರ್ ರಜಾಕ್, ಮಾರ್ಕೋಪೋಲೋ ನಿಕೋಲೋ ಕಾಂಟಿ, ಅಥನೇಷಿಯನ್ ನಿಕಿಟಿನ್, ವಾರ್ಥೆಮ, ಬಾರ್ಬೋಸ, ಪೇಯಿಸ್, ಪೀಟರ್ ಡೆಲ್ಲವೆಲ್ಲ ಮೊದಲಾದವರ ಪ್ರವಾಸದ ದಿನಚರಿಗಳು ಮಧ್ಯಕಾಲೀನ ಭಾರತದ ಇತಿಹಾಸ ರಚನೆಗೆ ಬಹುಮುಖ್ಯ ಆಧಾರಗಳಾಗಿವೆ. ದೆಹಲಿಯ ಆಳರಸರು ಹಾಗೂ ಪ್ರಾಂತೀಯ ಗೌವರ್ನರುಗಳು ರಜಪೂತರು ಮರಾಠರು ಹಾಗೂ ಸಿಖ್ಖರೊಂದಿಗೆ ನಿರಂತರ ಯುದ್ಧಗಳಲ್ಲಿ ತೊಡಗಿದ್ದರು. ರಾಜಾಸ್ಥಾನಿ ಮರಾಠಿ,

ಗುರುಮುಖಿ ಹಾಗೂ ಇತರ ದೇಶೀಯ ಭಾಷೆಗಳಲ್ಲಿ ರಚಿಸಲಾಗಿರುವ ಗ್ರಂಥಗಳು ಈ ಯುದ್ಧಗಳ ಬಗ್ಗೆ ಸಾಕಷ್ಟು ವಿಷಯಗಳನ್ನೊದಗಿಸುತ್ತವೆ.

ಮೊಗಲರ ಕಾಲದ ಇತಿಹಾಸ ರಚನೆಗೆ ಅಬುಲ್ ಫಜಲ್, ಬದೌನಿ, ಫಿರಿಷ್ಟ, ಖಾಫಿಖಾನ್ ಮೊದಲಾದವರ ಇತಿಹಾಸ ಕೃತಿಗಳು ಪ್ರಮುಖ ಆಧಾರಗಳಾಗಿವೆ. ಬಹುಮುಖ ಪ್ರತಿಭೆಯ ವಿದ್ವಾಂಸನಾಗಿದ್ದ ಅಬುಲ್ ಫಸಲ್ ಅಕ್ಬರ್ ಚಕ್ರವರ್ತಿಯ ಸ್ನೇಹಿತನಾದ್ದನು. ಇವನ ಸರ್ವೋತ್ಕೃಷ್ಟ ಕೃತಿಯಾದ 'ಐಯಿನಿ-ಇ-ಅಕ್ಬರಿ ಅಕ್ಬರನ ಆಡಳಿತ ವ್ಯವಸ್ಥೆ ಬಗೆಗೆ ವಿಶೇಷ ಮಾಹಿತಿಗಳನ್ನು ನೀಡುತ್ತದೆ. ಚಕ್ರವರ್ತಿ ಔರಂಗಜೇಬನ ಅಸಂತೋಷಕ್ಕೆ ಪಾತ್ರನಾಗಲು ಇಚ್ಛಿಸದ ಇತಿಹಾಸಕಾರನೊಬ್ಬನು ಖಾಫಿಖಾನ್ ಎಂಬ ಹೆಸರನ್ನಿಟ್ಟುಕೊಂಡು 'ಮಂತಕಾಬ್-ಉಲ್-ಲುಬಬ್ ಮಹಮದ್ ಷಾಹಿ' ಎಂಬ ಕೃತಿಯನ್ನು ರಚಿಸಿರುವನು. ಈ ಕೃತಿಯು ಔರಗಜೇಬನ ಆಳ್ವಿಕೆಯ ಮೇಲೆ ಬೆಳಕನ್ನು ಚೆಲ್ಲುತ್ತದೆ. ಅಂತೆಯೆ ಬದೌನಿಯ ಮುಂತಕಾಬ್-ಉತ್-ತವಾರಿಕ್, ಫಿರಿಸ್ತನ ತಾರಿಕ್-ಇ-ಪಿರಿಸ್ಟ, ಬಾಬರ್ ರಚಿಸಿರುವ, ಬಾಬರ್ ನಾಮ, ಗುಲ್ಬದಾನ್ ಬೇಗಂಳ ಹುಮಾಯೂನ್ ನಾಮ, ತುಜುಕ್-ಇ-ಜಹಾಂಗೀರಿ, ಮೊದಲಾದ ಕೃತಿಗಳು ಈ ಕಾಲದ ಇತಿಹಾಸ ರಚನೆಗೆ ಉಪಯುಕ್ತ ಆಧಾರಗಳಾಗಿವೆ.

ಮೊಗಲರ ಆಳ್ವಿಕೆಯ ಕಾಲದಲ್ಲಿ ಕೆಲವು ಯುರೋಪಿಯನ್ ಪ್ರವಾಸಿಗರು ಭಾರತಕ್ಕೆ ಭೇಟಿಕೊಟ್ಟು ಭಾರತದ ಆಂತರಿಕ ಸ್ಥಿತಿಗತಿಗಳನ್ನು ತಮ್ಮ ಗ್ರಂಥಗಳಲ್ಲಿ ನಿರೂಪಿಸಿದ್ದಾರೆ. ರಾಲ್ಫ್ ಮತ್ತು ಫಿಚ್ ಎಂಬ ಇಂಗ್ಲಿಷ್ ಪ್ರವಾಸಿಗರು ಅಕ್ಬರನ ಕಾಲದಲ್ಲೂ ಇಂಗ್ಲೆಂಡಿನ ಒಂದನೆ ಜೇಮ್ಸ್ ದೊರೆಯ ಪ್ರತಿನಿಧಿಗಳಾಗಿ ಹಾಕಿನ್ಸ್ ಮತ್ತು ಸರ್‌ಥಾಮಸ್ ರೋ ಜಹಾಂಗೀರನ ಕಾಲದಲ್ಲೂ ಟ್ರವರ್ನಿಯರ್ ಮತ್ತು ಬರ್ನಿಯರ್ ಎಂಬ ಫ್ರೆಂಚ್ ಪ್ರವಾಸಿಗರು ಷಹಜಾನನ ಕಾಲದಲ್ಲೂ ಇಟಲಿಯ ಮನೂಸಿ ಎಂಬ ಪ್ರವಾಸಿಗನು ಔರಂಗಜೇಬನ ಕಾಲದಲ್ಲೂ ಹಾಗೂ ಅನೇಕ ಜೆಸುಯಿಟ್ ಪಾದ್ರಿಗಳೂ ಭಾರತಕ್ಕೆ ಭೇಟಿ ನೀಡಿದ್ದರು. ಇವರೆಲ್ಲರ ಬರವಣಿಗೆಗಳು ಮೊಗಲರ ಕಾಲದ ಇತಿಹಾಸ ರಚನೆಗೆ ಅತ್ಯಮೂಲ್ಯ ಮಾಹಿತಿಗಳನ್ನೊದಗಿಸುತ್ತವೆ. ಇವುಗಳೇ ಅಲ್ಲದೆ ಈ ಕಾಲದ ಶಾಸನಗಳು ಮತ್ತು ನಾಣ್ಯಗಳು ಸಾಕಷ್ಟು ಆಧಾರಗಳನ್ನು ದೊರಕಿಸಿಕೊಡುತ್ತವೆ.

ಬ್ರಿಟಿಷರ ಆಳ್ವಿಕೆಯ ಕಾಲದ ಭಾರತದ ಇತಿಹಾಸ ರಚನೆಗೆ ಸರ್ಕಾರಿ ದಾಖಲೆಗಳು ಮತ್ತು ಪತ್ರವ್ಯವಹಾರಗಳು ಬಹುಮುಖ್ಯ ಆಧಾರಗಳಾಗಿವೆ. ಇವುಗಳು ಇಂಗ್ಲಿಷ್ ಫ್ರೆಂಚ್, ಡಚ್, ಪೋರ್ಚುಗೀಸ್ ಹಾಗೂ ಮತ್ತಿತರ ಯೂರೋಪಿಯನ್ ಭಾಷೆಗಳಲ್ಲಿವೆ. ಇವುಗಳು ದೆಹಲಿಯ ರಾಷ್ಟ್ರೀಯ ಪತ್ರಾಗಾರಗಳಲ್ಲಿ ಬಹಳ ಎಚ್ಚರಿಕೆಯಿಂದ ಕಾಪಾಡಲ್ಪಟ್ಟವೆ. ಅಂತೆಯೆ ರಾಜ್ಯಗಳ ಮಟ್ಟದಲ್ಲೂ ಇಂತಹ ಪತ್ರಾಗಾರಗಳಿದ್ದು ಸಂಶೋಧಕನಿಗೆ ಮಾಹಿತಿ ದೊರೆಕಿಸಿಕೊಡುತ್ತವೆ. ಬ್ರಿಟಿಷರ ಆಳ್ವಿಕೆಗೆ ಸಂಬಂಧಿಸಿದಂತೆ ಕೇವಲ ಕೆಲವು ಸರ್ಕಾರಿ ದಾಖಲೆಗಳು ಬೆಳಕಿಗೆ ಬಂದಿದ್ದು

ಉಳಿದವುಗಳು ಅಪ್ರಕಟಿತವಾಗಿಯೆ ಉಳಿದಿವೆ. ಈ ರೀತಿಯ ಸರ್ಕಾರಿ ದಾಖಲೆಗಳೇ ಅಲ್ಲದೆ ಬ್ರಿಟಿಷ್ ಅರಸರ ಮತ್ತು ದಂಡನಾಯಕರುಗಳ ಬಖೈರುಗಳು ದಫ್ತರುಗಳು ಹಾಗೂ ಸಮಕಾಲೀನ ಬರಹಗಾರರ ಬರವಣಿಗೆಗಳು ಈ ಕಾಲದ ಇತಿಹಾಸದ ರಚನೆಗೆ ಉಪಯುಕ್ತವಾಗುತ್ತವೆ. ಒಟ್ಟಿನಲ್ಲಿ ಹೇಳುವುದಾದರೆ ಭಾರತದ ಸಂಸ್ಕೃತಿ ಮತ್ತು ಇತಿಹಾಸವು ಬಹಳ ಪ್ರಾಚೀನವಾದುದು. ಇದನ್ನು ತಿಳಿಯಲು ಇರುವ ಆಧಾರಗಳು ಹಲವಾರು. ಭಾರತದ ಇತಿಹಾಸ ರಚನೆಕಾರನು ಈ ಎಲ್ಲ ಐತಿಹಾಸಿಕ ಸಾಮಗ್ರಿಗಳನ್ನು ಇತಿಹಾಸ ರಚನೆಯ ನಿಯಮಗಳ ಒರೆಗಲ್ಲಿಗೆ ಹಚ್ಚಿ ವಿಷಯ ನಿರೂಪಿಸಬೇಕಾಗುತ್ತದೆ. ಆದರೆ ಈ ಒಂದು ಮಹಾಕಾರ್ಯದಲ್ಲಿ ನಿಷ್ಪಕ್ಷಪಾತವಾದ ಧೋರಣೆಯು ಇತಿಹಾಸ ರಚನೆಕಾರನಿಗಿರುವುದು ಅತ್ಯಾವಶ್ಯಕ.

### ಅಧ್ಯಾಯ-3

# ಸಿಂಧೂಕಣಿವೆಯ ನಾಗರಿಕತೆ

ಭಾರತವು ಅತಿ ಪ್ರಾಚೀನ ಕಾಲದಿಂದಲೂ ಮಾನವನ ಆವಾಸಸ್ಥಾನವಾಗಿದ್ದು ಪ್ರಾಚೀನ ಮಾನವನಿಗೆ ಸಂಬಂಧಪಟ್ಟ ಪಳಿಯುಳಿಕೆಗಳು ಭಾರತದ ಹಾಗೂ ಇಂದಿನ ಪಾಕೀಸ್ಥಾನದ ವಿವಿಧ ಭಾಗಗಳಲ್ಲಿ ಹೇರಳವಾಗಿ ದೊರೆತಿವೆ. ಈ ಪಳಿಯುಳಿಕೆಗಳ ಅಧ್ಯಯನದಿಂದ ನಮ್ಮ ಪೂರ್ವಿಕರು ಹೇಗೆ ಜೀವಿಸುತ್ತಿದ್ದರೆಂಬುದನ್ನು ತಿಳಿಯಬಹುದಾಗಿದೆ. ಈ ಕಾಲದ ಸಂಸ್ಕೃತಿಯು ಶಿಲಾಯುಗದ ಸಂಸ್ಕೃತಿಯೆಂದು ಕರೆಯಲ್ಪಟ್ಟದ್ದು ಶಿಲಾಯುಗದ ಸಂಸ್ಕೃತಿಗೆ ಸೇರಿದ ಜನರು ಕಲ್ಲಿನ ಆಯುಧಗಳಿಂದ ಪ್ರಾಣಿಗಳನ್ನು ಆಹಾರಕ್ಕಾಗಿ ಕೊಂದು ಅವುಗಳನ್ನು ತಿಂದು ಜೀವಿಸುತ್ತಿದ್ದರು. ಜೀವನೋಪಾಯಕ್ಕಾಗಿ ಅಲೆದಾಡುವುದು ಇವರ ಸ್ವಭಾವವಾಗಿತ್ತು. ಇತಿಹಾಸದಲ್ಲಿ ಈ ಕಾಲವನ್ನು ಶಿಲಾಯುಗದ ಕಾಲವೆಂದು ಕರೆಯಲಾಗಿದೆ. ಶಿಲಾಯುಗದ ನಂತರ ಉತ್ತರ ಭಾರತದಲ್ಲಿ ತಾಮ್ರಯುಗವೂ ಅನಂತರ ಕಬ್ಬಿಣದ ಯುಗವೂ ಆರಂಭವಾದುದಾಗಿ ಕಂಡುಬರುತ್ತದೆ. ತಾಮ್ರಯುಗದ ಲಕ್ಷಣಗಳನ್ನು ಹೊಂದಿರುವ ಹಲವಾರು ಭೂಸಂಶೋಧನಾ ಆಧಾರಗಳು ಸುಮಾರು ಅರವತ್ತು ವರ್ಷಗಳಿಗೂ ಹಿಂದೆ ಸಿಂಧೂಕಣಿವೆಯ ಬಯಲಿನಲ್ಲಿ ಭೂ ಸಂಶೋಧನ ಶಾಸ್ತ್ರಜ್ಞರಿಗೆ ದೊರೆತಿದ್ದು ಅದುವರೆಗೂ ಅಗೋಚರವಾಗಿದ್ದ ಉನ್ನತ ಮಟ್ಟದ ನಾಗರಿಕತೆಯೊಂದು ಬೆಳಕಿಗೆ ಬಂದಿತು. ಈ ನಾಗರಿಕತೆಯು ಸಿಂಧೂಕಣಿವೆಯ ನಾಗರಿಕತೆಯೆಂದು ಪ್ರಸಿದ್ಧಿಯಾಗಿದೆ. ಸಿಂಧೂಕಣಿವೆಯ ನಾಗರಿಕತೆಯ ಸಂಶೋಧನೆಯು ಪ್ರಾಚೀನ ಭಾರತದ ಇತಿಹಾಸದಲ್ಲಿ ಒಂದು ಮಹತ್ವಪೂರ್ಣ ಸಂಗತಿಯಾಗಿದೆ. ಭಾರತದ ಇತಿಹಾಸ ಮತ್ತು ಸಂಸ್ಕೃತಿಯು ಈ ದೇಶಕ್ಕೆ ಆರ್ಯರು ಬಂದಂದಿನಿಂದ ಆರಂಭವಾಯಿತೆಂದು ಅದುವರೆಗೂ ಪ್ರಚಲಿತವಾಗಿದ್ದ ಅಭಿಪ್ರಾಯವು ಈ ಸಂಶೋಧನೆಯಿಂದ ತಳ್ಳಿಹಾಕಲ್ಪಟ್ಟಿತು. ಅಲ್ಲದೆ ಆರ್ಯರ ಆಗಮನಕ್ಕಿಂತಲೂ ಸುಮಾರು 3000 ವರ್ಷಗಳಿಗೂ ಹಿಂದೆಯೆ ಭಾರತವು ಕೂಡ ಪ್ರಾಚೀನ ಈಜಿಪ್ಟ್, ಮೆಸೊಪೊಟಾಮಿಯಗಳಂತೆ ಪ್ರಾಚೀನ ನಾಗರಿಕೆಯ ಕೇಂದ್ರವಾಗಿತ್ತೆಂಬುದಾಗಿ ತಿಳಿದುಬಂದಿತು.

ಸಿಂಧೂಕಣಿವೆಯ ಬಯಲಿನಲ್ಲಿ ನಡೆಸಿದ ಸಂಶೋಧನೆಗಳಿಂದ ಬೆಳಕಿಗೆ ಬಂದ ನಿವೇಶನಗಳಲ್ಲಿ ಸಿಂಧ್‌ನ ಲರ್ಕಾನ ಜಿಲ್ಲೆಗೆ ಸೇರಿರುವ ಮೊಹೆಂಜೊದಾರೋ ಮತ್ತು ಪಂಜಾಬಿನ ಮಾಂಟಗೋಮೆರಿ ಜಿಲ್ಲೆಯಲ್ಲಿರುವ ಹರಪ್ಪ ಪಟ್ಟಣಗಳು ಮುಖ್ಯವಾದವುಗಳು ಈಗ ಇವರಡೂ ಪಾಕೀಸ್ಥಾನದಲ್ಲಿವೆ.

## ನಗರ ನಿರ್ಮಾಣ ಯೋಜನೆ

ಸಿಂಧೂ ಕಣಿವೆಯ ಜನರ ನಾಗರಿಕತೆಯಲ್ಲಿ ಕಂಡುಬರುವ ಪ್ರಮುಖ ಲಕ್ಷಣಗಳಲ್ಲಿ ನಗರ ನಿರ್ಮಾಣ ಕಲಯು ಅತ್ಯಂತ ಗಮನಾರ್ಹ ಸಂಗತಿಯಾಗಿದೆ. ಮೊಹೆಂಜೊದಾರೊ, ಹರಪ್ಪ, ಲೊಹೆಂಜುದಾರೋ, ಅಮ್ರಿ, ರೂ ಪಾರ್ ಚಾನ್ಹುದಾರೊ ಮೊದಲಾದ ಸ್ಥಳಗಳಲ್ಲಿ ನಡೆಸಿರುವ ಸಂಶೋಧನೆಗಳಿಂದ ಇಲ್ಲಿನ ಜನರ ನಗರನಿರ್ಮಾಣಕಲೆಯ ಅನೇಕ ಅಂಶಗಳು ಬೆಳಕಿಗೆ ಬಂದಿವೆ. ಇವುಗಳಲ್ಲಿ ಹೆಚ್ಚು ಪ್ರಸಿದ್ಧಿಯಾಗಿದ್ದ ಮೊಹೆಂಜೊದಾರೊ ಪಟ್ಟಣವು ಸಿಂಧೂನದಿಯ ದಂಡೆಯ ಮೇಲೂ ಹರಪ್ಪ ಪಟ್ಟಣವು ರಾವಿನದಿಯ ದಂಡೆಯ ಮೇಲೂ ನಿರ್ಮಿಸಲ್ಪಟ್ಟಿದ್ದವು. ಈ ಎರಡು ಪಟ್ಟಣಗಳು ಒಂದು ಮೈಲಿಗಿಂತಲೂ ಹೆಚ್ಚು ವಿಸ್ತಾರವಾಗಿದ್ದು ಆಧುನಿಕ ಕಾಲದ ನಗರ ನಿರ್ಮಾಣ ಯೋಜನೆಗಳಿಗನುಗುಣವಾಗಿ ನಿರ್ಮಿತವಾಗಿದ್ದು ದಾಗಿ ಕಂಡುಬಂದಿದೆ. ಮೊಹೆಂಜೊದಾರೊ ಪಟ್ಟಣವು ಏಳು ಬಾರಿ ನಿರ್ಮಿತವಾಗಿದ್ದು ಹಾಳಾಗಿ ಹೋಗಿರುವುದಾಗಿ ತಿಳಿದುಬರುತ್ತದೆ. ನಗರ ರಕ್ಷಣೆಗಾಗಿ ಎರಡು ನಗರಗಳ ಸುತ್ತಲೂ ಸುಟ್ಟ ಇಟ್ಟಿಗೆಗಳಿಂದ ದೊಡ್ಡ ಗೋಡೆಗಳನ್ನು ನಿರ್ಮಿಸಲಾಗಿತ್ತು. ನಗರಗಳ ಒಳಗೆ ಪ್ರವೇಶ ಮಾಡುವುದಕ್ಕೆ ಪ್ರವೇಶದ್ವಾರವಿದ್ದು ದಾಗಿಯೂ ಮತ್ತು ಕಾವಲುಗಾರರಿಗೆ ಕಾವಲು ಕಾಯುವುದಕ್ಕೆ ಗೋಡೆಗಳ ಮೇಲೆ ಗೋಪುರಗಳಿದ್ದು ದಾಗಿಯೂ ಕಂಡುಬಂದಿದೆ. ಮೊಹೆಂಜೊದಾರೊ ಪಟ್ಟಣವು ಹರಪ್ಪ ಪಟ್ಟಣಕ್ಕಿಂತ ಉತ್ತಮ ಸ್ಥಿತಿಯಲ್ಲಿದ್ದುದಾಗಿ ಸಂಶೋಧನೆಯಿಂದ ತಿಳಿದು ಬಂದಿದೆ. ಈ ನಗರದಲ್ಲಿನ ರಸ್ತೆಗಳು ಸಾಕಷ್ಟು ಉದ್ದವೂ ಮತ್ತು ಅಗಲವೂ ಆಗಿದ್ದು ಅವುಗಳು ಪೂರ್ವ ಪಶ್ಚಿಮ ಉತ್ತರ ಮತ್ತು ದಕ್ಷಿಣಾಭಿಮುಖವಾಗಿ ಮುಂದುವರಿದಿದ್ದುದಾಗಿಯೂ ಮತ್ತು ಅವುಗಳು ಒಂದನ್ನೊಂದು ನಿರ್ಧಿಷ್ಟ ಸ್ಥಳದಲ್ಲಿ ಸಂಧಿಸುತ್ತಿದ್ದುದಾಗಿ ಕಂಡುಬಂದಿದೆ. ಇಲ್ಲಿನ ಕೆಲವು ರಸ್ತೆಗಳು ಒಂಬತ್ತರಿಂದ ಮುವತ್ತನಾಲ್ಕು ಅಡಿಗಳಷ್ಟು ಅಗಲವೂ ಮತ್ತು ಒಂದು ಮೈಲಿಗಿಂತ ಹೆಚ್ಚು ಉದ್ದವೂ ಇದ್ದುದಾಗಿ ಕಂಡುಬಂದಿದೆ. ಇಲ್ಲಿನ ಬೀದಿಗಳ ಮತ್ತು ಮನೆಗಳ ನಿರ್ಮಾಣದ ವ್ಯವಸ್ಥಿತ ಯೋಜನೆಯನ್ನೂ, ನೀರಿನ ಸರಬರಾಜು ಮತ್ತು ಒಳಚರಂಡಿಯ ವ್ಯವಸ್ಥೆಯನ್ನೂ ಗಮನಿಸಿದಾಗ ನಗರ ನಿರ್ಮಾಣ ಯೋಜನೆಯ ಆಡಳಿತ ವಿಭಾಗವು ಈ ನಗರಗಳಲ್ಲಿದ್ದುದಾಗಿ ಕಂಡುಬರುತ್ತದೆ.

## ಕಟ್ಟಡಗಳು

ಮೊಹೆಂಜೊದಾರೊ ಪಟ್ಟಣದ ನಿವೇಶನದಲ್ಲಿ ಮೂರು ಬಗೆಯ ಕಟ್ಟಡಗಳನ್ನು ಭೂಸಂಶೋಧನಕಾರರು ಗುರುತಿಸಿದ್ದಾರೆ. ಇವುಗಳಲ್ಲಿ ಮೊದಲನೆಯ ವರ್ಗಕ್ಕೆ ಸೇರಿದ ಕಟ್ಟಡಗಳು ವಾಸದ ಮನೆಗಳು. ಎರಡನೆಯ ವರ್ಗದ ಕಟ್ಟಡಗಳು ಸಾರ್ವಜನಿಕ ಕಟ್ಟಡಗಳು. ಮೂರನೆಯದು ನಗರದ ಮಧ್ಯಭಾಗದಲ್ಲಿದ್ದ ಮಹಾಸ್ನಾನ ಘಟ್ಟ. ಮನೆಗಳನ್ನು ರಸ್ತೆಯ ಎರಡು ಪಕ್ಕಗಳಲ್ಲೂ ಸಾಲಾಗಿ ನಿರ್ಮಿಸಲಾಗಿದೆ. ಸುಟ್ಟ ಇಟ್ಟಿಗೆಗಳನ್ನು ಮತ್ತು ಗಾರೆಯನ್ನು ಕಟ್ಟಡಗಳ ನಿರ್ಮಾಣದಲ್ಲಿ ಬಳಸಲಾಗಿದೆ. ಮನೆಗಳು ಸಾಕಷ್ಟು ವಿಶಾಲವಾಗಿದ್ದು ಅವುಗಳಲ್ಲಿ ಅನೇಕ ಕೊಠಡಿಗಳಿದ್ದವು. ಪ್ರತಿಯೊಂದು ಮನೆಯಲ್ಲಿಯೂ ಅಡಿಗೆಗೆ, ಪೂಜೆಗೆ, ಮಲಗುವುದಕ್ಕೆ ಮತ್ತು ದವಸಧಾನ್ಯಗಳನ್ನಿಡುವುದಕ್ಕೆ ಸ್ನಾನಕ್ಕೆ ಪ್ರತ್ಯೇಕ ಕೊಠಡಿಗಳಿದ್ದುದಾಗಿ ಕಂಡುಬಂದಿದೆ.

ಪ್ರತಿಯೊಂದು ಮನೆಯಲ್ಲಿಯೂ ಬಾವಿಗಳಿದ್ದವು ಇಲ್ಲಿನ ಮನೆಗಳಲ್ಲಿ ಕಂಡುಬರುವ ಮತ್ತೊಂದು ವೈಶಿಷ್ಟ್ಯವೆಂದರೆ ಮನೆಗಳ ಗೋಡೆಗಳ ಹೊರಭಾಗದಲ್ಲಿ ಯಾವುದೇ ರೀತಿಯ ಅಲಂಕಾರವಿಲ್ಲದಿರುವುದು. ಒಂದುವೇಳೆ ಅಲಂಕಾರ ಮಾಡಲಾಗಿದ್ದರೂ ಅವುಗಳನ್ನು ನಾಶವಾಗುವ ಮರಮುಟ್ಟುಗಳಿಂದ ಮಾಡಲಾಗಿದ್ದು ಅವುಗಳು ಕಾಲಾನುಕ್ರಮದಲ್ಲಿ ನಾಶವಾಗಿ ಹೋಗಿರಬಹುದೆಂದು ಅಭಿಪ್ರಾಯಪಡಲಾಗಿದೆ. ಈಮನೆಗಳ ಬಾಗಿಲುಗಳು ಮುಖ್ಯ ಬೀದಿಯ ಕಡೆಗೆ ಇರದೆ ಪಕ್ಕದ ಕಿರುಬೀದಿಯ ಕಡೆಗೆ ಇದ್ದುದಾಗಿ ಕಂಡುಬಂದಿದೆ. ಕೆಲವು ಮನೆಗಳಲ್ಲಿ ಕಿಟಕಿಗಳಿದ್ದುದು ಕಂಡುಬಂದಿರುವುದಾದರೂ ಅವುಗಳು ಬಹಳ ಚಿಕ್ಕವಾಗಿದ್ದು ಅವುಗಳನ್ನು ಬಹಳ ಎತ್ತರದಲ್ಲಿ ಇಡಲಾಗಿತ್ತು. ಕೆಲವು ಕಟ್ಟಡಗಳಿಗೆ ಮಹಡಿಗಳಿದ್ದವು. ಮನೆಗಳ ಮೇಲ್ಛಾವಣಿಗಳು ಚಪ್ಪಟೆಯಾಗಿದ್ದು ಅವುಗಳನ್ನು ಮರದ ಹಲಗೆಗಳಿಂದ ಮುಚ್ಚಿ ಅದರ ಮೇಲೆ ಗಾರೆಹಾಕಲಾಗಿತ್ತು. ಮೊಹೆಂಜೊದಾರೊ ಮತ್ತು ಹರಪ್ಪನಗರಗಳಲ್ಲಿನ ಜನರು ನಗರ ನೈರ್ಮಲ್ಯಕ್ಕೆ ಹೆಚ್ಚು ಗಮನಕೊಟ್ಟಿದ್ದರು ಇಲ್ಲಿನ ವ್ಯಾಪಕವಾದ ಒಳಚರಂಡಿಯ ವ್ಯವಸ್ಥೆಯು ಈ ನಾಗರಿಕತೆಯ ಮತ್ತೊಂದು ಶ್ಲಾಘನೀಯ ಅಂಶವಾಗಿದೆ. ರಸ್ತೆಯ ಇಕ್ಕಲಗಳಲ್ಲೂ ಭೂಮಿಯ ಒಳಗೆ ಒಳಚರಂಡಿಗಳನ್ನು ನಿರ್ಮಿಸಿದ್ದು ಮನೆಗಳ ಕೊಳಚೆ ನೀರನ್ನು ಇವುಗಳ ಮೂಲಕ ನಗರದಿಂದ ಹೊರಕ್ಕೆ ಸಾಗಿಸುವ ವ್ಯವಸ್ಥೆಯನ್ನು ಮಾಡಲಾಗಿತ್ತು. ಇದಲ್ಲದೆ ರಸ್ತೆಗಳ ಇಕ್ಕೆಲಗಳಲ್ಲೂ ಕಸಕಡ್ಡಿಗಳನ್ನು ಹಾಕಲು ಅಲ್ಲಲ್ಲಿ ಕಸದ ತೊಟ್ಟಿಗಳನ್ನು ನಿರ್ಮಿಸಿದ್ದರು. ನಗರದಲ್ಲಿ ರಾತ್ರಿ ವೇಳೆಯಲ್ಲಿ ಬೆಳಕಿಗಾಗಿ ದೀಪದ ವ್ಯವಸ್ಥೆಯೂ ಇದ್ದುದಾಗಿ ಕಂಡುಬಂದಿದೆ.

ಮೊಹೆಂಜೊದಾರೊ ಪಟ್ಟಣದಲ್ಲಿ ವಾಸದ ಗೃಹಗಳೇ ಅಲ್ಲದೆ ಕೆಲವು ದೊಡ್ಡ ಕಟ್ಟಡಗಳೂ ಬೆಳಕಿಗೆ ಬಂದಿವೆ. ಇವುಗಳು ಮಾರುಕಟ್ಟೆ ಇಲ್ಲವೆ ಇಲ್ಲಿನ ಆಡಳಿತಾಧಿಕಾರಿಗಳ ಕಾರ್ಯನಿರ್ವಹಣೆಯ ಕಟ್ಟಡಗಳಾಗಿರಬಹುದೆಂದು ಅಭಿಪ್ರಾಯ ಪಡಲಾಗಿದೆ. ಇಂತಹದೇ ದೊಡ್ಡ ಸಾರ್ವಜನಿಕ ಕಟ್ಟಡವೊಂದು ಹರಪ್ಪ ನಗರದಲ್ಲೂ ಕಂಡುಬಂದಿದೆ. ಇದರಲ್ಲಿ ಸಾರ್ವಜನಿಕರು ತಮ್ಮ ದವಸ ಧಾನ್ಯಗಳನ್ನು ಶೇಖರಿಸಿಡುತ್ತಿದ್ದುದಾಗಿ ತಿಳಿದು ಬಂದಿದೆ. ಉಗ್ರಾಣದ ಕಟ್ಟಡವೇ ಅಲ್ಲದೆ 20x12 ಅಡಿಗಳ ವಿನ್ಯಾಸವುಳ್ಳ ಎರಡು ಕೊಠಡಿಗಳನ್ನುಳ್ಳ ಒಂದೇ ತೆರನಾದ ಹದಿನಾರು ವಸತಿಗಳನ್ನು ಎದುರು ಬದುರು ಸಾಲಾಗಿ ನಿರ್ಮಿಸಿರುವುದನ್ನು ಹರಪ್ಪ ನಗರದಲ್ಲಿ ಸಂಶೋಧಕರು ಪತ್ತೆ ಹಚ್ಚಿದ್ದಾರೆ. ಈ ಕಟ್ಟಡಗಳು ಕಾವಲುಗಾರರ ವಾಸಸ್ಥಾನಗಳೋ ಇಲ್ಲವೆ ಧಾನ್ಯವನ್ನು ಹಿಟ್ಟುಮಾಡುವ ಕೂಲಿಕಾರರ ವಸತಿಗಳಾಗಿದ್ದಿರಬೇಕೆಂದು ವಿದ್ವಾಂಸರು ಅಭಿಪ್ರಾಯಪಟ್ಟಿರುವರು.

ಮೂರನೆ ವರ್ಗಕ್ಕೆ ಸೇರಿದ 'ಮಹಾಸ್ನಾನಘಟ್ಟ'ವು ಈ ನಾಗರಿಕತೆಗೆ ಸಂಬಂಧಪಟ್ಟ ಪ್ರಮುಖ ಅಂಶಗಳಲ್ಲಿ ಮತ್ತೊಂದು ಗಮನಾರ್ಹ ಸಂಗತಿಯಾಗಿದೆ. ಇದು ಸಾರ್ವಜನಿಕರ ಉಪಯೋಗಕ್ಕಾಗಿ ನಿರ್ಮಿಸಲ್ಪಟ್ಟಿತ್ತು. ಈ ಸ್ನಾನಘಟ್ಟವು 180 ಅಡಿ ಉದ್ದವೂ 108 ಅಡಿ ಅಗಲವೂ ಇದ್ದ ಗೋಡೆಯ ಒಳಗಿದ್ದು, ಮಧ್ಯಭಾಗದಲ್ಲಿ 39 ಅಡಿ ಉದ್ದ 23 ಅಡಿ ಅಗಲ ಮತ್ತು 8 ಅಡಿ ಆಳವಿರುವ ಈಜುವ ಕೊಳವನ್ನು ಹೊಂದಿದೆ. ಕೊಳಕ್ಕೆ ದೊಡ್ಡ ಕೊಳಾಯಿಗಳನ್ನು ಅಳವಡಿಸಲಾಗಿದ್ದು ಅವುಗಳ ಮೂಲಕ ಕಲ್ಮಶವಾದ ನೀರನ್ನು ಹೊರದೂಡಿಶುಚಿಯಾದ ನೀರನ್ನು ಒಳಕ್ಕೆ ಬಿಡುವುದಕ್ಕೆ ಪ್ರತ್ಯೇಕ

ವ್ಯವಸ್ಥೆಯಿದ್ದುದಾಗಿ ಕಂಡುಬಂದಿದೆ. ಈಜುವ ಕೊಳಕ್ಕೆ ಇಳಿದು ಹೋಗಲು ಸುತ್ತಲೂ ಮೆಟ್ಟಲುಗಳನ್ನೂ ನಿರ್ಮಿಸಲಾಗಿದೆ. ಇವುಗಳಲ್ಲದೆ ಪ್ರೇಕ್ಷಕರ ಗ್ಯಾಲರಿಗಳನ್ನೂ ಮತ್ತು ಸ್ನಾನಮಾಡುವವರ ಅನುಕೂಲಕ್ಕಾಗಿ ಸುತ್ತಲೂ ಅನೇಕ ಕೊಟಡಿಗಳನ್ನು ನಿರ್ಮಿಸಲಾಗಿದೆ. ಇಂತಹ ಸಾರ್ವಜನಿಕ ಸ್ನಾನ ವ್ಯವಸ್ಥೆಯು ಪುರಾತನ ಕಾಲದಲ್ಲಿ ಭಾರತೀಯರು ದೇಹ ನೈರ್ಮಲ್ಯಕ್ಕೆ ಕೊಟ್ಟಿದ್ದ ಪ್ರಾಮುಖ್ಯತೆಯನ್ನು ತಿಳಿಸುತ್ತದೆ. ಈ ಎಲ್ಲ ಅನುಕೂಲಗಳನ್ನು ಗಮನಿಸಿದಾಗ ಇಲ್ಲ ಒಂದು ವ್ಯವಸ್ಥಿತ ಕೇಂದ್ರೀಕೃತ ಆಡಳಿತ ವ್ಯವಸ್ಥೆಯಿದ್ದಿತೆಂಬುದಾಗಿ ಕಂಡುಬರುತ್ತದೆ.

**ಸಾಮಾಜಿಕಜೀವನ**

ಸಿಂಧೂಕಣಿವೆಯ ಜನರು ಸಾಮಾಜಿಕವಾಗಿ ಬಹಳ ಮುಂದುವರಿದಿದ್ದರು. ಇವರದು ನಗರಗಳ ನಾಗರಿಕತೆಯಾಗಿದ್ದರೂ ವ್ಯವಸಾಯ ಮತ್ತು ಪಶುಪಾಲನೆಯು ಇವರ ಮುಖ್ಯ ಕಸುಬಾಗಿತ್ತು. ಗೋಧಿ, ಬಾರ್ಲಿ, ಹತ್ತಿ, ಎಣ್ಣೆ ಬೀಜಗಳು, ಭತ್ತ ಇವರ ಮುಖ್ಯ ಬೆಳೆಗಳಾಗಿದ್ದವು. ಹಾಲು, ಗಿಣ್ಣು, ಬೆಣ್ಣೆ, ಮೀನು, ಮಾಂಸ, ಕೋಳಿ, ಆಮೆ ವಿವಿಧ ತರಕಾರಿಗಳು ಮತ್ತು ಹಣ್ಣುಗಳು ಇವರ ಇತರ ಆಹಾರ ಪದಾರ್ಥಗಳಾಗಿದ್ದವು. ಗೂಳಿ, ಹಸು, ಎಮ್ಮೆ, ಕುರಿ, ಹಂದಿ, ಬೆಕ್ಕು, ನಾಯಿ, ಕತ್ತೆ, ಕುದುರೆ ಮೊದಲಾದ ಪ್ರಾಣಿಗಳನ್ನು ಸಾಕುತ್ತಿದ್ದರು. ಕಾಡುಕೋಣ, ಆನೆ ಮತ್ತು ಘೇಂಡಾಮೃಗ, ಹುಲಿ ಮುಂತಾದ ಕಾಡು ಪ್ರಾಣಿಗಳ ಪರಿಚಯವಿದ್ದಿತು. ಜನರ ಉಡುಪು ಸರಳವಾಗಿದ್ದು ಹತ್ತಿ ಮತ್ತು ಉಣ್ಣೆಯಿಂದ ಮಾಡಿದ ಬಟ್ಟೆಯನ್ನು ತೊಡುತ್ತಿದ್ದರು. ಗಂಡಸರು ಸಾಮಾನ್ಯವಾಗಿ ಶಾಲಿನಂತಹ ಹೊದಿಕೆಯನ್ನು ಎಡಭುಜದ ಮೇಲಿಂದ ಬಲಗೈ ಕಂಕುಳಡಿಯಲ್ಲಿ ಹಾದುಬರುವಂತೆ ತೊಡುತ್ತಿದ್ದರು. ಕೆಳಭಾಗದ ಉಡುಪು ಆಧುನಿಕ ಕಾಲದ ಪಂಚೆಯನ್ನು ಹೋಲುತ್ತಿತ್ತು. ಗಂಡಸರು ಉದ್ದವಾಗಿ ಗಡ್ಡವನ್ನು ಮತ್ತು ಕೆನ್ನೆಯ ಮೇಲೆ ಕೂದಲನ್ನು ಬಿಟ್ಟು ಮೀಸೆಯನ್ನು ಬೋಳಿಸಿದ್ದು ದಾಗಿ ಕಂಡುಬಂದಿದೆ. ಗಂಡಸರು ಮತ್ತು ಹೆಂಗಸರು ಉದ್ದವಾಗಿ ತಲೆಗೂದಲನ್ನು ಬಿಡುವ ಅಭ್ಯಾಸವನ್ನಿಟ್ಟುಕೊಂಡಿದ್ದು ಅದನ್ನು ಅಂದವಾಗಿ ಬಾಚಿ ಗಂಟು ಹಾಕಿಕೊಳ್ಳುತ್ತಿದ್ದರು. ಇಲ್ಲಿನ ಜನರು ಆಭರಣ ಪ್ರಿಯರಾಗಿದ್ದು ಅನೇಕ ರೀತಿಯ ಆಭರಣಗಳಿಂದ ಅಲಂಕಾರ ಮಾಡಿಕೊಳ್ಳುತ್ತಿದ್ದರು. ಬೆಳ್ಳಿ ಬಂಗಾರ, ತಾಮ್ರ, ಹಿತ್ತಾಳೆ, ಮುಂತಾದ ಲೋಹಗಳಿಂದ ಮಾಡಲ್ಪಟ್ಟ ಆಭರಣಗಳೇ ಅಲ್ಲದೆ ಮುತ್ತು, ಹವಳ, ಪಚ್ಚೆ, ಚಿಪ್ಪು, ಮತ್ತು ಜೇಡಿ ಮಣ್ಣಿನಿಂದ ಮಾಡಲ್ಪಟ್ಟ ಆಭರಣಗಳೂ ಭೂಸಂಶೋಧನೆಯಲ್ಲಿ ದೊರೆಕಿವೆ. ಆಭರಣಗಳನ್ನು ಸ್ತ್ರೀ ಪುರುಷರಿಬ್ಬರೂ ಧರಿಸುತ್ತಿದ್ದರು. ಬಳೆಗಳು, ಉಂಗುರಗಳು, ಕೊರಳ ಹಾರಗಳು, ಕಡಗಗಳು, ಮಣಿಸರಗಳು, ಮೂಗುತಿ ಮತ್ತು ತೋಳ ಬಂದಿಗಳು ಸಿಕ್ಕಿರುವ ಆಭರಣಗಳಲ್ಲಿ ಮುಖ್ಯವಾದವು. ಸೌಂದರ್ಯೋಪಕರಣ ವಸ್ತುಗಳಾದ ಕನ್ನಡಿ, ಬಾಚಣಿಗೆ, ಕಣ್ಣಿಗೆ ಹಚ್ಚುವ ಕಪ್ಪು, ಮುಖಕ್ಕೆ ಹಾಗೂ ಉಗುರುಗಳಿಗೆ ಹಚ್ಚುವ ರಂಗು ಮುಂತಾದವುಗಳು ಬಳಕೆಯಲ್ಲಿದ್ದುದಾಗಿ ಕಂಡುಬಂದಿದೆ. ಸಂಗೀತ, ನೃತ್ಯ, ಪಗಡೆಯಾಟ ಮೊದಲಾದವುಗಳು ದೊಡ್ಡವರ ಮನರಂಜನೆಗಳಾಗಿದ್ದವು. ಮಣ್ಣಿನಿಂದ ಮಾಡಿದ ಚಕ್ರಗಳುಳ್ಳ ಗಾಡಿಗಳು. ಮಣ್ಣಿನಿಂದ ಹಾಗೂ ಕಂಚು ಮೊದಲಾದ ಲೋಹಗಳಿಂದ ಮಾಡಿದ ಟಗರು, ಪ್ರಾಣಿ ಪಕ್ಷಿಗಳ ಆಕೃತಿಗಳು ಗಂಡಸರ ಮತ್ತು ಹೆಂಗಸರ

ಬೊಂಬೆಗಳು, ಸೀಟಿಗಳು ಮತ್ತು ಗಿಲಿಕೆಗಳು ಮೊದಲಾದ ಆಟದ ಸಾಮಾನುಗಳು ಮಕ್ಕಳ ಮನರಂಜನೆಯ ವಸ್ತುಗಳಾಗಿದ್ದವು. ಇಲ್ಲಿನ ಜನರು ಶಾಂತಿಪ್ರಿಯರಾಗಿದ್ದರು. ಆದಾಗ್ಯೂ ರಕ್ಷಣೆಗಾಗಿ ಬಿಲ್ಲು, ಬಾಣ, ಕತ್ತಿ, ಕೊಡಲಿ ಭರ್ಜಿಗಳನ್ನು ಉಪಯೋಗಿಸುತ್ತಿದ್ದರು.

**ಆರ್ಥಿಕ ಜೀವನ**

ಸಿಂಧೂಕಣಿವೆಯ ಜನರಿಗೆ ಅನೇಕ ಕೈಗಾರಿಕೆಗಳ ಪರಿಚಯವಿದ್ದಿತು. ಇಟ್ಟಿಗೆಗಳನ್ನು ತಯಾರಿಸುವುದು ಮತ್ತು ಮರದ ಕೈಗಾರಿಕೆಗಳು ಸರ್ಕಾರದ ಕೈಗಾರಿಗಳಾಗಿದ್ದವು ಇವುಗಳಲ್ಲದೆ ಅನೇಕ ರೀತಿಯ ಗೃಹ ಕೈಗಾರಿಕೆಗಳ ಪರಿಚಯವಿದ್ದು ಅನೇಕ ವಿಧವಾದ ಗೃಹೋಪಕರಣಗಳನ್ನೂ, ಪೀಠೋಪಕರಣಗಳನ್ನೂ, ಆಯುಧಗಳನ್ನೂ ತಯಾರಿಸುತ್ತಿದ್ದರು. ಮಡಕೆಗಳನ್ನು ಮಾಡುವುದು, ಹತ್ತಿ ಮತ್ತು ಉಣ್ಣೆಯಿಂದ ಬಟ್ಟೆಗಳನ್ನು ನೇಯುವುದು, ಬಣ್ಣ ಹಾಗುವುದು, ಆಭರಣಗಳನ್ನು ತಯಾರಿಸುವುದು, ದಂತದ ಕೆಲಸ ಮಾಡುವುದು ಮೊದಲಾದುವುಗಳು ಇವರ ಕಸುಬುಗಳಾಗಿದ್ದವು. ಸಂಶೋಧನೆಯಲ್ಲಿ ವರ್ಣರಂಜಿತ ಮಡಕೆಗಳೂ ದೊರೆತಿವೆ. ಆಹಾರದ ಉತ್ಪಾದನೆ ಮತ್ತು ವಿತರಣೆಯು ಇವರ ಆರ್ಥಿಕ ವ್ಯವಸ್ಥೆಯ ವಿಧಾನವಾಗಿದ್ದು ಸರ್ಕಾರವು ಅದರ ಮೇಲೆ ಹತೋಟಿ ಹೊಂದಿದ್ದಿತ್ತೆಂಬುದು ಅಭಿಪ್ರಾಯ ಪಡಲಾಗಿದೆ. ಆಹಾರ ಪದಾರ್ಥಗಳ ಶೇಖರಣೆಗಾಗಿ ಸರ್ಕಾರವು ಉಗ್ರಾಣದ ಕಟ್ಟಡಗಳನ್ನು ನಿರ್ಮಿಸಿದ್ದುದಾಗಿ ಹರಪ್ಪ ನಗರದಲ್ಲಿ ದೊರೆತಿರುವ ದೊಡ್ಡ ಉಗ್ರಾಣದ ಕಟ್ಟಡವು ಸ್ಪಷ್ಟೀಕರಿಸುತ್ತದೆ.

ಸಿಂಧೂ ಕಣಿವೆಯ ಜನರು ವ್ಯಾಪಾರದಲ್ಲೂ ಮುಂದುವರಿದಿದ್ದರು. ಮೆಸಪೊಟಾಮಿಯ ಮತ್ತು ಈಜಿಪ್ಟ್ ದೇಶಗಳೊಂದಿಗೆ ಅವರು ಹೆಚ್ಚಿನ ವ್ಯಾಪಾರ ಸಂಪರ್ಕ ಹೊಂದಿದ್ದುದಾಗಿ ಕಂಡುಬರುತ್ತದೆ. ಇವರ ಮುದ್ರೆಗಳು ಮೆಸೊಪೊಟಾಮಿಯದ 'ಉರ್' ಮೊದಲಾದ ಕಡೆಗಳಲ್ಲಿ ದೊರೆತಿವೆ. ಕೆಲವು ಮುದ್ರೆಗಳ ಮೇಲೆ ಕಂಡುಬರುವ ಹಡಗುಗಳ ಚಿತ್ರಗಳಿಂದ ಈ ಜನರು ಹೊರದೇಶಗಳೊಂದಿಗೆ ವ್ಯಾಪಾರ ಸಂಪರ್ಕವಿಟ್ಟು ಕೊಂಡಿದ್ದುದು ಧೃಡಪಟ್ಟಿದೆ. ಇತ್ತೀಚೆಗೆ ಗುಜರಾತಿನ ಲೋಥಾಲ್ ಪಟ್ಟಣದ ಸಂಶೋಧನೆಯಲ್ಲಿ ದೊಡ್ಡ ಹಡಗು ಕಟ್ಟೆಯೊಂದು ಬೆಳಕಿಗೆ ಬಂದಿದ್ದು ಇಲ್ಲಿ ಹಡಗುಗಳಿಗೆ ಪದಾರ್ಥಗಳನ್ನು ತುಂಬುವುದಕ್ಕೂ ಮತ್ತು ಇಳಿಸಿಕೊಳ್ಳುವುದಕ್ಕೂ ವ್ಯವಸ್ಥೆ ಮಾಡಿದ್ದುದಾಗಿ ತಿಳಿದುಬಂದಿದೆ. ಸಿಂಧೂ ಕಣಿವೆಯ ಜನರು ಆಂತರಿಕವಾಗಿಯೂ ವ್ಯಾಪಾರ ಮಾಡುತ್ತಿದ್ದರು. ದಖಿನ್ ಮತ್ತು ಒರಿಸ್ಸ ಭಾಗಗಳಿಂದ ತೆಗೆದುಕೊಂಡು ಹೋದ ನಾನಾ ರೀತಿಯ ಪದಾರ್ಥಗಳು ಮತ್ತು ಲೋಹಗಳು ಸಿಂಧೂಕಣಿವೆಯ ಪ್ರದೇಶದಲ್ಲಿ ದೊರಕಿವೆ. ವ್ಯಾಪಾರದಲ್ಲಿ ಪದಾರ್ಥ ವಿನಿಮಯ ಪದ್ಧತಿಯ ಜೊತೆಗೆ ವಸ್ತುಗಳಿಗೆ ಬೆಲೆಯನ್ನು ನಿಗಧಿಪಡಿಸಲಾಗಿತ್ತು. ಅಳತೆ ಮತ್ತು ತೂಕಗಳ ಪ್ರಮಾಣದ ಅನೇಕ ವಸ್ತುಗಳು ದೊರಕಿವೆ. ವ್ಯಾಪಾರ ಸಾಗಾಣಿಕೆಗೆ ಎತ್ತಿನ ಗಾಡಿಗಳನ್ನು ಉಪಯೋಗಿಸುತ್ತಿದ್ದರು. ಇತ್ತೀಚಿನ ಸಂಶೋಧನೆಗಳಿಂದ ಕುದುರೆ ಮತ್ತು ಕುದುರೆ ಗಾಡಿಗಳನ್ನು ಉಪಯೋಗಿಸುತ್ತಿದ್ದುದಾಗಿ ತಿಳಿದು ಬಂದಿದೆ.

## ಧಾರ್ಮಿಕ ಜೀವನ

ಸಿಂಧೂಕಣಿವೆಯ ಜನರ ಧಾರ್ಮಿಕ ಜೀವನವನ್ನು ತಿಳಿಯಲು ದೇವಾಲಯಗಳ ರೂಪದ ಯಾವುದೇ ರೀತಿಯ ಕಟ್ಟಡಗಳು ಕಂಡುಬಂದಿಲ್ಲವಾದರೂ ಅವರ ಧಾರ್ಮಿಕ ಜೀವನವನ್ನು ತಿಳಿಯಲು ಅನೇಕ ಆಧಾರಗಳು ಭೂಸಂಶೋಧನೆಯಲ್ಲಿ ದೊರೆತಿವೆ. ಪ್ರತಿಯೊಂದು ಮನೆಯಲ್ಲೂ ಪ್ರತ್ಯೇಕ ಪೂಜಾಗೃಹಗಳಿದ್ದು ಅವುಗಳಲ್ಲಿ ಅನೇಕ ವಿಗ್ರಹಗಳು ದೊರೆಕಿವೆ. ಇದಲ್ಲದೆ ಅವರು ಬಳಸುತ್ತಿದ್ದ ಮುದ್ರೆಗಳ ಮೇಲೂ ಅನೇಕ ದೇವರುಗಳ ಚಿತ್ರಗಳು ಕಂಡುಬರುತ್ತವೆ. ಇಂತಹ ಮುದ್ರೆಯೊಂದರ ಮೇಲೆ ತ್ರಿಶೂಲವನ್ನು ಹಿಡಿದು ಧ್ಯಾನ ಸಮಾಧಿಯಲ್ಲಿ ಕುಳಿತಿರುವ ವಿಗ್ರಹವೊಂದು ಭೂಸಂಶೋಧಕರಿಗೆ ದೊರೆತಿದ್ದು ಅದರ ಸುತ್ತಲೂ ಹುಲಿ, ಕಾಡುಕೋಣ, ಘೇಂಡಾಮೃಗ ಗೂಳಿ ಮತ್ತು ಜಿಂಕೆಯ ಚಿತ್ರಗಳಿವೆ. ಸರ್ ಜಾನ್ ಮಾರ್ಷಲ್‌ರು ಈ ವಿಗ್ರಹವು ಪಶುಪತಿಯ ವಿಗ್ರಹವೆಂದು ಗುರುತಿಸಿದ್ದಾರೆ. ಲಿಂಗ ಪೂಜೆಯು ರೂಢಿಯಲ್ಲಿದ್ದುದಾಗಿ ಇಲ್ಲಿ ದೊರೆತಿರುವ ಲಿಂಗದ ಆಕೃತಿಗಳಿಂದ ತಿಳಿದುಬರುತ್ತದೆ. ಸಿಂಧೂ ಕಣಿವೆಯ ಜನರ ಧಾರ್ಮಿಕ ಜೀವನದ ಮತ್ತೊಂದು ಲಕ್ಷಣವೆಂದರೆ ಮಾತೃದೇವತೆಯ ಪೂಜೆ. ಮಾತೃದೇವತೆಯನ್ನು ಇಡೀ ಗ್ರಾಮದ ರಕ್ಷಕ ದೇವತೆಯೆಂದು ಭಾವಿಸಿ ಪೂಜಿಸುತ್ತಿದ್ದರು. ಈ ದೇವತೆಯನ್ನು ತೃಪ್ತಿಪಡಿಸಲೋಸುಗ ಪ್ರಾಣಿಗಳನ್ನೇ ಅಲ್ಲದೆ ನರಬಲಿಯನ್ನೂ ಕೊಡುತ್ತಿದ್ದುದಾಗಿ ಕಂಡುಬರುತ್ತವೆ. ಈ ಜನರು ಶಿವ ಮತ್ತು ಮಾತೃದೇವತೆಯನ್ನೇ ಅಲ್ಲದೆ ವೃಷಭ ಮೊದಲಾದ ಪ್ರಾಣಿಗಳನ್ನೂ ಅಶ್ವತ್ಥ, ಬೇವು, ಮೊದಲಾದ ವೃಕ್ಷಗಳನ್ನೂ ಪೂಜಿಸುತ್ತಿದ್ದರು. ನಾಗಪೂಜೆಯೂ ರೂಢಿಯಲ್ಲಿತ್ತು.

ಸಿಂಧೂ ಕಣಿವೆಯ ಜನರು ಮೂರು ರೀತಿಯಲ್ಲಿ ಶವಸಂಸ್ಕಾರ ಮಾಡುತ್ತಿದ್ದರು. ಮೃತರ ದೇಹಗಳನ್ನು ಹೂಳುವುದು ಹೂಳುವಾಗ ಶವದ ಜೊತೆಯಲ್ಲಿ ವಸ್ತ್ರಾಭರಣಗಳನ್ನು ಇಟ್ಟು ಹೂಳುತ್ತಿದ್ದರು. ಎರಡನೆಯದು ದಹನ ಕ್ರಮ. ಶವವನ್ನು ಸುಟ್ಟು ಅದರ ಬೂದಿಯನ್ನು ಕುಂಭಗಳಲ್ಲಿ ಶೇಖರಿಸಿಟ್ಟು ಮನೆಯ ಅಂಗಳದಲ್ಲಿ ಹೂಳುವುದು. ಮೂರನೆಯದು, ಶವವನ್ನು ಪ್ರಾಣಿಪಕ್ಷಿಗಳು ತಿನ್ನುವಂತೆ ಕಾಡಿನಲ್ಲಿಟ್ಟು ಬರುತ್ತಿದ್ದುದು ವಾಡಿಕೆಯಲ್ಲಿದ್ದಿತು. ಒಟ್ಟಿನಲ್ಲಿ ಸಿಂಧೂ ಕಣಿವೆಯ ಜನರ ಧಾರ್ಮಿಕ ಆಚರಣೆಗಳ ಮತ್ತು ಶವಸಂಸ್ಕಾರ ಪದ್ಧತಿಯ ಹಲವಾರು ಲಕ್ಷಣಗಳು ಇಂದೂ ಕೂಡ ಹಿಂದೂ ಧರ್ಮಿಯರಲ್ಲಿ ಆಚರಣೆಯಲ್ಲಿವೆ.

## ರಾಜಕೀಯ ವ್ಯವಸ್ಥೆ

ಸಿಂಧೂಕಣಿವೆಯ ಜನರ ರಾಜಕೀಯ ವ್ಯವಸ್ಥೆಯ ಸ್ವರೂಪವನ್ನು ನಿರ್ದಿಷ್ಟವಾಗಿ ಹೇಳುವುದು ಕಷ್ಟವಾದರೂ ವಿದ್ವಾಂಸರು ತಮ್ಮದೇ ಅಭಿಪ್ರಾಯಗಳನ್ನು ವ್ಯಕ್ತಪಡಿಸಿರುವರು. ಪಿಗಟ್ ಎಂಬ ವಿದ್ವಾಸಂರು ಮೊಹೆಂಜೊದಾರೊ ಮತ್ತು ಹರಪ್ಪ ನಗರಗಳ ನಿರ್ಮಾಣ ಯೋಜನೆಯನ್ನೂ ಮತ್ತು ಅಲ್ಲಿದ್ದ ಸೌಲಭ್ಯಗಳನ್ನೂ ಗಮನಿಸಿದಾಗ ಇಲ್ಲಿ ಕೇಂದ್ರೀಕೃತವಾದ ಅಧಿಕಾರವನ್ನು ಹೊಂದಿದ್ದ ಒಂದು ಆಡಳಿತ ವ್ಯವಸ್ಥೆ ಯಿದ್ದಿತೆಂದು ಅಭಿಪ್ರಾಯ ಪಟ್ಟಿರುವರು. ಇಲ್ಲಿನ ಅಧಿಕಾರ ವರ್ಗದವರ ಅಧಿಕಾರ ಮೂಲವು ಏನೇ ಇದ್ದರೂ ಇದರಲ್ಲಿ ಧಾರ್ಮಿಕ ವರ್ಗದವರ ಪ್ರಭಾವವು ಹೆಚ್ಚಾಗಿದ್ದು. ಇಲ್ಲಿನ ಅಧಿಕಾರಿಗಳು ಸುಮರ್ ಮತ್ತು ಅಕಡ್‌ನ ಪುರೋಹಿತ

ರಾಜರುಗಳು ಏರ್ಪಡಿಸಿ ಕೊಂಡಿದ್ದ ಆಡಳಿತ ವ್ಯವಸ್ಥೆಯೋಪಾದಿಯಲ್ಲಿ ಈ ನಗರಗಳ ಅಧಿಕಾರಿಗಳು ಆಡಳಿತ ನಡೆಸುತ್ತಿದ್ದರೆಂದು ಮಾರ್ಟಿಮೋರ್ ವ್ಹೀಲರ್ ಅಭಿಪ್ರಾಯ ಪಟ್ಟಿರುವರು.

**ಬರವಣಿಗೆ ಮತ್ತು ಮುದ್ರೆಗಳು**

ಸಿಂಧೂಕಣಿವೆಯ ಜನರಿಗೆ ಬರವಣಿಗೆಯು ಗೊತ್ತಿದ್ದಿತು. ಇಲ್ಲಿ ದೊರೆತಿರುವ ಮುದ್ರೆಗಳ ಮೇಲೆ ನಾನೂರಕ್ಕೂ ಹೆಚ್ಚು ಚಿತ್ರಲಿಪಿಗಳನ್ನು ಗುರುತಿಸಲಾಗಿದೆ. ಆದರೆ ಇದುವರೆಗೂ ಈ ಚಿತ್ರಲಿಪಿಗಳನ್ನು ಓದಿ ಸಂಪೂರ್ಣವಾಗಿ ಅರ್ಥಮಾಡಿಕೊಳ್ಳಲು ಸಾಧ್ಯವಾಗಿಲ್ಲ. ಇದು ಸಾಧ್ಯವಾದಲ್ಲಿ ಸಿಂಧೂ ಕಣಿವೆಯ ಜನರ ನಾಗರಿಕತೆಯ ಮೇಲೆ ಮತ್ತಷ್ಟು ಬೆಳಕನ್ನು ಬೀರಲು ಸಾಧ್ಯವಾಗುತ್ತದೆ. ಸಿಂಧೂಕಣಿವೆಯಲ್ಲಿ ಸುಮಾರು ಎರಡು ಸಾವಿರಕ್ಕಿಂತಲೂ ಹೆಚ್ಚು ಮುದ್ರೆಗಳನ್ನು ಕಂಡುಹಿಡಿಯಲಾಗಿದೆ. ಕೆಲವು ವಿದ್ವಾಂಸರು ದುಷ್ಟಶಕ್ತಿಗಳಿಂದ ರಕ್ಷಿಸಿಕೊಳ್ಳಲು ಜನರು ಇವುಗಳನ್ನು ಉಪಯೋಗಿಸುತ್ತಿದ್ದರೆಂದೂ ಮತ್ತೆ ಕೆಲವರು ವ್ಯಾಪಾರದಲ್ಲಿ ಇವುಗಳನ್ನು ಬಳಸುತ್ತಿದ್ದರೆಂದೂ ಅಭಿಪ್ರಾಯ ಪಡುವರು. ಆದ್ದರಿಂದ ಇವುಗಳ ಉಪಯೋಗದ ವಿಷಯವಾಗಿ ವಿದ್ವಾಂಸರು ಭಿನ್ನಾಭಿಪ್ರಾಯಗಳನ್ನು ವ್ಯಕ್ತಪಡಿಸಿರುವರು. ಈ ಮುದ್ರೆಗಳ ಬಳಕೆ ಮತ್ತು ಉಪಯುಕ್ತತೆಯ ವಿಷಯವಾಗಿ ನಿರ್ಧಿಷ್ಟವಾಗಿ ಏನನ್ನೂ ಹೇಳಲು ಸಾಧ್ಯವಾಗಿಲ್ಲ.

ಸಿಂಧೂಕಣಿವೆಯಲ್ಲಿ ರೂಪುಗೊಂಡಿದ್ದ ಭವ್ಯ ನಾಗರಿಕತೆಯ ನಿರ್ಮಾಪಕರು ಯಾರು ಎಂಬುದು ಇನ್ನೂ ಒಂದು ಕ್ಲಿಷ್ಟ ಸಮಸ್ಯೆಯಾಗಿಯೇ ಉಳಿದಿದೆ. ಸಿಂಧೂ ಕಣಿವೆಯ ಮತ್ತು ಸುಮೇರಿಯದ ನಾಗರಿಕತೆಗಳಲ್ಲಿ ಕಂಡುಬರುವ ಕೆಲವು ಸಮಾನ ಹೋಲಿಕೆಗಳಿಂದಲೂ, ಸಿಂಧೂ ಕಣಿವೆಯ ಮುದ್ರೆಗಳು ಸುಮೇರಿಯಾದಲ್ಲಿ ದೊರೆತಿರುವುದರಿಂದಲೂ ಈ ನಾಗರಿಕತೆಯ ನಿರ್ಮಾಪಕರು ಸುಮೇರಿಯನ್ನರೆಂದು ಊಹಿಸಲಾಗಿದೆ. ಬೆಲೂಚಿಸ್ಥಾನದಲ್ಲಿ ಕಂಡುಬಂದಿರುವ ಬ್ರಾಹುಯಿ ಎಂಬ ಭಾ;ಯು ದ್ರಾವಿಡ ಭಾಷೆಗಳಲ್ಲೊಂದಾಗಿರುವುದರಿಂದ ಈ ನಾಗರಿಕತೆಯ ಕರ್ತೃಗಳು ದ್ರಾವಿಡರೆಂದು ಕೆಲವರು ಅಭಿಪ್ರಾಯ ಪಟ್ಟಿರುವರು. ಮತ್ತೆ ಕೆಲವರು ಈ ನಾಗರಿಕತೆಯು ಆರ್ಯಕೃತವೆಂದೂ ಅಭಿಪ್ರಾಯ ಪಡುವರು. ಆದರೆ ಸಿಂಧೂ ಕಣಿವೆಯ ನಾಗರಿಕತೆಗೂ ಆರ್ಯರ ನಾಗರಿಕತೆಗೂ ಇರುವ ಹಲವಾರು ಭಿನ್ನತೆಗಳನ್ನು ನೋಡಿದಾಗ ಈ ನಾಗರಿಕತೆಯ ನಿರ್ಮಾಪಕರು ಆರ್ಯರಲ್ಲವೆಂದು ನಿಸ್ಸಂದೇಹವಾಗಿ ಹೇಳಬಹುದು. ಮೇಲಾಗಿ ಸಿಂಧೂಕಣಿವೆಯ ನಾಗರಿಕತೆಯ ಕಾಲಕ್ಕೂ ವೇದಗಳ ಕಾಲದ ಆರ್ಯರ ನಾಗರಿಕತೆಯ ಕಾಲಕ್ಕೂ ಬಹಳ ವ್ಯತ್ಯಾಸವಿದೆ, ಅರ್ನೆಸ್ಟ್ ಮೆಕ್ಕೆಯುವರು ಸಿಂಧೂಕಣಿವೆಯ ನಗರಗಳ ನಿವೇಶನಗಳು ಶಿಲಾಯುಗದ ಕಾಲದಲ್ಲಿಯೆ ನಿರ್ಮಿತವಾಗಿದ್ದುವೆಂದು ಅಭಿಪ್ರಾಯ ಪಡುವರು. ಸರ್‌ಜಾನ್ ಮಾರ್ಷಲ್‌ರು ಈ ನಾಗರಿಕತೆಯು ಕ್ರಿ.ಪೂ. 3250 ವರ್ಷಗಳಿಗಿಂತ ಹಿಂದಿನದಲ್ಲವೆಂದು ಹೇಳುತ್ತಾರೆ. ಫಾದರ್ ಹೆರಾಸ್‌ರು ಕ್ರಿ.ಪೂ. 5000 ದಿಂದ ಕ್ರಿ.ಪೂ. 2500ರ ಅವಧಿಯು ಈ ನಾಗರಿಕತೆಯ ಕಾಲವಾಗಿತ್ತೆಂದು ಹೇಳುತ್ತಾರೆ. ಆದರೆ ಆರ್ಯರ ನಾಗರಿಕತೆಯನ್ನು ಕ್ರಿ.ಪೂ. 2500ಕ್ಕಿಂತ ಹಿಂದಕ್ಕೆ ಗುರುತಿಸಲು ಸಾಧ್ಯವಿಲ್ಲ. ಈ ಕೆಲವು ಅಂಶಗಳಿಂದ

ಸಿಂಧೂಕಣಿವೆಯ ನಾಗರಿಕತೆಯು ಆರ್ಯರ ನಾಗರಿಕತೆಗಿಂತ ಹಿಂದಿನದಾಗಿರುತ್ತದೆ. ಅಲ್ಲದೆ ಭೂಸಂಶೋಧನೆಯಲ್ಲಿ ದೊರೆತಿರುವ ಅಸ್ತಿಪಂಜರಗಳ ಪರಾಮರ್ಶೆಯಿಂದ ಸಿಂಧೂಕಣಿವೆಯ ಜನರು ಪ್ರೋಟೋ-ಅಸ್ಟ್ರೋಲಾಯಿಡ್, ಮೆಡಿಟರೇನಿಯನ್ ಆಲ್ಪಿನೋಯಿಡ್ ಮತ್ತು ಮಂಗೋಲಾಯಿಡ್ ಬುಡಕಟ್ಟಿಗೆ ಸೇರಿದುದಾಗಿ ತಿಳಿದು ಬರುತ್ತದೆ. ಒಟ್ಟಿನಲ್ಲಿ ಸಿಂಧೂಕಣಿವೆಯ ನಾಗರಿಕತೆಯ ನಿರ್ಮಾಪಕರ ಬಗೆಗೆ ಇನ್ನೂ ಹೆಚ್ಚಿನ ಅಧ್ಯಯನ ನಡೆಯಬೇಕಾಗಿದೆ.

ಇತ್ತೀಚಿನ ದಶಕಗಳಲ್ಲಿ ಪಶ್ಚಿಮ ಮತ್ತು ಮಧ್ಯಭಾರತ ಹಾಗೂ ದಖನ್ನಿನ ನರ್ಮದಾ ಕಣಿವೆಯಲ್ಲಿ ಕೈಗೊಂಡ ಪ್ರಾಗೈತಿಹಾಸಿಕ ನಿವೇಶನಗಳ ಸಂಶೋಧನೆಗಳಿಂದ ಸಿಂಧೂಕಣಿವೆಯ ನಾಗರಿಕತೆಯು ಕೇವಲ ಸಿಂಧ್ ಮತ್ತು ಪಂಜಾಬ್ ಪ್ರದೇಶಗಳಿಗೆ ಸೀಮಿತವಾಗಿರದೆ ಅದು ಭಾರತದ ಇತರ ಭಾಗಗಳಿಗೂ ವ್ಯಾಪಿಸಿದ್ದುದಾಗಿ ಕಂಡುಬರುತ್ತದೆ. ಭಾರತದಲ್ಲಿ ಇಷ್ಟು ವ್ಯಾಪಕವಾಗಿ ಹರಡಿದ್ದ ಹಾಗೂ ಸುಮೇರಿಯಾ ಮತ್ತು ಈಜಿಪ್ಟ್ ದೇಶಗಳೊಂದಿಗೂ ವ್ಯಾಪಾರ ಸಂಪರ್ಕವನ್ನು ಹೊಂದಿದ್ದ ಈ ಭವ್ಯ ನಾಗರಿಕತೆಯ ಹೇಗೆ ಅವಸಾನಗೊಂಡಿತೆಂಬಂದು ಒಂದು ಜಿಜ್ಞಾಸೆಯ ವಿಷಯವಾಗಿದೆ. ಈ ನಾಗರಿಕತೆಯು ಅವಸಾನ ಹೊಂದುವುದಕ್ಕೆ ಅನೇಕ ಕಾರಣಗಳನ್ನು ಕೊಡಲಾಗಿದೆ. ಇದರಲ್ಲಿ ಪ್ರಕೃತಿ ಮತ್ತು ಮಾನವನ ಕೈವಾಡಗಳೆರಡೂ ಸೇರಿವೆ. ಮೊಹೆಂಜೊದಾರೊ ಮತ್ತು ಹರಪ್ಪ ನಿವೇಶನಗಳಲ್ಲಿ ಕಂಡುಬರುವ ಅಸ್ತಿಪಂಜರಗಳ ವಿಮರ್ಶೆಯಿಂದ ಈ ನಾಗರಿಕತೆಯ ಯಾವುದೋ ಒಂದು ಹಂತದಲ್ಲಿ ಪರಕೀಯರ ಆಕ್ರಮಣದಿಂದ ನಶಿಸಿ ಹೋಗಿರಬಹುದೆಂದು ಅಭಿಪ್ರಾಯ ಪಡಲಾಗಿದೆ. ಮುಂದೆ ಭಾರತಕ್ಕೆ ವಲಸೆಬಂದ ಆರ್ಯರು ಈ ನಾಗರಿಕತೆಯನ್ನು ಕೊನೆಗಾಣಿಸಿರಬಹುದೆಂದು ಮತ್ತೊಂದು ಅಭಿಪ್ರಾಯವಿದೆ. ಇದಲ್ಲದೆ ಸಿಂಧೂನದಿಯು ತನ್ನ ಪ್ರವಾಹ ಕಾಲದಲ್ಲಿ ತುಂಬಿಬಂದು ಈ ನಗರಗಳ ಮೇಲೆ ನುಗ್ಗಿ ಅವುಗಳನ್ನು ನಾಶಮಾಡಿರಬಹುದೆಂದು ಅನೇಕ ವಿದ್ವಾಂಸರು ಅಭಿಪ್ರಾಯ ಪಟ್ಟಿರುವರು. ಒಟ್ಟಿನಲ್ಲಿ ಈ ನಾಗರಿಕತೆಯು ಅವನತಿ ಹೊಂದಲು ಏನೇ ಕಾರಣಗಳಿದ್ದರೂ ಅದು ಭಾರತೀಯ ಸಂಸ್ಕೃತಿಯ ಶ್ರೀಮಂತಿಕೆಗೆ ತನ್ನದೇ ಆದ ಕೊಡುಗೆಗಳನ್ನಿತ್ತಿದ್ದು ಅದರ ಹಲವಾರು ಅಂಶಗಳು ಭಾರತೀಯ ಸಂಸ್ಕೃತಿಯಲ್ಲಿ ಇಂದೂ ಜೀವಂತವಾಗಿ ಉಳಿದಿರುವುದು ಗಮನಾರ್ಹ ಸಂಗತಿಯಾಗಿದೆ.

## ಅಧ್ಯಾಯ-4

# ಋಗ್ವೇದದ ಕಾಲದ ನಾಗರಿಕತೆ

ಸಿಂಧೂ ಕಣಿವೆಯ ಸಂಸ್ಕೃತಿಯ ನಂತರ ಭೂರತದಲ್ಲಿ ರೂಪಗೊಂಡ ಸಂಸ್ಕೃತಿಯು ಆರ್ಯರ ಸಂಸ್ಕೃತಿಯಾಗಿರುತ್ತದೆ. ವೇದಗಳ ಕಾಲದ ಜನರ ಜೀವನ ವಿಧಾನ ಹಾಗೂ ಆಚಾರ ವಿಚಾರಗಳಿಗೂ ಸಿಂಧೂಕಣಿವೆಯ ಜನರ ಜೀವನ ವಿಧಾನಕ್ಕೂ ಹೆಚ್ಚಿನ ಭಿನ್ನತೆಯಿರುವುದು ಸ್ಪಷ್ಟ ಸಂಗತಿಯಾಗಿರುತ್ತದೆ. ವೇದಗಳ ಕಾಲದ ಆರ್ಯರ ಸಂಸ್ಕೃತಿಯನ್ನು ತಿಳಿಯಲು ಅವರು ರಚಿಸಿರುವ ವೇದಗಳು ಬಹು ಮುಖ್ಯ ಆಧಾರಗಳಾಗಿವೆ. ಆರ್ಯರ ಮೂಲ ನಿವಾಸಸ್ಥಾನದ ವಿಷಯವಾಗಿ ಇತಿಹಾಸಕಾರರಲ್ಲಿ ಒಮ್ಮತ ಅಭಿಪ್ರಾಯವಿರುವುದಿಲ್ಲ. ಆರ್ಯರು ಹೊರ ದೇಶದವರಾಗಿದ್ದು ಸುಮಾರು ಕ್ರಿ.ಪೂ. 2500ರಲ್ಲಿ ಭಾರತಕ್ಕೆ ವಲಸೆ ಬಂದು ನೆಲಸಿದರೆಂದು ಬಹುಮಂದಿ ಇತಿಹಾಸಕಾರರು ಅಭಿಪ್ರಾಯ ಪಟ್ಟಿರುವರು. ಆದರೆ ಆರ್ಯರು ಭಾರತಕ್ಕೆ ವಲಸೆ ಬರುವುದಕ್ಕೆ ಮುಂಚೆ ಎಲ್ಲಿ ವಾಸಿಸುತ್ತಿದ್ದರು ಎಂಬ ವಿಚಾರದಲ್ಲಿ ಏಕಾಭಿಪ್ರಾಯವಿಲ್ಲ. ಆರ್ಯರ ಮೂಲನಿವಾಸಸ್ಥಾನವು ಮಧ್ಯಏಷ್ಯಾ, ಆರ್ಕಟಿಕ್ ಪ್ರಾಂತ್ಯ, ಆಸ್ಟ್ರಿಯಾ, ಹಂಗೇರಿ ಬೊಹೀಮಿಯಾ ಹಾಗೂ ದಕ್ಷಿಣ ರಷ್ಯಾ ಆಗಿರಬಹುದೆಂದು ಅಭಿಪ್ರಾಯಪಡಲಾಗಿದೆ. ಇನ್ನು ಕೆಲವರು ಆರ್ಯರ ಮೂಲ ನಿವಾಸಸ್ಥಾನವು ಭಾರತವೆಂತಲೂ, ಅವರು ಭಾರತದಿಂದ ವಲಸೆ ಹೋಗಿರಬಹುದೆಂದು ಅಭಿಪ್ರಾಯಪಟ್ಟಿರುತ್ತಾರೆ. ಆದರೆ ಈ ಅಭಿಪ್ರಾಯವನ್ನು ಹೊಂದಿರುವವರ ಸಂಖ್ಯೆ ಬಹಳ ಕಡಿಮೆಯಿದ್ದು ಅವರ ವಾದಕ್ಕೆ ಹೆಚ್ಚಿನ ಬೆಂಬಲ ದೊರೆತಿರುವುದಿಲ್ಲ. ಪ್ರಸ್ತುತ ಪ್ರಚಲಿತವಿರುವ ಅಭಿಪ್ರಾಯದಂತೆ ಆರ್ಯರು ಮಧ್ಯಏಷ್ಯಾದಲ್ಲಿ ವಾಸಿಸುತ್ತಿದ್ದು ಅವರಿಗೂ ಮತ್ತು ಅವರ ದನಕರುಗಳಿಗೂ ಆಹಾರ ಮತ್ತು ಮೇವಿನ ಕೊರತೆಯುಂಟಾಗಿ ಅವರು ಆ ಪ್ರದೇಶವನ್ನು ಬಿಟ್ಟು ಫಲವತ್ತಾದ ಪ್ರದೇಶಗಳನ್ನು ಅರಸಿಕೊಂಡು ಅನೇಕ ಪಂಗಡಗಳಾಗಿ ಒಡೆದು ಕೆಲವರು ಯೂರೋಪಿಗೂ ಮತ್ತೆ ಕೆಲವರು ಪರ್ಶಿಯಾ ಮತ್ತು ಭಾರತಕ್ಕೂ ಬಂದು ನೆಲಸಿದರೆಂದು ಹೇಳಲಾಗಿದೆ.

ಆರ್ಯರು ಭಾರತದ ವಾಯುವ್ಯ ಭಾಗದ ಪರ್ವತ ಶ್ರೇಣಿಗಳಲ್ಲಿನ ಕಣಿವೆಗಳಾದ ಖೈಬರ್, ಬೋಲಾನ್ ಮತ್ತು ಗೋಮಾಲ್ ಕಣಿವೆಗಳ ಮೂಲಕ ಪ್ರವೇಶಿಸಿದರು. ಭಾರತಕ್ಕೆ ಆರ್ಯರ ಆಗಮನ ಮತ್ತು ನೆಲಸುವಿಕೆಯು ಏಕಕಾಲದಲ್ಲಿ ಸಂಭವಿಸಲಿಲ್ಲ. ಅವರು ತಂಡೋಪತಂಡವಾಗಿ ಅನೇಕ ಹಂತಗಳಲ್ಲಿ ಭಾರತವನ್ನು ಪ್ರವೇಶಿಸಿ ಕೊನೆಗೆ ಸಿಂಧೂ ನದಿಯ ಬಯಲಿನಲ್ಲಿ ನೆಲಸಿ ತಮ್ಮದೇ ಆದ ಸ್ವತಂತ್ರ ಸಂಸ್ಕೃತಿಯನ್ನು ಸೃಷ್ಟಿಸಿದರು.

ಆರ್ಯರು ಸಿಂಧ್ ಮತ್ತು ಪಂಜಾಬು ಪ್ರದೇಶಗಳಿಗೆ ಬಂದ ಸಮಯದಲ್ಲಿ ಅಲ್ಲಿ ಹಲವಾರು ಬಣಗಳಿಗೆ ಸೇರಿದ ಜನರು ವಾಸಿಸುತ್ತಿದ್ದರು. ಇದರಿಂದಾಗಿ ಆರ್ಯರು ಈ ಬಣಗಳ ಜನಗಳೊಂದಿಗೆ ಹೋರಾಟ ಮಾಡಬೇಕಾಯಿತು. ಶಕ್ತಿವಂತರೂ ಮತ್ತು ಉತ್ತಮ ರೀತಿಯ ಶಸ್ತ್ರಾಸ್ತ್ರಗಳನ್ನು ಹೊಂದಿದ ಆರ್ಯರು ಸ್ಥಳೀಯ ಜನಗಳನ್ನು ಸೋಲಿಸಿ ಅವರನ್ನು ಪೂರ್ವ ಹಾಗೂ ದಕ್ಷಿಣದ ಕಡೆ ಅಟ್ಟಿದರು, ಆರ್ಯರು ಸಿಂಧೂ ನದಿಯ ಬಯಲಿನಲ್ಲಿ ನೆಲೆ ನಿಂತು ಕಾಲಾನುಕ್ರಮದಲ್ಲಿ ಗಂಗಾನದಿಯ ಬಯಲನ್ನು ಆಕ್ರಮಿಸಿ ಅದಕ್ಕೆ 'ಆರ್ಯಾವರ್ತ'ವೆಂದು ಹೆಸರಿಟ್ಟರು.

ವೇದಗಳ ಕಾಲದ ಆರ್ಯರ ನಾಗರಿಕತೆಯನ್ನು ತಿಳಿಯಲು ಅವರು ರಚಿಸಿರುವ ನಾಲ್ಕು ವೇದಗಳು ಮುಖ್ಯ ಆಧಾರಗಳಾಗಿವೆ. ಅವುಗಳೆಂದರೆ ಋಗ್ವೇದ, ಯಜುರ್ವೇದ ಸಾಮವೇದ ಮತ್ತು ಅಥರ್ವಣವೇದ, ಇವುಗಳು ಕೇವಲ ಧಾರ್ಮಿಕ ಗ್ರಂಥಗಳಷ್ಟೇ ಆಗಿರದೆ, ಆರ್ಯರ ರಾಜಕೀಯ ಸಾಮಾಜಿಕ, ಮತ್ತು ಆರ್ಥಿಕ ಜೀವನದ ಬಗ್ಗೆಯೂ ಸಾಕಷ್ಟು ಮಾಹಿತಿ ನೀಡುತ್ತವೆ. ವೇದಗಳಲ್ಲಿ ಮೊದಲನೆಯದಾದ ಋಗ್ವೇದವು ಆರ್ಯರ ಜನಾಂಗದ ಪುರಾತನ ಗ್ರಂಥವಾಗಿರುವುದೇ ಅಲ್ಲದೆ ಇಡೀ ಮಾನವ ಜನಾಂಗದ ಸಾಹಿತ್ಯ ಇತಿಹಾಸದಲ್ಲಿಯೇ ಅತ್ಯಂತ ಪುರಾತನ ಗ್ರಂಥವಾಗಿದೆ. ಇದರಲ್ಲಿ 1028 ಶ್ಲೋಕಗಳಿದ್ದು ಇವುಗಳನ್ನು ಹತ್ತು ಮಂಡಳಗಳನ್ನಾಗಿ ವಿಂಗಡಿಸಲಾಗಿದೆ. ಇದರಲ್ಲಿರುವ ಶ್ಲೋಕಗಳು ದೇವಾನು ದೇವತೆಗಳನ್ನು ಕುರಿತು ಹಾಡಿರುವ ಸ್ತೋತ್ರಮಾಲೆಗಳಾಗಿದ್ದು ಅವುಗಳನ್ನು ತಲೆತಲೆಮಾರುಗಳಿಂದಲೂ ಬಾಯಿಪಾಠ ಮಾಡಲಾಗುತ್ತಿತ್ತು. ಋಗ್ವೇದವು ಆರ್ಯರ ಮೂಲ ಗ್ರಂಥವಾಗಿರುವುದರಿಂದ ಅವರ ನಾಗರಿಕತೆಯನ್ನು ತಿಳಿಯಲು ಅದು ಮುಖ್ಯ ಆಧಾರವಾಗಿದೆ. ಭಾರತದಲ್ಲಿ ಆರ್ಯರ ನಾಗರಿಕತೆಯನ್ನು ಎರಡು ಹಂತಗಳನ್ನಾಗಿ ವಿಂಗಡಿಸಲಾಗಿದೆ. 1. ಆರ್ಯರು ಭಾರತಕ್ಕೆ ಬಂದು ನೆಲಸಿದಂದಿನಿಂದ ಕ್ರಿ.ಪೂ. 1500ರವರೆಗಿನ ಅವಧಿಯ ನಾಗರಿಕತೆಯನ್ನು ಋಗ್ವೇದದ ಕಾಲದ ನಾಗರಿಕತೆಯಂತಲೂ ನಂತರ ಜೈನ ಮತ್ತು ಬೌದ್ಧ ಮತಗಳು ಹುಟ್ಟುವವರೆಗಿನ ಕಾಲದ ನಾಗರಿಕತೆಯನ್ನು ಕೊನೆಯ ವೇದಗಳ ಹಾಗೂ ಪುರಾಣ ಇತಿಹಾಸಗಳ ಕಾಲದ ನಾಗರಿಕತೆಯೆಂದೂ ಕರೆಯಲಾಗಿದೆ. ಋಗ್ವೇದವು ಆರ್ಯರು ಹೇಗೆ ಹಂತಹಂತವಾಗಿ ಭಾರತವನ್ನು ಪ್ರವೇಶಿಸಿ ಪಂಜಾಬಿನ ಸಪ್ತಸಿಂಧು ಬಯಲಿನಲ್ಲಿ ನೆಲಸಿದರೆಂಬುದನ್ನು ತಿಳಿಸುತ್ತದೆ. ಋಗ್ವೇದದಲ್ಲಿ ಅನೇಕ ನದಿಗಳನ್ನು ಹೆಸರಿಸಲಾಗಿದೆ. 1. ಸಿಂಧು, 2. ವಿಟಸ್ತ (ಜೀಲಂ) 3. ಅಸಿಕಿನಿ (ಚೀನಾಬ್) 4. ಪರುಷ್ಣಿ (ರಾವಿ) 5. ವಿಪಾಸ್ (ಬಿಯಾಸ್) 6. ಸುತುದ್ರಿ (ಸಟ್ಲೆಜ್) 7. ಸರಸ್ವತಿ. ಈ ಏಳು ನದಿಗಳು ಹರಿಯುವ ಈ ಪ್ರದೇಶಕ್ಕೆ ಆರ್ಯರು ಸಪ್ತಸಿಂಧು ಪ್ರದೇಶ ಎಂಬ ಹೆಸರನ್ನು ಕೊಟ್ಟಿದ್ದರು. ಇವುಗಳದೆ ಸುವಸ್ತು (ಸ್ವಾತ್) ಖ್ರುಮು (ಕುರ್ರಂ) ಗೋಮತಿ (ಗೋಮಾಲ್) ಸುಶೋಮ (ಸೋಹನಿ) ಕುಬ (ಕಾಬೂಲ್) ಮತ್ತು ದೃಷದಾವತಿ ನದಿಗಳ ಹೆಸರುಗಳು ಋಗ್ವೇದದಲ್ಲಿ ಪ್ರಸ್ತಾಪಿಸಲ್ಪಟ್ಟಿವೆ. ಆರ್ಯರಿಗೆ ಸಮುದ್ರದ ಪರಿಚಯವಿದ್ದಿತಾದರೂ ಸಮುದ್ರದ ಮೇಲಿನ ಕಾರ್ಯಾಚರಣೆಗಳಲ್ಲಿ ಹೆಚ್ಚು ಆಸಕ್ತಿ ಹೊಂದಿದ್ದಂತೆ ಕಂಡುಬರುವುದಿಲ್ಲ. ಋಗ್ವೇದದ ಕೊನೆಯ ಶ್ಲೋಕಗಳಲ್ಲಿ ಯಮುನ ಮತ್ತು ಗಂಗಾ ನದಿಗಳ ಬಗ್ಗೆ ಪ್ರಸ್ತಾಪ ಮಾಡಲ್ಪಟ್ಟಿರುವುದರಿಂದ ಆರ್ಯರು

ಸರಸ್ವತಿ ಮತ್ತು ದೃಷದಾವತಿ ನದಿಗಳ ಬಯಲಿನಿಂದ ಕ್ರಮಾನುಗತವಾಗಿ ಪೂರ್ವದ ಕಡೆ ಮುಂದುವರಿದಿರುವುದಾಗಿ ಕಂಡುಬರುತ್ತದೆ. ಅಂತೆಯೆ ಋಗ್ವೇದದಲ್ಲಿ ವಿಂಧ್ಯ ಪರ್ವತದ ಬಗ್ಗೆಯಾಗಲೀ ಮತ್ತು ಬಂಗಾಳದ ಕಾಡುಗಳಲ್ಲಿನ ಹುಲಿ ಮೊದಲಾದ ವನ್ಯ ಮೃಗಗಳ ಬಗ್ಗೆಯಾಗಲೀ ಪ್ರಸ್ತಾಪವಿಲ್ಲರುವುದರಿಂದ ಋಗ್ವೇದದ ಕಾಲದಲ್ಲಿ ಆರ್ಯರು ಆಕ್ರಮಿಸಿಕೊಂಡಿದ್ದ ಪ್ರದೇಶದ ಬಗೆಗಿನ ಒಂದು ಚಿತ್ರವನ್ನು ಕಲ್ಪಿಸಿಕೊಳ್ಳಬಹುದಾಗಿದೆ.

ಆರ್ಯರು ಸಪ್ತಸಿಂಧು ಪ್ರದೇಶಕ್ಕೆ ಬಂದ ಸಮಯದಲ್ಲಿ ಅಲ್ಲಿ ಅನೇಕ ಬಣಗಳಿಗೆ ಸೇರಿದ ಜನರು ವಾಸಿಸುತ್ತಿದ್ದರು. ಇವರನ್ನು 'ದಸ್ಸು'ಗಳೆಂದು ಕರೆದರು. ಇವರು ನಾಗರಿಕತೆಯಲ್ಲಿ ಸಾಕಷ್ಟು ಮುಂದುವರಿದಿದ್ದು ಕೋಟೆ ಕೊತ್ತಲಗಳಿಂದ ಕೂಡಿದ ನಗರಗಳಲ್ಲಿ ವಾಸಮಾಡುತ್ತಿದ್ದರು. ಈ ಬಣಗಳಲ್ಲಿ ಕೆಲವು ಪ್ರಬಲ ಬಣಗಳಾಗಿದ್ದ, ದಾಸಾಸ್ ಅಸುರಾಸ್, ಕಿಕಾತಾಸ್, ಅಜಾಸ್, ಸಿಗ್ರುಸ್ ಮತ್ತು ಯಕ್ಷುಸ್ ಎಂಬ ಬಣಗಳ ಹೆಸರುಗಳನ್ನು ಋಗ್ವೇದದಲ್ಲಿ ಪ್ರಸ್ತಾಪಿಸಲಾಗಿದೆ. ಋಗ್ವೇದದಲ್ಲಿ ಆರ್ಯರು ತಮ್ಮ ಶತ್ರುಗಳನ್ನು ಕಪ್ಪುಬಣ್ಣದವರೂ, ಚಪ್ಪಟೆಯಾದ ಮೂಗುಳ್ಳವರೂ, ಕುಳ್ಳರೂ, ಮತ್ತು ಒರಟು ಸ್ವಭಾವದವರೂ, ಹಾಗೂ ಆರ್ಯರ ಧರ್ಮ ಮತ್ತು ಸಂಪ್ರದಾಯಗಳ ವಿರೋಧಿಗಳೂ ಮತ್ತು ಆರ್ಯರ ದೇವರುಗಳ ಬಗ್ಗೆ ಅಗೌರವವುಳ್ಳವರೂ ಆಗಿದ್ದರೆಂದು ವರ್ಣಿಸಿದ್ದಾರೆ. ಅಲ್ಲದೆ ದಸ್ಸುಗಳ ರಾಜರುಗಳು ಆರ್ಯರ ದೇವರಾದ ಇಂದ್ರನ ಶತ್ರುಗಳೆಂದು ಪರಿಗಣಿಸಲ್ಪಟ್ಟಿದ್ದರು. ಅನೇಕ ಗುಂಪುಗಳಾಗಿ ಬಂದಿದ್ದ ಆರ್ಯರಲ್ಲಿ ಮೊದಲಿಗೆ ಏಕತೆಯು ಇರಲಿಲ್ಲ. ಆದರೆ ಅವರು ತಮ್ಮ ಶತ್ರುಗಳ ವಿರುದ್ಧ ಹೋರಾಟ ಮಾಡ ಬೇಕಾಗಿ ಬಂದ ಸಮಯದಲ್ಲಿ ಅವರೆಲ್ಲರೂ ಒಟ್ಟುಗೂಡಿ ಹೋರಾಡಿ ವಿಜಯಗಳಿಸಿದರು. ಆರ್ಯರಲ್ಲಿ ಒಂದು ರೀತಿಯ ಒಗ್ಗಟ್ಟು ಏರ್ಪಡುವುದಕ್ಕೆ ದಸ್ಸುಗಳ ಬಗೆಗಿದ್ದ ಶತ್ರುತ್ವವು ಒಂದು ಪ್ರಮುಖ ಅಂಶವಾಗಿದ್ದಿತು.

ಋಗ್ವೇದದಲ್ಲಿ ಆರ್ಯರ ಅನೇಕ ಬಣಗಳ ಹೆಸರುಗಳನ್ನು ಪ್ರಸ್ತಾಪಿಸಲಾಗಿದೆ. ಇವುಗಳಲ್ಲಿ ಭರತರು, ಪುರುಗಳು, ಯದುಗಳು, ಮಾದ್ರಕರು ದ್ರುಯುಗಳು ಅನುಗಳು ಗಾಂಧಾರಿಗಳು, ಸಿವಾಸ್ ಮತ್ತು ಕೇಕೆಯರು ಮುಖ್ಯರಾದವರು. ಇವುಗಳಲ್ಲೆಲ್ಲಾ ಭಾರತರು ಎಂಬ ಬಣದವರು ಹೆಚ್ಚು ಬಲಶಾಲಿಯಾದವರು. ಇವರು ಸರಸ್ವತಿ ಮತ್ತು ಯಮುನಾ ನದಿಗಳ ನಡುವಿನ ಪ್ರದೇಶದಲ್ಲಿ ನೆಲೆಸಿದ್ದು ಆ ಪ್ರದೇಶಕ್ಕೆ 'ಭರತವರ್ಷ' ಎಂಬ ಹೆಸರನ್ನು ಕೊಟ್ಟಿದ್ದರು. ಭರತ ಬುಡಕಟ್ಟಿನವರು ಮೊದಲಿಗೆ ಅಷ್ಟೇನು ಬಲಶಾಲಿಗಳಾಗಿರಲಿಲ್ಲ. ಆದರೆ ಅವರು ತರುವಾಯದಲ್ಲಿ ವಿಶಿಷ್ಟ ಋಷಿಯ ನೇತೃತ್ವದಲ್ಲಿ ಒಂದು ಪ್ರಬಲ ಸೈನಿಕ ಶಕ್ತಿಯಾಗಿ ಮಾರ್ಪಟ್ಟರು.

ಆರ್ಯರ ಈ ಕೆಲವು ಪ್ರಮುಖ ಬಣಗಳಲ್ಲಿ ಸಾರ್ವಭೌಮತ್ವಕ್ಕಾಗಿ ಸ್ಪರ್ಧೆಯು ಏರ್ಪಟ್ಟು ಬುಡಕಟ್ಟುಗಳ ನಡುವೆ ಪರಸ್ಪರ ಘರ್ಷಣೆಯು ಆರಂಭವಾಗಿ ಕೆಲವು ಬುಡಕಟ್ಟಿನವರು ಭರತರ ಕಡೆಯೂ ಮತ್ತೆ ಕೆಲವರು ಪುರುಗಳ ಕಡೆಯೂ ಸೇರಿ ಯುದ್ಧ ಮಾಡಿದರು. ಈ ಯುದ್ಧವು 'ಹತ್ತು ರಾಜರುಗಳ ಯುದ್ಧ' (Battle of ten kings) ಎಂದು ಹೆಸರುವಾಸಿಯಾಗಿದೆ. ಈ ಯುದ್ಧಕ್ಕೆ ಸಂಬಂಧಿಸಿದಂತೆ

ವಶಿಷ್ಠ ಮತ್ತು ವಿಶ್ವಾಮಿತ್ರರ ಹೆಸರುಗಳನ್ನು ಋಗ್ವೇದವು ತಿಳಿಸುತ್ತದೆ. ವಶಿಷ್ಠ ಮತ್ತು ವಿಶ್ವಾಮಿತ್ರರು ವೈರಿಗಳಾಗಿದ್ದರು. ಭರತರ ಬುಡಕಟ್ಟಿನ ರಾಜನಾಗಿದ್ದ ಸುಧಾಸನು ರಾಜಗುರುವಾಗಿದ್ದ ವಿಶ್ವಾಮಿತ್ರನಿಗಿಂತ ವಶಿಷ್ಠನನ್ನು ಹೆಚ್ಚು ಗೌರವದಿಂದ ಕಂಡುದುದೇ ಕಾರಣವಾಗಿ ವಿಶ್ವಾಮಿತ್ರನು ಸುಧಾಸನ ಆಸ್ಥಾನವನ್ನು ಬಿಟ್ಟು ಪುರುಗಳ ಪಕ್ಷವನ್ನು ಸೇರಿ ಸೇಡುತೀರಿಸಿಕೊಳ್ಳಲು ನಿರ್ಧರಿಸಿದುದು ಈ ಯುದ್ಧಕ್ಕೆ ಕಾರಣವಾಯಿತೆಂದು ಹೇಳಲಾಗಿದೆ. ವಿಶ್ವಾಮಿತ್ರನು ಭರತರ ಬಣದ ವಿರುದ್ಧ ಇತರ ಕೆಲವು ಬಣಗಳ ಒಕ್ಕೂಟವನ್ನು ರಚಿಸಿ ಯುದ್ಧ ಮಾಡಿದುದಾಗಿಯೂ, ಅಂತ್ಯದಲ್ಲಿ ಭರತರ ರಾಜನಾದ ಸುಧಾಸನು ಪರುಷ್ಣಿ ನದಿಯ ದಂಡೆಯ ಮೇಲೆ ನಡೆದ ರಕ್ತಪಾತಯುತವಾದ ಯುದ್ಧದಲ್ಲಿ ಒಕ್ಕೂಟದವರನ್ನು ಸೋಲಿಸಿದನೆಂದು ಹೇಳಲಾಗಿದೆ. ಈ ಯುದ್ಧದಲ್ಲಿ ಜಯಗಳಿಸಿದ ಸುಧಾಸ್ ದೊರೆಗೆ ಅಪಾರ ಐಶ್ವರ್ಯವು ಮತ್ತು ಪೊಗದಿಯು ದೊರೆತು. ಋಗ್ವೇದದ ಕಾಲದ ಭಾರತದಲ್ಲಿ ಅವನೊಬ್ಬ ಪ್ರಸಿದ್ಧ ದೊರೆಯಾಗಿ ಮಾರ್ಪಟ್ಟನು. ಈ ಯುದ್ಧದಲ್ಲಿ ಭರತರು ವಿಜಯಶಾಲಿಗಳಾಗಿ ಪುರುಗಳು ಸೋತರೂ ಅವರ ಮುಂದೆ ಒಂದುಗೂಡಿ ಒಂದು ಪ್ರಬಲ ಜನಾಂಗವಾದರು.

**ರಾಜಕೀಯ ವ್ಯವಸ್ಥೆ**

ಋಗ್ವೇದದ ಕಾಲದಲ್ಲಿ ರಾಜತ್ವವು ಆರ್ಯರ ರಾಜಕೀಯ ವ್ಯವಸ್ಥೆಯಾಗಿತ್ತು. ಪ್ರತಿಯೊಂದು ಬಣಕ್ಕೂ ಒಬ್ಬೊಬ್ಬ ರಾಜನಿದ್ದನು. ಆನುವಂಶಿಕ ರಾಜತ್ವವು ಸಾಮಾನ್ಯ ನಿಯಮವಾಗಿತ್ತು. ಆದರೆ ಕೆಲವು ಸಂದರ್ಭಗಳಲ್ಲಿ ರಾಜನನ್ನು ಚುನಾಯಿಸುವ ಪದ್ಧತಿಯೂ ಇವರಲ್ಲಿದ್ದಿತು. ಋಗ್ವೇದದಲ್ಲಿ ರಾಜನನ್ನು ಚುನಾಯಿಸಿದ ಉಲ್ಲೇಖಗಳು ಕಂಡುಬರದಿದ್ದರೂ ಅಥರ್ವವೇದದಲ್ಲಿ ರಾಜನನ್ನು ಚುನಾಯಿಸುತ್ತಿದ್ದರೆಂಬುದಕ್ಕೆ ಸ್ಪಷ್ಟವಾದ ಉಲ್ಲೇಖಗಳಿವೆ. ರಾಜನು ನಿರಂಕುಶ ಪ್ರಭುವಾಗಿರಲಿಲ್ಲ. ಅವನು ಜವಾಬ್ದಾರಿಯುತವಾದ ಅನೇಕ ಕರ್ತವ್ಯಗಳನ್ನು ನಿರ್ವಹಿಸಬೇಕಾಗಿತ್ತು. ಒಳ್ಳೆಯ ಸರ್ಕಾರವನ್ನು ಸ್ಥಾಪಿಸುವುದು ಪ್ರಜಾರಕ್ಷಣೆ ಮತ್ತು ಪರಿಪಾಲನೆ ಇವನ ಮುಖ್ಯ ಕರ್ತವ್ಯವಾಗಿದ್ದಿತು. ರಾಜನ ಸ್ಥಾನ ಮತ್ತು ಅವನು ಹೊಂದಿದ್ದ ಸಾಧನ ಸಂಪತ್ತುಗಳಿಂದ ಅವನು ಸಮಾಜದಲ್ಲಿ ಉನ್ನತ ಸ್ಥಾನವನ್ನು ಹೊಂದಿದ್ದನೆಂಬುದಾಗಿ ತಿಳಿದುಬರುತ್ತದೆ. ರಾಜನು ರಾಜ್ಯದ ಶ್ರೇಯಸ್ಸಿಗಾಗಿ ಯಜ್ಞಯಾಗಾದಿಗಳನ್ನು ಮತ್ತು ಧಾರ್ಮಿಕ ಆಚರಣೆಗಳನ್ನು ತನ್ನ ಪರವಾಗಿ ಮಾಡಲು ಅನೇಕ ಪುರೋಹಿತರನ್ನು ನೇಮಿಸಿಕೊಂಡಿದ್ದನು. ಪುರೋಹಿತನು ರಾಜನಿಗೆ ಸಲ್ಲಿಸುತ್ತಿದ್ದ ಸೇವೆಗೆ ಪ್ರತಿಯಾಗಿ ಬೆಲೆಬಾಳುವ ಹಸುಗಳು, ಕುದುರೆಗಳು ಮತ್ತು ಚಿನ್ನದ ಚೂರುಗಳನ್ನು ಉಡುಗೊರೆಯಾಗಿ ಪಡೆಯುತ್ತಿದ್ದನು.

ರಾಜನು ತನ್ನ ರಾಜ್ಯದ ಆಡಳಿತವನ್ನು ಅನೇಕ ಅಧಿಕಾರಿಗಳ ಸಹಾಯದಿಂದ ನಡೆಸುತ್ತಿದ್ದನು. ಇವರಲ್ಲಿ ಪುರೋಹಿತ ಅಥವಾ ರಾಜಗುರು ಹೆಚ್ಚು ಮುಖ್ಯನಾಗಿದ್ದನು. ಪುರೋಹಿತನು ಧಾರ್ಮಿಕ ವಿಷಯಗಳ ಮೇಲ್ವಿಚಾರಣೆ ನೋಡಿಕೊಳ್ಳುತ್ತಿದ್ದುದೇ ಅಲ್ಲದೆ ರಾಜನಿಗೆ ಆಡಳಿತದಲ್ಲಿ ಮುಖ್ಯ ಸಲಹೆಗಾರನೂ ಆಗಿದ್ದನು. ಇದಲ್ಲದೆ ಪುರೋಹಿತನು ರಾಜನೊಂದಿಗೆ ಯುದ್ಧಭೂಮಿಗೂ ಹೋಗಿ ರಾಜನು ವಿಜಯಗಳಿಸಲು ದೇವರುಗಳಿಗೆ ಪ್ರಾರ್ಥನೆ ಸಲ್ಲಿಸುತ್ತಿದ್ದನು. ಮೇಲಾಗಿ ಋಗ್ವೇದದ ಕಾಲದ ಆರ್ಯರ ರಾಜಕೀಯ

ವ್ಯವಸ್ಥೆಯಲ್ಲಿ ಪುರೋಹಿತನ ಅಧಿಕಾರ ಮತ್ತು ಹುದ್ದೆಯು ಬಹುಮುಖ್ಯವಾದುದಾಗಿದ್ದು ರಾಜನ ನಿರಂಕುಶಾಧಿಕಾರಕ್ಕೆ ದೊಡ್ಡ ತಡೆಯಾಗಿತ್ತು. ಪುರೋಹಿತನನ್ನು ಬಿಟ್ಟರೆ 'ಸೇನಾನಿ'ಯು ಮತ್ತೊಬ್ಬ ಪ್ರಮುಖ ಅಧಿಕಾರಿಯಾಗಿದ್ದನು. ಸೇನಾನಿಯು ರಾಜನ ಸೈನ್ಯದ ಮುಖ್ಯ ನಾಯಕನಾಗಿದ್ದು ಸಣ್ಣಪುಟ್ಟ ದಂಡಯಾತ್ರೆಗಳ ನಾಯಕತ್ವವನ್ನು ಇವನು ವಹಿಸುತ್ತಿದ್ದನು. ಯುದ್ಧ ರಹಿತ ಕಾಲದಲ್ಲಿ ಸೇನಾನಿಯು ಕೆಲವು ನಾಗರಿಕ ಕರ್ತವ್ಯಗಳನ್ನು ನಿರ್ವಹಿಸಬೇಕಾಗಿತ್ತು. ಗುಪ್ತಾಚಾರ ಪದ್ಧತಿಯು ಈ ಕಾಲದಲ್ಲಿ ಇದ್ದುದಾಗಿಯೂ ರಾಜನು ದೂತರ ಮೂಲಕ ರಾಜ್ಯದ ಆಗುಹೋಗುಗಳನ್ನು ತಿಳಿದು ಕೊಳ್ಳುತ್ತಿದ್ದನೆಂದೂ ಹೇಳಲಾಗಿದೆ.

**ಆಡಳಿತ ಹಂತಗಳು**

ಹಲವಾರು ಕುಟುಂಬಗಳಿಂದ ಕೂಡಿದ್ದ ಗ್ರಾಮವು ಆಡಳಿತ ವ್ಯವಸ್ಥೆಯ ಮೂಲಭೂತ ಹಂತವಾಗಿತ್ತು. ಕುಲ ಎಂದು ಕರೆಯಲ್ಪಡುತ್ತಿದ್ದ ಕುಟುಂಬವು ಸಾಮಾಜಿಕ ಹಂತವಷ್ಟೇ ಆಗಿರದೆ ಆಡಳಿತದ ಹಂತವೂ ಆಗಿದ್ದಿತು. 'ಗ್ರಾಮಣಿ' ಎಂಬ ಅಧಿಕಾರಿಯು ಗ್ರಾಮದ ಒಡೆಯನಾಗಿದ್ದನು. ಗ್ರಾಮದ ಮೇಲಿನ ಆಡಳಿತ ವಿಭಾಗವು ಹಲವಾರು ಗ್ರಾಮಗಳ ಸಮೂಹದಿಂದ ಕೂಡಿದ್ದ ವಿಷ್ ಅಥವ ರಾಷ್ಟ್ರವಾಗಿದ್ದಿತು. ಗ್ರಾಮ ಮತ್ತು ರಾಷ್ಟ್ರದ ಮೇಲಿನ ಆಡಳಿತ ವಿಭಾಗವಾಗಿದ್ದ 'ಜನ' ಎಂಬ ವಿಭಾಗದ ಸ್ವರೂಪವು ಸ್ಪಷ್ಟವಾಗಿ ತಿಳಿದುಬಂದಿಲ್ಲ. ಬಹಳ ಮಟ್ಟಿಗೆ ಗ್ರಾಮಗಳು ಸಂತುಷ್ಟವಾಗಿದ್ದವು. ಗ್ರಾಮಗಳಲ್ಲಿನ ನಿವಾಸಿಗಳು ರಕ್ಷಣೆಗಾಗಿ ಸುತ್ತಲೂ ರಕ್ಷಣಾ ಗೋಡೆಗಳನ್ನು ನಿರ್ಮಿಸಿಕೊಂಡಿದ್ದರು.

**ಸಭಾ ಮತ್ತು ಸಮಿತಿ**

ಋಗ್ವೇದದ ಕಾಲದಲ್ಲಿ ರಾಜನು ನಿರಂಕುಶಪ್ರಭುವಾಗಿ ವರ್ತಿಸಲು ಅವಕಾಶವಿರಲಿಲ್ಲ. ಅವನು ಆಡಳಿತ ನಿರ್ವಹಣೆಯಲ್ಲಿ ಪ್ರಜೆಗಳ ಅನುಮತಿಯನ್ನು ಪಡೆದುಕೊಳ್ಳಬೇಕಿತ್ತು. ಋಗ್ವೇದದಲ್ಲಿ 'ಸಭಾ' ಮತ್ತು 'ಸಮಿತಿ' ಎಂಬ ಪ್ರತಿನಿಧಿ ಸಭೆಗಳ ಉಲ್ಲೇಖ ಮಾಡಲ್ಪಟ್ಟಿದೆ. ಆದರೆ ಈ ಎರಡು ಸಭೆಗಳ ಸ್ವರೂಪ, ಕಾರ್ಯ ಮತ್ತು ಅಧಿಕಾರದ ವ್ಯಾಪ್ತಿಯ ಬಗ್ಗೆ ಸ್ಪಷ್ಟವಾಗಿ ಏನನ್ನೂ ವ್ಯಕ್ತಪಡಿಸಲಾಗಿಲ್ಲ. ಬಹುಷಃ ಸಭಾ ಎಂಬ ಸಭೆಯಲ್ಲಿ ಸಮಾಜದಲ್ಲಿನ ಶ್ರೀಮಂತರು ಮತ್ತು ಗಣ್ಯವ್ಯಕ್ತಿಗಳು ಸದಸ್ಯರಾಗಿದ್ದು ಅವರು ಆಗಾಗ್ಗೆ ಸಭೆಸೇರಿ ಆಡಳಿತ ವಿಷಯಗಳನ್ನು ಚರ್ಚಿಸಿ ರಾಜನಿಗೆ ಸಲಹೆ ನೀಡುತ್ತಿದ್ದರೆಂದು ಹೇಳಲಾಗಿದೆ. ಸಮಿತಿಯು ಗ್ರಾಮದ ಜನಸಾಮಾನ್ಯರ ಸಭೆಯಾಗಿತ್ತು. ರಾಜನು ಈ ಎರಡು ಸಭೆಗಳ ಅಭಿಪ್ರಾಯಗಳನ್ನು ಗಣನೆಗೆ ತೆಗೆದುಕೊಂಡು ಆಡಳಿತ ನಿರ್ವಹಿಸಬೇಕಾಗಿದ್ದಿತು. ಇದರಿಂದ ರಾಜನು ಸರ್ವಸ್ವತಂತ್ರನಾಗಿರಲಿಲ್ಲವೆಂದೂ ಮತ್ತು ಅವನ ನಿರಂಕುಶಾಧಿಕಾರಕ್ಕೆ ಅಡೆತಡೆಗಳಿದ್ದುದಾಗಿಯೂ ತಿಳಿದುಬರುತ್ತದೆ.

**ನ್ಯಾಯಾಡಳಿತ**

ನ್ಯಾಯಾಡಳಿತದ ಬಗ್ಗೆ ಸಾಕಷ್ಟು ವಿವರಗಳು ದೊರೆಯುವುದಿಲ್ಲವಾದರೂ ನ್ಯಾಯದಂಡ'ವನ್ನು ಹಿಡಿದಿದ್ದ ರಾಜನು ಪುರೋಹಿತ ಮತ್ತಿತರ ಪ್ರಮುಖ ಅಧಿಕಾರಿಗಳ

ನೆರವಿನಿಂದ ನ್ಯಾಯತೀರ್ಮಾನ ಮಾಡುತ್ತಿದ್ದನು. ದನಗಳನ್ನು ಕದಿಯುವುದು, ಕಳ್ಳತನ ಮಾಡುವುದು, ಮೋಸ, ವಂಚನೆ ಮತ್ತು ದರೋಡೆ ಮೊದಲಾದವುಗಳನ್ನು ಪ್ರಮುಖ ಅಪರಾಧಗಳೆಂದು ಪರಿಗಣಿಸಲಾಗಿತ್ತು. ಸಂಪ್ರದಾಯದ ಪ್ರಕಾರ ನಷ್ಟಕ್ಕೊಳಗಾದವರಿಗೆ ಅದಕ್ಕೆ ಸರಿಸಮವಾಗಿ ಹಣದ ಇಲ್ಲವೆ ಹಸುಗಳ ರೂಪದಲ್ಲಿ ಪರಿಹಾರ ನೀಡಲಾಗುತ್ತಿತ್ತು. ಕೊಲೆಪಾತಕಿಗಳಿಗೆ ಕ್ರೂರ ಶಿಕ್ಷೆಗಳನ್ನು ಕೊಡಲಾಗುತ್ತಿತ್ತು. ಅಪರಾಧವನ್ನು ಪತ್ತೆಹಚ್ಚಲು ದಿವ್ಯ ಪರೀಕ್ಷೆಯನ್ನೂ ನಡೆಸಲಾಗುತ್ತಿತ್ತು. ಕಾದ ಕಬ್ಬಿಣ ಇಲ್ಲವೆ ಬೆಂಕಿಯನ್ನು ಹಿಡಿಸುವುದು ನೀರನ್ನು ಮುಟ್ಟಿಸಿ ಪ್ರಮಾಣ ಮಾಡಿಸುವುದರ ಮೂಲಕ ಅಪರಾಧಗಳನ್ನು ಪತ್ತೆ ಹಚ್ಚಲಾಗುತ್ತಿತ್ತು.

**ಸಾಮಾಜಿಕ ಸ್ಥಿತಿ**

ಋಗ್ವೇದದ ಕಾಲದ ಆರ್ಯರು ಬುದ್ಧಿವಂತರೂ ಮತ್ತು ಮೇಧಾವಿಗಳು ಆಗಿದ್ದರು. ಸಾಮಾಜಿಕ ಭದ್ರತೆಗೆ ಶಿಸ್ತು ಸಂಮಯಗಳಿಂದ ಕೂಡಿದ ಕುಟುಂಬ ವ್ಯವಸ್ಥೆಯು ಬಹುಮುಖ್ಯವೆಂದು ಭಾವಿಸಿದ್ದರು. ಈ ಕಾಲದಲ್ಲಿನ ಆರ್ಯರ ಕುಟುಂಬವು ಪಿತೃ ಪ್ರಧಾನವಾದ ಕುಟುಂಬವಾಗಿದ್ದಿತು. ಕುಟುಂಬದ ಹಿರಿಯ ವ್ಯಕ್ತಿಯು ಅದಕ್ಕೆ ಒಡೆಯನಾಗಿರುತ್ತಿದ್ದನು. ಅವನಿಗೆ ಗೃಹಪತಿ ಎಂದು ಕರೆಯುತ್ತಿದ್ದರು. ಗೃಹಪತಿಯು ಕುಟುಂಬದ ಇತರ ಸದಸ್ಯರ ಮೇಲೆ ಪೂರ್ಣ ಹತೋಟಿಯನ್ನು ಹೊಂದಿರುತ್ತಿದ್ದನು. ಅವರನ್ನು ಪಾಲಿಸುವ ಮತ್ತು ಶಿಕ್ಷಿಸುವ ಜವಾಬ್ದಾರಿ ಅವನದಾಗಿದ್ದಿತು. ಕುಟುಂಬದ ಸದಸ್ಯರು ಅವನ ಆಜ್ಞೆಗಳನ್ನು ಕಟ್ಟುನಿಟ್ಟಾಗಿ ಪಾಲಿಸಬೇಕಾಗಿದ್ದಿತು. ಅವಿಭಕ್ತ ಕುಟುಂಬ ಪದ್ಧತಿಯು ಜಾರಿಯಲ್ಲಿತ್ತು. ಮನೆಯ ಯಜಮಾನನು ಸಾಮಾನ್ಯವಾಗಿ ಕುಟುಂಬದ ಸದಸ್ಯರು ಒಳ್ಳೆಯ ನಡವಳಿಕೆ ಮತ್ತು ಗುಣಗಳನ್ನು ಬೆಳೆಸಿಕೊಳ್ಳುವುದರಲ್ಲಿ ಹೆಚ್ಚಿನ ಎಚ್ಚರಿಕೆ ವಹಿಸುತ್ತಿದ್ದನು. ಕಾಲಕ್ಕೆ ಸರಿಯಾಗಿ ದೇವತೆಗಳಿಗೆ ಪ್ರಾರ್ಥನೆ ಸಲ್ಲಿಸುವುದು, ಹಿರಿಯರ ಬಗ್ಗೆ ಗೌರವದಿಂದ ನಡೆದುಕೊಳ್ಳುವುದು ಅಥಿತಿ ಸತ್ಕಾರ ಮೊದಲಾದ ಸದ್ಗುಣಗಳನ್ನು ಬೆಳೆಸಿಕೊಳ್ಳುವಂತೆ ನೋಡಿಕೊಳ್ಳಲಾಗುತ್ತಿತ್ತು.

**ವಿವಾಹ**

ಋಗ್ವೇದದ ಕಾಲದ ಆರ್ಯರ ಸಮಾಜದಲ್ಲಿ ವಿವಾಹ ಪದ್ಧತಿಯು ಚೆನ್ನಾಗಿ ಬೆಳೆದಿದ್ದಿತು. ವಿವಾಹವು ಒಂದು ಪವಿತ್ರ ಕಾರ್ಯವಾಗಿದ್ದು ಅದನ್ನು ಸುಲಭವಾಗಿ ಮುರಿದು ಹಾಕುವಂತಿರಲಿಲ್ಲ. ವಿವಾಹವಾಗದಿದ್ದವರು ಅಪವಿತ್ರರೆಂದು ವೇದಗಳ ಶ್ಲೋಕಗಳು ತಿಳಿಸುತ್ತವೆ. ಆದ್ದರಿಂದ ಪುರುಷರಾಗಲೀ ಅಥವ ಸ್ತ್ರೀಯಾಗಲೀ ವಿವಾಹವಾಗಬೇಕಾಗಿದ್ದುದು ಒಂದು ಪವಿತ್ರ ಕರ್ತವ್ಯವಾಗಿದ್ದಿತು. ಬಹು ಪತ್ನಿತ್ವವು ಆಚರಣೆಯಲ್ಲಿದ್ದರೂ ಏಕಪತ್ನಿತ್ವವು ಸರ್ವಸಾಮಾನ್ಯ ನಿಯಮವಾಗಿತ್ತು. ಗಂಡು ಮತ್ತು ಹೆಣ್ಣು ಮಕ್ಕಳಿಬ್ಬರೂ ತಮಗಿಷ್ಟಬಂದವರನ್ನು ಆರಿಸಿಕೊಳ್ಳಲು ಸ್ವಾತಂತ್ರ್ಯವಿದ್ದಿತು. ಹೆಣ್ಣುಮಕ್ಕಳು ಕುರೂಪಿಗಳಾಗಿದ್ದರೆ ಅಂತಹವರಿಗೆ ವರದಕ್ಷಿಣೆಯನ್ನು ಕೊಟ್ಟು ವಿವಾಹ ಮಾಡಲಾಗುತ್ತಿತ್ತು. ಋಗ್ವೇದದ ಕಾಲದ ಆರ್ಯರು ಗಂಡುಮಕ್ಕಳನ್ನು ಹೆಚ್ಚಾಗಿ ಅಪೇಕ್ಷಿಸುತ್ತಿದ್ದರು. ಆದಾಗ್ಯೂ, ಸ್ತ್ರೀಯರನ್ನು ಹೆಚ್ಚು ಗೌರವದಿಂದ ಕಾಣಲಾಗುತ್ತಿತ್ತು. ಗಂಡುಮಕ್ಕಳಂತೆ ಹೆಣ್ಣು ಮಕ್ಕಳಿಗೂ ವಿದ್ಯಾಭ್ಯಾಸವನ್ನು ಕೊಡಿಸಲಾಗಿತ್ತು ಮತ್ತು

ಅವರು ಮದುವೆಯ ವಯಸ್ಸಿಗೆ ಬಂದ ಮೇಲೆ ಅವರಿಗೆ ವಿವಾಹ ಮಾಡಲಾಗುತ್ತಿತ್ತು. ಬಾಲ್ಯ ವಿವಾಹವಾಗಲೀ ಅಥವ ಸಹಗಮನ ಪದ್ಧತಿಯಾಗಲೀ ರೂಢಿಯಲ್ಲಿರಲಿಲ್ಲ. ವಿಧವೆಯರು ಬಯಸಿದರೆ ಮರು ವಿವಾಹವಾಗಬಹುದಿತ್ತು. ಸ್ತ್ರೀಯರಿಗೆ ಆಸ್ತಿಯ ಮೇಲೆ ಹಕ್ಕಿರಲಿಲ್ಲ. ಈ ಕಾಲದಲ್ಲಿ ಸ್ತ್ರೀಯರಲ್ಲೂ ಕೆಲವು ಘನ ವಿದ್ವಾಂಸರಿದ್ದುದಾಗಿ ಋಗ್ವೇದದ ಶ್ಲೋಕಗಳಿಂದ ತಿಳಿದುಬರುತ್ತದೆ. ಲೋಪ ಮುದ್ರ, ವಿಶ್ವಾವರ, ನಿವಾವಾರಿ ಮತ್ತು ಘೋಷ ಎಂಬ ಸ್ತ್ರೀಯರು ಪ್ರಸಿದ್ಧ ವಿದ್ವಾಂಸೆಯರಾಗಿದ್ದರು. ಸ್ತ್ರೀಯರು ಧಾರ್ಮಿಕ ಮತ್ತಿತರ ಸಮಾರಂಭಗಳಲ್ಲಿ ಸ್ವತಂತ್ರವಾಗಿ ಭಾಗವಹಿಸಲು ಅವಕಾಶವಿದ್ದಿತು. ಸ್ತ್ರೀಯರ ನೈತಿಕ ಮಟ್ಟವು ಬಹಳ ಉನ್ನತ ಮಟ್ಟದಲ್ಲಿತ್ತು.

**ಆಹಾರ ಮತ್ತು ಉಡಿಗೆತೊಡಿಗೆಗಳು**

ಋಗ್ವೇದದ ಕಾಲದ ಆರ್ಯರ ಉಡುಗೆತೊಡಿಗೆಗಳು ಸರಳವಾಗಿದ್ದವು. ಕೆಳಹೊದಿಕೆ ಮತ್ತು ಮೇಲು ಹೊದಿಕೆಗಳು ಅವರ ಸಾಮಾನ್ಯ ಉಡುಪಾಗಿದ್ದವು. ಹತ್ತಿ ಮತ್ತು ಉಣ್ಣೆ ಬಟ್ಟೆಗಳನ್ನು ಮಾತ್ರವಲ್ಲದೆ ಜಿಂಕೆಯ ಚರ್ಮವನ್ನು ಉಡುಪಾಗಿ ಉಪಯೋಗಿಸುತ್ತಿದ್ದರು. ಚಿನ್ನ, ಬೆಳ್ಳಿ, ತಾಮ್ರ, ಹವಳಗಳು ಮತ್ತು ಮಣಿಗಳಿಂದ ಮಾಡಿದ್ದ ಬಗೆಬಗೆಯ ಆಭರಣಗಳಿಂದ ಅಲಂಕರಿಸಿಕೊಳ್ಳುತ್ತಿದ್ದರು. ಗೋಧಿ, ಬಾರ್ಲಿ, ಅಕ್ಕಿ, ತರಕಾರಿಗಳು ಹಾಲು ಮತ್ತು ಹಾಲಿನಿಂದ ತಯಾರಿಸಿದ ಪದಾರ್ಥಗಳು ಮಾಂಸ, ಮೀನು ಮೊಟ್ಟೆ ಮೊದಲಾದವುಗಳನ್ನು ಆಹಾರದಲ್ಲಿ ಉಪಯೋಗಿಸುತ್ತಿದ್ದರು. ಸೋಮ ಮತ್ತು ಸುರಾ ಎಂಬ ಪಾನೀಯಗಳನ್ನು ಸೇವಿಸುತ್ತಿದ್ದರು. ಸಂಗೀತ ಮತ್ತು ನೃತ್ಯ ಇವರ ಮನರಂಜನೆಗಳಾಗಿದ್ದವು. ವೀಣೆ, ಕೊಳಲು, ಮತ್ತಿತರ ವಾದ್ಯದ ಉಪಕರಣಗಳನ್ನು ಸಂಗೀತದಲ್ಲಿ ಉಪಯೋಗಿಸುತ್ತಿದ್ದರು. ಹಬ್ಬ, ಜಾತ್ರೆ ಮತ್ತು ಉತ್ಸವಗಳನ್ನು ಏರ್ಪಡಿಸುತ್ತಿದ್ದರು. ಬೇಟೆಯಾಡುವುದು, ರಥಗಳ ಜೂಜು, ಪಗಡೆಯಾಡುವುದು ಮೊದಲಾದವುಗಳು ಇವರ ವಿನೋದಗಳಾಗಿದ್ದವು.

**ಜಾತಿ ವ್ಯವಸ್ಥೆ**

ಋಗ್ವೇದದ ಕಾಲದ ಆರ್ಯರ ಸಮಾಜದಲ್ಲಿ ಜಾತಿ ಪದ್ಧತಿಯು ಎಷ್ಟರ ಮಟ್ಟಿಗೆ ಬೆಳೆದಿದ್ದಿತೆಂಬುದು ವಿದ್ವಾಂಸರಲ್ಲಿ ಒಂದು ಚರ್ಚಾಸ್ಪದ ವಿಷಯವಾಗಿ ಉಳಿದಿದೆ. ಋಗ್ವೇದದ ಪುರುಷ ಸೂಕ್ತದ ಪ್ರಕಾರ ಪುರುಷನ ತಲೆಯಿಂದ ಬ್ರಾಹ್ಮಣರೂ ಎದೆ ಮತ್ತು ತೋಳುಗಳಿಂದ ಕ್ಷತ್ರಿಯರೂ, ತೊಡೆಯಿಂದ ವೈಶ್ಯರೂ ಮತ್ತು ಪಾದಗಳಿಂದ ಶೂದ್ರರೂ ಸೃಷ್ಟಿಯಾದರೆಂದು ತಿಳಿದು ಬರುತ್ತದೆ. ಋಗ್ವೇದದ ಕಾಲದಲ್ಲಿ ಜಾತಿಪದ್ಧತಿಯು ಕೊನೆಯ ವೇದಗಳ ಕಾಲದಲ್ಲಿ ಕಂಡುಬಂದಂತೆ ಕಷ್ಟವಾಗಿರಲಿಲ್ಲ. ಋಗ್ವೇದದಲ್ಲಿ ನಮೂದಿತವಾಗಿರುವ ವರ್ಣ ಎಂಬ ಪದವು ಕೊನೆಯ ವೇದಗಳ ಕಾಲದಲ್ಲಿ ಪ್ರಸ್ತಾಪಿಸಲಾಗಿರುವ ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯ ಎಂಬ ಮೂರು ಉನ್ನತ ಜಾತಿಗಳನ್ನು ಸೂಚಿಸುತ್ತದೆ. ಈ ವಿಭಜನೆಯು ರೂಪವಂತರಾದ ಆರ್ಯರಿಗೂ ಮತ್ತು ಕಪ್ಪು ಬಣ್ಣದವರಾದ ದಸ್ಯು ಅಥವಾ ಶೂದ್ರರಿಗೂ ಇದ್ದ ವ್ಯತ್ಯಾಸವನ್ನು ತೋರಿಸಲು ಮಾಡಿಕೊಂಡಿದುದಾಗಿರುತ್ತದೆ. ಕೊನೆಯ ವೇದಗಳ ಕಾಲದಲ್ಲಿನ ಕಟ್ಟುನಿಟ್ಟಾದ ಜಾತಿ ಪದ್ಧತಿಯ ವ್ಯವಸ್ಥೆಯು ಋಗ್ವೇದದಲ್ಲಿ ಪ್ರಸ್ತಾಪಿತವಾಗಿಲ್ಲ. ಅಂತರ್ಜಾತೀಯ ವಿವಾಹಗಳು ಮತ್ತು ವೃತ್ತಿ ಬದಲಾವಣೆಯು ಬಳಕೆಯಲ್ಲಿದ್ದವು.

ಋಗ್ವೇದದ ಶ್ಲೋಕದ ಕರ್ತೃವೊಬ್ಬನು 'ನಾನೊಬ್ಬ ಕವಿ, ನನ್ನ ತಂದೆ ಒಬ್ಬ ವೈದ್ಯ ಮತ್ತು ನನ್ನ ತಾಯಿ ಧಾನ್ಯ ಕುಟ್ಟುವವಳು' ಎಂದು ಹೇಳುತ್ತಾನೆ. ಆದ್ದರಿಂದ ವೃತ್ತಿಯನ್ನು ಕೈಗೊಳ್ಳುವುದರಲ್ಲಿ ಯಾವುದೇ ರೀತಿಯ ಕಟ್ಟುನಿಟ್ಟಾದ ಜಾತಿಯ ನಿಯಮಗಳಿರಲಿಲ್ಲವೆಂದು ತಿಳಿದು ಬರುತ್ತದೆ.

ಆರ್ಯರು ಮೂಲತಃ ತಮ್ಮ ಸಮಾಜವನ್ನು ಪುರೋಹಿತರು ಆಡಳಿತ ನಡೆಸುವವರು ಮತ್ತು ಜನಸಾಮಾನ್ಯರು ಎಂದು ವರ್ಗೀಕರಿಸಿಕೊಂಡಿದ್ದುದು ತರುವಾಯದಲ್ಲಿ ಕ್ಲಿಷ್ಟತೆಯಿಂದ ಕೂಡಿದ ಜಾತಿಪದ್ಧತಿಯ ಬೆಳವಣಿಗೆಗೆ ಕಾರಣವಾಯಿತು. ಉನ್ನತ ಕುಲೀನರೆಂದು ಭಾವಿಸಿಕೊಂಡಿದ್ದ ಆರ್ಯರು ಕಪ್ಪುಬಣ್ಣದವರಾದ ದಸ್ಯುಗಳೊಂದಿಗೆ ಬೆರೆಯಲು ಇಚ್ಛಿಸದೆ ಬಹು ತೊಡಕಿನಿಂದ ಕೂಡಿದ ಸಾಮಾಜಿಕ ಸಮಸ್ಯೆಯನ್ನು ಎದುರಿಸಬೇಕಾಗಿ ಬಂದು ದಸ್ಯುಗಳಿಗೆ ಶೂದ್ರರೆಂಬ ಹೆಸರನ್ನಿಟ್ಟು ಸಾಮಾಜಿಕ ವ್ಯವಸ್ಥೆಯಲ್ಲಿ ಕಟ್ಟಕಡೆಯ ಸ್ಥಾನವನ್ನು ಕೊಟ್ಟರು. ಈ ಒಂದು ವ್ಯವಸ್ಥೆಯನ್ನು ಸಮರ್ಥಿಸಿಕೊಳ್ಳಲು ಅದೊಂದು ದೈವಿಕ ನಿಯಮವೆಂದು ಹೇಳತೊಡಗಿದರು. ಋಗ್ವೇದದ ಕಾಲದಲ್ಲಿ ಬ್ರಾಹ್ಮಣರು ಜ್ಞಾನಾರ್ಜನೆ ಮತ್ತು ಪೌರೋಹಿತ್ಯ ಕೆಲಸಗಳನ್ನೂ, ಕ್ಷತ್ರಿಯರು ಯುದ್ಧ ಮಾಡುವುದನ್ನೂ ವೈಶ್ಯರು ವ್ಯವಸಾಯ ವ್ಯಾಪಾರ ಮತ್ತು ಕೈಗಾರಿಕೆಗಳನ್ನೂ ಉಳಿದವರು ಸೇವಾವೃತ್ತಿಯನ್ನು ತಮ್ಮ ತಮ್ಮ ವೃತ್ತಿಗಳನ್ನಾಗಿ ಮಾಡಿಕೊಂಡರು. ಆದಾಗ್ಯೂ ಈ ರೀತಿಯ ಮುಮ್ಮುಖ ಸಾಮಾಜಿಕ ವ್ಯವಸ್ಥೆಯು ಆನುವಂಶಿಕವಾಗಿರಲಿಲ್ಲ ಮತ್ತು ಅದಕ್ಕೆ ಸಮಾಜದ ಇಲ್ಲವೆ ಕಾನೂನಿನ ಯಾವುದೇ ರೀತಿಯ ನಿಮಯಗಳೂ ಇರಲಿಲ್ಲ. ಉ[illegible] ಅಗಸ್ತ್ಯ ಮಹರ್ಷಿಯು ವಿದರ್ಭರಾಜ್ಯದ ರಾಜನ ಮಗಳಾದ ಲೋಪ ಮುದ್ರೆಯನ್ನೂ, ಹಾಗೆಯೇ ಯಯಾತಿ ದೊರೆಯು ಉಷಾಸನ-ಶುಕ್ರ ಮಹರ್ಷಿಯ ಮಗಳಾಗಿದ್ದ ದೇವಯಾನಿಯನ್ನು ವಿವಾಹವಾಗಿದ್ದರು. ಋಗ್ವೇದದ ಕಾಲದಲ್ಲಿನ ವರ್ಣವ್ಯವಸ್ಥೆಯು ಒಂದು ಸಂಸ್ಥೆಯಾಗಿದ್ದು ಸಮಾಜದಲ್ಲಿ ಅನ್ಯೋನ್ಯತೆ ಮತ್ತು ಸಾಂಘಿಕತೆಯನ್ನು ಏರ್ಪಡಿಸಿದ್ದಿತು. ಮಧ್ಯಕಾಲೀನ ಮತ್ತು ಆಧುನಿಕ ಕಾಲದಲ್ಲಿ ಹಿಂದೂ ಸಮಾಜದಲ್ಲಿ ಕಂಡುಬಂದಂತೆ ಅಂತರ್ಜಾತೀಯ ಘರ್ಷಣೆಗಳಾಗಲೀ ಇಲ್ಲವೆ ದ್ವೇಷಾಸೂಯೆಗಳಾಗಲೀ ಈ ಕಾಲದಲ್ಲಿರಲಿಲ್ಲ. ಇದರಿಂದ ಋಗ್ವೇದದ ಕಾಲದಲ್ಲಿ ಸಮಾಜವನ್ನು ಜಾತಿಯ ಆಧಾರದ ಮೇಲೆ ಕಟ್ಟುನಿಟ್ಟಾಗಿ ನಾಲ್ಕು ಭಾಗವಾಗಿ ಮಾಡಲಾಗಿದ್ದಿತ್ತೆಂದು ಹೇಳಲು ಸಾಧ್ಯವಿಲ್ಲ. ಸಾಮಾಜಿಕ ಹೊಂದಾಣಿಕೆ ಮತ್ತು ಅನುಕೂಲಕ್ಕಾಗಿ ಸಮಾಜವನ್ನು ವಿಂಗಡಿಸಿಕೊಂಡಿದ್ದುದು ದುರದೃಷ್ಟವಶಾತ್ ಮುಂದೆ ಜಾತಿಪದ್ಧತಿಯಾಗಿ ಬೆಳೆದು ಹಿಂದೂ ಸಮಾಜದಲ್ಲಿ ಒಂದು ಕಳಂಕವಾಗಿ ಮಾರ್ಪಟ್ಟಿತು.

**ಆರ್ಥಿಕ ಸ್ಥಿತಿ; ವ್ಯವಸಾಯ ಮತ್ತು ಪಶುಪಾಲನೆ**

ವ್ಯವಸಾಯವು ಆರ್ಯರ ಆರ್ಥಿಕ ಜೀವನದ ತಳಹದಿಯಾಗಿತ್ತು. ಈ ಆರ್ಥಿಕ ವ್ಯವಸ್ಥೆಯಲ್ಲಿ ಹಳ್ಳಿಗಳು ಪ್ರಧಾನಪಾತ್ರವಹಿಸಿದ್ದವು. ವ್ಯವಸಾಯಕ್ಕೆ ಉಪಯೋಗಿಸುತ್ತಿದ್ದ ಭೂಮಿಯನ್ನು 'ಕ್ಷೇತ್ರ'ವೆಂದು ಕರೆಯುತ್ತಿದ್ದರು. ಇವರು ಭತ್ತ, ಗೋಧಿ ಬಾರ್ಲಿಯನ್ನು ಹೆಚ್ಚಾಗಿ ಬೆಳೆಯುತ್ತಿದ್ದರು. ಭೂಮಿಯನ್ನು ಉಳುವುದಕ್ಕೆ ಎತ್ತು ಮತ್ತು ಕುದುರೆಗಳನ್ನು ಉಪಯೋಗಿಸುತ್ತಿದ್ದರು. ನೀರಾವರಿ ವ್ಯವಸಾಯದ

ಪರಿಚಯವಿದ್ದಿತು ಮತ್ತು ಆದಕ್ಕಾಗಿ ಬಾವಿ, ಕರೆ ಮತ್ತು ಕಾಲುವೆಗಳನ್ನು ನಿರ್ಮಿಸಿಕೊಂಡಿದ್ದರು. ಗೊಬ್ಬರವನ್ನು ಉಪಯೋಗಿಸಿ ಹೆಚ್ಚು ಫಸಲನ್ನು ತೆಗೆಯುತ್ತಿದ್ದರು. ಉಳುವುದು, ಬಿತ್ತುವುದು, ಕೊಯ್ಯುವುದು ಮತ್ತು ಒಪ್ಪಮಾಡುವುದೇ ಮೊದಲಾದ ವ್ಯವಸಾಯದ ಕಾರ್ಯಾಚರಣೆಗಳ ಬಗ್ಗೆ ಋಗ್ವೇದದಲ್ಲಿ ವಿವರಗಳಿವೆ.

ಆರ್ಯರ ಆರ್ಥಿಕ ಜೀವನದಲ್ಲಿ ಪಶುಪಾಲನೆಯೂ ವ್ಯವಸಾಯದಷ್ಟೇ ಪ್ರಧಾನವಾಗಿದ್ದಿತು. ದನಕರುಗಳಿಲ್ಲದೆ ವ್ಯವಸಾಯವು ಸಾಧ್ಯವಿಲ್ಲದಿದ್ದುದರಿಂದ ಅವರು ದನಕರುಗಳನ್ನು ಹೆಚ್ಚು ಪ್ರೀತಿಯಿಂದ ಸಾಕುತ್ತಿದ್ದರು. ಹಸುವನ್ನು ಪವಿತ್ರವೆಂದು ಪರಿಗಣಿಸಿ ಅದನ್ನು ಪೂಜಿಸುತ್ತಿದ್ದರು. ದನಕರುಗಳು ಮೇಯುತ್ತಿದ್ದ ಸ್ಥಳಕ್ಕೆ 'ಗೋಷ' ಎಂತಲೂ ಮತ್ತು ಅವುಗಳನ್ನು ಮೇಯಿಸುತ್ತಿದ್ದವನಿಗೆ 'ಗೋಪಾಲ'ನೆಂದೂ ಕರೆಯುತ್ತಿದ್ದರು. ಈ ಕಾಲದಲ್ಲಿ ಒಬ್ಬ ವ್ಯಕ್ತಿಯ ಶ್ರೀಮಂತಿಕೆಯನ್ನು ಅವನು ಹೊಂದಿರುತ್ತಿದ್ದ ದನಕರುಗಳ ಸಂಖ್ಯೆಯ ಮೇಲೆ ನಿರ್ಧರಿಸುತ್ತಿದ್ದರು. ದನಕರುಗಳ ಒಡೆತನದ ಗುರುತಿಗಾಗಿ ಅವುಗಳ ಕಿವಿಗಳ ಮೇಲೆ ಗುರುತನ್ನು ಹಾಕುತ್ತಿದ್ದರು. ಕುದುರೆಗಳು, ಕತ್ತೆಗಳು, ಕುರಿ, ಮೇಕೆ ಮತ್ತು ನಾಯಿ ಇತರ ಸಾಕುಪ್ರಾಣಿಗಳಾಗಿದ್ದವು.

ಆರ್ಯರು ಯುದ್ಧ ಕಲೆಯಲ್ಲಿ ಮುಂದುವರಿದಿದ್ದರು. ಅವರು ತಮ್ಮ ಶತ್ರುಗಳ ಪ್ರದೇಶದ ಮೇಲೆ ಧಾಳಿಗಳನ್ನು ಮಾಡಿ ಅವರ ದನಕರುಗಳನ್ನು ವಶಪಡಿಸಿಕೊಳ್ಳುತ್ತಿದ್ದರು. ಬಿಲ್ಲು, ಬಾಣ, ಕವಣೆ, ಈಟಿ, ಭರ್ಜಿ, ಕುದುರೆಗಳನ್ನು ಮತ್ತು ರಥಗಳನ್ನು ಯುದ್ಧದಲ್ಲಿ ಉಪಯೋಗಿಸುತ್ತಿದ್ದರು.

**ಕೈಗಾರಿಕೆಗಳು**

ಋಗ್ವೇದದ ಕಾಲದ ಆರ್ಯರಿಗೆ ಅನೇಕ ರೀತಿಯ ಕೈಗಾರಿಕೆಗಳ ಪರಿಚಯ ವಿದ್ದಿತು. ನೂಲುವುದು ನೇಯುವುದು ಗೊತ್ತಿದ್ದಿತು. ಹತ್ತಿ ಉಣ್ಣೆ ಮತ್ತು ನಾರಿನ ಬಟ್ಟೆಗಳನ್ನು ತಯಾರಿಸುತ್ತಿದ್ದರು. ಗೃಹೋಪಕರಣಗಳು, ಗಾಡಿಗಳು ಮತ್ತು ರಥಗಳನ್ನು ಮತ್ತು ದೋಣಿಗಳನ್ನು ನಿರ್ಮಿಸಿಕೊಡುತ್ತಿದ್ದ ಬಡಗಿಗಳಿಗೆ ಸಮಾಜದಲ್ಲಿ ಹೆಚ್ಚಿನ ಗೌರವವಿದ್ದಿತು. ಅಂತೆಯೆ, ಲೋಹಗಳಿಂದ ಪಾತ್ರೆಗಳನ್ನು ನೇಗಿಲು ಕುಳಗಳನ್ನು ಹಾಗೂ ಕತ್ತಿ ಮೊದಲಾದ ಆಯುಧಗಳನ್ನು ಕಮ್ಮಾರರು ಮಾಡಿಕೊಡುತ್ತಿದರು. ಅಕ್ಕಸಾಲಿಗರು ಚಿನ್ನ ಮತ್ತು ಬೆಳ್ಳಿಯಿಂದ ವಿವಿಧ ರೀತಿಯ ಆಭರಣಗಳನ್ನು ತಯಾರಿಸುತ್ತಿದ್ದರು. ಚರ್ಮ ಹದಮಾಡುವುದು ಅವರ ಮತ್ತೊಂದು ಮುಖ್ಯ ಕೈಗಾರಿಕೆಯಾಗಿತ್ತು. ಚರ್ಮದಿಂದ ಹಗ್ಗ, ಕಡಿವಾಣ, ಚೀಲ ಮೊದಲಾದ ವಸ್ತುಗಳನ್ನು ತಯಾರಿಸುತ್ತಿದ್ದರು. ಕುಂಬಾರರು, ಮೀನುಗಾರರು, ಬಣ್ಣಹಾಕುವವರು, ಕ್ಷೌರಿಕರು ಮೊದಲಾದವರು ಇತರ ಕಸುಬುದಾರರಾಗಿದ್ದರು.

**ವ್ಯಾಪಾರ**

ಆರ್ಯರು ವ್ಯಾಪಾರ ವಾಣಿಜ್ಯಗಳಲ್ಲೂ ಮುಂದುವರಿದಿದ್ದರು. ವ್ಯಾಪಾರವೂ ಆಂತರಿಕವಾಗಿ ಹೆಚ್ಚಾಗಿ ನಡೆಯುತ್ತಿತ್ತು. ವ್ಯಾಪಾರವು ಬಹಳ ಮಟ್ಟಿಗೆ ಪದಾರ್ಥವಿನಿಮಯದ ಮೂಲಕ ನಡೆದರೂ ವ್ಯಾಪಾರದಲ್ಲಿ 'ನಿಷ್ಕ' ಎಂದು ಕರೆಯಲಾದ ಚಿನ್ನದ ಚೂರನ್ನು ಉಪಯೋಗಿಸುತ್ತಿದ್ದರು. ವ್ಯಾಪಾರವು 'ಫಣಿ'ಗಳೆಂದು

ಕರೆಯಲ್ಪಡುತ್ತಿದ್ದ ವರ್ತಕರ ಕೈಯಲ್ಲಿದ್ದಿತು. ಋಗ್ವೇದದ ಕಾಲದ ಆರ್ಯರು ಹೊರದೇಶಗಳೊಂದಿಗೆ ವ್ಯಾಪಾರ ಸಂಪರ್ಕವನ್ನಿಟ್ಟುಕೊಂಡಿದ್ದರೋ ಇಲ್ಲವೊ ಎಂಬುದು ಸ್ಪಷ್ಟವಾಗಿ ತಿಳಿದುಬಂದಿಲ್ಲ.

**ಧರ್ಮ ಮತ್ತು ದಾರ್ಶನಿಕತೆ**

ಆರ್ಯರ ಧಾರ್ಮಿಕ ನಂಬಿಕೆಗಳು ಮತ್ತು ಆಚರಣೆಗಳ ಬಗ್ಗೆ ತಿಳಿಯಲು ಅವರ ಧಾರ್ಮಿಕ ಗ್ರಂಥವಾಗಿರುವ ಋಗ್ವೇದವು ಅಧಿಕೃತ ಆಧಾರವಾಗಿದೆ. ಬಹುದೇವತಾರಾಧನೆಯು ರೂಢಿಯಲ್ಲಿದ್ದು ಅವರು ಒಟ್ಟು 33 ದೇವರುಗಳನ್ನು ಪೂಜಿಸುತ್ತಿದ್ದರೆಂದು ಋಗ್ವೇದವು ತಿಳಿಸುತ್ತದೆ. ಅವುಗಳೆಂದರೆ ಇಂದ್ರ, ಅಗ್ನಿ, ಸೋಮ, ವಾಯು, ಸೂರ್ಯ, ಮಿತ್ರ, ಮರುಣ, ವಿಷ್ಣು, ಉಷ, ಅಶ್ವಿನಿದೇವತೆಗಳು ಪೂಷಾ, ರುದ್ರ ಪ್ರಜಾಪತಿ, ಯಮ, ಪಾರ್ಜನ್ಯ, ಆರ್ಯಮ, ಮರುತ್ತುಗಳು ಬೃಹಸ್ಪತಿ, ಸರಸ್ವತಿ, ಆದಿತಿ, ಆದಿತ್ಯ ಋಭು, ಇಳಾ, ತ್ವಷ್ಟಾ, ಸವಿತಾ, ಇಂದ್ರಾಣಿ. ವರುಣಾಸಿ, ಆಗ್ನೇಯ, ವಸುಗಳು, ಮಾತರಿಶ್ವ, ವೈಶ್ವಾನರ ಮತ್ತು ಭಾರತಿ. ಆರ್ಯರು ಪ್ರಕೃತಿಯ ಆರಾಧಕರಾಗಿದ್ದು ಪ್ರಕೃತಿಯ ವಿವಿಧ ಶಕ್ತಿಗಳನ್ನು ದೇವರೆಂದು ಭಾವಿಸಿ ಪೂಜಿಸುತ್ತಿದ್ದರು. ಇವುಗಳಲ್ಲಿ ಇಂದ್ರ, ವರಣ, ಅಗ್ನಿ, ವಾಯು, ಸೂರ್ಯ, ಪೃಥ್ವಿ, ಉಷಸ್, ಸಾವಿತ್ರಿ, ಪಾರ್ಜನ್ಯ, ಬೃಹಸ್ಪತಿ ಮತ್ತು ಅಶ್ವಿನಿದೇವತೆಗಳು ಮುಖ್ಯರಾಗಿದ್ದರು. ಆರ್ಯರು ತಮ್ಮ ದೇವರುಗಳನ್ನು ಅವುಗಳು ವಾಸಿಸುವ ಸ್ಥಳಗಳಿಗನುಗುಣವಾಗಿ ಮೂರು ಭಾಗವಾಗಿ ವಿಂಗಡಿಸಿ ಕೊಂಡಿದ್ದರು. ವರುಣ, ಉಷಸ್, ಸೂರ್ಯ ಮತ್ತು ಅಶ್ವಿನಿದೇವತೆಗಳು ಸ್ವರ್ಗದಲ್ಲೂ ಇಂದ್ರ, ವಾಯು ಮತ್ತು ಮಾರುತ ಮೊದಲಾದ ದೇವತೆಗಳು ವಾಯುಮಂಡಲದಲ್ಲೂ. ಪೃಥ್ವಿ, ನದಿ, ಮತ್ತು ಸೋಮ ದೇವತೆಗಳೂ ಭೂಮಂಡಲದ ಮೇಲೂ ವಾಸಿಸುತ್ತಾರೆಂದು ನಂಬಿದ್ದರು. ಅಗ್ನಿಯು ಮೂರು ಮಂಡಲದಲ್ಲೂ ಇರುತ್ತಿದ್ದನು. ದೇವಾನು ದೇವತೆಗಳೂ ಸಹ ಮನುಷ್ಯರಂತೆ ವರ್ತಿಸುತ್ತವೆಯೆಂದು ನಂಬಿದ್ದರು. ಅವುಗಳೂ ಕೂಡ ಆಹಾರ ಪದಾರ್ಥಗಳನ್ನು ಸೇವಿಸುವುದಾಗಿಯೂ ಮತ್ತು ಮನುಷ್ಯರಂತೆ ಕೋಪ ತಾಪಗಳನ್ನು ಸಂತೋಷವನ್ನು ವ್ಯಕ್ತಪಡಿಸುತ್ತವೆಯೆಂದೂ ಭಾವಿಸಿದ್ದರು. ಇದರಿಂದಾಗಿ ಈ ದೇವರುಗಳನ್ನು ಸಂತೃಪ್ತಗೊಳಿಸಲು ಆರ್ಯರು ಸದಾ ಪ್ರಯತ್ನಿಸುತ್ತಿದ್ದರು.

ಆರ್ಯರ ಪೂಜಾವಿಧಾನಗಳು ಬಹಳ ಸರಳವಾಗಿದ್ದವು. ಅವರ ಪೂಜಾವಿಧಾನದಲ್ಲಿ ಪ್ರಾರ್ಥನೆ ಮತ್ತು ಯಜ್ಞಯಾಗಾದಿಗಳು ಬಹುಮುಖ್ಯ ಪಾತ್ರವಹಿಸಿದ್ದವು. ಆರ್ಯರು ದೇವರುಗಳನ್ನು ಗುಣಗಾನ ಮಾಡಿ ಹಲವಾರು ಸ್ತೋತ್ರಗಳನ್ನು ರಚಿಸಿದ್ದರು. ಸಕಾಲದಲ್ಲಿ ಮಳೆ ಬೀಳುವುದಕ್ಕೂ, ಒಳ್ಳೆಯ ಬೆಳೆ ಬೆಳೆಯುವುದಕ್ಕೂ, ಯುದ್ಧದಲ್ಲಿ ಜಯಗಳಿಸುವುದಕ್ಕೂ, ಮತ್ತು ದನಕರುಗಳ ಸಂಪತ್ತು ಹೆಚ್ಚುವುದಕ್ಕೂ ಮತ್ತು ಒಳ್ಳೆಯ ಗಂಡು ಸಂತಾನಕ್ಕೂ ಅವರು ದೇವರುಗಳಿಗೆ ಪ್ರಾರ್ಥನೆ ಸಲ್ಲಿಸುತ್ತಿದ್ದರು. ತಮ್ಮ ಇಷ್ಟಾರ್ಥಸಿದ್ಧಿಗಾಗಿ ದೇವರುಗಳನ್ನು ಸಂತುಷ್ಟಗೊಳಿಸಲು, ನಿತ್ಯ ಬಳಕೆಯ ಆಹಾರ ಪದಾರ್ಥಗಳಾದ ಹಾಲು, ತುಪ್ಪ, ಜೇನು, ಮಾಂಸದಿಂದ ಮಾಡಿದ ಭಕ್ಷ್ಯಗಳನ್ನು ಸೋಮರಸವನ್ನೂ ದೇವರುಗಳಿಗೆ ಅರ್ಪಿಸುತ್ತಿದ್ದರು. ಆರ್ಯರ ಈ ಪೂಜಾವಿಧಾನದಲ್ಲಿ ದಾರ್ಶನಿಕತೆ ಮತ್ತು

ಆಧ್ಯಾತ್ಮಿಕತೆಗಿಂತ ಹೆಚ್ಚಾಗಿ ಪ್ರಾಪಂಚಿಕ ಸೌಖ್ಯ ಜೀವನ ನಡೆಸುವುದು ಪ್ರಧಾನವಾಗಿತ್ತು. ಪ್ರಾರ್ಥನೆ ಮತ್ತು ಯಜ್ಞ ಯಾಗಾದಿಗಳನ್ನು ಮಾಡುವುದರಲ್ಲಿ ಹಲವಾರು ಪುರೋಹಿತರ ಸಹಾಯವುಕೆಲವು ಸಂದರ್ಭಗಳಲ್ಲಿ ಅತ್ಯವಶ್ಯಕವಾಗಿತ್ತು. ಸಮಾಜದಲ್ಲಿನ ಶ್ರೀಮಂತರು ವ್ಯಾಪಕವಾಗಿ ಪೂಜೆ ಪುರಸ್ಕಾರಗಳನ್ನು ಮತ್ತು ಯಜ್ಞಯಾಗಾದಿಗಳನ್ನು ಮಾಡುತ್ತಿದ್ದರು. ಪ್ರಾಣಿಗಳನ್ನು ಬಲಿಕೊಡುತ್ತಿದ್ದರು. ಸೋಮಯಜ್ಞಕ್ಕೆ ಹೆಚ್ಚಿನ ಪ್ರಾಮುಖ್ಯತೆ ಕೊಡಲಾಗಿತ್ತು. ಒಟ್ಟಿನಲ್ಲಿ ಋಗ್ವೇದದ ಕಾಲದ ಆರ್ಯರ ಧಾರ್ಮಿಕ ವ್ಯವಸ್ಥೆಯಲ್ಲಿ ಪುರೋಹಿತರ ಪ್ರಭಾವವು ಹೆಚ್ಚಾಗಿದ್ದಿತು.

ಋಗ್ವೇದದ ಕಾಲದ ಆರ್ಯರು ಉನ್ನತ ಮಟ್ಟದ ನೈತಿಕತೆಯನ್ನು ಬೆಳೆಸಿಕೊಂಡಿದ್ದರು. ಅಸತ್ಯ ನುಡಿಯುವುದನ್ನು ಮಹಾಪಾಪವೆಂದು ತಿಳಿದಿದ್ದರು. ನೈತಿಕ ಗುಣಗಳ ಅಧಿಪತಿಯಾದ ವರುಣನ ಬಗ್ಗೆ ಬಹಳ ಗೌರವ ಹೊಂದಿದ್ದರು. ವರುಣನ ಕೋಪಕ್ಕೆ ಒಳಗಾದವರು ಗುಣಪಡಿಸಲಾಗದ ರೋಗಗಳ ಮೂಲಕ ಶಿಕ್ಷೆ ಅನುಭವಿಸುತ್ತಾರೆಂದು ತಿಳಿದಿದ್ದರು. 'ರಿತ' ಅಥವಾ ಸತ್ಯವನ್ನು ಪಾಲಿಸದಿದ್ದವನನ್ನು ಮಹಾಪಾತಕಿ ಎಂದು ಪರಿಗಣಿಸಿದ್ದರು ಮತ್ತು ಪಾತಕಿಗಳು ನರಕದಲ್ಲಿ ಯಾತನೆಯಿಂದ ಕೂಡಿದ ಶಿಕ್ಷೆಗಳನ್ನು ಅನುಭವಿಸುವರೆಂದು ತಿಳಿದಿದ್ದರು. ಈ ರೀತಿಯ ಪಾಪ ಮತ್ತು ಪುಣ್ಯದ ಕಲ್ಪನೆಯು ಋಗ್ವೇದದ ಕಾಲದ ಜನರ ಜೀವನದ ಮೇಲೆ ಮಹತ್ತರ ಪ್ರಭಾವ ಬೀರಿದ್ದಿತು.

ಋಗ್ವೇದದ ಕಾಲದ ಆರ್ಯರ ಧಾರ್ಮಿಕ ಕಲ್ಪನೆಯು ಉಪಯುಕ್ತವೂ ಮತ್ತು ಆಶಾದಾಯಕವೂ ಆದ ಭಾವನೆಗಳಿಂದ ಕೂಡಿದ್ದಿತು. ನಿರಾಶೆ ಭಾವನೆಗಳಿಗೆ ಅವರು ಹೆಚ್ಚಿನ ಗಮನ ಕೊಟ್ಟಿರಲಿಲ್ಲ. ಕಾರ್ಯತತ್ಪರೂ ಮತ್ತು ಮತ್ತು ಚೇತನ ಶಕ್ತಿಯುಳ್ಳವರೂ ಆಗಿದ್ದ ಆರ್ಯರು ತಮ್ಮ ಜೀವನವನ್ನು ಸದಾ ಸಂತೋಷವಾಗಿರಿಸಿಕೊಳ್ಳಲು ಪ್ರಯತ್ನಿಸುತ್ತಿದ್ದರು.

### ಕಲೆ ಮತ್ತು ಜ್ಞಾನ

ಋಗ್ವೇದದ ಕಾಲದ ಆರ್ಯರು ಬೌದ್ಧಿಕ ಮತ್ತು ಅಧ್ಯಾತ್ಮಿಕ ಕ್ಷೇತ್ರಗಳಲ್ಲೂ ಸಾಕಷ್ಟು ಪ್ರಗತಿ ಸಾಧಿಸಿದ್ದರು. ಇದಕ್ಕೆ ಅವರು ರಚಿಸಿರುವ ಋಗ್ವೇದ ಸಂಹಿತೆಯು ನಿದರ್ಶನವಾಗಿದೆ. ಋಗ್ವೇದದಲ್ಲಿ ಇಂದ್ರ ಮತ್ತು ಉಷಸ್ ದೇವತೆಗಳನ್ನು ಕುರಿತು ರಚಿಸಿರುವ ಶ್ಲೋಕಗಳು ಅವರ ಚಿಂತನಾಶಕ್ತಿಯ ಮಟ್ಟವನ್ನು ತೋರಿಸುತ್ತವೆ. ಅಂತೆಯೆ ವರುಣನನ್ನು ಕುರಿತು ರಚಿಸಿರುವ ಪ್ರಾರ್ಥನಾ ಶ್ಲೋಕಗಳು ಆರ್ಯರ ಉನ್ನತ ಮಟ್ಟದ ನೈತಿಕ ನಿಯಮಗಳ ಕಲ್ಪನೆಯನ್ನು ವ್ಯಕ್ತಪಡಿಸುತ್ತವೆ. ಋಗ್ವೇದದ ಕೆಲವು ಶ್ಲೋಕಗಳ ಕರ್ತೃಗಳೆಂದು ಹೇಳಲಾಗಿರುವ ವಿಶ್ವಾಮಿತ್ರ ವಾಮದೇವ, ಅತ್ರಿ ಭರಧ್ವಾಜಮತ್ತು ವಶಿಷ್ಠ ಮಹರ್ಷಿಗಳು ಈ ಕಾಲದ ಘನವಿದ್ವಾಂಸರಾಗಿದ್ದರು. ಇಂದೂ ಕೂಡ ಹಿಂದುಗಳ ಪುರೋಹಿತರು ಋಗ್ವೇದದ ಶ್ಲೋಕಗಳನ್ನು ಅತ್ಯಂತ ಗೌರವದಿಂದ ಪಠಿಸುವುದಲ್ಲದೆ ಅವುಗಳನ್ನು ದೈವ ವಾಣಿಗಳೆಂದು ನಂಬಿ ಅವುಗಳಲ್ಲಿ ಹೆಚ್ಚಿನ ಬದಲಾವಣೆಗಳಾಗದಂತೆ ಎಚ್ಚರಿಕೆ ವಹಿಸಲಾಗಿದೆ.

ಋಗ್ವೇದದ ಕಾಲದ ಆರ್ಯರು ಕಲೆ ಮತ್ತು ವಿಜ್ಞಾನ ಕ್ಷೇತ್ರಗಳಲ್ಲೂ ಮುಂದುವರಿದಿದ್ದರು. ಗಾಯನ, ನರ್ತನ ಮತ್ತು ವೀಣಾವಾದ್ಯಗಳನ್ನು ನುಡಿಸುವುದರಲ್ಲಿ

ಹೆಚ್ಚಿನ ಆಸಕ್ತಿ ಹೊಂದಿದ್ದರು. ವಾಸ್ತುಶಿಲ್ಪ ಮತ್ತು ಶಿಲ್ಪಕಲೆಯ ಬಗ್ಗೆ ಪರಿಚಯವಿದ್ದರೂ ಈ ಬಗ್ಗೆ ಹೆಚ್ಚಿನ ವಿವರಗಳು ದೊರೆತಿಲ್ಲ. ವೈದ್ಯಕೀಯ ವಿದ್ಯೆಯಲ್ಲಿ ಮುಂದುವರಿದಿದ್ದರು. ವಿವಿಧ ರೀತಿಯ ರೋಗಗಳ ಪರಿಚಯವಿದ್ದು ಅವುಗಳನ್ನು ಗಿಡಮೂಲಿಕೆಗಳಿಂದ ತಯಾರಿಸಿದ ಔಷಧಿಗಳಿಂದ, ಯಂತ್ರ ಮತ್ತು ಮಂತ್ರಗಳಿಂದ ಗುಣಪಡಿಸುತ್ತಿದ್ದರು. ಅವರು ಔಷಧಿಯ ಬಗ್ಗೆ ಹೊಂದಿದ್ದ ಆಸಕ್ತಿಯು ನೈಸರ್ಗಿಕ ವೈದ್ಯ ದೇವತೆಗಳಾದ ಅಶ್ವಿನಿ ದೇವತೆಗಳಿಗೆ ಸಲ್ಲಿಸುತ್ತಿದ್ದ ಪ್ರಾರ್ಥನೆಗಳಿಂದ ತಿಳಿದುಬರುತ್ತದೆ. ಆರ್ಯರು ಖಗೋಳಶಾಸ್ತ್ರದ ಬಗ್ಗೆಯೂ ತಿಳುವಳಿಕೆಯುಳ್ಳವರಾಗಿದ್ದರು. ಕೆಲವು ನಕ್ಷತ್ರಗಳನ್ನು ಗುರುತಿಸಿ ಅವುಗಳಿಗೆ ಹೆಸರುಗಳನ್ನು ಕೊಟ್ಟಿದ್ದರು. ಒಟ್ಟಾರೆ ಹೇಳುವುದಾದರೆ ಋಗ್ವೇದದ ಕಾಲದಲ್ಲಿನ ಆರ್ಯರ ಸಂಸ್ಕೃತಿಯು ಪೂರ್ಣವಾಗಿ ಬೆಳೆದ ಸಂಸ್ಕೃತಿಯಾಗಿದ್ದಿತು. ರಾಜಕೀಯ ಮತ್ತು ಸಾಮಾಜಿಕ ಸಂಸ್ಥೆಗಳು ರೂಪುಗೊಂಡಿದ್ದವು. ಸರಳವಾದ ಧಾರ್ಮಿಕತೆ, ಕಲೆ ಮತ್ತು ವಿಜ್ಞಾನದಲ್ಲಿ ಪ್ರಗತಿಯು ಈ ನಾಗರಿಕತೆಯ ಪ್ರಮುಖ ಲಕ್ಷಣಗಳಾಗಿದ್ದವು.

ಋಗ್ವೇದದ ಸಂಹಿತೆಯ ರಚನೆಯ ಕಾಲದ ಬಗ್ಗೆ ವಿದ್ವಾಂಸರು ನಿದಿರ್ಷ್ಟವಾದ ಅಭಿಪ್ರಾಯವನ್ನು ಹೊಂದಿರುವುದಿಲ್ಲ. ಋಗ್ವೇದದ ಮೊದಲ ಭಾಗದ ಶ್ಲೋಕಗಳು ವಿವಿಧ ಹಂತಗಳಲ್ಲಿ ರಚಿಸಲ್ಪಟ್ಟಿದ್ದು ಅವು ನಿರ್ಧಿಷ್ಟವಾಗಿ ಯಾವಾಗ ರಚಿಸಲ್ಪಟ್ಟವೆಂದು ಹೇಳುವುದು ಕಷ್ಟ. ಋಗ್ವೇದವು ಆರ್ಯರ ನಾಗರಿಕತೆಯ ಒಂದು ಪ್ರೌಢಾವಸ್ಥೆಯಲ್ಲಿ ರಚಿಸಲ್ಪಟ್ಟಿರುವುದೇ ಹೊರತು ಆರ್ಯರ ನಾಗರಿಕತೆಯ ಬಾಲ್ಯಾವಸ್ಥೆಯಲ್ಲಿ ಅಲ್ಲ. ವಿದ್ವಾಂಸರು ಏಷ್ಯಾಮೈನರ್‌ನಲ್ಲಿ ದೊರೆತಿರುವ ಬೋಗೋಸ್ ಕಾಯ್ ಶಾಸನಗಳ ರಚನೆಯ ಆಧಾರದ ಮೇಲೆ ಋಗ್ವೇದವು ಕ್ರಿ.ಪೂ. 2500ರಿಂದ ಕ್ರಿ.ಪೂ. 1200ರ ಅವಧಿಯಲ್ಲಿ ರಚಿತವಾಗಿರಬೇಕೆಂದು ಅಭಿಪ್ರಾಯಪಟ್ಟಿರುವರು.

## ಅಧ್ಯಾಯ-5

# ಕೊನೆಯ ವೇದಗಳ ಕಾಲದ ನಾಗರಿಕತೆ

ಋಗ್ವೇದದ ಕಾಲದ ನಾಗರಿಕತೆಯ ನಂತರದ ಕಾಲವನ್ನು ಕೊನೆಯ ವೇದಗಳ ಅಥವಾ ಬ್ರಾಹ್ಮಣಗಳ ಕಾಲವೆಂದು ಕರೆಯಲಾಗಿದೆ. ಕೊನೆಯ ವೇದಗಳ ಕಾಲದ ಅವಧಿಯನ್ನು ನಿರ್ದಿಷ್ಟವಾಗಿ ಹೇಳುವುದು ಕಷ್ಟಸಾಧ್ಯವಾದರೂ ಕ್ರಿ.ಪೂ. 1200ರಿಂದ ಕ್ರಿ.ಪೂ. 600ರ ಅವಧಿಯ ಕಾಲವನ್ನು ಕೊನೆಯ ವೇದಗಳ ಹಾಗೂ ಮಹಾಕಾವ್ಯಗಳ ಮತ್ತು ಪುರಾಣಗಳ ಕಾಲವೆಂದು ಹೇಳಬಹುದು.

ಋಗ್ವೇದದ ಕಾಲದಲ್ಲಿ ಸಪ್ತಸಿಂಧು ಪ್ರಾಂತ್ಯಕ್ಕೆ ಸೀಮಿತವಾಗಿದ್ದ ಆರ್ಯರ ಸಂಸ್ಕೃತಿ ಮತ್ತು ನಾಗರಿಕತೆಯು ಸಪ್ತಸಿಂಧು ಪ್ರಾಂತ್ಯದಿಂದೀಚೆಗೆ ಹರಡಿತು. ಆರ್ಯರು ಸಪ್ತಸಿಂಧು ಪ್ರಾಂತ್ಯದಿಂದ ಪೂರ್ವ ಮತ್ತು ದಕ್ಷಿಣದ ಕಡೆ ಮುಂದುವರಿದು ಕಾಲಾನುಕ್ರಮದಲ್ಲಿ ಇಡೀ ದೇಶವನ್ನು ಆರ್ಯಾವರ್ತಗೊಳಿಸಿದರು. ಕೊನೆಯ ವೇದಗಳ ಕಾಲದ ಆರ್ಯರ ಸಂಸ್ಕೃತಿಯನ್ನು ತಿಳಿಯಲು ಈ ಕಾಲದಲ್ಲಿ ರಚಿತವಾದ ಯಜುರ್ವೇದ, ಸಾಮವೇದ, ಅಥರ್ವಣವೇದ, ಬ್ರಾಹ್ಮಣಗಳು. ಅರಣ್ಯಗಳು ಮತ್ತು ಉಪನಿಷತ್ತುಗಳು ಮುಖ್ಯ ಆಧಾರಗಳಾಗಿವೆ.

**ಕುರು ಮತ್ತು ಪಾಂಚಾಲರು**

ಕೊನೆಯ ವೇದಗಳ ಸಾಹಿತ್ಯದಲ್ಲಿ ಪ್ರಸ್ತಾಪಿಸಲಾಗಿರುವ ಭೌಗೋಳಿಕ ಅಂಶಗಳು ಆರ್ಯರು ಹೇಗೆ ಗಂಗಾನದಿಯ ಬಯಲಿನಲ್ಲಿ ಹರಡಿಕೊಂಡು ನೆಲಸಿದರೆಂಬುದನ್ನು ತಿಳಿಸುತ್ತವೆ. ಜನಸಂಖ್ಯೆಯ ಒತ್ತಡ ಹಾಗೂ ದೊಡ್ಡ ದೊಡ್ಡ ರಾಜ್ಯಗಳನ್ನು ಕಟ್ಟಬೇಕೆಂಬ ಅಪೇಕ್ಷೆಯನ್ನಿಟ್ಟುಕೊಂಡಿದ್ದ ಕೆಲವು ಪ್ರಬಲ ರಾಜರುಗಳ ಮಹತ್ವಾಕಾಂಕ್ಷೆಗಳು ಆರ್ಯರು ಪೂರ್ವದ ಕಡೆ ಮುಂದುವರಿಯುವುದಕ್ಕೆ ಪ್ರಬಲ ಕಾರಣಗಳಾಗಿದ್ದವು. ಆರ್ಯರ ಈ ರೀತಿಯ ರಾಜಕೀಯ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಿಗೆ ಸರಸ್ವತಿ ಮತ್ತು ಗಂಗಾನದಿಗಳ ನಡುವಣ ಪ್ರದೇಶವು ಕೇಂದ್ರವಾಗಿತ್ತು. ಈ ಭಾಗದಲ್ಲಿ ಹೊಸ ಹೊಸ ರಾಜಕೀಯ ಶಕ್ತಿಗಳು ಬೆಳವಣಿಗೆ ಹೊಂದಿ ಋಗ್ವೇದದ ಕಾಲದಲ್ಲಿ ನಾಗರಿಕತೆಯನ್ನು ರೂಪಿಸಿದ್ದ ಬುಡಕಟ್ಟುಗಳು ತಮ್ಮ ಪ್ರಾಮುಖ್ಯತೆಯನ್ನು ಕಳೆದುಕೊಂಡವು. ಭರತ ಎಂಬ ಬುಡಕಟ್ಟಿನವರ ಶ್ರೇಷ್ಟತೆಯು ಈಗ ಕಡಮೆಯಾಯಿತು. ಪರಮಾಧಿಕಾರಕ್ಕಾಗಿ ನಡೆದ ಹೋರಾಟಗಳಲ್ಲಿ ದುರ್ಬಲ ಬುಡಕಟ್ಟುಗಳು ನಾಶವಾಗಿ ಮಧ್ಯದೇಶದಲ್ಲಿ ಕುರು ಮತ್ತು ಪಾಂಚಾಲರು ಹೆಚ್ಚು ಪ್ರಬಲರಾದರು.

ಕುರುವಂಶದ ರಾಜರುಗಳ ಪಂಕ್ತಿಯಲ್ಲಿ ಕುರುಶ್ರವಣ ಎಂಬವನು ಮೊದಲನೆಯ ದೊರೆ. ಅಸಂದಿವತ್ ಎಂಬುದು ಇವನ ರಾಜಧಾನಿಯಾಗಿತ್ತು. ಕುರುಗಳು ಸರಸ್ವತಿ ನದಿಯಿಂದ ಗಂಗಾನದಿಯವರೆಗಿನ ಪ್ರದೇಶವನ್ನು ಆಳಿದರು. ಈ ಸಂತತಿಯ ರಾಜರುಗಳಲ್ಲಿ ಪರೀಕ್ಷಿತ ಮತ್ತು ಜನಮೇಜಯ ಎಂಬವರು ಹೆಚ್ಚು ಹೆಸರುವಾಸಿಯಾದವರು. ಗಾಂಧಾರದ ನಾಗ ಎಂಬ ಜನರು ಪರೀಕ್ಷಿತ ಮಹಾರಾಜನಿಗೆ ಸಾಕಷ್ಟು ತೊಂದರೆ ಕೊಟ್ಟರೆಂದೂ ಮತ್ತು ಪರೀಕ್ಷಿತ ರಾಜನು ಅವರ ವಿರುದ್ಧ ಹೋರಾಡುತ್ತಲೇ ಮರಣಹೊಂದಿದನೆಂದು ಹೇಳಲಾಗಿದೆ. ಇದಕ್ಕೆ ಪ್ರತೀಕಾರವಾಗಿ ಜನಮೇಜಯ ರಾಜನು ತಕ್ಷಶಿಲೆಯ ಮೇಲೆ ಆಕ್ರಮಣ ಮಾಡಿ ಹೆಚ್ಚಿನ ಸಂಖ್ಯೆಯಲ್ಲಿ ನಾಗರನ್ನು ಸೋಲಿಸಿ ಕೊಂದನು. ನಾಗರಾಜ ತಕ್ಷಕನು ರಾಜ್ಯ ಬಿಟ್ಟು ಓಡಿಹೋದನು. ಗಾಂಧಾರ ರಾಜ್ಯದ ಪೂರ್ವಕ್ಕಿದ್ದ ಪ್ರದೇಶವನ್ನು ಆಳುತ್ತಿದ್ದ ಅಶ್ವಪತಿ ಕೇಕಯ ಎಂಬವನು ಜನಮೇಜಯನ ಸಾರ್ವ ಭೌಮತ್ವವನ್ನು ಒಪ್ಪಿಕೊಂಡಿದ್ದನು. ಜನಮೇಜಯ ರಾಜನು ಒಬ್ಬ ಪ್ರಬಲ ದೊರೆಯಾಗಿದ್ದು ಸರ್ಪಶಾಸ್ತ್ರಯಜ್ಞ ಮತ್ತು ಅಶ್ವಮೇಧ ಯಾಗಗಳನ್ನು ಮಾಡಿದನು. ಅವನ ತರುವಾಯ ಅವನ ಮಗನಾದ ಶತಾನಿಕ ಎಂಬವನು ರಾಜ್ಯವಾಳಿದನು.

ಪಾಂಚಾಲ ರಾಜರುಗಳ ಪಂಕ್ತಿಯಲ್ಲಿ ದುರ್ಮುಖ ಎಂಬವನು ಹೆಸರುವಾಸಿಯಾದವನು. ಕಂಪಿಲ ಎಂಬುದು ಇವನ ರಾಜಧಾನಿಯಾಗಿತ್ತು. ಪಾಂಚಾಲ ರಾಜರುಗಳಲ್ಲಿ ಕೆಲವರು ಕುರುಗಳಂತೆ ಅಶ್ವಮೇಧ ಯಾಗವನ್ನು ಮಾಡಿದ್ದರು. ಪ್ರವಹನ ಜೈವಲಿ ಎಂಬವನು ಪಾಂಚಾಲ ರಾಜರುಗಳಲ್ಲಿ ಪ್ರಬಲ ರಾಜನಾಗಿದ್ದನು. ಮತ್ತು ಇವನು ಮಹಾ ದಾರ್ಶನಿಕನೂ ಆಗಿದ್ದನು.

ಕುರು ಮತ್ತು ಪಾಂಚಾಲರನ್ನು ಬಿಟ್ಟರೆ ಮಧ್ಯಪ್ರದೇಶದಲ್ಲಿ ವಾಸರು (vasas) ಮತ್ತು ಉಸಿನಾರರು ಹೆಸರುವಾಸಿಯಾದ ಬುಡಕಟ್ಟುಗಳಾಗಿದ್ದವು. ಮತ್ಸರು ವಾಸ ರೊಡನೆಯೂ ಸಿಬಿಗಳು ಉಸಿನಾರರೊಂದಿಗೂ ಸಂಬಂಧ ಹೊಂದಿದ್ದರು.

**ಕಾಶಿ, ಕೋಸಲ ಮತ್ತು ವಿದೇಹ ರಾಜ್ಯಗಳ ಏಳಿಗೆ**

ಕಾಶಿ, ಕೋಸಲ ಮತ್ತು ವಿದೇಹ ರಾಜ್ಯಗಳ ಏಳಿಗೆಯು ಆರ್ಯರು ಗಂಗಾನದಿಯ ಬಯಲನ್ನು ದಾಟಿ ಇನ್ನೂ ಪೂರ್ವಕ್ಕೆ ಮುಂದುವರಿದುದನ್ನು ತಿಳಿಸುತ್ತದೆ. ಕೋಸಲದ ದೊರೆ 'ಪರ' ಎಂಬವನು ಅಶ್ವಮೇಧ ಯಾಗವನ್ನು ಮಾಡಿದ್ದನು. ಇವನು ಕೋಸಲ ಮತ್ತು ವಿದೇಹ ರಾಜ್ಯಗಳೆರಡಕ್ಕೂ ರಾಜನಾಗಿದ್ದನು. ಕಾಶಿ ರಾಜ್ಯವು ಕೋಸಲ ಮತ್ತು ವಿದೇಹ ರಾಜ್ಯಗಳೊಂದಿಗೆ ಸಂಬಂಧ ಹೊಂದಿದ್ದಿತು. ವಿದೇಹ ರಾಜ್ಯದ ರಾಜರುಗಳಲ್ಲಿ ಜನಕ ಮಹಾರಾಜನು ಹೆಚ್ಚು ಹೆಸರುವಾಸಿಯಾದ ರಾಜನಾಗಿದ್ದನು. ಮಿಥಿಲ ಇವನ ರಾಜಧಾನಿಯಾಗಿತ್ತು. ಜನಕನು ವಿದ್ಯಾಭಿಮಾನಿಯಾಗಿದ್ದು ವಿದ್ಯೆಗೆ ಪ್ರೋತ್ಸಾಹ ನೀಡಿದ್ದನು. ಅಂತೆಯೆ ಕಾಶಿರಾಜ್ಯದ ಅಜಾತಶತ್ರುವು ವಿದ್ವಾಂಸರ ಪ್ರೋತ್ಸಾಹಕನಾಗಿದ್ದನು. ಈ ಇಬ್ಬರು ದೊರೆಗಳು ಪಾಂಡಿತ್ಯದಲ್ಲಿ ಬ್ರಾಹ್ಮಣ ವಿದ್ವಾಂಸರಾಗಿದ್ದ ಯಾಜ್ಞವಲ್ಕ್ಯ ಮತ್ತು ಸ್ವೇತಕೇತುವಿಗೆ ಸಮನಾಗಿದ್ದರೆಂದು ಹೇಳಲಾಗಿದೆ.

**ಮಗಧ**

ಕೋಸಲ ಮತ್ತು ವಿದೇಹ ರಾಜ್ಯಗಳ ಪೂರ್ವಕ್ಕೆ ಮಗಧರು ಎಂಬ ಜನಗಳು ವಾಸಿಸುತ್ತಿದ್ದರು. ಕೊನೆಯ ವೇದಗಳ ಸಾಹಿತ್ಯಕೃತಿಗಳು ಇವರು ಹೆಚ್ಚು ಕಡಿಮೆ ದಕ್ಷಿಣ ಬಿಹಾರ ಪ್ರದೇಶದಲ್ಲಿ ವಾಸಿಸುತ್ತಿದ್ದರೆಂದು ತಿಳಿಸುತ್ತವೆ. ಈ ಮಗಧರು ಯಾರು ಎನ್ನುವ ಬಗ್ಗೆ ವಿದ್ವಾಂಸರಲ್ಲಿ ಒಮ್ಮತ ಅಭಿಪ್ರಾಯವಿರುವುದಿಲ್ಲ. ಅವರು ಆರ್ಯರ ಸಂಸ್ಕೃತಿಯ ಪ್ರಭಾವಕ್ಕೊಳಗಾಗಿರಲಿಲ್ಲ. ಮಗಧರು ಕ್ಷತ್ರಿಯ ಮತ್ತು ವೈಶ್ಯರ ಮಿಶ್ರಣ ಜಾತಿಗೆ ಸೇರಿದವರೆಂದು ಯುಜುರ್ವೇದ ಮತ್ತು ಅಥರ್ವಣವೇದಗಳು ತಿಳಿಸುತ್ತವೆ. ಮಗಧರು ವೈದಿಕ ಸಂಸ್ಕೃತಿಯನ್ನು ಪ್ರತಿಪಾದಿಸುತ್ತಿರಲಿಲ್ಲವೆಂದು ಹೇಳಲಾಗಿದೆ. ಆದಾಗ್ಯೂ ಇವರೂ ಸಹ ಯಜ್ಞ ಯಾಗಾದಿಗಳನ್ನು ಮಾಡುವುದುರ ಮೂಲಕ ಆರ್ಯರ ಸ್ಥಾನಮಾನಗಳನ್ನು ಗಳಿಸಿಕೊಳ್ಳಬಹುದಾಗಿತ್ತು.

**ಅಂಗರು ಮತ್ತಿತರು**

ಅಂಗರು ಬಹುಷಃ ಸೋನ ಮತ್ತು ಗಂಗಾನದಿಗಳ ದಂಡೆಯ ಮೇಲೆ ವಾಸಿಸುತ್ತಿದ್ದರೆಂದು ಹೇಳಲಾಗಿದೆ. ಇವರೂ ಸಹ ಮಗಧರಂತೆ ಆರ್ಯರ ಸಂಸ್ಕೃತಿಯ ಪ್ರಭಾವಕ್ಕೊಳಗಾಗಿರಲಿಲ್ಲ. ಇವರು ಅನಾರ್ಯರೆಂದು ಐತರೀಯ ಬ್ರಾಹ್ಮಣವು ತಿಳಿಸುತ್ತದೆ. ಇವರುಗಳಲ್ಲದೆ ವಿದರ್ಭರು, ನಿಷಧರು, ಕುಂತಿಗಳು, ನಿಕಯರು, ಬಲ್ಲಿಕರು, ಅಂಬಸ್ಟರು ಮತ್ತು ಮಾದ್ರರು ಎಂಬ ಬುಡಕಟ್ಟುಗಳ ಹೆಸರುಗಳು ಕೊನೆಯ ವೇದಗಳ ಕಾಲದ ಸಾಹಿತ್ಯ ಕೃತಿಗಳಲ್ಲಿ ಕಂಡುಬರುತ್ತವೆ.

**ರಾಜಕೀಯ ಸ್ಥಿತಿ**

ಋಗ್ವೇದದ ಕಾಲದಲ್ಲಿ ರೂಪಿತವಾಗಿದ್ದ ರಾಜತ್ವವು ಕೊನೆಯ ವೇದಗಳ ಕಾಲದಲ್ಲಿ ಇನ್ನೂ ಹೆಚ್ಚು ಪ್ರಬಲವಾಗತೊಡಗಿತು. ಆರ್ಯರ ಫಿಸ್ತರಣೆ, ವಿವಿಧ ಬಣಗಳ ನಡುವಿನ ಘರ್ಷಣೆಗಳು. ಕ್ಲಿಷ್ಟವಾದ ರಾಜಕೀಯ ಪರಿಸ್ಥಿತಿ ಮೊದಲಾದವುಗಳು ಪ್ರಬಲ ರಾಜರುಗಳ ಏಳಿಗೆಗೆ ಅವಕಾಶ ಮಾಡಿಕೊಟ್ಟವು. ಈ ಕಾಲದಲ್ಲಿ ಪ್ರತಿಯೊಬ್ಬ ರಾಜನೂ ತಮ್ಮ ತಮ್ಮ ರಾಜ್ಯಗಳನ್ನು ವಿಸ್ತರಿಸಿಕೊಳ್ಳುವುದರಲ್ಲಿ ಹೆಚ್ಚಿನ ಉತ್ಸಾಹ ಹೊಂದಿದ್ದರು. ಈ ಒಂದು ಪ್ರಯತ್ನದಲ್ಲಿ ಪ್ರಬಲವಾದ ದೊರೆಗಳು ಮತ್ತು ಅವರ ಮಿತ್ರರು ಜಯಪ್ರದರಾದರು. ಪ್ರಾಚೀನ ಭಾರತದ ರಾಜಕೀಯ ಇತಿಹಾಸದಲ್ಲಿ ಸಾಮಾನ್ಯ ರಾಜತ್ವದಿಂದ ಪ್ರಬಲ ರಾಜತ್ವದ ಹಾಗೂ ಸಾಮ್ರಾಜ್ಯ ಸ್ಥಾಪನೆಯ ಕಡೆಗೆ ರಾಜಕೀಯ ಶಕ್ತಿಯು ಬೆಳೆಯತೊಡಗಿತು.

ರಾಜತ್ವವು ರಾಜನಿಗೂ ಮತ್ತು ಪ್ರಜೆಗಳಿಗೂ ಮಾಡಿಕೊಂಡ ಒಂದು ಒಪ್ಪಂದವಾಗಿತ್ತು. ರಾಜನ ಕಿರೀಟ ಧಾರಣೆಯ ಸಮಯದಲ್ಲಿ ನಡೆಸಲಾಗುತ್ತಿದ್ದ ಧಾರ್ಮಿಕ ಆಚರಣೆಗಳು ಆಗಿನ ಕಾಲದ ರಾಜತ್ವದ ಕಲ್ಪನೆಯನ್ನು ತಿಳಿಸುತ್ತವೆ. ರಾಜನು ಕಿರೀಟಧಾರಣೆ ಸಮಯದಲ್ಲಿ ತನ್ನ ಕರ್ತವ್ಯವನ್ನು ಸರಿಯಾಗಿ ಪಾಲಿಸುವುದಾಗಿ ಪ್ರಮಾಣ ವಚನ ನೀಡಬೇಕಿತ್ತು. ಇಲ್ಲವಾದರೆ ಅವನು ತನ್ನ ಪ್ರಜೆಗಳ ಪ್ರೀತಿಗೌರವಗಳನ್ನು ಮತ್ತು ತನ್ನ ಅಧಿಕಾರವನ್ನು ಕಳೆದುಕೊಳ್ಳುತ್ತಿದ್ದನು. ರಾಜನು ಧರ್ಮದ ರಕ್ಷಕನೂ ಮತ್ತು ನ್ಯಾಯಾಧಿಪತಿಯೂ ಆಗಿದ್ದನು. ರಾಜತ್ವದ ಕಲ್ಪನೆ

ಮತ್ತು ವಿಕಾಸ ಹಾಗೂ ಆದಕ್ಕೆ ಸಂಬಂಧಿಸಿದ ಹೊಣೆಗಾರಿಕೆಯ ನಿಯಮಗಳನ್ನು ರೂಪಿಸಿದುದು ಪ್ರಾಚೀನ ಭಾರತದಲ್ಲಿ ಆರ್ಯರ ಮುಖ್ಯ ಸಾಧನೆಗಳಲ್ಲೊಂದಾಗಿದೆ. ರಾಜರುಗಳು ತಮಗೆ ಇಷ್ಟಬಂದಂತೆ ಸ್ವೇಚ್ಛಾನುಸಾರವಾಗಿ ಆಳಲು ಅವಕಾಶವಿರಲಿಲ್ಲ ರಾಜರುಗಳು ಬ್ರಾಹ್ಮಣರ ಹಾಗೂ ಸಭಾ ಮತ್ತು ಸಮಿತಿಯ ಸದಸ್ಯರ ಅಭಿಪ್ರಾಯಗಳನ್ನೂ ಗಣನೆಗೆ ತೆಗೆದುಕೊಳ್ಳಬೇಕಾಗಿತ್ತು. ಕೊನೆಯ ವೇದಗಳ ಸಂಹಿತೆಗಳಲ್ಲಿ ಮತ್ತು ಬ್ರಾಹ್ಮಣಗಳಲ್ಲಿ ರಾಜರುಗಳು ತಮ್ಮ ಅಧಿಕಾರವನ್ನು ದುರುಪಯೋಗಪಡಿಸಿಕೊಂಡ ಸಂದರ್ಭಗಳಲ್ಲಿ ಅವರನ್ನು ಪ್ರಜೆಗಳು ಪದಚ್ಯುತಗೊಳಿಸಿದುದಕ್ಕೆ ನಿದರ್ಶನಗಳು ದೊರೆಯುತ್ತವೆ. ಈ ಕಾಲದಲ್ಲಿನ ರಾಜರುಗಳು ಅಧಿರಾಜ, ರಾಜಾಧಿರಾಜ, ಸಾಮ್ರಾಟ ಮತ್ತು ಏಕರಾಟ್ ಎಂಬ ಬಿರುದುಬಾವಲಿಗಳನ್ನು ಹೊಂದಿದ್ದರು. ಅವರ ಈ ಬಿರುದುಗಳು ಅವರ ರಾಜ್ಯದ ವೈಶಾಲ್ಯತೆಯನ್ನು ಅವರ ಸ್ಥಾನಮಾನಗಳನ್ನೂ ಸೂಚಿಸತಕ್ಕವುಗಳಾಗಿದ್ದವು. ಇಂತಹ ಉನ್ನತ ಬಿರುದುಗಳನ್ನು ಹೊಂದಿದ್ದ ರಾಜರುಗಳು ತಮ್ಮ ತಮ್ಮ ಪರಮಾಧಿಕಾರವನ್ನು ಪ್ರದರ್ಶಿಸುವುದಕ್ಕಾಗಿ ರಾಜಸೂಯ ಮತ್ತು ಅಶ್ವಮೇಧ ಯಾಗಗಳನ್ನು ನೆರವೇರಿಸುತ್ತಿದ್ದರು. ಈ ರೀತಿಯ ರಾಜತ್ವದ ಬೆಳವಣಿಗೆಯು ಮುಂದೆ ಪ್ರಬಲರಾದ ರಾಜರುಗಳ ಕೈಯಲ್ಲಿ ಅಧಿಕಾರವು ಕೇಂದ್ರೀಕೃತವಾಗುತ್ತಿದ್ದುದನ್ನೂ ಮತ್ತು ಅದು ಮುಂದೆ ಪ್ರಬಲ ಸಾಮ್ರಾಜ್ಯ ಸ್ಥಾಪನೆಯ ನೀತಿಯ ಅನುಸರಣೆಗೆ ಮುನ್ಸೂಚಕವಾಗಿದ್ದುದನ್ನೂ ತಿಳಿಸುತ್ತದೆ.

ರಾಜ್ಯದ ವಿಸ್ತರಣೆ ಮತ್ತು ರಾಜನ ಅಧಿಕಾರದ ಹೆಚ್ಚಳವು ಹೆಚ್ಚು ಹೆಚ್ಚು ಅಧಿಕಾರಿಗಳ ನೇಮಕ ಮತ್ತು ಒಳ್ಳೆಯ ವ್ಯವಸ್ಥೆಯಿಂದ ಕೂಡಿದ ಸರ್ಕಾರದ ಸ್ಥಾಪನೆಯ ಆವಶ್ಯಕತೆಯನ್ನು ಹೆಚ್ಚಿಸಿದವು. ಈ ಅಧಿಕಾರಿಗಳ ಶ್ರೇಣಿಯಲ್ಲಿ 'ರತ್ನಿನ್ಸ್' ಅಥವ ಸಚಿವರುಗಳು ಉನ್ನತ ಸ್ಥಾನವನ್ನು ಹೊಂದಿದ್ದರು. ಇವರನ್ನು ರಾಜನ ಕಿರೀಟದ ಆಭರಣಗಳೆಂದು ಪರಿಗಣಿಸಲಾಗಿತ್ತು. ಸಚಿವರು ರಾಜನಿಗೆ ಆಡಳಿತದಲ್ಲಿ ಸಹಾಯ ಮಾಡಬೇಕಿತ್ತು ಮತ್ತು ಅವನಿಗೆ ನಿಷ್ಠೆಯಿಂದ ಇರಬೇಕಿತ್ತು. ರತ್ನಿನ್ ಎಂಬ ಗುಣ ವಿಶೇಷವು ಪುರೋಹಿತ, ರಾಜನ್ಯ ಅಥವ ಗಣ್ಯರು, ಮಹಿಷಿ ಅಥವ ಪಟ್ಟದರಾಣಿ, ಸುತ ಅಥವ ಸಾರಥಿ, ಸೇನಾನಿ ಸಂಗ್ರಹಿತ್ರಿ ಅಥವ ಕೋಶಾಧಿಕಾರಿ, ಭಗದುಗ ಅಥವ ತೆರಿಗೆ ವಸೂಲಿಯ ಅಧಿಕಾರಿ, ಅಕ್ಷವಾಪ ಅಥವ ದ್ಯೂತದ ಮೇಲ್ವಿಚಾರಕ ಇವರಿಗೆ ಅನ್ವಯಿಸುತ್ತಿತ್ತು. ಸ್ತಹಪತಿ ಅಥವ ಸ್ಥಳೀಯ ಗೌವರ್ನರ್ ರಾಜ್ಯದ ಗಡಿಪ್ರದೇಶದ ಮೇಲ್ವಿಚಾರಣೆಯನ್ನು ನೋಡಿಕೊಳ್ಳುತ್ತಿದ್ದನು. ರತ್ನಿನ್ಸ್ ವರ್ಗಕ್ಕೆ ಸೇರಿದವರು ಅಂದಿನ ಸಮಾಜದ ಉತ್ತಮ ಕುಲವನ್ನು ಪ್ರತಿನಿಧಿಸಿದ್ದರು.

**ಸಭಾ ಮತ್ತು ಸಮಿತಿ**

ಸಭಾ ಮತ್ತು ಸಮಿತಿಗಳು ಜನರ ಪ್ರತಿನಿಧಿ ಸಭೆಗಳಾಗಿದ್ದು ಜನತೆಯ ಅಭಿಪ್ರಾಯವನ್ನು ವ್ಯಕ್ತಪಡಿಸುವುದರಲ್ಲಿ ಬಹುಮುಖ್ಯ ಪಾತ್ರವಹಿಸಿದ್ದವು. ರಾಜನು ಈ ಸಭೆಗಳ ಸಲಹೆಯನ್ನು ಕೇಳಬೇಕಾಗಿತ್ತು ಮತ್ತು ಅವನು ಸ್ವೇಚ್ಛಾನುಸಾರವಾಗಿ ಆಳುವಂತಿರಲಿಲ್ಲ. ರಾಜತ್ವದ ಉಗಮದಂತೆಯೆ ಸಭಾ ಮತ್ತು ಸಮಿತಿಗಳ ಉಗಮವೂ ದೈವಾಂಶವಾದುದೆಂದು ಪರಿಗಣಿಸಲಾಗಿತ್ತು. ಅಲ್ಲದೆ ಈ ಎರಡು ಸಭೆಗಳನ್ನು

ಪ್ರಜಾಪತಿಯ ಇಬ್ಬರು ಪುತ್ರಿಯರೆಂದು ಭಾವವಿಸಲಾಗಿತ್ತು. ಈ ಎರಡು ಸಭೆಗಳ ಮೂಲಕ ಸಾರ್ವಜನಿಕ ಅಭಿಪ್ರಾಯವು ವ್ಯಕ್ತಪಟ್ಟು ಅವುಗಳು ರಾಜನ ಅಧಿಕಾರದ ಮೇಲೆ ಪ್ರಭಾವವನ್ನು ಹೊಂದಿದ್ದವು. ಸಭೆಯ ಸದಸ್ಯರನ್ನು ಸಭಾಸದರು ಎಂತಲೂ ಮತ್ತು ಸಭೆಯ ಅಧ್ಯಕ್ಷನನ್ನು ಸಭಾಪತಿ ಎಂತಲೂ ಕರೆಯುತ್ತಿದ್ದರು. ಈ ಎರಡು ಸಭೆಗಳ ಕಾರ್ಯ ಕಲಾಪಗಳ ಬಗ್ಗೆ ಸ್ಪಷ್ಟವಾಗಿ ಹೇಳಲು ಸಾಧ್ಯವಿಲ್ಲವಾದರೂ ಅವುಗಳು ರಾಜ್ಯದ ಬಹುಮುಖ್ಯ ಸಮಸ್ಯೆಗಳ ಬಗ್ಗೆ ಚರ್ಚಿಸಿ ರಾಜನಿಗೆ ಸಲಹೆ ನೀಡುತ್ತಿದ್ದುದಾಗಿ ಕಂಡುಬರುತ್ತದೆ.

**ನ್ಯಾಯಾಡಳಿತ**

ರಾಜನು ನ್ಯಾಯದ ಮುಖ್ಯಾಧಿಕಾರಿಯೂ ಆಗಿದ್ದನು. ನ್ಯಾಯ ತೀರ್ಮಾನದಲ್ಲಿ ಸಭಾಸದರು ರಾಜನಿಗೆ ಸಹಾಯ ಮಾಡುತ್ತಿದ್ದರು. ಕ್ರಿಮಿನಲ್ ವ್ಯಾಜ್ಯಗಳ ಬಗ್ಗೆ ದೀರ್ಘ ವಿಚಾರಣೆ ನಡೆಸಿ ತೀರ್ಪು ಕೊಡಲಾಗುತ್ತಿತ್ತು. ಕ್ರಿಮಿನಲ್ ಕಾನೂನುಗಳು ಬಹಳ ಕಠಿಣವಾಗಿದ್ದು ಅಪರಾಧಿಗಳನ್ನು ಉಗ್ರಪರೀಕ್ಷೆಗಳಿಗೆ ಒಳಪಡಿಸಲಾಗುತ್ತಿತ್ತು. ರಾಜದ್ರೋಹ, ದರೋಡೆ, ಕೊಲೆ, ವ್ಯಭಿಚಾರ ಮತ್ತು ಭ್ರೂಣಹತ್ಯೆಗಳನ್ನು ಮಹಾ ಅಪರಾಧಗಳೆಂದು ಪರಿಗಣಿಸಲಾಗಿತ್ತು. ಗ್ರಾಮಗಳಲ್ಲಿನ ಸಣ್ಣ ಪುಟ್ಟ ವ್ಯಾಜ್ಯಗಳನ್ನು ಹಳ್ಳಿಯ ನ್ಯಾಯಾಧೀಶನಾದ ಗ್ರಾಮ್ಯವಾದಿನ್ ನೇತೃತ್ವದಲ್ಲಿ ಸ್ಥಳೀಯ ಅಧಿಕಾರಿಗಳು ವಿಚಾರಣೆ ನಡೆಸಿ ತೀರ್ಪು ನೀಡುತ್ತಿದ್ದರು.

ಭೂಮಿಯ ಒಡೆತನ, ಸಾಲ, ಅನುವಂಶಿಕತೆ ಮೊದಲಾದುವುಗಳ ಬಗೆಗಿನ ಸಿವಿಲ್ ವ್ಯಾಜ್ಯಗಳನ್ನು ರಾಜನೂ ಮತ್ತು ಸಭಾಸದರೂ ವಿಚಾರಣೆ ನಡೆಸಿ ತೀರ್ಪು ನೀಡುತ್ತಿದ್ದರು. ಸ್ತ್ರೀಯರು ಮತ್ತು ಶೂದ್ರರಿಗೆ ಆಸ್ತಿಯ ಮೇಲೆ ಹಕ್ಕಿರಲಿಲ್ಲ. ಅವಿಭಕ್ತ ಕುಟುಂಬದ ಆಸ್ತಿಯ ಒಡೆತನವು ತಂದೆಯ ಇಲ್ಲವೆ ಪೋಷಕನ ಕೈಯ್ಯಲ್ಲಿದ್ದಿತು. ಗಂಡು ಮಕ್ಕಳು ಪ್ರಾಪ್ತ ವಯಸ್ಸಿಗೆ ಬಂದ ಮೇಲೆ ಆಸ್ತಿಯಲ್ಲಿ ಪಾಲು ಪಡೆಯಬಹುದಿತ್ತು. ಆಸ್ತಿಯ ಪಾಲುಗಾರಿಕೆಯಲ್ಲಿ ತಂದೆಯು ಸ್ವತಂತ್ರವಾಗಿ ವರ್ತಿಸುತ್ತಿದ್ದನು. ಸಾಮಾನ್ಯವಾಗಿ ಹಿರಿಯ ಮಗನಿಗೆ ಆಸ್ತಿಯಲ್ಲಿ ಹೆಚ್ಚು ಪಾಲು ಸಿಗುತ್ತಿತ್ತು. ಆಸ್ತಿಯ ಪಾಲುಗಾರಿಕೆಗೆ ಸಂಬಂಧಪಟ್ಟ ಜಗಳಗಳನ್ನು ಅನೇಕ ವೇಳೆ ದಿವ್ಯ ಪರೀಕ್ಷೆಗಳಿಗೆ ಒಳಪಡಿಸಲಾಗುತ್ತಿತ್ತು ಮತ್ತು ಕೆಲವು ಸಂದರ್ಭಗಳಲ್ಲಿ ಪಂಚಾಯಿತಿ ಮಂಡಲಿಗೆ ಒಪ್ಪಿಸಲಾಗುತ್ತಿತ್ತು.

**ವಿಶೇಷ ಹಕ್ಕು ಭಾದ್ಯತೆಗಳು**

ಈ ಕಾಲದಲ್ಲಿ ಬ್ರಾಹ್ಮಣರು ಮತ್ತು ಕ್ಷತ್ರಿಯರು ವಿಶೇಷ ಹಕ್ಕು ಬಾಧ್ಯತೆಗಳನ್ನು ಹೊಂದಿದ್ದರು. ಬ್ರಾಹ್ಮಣರು ರಾಜಕೀಯ ಸಲಹೆಗಾರರು ಮತ್ತು ವಿದ್ಯೆಯ ಮೇಲ್ವಿಚಾರಕರೂ ಆಗಿದ್ದರು. ಕ್ಷತ್ರಿಯರು ರಾಜ್ಯದ ರಕ್ಷಣೆಯ ಜವಾಬ್ದಾರಿಯನ್ನು ಹೊತ್ತಿದ್ದರು. ಇವರು ತೆರಿಗೆಯ ಹೊರೆಯನ್ನು ಹೊತ್ತಿರಲಿಲ್ಲ. ತೆರಿಗೆಯ ಭಾರವೆಲ್ಲವೂ ಜನರ ಮೇಲೆ ಬಿದ್ದಿತ್ತು. ರಾಜನ ಅಧಿಕಾರವು ಕ್ಷತ್ರಿಯರ ಬೆಂಬಲವನ್ನು ಬಹಳ ಮಟ್ಟಿಗೆ ಅವಲಂಭಿಸಿದ್ದರಿಂದ ರಾಜನು ಬ್ರಾಹ್ಮಣರಿಗಿಂತಲೂ ಹೆಚ್ಚಾಗಿ ಕ್ಷತ್ರಿಯರಿಗೆ ಹೆದರುತ್ತಿದ್ದನು.

## ಸಾಮಾಜಿಕ ಸ್ಥಿತಿ

ಪಿತೃಪ್ರಧಾನವಾದ ಕುಟುಂಬ ವ್ಯವಸ್ಥೆಯು ರೂಢಿಯಲ್ಲಿತ್ತು. ಋಗ್ವೇದದ ಕಾಲದ ಕುಟುಂಬ ವ್ಯವಸ್ಥೆಯಲ್ಲಿನ ಆರೋಗ್ಯಕರ ಸಂಪ್ರದಾಯಗಳು ಅಂದರೆ ಗುರುಹಿರಿಯರ ಬಗ್ಗೆ ಗೌರವ ಮತ್ತು ವಿಧೇಯತೆ, ಅಥಿತಿ ಸತ್ಕಾರ ಮೊದಲಾದುವುಗಳು ಈ ಕಾಲದಲ್ಲೂ ಮುಂದುವರಿದವು. ಕುಟುಂಬದಲ್ಲಿ ತಂದೆ ತಾಯಿಗಳು ಉನ್ನತ ಸ್ಥಾನವನ್ನು ಮತ್ತು ಗೌರವವನ್ನೂ ಹೊಂದಿದ್ದರು. ಆದರೂ ಕುಟುಂಬವು ಪಿತೃಪ್ರಧಾನವಾದ್ದರಿಂದ ಕುಟುಂಬ ವ್ಯವಸ್ಥೆಯಲ್ಲಿ ತಂದೆಗೆ ಶ್ರೇಷ್ಠ ಸ್ಥಾನವಿದ್ದಿತು. ಇಡೀ ಕುಟುಂಬದ ಸದಸ್ಯರ ಮೇಲೆ ಅಧಿಕಾರವನ್ನು ಹೊಂದಿದ್ದ ತಂದೆಯು ಕುಟುಂಬದ ಸದಸ್ಯರನ್ನು ಪ್ರೀತಿವಾತ್ಸಲ್ಯಗಳಿಂದ ನೋಡಿಕೊಳ್ಳುತ್ತಿದ್ದನು.

ವಿವಾಹ ಪದ್ಧತಿಯು ಚೆನ್ನಾಗಿ ಬೆಳೆದಿತ್ತು ಮತ್ತು ಅದು ಒಂದು ಪವಿತ್ರ ವ್ಯವಸ್ಥೆಯಾಗಿತ್ತು. ವಿವಾಹದಲ್ಲಿ ಕನ್ಯಾದಾನ, ಪಾಣಿಗ್ರಹಣ ಮೊದಲಾದ ಪದ್ಧತಿಗಳು ಜಾರಿಗೆ ಬಂದವು. ಸಾಮಾಜಿಕ ಮತ್ತು ಧಾರ್ಮಿಕ ಸಂಪ್ರದಾಯಗಳು ವಿವಾಹವನ್ನು ವಿಧಿಬದ್ಧವಾಗಿಸಿದ್ದವು. ವಿವಾಹವಾಗದಿದ್ದವರನ್ನು ಕೀಳಾಗಿ ಕಾಣಲಾಗುತ್ತಿತ್ತು. ಸ್ವಗೋತ್ರ ವಿವಾಹಗಳಿಗೆ ಅವಕಾಶವಿರಲಿಲ್ಲ. ವಿವಾಹಕ್ಕೆ ಸಂಬಂಧಿಸಿದಂತೆ ಭಿನ್ನಗೋತ್ರ ಮತ್ತು ಸ್ವಗೋತ್ರ ನಿಯಮಗಳು ಈ ಕಾಲದಲ್ಲಿ ನಿರ್ದಿಷ್ಟಗೊಳಿಸಲ್ಪಟ್ಟು ಅವುಗಳನ್ನು ಪಾಲಿಸಲಾಗುತ್ತಿತ್ತು. ಸಾಮಾನ್ಯವಾಗಿ ಹೆಣ್ಣುಮಕ್ಕಳು ಋತುಮತಿಯರಾದ ಮೇಲೆ ವಿವಾಹ ಮಾಡಲಾಗುತ್ತಿತ್ತು. ಇದರಿಂದಾಗಿ ವಿವಾಹ ಸಮಯದಲ್ಲಿ ಅವರ ಮನೋಗತಕ್ಕೂ ಬೆಲೆಕೊಡಲಾಗುತ್ತಿತ್ತು. ವೈವಾಹಿಕ ಜೀವನದಲ್ಲಿ ಹೆಚ್ಚಿನ ನೈತಿಕತೆಯು ಕಂಡುಬರುತ್ತಿತ್ತು. ಕೆಲವು ವೇಳೆ ಸಮಾಜದಲ್ಲಿನ ಉನ್ನತ ಜಾತಿಗೆ ಸೇರಿದವರು ಸ್ವಗೋತ್ರ ಮತ್ತು ಭಿನ್ನಗೋತ್ರದ ವಿವಾಹ ನಿಯಮಗಳನ್ನು ಮುರಿದು ಕೀಳು ಜಾತಿಗೆ ಸೇರಿದ ಹೆಣ್ಣು ಮಕ್ಕಳನ್ನು ವಿವಾಹವಾಗುತ್ತಿದ್ದರು. ಇಂತಹ ವಿವಾಹಗಳನ್ನು ಅನುಲೋಮ ವಿವಾಹಗಳೆಂದು ಕರೆಯುತ್ತಿದ್ದರು. ಹಾಗೆಯೇ ಮೇಲಿನ ಜಾತಿಗೆ ಸೇರಿದ ಹೆಣ್ಣು ಮಕ್ಕಳು ಕೀಳು ಜಾತಿಗೆ ಸೇರಿದ ಪುರುಷರನ್ನು ವಿವಾಹ ಮಾಡಿಕೊಂಡರೆ ಅಂತಹ ವಿವಾಹಗಳನ್ನು ಪ್ರತಿಲೋಮ ವಿವಾಹಗಳೆಂದು ಕರೆಯುತ್ತಿದ್ದರು. ಅನುಲೋಮ ವಿವಾಹಗಳು ಅನಪೇಕ್ಷಣೀಯವಾಗಿದ್ದವು ಅಂತೆಯೆ ಪ್ರತಿಲೋಮ ವಿವಾಹಗಳಿಗೆ ಹೆಚ್ಚಿನ ವಿರೋಧವು ಇದ್ದಿತು. ಇದರಿಂದ ವಿವಾಹದ ಸಂಪ್ರದಾಯಗಳು ಮತ್ತು ಸಂಸ್ಕಾರಗಳು ಹೆಚ್ಚು ಹೆಚ್ಚು ಕ್ಲಿಷ್ಟವಾಗುತ್ತಿದ್ದುದಾಗಿ ಕಂಡುಬರುತ್ತದೆ.

ಈ ಕಾಲದಲ್ಲಿ ವಿವಿಧ ರೀತಿಯ ವಿವಾಹಗಳು ಅಸ್ತಿತ್ವಕ್ಕೆ ಬಂದವು. ಅವುಗಳಲ್ಲಿ ಎಂಟು ರೀತಿಯ ವಿವಾಹಗಳಿಗೆ ಸ್ಮೃತಿಗಳಲ್ಲಿ ಮಾನ್ಯತೆ ದೊರೆಕಿದ್ದಿತು. ಅವುಗಳೆಂದರೆ 1. ಬ್ರಹ್ಮವಿವಾಹ 2. ಪ್ರಜಾಪತ್ಯ 3. ದೈವವಿವಾಹ 4. ಆರ್ಷ 5. ಪೈಶಾಚ 6. ರಾಕ್ಷಸ 7. ಅಸುರ 8. ಗಂಧರ್ವವಿವಾಹ. ಇವುಗಳಲ್ಲಿ ಮೊದಲನೆ ನಾಲ್ಕು ರೀತಿಯ ವಿವಾಹಗಳನ್ನು ಒಳ್ಳೆಯ ರೀತಿಯ ವಿವಾಹಗಳೆಂದು ಸಮಾಜವು ಒಪ್ಪಿಕೊಂಡಿದ್ದಿತು. ಗಂಧರ್ವ ಮತ್ತು ಅಸುರ ವಿವಾಹಗಳಿಗೆ ಕೆಲವರ ಒಪ್ಪಿಗೆಯಿದ್ದಿತು. ರಾಕ್ಷಸ ಮತ್ತು ಪೈಶಾಚ ವಿವಾಹಗಳನ್ನು ಕೆಟ್ಟ ವಿವಾಹಗಳೆಂದು ಪರಿಗಣಿಸಲಾಗಿತ್ತು.

**ಸ್ತ್ರೀಯರ ಸ್ಥಾನಮಾನಗಳು**

ಋಗ್ವೇದದ ಕಾಲದ ಸಮಾಜದಲ್ಲಿದ್ದಂತೆ ಕೊನೆಯ ವೇದಗಳ ಕಾಲದಲ್ಲೂ ಸ್ತ್ರೀಯರು ಸಮಾಜದಲ್ಲಿ ಗೌರವ ಸ್ಥಾನ ಪಡೆದಿದ್ದರು. ಈ ಕಾಲದಲ್ಲಿ ಗಾರ್ಗೀ ಮೊದಲಾದ ಘನ ವಿದ್ವಾಂಸ ಸ್ತ್ರೀಯರಿದ್ದರು. ಜನಕ ಮಹಾರಾಜನು ಗಾರ್ಗಿಯನ್ನು ವಿದ್ವಾಂಸರ ಸಮ್ಮೇಳನಕ್ಕೆ ಆಹ್ವಾನಿಸಿದ್ದನು. ಆದರೆ ಇದರಿಂದಲೇ ಸ್ತ್ರೀಯರ ಸ್ಥಾನಮಾನಗಳು ಪುರುಷರ ಸ್ಥಾನಮಾನಗಳಿಗೆ ಸರಿಪಮಾನನಾಗಿದ್ದುವೆಂದು ಹೇಳಲಾಗದು. ಪತ್ನಿಯಾದವಳು ಸಾಮಾಜಿಕ ಮತ್ತು ಧಾರ್ಮಿಕ ಸಮಾರಂಭಗಳಲ್ಲಿ ತನ್ನ ಪತಿಯೊಜನೆ ಸಮಾನವಾಗಿ ಭಾಗವಹಿಸಿದರೂ ಆಕೆಯು ಇತರ ವಿಷಯಗಳಲ್ಲಿ ಸಮಾನಳಾಗಿರಲಿಲ್ಲ. ಏಕಪತ್ನಿತ್ವವು ಆದರ್ಶವಾಗಿದ್ದರೂ ಸಮಾಜದ ಉನ್ನತ ವರ್ಗದವರಲ್ಲಿ ಬಹುಪತ್ನಿತ್ವವು ರೂಢಿಗೆ ಬಂದು ಸ್ತ್ರೀಯರ ಸ್ಥಾನಮಾನಗಳು ಈ ಕಾಲದಲ್ಲಿ ಇಳಿಮುಖವಾಗತೊಡಗಿದವು. ರಾಜನ ಕುಟುಂಬದವರಲ್ಲಿ ರಾಜನ ಪ್ರೀತಿಯ ರಾಣಿಯೊಬ್ಬಳನ್ನು ಬಿಟ್ಟರೆ ಉಳಿದವರ ಬಗ್ಗೆ ತಾತ್ಸಾರವು ಕಂಡುಬರುತ್ತಿತ್ತು. ಕೊನೆಯ ವೇದಗಳಲ್ಲಿನ ಮತ್ತು ಸೂತ್ರಗಳಲ್ಲಿನ ಕೆಲವು ಶ್ಲೋಕಗಳು ಸ್ತ್ರೀಯರ ಸ್ಥಾನಮಾನಗಳಲ್ಲಿ ಇಳಿಮುಖವಾದುದನ್ನು ಪ್ರಸ್ತಾಪಿಸುತ್ತವೆ. ಹೆಣ್ಣುಮಕ್ಕಳ ವಿವಾಹದ ವಯೋಮಿತಿಯನ್ನು ಇಳಿಸಿದುದು ಮತ್ತು ಅವರ ವಿದ್ಯಾಭ್ಯಾಸವನ್ನು ನಿರ್ಲಕ್ಷಿಸಿದುದು ಹಾಗೂ ವಿಧವಾ ವಿವಾಹಕ್ಕೆ ಸಾಮಾಜಿಕ ವಿರೋಧವು ವ್ಯಕ್ತಪಟ್ಟಿದುದು ಸ್ತ್ರೀಯರ ಹಿತಾಸಕ್ತಿಗಳಿಗೆ ವಿರುದ್ಧವಾಗಿದ್ದವು. ಇದಲ್ಲದೆ ಈ ಕಾಲದಲ್ಲೂ ಜನರು ಹಲವಾರು ಕಾರಣಗಳಿಂದಾಗಿ ಪುರುಷ ಸಂತಾನವನ್ನೇ ಅಪೇಕ್ಷಿಸುತ್ತಿದ್ದುದರಿಂದ ಸಮಾಜದಲ್ಲಿ ಸ್ತ್ರೀಯರು ಸಮಾನ ಸ್ಥಾನಮಾನಗಳನ್ನು ಹೊಂದಿರಲಿಲ್ಲವೆಂಬುದಾಗಿ ಅಭಿಪ್ರಾಯ ಪಡಲಾಗಿದೆ.

**ಆಹಾರ, ಉಡುಗೆ ತೊಡುಗೆ ಮತ್ತು ವಿನೋಧ ಕೃತ್ಯಗಳು**

ಋಗ್ವೇದದ ಕಾಲದ ಜನರ ಆಹಾರ ಪದಾರ್ಥಗಳಿಗೂ, ಈ ಕಾಲದ ಜನರ ಆಹಾರ ಪದಾರ್ಥಗಳಿಗೂ ಹೆಚ್ಚಿನ ವ್ಯತ್ಯಾಸವಿರಲಿಲ್ಲ. ಅಕ್ಕಿ, ಬಾರ್ಲಿ, ದ್ವಿದಳ ಧಾನ್ಯಗಳು, ಹಾಲು ಮತ್ತು ಹಾಲಿನ ಪದಾರ್ಥಗಳು, ಮೀನು, ಮೊಟ್ಟೆ ಮತ್ತು ಮಾಂಸ ಇತ್ಯಾದಿಗಳು ಈ ಕಾಲದ ಜನರ ಮುಖ್ಯ ಆಹಾರ ಪದಾರ್ಥಗಳಾಗಿದ್ದವು. ಸುರಾ ಮತ್ತು ಸೋಮ ಎಂಬ ಪಾನೀಯಗಳನ್ನು ಸೇವಿಸುತ್ತಿದ್ದರು. ಹತ್ತಿ, ಉಣ್ಣೆ ಮತ್ತು ರೇಷ್ಮೆಯಿಂದ ಮಾಡಿದ ಬಟ್ಟೆಗಳನ್ನು ಕೊಡುತ್ತಿದ್ದರು. ಜನರು ವಾಸಾಸ್ ಎಂಬ ಹೊದಿಕೆಯನ್ನೂ ನಿವಿ ಎಂಬ ಒಳ ಹೊದಿಕೆಯನ್ನು ಮತ್ತು ಆದಿವಾಸಸ್ ಎಂಬ ಮೇಲು ಹೊದಿಕೆಯನ್ನು ತೊಡುತ್ತಿದ್ದರು. ಯಜ್ಞ ಯಾಗಾದಿಗಳ ಸಮಯದಲ್ಲಿ ರೇಷ್ಮೆಯ ಹಾಗೂ ಉಣ್ಣೆಯ ಉಡುಪುಗಳನ್ನು ತೊಡುತ್ತಿದ್ದರು. ಪುರುಷರು ಮತ್ತು ಸ್ತ್ರೀಯರು ತಲೆ ಉಡುಪನ್ನು ಧರಿಸುತ್ತಿದ್ದರು. ಪಾದರಕ್ಷೆಗಳ ಪರಿಚಯವಿದ್ದಿತು. ಜನರು ಆಭರಣ ಪ್ರಿಯರಾಗಿದ್ದರು. ಕಸೂತಿ ಮಾಡಿದ ಉಡುಗೆಗಳಿಂದ ಅಲಂಕರಿಸಿಕೊಳ್ಳುತ್ತಿದ್ದರು. ತಮ್ಮ ಸೌಂದರ್ಯವನ್ನು ಹೆಚ್ಚಿಸಿಕೊಳ್ಳಲು ಸೌಂದರ್ಯೋಪಾಸಕ ವಸ್ತುಗಳನ್ನು ಉಪಯೋಗಿಸುತ್ತಿದ್ದರು. ಕೊನೆಯ ವೇದಗಳ ಕಾಲದ ಜನರಿಗೆ ವಿವಿಧ ವಿನೋದಗಳು ಮತ್ತು ಮನರಂಜನೆಯ ಆಟಗಳ ಪರಿಚಯವಿದ್ದಿತು. ಸಂಗೀತ ಮತ್ತು ನೃತ್ಯಗಳಲ್ಲಿ ಕೆಲವರು ಪ್ರಾವೀಣ್ಯತೆ ಪಡೆದಿದ್ದರು.

ಸಂಗೀತದ ವಿವಿಧ ಉಪಕರಣಗಳಾದ ತಂತಿವಾದ್ಯ, ವೀಣೆ, ಕೊಳಲು ಮತ್ತು ಮೃದಂಗಗಳ ಪರಿಚಯವಿದ್ದಿತು. ಕುದುರೆ ಜೂಜು, ಮತ್ತು ಪಗಡೆಯಾಟ ಅವರ ಇತರ ಮನರಂಜನೆಗಳಾಗಿದ್ದವು.

**ಜಾತಿ ಪದ್ಧತಿ**

ಕೊನೆಯ ವೇದಗಳ ಕಾಲದಲ್ಲಿ ಕೆಲವು ಪ್ರಮುಖ ಬದಲಾವಣೆಗಳು ಸಮಾಜದಲ್ಲಿ ಕಂಡು ಬಂದವು. ಜಾತಿಪದ್ಧತಿಯು ಹೆಚ್ಚು ಹೆಚ್ಚು ಬಿಗಿಯಾಗತೊಡಗಿತು. ವರ್ಣ ಎಂಬ ಪದವನ್ನು ಜಾತಿ ಎಂಬ ಅರ್ಥದಲ್ಲಿ ಬಳಸಲಾಯಿತು. ಋಗ್ವೇದದ ಕಾಲದಲ್ಲಿ ನಾಲ್ಕು ವರ್ಗಗಳಾಗಿ ವಿಂಗಡಿಸಲ್ಪಟ್ಟಿದ್ದ ಸಮಾಜವು ಈಗ ಜಾತಿಪದ್ಧತಿಯ ವ್ಯವಸ್ಥೆಯನ್ನು ಪಡೆಯಿತು. ಕ್ಷತ್ರಿಯರು ರಾಜಕೀಯ ಮತ್ತು ಸೈನಿಕ ಕ್ಷೇತ್ರಗಳಲ್ಲೂ ಬ್ರಾಹ್ಮಣರು ವಿದ್ವತ್ತು ಮತ್ತು ಪೌರೋಹಿತ್ಯ ಕ್ಷೇತ್ರದಲ್ಲೂ ಹೆಚ್ಚು ಪ್ರಬಲರಾದರು. ಈ ಎರಡು ವರ್ಗದವರು ಸಮಾಜದಲ್ಲಿ ತಮಗಿದ್ದ ಸ್ಥಾನಮಾನಗಳಿಂದಾಗಿ ಇತರರಿಗಿಲ್ಲದ ಸೌಲಭ್ಯಗಳನ್ನು ಪಡೆದುಕೊಳ್ಳತೊಡಗಿದರು. ರಾಜನ ಅಧಿಕಾರದ ಪ್ರಾಬಲ್ಯ ಮತ್ತು ಸಾಮ್ರಾಜ್ಯ. ನೀತಿಯ ಬೆಳವಣಿಗೆಯು ಕ್ಷತ್ರಿಯರಿಗೆ ವಿಶೇಷ ಸ್ಥಾನಗಳನ್ನು ದೊರಕಿಸಿಕೊಟ್ಟವು ಹಲವಾರು ರೀತಿಯ ಪೂಜಾ ಪದ್ಧತಿಗಳು ಪುರೋಹಿತರ ಸೇವೆಯನ್ನು ಅತ್ಯಗತ್ಯವಾಗಿಸಿದವು. ಬ್ರಾಹ್ಮಣರು ವಿದ್ಯೆ ಮತ್ತು ಧರ್ಮದ ಮೇಲೆ ಹೊಂದಿದ್ದ ಸ್ವಾಮ್ಯದಿಂದಾಗಿ ಕೊನೆಯ ವೇದಗಳ ಕಾಲವನ್ನು ಬ್ರಾಹ್ಮಣಗಳ ಕಾಲವೆಂದೂ ಕರೆಯುತ್ತಾರೆ. ಬಹುಸಂಖ್ಯಾತ ಜನಸಾಮಾನ್ಯರು ನಿಯತವಾದ ಕೆಲವು ಉದ್ಯೋಗಗಳನ್ನು ಮಾಡುವ ವರ್ಗವಾಗಿ ಮಾರ್ಪಟ್ಟರು. ಬ್ರಾಹ್ಮಣರು ನಡೆಸುತ್ತಿದ್ದ ಯಜ್ಞಯಾಗಾದಿಗಳು ಧಾರ್ಮಿಕ ಆಚರಣೆಗಳು ಅವರಿಗೆ ನಿಷೇಧಿಸಲ್ಪಟ್ಟವು. ವೈಶ್ಯರು ಕ್ಷತ್ರಿಯ ಭೂಮಾಲೀಕರ ಒಕ್ಕಲಾಗಿ ಮಾರ್ಪಟ್ಟರು. ಅವರು ವಿವಿಧ ರೀತಿಯ ಆರ್ಥಿಕ ಕಾರ್ಯ ಚಟುವಟಿಕೆಗಳನ್ನು ಕೈಗೊಂಡು ಈ ಕಾಲದ ಆರ್ಥಿಕ ವ್ಯವಸ್ಥೆಯ ಬೆನ್ನೆಲುಬಾಗಿ ಮಾರ್ಪಟ್ಟರು. ರಾಜನು ಮತ್ತು ಕ್ಷತ್ರಿಯರು ಅವರಿಗೆ ರಕ್ಷಣೆ ನೀಡುತ್ತಿದ್ದುದರಿಂದ ಅವರು ರಾಜನಿಗೆ ಪೊಗದಿ ಇಲ್ಲವೆ ತೆರಿಗೆಯನ್ನು ಸಲ್ಲಿಸಬೇಕಾಗಿತ್ತು. ಅವರಿಗೆ ಭೂಮಿಯ ಮೇಲಿನ ಹಕ್ಕು ಸ್ಥಿರವಾಗಿರಲಿಲ್ಲ ಮತ್ತು ಭೂಮಿಯನ್ನು ಅವರಿಂದ ಯಾವಾಗ ಬೇಕಾದರೂ ಕಸಿದುಕೊಳ್ಳಬಹುದಿತ್ತು. ಶೂದ್ರರೊಂದಿಗೆ ಅವರ ಸಂಪರ್ಕವು ಅವರ ಸ್ಥಾನಮಾನಗಳನ್ನು ಕೆಳಮಟ್ಟಕ್ಕಿಳಿಸಿತು. ಬ್ರಾಹ್ಮಣರು ಮತ್ತು ಕ್ಷತ್ರಿಯರು ಮೇಲ್ವರ್ಗಕ್ಕೂ, ವೈಶ್ಯರು ಮತ್ತು ಶೂದ್ರರು ಕೆಳವರ್ಗಕ್ಕೂ ಸೇರಿದವರೆಂದು ವರ್ಗೀಕೃತವಾದರು. ಶೂದ್ರರು ಸೇವಕರಾಗಿ ಕೀಳು ಕೆಲಸಗಳನ್ನು ಮಾಡಬೇಕಾಯಿತು. ಅವರಿಗೆ ಎಲ್ಲ ರೀತಿಯ ಶಿಕ್ಷೆಗಳು ಮೀಸಲಾಗಿದ್ದವು. ಶೂದ್ರರು ಯಜ್ಞಶಾಲೆಯ ವೇದಿಕೆಯ ಹತ್ತಿರ ಹೋಗುವುದಕ್ಕಾಗಲೀ, ವೇದಗಳನ್ನು ಕಲಿಯುವುದಕ್ಕಾಗಲೀ ಮತ್ತು ಆಸ್ತಿಯ ಹಕ್ಕನ್ನು ಅನುಭವಿಸುವುದಕ್ಕಾಗಲೀ ಅವಕಾಶವಿರಲಿಲ್ಲವೆಂದು ವೇದಗಳ ಕೆಲವು ಶ್ಲೋಕಗಳಿಂದ ತಿಳಿದುಬರುತ್ತದೆ. ಇದರಿಂದ ಕೆಳಜಾತಿಯವರ ಸ್ಥಾನಮಾನಗಳು ಅಧೋಗತಿಗೆ ಇಳಿದಿದ್ದುದಾಗಿ ತಿಳಿದುಬರುತ್ತದೆ.

**ವರ್ಣ ವ್ಯವಸ್ಥೆಯ ವಿಕಾರ**

ಆರ್ಯರು ಮೊದಲಿಗೆ ತಮ್ಮ ರಾಜಕೀಯ, ಸಾಮಾಜಿಕ, ಆರ್ಥಿಕ ಮತ್ತು ದಾರ್ಮಿಕ ಅನುಕೂಲತೆಗಳಿಗಾಗಿ ಸಮಾಜವನ್ನು ವರ್ಗೀಕರಿಸಿಕೊಂಡಿದ್ದರು. ಈ

ರೀತಿಯ ಸಾಮಾಜಿಕ ವಿಭಜನೆಯಿಂದ ಮೊದಲಿಗೆ ಯಾವ ತೊಂದರೆಯೂ ಕಂಡುಬಂದಿರಲಿಲ್ಲ. ಆದರೆ ಕಾಲಾನುಕ್ರಮದಲ್ಲಿ ಸಾಮಾಜಿಕ ಕಟ್ಟುಪಾಡುಗಳು ಕ್ಲಿಷ್ಟಗೊಂಡು ಬ್ರಾಹ್ಮಣರು ಮತ್ತು ಕ್ಷತ್ರಿಯರು ವಿಶೇಷ ಸೌಲಭ್ಯಗಳನ್ನು ಹೊಂದಿ ವೈಶ್ಯರ ಮತ್ತು ಶೂದ್ರರ ಸ್ಥಾನಮಾನಗಳು ಕೀಳುಸ್ಥಿತಿಗೆ ಇಳಿದವು. ತರುವಾಯದಲ್ಲಿ ಜಾತೀಯತೆಯು ಜೀವನದ ಎಲ್ಲ ಕ್ಷೇತ್ರಗಳಿಗೂ ಪಸರಿಸಿತು. ಜಾತೀಯತೆಯು ಹೆಚ್ಚು ಹೆಚ್ಚು ಬೆಳೆದಂತೆಲ್ಲಾ ಮೇಲ್ವರ್ಗದವರು ಕೆಳವರ್ಗದವರ ಮೇಲೆ ನಿರಂಕುಶವಾಗಿ ವರ್ತಿಸತೊಡಗಿದರು. ಜಾತೀಯತೆಯ ಉದ್ದೇಶವು ಸಾಧಿತವಾದ ಮೇಲೆ ಸಮಾಜವು ಈ ಪದ್ಧತಿಯನ್ನು ಪೂರ್ಣವಾಗಿ ತೊಡೆದು ಹಾಕಬಹುದಿತ್ತು ಮತ್ತು ಜಾತಿಯ ಹೆಸರಿನಲ್ಲಿ ಕೀಳು ಜಾತಿಯ ನಿಸ್ಸಹಾಯಕ ಜನಗಳ ಮೇಲೆ ಅನ್ಯಾಯಗಳು ಮತ್ತು ಕ್ರೂರ ಕೃತ್ಯಗಳು ನಡೆಯದಂತೆ ತಪ್ಪಿಸಬಹುದಿತ್ತು. ಒಂದು ಕಾಲದಲ್ಲಿ ಸಾಮಾಜಿಕ ಹೊಂದಾಣಿಕೆಯನ್ನೂ ಮತ್ತು ಉದ್ಯೋಗದಲ್ಲಿ ಪ್ರತಿಭೆಯನ್ನು ಪ್ರೋತ್ಸಾಹಿಸಲು ರೂಪಿಸಿಕೊಂಡಿದ್ದ ಸಾಮಾಜಿಕ ಸಂಸ್ಥೆಯು ಕಾಲಾನುಕ್ರಮದಲ್ಲಿ ಜಾತಿ ಪದ್ಧತಿಯ ಕ್ರೂರ ರೂಪವನ್ನು ಪಡೆದು ಲಕ್ಷಾಂತರ ಜನಗಳಿಗೆ ದುರದೃಷ್ಟ ಮತ್ತು ಹಾನಿಕರ ವ್ಯವಸ್ಥೆಯಾಗಿ ಮಾರ್ಪಟ್ಟಿದುದು ಶೋಚನೀಯ ಸಂಗತಿ. ಹುಟ್ಟಿನ ಆಕಸ್ಮಿಕವು ಎಲ್ಲವನ್ನು ನಿರ್ಧರಿಸುವಂತಾಯಿತು. ಗುಣ, ಸ್ವಭಾವ ವಿದ್ಯೆ ಮತ್ತು ಪ್ರತಿಭೆಗೆ ಹುಟ್ಟಿನ ಮುಂದೆ ಬೆಲೆಯಿಲ್ಲವಾಯಿತು. ಒಬ್ಬನು ಬ್ರಾಹ್ಮಣ ಅಥವಾ ಶೂದ್ರನೆಂಬುದನ್ನು ಅವನ ಹುಟ್ಟು ನಿರ್ಧರಿಸಿತು. ಹಿಂದೂ ಸಮಾಜದಲ್ಲಿ ಜಾತಿ ಮತ್ತು ಧರ್ಮದ ಹೆಸರಿನಲ್ಲಿ ಕೆಳವರ್ಗದ ಜನರಿಗೆ ಸಾಕಷ್ಟು ಅನ್ಯಾಯಗಳು ಎಸಗಲ್ಪಟ್ಟಿವೆ ಮತ್ತು ಇಂದೂ ಕೂಡ ಅದು ಮುಂದುವರಿಯುತ್ತಲೇ ಇದೆ. ಸ್ವತಂತ್ರ ಭಾರತದ ರಾಜ್ಯಾಂಗವು ಅಸ್ಪೃಶ್ಯತೆಯ ಆಚರಣೆಯನ್ನು ನಿಷೇಧಿಸಿ ಕಾನೂನು ಮಾಡಿದ್ದರೂ, ಜಾತಿಮತಗಳ ಘರ್ಷಣೆ ಮತ್ತು ಅಸ್ಪೃಶ್ಯತೆಯ ಆಚರಣೆಯು ಒಂದಲ್ಲ ಒಂದು ರೀತಿಯಲ್ಲಿ ಮುಂದುವರಿಯುತ್ತಿರುವುದು ದುರದೃಷ್ಟ ಸಂಗತಿಯಾಗಿದೆ. ಇದು ಭಾರತೀಯ ಸಂಸ್ಕೃತಿಯ ಹಿರಿಮೆಗೆ ದೊಡ್ಡ ಕಳಂಕವಾಗಿದೆ.



**ಆರ್ಥಿಕ ಸ್ಥಿತಿ**

ಈ ಕಾಲದ ಆರ್ಥಿಕ ಸ್ಥಿತಿಗತಿಗಳು ಋಗ್ವೇದದ ಕಾಲಕ್ಕಿಂತ ಉತ್ತಮವಾಗಿದ್ದವು. ವ್ಯವಸಾಯ ಮತ್ತು ಕೈಗಾರಿಕೆಗಳು ಅಭಿವೃದ್ಧಿ ಹೊಂದಿದವು. ಗ್ರಾಮಾಂತರ ಪ್ರದೇಶಗಳಲ್ಲಿ ವ್ಯವಸಾಯ ಮತ್ತು ಪಶುಪಾಲನೆಯು ಜನರ ಮುಖ್ಯ ಕಸುಬಾಯಿತು. ವ್ಯವಸಾಯದ ಕಾರ್ಯಾಚರಣೆಗಳಲ್ಲಿ ಉತ್ತಮ ರೀತಿಯ ಉಪಕರಣಗಳು ಬಳಕೆಗೆ ಬಂದವು. ಭೂಮಿಯನ್ನು ಉಳಲು ಭಾರವಾದ ನೇಗಿಲನ್ನು ಉಪಯೋಗಿಸಿದರು ಮತ್ತು ಅದನ್ನು ಎಳೆಯುವುದಕ್ಕೆ ಇಪ್ಪತ್ತನಾಲ್ಕು ಎತ್ತುಗಳನ್ನು ಕಟ್ಟುತ್ತಿದ್ದರು. ರೈತರು ಗೊಬ್ಬರದ ಉಪಯೋಗವನ್ನು ತಿಳಿದಿದ್ದರು. ಭತ್ತ, ಗೋಧಿ, ಬಾರ್ಲಿ, ಬೀನ್ಸ್ ಎಣ್ಣೆಬೀಜಗಳನ್ನು ಹೆಚ್ಚಾಗಿ ಬೆಳೆಯುತ್ತಿದ್ದರು. ದನಕರುಗಳ ಮತ್ತು ವ್ಯವಸಾಯದ ಸಂಪತ್ಸಮೃದ್ಧಿಗಳಿಗಾಗಿ ದೇವರುಗಳಿಗೆ ಪ್ರಾರ್ಥನೆ ಸಲ್ಲಿಸುತ್ತಿದ್ದರು. ಇಂದಿನಂತೆಯೆ ಅಂದಿನ ರೈತರೂ ಕ್ಷಾಮಡಾಮರಗಳು, ಪ್ರವಾಹ ಮತ್ತು ಪೈರುಗಳಿಗೆ ತಗುಲುವ ರೋಗರುಜಿನಗಳಿಂದ ಕಷ್ಟಕ್ಕೊಳಗಾಗುತ್ತಿದ್ದರು. ಸಾಕು ಪ್ರಾಣಿಗಳಲ್ಲಿ ಹಸುವು ಈ ಕಾಲದಲ್ಲೂ ಪವಿತ್ರವೆಂದು ಭಾವಿಸಲ್ಪಟ್ಟು ಯಜ್ಞಯಾಗಾದಿಗಳಲ್ಲಿ ಅದನ್ನು

ವಧಿಸುವುದನ್ನು ಬಿಟ್ಟರೆ ಇತರ ಸಂದರ್ಭಗಳಲ್ಲಿ ಅದರ ಹತ್ಯೆಯನ್ನು ಶಿಕ್ಷಾರ್ಹವನ್ನಾಗಿ ಮಾಡಲಾಗಿತ್ತು.

**ಕಸುಬುಗಳು**

ನಗರಗಳು ಮತ್ತು ಪಟ್ಟಣಗಳಲ್ಲಿ ಹೊಸ ಹೊಸ ವೃತ್ತಿಗಳು ಅಸ್ತಿತ್ವಕ್ಕೆ ಬಂದವು. ಇಂತಹ ವೃತ್ತಿಗಳಲ್ಲಿ ಅಕ್ಕಸಾಲಿಗರು, ಕುಂಬಾರರು, ಚಮ್ಮಾರರು, ಹಗ್ಗ ಹೊಸೆಯುವವರು. ದೋಬಿಗಳು, ನಾಯಿಂದರು, ಬಡಗಿಗಳು ಮತ್ತು ಕಟುಕರು ಮೊದಲಾದ ವೃತ್ತಿಯ ಜನರು ಸಮಾಜದಲ್ಲಿದ್ದರು. ನೇಯುವುದು, ಬಣ್ಣಹಾಕುವುದು, ಕಸೂತಿ ಮಾಡುವುದು ಬುಟ್ಟಿ ಮತ್ತು ಚಾಪೆ ಹೆಣೆಯುವುದು ಮತ್ತಿತರ ಕೆಲಸಗಳನ್ನು ಸ್ತ್ರೀಯರು ಹೆಚ್ಚಾಗಿ ಮಾಡುತ್ತಿದ್ದರು. ತಾಮ್ರ, ಸೀಸ, ಬೆಳ್ಳಿ, ಬಂಗಾರ ತವರ ಮತ್ತು ಕಬ್ಬಿಣ ಮೊದಲಾದ ಲೋಹಗಳ ಪರಿಚಯವಿದ್ದಿತು. ವೈಶ್ಯರು ವ್ಯವಸಾಯ ಮತ್ತು ವ್ಯಾಪಾರವನ್ನೇ ಅಲ್ಲದೆ ಹಣದ ವಹಿವಾಟನ್ನೂ ಮಾಡುತ್ತಿದ್ದರು. ವರ್ತಕರ ಶ್ರೇಣಿಗಳನ್ನು ಏರ್ಪಡಿಸಿಕೊಂಡಿದ್ದರು. ವ್ಯಾಪಾರವು ಆಂತರಿಕವಾಗಿಯೇ ಅಲ್ಲದೆ ವಿದೇಶಗಳೊಂದಿಗೂ ನಡೆಯುತ್ತಿತ್ತು. ಹಡಗಿನ ಪರಿಚಯವಿದ್ದು ಬ್ಯಾಬಿಲೋನಿಯಾ ಮೊದಲಾದ ದೇಶಗಳೊಂದಿಗೆ ವ್ಯಾಪಾರ ನಡೆಯುತ್ತಿತ್ತು. ನದಿಗಳ ಮತ್ತು ಸಮುದ್ರಗಳ ಮೇಲೆ ಪದಾರ್ಥಗಳನ್ನು ದೋಣಿಗಳ ಮೂಲಕ ಸಾಗಿಸುತ್ತಿದ್ದರು. ರಸ್ತೆಸಾರಿಗೆಯಲ್ಲಿ ಪದಾರ್ಥಗಳನ್ನು ಸಾಗಿಸಲು ಗಾಡಿಗಳನ್ನು ಉಪಯೋಗಿಸುತ್ತಿದ್ದರು. ವ್ಯವಸ್ಥಿತ ನಾಣ್ಯ ಪದ್ಧತಿಯು ಇದ್ದಿತೆ ಇಲ್ಲವೆ ಎಂಬುದು ನಿರ್ದಿಷ್ಟವಾಗಿ ತಿಳಿದುಬಂದಿಲ್ಲ. ನಿಷ್ಕ, ಕೃಷ್ಣಲ, ಶತಮಾನ ಎಂದು ಕರೆಯಲಾದ ಚಿನ್ನದ ಚೂರುಗಳನ್ನು ವ್ಯಾಪಾರದಲ್ಲಿ ಬಳಸುತ್ತಿದ್ದರು.

**ಧರ್ಮ ಮತ್ತು ದಾರ್ಶನಿಕತೆ**

ಋಗ್ವೇದದ ಕಾಲದಲ್ಲಿ ಆರ್ಯರ ಧರ್ಮವು ಅತ್ಯಂತ ಸರಳವಾಗಿತ್ತು. ಆದರೆ ಕೊನೆಯ ವೇದಗಳ ಕಾಲದಲ್ಲಿ ಧಾರ್ಮಿಕ ಆಚರಣೆಗಳು ಹೆಚ್ಚು ಕ್ಲಿಷ್ಟಗೊಂಡವು. ಪ್ರಾರ್ಥನೆ ಮತ್ತು ಸರಳವಾದ ಆಚರಣೆಗಳಿಂದ ಕೂಡಿದ್ದ ಧರ್ಮವು ಹೆಚ್ಚಿನ ಖರ್ಚು ವೆಚ್ಚಗಳಿಂದಲೂ ಮತ್ತು ಯಜ್ಞಯಾಗಾದಿಗಳಿಂದಲೂ ಕೂಡಿದ ಧರ್ಮವಾಗಿ ಮಾರ್ಪಟ್ಟಿತು. ಧಾರ್ಮಿಕ ಆಚರಣೆಗಳ ಜ್ಞಾನವು ಪುರೋಹಿತರಿಗೆ ಮಾತ್ರ ಗೊತ್ತಿರುವುದೆಂಬ ಭಾವನೆಯು ಬಲವಾಯಿತು. ಅಂತೆಯೆ ಪುರೋಹಿತರೂ ಕೂಡ ವ್ಯಾಪಕವಾದ ಯಜ್ಞಯಾಗಾದಿಗಳನ್ನು ಮತ್ತು ಧಾರ್ಮಿಕ ಆಚರಣೆಗಳನ್ನು ಜಾರಿಗೆ ತಂದರು. ಇದರಿಂದ ವ್ಯಕ್ತಿಯ ಜೀವನವು ಧಾರ್ಮಿಕ ಆಚರಣೆಗಳಿಂದ ತುಂಬಿಹೋಯಿತು. ಇವುಗಳನ್ನು ಆಚರಿಸಲು ಪುರೋಹಿತರ ಮಾರ್ಗದರ್ಶನ ಅತ್ಯಾವಶ್ಯಕವಾಯಿತು. ಆದರೆ ಜನಸಾಮಾನ್ಯರಿಗೆ ಈ ವ್ರತಾಚರಣೆಗಳು ಆಚರಣೆಯಲ್ಲಿ ಕಷ್ಟವಾದವು. ಅಲ್ಲದೆ ಇವುಗಳನ್ನು ನೆರವೇರಿಸಲು ಪೌರೋಹಿತ್ಯವನ್ನೇ ತಮ್ಮ ಕಸುಬನ್ನಾಗಿ ಮಾಡಿಕೊಂಡ ಪುರೋಹಿತರು ಜನರಿಗೆ ಮಾರ್ಗದರ್ಶನ ಮಾಡುವಂತಾಯಿತು. ಈ ರೀತಿ ಮಾರ್ಗದರ್ಶನ ಮಾಡಲು ವೇದಗಳ ಬಗ್ಗೆ ಹೆಚ್ಚಿನ ತಿಳುವಳಿಕೆಯು ಅತ್ಯಾವಶ್ಯಕವಾಗಿ ವೇದಗಳು ಮತ್ತು ವೈದಿಕ ಸಾಹಿತ್ಯವನ್ನು ಅಭ್ಯಸಿಸುವುದು ಪುರೋಹಿತರ ಪೂರ್ಣ ಕೆಲಸವಾಯಿತು. ಬ್ರಾಹ್ಮಣ ಪುರೋಹಿತರು ಜನರ ಧಾರ್ಮಿಕ ಆಚರಣೆಗಳ ಬಗ್ಗೆ

ಮಹತ್ತರ ಬದಲಾವಣೆಗಳನ್ನು ಜಾರಿಗೆ ತಂದರು. ಯಜ್ಞಯಾಗಾದಿಗಳ ಮತ್ತು ವ್ರತಾಚರಣೆಗಳ ಮೂಲಕ ದೇವರುಗಳ ಕೃಪೆಯನ್ನು ದೊರಕಿಸಿಕೊಡುವ ಕೆಲಸವು ಪುರೋಹಿತರ ಕೈಯಲ್ಲಿದೆ ಎಂಬ ನಂಬಿಕೆಯು ಬಲವಾಯಿತು. ಇದರಿಂದ ಧಾರ್ಮಿಕ ಕ್ಷೇತ್ರದ ಮೇಲೆ ಪುರೋಹಿತರ ಅಧಿಕಾರವು ಪೂರ್ಣವಾಗಿ ಸ್ಥಾಪಿತವಾಯಿತು.

ಕೊನೆಯ ವೇದಗಳ ಕಾಲದಲ್ಲೂ ಋಗ್ವೇದದ ಕಾಲದಲ್ಲಿ ಪೂಜಿಸುತ್ತಿದ್ದ ದೇವತೆಗಳ ಪೂಜೆಯು ಮುಂದುವರಿದರೂ ಇಂದ್ರ ಮತ್ತು ವರುಣರ ಸ್ಥಾನಮಾನಗಳು ಕಡಿಮೆಯಾಗಿ ಅವುಗಳ ಸ್ಥಾನವನ್ನು ಪ್ರಜಾಪತಿ ಮತ್ತು ಅಗ್ನಿಯು ಪಡೆದರು. ಏಕದೇವತಾರಾಧನೆಯು ಕಡೆಗೆ ಹೆಚ್ಚಿನ ಒಲವು ಕಂಡುಬಂದಿತು. ಮತ್ತು ಈ ಒಂದು ಒಲವಿನಲ್ಲಿ ಸಂಕೇತ ಮತ್ತು ಪಾರಮಾರ್ಥಿಕತೆಯ ಬೆಳವಣಿಗೆಯು ಕಂಡುಬಂದಿತು. ವ್ರತಾಚರಣೆಗಳು ಮತ್ತು ಯಜ್ಞಯಾಗಾದಿಗಳು ಗೂಢಾರ್ಥಗಳನ್ನು ಹೊಂದಿವೆಯೆಂದು ಪುರೋಹಿತರು ಹೇಳತೊಡಗಿದರು. ಯಜ್ಞವೇದಿಕೆಗಳನ್ನು ಇಷ್ಟಾನುಸಾರವಾಗಿ ನಿರ್ಮಿಸುವಂತಿರಲಿಲ್ಲ. ಅವುಗಳನ್ನು ಹೇಗೆ ನಿರ್ಮಿಸಬೇಕೆಂಬುದು ಪುರೋಹಿತರಿಗೆ ಮಾತ್ರ ಗೊತ್ತಿತ್ತು. ಯಜ್ಞ ವೇದಿಕೆಯ ನಿರ್ಮಾಣವು ಬ್ರಹ್ಮಾಂಡದ ಏಕತೆಯ ಸಂಕೇತವಾಗಿತ್ತು.

### ಆಶ್ರಮ ವ್ಯವಸ್ಥೆ ಮತ್ತು ಸಂಸ್ಕಾರಗಳು

ಈ ಕಾಲದಲ್ಲಿ ಮಾನವ ಜೀವನವು ಬ್ರಹ್ಮಚರ್ಯ, ಗೃಹಸ್ತ, ವಾನಪ್ರಸ್ತ ಮತ್ತು ಸನ್ಯಾಸ ಎಂಬ ನಾಲ್ಕು ಆಶ್ರಮ ವ್ಯವಸ್ಥೆಗಳಿಂದಲೂ ಮತ್ತು ಅನೇಕ ರೀತಿಯ ಸಂಸ್ಕಾರಗಳು ಹಾಗೂ ವ್ರತಾಚಾರಣೆಗಳಿಂದಲೂ ತುಂಬಿದ್ದಿತು. ಈ ರೀತಿಯ ಸಂಸ್ಕಾರಗಳು ಹುಟ್ಟುವುದಕ್ಕೆ ಮುಂಚೆಯೆ ಆರಂಭವಾಗಿ ಅವು ಸತ್ತ ಮೇಲೂ ಮುಂದುವರಿಯುತ್ತಿದ್ದವು. ಒಟ್ಟು ನಲವತ್ತೆಂಟು ವ್ರತಾಚರಣೆಗಳನ್ನು ಗೊತ್ತುಪಡಿಸಲಾಗಿತ್ತು. ಹುಟ್ಟುವುದಕ್ಕೆ ಮುಂಚೆ ಗರ್ಭದಾನ, ಪುಂಸವನ, ಸೀಮಂತೋಯನ ವ್ರತ ಸಮಾರಂಭಗಳನ್ನು ನಡೆಸಲಾಗುತಿತ್ತು. ಮಗುವು ಹುಟ್ಟಿದನಂತರ ಜಾತಕ ಕರ್ಮವನ್ನು ಆಚರಿಸಲಾಗುತ್ತಿತ್ತು. ಹತ್ತನೆ ದಿವಸ ನಾಮಕರಣ ಸಮಾರಂಭವನ್ನೂ ಆರನೆ ತಿಂಗಳಲ್ಲಿ ಅನ್ನಪ್ರಸಾನ ಸಮಾರಂಭವನ್ನೂ ಆಚರಿಸಲಾಗುತ್ತಿತ್ತು. ಬಾಲಕನು ಮೂರನೆ ವರ್ಷಕ್ಕೆ ಬಂದಾಗ ಹುಟ್ಟು ಕೂದಲನ್ನು ತೆಗೆದು ಚೂಡಕರ್ಮವನ್ನು ನೆರವೇರಿಸಲಾಗುತಿತ್ತು. ಮುಂದಿನದು ಉಪನಯನ ಸಮಾರಂಭ. ಇದನ್ನು ಎಂಟರಿಂದ ಹನ್ನೆರಡು ವರ್ಷ ತುಂಬುವುದರೊಳಗೆ ನೆರವೇರಿಸಲಾಗುತಿತ್ತು. ಈ ಸಮಾರಂಭದ ನಂತರ ಬಾಲಕನು ಬ್ರಹ್ಮಚಾರಿಯಾಗಿ ವಿದ್ಯೆ ಕಲಿಯಲು ಗುರುವಿನ ಬಳಿ ಹೋಗಬೇಕಿತ್ತು. ವಿದ್ಯೆಯನ್ನು ಪೂರ್ಣವಾಗಿ ಕಲಿತ ನಂತರ ಸಮವರ್ತನ ಸಮಾರಂಭವನ್ನು ಏರ್ಪಡಿಸಿ ಅನಂತರ ಬಾಲಕನನ್ನು ಮನೆಗೆ ಕರೆತರಲಾಗುತಿತ್ತು. ಅನಂತರ ಬಾಲಕನ ಜೀವನದಲ್ಲಿ ಮತ್ತೊಂದು ಬಹುಮುಖ್ಯ ಘಟನೆಯಾದ ಗೃಹಸ್ಥಾಶ್ರಮ ಸಮಾರಂಭವನ್ನು ಏರ್ಪಡಿಸಲಾಗುತಿತ್ತು. ಗೃಹಸ್ಥನಾದವನು ಮುಂದೆ ಪಂಚಮಹಾಯಜ್ಞಗಳು, ಪಾಕಯಜ್ಞಗಳು ಎಂದು ಕರೆಯಲಾದ ಸಣ್ಣ ಪುಟ್ಟ ಏಳು ಯಜ್ಞಗಳನ್ನೇ ಅಲ್ಲದೆ ಹವಿರಂಯಜ್ಞಗಳು ಮತ್ತು ಸೋಮಯಜ್ಞಗಳನ್ನು ನೆರವೇರಿಸಬೇಕಿತ್ತು. ಇವೆಲ್ಲವುಗಳ ಆಚರಣೆಯಲ್ಲಿ ಪುರೋಹಿತರು ಬಹುಮುಖ್ಯ ಪಾತ್ರ ವಹಿಸುತ್ತಿದ್ದರು.

**ಅಂತ್ಯಸಂಸ್ಕಾರ**

ಆರ್ಯರು ಬ್ರಾಹ್ಮಣಗಳ ಕಾಲದಲ್ಲಿ ಅಂತ್ಯ ಸಂಸ್ಕಾರಕ್ಕೆ ಹೆಚ್ಚಿನ ಪ್ರಾಧಾನ್ಯತೆ ಕೊಟ್ಟಿದ್ದರು. ಇದನ್ನು 'ಅಂತ್ಯೇಷ್ಟಿ' ಎಂದು ಕರೆಯುತ್ತಿದ್ದರು. ಮನುಷ್ಯನು ಸತ್ತು ಅವನ ದೇಹವು ದಹನವಾದ ಮೇಲೆ ಆತ್ಮವು ಮತ್ತೊಂದು ದೇಹವನ್ನು ಪ್ರವೇಶಿಸಲು ನೇರವಾಗಿ ಸ್ವರ್ಗಕ್ಕಾಗಲಿ ಅಥವ ನರಕಕ್ಕಾಗಲೀ ಹೋಗುವುದಿಲ್ಲವೆಂದು ನಂಬಲಾಗಿತ್ತು. ದೇಹವು ಭೂಮಿಯ ಮೇಲೆ ಮಾಡಿದ ಪಾಪಪುಣ್ಯಗಳ ಇತ್ಯರ್ಥಕ್ಕಾಗಿ ಯಮಧರ್ಮನ ಸನ್ನಿಧಿಗೆ ಹೋಗುವುದೆಂದು ನಂಬಲಾಗಿತ್ತು. ಅಂತ್ಯ ಸಂಸ್ಕಾರಗಳು ಕ್ರಮಬದ್ಧವಾಗಿ ನೆರವೇರಿಸಲ್ಪಟ್ಟಿದ್ದರೆ ಅನುಭವಗ್ರಾಹಿಯಾದ ದೇಹವನ್ನು ಸೇರಲು ಆತ್ಮನಿಗೆ ಹತ್ತು ದಿವಸಗಳಾದರೂ ಬೇಕಾಗುವುದೆಂದು ಭಾವಿಸಲಾಗಿತ್ತು. ಆತ್ಮವು ಈ ಕೆಳಕಂಡ ರೀತಿಯಲ್ಲಿ ದೇಹದ ಪೂರ್ಣರೂಪವನ್ನು ಪಡೆಯುವುದೆಂದು ಗರುಡ ಪುರಾಣವು ತಿಳಿಸುತ್ತದೆ ಮೊದಲನೆಯ ದಿವಸ ರುಂಡವೂ, ಎರಡನೆಯ ದಿವಸ ಕುತ್ತಿಗೆಯೂ, ಮೂರನೆಯ ದಿನ ಹೃದಯವೂ, ನಾಲ್ಕನೆದಿನ ಬೆನ್ನು ಮೂಳೆಯೂ, ಐದನೆದಿನ ನಾಭಿಯೂ, ಆರನೆಯ ದಿನ ಜನನೇಂದ್ರಿಯಗಳು. ಏಳನೆ ದಿನ ತೊಡೆಗಳು, ಎಂಟನೆದಿನ ಮೊಣಕಾಲುಗಳು ಒಂಬತ್ತನೆ ದಿನ ಕಾಲುಗಳೂ ಹತ್ತನೆದಿನ ಪಾದಗಳನ್ನೂ ಪಡೆಯುವುದು ಎಂದು ತಿಳಿಯಲಾಗಿತ್ತು. ಸಂಸ್ಕಾರಗಳನ್ನು ಅಲಕ್ಷಿಸುವುದಾಗಲೀ ಇಲ್ಲವೆ ನಿಯಮಗಳ ಪ್ರಕಾರ ಪುರೋಹಿತರನ್ನು ನೇಮಿಸಿಕೊಂಡು ಅವುಗಳನ್ನು ಆಚರಿಸದಿದ್ದರೆ ಸತ್ತವನ ಆತ್ಮವು ಪಿಶಾಚಿಯಾಗಿ ಅವನ ಬಂಧುಗಳನ್ನು ಪೀಡಿಸುವುದೆಂದು ನಂಬಲಾಗಿತ್ತು. ಹತ್ತು ದಿವಸಗಳ ಅವಧಿಯಲ್ಲಿ ಆತ್ಮನಿಂದ ರೂಪಗೊಂಡ ದೇಹಕ್ಕೆ ಆಹಾರವು ಅವಶ್ಯಕವಾಗಿ ತಿಂಗಳಿಗೊಮ್ಮೆ ಶ್ರದ್ಧಾ ಸಂಸ್ಕಾರವನ್ನು ನಡೆಸಲಾಗುತ್ತಿತ್ತು. ಶ್ರದ್ಧಾ ಸಂಸ್ಕಾರದ ಆಚರಣೆಯಲ್ಲಿ ಪುರೋಹಿತರಿಗೆ ಬ್ರಾಹ್ಮಣರಿಗೆ ಆಹಾರ ಒಡವೆ ವಸ್ತುಗಳನ್ನು ಉಡುಗೊರೆಯಾಗಿ ಕೊಡಲಾಗುತ್ತಿತ್ತು. ಇತರ ಸಂಸ್ಕಾರಗಳ ಆಚರಣೆಯಂತೆಯೆ ಅಂತ್ಯ ಸಂಸ್ಕಾರದ ಆಚರಣೆಯಲ್ಲೂ ಪುರೋಹಿತರ ಪಾತ್ರವು ಬಹುಮುಖ್ಯವಾಗಿತ್ತು. ಈ ರೀತಿಯ ಸಂಸ್ಕಾರಗಳನ್ನು ನೇರವೇರಿಸದಿದ್ದರೆ ಸ್ವರ್ಗ ಅಥವ ನರಕದಲ್ಲಿರುವ ಅವರ ಪೂರ್ವಿಕರು ಅತಿಯಾದ ಯಾತನೆಗಳನ್ನು ಅನುಭವಿಸುವರೆಂದು ಪುರಾಣಗಳೂ ತಿಳಿಸುತ್ತವೆ. ಶ್ರದ್ಧ ಸಂಸ್ಕಾರಗಳಿಗಾಗಿ ಖರ್ಚು ಮಾಡುವ ಹಣವು ನಿಷ್ಫಲವಾಗುವುದಿಲ್ಲವೆಂದೂ ಆದರಿಂದ ಪಿತೃಲೋಕದಲ್ಲಿರುವವರು ತೃಪ್ತಿಪಟ್ಟುಕೊಳ್ಳುವರೆಂದೂ ಮತ್ತು ಅದನ್ನು ನೆರವೇರಿಸುವವರಿಗೆ ಧಾರ್ಮಿಕ ಪುಣ್ಯ ಸಂಪತ್ತು ಲಭಿಸುವುದೆಂದು ನಂಬಲಾಗಿತ್ತು.

ಒಟ್ಟಿನಲ್ಲಿ ಈ ಕಾಲದಲ್ಲಿ ಆಚರಣೆಗೆ ಬಂದ ವ್ರತಾಚರಣೆಗಳು ದುಬಾರಿಯುತವಾಗಿದ್ದವು. ಹಣವಂತರು ಮಾತ್ರ ಅವುಗಳನ್ನು ಆಚರಿಸಬಹುದಾಗಿತ್ತೇ ಹೊರತು ಜನ ಸಾಮಾನ್ಯರಿಗೆ ಅವುಗಳು ನಿಲುಕದಂತಹವುಗಳಾಗಿದ್ದವು. ಆದಾಗ್ಯೂ ಇವುಗಳಿಂದ ಜನರಲ್ಲಿ ಧಾರ್ಮಿಕ ಮನೋಭಾವನೆಯು ಬಲವಾಗಿ ಬೇರೂರಿತು. ಅಲ್ಲದೆ ಇಂದೂ ಕೂಡ ಜನರು ತಮ್ಮ ತಮ್ಮ ಶಕ್ತ್ಯಾನುಸಾರವಾಗಿ ಈ ವ್ರತಾಚರಣೆಗಳನ್ನು ತಪ್ಪದೆ ಪಾಲಿಸುತ್ತಿದ್ದಾರೆ.

## ತಾತ್ವಿಕ ಬೆಳವಣಿಗೆ

ವ್ರತ ಸಂಸ್ಕಾರಗಳ ಆಚರಣೆಯ ಬಗ್ಗೆ ಮಾಡಿದ ಅತಿಯಾದ ಕಟ್ಟುಪಾಡುಗಳು ಕಾಲಾನುಕ್ರಮದಲ್ಲಿ ತಾತ್ವಿಕ ಬೆಳವಣಿಗೆಗೆ ಕಾರಣವಾದವು. ಈ ರೀತಿಯ ವೆಚ್ಚಗಳಿಂದ ಕೂಡಿದ ವ್ರತಾಚರಣೆಗಳಿಂದ ಜನರಿಗೆ ನಿಜವಾದ ಧಾರ್ಮಿಕ ಜ್ಞಾನವು ದೊರೆಯಲಾರದೆಂದು ಕೆಲವು ಚಿಂತನಕಾರರು ಅರಿತರು. ಪ್ರತಿಯೊಬ್ಬ ಮಾನವನಲ್ಲೂ ಇರುವ ಬ್ರಹ್ಮನ ಸ್ವರೂಪನಾದ ಆತ್ಮನನ್ನು ಈ ರೀತಿಯ ಸಂಸ್ಕಾರಗಳಿಂದ ತಿಳಿಯಲು ಸಾಧ್ಯವಿಲ್ಲವೆಂದು ತಿಳಿದರು. ಇಂತಹ ಒಂದು ಜ್ಞಾನವು ಋಗ್ವೇದದ ಕಾಲದಲ್ಲೇ ಕಂಡುಬಂದಿತ್ತಾದರೂ ಅದು ಕೊನೆಯ ವೇದಗಳ ಕಾಲದಲ್ಲಿ ಉನ್ನತ ಮಟ್ಟವನ್ನು ತಲುಪಿತು. ಅರಣ್ಯಕಗಳಲ್ಲಿ ಮತ್ತು ಉಪನಿಷತ್ತುಗಳಲ್ಲಿ ತಾತ್ವಿಕ ಜ್ಞಾನವು ತುತ್ತತುದಿಯನ್ನು ಮುಟ್ಟಿದುದನ್ನು ನಾವು ಕಾಣಬಹುದು. ತಾತ್ವಿಕ ಚಿಂತನೆಯಲ್ಲಿ ಕ್ಷತ್ರಿಯರೂ ಕೂಡ ಖ್ಯಾತಿ ಗಳಿಸಿದ್ದರು. ಕ್ರಿ.ಪೂ.ಆರನೆ ಶತಮಾನದಲ್ಲಿ ಯಜ್ಞ ಯಾಗಾದಿಗಳಿಂದ ಮತ್ತು ವ್ರತ ಸಂಸ್ಕಾರಗಳಿಂದ ಕೂಡಿದ್ದ ವೈದಿಕ ಧರ್ಮದ ವಿರುದ್ಧ ದಂಗೆಯ ರೂಪದಲ್ಲಿ ಜೈನ ಮತ್ತು ಬೌದ್ಧ ಮತಗಳು ಅಸ್ತಿತ್ವಕ್ಕೆ ಬಂದವು. ಬ್ರಾಹ್ಮಣ ಧರ್ಮದವರು ತತ್ವಶಾಸ್ತ್ರದ ಈ ಒಂದು ಬೆಳವಣಿಗೆಯನ್ನು ಗಮನಿಸಿದರು ಮತ್ತು ಧರ್ಮದ ಬಗ್ಗೆ ಬಹುಸಂಖ್ಯಾತರಾದ ಜನಸಾಮಾನ್ಯರ ವರ್ತನೆಯಲ್ಲಿ ಆಗುತ್ತಿದ್ದ ಬದಲಾವಣೆಯನ್ನೂ ಮನಗಂಡರು.

## ಧರ್ಮದಲ್ಲಿ ಸಂಯೋಜನೆ

ಪ್ರಜಾಪತಿಯು ಪ್ರಧಾನವಾಗಿದ್ದ ಯಜ್ಞಯಾಗಾದಿಗಳ ಧರ್ಮದಲ್ಲಾಗಲೀ ಅಥವ ಅರಣ್ಯಕಗಳ ಹಾಗೂ ಉಪನಿಷತ್ತುಗಳಲ್ಲಿ ಪ್ರತಿಪಾದಿಸಲಾಗಿದ್ದ ತತ್ತ್ವೋಪದೇಶಗಳಲ್ಲಾಗಲೀ ಜನಸಾಮಾನ್ಯರಿಗೆ ಧರ್ಮವು ನಿಲುಕಲಾರದ ವಸ್ತುವಾಗಿ ಕಂಡುಬಂದಿತು. ಹೆಚ್ಚು ತಿಳುವಳಿಕೆಯಿಲ್ಲದ ಜನಸಾಮಾನ್ಯರು ಪ್ರಜಾಪತಿಗೆ ಬದಲಾಗಿ ಸಾಮಾನ್ಯ ದೇವತೆಯಾದ ರುದ್ರನ ಕಡೆಗೆ ತಿರುಗಿದರು. ಈ ಸನ್ನಿವೇಶದಲ್ಲಿ ಬ್ರಾಹ್ಮಣ ಧರ್ಮದವರು ಉನ್ನತ ಮಟ್ಟದ ತಮ್ಮ ಧರ್ಮದಿಂದ ಜನಸಾಮಾನ್ಯರು ದೂರ ಸರಿಯುವುದಕ್ಕೂ ಅವಕಾಶ ಕೊಡಲಿಲ್ಲ. ಅವರು ರುದ್ರನನ್ನು ಉನ್ನತ ದೇವರುಗಳ ಸ್ಥಾನಕ್ಕೇರಿಸಿದರು. ರುದ್ರನು ಶಿವ ಅಥವ ಮಹೇಶ್ವರನಾಗಿ ಬ್ರಹ್ಮ ವಿಷ್ಣು ಅವರಿಗೆ ಸಮಾನ ಸ್ಥಾನ ಪಡೆದುಕೊಂಡನು. ಯಜ್ಞಯಾಗಾದಿಗಳ ಅಧಿದೇವತೆಯಾಗಿದ್ದ ವಿಷ್ಣುವು ಪ್ರಮುಖ ಸ್ಥಾನದಲ್ಲಿ ಮುಂದುವರಿದನು. ಬ್ರಾಹ್ಮಣ ಧರ್ಮವೂ ಅನಾರ್ಯರ ಮೂಢನಂಬಿಕೆಗಳಿಂದ, ಮಂತ್ರತಂತ್ರಗಳಿಂದ ಪ್ರಭಾವಿತವಾಯಿತು. ಧಾರ್ಮಿಕ ಕ್ಷೇತ್ರದ ಮೇಲೆ ಮಾಯ, ಮಂತ್ರತಂತ್ರಗಳ ಶ್ಲೋಕಗಳಿಂದ ಕೂಡಿರುವ ಅಥರ್ವಣ ವೇದದಿಂದ ಅನಾರ್ಯರ ಪ್ರಭಾವವು ಗೊತ್ತಾಗುತ್ತದೆ. ಹಿಂದೂಧರ್ಮದ ವಿಕಾಸದಲ್ಲಿ ಅನಾರ್ಯರೂ ತಮ್ಮದೆ ಆದ ಪ್ರಭಾವವನ್ನು ಬೀರಿದ್ದಾರೆ. ಇದರಿಂದಾಗಿ ಆಧುನಿಕ ಹಿಂದೂ ಧರ್ಮದಲ್ಲಿ ಆರ್ಯರ ಮತ್ತು ಅನಾರ್ಯರ ಧಾರ್ಮಿಕ ಅಂಶಗಳೆರಡೂ ಸಂಯೋಜನೆಗೊಂಡಿರುವುದನ್ನು ಕಾಣಬಹುದಾಗಿದೆ.

## ಬರವಣಿಗೆ ಮತ್ತು ಶಿಕ್ಷಣ

ವೇದ ಸಂಹಿತೆಗಳು ಮತ್ತು ಬ್ರಾಹ್ಮಣಗಳು ರಚಿತವಾದ ಕಾಲದಲ್ಲಿ ಬರವಣಿಗೆ ಕಲೆಯು ಭಾರತೀಯರಿಗೆ ಗೊತ್ತಿರಲಿಲ್ಲವೆಂಬ ಅಭಿಪ್ರಾಯವನ್ನು ಹೆಚ್ಚು. ಕಡಿಮೆ ಎಲ್ಲ ವಿದ್ವಾಂಸರೂ ವ್ಯಕ್ತಪಡಿಸಿರುವರು. ಬಹುಶಃ ಕ್ರಿ.ಪೂ.ಎಂಟನೆ ಅಥವ ಏಳನೆ ಶತಮಾನದಲ್ಲಿ ಬರವಣಿಗೆ ಕಲೆಯು ಭಾರತದಲ್ಲಿ ಜಾರಿಗೆ ಬಂದಿರಬಹುದೆಂಬ ಅಭಿಪ್ರಾಯವನ್ನು ವ್ಯಕ್ತಪಡಿಸಲಾಗಿದೆ. ಭಾರತೀಯ ವರ್ಣಮಾಲೆಯು ಫೋನೀಷಿಯನ್ನರ ವರ್ಣಮಾಲೆಯಿಂದ ವ್ಯುತ್ಪತ್ತಿ ಹೊಂದಿದೆಯೆಂದು ಬ್ಯೂಲರ್ ಎಂಬ ವಿದ್ವಾಂಸರು ಅಭಿಪ್ರಾಯಪಡುವರು. ಆದರೆ ಈ ಅಭಿಪ್ರಾಯವನ್ನು ಎಲ್ಲ ವಿದ್ವಾಂಸರೂ ಒಪ್ಪುವುದಿಲ್ಲ ಮತ್ತು ಅವರು ಭಾರತೀಯರಿಗೆ ಬರವಣಿಗೆ ಕಲೆಯು ಗೊತ್ತಿದ್ದಿತೆಂದು ಹೇಳುತ್ತಾರೆ. ಅಲ್ಲದೆ ಈ ಅಭಿಪ್ರಾಯವು ಸಿಂಧೂಕಣಿವೆಯ ಬಯಲಿನಲ್ಲಿ ದೊರೆತಿರುವ ಮುದ್ರೆಗಳ ಮೇಲೆ ಕಂಡು ಬರುವ ಚಿತ್ರಲಿಪಿಯಿಂದ ದೃಢಪಟ್ಟಿದೆ.

ವೇದಗಳ ಕಾಲದಲ್ಲಿ ಕಂಠಪಾಠ ಮಾಡಿಸುವುದರ ಮೂಲಕ ವಿದ್ಯೆಯನ್ನು ಕಲಿಸಲಾಗುತ್ತಿತ್ತು. ಆದರೆ ಈ ಕಾಲದಲ್ಲಿ ಬರವಣಿಗೆಯು ಭಾರತೀಯರಿಗೆ ಗೊತ್ತಿರಲಿಲ್ಲವೆಂದು ನಿಖರವಾಗಿ ಹೇಳಲು ಸಾಧ್ಯವಿಲ್ಲ. ಋಗ್ವೇದ ಮತ್ತು ಅತರ್ವಣವೇದಗಳಲ್ಲೂ ಬರವಣಿಗೆಯ ಬಗ್ಗೆ ಉಲ್ಲೇಖಗಳಿವೆ. ಭಾರತದಲ್ಲಿ ಬಳಕೆಗೆ ಬಂದ ಬರವಣಿಗೆಗೆ ಮೂಲವಾಗಿರುವ ಬ್ರಾಹ್ಮಿ ಲಿಪಿಯು ಕ್ರಿ.ಪೂ.ನಾಲ್ಕನೆ ಶತಮಾನದ ಹೊತ್ತಿಗಾಗಲೇ ಚೆನ್ನಾಗಿ ಅಭಿವೃದ್ಧಿ ಹೊಂದಿದ್ದಿತೆಂದು ಹೇಳಲಾಗಿದೆ. ಕ್ರಿ.ಪೂ.ಐದನೆ ಶತಮಾನದಲ್ಲಿದ್ದ ವ್ಯಾಕರಣ ಶಾಸ್ತ್ರಜ್ಞನಾದ ಪಾಣಿನಿಯು ವ್ಯಾಕರಣ ಗ್ರಂಥವನ್ನು ಬರೆಯುವುದರ ಮೂಲಕ ಸಂಸ್ಕೃತ ಭಾಷೆಯೆಂದು ಬಳಕೆಗೆ ಬಂದ ಭಾಷೆಯನ್ನು ಪ್ರಮಾಣ ಬದ್ಧಗೊಳಿಸಿದನು. ಸಂಸ್ಕೃತ ಭಾಷೆಯು ಪುರೋಹಿತರ ಭಾಷೆಯಾಗಿತ್ತು. ಸುಸಂಸ್ಕೃತ ಜನರು ಸಂಸ್ಕೃತವನ್ನೂ ಜನಸಾಮಾನ್ಯರು ಪ್ರಾಕೃತವನ್ನು ಉಪಯೋಗಿಸಿದರು. ಪ್ರಾಕೃತ ಭಾಷೆಯ ಬಳಕೆಯು ಕಾಲಾನುಕ್ರಮದಲ್ಲಿ ಅನೇಕ ದೇಶೀಯ ಭಾಷೆಗಳ ಏಳಿಗೆಗೆ ಕಾರಣವಾಯಿತು. ಜೈನ ಮತ್ತು ಬೌದ್ಧ ಮತಗಳ ನಾಯಕರಾದ ಮಹಾವೀರ ಮತ್ತು ಗೌತಮಬುದ್ಧನು ತಮ್ಮ ಧರ್ಮಗಳ ಪ್ರಚಾರಕ್ಕೆ ಜನರ ಆಡುಭಾಷೆಗಳನ್ನು ಬಳಸಿದರು. ಜೈನರು ಅರ್ಧಮಾಗಧಿಯನ್ನೂ ಬೌದ್ಧರು ಪಾಳೀ ಭಾಷೆಯನ್ನೂ ತಮ್ಮ ಧರ್ಮ ಪ್ರಚಾರದಲ್ಲಿ ಬಳಸಿದರು.

ವೇದಗಳ ಕಾಲದಲ್ಲಿ ವಿದ್ಯೆಗೆ ಬಹಳ ಮಹತ್ವವಿದ್ದಿತು. ವಿದ್ಯಾರ್ಥಿಯು ಗುರುವಿನ ಜತೆಯಲ್ಲಿದ್ದುಕೊಂಡು ವಿದ್ಯೆಯನ್ನು ಕಲಿಯಬೇಕಿತ್ತು ಮತ್ತು ಅವನ ಗುರುವಿನ ಸೇವೆಯನ್ನು ಮಾಡಿಕೊಂಡು ಅವರ ಆದೇಶದಂತೆ ನಡೆಯಬೇಕಿತ್ತು. ಗುರುವಿನ ಬಳಿಯಲ್ಲಿ ವಿದ್ಯಾರ್ಥಿಯ ದೈಹಿಕ ಮತ್ತು ಮಾನಸಿಕ ಅಂಶಗಳೆರಡೂ ಶಿಸ್ತಿಗೊಳಪಡುತ್ತಿದ್ದವು. ವಿದ್ಯಾರ್ಥಿಯು ಈ ಅವಧಿಯಲ್ಲಿ ಅನೇಕ ಕೆಲಸಗಳನ್ನು ನಿರ್ವಹಿಸಬೇಕಾಗಿತ್ತು. 1. ಯಜ್ಞಮಾಡುವುದಕ್ಕಾಗಿ ಕಟ್ಟಿಗೆಯನ್ನು ಹೊತ್ತುತರುವುದು, 2. ಗುರುವಿಗಾಗಿ ಭಿಕ್ಷೆ ಬೇಡುವುದು, 3. ಗುರುವಿನ ಪಶುಗಳನ್ನು ಮೇಯಿಸುವುದು, 4. ತಪಶ್ಚರ್ಯ ಮಾಡುವುದು ಮತ್ತು ಇಂದ್ರಿಯಗಳನ್ನು ಹತೋಟಿಯಲ್ಲಿಟ್ಟುಕೊಳ್ಳುವುದು, 5. ವೇದಗಳನ್ನು ಕಲಿಯುವುದು, ಸತ್ಯವನ್ನು ನುಡಿಯುವುದು, ಧರ್ಮವನ್ನು

ಆಚರಿಸುವುದು, ಗುರು ಮತ್ತು ಮಾತಾಪಿತೃಗಳ ಬಗ್ಗೆ ಭಕ್ತಿ ಮತ್ತು ವಿಧೇಯತೆಯಿಂದ ನಡೆದುಕೊಳ್ಳುವುದು, ಔದಾರ್ಯ ಗುಣವನ್ನು ಬೆಳೆಸಿಕೊಳ್ಳಲು ಸರಿಯಾದ ಶಿಕ್ಷಣ ಕೊಡಲಾಗುತ್ತಿತ್ತು. ಬ್ರಹ್ಮ ಚರ್ಯಾ ಶ್ರಮದನಂತರ ವಿದ್ಯಾರ್ಥಿಯು ತನ್ನ ಜೀವನದ ಮುಂದಿನ ಹಂತವಾದ ಗೃಹಸ್ಥಾಶ್ರಮದಲ್ಲಿ ತನ್ನ ಕರ್ತವ್ಯಗಳನ್ನು ಸರಿಯಾಗಿ ನಿರ್ವಹಿಸಲು ಸರಿಯಾದ ತರಬೇತಿ ಪಡೆಯುತ್ತಿದ್ದನು. ಇದರಿಂದ ವಿದ್ಯಾರ್ಥಿಯು ತನ್ನ ಜೀವನದಲ್ಲಿ ಲೌಕಿಕ ಮತ್ತು ಆಧ್ಯಾತ್ಮಿಕ ಕರ್ತವ್ಯಗಳನ್ನು ಸರಿಯಾಗಿ ನಿರ್ವಹಿಸಲು ಒಳ್ಳೆಯ ಶಿಕ್ಷಣವನ್ನು ಪಡೆಯುತ್ತಿದ್ದನು.

ಈ ಕಾಲದಲ್ಲಿ ಎರಡು ರೀತಿಯ ಶಿಕ್ಷಣ ವ್ಯವಸ್ಥೆಯಿದ್ದಿತು. 1. ಗುರುಕುಲ ವ್ಯವಸ್ಥೆ, 2. ಚರಕರು, ಮೊದಲನೆಯದರಲ್ಲಿ ಗುರುವಿನ ಮನೆಯು ಶಿಕ್ಷಣ ಶಾಲೆಯಾಗಿತ್ತು. ಎರಡನೆಯ ವ್ಯವಸ್ಥೆಯಲ್ಲಿ ಚರಕರು ಎಂದುಕರೆಯಲ್ಪಡುತ್ತಿದ್ದ ಜ್ಞಾನವಾಹಕರು ವಿದ್ಯೆ ಪ್ರಸಾರ ಮಾಡುತ್ತಿದ್ದರು. ಇವರುಗಳಲ್ಲದೆ ಕೆಲವು ರಾಜರುಗಳೂ ಕೂಡ ವಿದ್ಯಾ ಚಟುವಟಿಕೆಗಳಲ್ಲಿ ಹೆಚ್ಚಿನ ಆಸಕ್ತಿ ಹೊಂದಿದ್ದರು. ಅವರು ವಿದ್ವಾಂಸರಿಗೆ ಉದಾರ ಪ್ರೋತ್ಸಾಹ ಕೊಟ್ಟಿದ್ದುದಲ್ಲದೆ ಅನೇಕ ವೇಳೆ ಸಮ್ಮೇಳನಗಳನ್ನು ಏರ್ಪಡಿಸುತ್ತಿದ್ದರು. ವಿದೇಹ ರಾಜ್ಯದ ಜನಕ ಮಹರಾಜನು ವಿದ್ವಾಂಸನೂ ಮತ್ತು ವಿದ್ವಾಂಸರ ಪೋಷಕನೂ ಆಗಿ ಹೆಸರುಗಳಿಸಿದ್ದನು. ಉದ್ದಲಕ, ಆರುಣಿ, ಅಶ್ವಲ, ಗಾರ್ಗಿ ಮೊದಲಾದವರು ಈ ಕಾಲದ ಘನ ವಿದ್ವಾಂಸರಾಗಿದ್ದರು. ಗುರುಗಳು ತಮ್ಮ ವಿದ್ಯಾರ್ಥಿಗಳಿಗೆ ಪ್ರೀತಿಯಿಂದ ತಮ್ಮಲ್ಲಿದ್ದ ಜ್ಞಾನವನ್ನೆಲ್ಲಾ ಧಾರೆಯೆರೆಯುತ್ತಿದ್ದರು ಮತ್ತು ಇದಕ್ಕಾಗಿ ಅವರು ಯಾವುದೇ ರೀತಿಯ ಶುಲ್ಕವನ್ನೂ ವಿಧಿಸುತ್ತಿರಲಿಲ್ಲ. ಗುರುಗಳ ವಿದ್ವತ್ತು ಮತ್ತು ನಡೆತೆಗಳು ಸಮಾಜದಲ್ಲಿ ಅವರಿಗೆ ಹೆಚ್ಚಿನ ಗೌರವವನ್ನು ತಂದುಕೊಟ್ಟಿದ್ದವು. ವಿದ್ಯಾರ್ಥಿಗಳು ತಮ್ಮ ವಿದ್ಯಾಭ್ಯಾಸವು ಮುಗಿದ ನಂತರ ಗುರುವು ಹೇಳಿಕೊಟ್ಟ ವಿದ್ಯೆಗೆ ಹಣದ ರೂಪದಲ್ಲಿ ಬೆಲೆಕಟ್ಟುವುದಕ್ಕೆ ಸಾಧ್ಯವಿರಲಿಲ್ಲವಾದ್ದರಿಂದ ಕೃತಜ್ಞತಾ ಪೂರ್ವಕವಾಗಿ ಯಾವುದಾದರೂ ರೂಪದಲ್ಲಿ ಗುರುದಕ್ಷಿಣೆಯನ್ನು ಸಲ್ಲಿಸುತ್ತಿದ್ದರು. ವಿದ್ಯಾರ್ಥಿಗಳು ಭೌತಿಕ ಅನುಕೂಲಗಳನ್ನು ಪಡೆದುಕೊಳ್ಳುವುದಕ್ಕಾಗಿ ವಿದ್ಯೆಯನ್ನು ಕಲಿಯುತ್ತಿರಲಿಲ್ಲ. ಆಧ್ಯಾತ್ಮಿಕ ಜ್ಞಾನವನ್ನು ಗಳಿಸಿಕೊಳ್ಳುವುದೇ ಈ ಕಾಲದ ವಿದ್ಯಾಭ್ಯಾಸದ ಮುಖ್ಯ ಉದ್ದೇಶವಾಗಿತ್ತು. ಕಂಠಪಾಠಮಾಡಿಸುವುದರ ಮೂಲಕ ವಿದ್ಯೆಯನ್ನು ಕಲಿಸಲಾಗುತ್ತಿತ್ತು. ಇದಲ್ಲದೆ ಆಗಾಗ್ಗೆ ಚರ್ಚಾಸ್ಪರ್ಧೆಗಳನ್ನು ಏರ್ಪಡಿಸಲಾಗುತ್ತಿತ್ತು. ವೇದಗಳು, ವ್ಯಾಕರಣ, ತರ್ಕ, ಖಗೋಳಶಾಸ್ತ್ರ, ನೀತಿಶಾಸ್ತ್ರ, ವೈದ್ಯಶಾಸ್ತ್ರ ಮತ್ತು ಧನುರ್ವಿದ್ಯೆ ಮೊದಲಾದವುಗಳು ಈ ಕಾಲದ ಶಿಕ್ಷಣದ ಪ್ರಮುಖ ವಿಷಯಗಳಾಗಿದ್ದವು.

## ವೇದ ವಾಙ್ಮಯ

ವೇದ ಎಂದರೆ ಜ್ಞಾನ ಎಂದರ್ಥ. ವೇದಗಳ ಮಂತ್ರಗಳು ಅನಂತ ಜ್ಯೋತಿಯ ದಿವ್ಯಸ್ವರೂಪಗಳಾಗಿರುತ್ತವೆ. ಅವುಗಳು ಮಾನವ ರಚನೆಯಾಗಿರದಿರವುದರಿಂದ ಅವುಗಳು ಅಪೌರುಷೇಯುಗಳೆಂದು ಪರಿಗಣಿಸಲ್ಪಟ್ಟಿವೆ. ಆದ್ದರಿಂದ ವೇದಗಳನ್ನು ದೇವವಾಣಿಯೆಂದು ಪರಿಗಣಿಸುತ್ತಾರೆ ಮತ್ತು ಅವು ಹಿಂದುಗಳಿಗೆ ಅತ್ಯಂತ ಪವಿತ್ರವಾದವುಗಳಾಗಿವೆ. ವೇದಗಳ ರಚನೆಯಲ್ಲಿ ಅನೇಕ ಶತಮಾನಗಳು ಉರುಳಿಹೋಗಿವೆ. ಆದ್ದರಿಂದ ವೇದಗಳ ರಚನೆಯು ಕಾಲದ ಬಗ್ಗೆ ನಿರ್ದಿಷ್ಟವಾಗಿ ಹೇಳಲು ಸಾಧ್ಯವಿಲ್ಲ. ಆರ್ಯರಿಗೆ ಬರವಣಿಗೆಯ

ಕಲೆಯು ಗೊತ್ತಿದ್ದಿತೆ ಇಲ್ಲವೆ ಎಂಬುದು ನಮಗೆ ಗೊತ್ತಿಲ್ಲದಿರುವುದರಿಂದ ವೇದಗಳ ಶ್ಲೋಕಗಳನ್ನು ತಲೆಮಾರಿಸಿಂದ ತಲೆಮಾರಿಗೆ ಕಂಠಪಾಠದ ಮೂಲಕ ಕಲಿಸಲಾಗುತ್ತಿತ್ತು. ಈ ಶ್ಲೋಕಗಳೆಲ್ಲವನ್ನೂ ಜ್ಞಾಪಕದಲ್ಲಿಟ್ಟುಕೊಳ್ಳಲು ಆರ್ಯರಲ್ಲಿ ಜ್ಞಾಪಕಶಕ್ತಿಯು ಅದ್ಭುತವಾಗಿತ್ತು.

**ಋಗ್ವೇದ**

ಆರ್ಯರ ಸಾಹಿತ್ಯ ಸೃಷ್ಟಿಯಲ್ಲಿ ವೇದಗಳು ಮುಖ್ಯವಾದವುಗಳು ಅವುಗಳೆಂದರೆ ಋಗ್ವೇದ. ಯಜುರ್ವೇದ, ಸಾಮವೇದ ಮತ್ತು ಅಥರ್ವಣವೇದ. ಇವುಗಳಲ್ಲಿ ಮೊಟ್ಟಮೊದಲನೆಯದಾದ ಋಗ್ವೇದವು 1028 ಶ್ಲೋಕಗಳಿಂದ ಕೂಡಿದೆ. ಋಗ್ವೇದವು ವಿಶ್ವದ ಸಾಹಿತ್ಯ ಸಮೂಹದ ರಾಶಿಯಲ್ಲಿ ಅತ್ಯಂತ ಪುರಾತನವಾದುದಾಗಿದ್ದು ವಿಷಯ ಸಂಪತ್ತಿನಿಂದಲೇ ಅಲ್ಲದೆ, ಪ್ರೌಢಿಮೆಯ ದೃಷ್ಟಿಯಿಂದಲೂ ಹಿರಿದಾದ ಕೃತಿಯಾಗಿರುತ್ತದೆ. ಇಂದ್ರ, ಅಗ್ನಿ, ವರುಣ, ವಾಯು, ವಿಷ್ಣು, ಸೂರ್ಯ, ಉಷಸ್, ರುದ್ರ ಮೊದಲಾದ ದೇವಾನುದೇವತೆಗಳ ಗುಣವರ್ಣನೆಗಳನ್ನು ಕುರಿತ ಸ್ತೋತ್ರಗಳನ್ನು ಮತ್ತು ಪ್ರಾರ್ಥನೆಗಳನ್ನು ಋಗ್ವೇದವು ಒಳಗೊಂಡಿದೆ. ಈ ಸ್ತೋತ್ರಗಳು ಕೇವಲ ಸ್ತುತಿಗಳೇ ಆಗಿರದೆ ಆಧ್ಯಾತ್ಮಿಕವಾದ ಅಂತರಾರ್ಥಗಳಿಂದಲೂ ಕೂಡಿರುತ್ತವೆ. ಋಗ್ವೇದದಲ್ಲಿ ಜಗತ್ತಿನ ಸೃಷ್ಟಿ, ಜನನ, ಮರಣ, ಭೂಲೋಕ, ದೇವಲೋಕ ಇತ್ಯಾದಿ ವಿಚಾರಗಳೂ ಸೇರಿವೆ. ಋಗ್ವೇದವು ಸರ್ವ ವಿಷಯಗಳ ಸಂಗ್ರಹವಾಗಿರುತ್ತದೆ.

**ಯಜುರ್ವೇದ**

ಯಜುರ್ವೇದವು ಯಜ್ಞಯಾಗಾದಿಗಳ ಕುರಿತಾದ ವಿವರಣೆಗಳನ್ನೊಳಗೊಂಡಿದೆ. ಇದು ನಲವತ್ತು ಅಧ್ಯಾಯಗಳಿಂದ ಕೂಡಿದೆ. ಯಜುರ್ವೇದವನ್ನು ಕೃಷ್ಣ ಯರ್ಜುರ್ವೇದ ಮತ್ತು ಶುಕ್ಲ ಯಜುರ್ವೇದ ಎಂದು ಎರಡು ಭಾಗ ಮಾಡಲಾಗಿದೆ. ಕೃಷ್ಣಯಜುರ್ವೇದವನ್ನು ತೈತ್ತಿರೀಯ ಸಂಹಿತೆಯೆಂತಲೂ ಶುಕ್ಲಯಜುರ್ವೇದವನ್ನು ವಾಜಸಾನೇಯ ಸಂಹಿತೆಯೆಂತಲೂ ಕರೆಯುತ್ತಾರೆ. ಯಜುರ್ವೇದವು ಯಜ್ಞಯಾಗಾದಿಗಳ ಕೈಪಿಡಿಯಾಗಿದೆ. ರಾಜಸೂಯ, ಅಶ್ವಮೇಧ ಮೊದಲಾದ ದೊಡ್ಡ ದೊಡ್ಡ ಯಜ್ಞಯಾಗಾದಿಗಳಿಗೆ ಸಂಬಂಧಿಸಿದ ವಿಷಯಗಳು ವಿಸ್ತಾರವಾಗಿ ವರ್ಣಿಸಲ್ಪಟ್ಟಿವೆ. ಇದಲ್ಲದೆ ಋಗ್ವೇದದಲ್ಲಿರುವಂತೆ ದೇವದೇವತೆಗಳನ್ನು ಉದ್ದೇಶಿಸಿ ಮಾಡಿರುವ ಪ್ರಾರ್ಥನಾ ಶ್ಲೋಕಗಳೂ ಇದರಲ್ಲಿವೆ.

**ಸಾಮವೇದ**

ಸಾಮವೇದವು ಗಾನರೂಪವಾಗಿ ಹಾಡುವ ಮಂತ್ರಗಳನ್ನೊಳಗೊಂಡಿದೆ. ಸಾಮ ವೇದದಲ್ಲಿ ಋಗ್ವೇದದಲ್ಲಿನ ಶ್ಲೋಕಗಳೇ ಬಹಳ ಮಟ್ಟಿಗೆ ಪುನರಾವರ್ತಿಸಲ್ಪಟ್ಟಿದ್ದು 78 ಮಂತ್ರಗಳು ಮಾತ್ರ ಹೊಸದಾಗಿ ಸೇರಿಸಲ್ಪಟ್ಟಿವೆ. ಇವುಗಳನ್ನು ಹಾಡುತ್ತಿದ್ದ ಪುರೋಹಿತರಿಗೆ ಉದ್ಗಾತ್ರಿಗಳೆಂದು ಕರೆಯುತ್ತಿದ್ದರು. ಕೆಲವು ಸಂಗೀತತಜ್ಞರು ಇದರಲ್ಲಿ ಭಾರತೀಯ ಸಂಗೀತ ಶಾಸ್ತ್ರದ ಸಪ್ತಸ್ವರಗಳೂ ಪ್ರಾಯೋಗಿಸಲ್ಪಟ್ಟಿವೆಯೆಂದು ಅಭಿಪ್ರಾಯ ಪಟ್ಟಿರುವರು. ಸಂಗೀತದಲ್ಲಿ ಆರ್ಯರು ಬಹಳವಾಗಿ ಮುಂದುವರಿದಿದ್ದರೆಂಬುದನ್ನು ಈ ವೇದದಿಂದ ಮನಗಾಣಬಹುದು.

### ಅಥರ್ವವೇದ

ಅಥರ್ವವೇದವು ವೇದಗಳಲ್ಲಿ ಕೊನೆಯದು. ಇದರಲ್ಲಿ 6000 ಮಂತ್ರಿಗಳಿವೆ. ಇದು ಪದ್ಯ ಮತ್ತು ಗದ್ಯ ಶೈಲಿಗಳಲ್ಲಿ ರಚಿಸಲ್ಪಟ್ಟಿದ್ದು ವಿವಾಹ ಪದ್ಧತಿ, ಶವ ಸಂಸ್ಕಾರ, ಗೃಹನಿರ್ಮಾಣ, ರಾಜರ ಆಯ್ಕೆ ಮೊದಲಾದ ವಿಚಾರಗಳನ್ನೇ ಅಲ್ಲದೆ ಮಂತ್ರ ತಂತ್ರ ವಿದ್ಯೆ, ಮಾಯಾ. ಮೋಡಿ ಯಕ್ಷಣೀ ವಿದ್ಯೆ ಇಂದ್ರಜಾಲ, ಮಹೇಂದ್ರಜಾಲ ಮೊದಲಾದ ವಿದ್ಯೆಗಳ ವಿಚಾರವನ್ನೂ ಒಳಗೊಂಡಿದೆ. ಇದಲ್ಲದೆ ಅಥರ್ವವೇದವು ಧೀರ್ಘಾಯುಕ್ರಮ, ಆರೋಗ್ಯಕ್ರಮ, ಸತ್ಯವ್ರತ, ಶ್ರೇಯಸ್ಸು ರೋಗಗಳ ನಿವಾರಣೋಪಾಯ, ಔಷಧಿಗಳ ವಿವರ ಇತ್ಯಾದಿಗಳನ್ನೂ ಯಜ್ಞಯಾಗಾದಿಗಳನ್ನು ಮಾಡುವಾಗ ಅನುಸರಿಸಬೇಕಾದ ಕ್ರಮದ ಬಗೆಗಿನ ವಿವರಗಳನ್ನೂ ಒಳಗೊಂಡಿದೆ. ಒಟ್ಟಿನಲ್ಲಿ ಅಥರ್ವ ವೇದವು ಜನಜೀವನಕ್ಕೆ ಉಪಯುಕ್ತವಾದ ಅನೇಕ ವಿಷಯಗಳಿಂದ ಕೂಡಿದೆ. ಇದಕ್ಕೆ ಬ್ರಹ್ಮವೇದವೆಂಬ ಹೆಸರೂ ಉಂಟು.

### ಬ್ರಾಹ್ಮಣಗಳು, ಅರಣ್ಯಕಗಳು ಮತ್ತು ಉಪನಿಷತ್ತುಗಳು

ವೇದಗಳನ್ನು ಬಿಟ್ಟರೆ, ಬ್ರಾಹ್ಮಣಗಳು, ಅರಣ್ಯಕಗಳು ಮತ್ತು ಉಪನಿಷತ್ತುಗಳು ಬಹುಮುಖ್ಯವಾದವುಗಳು. ಪ್ರತಿಯೊಂದು ವೇದವೂ ಸಂಹಿತ, ಬ್ರಾಹ್ಮಣ, ಆರಣ್ಯಕ ಮತ್ತು ಉಪನಿಷತ್ತುಗಳೆಂಬ ನಾಲ್ಕು ಭಾಗಗಳನ್ನೊಳಗೊಂಡಿದೆ. ಬ್ರಾಹ್ಮಣಗಳು ವೇದಗಳ ಶ್ಲೋಕಗಳ ಗದ್ಯಾನುರೂಪದ ವ್ಯಾಖ್ಯಾನಗಳಾಗಿದ್ದು ಪ್ರಾರ್ಥನೆ ಮತ್ತು ವ್ರತಾಚರಣೆಗಳ ಬಗ್ಗೆ ದೀರ್ಘ ವಿವರಣೆಗಳನ್ನೊಳಗೊಂಡಿವೆ. ಬ್ರಾಹ್ಮಣಗಳ ಮುಂದಿನ ಭಾಗವು ಅರಣ್ಯಕಗಳು. ಇವುಗಳನ್ನು ಋಷಿಗಳು ಅರಣ್ಯಗಳಲ್ಲಿ ಏಕಾಂತವಾಸಿಗಳಾಗಿ ಕಲಿಯುತ್ತಿದ್ದರು. ಇವುಗಳನ್ನು ದೀಕ್ಷೆಪಡೆದುಕೊಂಡವರಿಗೆ ಮಾತ್ರ ಹೇಳಿಕೊಡಲಾಗುತ್ತಿತ್ತು. ಅರಣ್ಯಕಗಳು ವೇದ ಸಂಹಿತೆಗಳಲ್ಲಿನ ಗೂಡಾರ್ಥಗಳನ್ನು ತಿಳಿಸುವ ದಾರ್ಶನಿಕ ಕೃತಿಗಳಾಗಿವೆ. ಉಪನಿಷತ್ತುಗಳು ತತ್ವದರ್ಶನದ ಗಹನ ವಿಷಯಗಳನ್ನೊಳಗೊಂಡಿದ್ದು ಅವುಗಳನ್ನು ಆಚಾರ್ಯರು ತಮ್ಮ ಬಳಿಯಲ್ಲಿದ್ದುಕೊಂಡು ಕಲಿಯುವ ನಂಬಿಕಸ್ತ ಶಿಷ್ಯರಿಗೆ ಹೇಳಿಕೊಡುತ್ತಿದ್ದರು.

### ವೇದಾಂಗಗಳು ಉಪವೇದಗಳು ಮತ್ತು ಸೂತ್ರಗಳು

ವೇದಾಂಗಗಳು ಮತ್ತು ಉಪವೇದಗಳು ವೈದಿಕ ಸಾಹಿತ್ಯದ ಅನುಬಂಧ ಭಾಗಗಳಾಗಿವೆ. ವೇದಾಂಗಗಳು ಒಟ್ಟು ಆರು. ಅವುಗಳೆಂದರೆ, 1. ಶಿಕ್ಷ, 2. ಛಂದಸ್ಸು, 3. ವ್ಯಾಕರಣ, 4. ನಿರುಕ್ತ, 5. ಕಲ್ಪ, 6. ಜ್ಯೋತಿಷ್ಯ, ಉಪವೇದಗಳಾದ ಆರ್ಯುರ್ವೇದ ಧನುರ್ವೇದ, ಶಿಲ್ಪ, ಮತ್ತು ಗಂಧರ್ವವೇದಗಳು ಲೌಕಿಕ ವಿಷಯಗಳನ್ನು ವಸ್ತುಗಳನ್ನಾಗಿ ಹೊಂದಿವೆ. ವೈದಿಕ ಸಾಹಿತ್ಯದ ಮತ್ತೊಂದು ಭಾಗ ಸೂತ್ರಗಳು. ಇವುಗಳು ವಿವಿಧ ಕ್ಷೇತ್ರಗಳಿಗೆ ಸೇರಿದ ಜನಗಳಿಗೆ ಮಾರ್ಗದರ್ಶನ ಮಾಡುವ ಸೂಕ್ತಿಗಳಿಂದ ಕೂಡಿವೆ. ಸೂತ್ರಗಳಲ್ಲಿ ಮೂರು ಬಗೆ, 1. ಶ್ರೌತಸೂತ್ರಗಳು, 2. ಗೃಹ್ಯಸೂತ್ರಗಳು, 3. ಧರ್ಮ ಸೂತ್ರಗಳು, ಶ್ರೌತ ಸೂತ್ರಗಳು ಯಜ್ಞಯಾಗಾದಿಗಳನ್ನು ಮಾಡುವ ವಿಧಿವಿಧಾನಗಳ ಬಗ್ಗೆಯೂ ಗೃಹ್ಯಸೂತ್ರಗಳು ಗೃಹ ಜೀವನಕ್ಕೆ ಸಂಬಂಧಿಸಿದ ವಿವಿಧ ಆಚರಣೆ ಮತ್ತು ನಿಯಮಗಳನ್ನೂ ಧರ್ಮಸೂತ್ರಗಳು ಧಾರ್ಮಿಕವಾದ ರೀತಿ ನಿಬಂಧನೆಗಳು, ಲೋಕದ

ವ್ಯಾಪಾರ-ಜೀವನಕ್ಕೆ ಸಂಬಂಧಿಸಿದ ನೀತಿನಿಯಮಗಳ ಬಗ್ಗೆಯೂ ತಿಳಿಸುತ್ತವೆ. ವೇದಗಳು, ಬ್ರಾಹ್ಮಣಗಳು, ಆರಣ್ಯಕಗಳು ಮತ್ತು ಉಪನಿಷತ್ತುಗಳನ್ನು 'ಶ್ರುತಿ' (ಅಮರವಾಣಿ) ಎಂತಲೂ ಉಳಿದ ಸಾಹಿತ್ಯವನ್ನು 'ಸ್ಮೃತಿ' (ಜ್ಞಾಪಕದಲ್ಲಿಟ್ಟುಕೊಳ್ಳುವುದು) ಎಂತಲೂ ವಿಂಗಡಿಸಲಾಗಿದೆ.

### ಉಪನಿಷತ್ತುಗಳು ಮತ್ತು ಸೂತ್ರಗಳು

ವ್ರತಾಚರಣೆಗಳು ಮತ್ತು ಯಜ್ಞಯಾಗಾದಿಗಳ ಆಚರಣೆಯೇ ಹೆಚ್ಚಾಗಿದ್ದ ಈ ಕಾಲದಲ್ಲಿ ಅದಕ್ಕೆ ಸಮಾನಾಂತರವಾಗಿ ಪ್ರಬಲವಾದ ದಾರ್ಶನಿಕ ಚಳವಳಿಯು ಬೆಳವಣಿಗೆ ಹೊಂದುತ್ತಿದ್ದು ಉಪನಿಷತ್ತುಗಳಲ್ಲಿ ಪರಾಕಾಷ್ಠತೆಯನ್ನು ಮುಟ್ಟಿತು. ಋಗ್ವೇದ ಮತ್ತಿತರ ವೇದ ಸಂಹಿತೆಗಳಲ್ಲಿದ್ದ ದಾರ್ಶನಿಕ ಅಂಶಗಳು ಈ ಕಾಲದಲ್ಲಿ ವಿಕಸಿತಗೊಂಡು ಹಿಂದೂದರ್ಶನ ಶಾಸ್ತ್ರದ ವಿವಿಧ ಪಂಥಗಳಿಗೆ ಅಡಿಪಾಯವಾದ ವೇದಾಂತದರ್ಶನ ಅಸ್ತಿತ್ವಕ್ಕೆ ಬಂದಿತು.

ಉಪನಿಷತ್ತುಗಳಲ್ಲಿ ವೇದಸಾರಗಳೆಲ್ಲವೂ ಅಡಕವಾಗಿದೆ. ಪೌರ್ವಾತ್ಯ ಮತ್ತು ಪಾಶ್ಚಾತ್ಯ ದಾರ್ಶನಿಕರು ಉಪನಿಷತ್ತುಗಳಲ್ಲಿನ ತಾತ್ವಿಕ ವಿಚಾರಗಳ ಬಗೆಗೇ ಅಲ್ಲದೆ ಅವುಗಳ ಪ್ರಾಯೋಗಿಕ ಸಾಫಲ್ಯ ಮತ್ತು ಗಹನ ವಿಷಯಗಳ ಬಗ್ಗೆಯೂ ತಮ್ಮ ಮೆಚ್ಚಿಗೆ ವ್ಯಕ್ತಪಡಿಸಿದ್ದಾರೆ. ಉಪನಿಷತ್ತುಗಳಲ್ಲಿ ಮಾನವನ ಆತ್ಮ, ಪರಮಾತ್ಮ, ಜೀವನ ಮತ್ತು ಜಗತ್ತುಗಳ ಬಗೆಗೆ ಕುರಿತಾದ ವಿಚಾರಗಳು ಉನ್ನತ ಮಟ್ಟದಲ್ಲಿ ವಿಚಾರ ಮಾಡಲ್ಪಟ್ಟಿವೆ. ಹಿಂದೂಧರ್ಮದ ವಿವಿಧ ಪಂಥಗಳಿಗೆ ಉಪನಿಷತ್ತುಗಳು ಆಧಾರವಾಗಿವೆ. ವೇದಗಳು ಹಿಂದೂಧರ್ಮದ ಮಹಾಸೌಧದ ಅಡಿಗಲ್ಲುಗಳಾಗಿದ್ದು ಉಪನಿಷತ್ತುಗಳು ಅದರ ಆಧಾರಸ್ಥಂಭಗಳಾಗಿವೆ. ಉಪನಿಷತ್ತುಗಳ ಸಂಖ್ಯೆಯು ಕಾಲಕಾಲಕ್ಕೆ ಹೆಚ್ಚುತ್ತ ಬಂದಿದ್ದರೂ ದಾರ್ಶನಿಕರಿಂದ ಮತ್ತು ಮತಾಚಾರ್ಯರುಗಳಿಂದ ಹೆಚ್ಚಿನ ಮಾನ್ಯತೆ ಪಡೆದಿರಿಂದ ಉಪನಿಷತ್ತುಗಳ ಸಂಖ್ಯೆ ಹನ್ನೆರಡು. ಅವುಗಳೆಂದರೆ, 1. ಈಶ, 2. ಕೇನ, 3. ಕಠ, 4. ಪ್ರಶ್ನ, 5. ಮುಂಡಕ, 6. ಮಾಂಡೂಕ್ಯ, 7. ಐತರೇಯ, 8. ತೈತ್ತಿರೀಯ, 9. ಛಾಂದೋಗ್ಯ, 10. ಬೃಹದಾರಣ್ಯಕ, 11. ಕೌಷೀತಕಿ, 12. ಶ್ವೇತಾಶ್ವತರ. ಇವುಗಳಲ್ಲಿ ಹಿಂದೂಧರ್ಮದ ಪರಮಸತ್ಯದ ಸ್ವರೂಪವು ವಿವರವಾಗಿ ನಿರೂಪಿತವಾಗಿದೆ. ಉಪನಿಷತ್ತುಗಳು ನಿಗೂಢವಾದ ಆಧ್ಯಾತ್ಮಸತ್ಯದ. ಹಾಗೂ ಸಾಕ್ಷತ್ಕಾರದ ಸಾಧನಾವಿಧಾನಗಳ ವಿಚಾರಗಳ ಭಂಡಾರವಾಗಿರುತ್ತವೆ. ಉಪನಿಷತ್ತುಗಳಲ್ಲಿ ಪ್ರತಿಪಾದಿಸಲ್ಪಟ್ಟಿರುವ ಧೈರ್ಯ, ಆತ್ಮವಿಶ್ವಾಸ, ಸತ್ಯ, ಬ್ರಹ್ಮಚರ್ಯ ಇತ್ಯಾದಿಜೀವನದ ಅತ್ಯಂತ ಅಗತ್ಯವಾದ ಹಾಗೂ ಪ್ರಮುಖವಾದ ವಿಚಾರಗಳ ಕುರಿತಾದ ವಿಚಾರಧಾರೆಯ ಸಂದೇಶಗಳು ಸತ್ವಪೂರ್ಣವೂ ನಿತ್ಯನೂತನವೂ ಆಗಿರುತ್ತವೆ. ಉಪನಿಷತ್ತುಗಳ ಪ್ರತಿಯೊಂದು ಪುಟಗಳಲ್ಲೂ, ಅಭಯ ಅಹಿಂಸೆ, ಅಸ್ತೇಯ, ಅಸಂಗತ್ವ ಆತ್ಮವಿಶ್ವಾಸಗಳ ಅಮರ ಸಂದೇಶವನ್ನು ನಾವು ಕಾಣುತ್ತೇವೆ.

### ಕರ್ಮ ಮತ್ತು ಪುನರ್ಜನ್ಮ

ಉಪನಿಷತ್ತುಗಳಿಂದ ಕರ್ಮ ಮತ್ತು ಪುನರ್ಜನ್ಮ ಎಂಬ ತತ್ವಗಳೂ ಬೆಳದವು. ಮನುಷ್ಯನು ಸತ್ತಾಗ ಅವನ ದೇಹವು ನಾಶವಾಗುವುದೇ ಹೊರತು ಆತ್ಮವು

ನಾಶವಾಗುವುದಿಲ್ಲ. ಆತ್ಮವು ಅವಿನಾಶಿಯಾದುದು. ಆತ್ಮವು ಮತ್ತೊಂದು ದೇಹದಲ್ಲಿ ಕಾಣಿಸಿಕೊಳ್ಳುತ್ತದೆ. ಆತ್ಮವು ಅದರ ಉಡುಪಾದ ದೇಹವನ್ನು ಕಳಚಿಹಾಕಿ ಮತ್ತೊಂದು ದೇಹವನ್ನು ಪ್ರವೇಶಿಸುತ್ತದೆ. ಆತ್ಮನ ಈ ಒಂದು ಪುನರ್ಜನ್ಮ ಮತ್ತು ಪರಕಾಯ ಪ್ರವೇಶದಲ್ಲಿ ಕರ್ಮವು ಬಹುಮುಖ್ಯ ಪಾತ್ರವನ್ನು ವಹಿಸುತ್ತದೆ. ಮನುಷ್ಯನು ಈ ಜನ್ಮದಲ್ಲಿ ಸತ್ಕರ್ಮಗಳನ್ನು ಮಾಡಿದ್ದರೆ ಸತ್ಫಲವನ್ನು, ದುಷ್ಕರ್ಮಗಳನ್ನು ಮಾಡಿದ್ದರೆ ದುಷ್ಫಲಗಳನ್ನೂ ಮುಂದಿನ ಜನ್ಮದಲ್ಲಿ ಅನುಭವಿಸುತ್ತಾನೆ. ಆದ್ದರಿಂದ ಕರ್ಮವು ಮುಂದಿನ ಜನ್ಮದಲ್ಲಿನ ಸುಖ ಮತ್ತು ದುಃಖಗಳನ್ನು ನಿರ್ಧರಿಸುತ್ತದೆ. ಇಂದಿನ ಜನ್ಮವು ಹಿಂದಿನ ಜನ್ಮದಲ್ಲಿ ಮಾಡಿದ್ದ ಕರ್ಮದ ಫಲವಾಗಿದ್ದು ಮುಂದಿನ ಜನ್ಮವೂ ಈ ಜನ್ಮದಲ್ಲಿ ಮಾಡುವ ಕರ್ಮದ ಫಲವನ್ನೇ ಅನುಸರಿಸುತ್ತದೆ. ಪುನರ್‌ಜನ್ಮ ಮತ್ತು ಪುನರ್‌ಮರಣಗಳನ್ನು ಭಗವಂತನ ಧ್ಯಾನ ಮತ್ತು ಆತ್ಮಸಾಕ್ಷಾತ್ಕಾರದ ಮೂಲಕ ತಪ್ಪಿಸಿಕೊಳ್ಳಬಹುದು. ಮಾನವನಿಗೆ ಆತ್ಮನ ಬಗ್ಗೆ ಸರಿಯಾದ ಅರಿವುಂಟಾದಾಗ ಅವನು ಜನನ ಮರಣಗಳ ಸಂಕೋಲೆಗಳಿಂದ ತಪ್ಪಿಸಿಕೊಳ್ಳಬಹುದು. ನಿಜವಾದ ಆಧ್ಯಾತ್ಮಿಕ ಜ್ಞಾನದಿಂದ ಪುನರ್ಜನ್ಮವನ್ನು ತಪ್ಪಿಸಿಕೊಳ್ಳಬಹುದೆಂದು ಛಾಂದೋಗ್ಯ ಉಪನಿಷತ್ತು ತಿಳಿಸುತ್ತದೆ.

ಉಪನಿಷತ್ತುಗಳ ದಾರ್ಶನಿಕ ತತ್ವವು ಯಜ್ಞಯಾಗಾದಿಗಳನ್ನೂ ಮತ್ತು ಸಂಪ್ರದಾಯ ಆಚರಣೆಗಳನ್ನೂ ಪ್ರಧಾನವಾಗಿ ಹೊಂದಿದ್ದ ಧಾರ್ಮಿಕ ವ್ಯವಸ್ಥೆಯು ಅರ್ಥವಿಲ್ಲದೆಂಬುದನ್ನು ಸ್ಪಷ್ಟಪಡಿಸಿತು. ಆದಾಗ್ಯೂ ಈ ನೂತನ ದಾರ್ಶನಿಕ ತತ್ವವು ಸಂಸ್ಕಾರಗಳಿಂದ ಕೂಡಿದ್ದ ಧರ್ಮವನ್ನು ಕೊನೆಗಾಣಿಸಿತೆಂದು ತಿಳಿಯಲಾಗದು. ವ್ರತಾಚರಣೆಗಳು ಧಾರ್ಮಿಕ ಕ್ಷೇತ್ರದಲ್ಲಿ ಈ ಕಾಲದಲ್ಲೂ ಮುಂದುವರಿದವು. ವೇದಾಂತ ದರ್ಶನವು ಬೆಲೆಕಟ್ಟಲಾಗದ ಜ್ಞಾನವೆಂದು ಪರಿಗಣಿಸುವ ಹಿಂದೂಗಳು ಇಂದೂ ಕೂಡ ವ್ರತಾಚರಣೆಗಳಲ್ಲಿ ಅಪರಿಮಿತವಾದ ನಂಬಿಕೆಯನ್ನಿಟ್ಟುಕೊಂಡಿದ್ದಾರೆ. ಇಂದಿನ ಹಿಂದೂ ಧರ್ಮದಲ್ಲಿ ಜ್ಞಾನಕ್ಕಿಂತ ಹೆಚ್ಚಾಗಿ ನಂಬಿಕೆಯು ಪ್ರಧಾನವಾಗಿರುತ್ತದೆ.

## ಆಧ್ಯಾತ್ಮಿಕ ಸೌಧಗಳು

ಉಪನಿಷತ್ತುಗಳನ್ನು ಭಾರತೀಯರ ಧಾರ್ಮಿಕ ಮತ್ತು ಆಧ್ಯಾತ್ಮಿಕ ಮಹಾಸೌಧಗಳೆಂದು ಪರಿಗಣಿಸಲಾಗಿದೆ. ಪ್ರಾಚೀನ ಭಾರತೀಯರು ಇತರ ಸಂಸ್ಕೃತಿಗಳ ಜನರು ನಿರ್ಮಿಸಿದಂತೆ ಇಟ್ಟಿಗೆ ಮತ್ತು ಕಲ್ಲುಗಳಿಂದ ಮಹಾ ಸೌಧಗಳನ್ನು ನಿರ್ಮಿಸದಿದ್ದರೂ, ಉಪನಿಷತ್ತುಗಳೋಪಾದಿಯಲ್ಲಿ ಅವರು ನಿರ್ಮಿಸಿರುವ ದಾರ್ಶನಿಕ ತತ್ವಸೌಧಗಳು ಮಾನವ ಜನಾಂಗಕ್ಕೆ ಮಹತ್ವಪೂರ್ಣ ಕೊಡುಗೆಗಳಾಗಿವೆ. ಉಪನಿಷತ್ತುಗಳಲ್ಲಿನ ತತ್ವ ವೈಭವ, ಭಾವನಾ ಉತ್ತುಂಗತೆ ಮತ್ತು ವಿಚಾರ ಬಾಹುಲ್ಯವು ಭಾರತೀಯರ ಬೌದ್ಧಿಕ ಮೇಧಾವಿತನಕ್ಕೆ ಸಾಕ್ಷಿಯಾಗಿವೆ.

ಕೊನೆಯ ವೇದಗಳ, ಉಪನಿಷತ್ತುಗಳ ಹಾಗೂ ಸೂತ್ರಗಳ ರಚನೆಯ ಕಾಲದ ಅವಧಿಯನ್ನು ನಿರ್ದಿಷ್ಟವಾಗಿ ಹೇಳುವುದು ಕಷ್ಟ. ಆದರೂ ಕ್ರಿ.ಪೂ. 1200 ರಿಂದ ಕ್ರಿ.ಪೂ. 600 ಅವಧಿಯು ಇವುಗಳ ರಚನೆಯ ಕಾಲವಾಗಿದ್ದಿತೆಂದು ಹೇಳಬಹುದು.

## ಮಹಾಕಾವ್ಯಗಳು ಮತ್ತು ಪುರಾಣಗಳು

ಪ್ರಾಚೀನ ಭಾರತೀಯರ ಸಂಸ್ಕೃತಿಯನ್ನು ತಿಳಿಯಲು ವೈವಿಧ್ಯಮಯವಾದ ಸಾಹಿತ್ಯಾಧಾರಗಳನ್ನು ಅವಲೋಕಿಸಬೇಕಾಗುತ್ತದೆ. ಅವುಗಳಲ್ಲಿ ಮಹಾಕಾವ್ಯಗಳೂ ಮತ್ತು ಪುರಾಣಗಳು ಒಂದಾಗಿವೆ. ಇವುಗಳ ಅಧ್ಯಯನದಿಂದ ಅಂದಿನ ಜನರ ಜೀವನ ಚಿತ್ರವನ್ನು ನಾವು ಕಲ್ಪಿಸಿಕೊಳ್ಳಬಹುದಾಗಿದೆ. ಅನಕ್ಷರಸ್ಥರಿಗೂ ಚಿರಪರಿಚಿತವಾಗಿರುವ ರಾಮಾಯಣ ಮತ್ತು ಮಹಾಭಾರತಗಳು ಮೇರು ಕೃತಿಗಳಾಗಿದ್ದು ಭಾರತೀಯರ ಧಾರ್ಮಿಕ ಭಾವನೆಯ ಮೇಲೆ ಮಹತ್ವಪೂರ್ಣ ಪ್ರಭಾವವನ್ನು ಬೀರಿವೆ.

ಮಹಾಕಾವ್ಯಗಳಾದ ರಾಮಾಯಣ ಮತ್ತು ಮಹಾಭಾರತಗಳ ರಚನೆಯ ಕಾಲದ ಬಗ್ಗೆ ಭಿನ್ನಾಭಿಪ್ರಾಯಗಳಿವೆ. ಇವುಗಳ ರಚನೆಯಲ್ಲಿ ಬಹುಶಃ ಹಲವಾರು ಶತಮಾನಗಳು ಉರುಳಿಹೋಗಿವೆಯೆಂದು ವಿದ್ವಾಂಸರು ಅಭಿಪ್ರಾಯಪಟ್ಟಿರುವರು. ಮೂಲತಃ ರಾಮಾಯಣವನ್ನು ವಾಲ್ಮೀಕಿ ಮಹರ್ಷಿಯೂ ಮಹಾಭಾರತವನ್ನು ವ್ಯಾಸ ಮಹರ್ಷಿಯೂ ರಚಿಸಿದ್ದರೂ ಅವುಗಳು ಇಂದಿನ ರೂಪವನ್ನು ಪಡೆಯಲು ಅನೇಕ ವಿದ್ವಾಂಸರು ಅನೇಕ ವಿವರಣೆಗಳನ್ನು ಸೇರಿಸುವುದರ ಮೂಲಕ ತಮ್ಮ ಕೊಡುಗೆಗಳನ್ನಿತ್ತಿದ್ದಾರೆ. ಈ ಎರಡು ಕಾವ್ಯಗಳಲ್ಲಿ ರಾಮಾಯಣವು ಮಹಾಭಾರತಕ್ಕಿಂತಲೂ ಪ್ರಾಚೀನವಾಗಿದ್ದು ಇವೆರಡು ಕೃತಿಗಳು ಕ್ರಿ.ಶ. ಮೂರನೆ ಇಲ್ಲವೆ ನಾಲ್ಕನೆ ಶತಮಾನದಲ್ಲಿ ಇಂದಿನ ರೂಪವನ್ನು ಪಡೆದಿರುವುದಾಗಿ ವಿದ್ವಾಂಸರು ಅಭಿಪ್ರಾಯಪಟ್ಟಿರುವರು.

### ರಾಮಾಯಣ

ವಾಲ್ಮೀಕಿ ಮಹರ್ಷಿಯು ರಾಮಾಯಣದ ಕರ್ತೃ. ಮೊದಲಿಗೆ ಇದು ಹನ್ನೆರಡು ಸಾವಿರ ಶ್ಲೋಕಗಳಿಂದ ಕೂಡಿದ್ದು ಕಾಲಾನುಕ್ರಮದಲ್ಲಿ ಇದಕ್ಕೆ ಇತರ ವಿದ್ವಾಂಸರು ಅನೇಕ ವಿವರಣೆಗಳನ್ನು ಸೇರಿಸಿ ಈಗ ಇಪ್ಪತ್ತನಾಲ್ಕು ಸಾವಿರ ಶ್ಲೋಕಗಳಿಂದ ಕೂಡಿದ ಮಹಾಕಾವ್ಯವಾಗಿದೆ. ಇದರಲ್ಲಿ ಜೀವನ ಧರ್ಮ, ರಾಜಧರ್ಮ, ಆಧ್ಯಾತ್ಮ ವಿಚಾರಗಳು ರಸವತ್ತಾದ ಕಥೆಗಳ ಮತ್ತು ಉಪಕಥೆಗಳ ಮೂಲಕ ನಿರೂಪಿಸಲ್ಪಟ್ಟಿವೆ. ರಘುವಂಶದ ಕುಲದೀಪಕನಾದ ಶ್ರೀರಾಮಚಂದ್ರನ ಜೀವನದ ಕಥೆಯನ್ನು ವಸ್ತುವನ್ನಾಗಿ ಉಳ್ಳ ರಾಮಾಯಣದಲ್ಲಿ ಎಲ್ಲ ಮಟ್ಟದ ಜನರ ಜೀವನಕ್ಕೆ ಬೇಕಾದ ಮಾರ್ಗದರ್ಶನವು ದೊರೆಯುತ್ತದೆ. ರಾಮಾಯಣದಲ್ಲಿ ಬರುವ ವ್ಯಕ್ತಿಗಳ ಜೀವನಾದರ್ಶಗಳು ಪ್ರತಿಯೊಬ್ಬ ಹಿಂದೂವಿನ ಜೀವನದಲ್ಲಿ ಬೆರತು ಸಂಮಿಳನಗೊಂಡಿವೆ. ಶ್ರೀರಾಮಚಂದ್ರನನ್ನು ಹಿಂದೂಗಳು ಭಗವಂತನ ಹತ್ತು ಅವತಾರಗಳಲ್ಲಿ ಒಬ್ಬನೆಂದು ಪರಿಗಣಿಸಿ ಅನನ್ಯ ಭಕ್ತಿಯಿಂದ ಪೂಜಿಸುತ್ತಾರೆ. ಹಾಗೆಯೇ ಶ್ರೀರಾಮಚಂದ್ರನ ಸತ್ಯಸಂಧತೆ, ಪಿತೃವಾಕ್ಯ ಪರಿಪಾಲನೆ, ಆದರ್ಶ ನಡವಳಿಕೆ, ಸೀತಾದೇವಿಯ ಪತಿಭಕ್ತಿ, ಪಾತಿವ್ರತ್ಯ ಮತ್ತು ಸಹನಾಶಕ್ತಿ, ಲಕ್ಷ್ಮಣ ಭರತ ಮತ್ತು ಶತ್ರುಘ್ನ ಇವರುಗಳ ಭ್ರಾತೃಪ್ರೇಮ, ಹನುಮಂತನ ಸ್ವಾಮಿಭಕ್ತಿ ಮೊದಲಾದ ಆದರ್ಶಗಳು ಪ್ರತಿಯೊಬ್ಬ ಹಿಂದೂವಿಗೂ ಆದರ್ಶಗಳಾಗಿವೆ. ಇಂತಹ ಆದರ್ಶಗಳನ್ನು ಹೊಂದಿರುವ ರಾಮಾಯಣವು ಭಾರತೀಯರ ಧರ್ಮ ಮತ್ತು ಸಂಸ್ಕೃತಿಯನ್ನು ರೂಪಿಸುವುದರಲ್ಲಿ ಮಹತ್ವಪೂರ್ಣವಾದ ಪ್ರಭಾವವನ್ನು ಬೀರಿರುತ್ತದೆ. ರಾಮಾಯಣದಲ್ಲಿ ದಕ್ಷಿಣ ಭಾರತಕ್ಕೆ ಸಂಬಂಧಿಸಿದ ವಿವರಣೆಗಳೂ ದೊರೆಯುತ್ತವೆ. ಈ ಕಾಲದಲ್ಲಿ ಆರ್ಯರು ದಕ್ಷಿಣ ಭಾರತದಲ್ಲಿ ಇನ್ನೂ ನೆಲಸಿರಲಿಲ್ಲ.

ಕೆಲವೇ ಮಂದಿ ಋಷಿಗಳು ಮಾತ್ರ ವಿಂಧ್ಯ ಪರ್ವತವನ್ನು ದಾಟಿಬಂದು ಆಶ್ರಮಗಳನ್ನು ಸ್ಥಾಪಿಸಿಕೊಂಡಿದ್ದುದಾಗಿ ಕಂಡುಬರುತ್ತದೆ.

**ಮಹಾಭಾರತ**

ಮಹಾಭಾರತವು ಹಿಂದೂ ಧರ್ಮಗ್ರಂಥಗಳಲ್ಲಿ ಒಂದು ಮೇರುಕೃತಿಯಾಗಿರುತ್ತದೆ. ಹಿಂದೂ ಸಂಸ್ಕೃತಿ, ಆದರ್ಶ ಮತ್ತು ವಿಚಾರ ಧಾರೆಗಳ ಕುರಿತಾದ ಈ ಗ್ರಂಥವನ್ನು ಪಂಚಮವೇದವೆಂದೂ ಕರೆಯುತ್ತಾರೆ. ಇದರಲ್ಲಿ ನೀಳ್ಗತೆ ನೀತಿಬೋಧೆ, ಚರ್ಚೆಗಳು, ಪ್ರಸಂಗಗಳು, ಧಾರ್ಮಿಕ ಮತ್ತು ದಾರ್ಶನಿಕ ವಿಚಾರಗಳು ತುಂಬಿದ್ದು ಹಿಂದೂಧರ್ಮದ ವಿಶ್ವಕೋಶ ಎಂಬ ಮಾನ್ಯತೆಯನ್ನು ಗಳಿಸಿದೆ. ಮಹಾಭಾರತವು ಒಂದು ಲಕ್ಷ ಶ್ಲೋಕಗಳಿಂದ ಕೂಡಿದ ಬೃಹತ್ ಗ್ರಂಥವಾಗಿದ್ದು ಅವುಗಳನ್ನು ಹದಿನೆಂಟು ಪರ್ವಗಳನ್ನಾಗಿ ವಿಂಗಡಿಸಲಾಗಿದೆ. ವಿಷಯ ಸಂಪತ್ತು ವಿಚಾರ ಬಾಹುಲ್ಯ ಮತ್ತು ವಿಸ್ತಾರದಲ್ಲಿ ದೊಡ್ಡದಾಗಿರುವುದರಿಂದ ಇದಕ್ಕೆ 'ಮಹಾ' ಎಂಬ ಹೆಸರು ಬಂದಿರುತ್ತದೆ. ಅಂತೆಯೆ ಭರತ ವಂಶಕ್ಕೆ ಸೇರಿದ ಯುಧಿಷ್ಠರ ಮಹಾರಾಜನ (ಧರ್ಮರಾಯನ) ಹಾಗೂ ಇತರ ರಾಜರುಗಳ ಕಥೆಯು ಇದರಲ್ಲಿ ವರ್ಣಿಸಲ್ಪಟ್ಟಿರುವುದರಿಂದ ಇದಕ್ಕೆ ಭಾರತ ಎಂಬ ಹೆಸರು ಬಂದಿರುತ್ತದೆ. ಹೀಗೆ ಇದನ್ನು ಒಟ್ಟಾಗಿ 'ಮಹಾಭಾರತ' ಎಂದು ಕರೆಯಲಾಗಿದೆ.

ಮಹಾಭಾರತವು ಕೌರವರು ಮತ್ತು ಪಾಂಡವರು ಎಂಬ ಎರಡು ರಾಜವಂಶದವರಿಗೆ ನಡೆದ ಯುದ್ಧದ ಕಥಾವಸ್ತುವನ್ನೊಳಗೊಂಡಿದೆ. ಇವರಿಬ್ಬರ ನಡುವೆ ರಾಜ್ಯಕ್ಕಾಗಿ ನಡೆದ ಭೀಕರವಾದ ಕುರುಕ್ಷೇತ್ರ (ದೆಹಲಿಗೆ ಸಮೀಪ) ಯುದ್ಧದ ವರ್ಣನೆ, ದುರ್ಯೋಧನನು ಪಾಂಡವರಿಗೆ ಮಾಡಿದ ಮೋಸ, ಮತ್ತು ಕೊಟ್ಟಂತ ಕಷ್ಟ, ಸತ್ಯವಂತರೂ, ಧರ್ಮನಿಷ್ಠರೂ ಆದ ಪಾಂಡವರು ಅನುಭವಿಸಿದ ಕಷ್ಟ. ಕೊನೆಗೆ ಸತ್ಯಕ್ಕೆ ಮತ್ತು ಧರ್ಮಕ್ಕೆ ದೊರೆತ ಜಯ ಇವುಗಳ ವಿವರವಾದ ವರ್ಣನೆಯು ಇದರಲ್ಲಿದೆ. ಇದಲ್ಲದೆ ಮಹಾಭಾರತದಲ್ಲಿ ಅಲ್ಲಲ್ಲಿ ಬರುವ ಪ್ರಾಸಂಗಿಕ ಕಥೆಗಳು, ನೀತಿ ವಾಕ್ಯಗಳು, ತಾತ್ವಿಕ ವಿಚಾರಗಳು ವೇದೋಪನಿಷತ್ತುಗಳ ಸಾರ ಸರ್ವಸ್ವವೆಲ್ಲವನ್ನೂ ಒಳಗೊಂಡಿರುತ್ತವೆ. ಮೇಲಾಗಿ ಮೇರುಪರ್ವತದ ಮೇಲಿನ ನಂದಾದೀವಿಗೆಯಂತೆ ಮಹಾಭಾರತದ ನಟ್ಟನಡುವೆ ಬರುವ ಭಗವದ್ಗೀತೆಯು ಈ ಗ್ರಂಥದ ಹಿರಿಮೆ ಮತ್ತು ಪವಿತ್ರತೆಯನ್ನು ಮತ್ತಷ್ಟು ಹೆಚ್ಚಿಸಿದೆ. ಹಿಂದೂಗಳು ಪ್ರೀತಿ ಮತ್ತು ಶ್ರದ್ಧಾಭಕ್ತಿಗಳಿಂದ ಪೂಜಿಸುವ ಶ್ರೀಕೃಷ್ಣ ಪರಮಾತ್ಮನ ಜೀವನ ವೃತ್ತಾಂತವು ಈ ಗ್ರಂಥದಲ್ಲಿ ವಿವರಿಸಲ್ಪಟ್ಟಿದೆ. ಇದೂ ಅಲ್ಲದೆ ಮನುಷ್ಯ ಜೀವನದ ಇಹ ಮತ್ತು ಪರಲೋಕದ ಸ್ಥಿತಿಗತಿಗಳಿಗೆ ಸಂಬಂಧಿಸಿದಂತೆ ಸಕಲ ವಿಚಾರಗಳ ಬಗ್ಗೆ ಮಹಾಭಾರತದಲ್ಲಿ ಮಾರ್ಗದರ್ಶನ ದೊರೆಯುತ್ತದೆ. ಧರ್ಮರಾಯನ ಧರ್ಮ ನಿಷ್ಠೆ, ದ್ರೌಪದಿಯ ಪತಿಭಕ್ತಿ, ಪಾತಿವ್ರತ್ಯ, ಭೀಮನ ಸಾಹಸ, ಅರ್ಜುನನ ಪೌರುಷ ಶ್ರೀಕೃಷ್ಣನ ಬಹುಮುಖ ಪ್ರತಿಭೆಯ ಸರ್ವಶಕ್ತವಾದ ದಿವ್ಯವ್ಯಕ್ತಿತ್ವ, ಕರ್ಣನ ತ್ಯಾಗ ಮೊದಲಾದ ವಿಚಾರಗಳು ಸದಾಕಾಲಕ್ಕೂ ಸ್ಫೂರ್ತಿದಾಯಕವೂ ಮತ್ತು ಮಾರ್ಗದರ್ಶಕವೂ ಆಗಿರುತ್ತವೆ. ಇತಿಹಾಸದ ವಸ್ತುವನ್ನು ದೃಷ್ಟಿಯಲ್ಲಿಟ್ಟುಕೊಂಡು ಈ ಗ್ರಂಥವನ್ನು ಅವಲೋಕಿಸಿದಾಗ ರಾಜಧರ್ಮ, ರಾಜ್ಯಾಡಳಿತಗಳಿಗೆ ಸಂಬಂಧಿಸಿದ ಅಮೂಲ್ಯ ವಿಷಯಗಳು ಇದರಲ್ಲಿ ಸಿಗುತ್ತವೆ.

ಇದರಲ್ಲಿನ ಹನ್ನೆರಡನೆ ಪರ್ವವಾದ ಶಾಂತಿಪರ್ವದಲ್ಲಿ ಆಪದ್ಧರ್ಮ, ರಾಜಧರ್ಮ, ಮೋಕ್ಷಧರ್ಮ ಮೊದಲಾದುವುಗಳ ಬಗ್ಗೆ ವಿಸ್ತಾರವಾದ ವಿಷಯಗಳು ಮತ್ತು ಉಪದೇಶಗಳೂ ಸಿಗುತ್ತವೆ. ವೇದ ವೇದಾಂತಗಳ ಗಹನವಾದ ತತ್ವಗಳು ಶಾಂತಿಪರ್ವದಲ್ಲಿ ಸರಳವಾಗಿ ವಿವರಿಸಲ್ಪಟ್ಟಿವೆ. ಒಟ್ಟಾರೆ ಹೇಳುವುದಾದರೆ ಹಿಂದೂ ಸಂಸ್ಕೃತಿ, ಆದರ್ಶ ಮತ್ತು ವಿಚಾರಧಾರೆಗಳ ಕುರಿತಾದ ವಿಸ್ತಾರವಾದ ಒಂದು ಚಿತ್ರವು ಈ ಗ್ರಂಥದಲ್ಲಿ ಸಿಗುವಂತೆ ಮತ್ತಾವ ಗ್ರಂಥದಲ್ಲೂ ಸಿಗುವುದಿಲ್ಲ.

**ಭಗವದ್ಗೀತೆ**

ಭಗವದ್ಗೀತೆಯು ಸನಾತನ ಹಿಂದುಧರ್ಮದ ಸಾರಸರ್ವಸ್ವವನ್ನು ಒಳಗೊಂಡಿರುವ ಮಹತ್ವವುಳ್ಳ ಒಂದು ಪುಟ್ಟ ಕೃತಿ. ಹದಿನೆಂಟು ಅಧ್ಯಾಯಗಳಿಂದ ಮತ್ತು ಏಳುನೂರು ಶ್ಲೋಕಗಳಿಂದಲೂ ಕೂಡಿರುವ ಭಗವದ್ಗೀತೆಯು ಮಹಾಭಾರತದ ನಟ್ಟನಡುವೆ ಬರುವ ಭೀಷ್ಮಪರ್ವದಲ್ಲಿ ಬರುತ್ತದೆ. ಭಗವಾನ್ ಶ್ರೀಕೃಷ್ಣ ಪರಮಾತ್ಮನು ಅರ್ಜುನನಿಗೆ ನೀಡಿದ ಉಪದೇಶಾಮೃತವು ಇದರಲ್ಲಿ ಅಡಕವಾಗಿದೆ. ಶ್ರೀಕೃಷ್ಣನು ಕುರುಕ್ಷೇತ್ರದ ಯುದ್ಧ ರಂಗದಲ್ಲಿ ಅರ್ಜುನನಿಗೆ ನೀಡಿದ ಆತ್ಮವಿದ್ಯಾಸಂದೇಶವು ಇದರಲ್ಲಿದೆ. ಭಗವದ್ಗೀತೆಗೆ ಉಪನಿಷತ್ತುಗಳ ಉಪನಿಷತ್ತು ಎಂಬ ಹೆಸರು ಬಂದಿದೆ. ವೇದೋಪನಿಷತ್ತುಗಳಲ್ಲಿ ಹೇಳಲಾಗಿರುವ ವಿಷಯಗಳ ಸಾರಸಂಗ್ರಹವು ಇದರಲ್ಲಿದೆ. ಪ್ರಾಚೀನ ಕಾಲದಿಂದ ಆಧುನಿಕ ಕಾಲದವರೆಗೂ ಎಲ್ಲಾ ಮತಾಚಾರ್ಯರು ಸಾಧುಸಂತರು, ದಾರ್ಶನಿಕರು, ತತ್ವಜ್ಞಾನಿಗಳೂ ಗೀತೆಯನ್ನು ಆಳವಾಗಿ ಅಧ್ಯಯನಮಾಡಿ ತಮ್ಮ ಬಾಳಿಗೆ ಬೆಳಕನ್ನು ಕಂಡುಕೊಂಡಿದ್ದಾರೆ. ಶ್ರೀ ಶಂಕರ, ಶ್ರೀ ರಾಮಾನುಜ ಮತ್ತು ಮಧ್ವಾಚಾರ್ಯರು ಗೀತೆಯನ್ನು ಆಧಾರವಾಗಿಟ್ಟುಕೊಂಡು ಭಾಷ್ಯಗಳನ್ನು ರಚಿಸಿ ತಮ್ಮ ಹೊಸ ಹೊಸ ಸಿದ್ಧಾಂತಗಳನ್ನು ಪ್ರತಿಪಾದಿಸಿದ್ದಾರೆ. ಇಪ್ಪತ್ತನೆ ಶತಮಾನದಲ್ಲಿ ಬಾಲಗಂಗಾಧರ ತಿಲಕರು, ಮಹರ್ಷಿ ಅರವಿಂದರು. ಮಹಾತ್ಮ ಗಾಂಧೀಜಿಯವರು, ಡಾ.ಎಸ್.ರಾಧಾಕೃಷ್ಣನ್ ಮತ್ತು ಆಚಾರ್ಯ ವಿನೋಬಭಾವೆಯುವರು ಗೀತೆಯ ಮೇಲೆ ವ್ಯಾಖ್ಯಾನ ಕೃತಿಗಳನ್ನು ರಚಿಸಿದ್ದಾರೆ. ಭಗವದ್ಗೀತೆಯು ಹಿಂದೂಗಳ ಜೀವನದ ಮೇಲೆ ಮಹತ್ವಪೂರ್ಣ ಪ್ರಭಾವ ಬೀರಿರುತ್ತದೆ. ಪೌವಾತ್ಯ ಮತ್ತು ಪಾಶ್ಚಾತ್ಯ ರಾಷ್ಟ್ರಗಳಲ್ಲಿನ ಅನೇಕ ಭಾಷೆಗಳಿಗೆ ಗೀತೆಯು ಭಾಷಾಂತರಿಸಲ್ಪಟ್ಟಿದ್ದು ಪ್ರಚಾರಗೊಂಡಿದೆ. ಮೇಲಾಗಿ ಗೀತೆಯಲ್ಲಿ ಒಂದು ಕೋಮಿನ, ಒಂದು ರಾಷ್ಟ್ರದ ದೃಷ್ಟಿಗಳಿರದೆ ಆದರ ಉಪದೇಶ ವಿಶ್ವದೃಷ್ಟಿಯಿಂದ ಕೂಡಿದ್ದು ಆದು ವಿಶ್ವಮಾನ್ಯತೆಗಳಿಸಿದೆ.

ಭಗವದ್ಗೀತೆಯಲ್ಲಿ ಮನುಷ್ಯನ ಗುಣಧರ್ಮಗಳಿಗೆ ಅನುಸಾರವಾಗಿ ಅವನು ತನ್ನ ಬಾಳನ್ನು ಹೇಗೆ ಉತ್ತಮವೂ ಉಪಯುಕ್ತವೂ ಆಗಿ ಮಾಡಿಕೊಳ್ಳಬಹುದೆಂಬುದಕ್ಕೆ ಮಾರ್ಗದರ್ಶನವು ದೊರೆಯುತ್ತದೆ. ಆದಕ್ಕೆ ಅನುಸಾರವಾಗಿ ಕರ್ಮಮಾರ್ಗ, ಭಕ್ತಿ ಮಾರ್ಗ, ಜ್ಞಾನಮಾರ್ಗ ಮತ್ತು ಧ್ಯಾನಮಾರ್ಗ ಎಂಬ ನಾಲ್ಕು ಮಾರ್ಗಗಳು ಗೀತೆಯಲ್ಲಿ ವಿಸ್ತಾರವಾಗಿ ಹೇಳಲ್ಪಟ್ಟಿವೆ. ಜಗತ್ತಿನಲ್ಲಿ ಜನ್ಮತಳೆದ ಮಾನವನು ತನ್ನ ಕೆಲಸ, ತನ್ನ ಧರ್ಮ, ಮತ್ತು ತನ್ನ ಜ್ಞಾನದಿಂದ ಜೀವನದ ಪರಮಗುರಿಯಾದ ಆತ್ಮ ಸಾಕ್ಷಾತ್ಕಾರವನ್ನು ಹೇಗೆ ಪಡೆದುಕೊಳ್ಳಬಹುದೆಂಬುದರ ಬಗ್ಗೆ ಗೀತೆಯು ನಿರ್ದೇಶನ ನೀಡುತ್ತದೆ. ಜೀವನದ ದಿನ ನಿತ್ಯದ ಹಲವಾರು ಸಮಸ್ಯೆಗಳನ್ನು ಹೇಗೆ ಎದುರಿಸಬೇಕು ಎಂಬುದಕ್ಕೆ ಸರಿಯಾದ

ಮಾರ್ಗದರ್ಶನ ದೊರೆಯುತ್ತದೆ. ಒಟ್ಟಿನಲ್ಲಿ ಹೇಳುವುದಾದರೆ ಗೀತೆಯು ಕಷ್ಟಕಾಲದಲ್ಲಿ ಕೈಹಿಡಿದು ಸಹಾಯ ಮಾಡುವ ಆಪತ್‌ಭಾಂಧವನಂತಿದೆ. ದುಃಖತಪ್ತ ಜೀವಕ್ಕೆ ಸಮಾಧಾನ ನೀಡುತ್ತದೆ. ಆತ್ಮಸುಖಕ್ಕೆ ಮಾರ್ಗದರ್ಶನ ಮಾಡುತ್ತದೆ, ಭಯದ ವೇಳೆ ಧೈರ್ಯ ನೀಡುವ ಮಿತ್ರನಂತಿದೆ. ಸಮಸ್ಯೆಗಳ ಕತ್ತಲಿನಲ್ಲಿ ಸಿಲುಕಿದವನಿಗೆ ಪರಿಹಾರದ ಜ್ಯೋತಿಯಾಗಿದ್ದು ಅನುಪಮವಾದ ಕೃತಿರತ್ನವಾಗಿದೆ.

**ರಾಮಾಯಣ ಮತ್ತು ಮಹಾಭಾರತಗಳ ಐತಿಹಾಸಿಕ ಮೌಲ್ಯ**

ರಾಮಾಯಣವು ಎಷ್ಟರ ಮಟ್ಟಿಗೆ ಐತಿಹಾಸಿಕ ಕೃತಿ ಎಂದು ನಿರ್ಧಿಷ್ಟವಾಗಿ ಹೇಳುವುದು ಕಷ್ಟ. ಅದರಲ್ಲಿ ಬರುವ ವಿವರಣೆಗಳು ಮತ್ತು ಘಟನೆಗಳೆಲ್ಲವನ್ನೂ ಐತಿಹಾಸಿಕ ಸಂಗತಿಗಳೆಂದು ಪರಿಗಣಿಸಲು ಸಾಧ್ಯವಿಲ್ಲ. ಆದ್ದರಿಂದ ರಾಮಾಯಣದಲ್ಲಿ ಐತಿಹಾಸಿಕ ಸಂಗತಿಗಳನ್ನು ಗಮನಿಸಬೇಕಾದಾಗ ವ್ಯಾಪಕ ದೃಷ್ಟಿಯಿಂದ ನೋಡಬೇಕಾಗುತ್ತದೆ. ರಾಮಾಯಣದಲ್ಲಿ ಕೇಂದ್ರ ವ್ಯಕ್ತಿಯಾದ ರಾಮನು ಒಬ್ಬ ನಿಜವಾದ ವ್ಯಕ್ತಿ. ಈತನು ಅಯೋಧ್ಯೆಯ ಇಕ್ಷ್ವಾಕು ವಂಶಕ್ಕೆ ಸೇರಿದವನು. ಶ್ರೀರಾಮಚಂದ್ರನು ಯುದ್ಧ ಮತ್ತು ಶಾಂತಿ ಕ್ಷೇತ್ರಗಳೆರಡರಲ್ಲೂ ಗಳಿಸಿದ ಸಾಧನೆಗಳು ಜನಸಾಮಾನ್ಯ ಮನಸ್ಸಿನ ಮೇಲೆ ಆಳವಾದ ಪ್ರಭಾವ ಬೀರಿರುವವೆಂದು ಆರ್.ಎಸ್.ತ್ರಿಪಾಠಿಯವರು ಅಭಿಪ್ರಾಯಪಡುವರು. ರಾಮಾಯಣದಲ್ಲಿ ಚಿತ್ರಿಸಲಾಗಿರುವ ಎಲ್ಲ ಸಂಗತಿಗಳು ನಿಜವಲ್ಲದಿದ್ದರೂ, ಇತಿಹಾಸಕಾರನಿಗೆ ಇದರಲ್ಲಿ ಕೆಲವು ಅಮೂಲ್ಯವಾದ ಸಂಗತಿಗಳು ದೊರೆಕುತ್ತವೆ. ಉದಾಹರಣೆಗೆ, ಆರ್ಯರ ಸಂಸ್ಕೃತಿಯು ದುಖನ್ ಮತ್ತು ದಕ್ಷಿಣ ಭಾರತದಲ್ಲಿ ಹರಡಿದುದನ್ನು ರಾಮಾಯಣದಿಂದ ತಿಳಿಯಬಹುದಾಗಿದೆ. ಆರ್ಯರ ಕೈಯಿಂದ ಅನಾರ್ಯರ ಸೋಲು ಇದರಲ್ಲಿ ವರ್ಣಿಸಲ್ಪಟ್ಟಿದೆ. ಆರ್ಯರ ಜೀವನವು ಶ್ರೇಷ್ಠವೆಂಬುದಾಗಿ ಪರಿಗಣಿಸಲ್ಪಟ್ಟಿದೆ. ಅಂತೆಯೆ ಈ ಕಾವ್ಯವು ಲಂಕಾಧೀಶ್ವರನಾದ ರಾವಣನ ಬಗ್ಗೆ ಪ್ರಸ್ಥಾಪಿಸುವಾಗ ಅವನಲ್ಲಿದ್ದ ಸದ್ಗುಣಗಳನ್ನು ಕಡೆಗಣಿಸಿ ಅವನೊಬ್ಬ ದುರ್ಗುಣ ವ್ಯಕ್ತಿಯೆಂದು ಚಿತ್ರಿಸುತ್ತದೆ. ಆದ್ದರಿಂದ ಇತಿಹಾಸಕಾರರು ರಾವಣನನ್ನು ಸಂಪೂರ್ಣವಾಗಿ ಒಬ್ಬ ದುಷ್ಟ ದೊರೆಯೆಂದಾಗಲೀ ಮತ್ತು ಅನಾರ್ಯರನ್ನು ಅಸಂಸ್ಕೃತ ಜನಗಳೆಂದಾಗಲೀ ಹೇಳಲು ಸಾಧ್ಯವಿಲ್ಲ. ಅನಾರ್ಯರೂ ಕೂಡ ನಾಗರಿಕತೆಯಲ್ಲಿ ಉನ್ನತಮಟ್ಟವನ್ನು ತಲುಪಿದ್ದು. ಭೌತಿಕವಾಗಿ ಮುಂದುವರಿದಿದ್ದರೆಂಬುದಾಗಿ ರಾಮಾಯಣದಿಂದ ತಿಳಿದುಬರುತ್ತದೆ. ಇದಲ್ಲದೆ ರಾಮಾಯಣವು ಆರ್ಯರು ತಮ್ಮ ಪ್ರತಿಸ್ಪರ್ಧಿಗಳ ವಿರುದ್ಧ ಹೋರಾಡುವಾಗಿ ಅನುಸರಿಸಿದ ವಿಧಾನಗಳ ಬಗ್ಗೆಯೂ ಬೆಳಕನ್ನು ಚೆಲ್ಲುತ್ತದೆ. ಮೇಲಾಗಿ ರಾಮಾಯಣದಿಂದ ಅಂದಿನ ರಾಜರ ಆಸ್ಥಾನದ ಜೀವನದ ಬಗ್ಗೆಯೂ ಮತ್ತು ಸಾಮಾಜಿಕ ಪದ್ಧತಿಗಳ ಬಗ್ಗೆಯೂ ಅನೇಕ ಅಂಶಗಳನ್ನು ಗ್ರಹಿಸಬಹುದಾಗಿದೆ.

ಮಹಾಭಾರತವು ಕೇವಲ ಒಂದು ಮಹಾಕಾವ್ಯವಷ್ಟೇ ಆಗಿರದೆ ಅಪ್ರತಿಮ ವೀರರ ಮತ್ತು ಸ್ತ್ರೀಯರ ಹಾಗೂ ಕೆಲವು ದೈವಸಂಭೂತರಾದವರ ಮಹತ್ಸಾಧನೆಗಳನ್ನು ಕುರಿತು ಹೇಳುವ ಒಂದು ರೋಮಾಂಚಕ ಕೃತಿಯೆಂದು ಕೆ.ಎಮ್.ಮುನ್ಷಿಯವರು ಅಭಿಪ್ರಾಯಪಟ್ಟಿರುವರು. ಮಹಾಭಾರತದಲ್ಲಿ ಜೀವನಕ್ಕೆ ಬೇಕಾದ ಮಾರ್ಗದರ್ಶನ, ಮಾನವನ ಸಮಸ್ಯೆಗಳಿಗೆ ಪರಿಹಾರ ತೋರಿಸುವ ತಾತ್ವಿಕ ಮತ್ತು ದಾರ್ಶನಿಕ ವಿಚಾರಗಳು

ಪ್ರಸ್ತಾಪಿಸಲ್ಪಟ್ಟಿವೆ. ಇದಲ್ಲದೆ ಮಹಾಭಾರತದಲ್ಲಿನ ಭಗವದ್ಗೀತೆಯು ಉನ್ನತ ಮಟ್ಟದ ಧಾರ್ಮಿಕ ಕೃತಿರತ್ನವಾಗಿದೆ. ಮಹಾಭಾರತವನ್ನೂ ರಾಮಾಯಣದಂತೆ ಪೂರ್ಣವಾಗಿ ಒಂದು ಐತಿಹಾಸಿಕ ಕೃತಿಯೆಂದು ಪರಿಗಣಿಸಲು ಸಾಧ್ಯವಿಲ್ಲದಿದ್ದರೂ ರಾಮಾಯಣದಲ್ಲಿನ ಸಂಗತಿಗಳಂತಲ್ಲದೆ ಇದರಲ್ಲಿರುವ ಕೆಲವು ಸಂಗತಿಗಳು ನಿಜಾಂಶಗಳಿಂದ ಕೂಡಿವೆ. ಮಹಾಭಾರತದಲ್ಲಿ ಆರ್ಯರ ಸಮಾಜದಲ್ಲಿನ ಒಳ್ಳೆಯ ಮತ್ತು ಕೆಟ್ಟ ಅಂಶಗಳೆರಡೂ ಪ್ರತಿಪಾದಿತವಾಗಿವೆ. ಒಂದು ಕಡೆ ಯುಧಿಷ್ಠಿರ (ಧರ್ಮರಾಯ)ನು ಒಳ್ಳೆಯ ಗುಣಗಳನ್ನು ಪ್ರತಿಬಿಂಬಿಸಿದರೆ ಮತ್ತೊಂದು ಕಡೆ ದುರ್ಯೋಧನನು ಆರ್ಯರ ಸ್ವಭಾವದಲ್ಲಿನ ದುರ್ಗುಣಗಳನ್ನು ಪ್ರತಿಬಿಂಬಿಸುತ್ತಾನೆ. ಶ್ರೀಕೃಷ್ಣನ ದಿವ್ಯವ್ಯಕ್ತಿತ್ವ, ಅರ್ಜುನನ ಪೌರುಷ ಮೊದಲಾದ ವೀರಗುಣಗಳು ಈ ಕಾವ್ಯದಲ್ಲಿ ಮೂಡಿಬಂದಿವೆ. ಮಹಾಭಾರತದಲ್ಲಿ ಕಾಣಬರುವ ಪರಿಸ್ಥಿತಿಗಳು ಪ್ರತಿಯೊಬ್ಬ ಮಾನವನ ಜೀವನದಲ್ಲೂ ಕಂಡುಬರುತ್ತವೆ. ಇದರಲ್ಲಿ ಕಂಡುಬರುವ ಒಂದು ಸಾಮಾಜಿಕ ಚಿತ್ರವು ರಾಮಾಯಣದ ಕಾಲದ ಸಾಮಾಜಿಕ ಚಿತ್ರಕ್ಕಿಂತ ಮುಂದುವರಿದಿದ್ದುದಾಗಿ ಕಂಡುಬರುತ್ತದೆ. ರಾಜಕೀಯ ಕ್ಷೇತ್ರದಲ್ಲಿ ಅನೇಕ ರಾಜರುಗಳು ತಮ್ಮ ತಮ್ಮ ಸ್ಥಾನಗಳನ್ನು ಬಲಪಡಿಸಿಕೊಳ್ಳಲು ಪ್ರಯತ್ನಿಸುತ್ತಿದ್ದ ಚಿತ್ರವು ಮಹಾಭಾರತದಲ್ಲಿ ಕಂಡುಬರುತ್ತದೆ. ರಾಜರುಗಳು ತಮ್ಮ ಉದ್ದೇಶ ಸಾಧನೆಗಾಗಿ ಮೋಸ ವಂಚನೆ ಮತ್ತು ರಾಜಕೀಯ ತಂತ್ರಗಳನ್ನು ಬಳಸುತ್ತಿದ್ದುದು ಈ ಕಾವ್ಯದಲ್ಲಿ ವ್ಯಕ್ತಪಟ್ಟಿದೆ. ಅಂತೆಯೆ ಜನರ ನಡವಳಿಕೆಗಳು, ಪದ್ಧತಿಗಳು, ಧಾರ್ಮಿಕ ಆಚರಣೆಗಳು ಮತ್ತು ನಂಬಿಕೆಗಳು ವಿವರವಾಗಿ ಚಿತ್ರಿಸಲ್ಪಟ್ಟಿವೆ. ಆರ್ಯರ ಮತ್ತು ಅನಾರ್ಯರ ಧಾರ್ಮಿಕ ನಂಬಿಕೆಗಳು ಮತ್ತು ಸಂಪ್ರದಾಯ ಪದ್ಧತಿಗಳು ಸಂಮಿಳನಗೊಳ್ಳುತ್ತಿದ್ದ ಸೂಚನೆಗಳು ಸ್ಪಷ್ಟವಾಗಿ ಕಂಡುಬರುತ್ತವೆ. ರಾಜರುಗಳ ಮತ್ತು ದಾರ್ಶನಿಕರ ಪ್ರಯತ್ನದಿಂದ ವರ್ಣಾಶ್ರಮ ಪದ್ಧತಿಯ ದ್ವೇಷಗಳು ಕಡಿಮೆಯಾದವು. ಮಹಾಕಾವ್ಯಗಳ ಕಾಲದಲ್ಲಿ ಕಂಡುಬರುವ ಬಹುಪತ್ನಿತ್ವ ಮತ್ತು ನಿಯೋಗ ಪದ್ಧತಿಗಳು ಆಧುನಿಕ ಕಾಲದ ಜನರಿಗೆ ಅತ್ಯಂತ ಕುತೂಹಲಕಾರಿಯಾಗಿ ಕಂಡುಬಂದರೂ ಅಂದಿನ ಸಮಾಜದಲ್ಲಿ ಅವು ವಾಸ್ತವಿಕ ಸಂಗತಿಗಳೇ ಆಗಿದ್ದವು. ಆದ್ದರಿಂದ ಮಹಾಭಾರತದಲ್ಲಿ ಕಂಡುಬರುವ ಆರ್ಯರ ಸಮಾಜದ ಕೆಲವು ಸಂಗತಿಗಳು ಐತಿಹಾಸಿಕ ಸಂಗತಿಗಳೇ ಆಗಿರುತ್ತವೆ. ಆದರೆ ಇತಿಹಾಸಕಾರನು ಕಾಲ್ಪನಿಕ ಸಂಗತಿಗಳಿಂದ ಐತಿಹಾಸಿಕ ಸಂಗತಿಗಳನ್ನು ಆರಿಸಿಕೊಳ್ಳುವಾಗ ಹೆಚ್ಚಿನ ಎಚ್ಚರಿಕೆ ವಹಿಸಬೇಕಾಗುತ್ತದೆ.

**ಪುರಾಣಗಳು**

ವೇದ ವಾಙ್ಮಯ ಮತ್ತು ಮಹಾಕಾವ್ಯಗಳಂತೆ ಪುರಾಣಗಳೂ ಕೂಡ ಪ್ರಾಚೀನ ಭಾರತದ ಇತಿಹಾಸ ರಚನೆಗೆ ಕೆಲವು ಸಂದರ್ಭಗಳಲ್ಲಿ ಅಮೂಲ್ಯ ಮಾಹಿತಿಗಳನ್ನೊದಗಿಸುತ್ತವೆ. ಮಹಾಕಾವ್ಯಗಳಂತೆ ಪುರಾಣಗಳೂ ಕೂಡ ಮೂಲದಲ್ಲಿ ಹಲವಾರು ಕವಿಗಳಿಂದ ರಚಿಸಲ್ಪಟ್ಟವುಗಳಾಗಿವೆ. ಕಾಲಾನುಕ್ರಮದಲ್ಲಿ ಇವುಗಳಿಗೆ ಬ್ರಾಹ್ಮಣ ಪುರೋಹಿತರು ಧಾರ್ಮಿಕ ಉದ್ದೇಶಗಳಿಂದ ಮತ್ತಷ್ಟು ವಿವರಣೆಗಳನ್ನು ಸೇರಿಸಿರುತ್ತಾರೆ. ಪುರಾಣಗಳ ರಚನೆಯ ಕಾಲದ ಬಗ್ಗೆ ನಿರ್ಧಿಷ್ಟವಾಗಿ ಹೇಳುವುದು ಕಷ್ಟ. ಆದಾಗ್ಯೂ ಪುರಾಣಗಳೂ ಕೂಡ ಉಪನಿಷತ್ತುಗಳು ಮತ್ತು ಸೂತ್ರಗಳಷ್ಟೇ ಪ್ರಾಚೀನದವುಗಳೆಂದು ಮತ್ತು ಇವುಗಳು ಕ್ರಿ.ಶ.ಶಕೆಯ ನಾಲ್ಕು, ಐದು ಮತ್ತು ಆರನೆ ಶತಮಾನಗಳಲ್ಲಿ ರಚಿಸಲ್ಪಟ್ಟಿವೆಯೆಂದು ಅಭಿಪ್ರಾಯ ಪಡಲಾಗಿದೆ. ಪುರಾಣಗಳ ಸಂಖ್ಯೆ ಒಟ್ಟು ಹದಿನೆಂಟು.

ಅವುಗಳೆಂದರೆ, ಬ್ರಹ್ಮಪುರಾಣ, ಪದ್ಮಪುರಾಣ, ವಿಷ್ಣು, ವಾಯು, ಭಾಗವತ, ನಾರದ, ಮಾರ್ಕಂಡೇಯ, ಅಗ್ನಿ, ಭವಿಷ್ಯ, ಬ್ರಹ್ಮವೈತರ್ವ ಲಿಂಗ, ವರಾಹ, ಸ್ಕಂದ, ವಾಮನ, ಕೂರ್ಮ, ಮತ್ಸ್ಯ, ಗರುಡ ಮತ್ತು ಬ್ರಹ್ಮಾಂಡ ಪುರಾಣ. ಇವುಗಳಲ್ಲದೆ ಹದಿನೆಂಟು ಉಪಪುರಾಣಗಳೂ ಇವೆ. ಪುರಾಣಗಳು ಬ್ರಹ್ಮಾಂಡದ ಸೃಷ್ಟಿ ಮತ್ತು ವಿಕಾಸವನ್ನೂ, ದೇವರುಗಳ ಮತ್ತು ಋಷಿಗಳ ವಂಶಾವಳಿಗಳನ್ನೂ, ರಾಜಸಂತತಿಗಳ ಇತಿಹಾಸದ ಬಗ್ಗೆ ಮಾಹಿತಿಗಳನ್ನೊದಗಿಸುತ್ತವೆ.

## ಪುರಾಣಗಳ ಮೌಲ್ಯ

ಧಾರ್ಮಿಕ ಸಾಹಿತ್ಯವಾಗಿರುವ ಪುರಾಣಗಳು ಹಿಂದೂಗಳ ಧಾರ್ಮಿಕ ಭಾವನೆಗಳ ಮೇಲೆ ಹೆಚ್ಚಿನ ಪ್ರಭಾವವನ್ನು ಬೀರಿವೆ. ಇಂದೂ ಕೂಡ ಧರ್ಮಬೀರುಗಳಾದ ಹಿಂದೂಗಳು ಪುರಾಣಗಳ ಬಗ್ಗೆ ಪೂಜ್ಯಭಾವನೆ ಹೊಂದಿದ್ದಾರೆ. ಆದರೆ ಇತಿಹಾಸ ರಚನೆಕಾರನ ದೃಷ್ಟಿಯು ಅವುಗಳಲ್ಲಿ ಐತಿಹಾಸಿಕ ಸಂಗತಿಗಳನ್ನು ಹುಡುಕುವುದಾಗಿರುತ್ತದೆ. ಪುರಾಣಗಳು ಹಿಂದೂಗಳ ಪುರಾಣಕಥೆಗಳು, ವ್ರತಾಚರಣೆಗಳು, ಧಾರ್ಮಿಕ ನಂಬಿಕೆಗಳು ಮತ್ತು ಸಂಸ್ಕಾರಗಳು, ವಿಗ್ರಹಾರಾಧನೆ ಮೊದಲಾದ ವಿಷಯಗಳನ್ನು ಕುರಿತು ತಿಳಿಸುವುದರಿಂದ ಹಿಂದೂಧರ್ಮದ ಬಗ್ಗೆ ತಿಳಿಯುವ ಆಸಕ್ತಿಯುಳ್ಳ ಪ್ರತಿಯೊಬ್ಬರೂ ಅವುಗಳನ್ನು ಅತ್ಯಾವಶ್ಯಕವಾಗಿ ಅಧ್ಯಯನ ಮಾಡಬೇಕಾಗುತ್ತದೆ. ಅಂತೆಯೆ ರಾಜಕೀಯ ಇತಿಹಾಸದಲ್ಲಿ ಆಸಕ್ತಿಯುಳ್ಳವರಿಗೆ ಬ್ರಹ್ಮಪುರಾಣ, ವಾಯುಪುರಾಣ ಮತ್ತು ಮತ್ಸ್ಯ ಪುರಾಣಗಳಲ್ಲಿ ಅನೇಕ ವಿಷಯಗಳು ದೊರೆಯುತ್ತವೆ. ಪುರಾಣಗಳಲ್ಲಿ ದೊರಕುವ ಭೌಗೋಳಿಕ ವಿವರಣೆಗಳು ಇತಿಹಾಸ ರಚನೆಗೆ ಉಪಯುಕ್ತವಾಗುತ್ತವೆ. ಪಾಶ್ಚಾತ್ಯ ವಿದ್ವಾಂಸರಾದ ಪರ್ಗೇಟರ್ ಎಂಬವರು ಪುರಾಣಗಳ ಬಗ್ಗೆ ತುಲಾನಾತ್ಮಕವಾಗಿ ಅಧ್ಯಯನ ಮಾಡಿ ಅನೇಕ ಅಮೂಲ್ಯ ಸಂಗತಿಗಳನ್ನು ಬೆಳಕಿಗೆ ತಂದಿದ್ದಾರೆ. ಪುರಾಣಗಳು ಹಿಂದೂಗಳ ಪವಿತ್ರ ಸಾಹಿತ್ಯ ಕೃತಿಗಳಷ್ಟೇ ಆಗಿರದೆ ಅವು ಪ್ರಾಚೀನ ಭಾರತೀಯರು ಕಾವ್ಯ, ವ್ಯಾಕರಣ, ಖಗೋಳಜ್ಞಾನ, ಜ್ಯೋತಿಷ್ಯ, ಶಿಲ್ಪಶಾಸ್ತ್ರ ವಾಸ್ತುಶಿಲ್ಪ, ಸಂಗೀತ, ವೈದ್ಯಶಾಸ್ತ್ರದ ಬಗ್ಗೆ ಹೊಂದಿದ್ದ ಜ್ಞಾನದ ಬಗ್ಗೆ ಬಹು ಉಪಯುಕ್ತ ವಿಷಯಗಳನ್ನೊದಗಿಸುತ್ತವೆ. ಪುರಾಣಗಳನ್ನು ಅತಿ ಎಚ್ಚರಿಕೆಯಿಂದ ಅಧ್ಯಯನ ಮಾಡಿದ್ದಾದರೆ ಅವುಗಳಲ್ಲಿ ಐತಿಹಾಸಿಕವಾಗಿ ಇಲ್ಲದೆ ಇರುವುದೇನಿಲ್ಲವೆಂದೂ ಮತ್ತು ಅವುಗಳಿಂದ ಸಮಕಾಲೀನ ಘಟನೆಗಳನ್ನು ತಿಳಿದು ಇತಿಹಾಸವನ್ನು ಪುನರ‍್ರಚಿಸಲು ಸಾಧ್ಯವೆಂದೂ ಡಾ.ಎ.ಎಸ್.ಅಲ್ಟೇಕರ್ ಅಭಿಪ್ರಾಯಪಟ್ಟಿದ್ದಾರೆ. ಪುರಾಣಗಳಲ್ಲಿ ಮಹಾಭಾರತ ಯುದ್ಧಕ್ಕೆ ಮುಂಚೆ ಪ್ರಸ್ತಾಪಿಸಲಾಗಿರುವ ರಾಜಸಂತತಿಗಳು ಶಿಶುನಾಗ, ಮೌರ್ಯ, ಮತ್ತು ಆಂಧ್ರರ ರಾಜಸಂತತಿಗಳಷ್ಟೇ ಐತಿಹಾಸಿಕ ಸತ್ಯಸಂಗತಿಗಳಾಗಿವೆಯೆಂದು. ಎ.ಡಿ.ಪುಶಾಲ್ಕರ್ ಅಭಿಪ್ರಾಯಪಟ್ಟಿರುವರು. ಆದ್ದರಿಂದ ವೇದ ವಾಙ್ಮಯ ಮತ್ತು ಪುರಾಣಗಳು ಇತಿಹಾಸ ರಚನೆಗೆ ಅನೇಕ ರೀತಿಯಲ್ಲಿ ಉಪಯುಕ್ತವಾಗಿವೆ. ಒಟ್ಟಾರೆ ಹೇಳುವುದಾದರೆ ಪುರಾಣಗಳಲ್ಲಿ ಹೇಳಿರುವುದೆಲ್ಲವೂ ಇತಿಹಾಸವಾಗುವುದಿಲ್ಲ. ಆದರೆ ಅವುಗಳಲ್ಲಿ ಪ್ರಸ್ತಾಪಿಸಲಾಗಿರುವ ರಾಜರುಗಳ ಮತ್ತು ಋಷಿಗಳ ವಂಶಾವಳಿಗಳು, ಸಾಮಾಜಿಕ ಮತ್ತು ಧಾರ್ಮಿಕ ಸ್ಥಿತಿಗತಿಗಳು ಇತಿಹಾಸಕಾರನಿಗೆ ಅನೇಕ ವಿಷಯಗಳನ್ನು ಒದಗಿಸುತ್ತವೆ ಎಂಬುದರ ಬಗ್ಗೆ ಸಂಶಯಪಡುವಂತಿಲ್ಲ.

ಅಧ್ಯಾಯ-6

# ಹೊಸ ಮತಗಳ ಉದಯ

ಕ್ರಿ.ಪೂ. ಆರನೇ ಶತಮಾನವು ಭಾರತದ ಇತಿಹಾಸದಲ್ಲೇ ಅಲ್ಲದೆ ವಿಶ್ವದ ಇತಿಹಾಸದಲ್ಲೂ ಒಂದು ಪರ್ವಕಾಲವಾಗಿದ್ದು ಮಹತ್ವಪೂರ್ಣ ಶತಮಾನವೆಂದು ಪರಿಗಣಿಸಲ್ಪಟ್ಟಿದೆ ಈ ಶತಮಾನವನ್ನು ಆತ್ಯಾಶ್ಚರ್ಯಕರವಾದ ಶತಮಾನವೆಂದೂ, ಮಾನವನ ಪ್ರೌಢಡವಸ್ಥೆಯ ಕಾಲವೆಂದೂ ಕೆಲವು ಇತಿಹಾಸಕಾರರು ವರ್ಣಿಸಿದ್ದಾರೆ. ಈ ಶತಮಾನದಲ್ಲಿ ಮಾನವನ ಜೀವನದ ವಿವಿಧ ಕ್ಷೇತ್ರಗಳಲ್ಲಿ ಅಂದರೆ ರಾಜಕೀಯ, ಆರ್ಥಿಕ, ಸಾಮಾಜಿಕ ಮತ್ತು ಧಾರ್ಮಿಕ ಕ್ಷೇತ್ರಗಳಲ್ಲಿ ಕಂಡುಬಂದ ಘಟನಾತ್ಮಕ ಬದಲಾವಣೆಗಳೇ ಇದಕ್ಕೆ ಮುಖ್ಯ ಕಾರಣ. ಈ ಬದಲಾವಣೆಗಳು ಭಾರತಕ್ಕೆ ಮಾತ್ರವೇ ಸೀಮಿತವಾಗಿರದೆ ವಿಶ್ವವ್ಯಾಪಕವಾಗಿದ್ದವು. ರಾಜಕೀಯ ಕ್ಷೇತ್ರದಲ್ಲಿ ಉತ್ತರ ಭಾರತದಲ್ಲಿ ಹಲವಾರು ಸಣ್ಣ ಪುಟ್ಟ ರಾಜ್ಯಗಳ ಸ್ಥಾನದಲ್ಲಿ ಪ್ರಥಮಬಾರಿಗೆ ಹದಿನಾರು ಗಣರಾಜ್ಯಗಳು ಉದಯಿಸಿದವು. ಇವುಗಳನ್ನು 'ಮಹಾ ಜನಪದ'ಗಳೆಂದು ಕರೆಯುತ್ತಾರೆ. ಇವುಗಳಲ್ಲಿ ಕೆಲವು ಕಾಲದಲ್ಲಿಯೇ ಮಗಧರಾಜ್ಯವು ವಿಶಾಲ ಸಾಮ್ರಾಜ್ಯವಾಗಿ ಮಾರ್ಪಟ್ಟಿತು. ಪರ್ಶಿಯಾದಲ್ಲಿ ಸೈರಸ್ಸನ ನಾಯಕತ್ವದಲ್ಲಿ ಪರ್ಶಿಯನ್ ಸಾಮ್ರಾಜ್ಯವು ತಲೆಯೆತ್ತಿತು. ಗ್ರೀಸಿನಲ್ಲಿ ಟೈರೆಂಟರ ಆಧಿಕಾರವು ಪತನ ಹೊಂದಿ ಪ್ರಜಾಪ್ರಭುತ್ವವು ಏಳಿಗೆ ಹೊಂದಿತು. ಹಾಗೆಯೇ ರೋಮನ್ ಸಾಮ್ರಾಜ್ಯದ ಅಂಕುರಾರ್ಪಣೆಯೂ ಇದೇ ಕಾಲದಲ್ಲಿ ಆಯಿತು. ಆರ್ಥಿಕ ಕ್ಷೇತ್ರದಲ್ಲಿ ಕೈಗಾರಿಕೆ ವ್ಯಾಪಾರ ಮತ್ತು ವಾಣಿಜ್ಯಗಳು ಅಭಿವೃದ್ಧಿ ಹೊಂದಿ ದೇಶವಿದೇಶಗಳ ನಡುವೆ ಸಂಪರ್ಕವು ಹೆಚ್ಚಿತು. ಎಲ್ಲಕ್ಕಿಂತ ಮಿಗಿಲಾಗಿ ಸಾಮಾಜಿಕ ಮತ್ತು ಧಾರ್ಮಿಕ ಕ್ಷೇತ್ರಗಳಲ್ಲಿ ಕ್ರಾಂತಿಕಾರಕ ಬದಲಾವಣೆಗಳು ಜರುಗಿದವು. ಆರನೆ ಶತಮಾನವು ಸಾಮಾಜಿಕ ಮತ್ತು ಧಾರ್ಮಿಕ ಕ್ಷೇತ್ರಗಳಲ್ಲಿ ಪ್ರಕ್ಷುಬ್ಧ ವಾತಾವರಣವನ್ನು ಎದುರಿಸಬೇಕಾಗಿತ್ತು. ಈ ಪ್ರಕ್ಷುಬ್ಧ ವಾತಾವರಣವನ್ನು ತಿಳಿಗೊಳಿಸಿ ಸಾಮಾಜಿಕ ಮತ್ತು ಧಾರ್ಮಿಕ ಕ್ಷೇತ್ರಗಳನ್ನು ಆವರಿಸಿದ್ದ ಪಿಡುಗನ್ನು ಹೋಗಲಾಡಿಸಿ ಮಾರ್ಗದರ್ಶನ ಮಾಡಲು ಪ್ರಪಂಚದ ವಿವಿಧ ಭಾಗಗಳಲ್ಲಿ ಸಮಾಜಸುಧಾರಕರು. ಧರ್ಮಸುಧಾರಕರು, ದಾರ್ಶನಿಕರು ಮತ್ತು ತತ್ವಜ್ಞಾನಿಗಳು ಜನ್ಮತಾಳಿ ತಮ್ಮ ಬೋಧನೆಗಳಿಂದ ಮಾನವ ಇತಿಹಾಸದಲ್ಲಿ ಒಂದು ಹೊಸ ಅಧ್ಯಾಯವನ್ನೇ ಆರಂಭಿಸಿದರು. ಭಾರತದಲ್ಲಿ ವರ್ಧಮಾನ ಮಹಾವೀರ ಮತ್ತು ಗೌತಮ ಬುದ್ಧರೂ ಚೀನಾದಲ್ಲಿ ಲಓಟ್ಸೆ ಮತ್ತು

ಕನ್‌ಫ್ಯೂಷಿಯಸ್ಸನೂ ಪರ್ಶಿಯಾದಲ್ಲಿ ಜೊರಾಷ್ಟರನೂ ಪಾಲಸ್ತೈನಿನಲ್ಲಿ ಅಮೋಸ್ ಮತ್ತು ಇಸಯ್ಯ ಮೊದಲಾದವರು ಜನ್ಮವೆತ್ತಿ ಹೊಸ ತತ್ವ ಹಾಗೂ ಸಿದ್ಧಾಂತಗಳನ್ನು ಬೋಧಿಸಿ, ಸಾಮಾಜಿಕ ಮತ್ತು ಧಾರ್ಮಿಕ ಸುಧಾರಣೆಗಳನ್ನು ಕೈಗೊಂಡುದುದಲ್ಲದೆ ಹೊಸ ಧರ್ಮಗಳನ್ನು ಸ್ಥಾಪಿಸಿದರು. ಇವರ ತತ್ತ್ವೋಪದೇಶಗಳು ವಿಶ್ವದ ಜನಜೀವನವನ್ನು ತಿದ್ದುವಲ್ಲಿ ಬಹುಮುಖ್ಯ ಪ್ರಭಾವಬೀರಿದವು. ಮಹಾನ್ ಘಟನೆಗಳು ನಡೆದ ಮತ್ತು ಮಹಾನ್ ವ್ಯಕ್ತಿಗಳು ಜನ್ಮತಾಳಿದ ಈ ಶತಮಾನವು ವಿಶ್ವದ ಇತಿಹಾಸದಲ್ಲಿ ಮಹತ್ವಪೂರ್ಣ ಶತಮಾನವೆಂದು ಪರಿಗಣಿಸಲ್ಪಟ್ಟಿದೆ.

ಕ್ರಿ.ಪೂ.ಆರನೇ ಶತಮಾನದಲ್ಲಿ ಭಾರತದಲ್ಲಿ ಹೊಸ ಮತಗಳು ಉದಯಿಸುವುದಕ್ಕೂ ಜನಪ್ರಿಯತೆಗಳಿಸುವುದಕ್ಕೂ ಅಂದಿನ ಧಾರ್ಮಿಕ ಮತ್ತು ಸಾಮಾಜಿಕ ಪರಿಸ್ಥಿತಿಗಳು ಕಾರಣವಾಗಿದ್ದವು. ಆರಣ್ಯಕಗಳಲ್ಲಿ ಮತ್ತು ಉಪನಿಷತ್ತುಗಳಲ್ಲಿ ವಿವರಿಸಲಾಗಿದ್ದ ನೂತನ ಧಾರ್ಮಿಕ ದೃಷ್ಟಿಯು ಧಾರ್ಮಿಕ ಕ್ಷೇತ್ರದಲ್ಲಿ ಮಹತ್ವಪೂರ್ಣವಾದ ಬದಲಾವಣೆಗಳನ್ನು ತರುವುದರಲ್ಲಿತ್ತು. ಬ್ರಾಹ್ಮಣ ಧರ್ಮದಲ್ಲಿ ಬಲವಾಗಿ ಬೇರೂರಿದ್ದ ಧಾರ್ಮಿಕ ಕ್ಲಿಷ್ಟತೆ, ಅರ್ಥರಹಿತವಾದ ವ್ರತಾಚರಣೆಗಳು ಸಂಕೀರ್ಣವಾದ ಜಾತಿ ಪದ್ಧತಿ ಮೊದಲಾದ ದೋಷಗಳು ಚಿಂತನಕಾರರೂ ಹಾಗೂ ಸತ್ಯಾನ್ವೇಷಕರಲ್ಲಿ ಅತೃಪ್ತಿ ಅಸಮಾಧಾನಗಳನ್ನುಂಟು ಮಾಡಿದ್ದವು. ವೆಚ್ಚಯುತವಾದ ಯಜ್ಞಯಾಗಾದಿಗಳಿಂದಲೂ, ಕ್ಲಿಷ್ಟವಾದ ವ್ರತಾಚರಣೆಗಳಿಂದಲೂ ಹಾಗೂ ಪುರೋಹಿತರು ಹೊಂದಿದ್ದ ಏಕಸ್ವಾಮ್ಯದ ಧರ್ಮದಲ್ಲಿ ಸತ್ಯವನ್ನು ಕಾಣದಾದರು, ಕರ್ಮ ಅಥವಾ ವ್ರತಾಚರಣೆಗಳ ಮಾರ್ಗದಿಂದ ಆಧ್ಯಾತ್ಮಿಕ ಪ್ರಶ್ನೆಗಳಿಗೆ ಉತ್ತರವು ದೊರೆಯುಲಿಲ್ಲ. ವೈದಿಕ ಧರ್ಮದ ಪ್ರತಿಪಾದಕರು ಜ್ಞಾನಿಗಳಿಗೆ ಚಿಂತನಕಾರರಿಗೆ ಮತ್ತು ಜನಸಾಮಾನ್ಯರಿಗೆ ಒಪ್ಪಿಗೆಯಾಗುವಂಥ ಮಾರ್ಗಗಳನ್ನು ತೋರಿಸುವುದರಲ್ಲಿ ವಿಫಲರಾದರು. ತತ್ಪರಿಣಾಮವಾಗಿ ಚಿಂತನಕಾರರು ಜ್ಞಾನಮಾರ್ಗದ ಕಡೆ ತಿರುಗಿದರು. ಲೌಕಿಕ ಜೀವನವನ್ನು ತೊರೆದು ಆರಣ್ಯಗಳಲ್ಲಿ ತಪಸ್ಸು ಮಾಡುವುದರಿಂದ ಧಾರ್ಮಿಕ ಸತ್ಯವನ್ನು ಕಂಡುಕೊಳ್ಳುವುದು ಸಾಧ್ಯವೆಂದು ಭಾವಿಸಿದ ಕೆಲವರು ತಮ್ಮ ಮನೆ ಮಠಗಳನ್ನು ತೊರೆದು ಸತ್ಯಾನ್ವೇಷಣೆಗಾಗಿ ತಪಸ್ಸನ್ನು ಕೈಗೊಂಡರು. ಇವುಗಳಲ್ಲದೆ ವೇದೋಪನಿಷತ್ತುಗಳಲ್ಲಿ ಪ್ರತಿಪಾದಿಸಲಾಗಿದ್ದ ಆತ್ಮ, ಪರಮಾತ್ಮ, ಬ್ರಹ್ಮ, ಪರಬ್ರಹ್ಮ ಮೊದಲಾದ ಗಹನವಾದ ವಿಷಯಗಳು ಜನಸಾಮಾನ್ಯರ ತಿಳುವಳಿಕೆಗೆ ನಿಲುಕದವುಗಳಾಗಿದ್ದವು. ಮೇಲಾಗಿ ವೇದೋಪನಿಷತ್ತುಗಳೆಲ್ಲವೂ ಜನಸಾಮಾನ್ಯರ ಭಾಷೆಯಲ್ಲದ ಸಂಸ್ಕೃತ ಭಾಷೆಯಲ್ಲಿದ್ದುದರಿಂದ ಧಾರ್ಮಿಕ ಕ್ಷೇತ್ರದಲ್ಲಿ ಗೊಂದಲಮಯವಾದ ವಾತಾವರಣವು ಏರ್ಪಟ್ಟಿದ್ದಿತು.

ಜೈನಮತ ಮತ್ತು ಬೌದ್ಧಮತಗಳು ಏಳಿಗೆ ಹೊಂದುವುದಕ್ಕೆ ಮೊದಲೇ ಕೆಲವು ಧಾರ್ಮಿಕ ಪಂಥಗಳು ಹುಟ್ಟಿ ಧಾರ್ಮಿಕ ಸುಧಾರಣೆಗಾಗಿ ಪ್ರಯತ್ನ ನಡೆಸಿದವು. ಅವುಗಳಲ್ಲಿ ಚಾರ್ವಾಕ, ನಾಸ್ತಿಕ ಮತ್ತು ಸಾಂಖ್ಯ ಪಂಥಗಳು ಮುಖ್ಯವಾದವುಗಳು. ಚಾರ್ವಾಕ ಪಂಥದವರು ಆತ್ಮವು ಅಮರ, ಶರೀರವುನಶ್ವರ ಎನ್ನುವುದು ನ್ಯಾಯಸಮ್ಮತವಲ್ಲವೆಂದು ಮರಣದೊಡನೆ ಮಾನವನ ಬಾಳು ಮುಕ್ತಾಯವಾಗುತ್ತದೆ.

ಪುನರ್ಜನ್ಮವೆಂಬುದು ಅರ್ಥ ಶೂನ್ಯವಾದ ಕಲ್ಪನೆ. ದೇವರಿದ್ದಾನೆ ಎನ್ನುವುದು ಬರೀ ಭ್ರಮೆ. ಆದ್ದರಿಂದ ಮರಣದ ನಂತರದ ಬಾಳಿಗಾಗಿ ದೇವರ ಕೃಪೆ ಮತ್ತು ಅನುಗ್ರಹಕ್ಕಾಗಿ ಪೂಜೆ, ಧ್ಯಾನ, ಯಜ್ಞಯಾಗಾದಿಗಳನ್ನು ಮಾಡುವುದು ಮೂಢತನ. ಜೀವನದ ಪರಮಗುರಿ ಸುಖ ಸಂಪಾದನೆ ಹಾಗೂ ಹೆಚ್ಚಿನ ಪ್ರಮಾಣದಲ್ಲಿ ಸುಖಾನುಭವವನ್ನು ಈ ಬದುಕಿನ ಅವಧಿಯಲ್ಲಿ ಅನುಭವಿಸಬೇಕೆಂದೂ, ಕಷ್ಟವಿದೆಯೆಂದಾಗಲೀ ಮತ್ತು ಕಷ್ಟವಾಗುತ್ತದೆಯೆಂದಾಗಲೀ ಸುಖಪಡುವುದನ್ನು ಬಿಡಬಾರದೆಂದು ಪ್ರತಿಪಾದಿಸಿದರು. ಆದರೆ ಚಾರ್ವಾಕಪಂಥದ ತತ್ವಗಳು ಒಮ್ಮೆಗೆ ಹಿತವಾಗಿ ಕಂಡ ಬಂದರೂ ಅವುಗಳನ್ನು ಸರಿಯಾಗಿ ಪರಿಶೀಲಿಸಿದಾಗ ಅವುಗಳು ಅವಿವೇಕ ಮತ್ತು ಅಸಂಬದ್ಧ ಅಂಶಗಳಿಂದ ಕೂಡಿವೆಯೆಂದು ಜನರಿಗೆ ತಿಳಿಯಿತು. ಇದೇ ಸಮಯದಲ್ಲಿ ಜೈನ ಮತ್ತು ಬೌದ್ಧ ಮತಗಳು ಹುಟ್ಟಿಕೊಂಡು ಚಾರ್ವಾಕ ಪಂಥದಲ್ಲಿನ ತಪ್ಪು ಮತ್ತು ಅನ್ಯಾಯಗಳನ್ನು ಜನತೆಗೆ ತಿಳಿಯಪಡಿಸಿ ಅವರ ಬಲವನ್ನು ಕುಗ್ಗಿಸಿದವು. ಚಾರ್ವಾಕ ಪಂಥದಂತೆ ಧಾರ್ಮಿಕ ಸುಧಾರಣೆಯ ಕಡೆಗಮನ ಹರಿಸಿದ ಮತ್ತೊಂದು ಪಂಥವೆಂದರೆ ಸಾಂಖ್ಯದರ್ಶನ ಪಂಥ. ಈ ಪಂಥದ ಸ್ಥಾಪಕರು ಕಪಿಲ ಮಹರ್ಷಿಗಳು. ಇವರು ಏಕದೇವತಾವಾದ ಮತ್ತು ಏಕ ತತ್ವವಾದದ ವಿರೋಧಿಗಳಾಗಿದ್ದರು. ಅಂತೆಯೆ ದೇವರ ಅಸ್ತಿತ್ವದಲ್ಲೂ ಅವರಿಗೆ ನಂಬಿಕೆಯಿರಲಿಲ್ಲ. ಕಪಿಲರ ನಾಸ್ತಿಕ ತತ್ವದ ಪ್ರಕಾರ ಬ್ರಹ್ಮಾಂಡದಲ್ಲಿ ಎರಡು ಸತ್ಯಗಳಿವೆ. ಅವುಗಳೆಂದರೆ ಪ್ರಕೃತಿ ಮತ್ತು ಪುರುಷ. ಪ್ರಕೃತಿ ಮತ್ತು ಪುರುಷರ ಸಂಯೋಗದಿಂದ ಈ ಸರ್ವಚರಾಚರ ಸೃಷ್ಟಿಯಾಯಿತೆಂದು ಸಾಂಖ್ಯ ದರ್ಶನವು ತಿಳಿಸುತ್ತದೆ. ಈ ಸೃಷ್ಟಿಯ ಕಾರ್ಯದಲ್ಲಿ ಕರ್ಮವು ಬಹುಮುಖ್ಯ ಪಾತ್ರವಹಿಸುತ್ತದೆ. ಕಪಿಲರು ಮುಂದಿಟ್ಟ ಪಂಥವು ವರ್ಧಮಾನ ಮತ್ತು ಗೌತಮ ಬುದ್ಧನ ಮೇಲೆ ಹೆಚ್ಚಿನ ಪ್ರಭಾವವನ್ನು ಬೀರಿತು.

ಕ್ರಿ.ಪೂ.ಏಳನೇ ಮತ್ತು ಆರನೇ ಶತಮಾನಗಳಲ್ಲಿ ಹುಟ್ಟಿಕೊಂಡ ಹೊಸ ಪಂಥಗಳೆಲ್ಲವೂ ಹಲವಾರು ಕಾರಣಗಳಿಂದ ಜೈನ ಮತ್ತು ಬೌದ್ಧಮತಗಳನ್ನು ಬಿಟ್ಟರೆ ಜನರನ್ನು ತಮ್ಮ ಕಡೆ ಆಕರ್ಷಿಸುವುದರಲ್ಲಿ ವಿಫಲವಾದವು ಮತ್ತು ಅವು ಕಾಲಾನುಕ್ರಮದಲ್ಲಿ ಕಣ್ಮರೆಯಾದವು ಇಲ್ಲವೆ ಇತರ ಪಂಥಗಳಲ್ಲಿ ವಿಲೀನಗೊಂಡವು. ಜೈನಮತ ಮತ್ತು ಬೌದ್ಧ ಮತಗಳು ಮಂತ್ರೋಚ್ಚಾರಣೆಗಳಿಂದಲೂ ಮತ್ತು ಯಜ್ಞಯಾಗಾದಿಗಳಿಂದಲೂ ಕೂಡಿದ್ದ ವೈದಿಕಧರ್ಮವನ್ನು ಖಂಡಿಸಿ ಸದ್ಗುಣ ಮತ್ತು ಸನ್ನಡತೆಗಳಿಂದ ಕೂಡಿದ ಧರ್ಮವನ್ನು ಒತ್ತಿ ಹೇಳಿದವು. ಮೋಕ್ಷಸಾಧನೆಗಾಗಿ ಸರಳವಾದ ಮಾರ್ಗವನ್ನು ಕಂಡುಕೊಳ್ಳಲು ಪರಿತಪಿಸುತ್ತಿದ್ದ ಈ ಶತಮಾನದಲ್ಲಿ ಜೈನಮತ ಮತ್ತು ಬೌದ್ಧಮತಗಳು ಅಸ್ತಿತ್ವಕ್ಕೆ ಬಂದವು. ಒಂದು ದೃಷ್ಟಿಯಲ್ಲಿ ಈ ಎರಡು ಮತಗಳನ್ನು ವೈದಿಕ ಧರ್ಮದಲ್ಲಿದ್ದ ಲೋಪದೋಷಗಳನ್ನು ಸುಧಾರಿಸಲು ಉದಯಿಸಿದ ಹೊಸಮತಗಳೆಂತಲೂ ಮತ್ತೊಂದು ಕಡೆ ಧರ್ಮದ ಮೇಲೆ ಏಕಸ್ವಾಮ್ಯವನ್ನು ಹೊಂದಿದ್ದ ಬ್ರಾಹ್ಮಣ ಪುರೋಹಿತ ವರ್ಗದವರ ದಬ್ಬಾಳಿಕೆಯ ವಿರುದ್ಧ ನಡೆಸಿದ ಧಾರ್ಮಿಕ ದಂಗೆಗಳೆಂತಲೂ ಹೇಳಬಹುದಾಗಿದೆ.

## ಜೈನಮತ

ಕ್ರಿ.ಪೂ.ಆರನೇ ಶತಮಾನದಲ್ಲಿ ಅಸ್ತಿತ್ವಕ್ಕೆ ಬಂದ ಜೈನಮತ ಮತ್ತು ಬೌದ್ಧ ಮತಗಳಲ್ಲಿ ಜೈನಮತವು ಬೌದ್ಧಮತಕ್ಕಿಂತಲೂ ಹಿಂದಿನದೆಂದು ಜೈನಮತ ಗ್ರಂಥಗಳಿಂದ ತಿಳಿದು ಬರುತ್ತದೆ. ವರ್ಧಮಾನನಿಗಿಂತ ಪೂರ್ವದಲ್ಲಿ ಇಪ್ಪತ್ತಮೂರು ತೀರ್ಥಂಕರರು ವಿವಿಧ ಕಾಲಗಳಲ್ಲಿ ಜನ್ಮವೆತ್ತಿ ಜೈನಮತವನ್ನು ಪ್ರಚಾರ ಮಾಡಿದರೆಂದು ಜೈನ ಧರ್ಮದ ಗ್ರಂಥಗಳಿಂದ ತಿಳಿದು ಬರುತ್ತದೆ. ಇವರಲ್ಲಿ ವೃಷಭ ಎಂಬುವನು ಮೊದಲನೆಯ ತೀರ್ಥಂಕರ. ವೃಷಭನು ಕೆಲವು ಕಾಲ ರಾಜನಾಗಿದ್ದು ಅನಂತರ ತಪಶ್ಚರ್ಯವನ್ನು ಕೈಗೊಂಡು ಜೈನಮತ ಪ್ರಸಾರ ಮಾಡಿದನು. ಆದರೆ ಅವನು ಬದುಕಿದ್ದ ಕಾಲ ಮತ್ತು ಅವನು ಬೋಧಿಸಿದ ತತ್ವಗಳ ಬಗ್ಗೆ ಏನೂ ತಿಳಿದು ಬಂದಿಲ್ಲ. ಅಂತೆಯೆ ವೃಷಭನಂತರ ಮುಂದಿನ ಇಪ್ಪತ್ತೊಂದು ಜನ ತೀರ್ಥಂಕರರ ಬಗ್ಗೆಯೂ ಐತಿಹಾಸಿಕ ಪುರಾವೆಗಳು ದೊರೆತಿಲ್ಲ. ಇಪ್ಪತ್ತಮೂರನೆ ತೀರ್ಥಂಕರನಾದ ಪಾರ್ಶ್ವನಾಥನೂ ಮತ್ತು ಇಪ್ಪತ್ತನಾಲ್ಕನೆಯ ತೀರ್ಥಂಕರನಾದ ವರ್ಧಮಾನನೂ ಚಾರಿತ್ರಿಕ ವ್ಯಕ್ತಿಗಳೆಂದು ತಿಳಿದುಬಂದಿದೆ. ಪಾರ್ಶ್ವನಾಥನು ಕ್ರಿ.ಪೂ.ಎಂಟನೆ ಶತಮಾನದಲ್ಲಿ ಜೀವಿಸಿದ್ದನೆಂದು ಜೈನ ಕಲ್ಪ ಸೂತ್ರದಲ್ಲಿ ಹೇಳಲಾಗಿದೆ. ಇವನ ತಂದೆ ಅಶ್ವಸೇನನು ಬೆನಾರಸ್ಸಿನ ರಾಜನಾಗಿದ್ದನು. ಪಾರ್ಶ್ವನಾಥನು ತನ್ನ ಮೂವತ್ತನೆ ವಯಸ್ಸಿನಲ್ಲಿ ಪ್ರಾಪಂಚಿಕ ಜೀವನವನ್ನು ತೊರೆದು ತಪಸ್ಸನ್ನಾಚರಿಸಿ ಮೋಕ್ಷದ ಪರಮ ಜ್ಞಾನವನ್ನು ಪಡೆದನು. ಪಾರ್ಶ್ವನಾಥನು ಮುಖ್ಯವಾಗಿ ನಾಲ್ಕು ತತ್ವಗಳನ್ನು ಬೋಧಿಸಿದನು. ಅಹಿಂಸೆ, ಸತ್ಯವನ್ನು ನುಡಿಯುವುದು, ಕಳ್ಳತನ ಮಾಡದಿರುವುದು ಮತ್ತು ಅಪರಿಗ್ರಹ, ಪಾರ್ಶ್ವನಾಥನು ಕಾಲವಾದಾಗ ಅವನ ಅನುಯಾಯಿಗಳ ಸಂಖ್ಯೆಯು ಸಹಸ್ರಾರು ಇದ್ದು ಅವರನ್ನು ನಿರ್ಗ್ರಂಥರು ಎಂದು ಕರೆಯುತ್ತಿದ್ದರು. ಪಾರ್ಶ್ವನಾಥನು ಕಾಲವಾದ ಎರಡು ಶತಮಾನದ ನಂತರ ಬಂದ ಇಪ್ಪತ್ತನಾಲ್ಕನೆ ತೀರ್ಥಂಕರನಾದ ವರ್ಧಮಾನನು ಪಾರ್ಶ್ವನಾಥನು ಬೋಧಿಸಿದ್ದ ತತ್ವಗಳನ್ನೇ ಮುಂದುವರಿಸಿ ಅವುಗಳಿಗೆ ಪರಿಪೂರ್ಣತೆಯನ್ನು ಕೊಟ್ಟು ಜನಪ್ರಿಯಗೊಳಿಸಿದನು. ಆದ್ದರಿಂದ ವರ್ಧಮಾನನ್ನು ಜೈನಮತದ ಸ್ಥಾಪಕನೆಂದು ಹೇಳಲಾಗಿದೆ.

## ವರ್ಧಮಾನ ಮಹಾವೀರ ಕಿ.ಪೂ. 540-468

ವರ್ಧಮಾನ ಮಹಾವೀರನು ವಿದೇಹ ರಾಜ್ಯದ ರಾಜಧಾನಿಯಾಗಿದ್ದ ವೈಶಾಲಿ ನಗರಕ್ಕೆ ಸಮೀಪದಲ್ಲಿದ್ದ ಕುಂದ ಗ್ರಾಮದಲ್ಲಿ ಸುಮಾರು ಕ್ರಿ.ಪೂ. 540ರಲ್ಲಿ ಜನಿಸಿದನು. ಸಿದ್ಧಾರ್ಥ ಮತ್ತು ತ್ರಿಶಾಲಪ್ರಿಯಕರಿಣಿ ಅಥವ ವಿದೇಹದತ್ತ ಎಂಬುವರು ಇವನ ತಂದೆ ತಾಯಿಗಳು. ಇವರು ಜಾಂತ್ರಿಕ ಎಂಬ ಕ್ಷತ್ರಿಯ ಮನೆತನಕ್ಕೆ ಸೇರಿದವರು. ಸಿದ್ಧಾರ್ಥನು ಒಂದು ಗಣರಾಜ್ಯದ ಮುಖಂಡನಾಗಿದ್ದನು. ಮಹಾವೀರನ ಸೋದರ ಮಾವನು ಎಂಟು ಗಣರಾಜ್ಯಗಳ ಒಕ್ಕೂಟವಾಗಿದ್ದ ವಜ್ಜಿ ಒಕ್ಕೂಟದ ರಾಜನಾಗಿದ್ದನು. ಸಿದ್ಧಾರ್ಥನಿಗೆ ನಂದಿವರ್ಧನ ಮತ್ತು ವರ್ಧಮಾನ ಎಂಬ ಇಬ್ಬರು ಗಂಡು ಮಕ್ಕಳಿದ್ದರೆಂದು ಶ್ವೇತಾಂಬರ ಪಂಥದ ಕೃತಿಗಳು ತಿಳಿಸುತ್ತವೆ. ವರ್ಧಮಾನನ ಬಾಲ್ಯಜೀವನದ ಬಗ್ಗೆ ಶ್ವೇತಾಂಬರ ಮತ್ತು ದಿಗಂಬರ ಪಂಥದವರ ಪುರಾಣಗಳು

ಭಿನ್ನಾಭಿಪ್ರಾಯಗಳನ್ನು ಹೊಂದಿವೆ. ವರ್ಧಮಾನನು ತನ್ನ ತಪಸ್ಸನ್ನು ಎಂಟನೇ ವರ್ಷದಲ್ಲೇ ಕೈಗೊಂಡನೆಂದೂ ಆದ್ದರಿಂದ ಅವನು ವಿವಾಹವಾಗಿರಲಿಲ್ಲವೆಂದೂ ದಿಗಂಬರ ಪಂಥದವರು ಹೇಳುತ್ತಾರೆ. ಆದರೆ ಶ್ವೇತಾಂಬರರು ವರ್ಧಮಾನನು ತನ್ನ ತಂದೆತಾಯಿಗಳನ್ನು ಸಂತೋಷಪಡಿಸುವುದಕ್ಕಾಗಿ ಪ್ರಾಪಂಚಿಕ ಜೀವನದಲ್ಲಿ ಆಸಕ್ತಿಯನ್ನು ತೋರಿಸಿ ಯಶೋಧ ಎಂಬ ರಾಜಕುಮಾರಿಯನ್ನು ವಿವಾಹವಾಗಿದ್ದನೆಂದೂ ಮತ್ತು ಅವರಿಗೆ ಅನೋಜ್ಜ ಅಥವ ಪ್ರಿಯ ದರ್ಶನ ಎಂಬ ಮಗಳಿದ್ದಳೆಂದೂ ಹೇಳುತ್ತಾರೆ.

ವರ್ಧಮಾನನ ಬಾಲ್ಯ ಜೀವನದ ಬಗ್ಗೆ ಹೆಚ್ಚಿನ ವಿವರಗಳು ದೊರೆತಿಲ್ಲ. ರಾಜ ಕುಮಾರನಾಗಿ ಹುಟ್ಟಿದ ವರ್ಧಮಾನನು ಸಕಲಸಂಪತ್ತುಗಳ ನಡುವೆ ಹುಟ್ಟಿ ಬೆಳೆದರೂ, ಐಶ್ವರ್ಯ ಮತ್ತು ಅಧಿಕಾರಗಳು ಕ್ಷಣಿಕವಾದವುಗಳೆಂದೂ ಮತ್ತು ಅವುಗಳಿಂದ ಯಾವ ಮುಕ್ತಿಯೂ ದೊರೆಯಲಾರದೆಂದು ಕೆಲವು ಕಾಲದಲ್ಲಿಯೆ ಮನಗಂಡನು. ವರ್ಧಮಾನನು ತನ್ನ ತಂದೆ ತಾಯಿಗಳು ಕಾಲವಾದ ಮೇಲೆ ತನ್ನ ಮೂವತ್ತನೆ ವಯಸ್ಸಿನಲ್ಲಿ ಸಂಸಾರಿಕ ಜೀವನವನ್ನು ತ್ಯಜಿಸಿ ಸತ್ಯಾನ್ವೇಷಣೆಗಾಗಿ ತಪಸ್ಸನ್ನಾಚರಿಸಲು ಸಂನ್ಯಾಸಿಯಾಗಿ ಕಾಡಿಗೆ ಹೋದನು. ಅವನು ಸಂನ್ಯಾಸ ಜೀವನವನ್ನು ಕೈಗೊಳ್ಳಲು ಬಹುಶಃ ಪಾರ್ಶ್ವನಾಥನ ಪಂಥದವರು ಕಾರಣವಾಗಿರಬಹುದೆಂದು ಅಭಿಪ್ರಾಯಪಡಲಾಗಿದೆ. ಸುಮಾರು ಹದಿಮೂರು ವರ್ಷಗಳ ಕಾಲ ವರ್ಧಮಾನನು ಜೀವನದ ಹಂಗನ್ನು ತೊರೆದು ಕಠಿಣ ತಪಸ್ಸನ್ನಾಚರಿಸಿದನು. ಈ ಅವಧಿಯಲ್ಲಿ ಅವನು ಅನುಭವಿಸಿದ ಕಷ್ಟಗಳು ವರ್ಣಿಸಲು ಅಸದಳವಾಗಿದ್ದವು. ಹಸಿವು ಬಾಯಾರಿಕೆಗಳಾಗಲೀ ದೈಹಿಕವಾದ ಯಾತನೆಯಾಗಲಿ ಕ್ರಿಮಿಕೀಟಗಳ ಹಿಂಸೆಯಾಗಲೀ ಅವನ ಧ್ಯಾನ ಸಮಾಧಿಯನ್ನು ಕದಲಿಸಲಾಗಲಿಲ್ಲ ಮತ್ತು ಅವನು ನೋಡುವುದಕ್ಕೆ ಭಯವಾಗುವಷ್ಟು ಕೃಶವಾಗಿದ್ದನು. ಆದರೂ ವರ್ಧಮಾನನು ತದೇಕಚಿತ್ತನಾಗಿ ಧ್ಯಾನಮಾಡಿ ಮೋಕ್ಷ ಸಾಧನೆಗೆ ಮಾರ್ಗವನ್ನು ಕಂಡುಹಿಡಿದನು. ಅವನಿಗೆ ತನ್ನ 42ನೇ ವಯಸ್ಸಿನಲ್ಲಿ ಜ್ಞಾನೋದಯವಾಯಿತು. ಅಂದಿನಿಂದ ಅವನು 'ಮಹಾವೀರ' 'ಕೇವಲಿ' ಮತ್ತು 'ಜಿನ' (ಪ್ರಾಪಂಚಿಕ ವ್ಯಾಮೋಹಗಳನ್ನು ಗೆದ್ದವನು) ಎಂದು ಕರೆಯಲ್ಪಟ್ಟನು. ಅವನು ಸ್ಥಾಪಿಸಿದ ಮತಕ್ಕೆ ಜೈನಮತವೆಂದು ಹೆಸರಾಯಿತು. ಅವನ ಅನುಯಾಯಿಗಳು ಜೈನರೆಂದು ಕರೆಯಲ್ಪಟ್ಟರು.

ಮೋಕ್ಷಸಾಧನೆಯ ಮಾರ್ಗವನ್ನು ಕಂಡುಹಿಡಿದ ವರ್ಧಮಾನನು ತನ್ನ ಉಳಿದ ಮೂವತ್ತು ವರ್ಷಗಳನ್ನು ಧರ್ಮಬೋಧನೆ ಮಾಡುವುದರಲ್ಲಿ ಕಳೆದು ಎಪ್ಪತ್ತೆರಡನೆಯ ವಯಸ್ಸಿನಲ್ಲಿ ಬಿಹಾರದ ಪಾವಪುರಿ ಎಂಬಲ್ಲಿ ಸಾಯುಜ್ಯ ಹೊಂದಿದನು. ಮಹಾವೀರನು ಸಾಯುವ ವೇಳೆಗೆ ಅವನು ಸಹಸ್ರಾರು ಅನುಯಾಯಿಗಳನ್ನು ಹೊಂದಿದ್ದನು. ಅವರಲ್ಲಿ ಗೌತಮ, ಇಂದ್ರಭೂತಿ, ಜಂಬುಸ್ವಾಮಿ ಪ್ರಭಾವ ಮತ್ತು ಭದ್ರಬಾಹು ಎಂಬುವರು ಪ್ರಸಿದ್ಧರಾದವರು. ಇದೇ ಕಾಲದಲ್ಲಿ ಮಹಾವೀರನಿಗೆ ನಳಂದದಲ್ಲಿ ಗೋಶಾಲ ಮಂಖಲಿ ಪುತ್ರ ಎಂಬ ದೊಡ್ಡ ಸಂನ್ಯಾಸಿಯ ಭೇಟಿಯಾಯಿತು. ಆದರೆ ಇವರಿಬ್ಬರ ಮನೋಧರ್ಮವು ಬೇರೆಯಾಗಿದ್ದಿತು. ಕೊನೆಗೆ ಗೋಶಾಲನು ಮಹಾವೀರನ ಪಕ್ಷವನ್ನು ಬಿಟ್ಟು ಅವನ ಸ್ಥಾನಮಾನಗಳನ್ನು ಕುಗ್ಗಿಸಲು ಅವನ ವಿರುದ್ಧ ಅಪಪ್ರಚಾರ ಕೈಗೊಂಡನು ಇಬ್ಬರು ಸಂನ್ಯಾಸಿಗಳು ತಮ್ಮ ತಮ್ಮ ಅನುಯಾಯಿಗಳ ಮೂಲಕ ಆಧ್ಯಾತ್ಮಿಕ

ಹೋರಾಟವನ್ನೇ ಆರಂಭಿಸಿದರು. ಗೋಶಾಲನು ಆಜೀವಕ ಪಂಥದ ನಾಯಕನಾದನು. ಜೈನರು ಇತರ ಪಂಥದವರೊಂದಿಗೆ ಭಿನ್ನಾಭಿಪ್ರಾಯಗಳನ್ನು ಹೊಂದಿದ್ದು ಅವುಗಳ ಏಳಿಗೆಯು ಕಾಲಕ್ರಮದಲ್ಲಿ ಜೈನಮತವನ್ನು ದುರ್ಬಲಗೊಳಿಸಿತು. ಮಹಾವೀರನ ಅನುಯಾಯಿಗಳಲ್ಲಿ ಸಿಹ ಮತ್ತು ಉಪಾಲಿ ಎಂಬುವರು ಬೌದ್ಧಮತಾವಲಂಬಿಗಳಾದರು.

**ತತ್ವೋಪದೇಶಗಳು**

ಮಹಾವೀರನ ತತ್ವೋಪದೇಶಗಳು ಜೈನರ ಪವಿತ್ರ ಗ್ರಂಥಗಳಾದ ಹನ್ನೆರಡು ಅಂಗಗಳಲ್ಲಿ ಅಡಕವಾಗಿವೆ ಕರ್ಮ ಸಿದ್ಧಾಂತ ಮತ್ತು ಪುನರ್ಜನ್ಮವನ್ನು ಒಪ್ಪಿಕೊಂಡ ಮಹಾವೀರನು ಮಾನವನ ಎಲ್ಲ ದುಃಖಗಳಿಗೂ ಪುನರ್ಜನ್ಮಗಳೇ ಕಾರಣವೆಂದು ತಿಳಿಯಪಡಿಸಿದನು. ಮಾನವನು ಪುನರ್ಜನ್ಮಗಳ ಸಂಕೊಲೆಯಿಂದಲೂ. ನಿರಂತರವಾದ ದುಃಖಗಳಿಂದಲೂ ವಿಮೋಚನೆಯನ್ನು ಪಡೆದು ಶಾಶ್ವತವಾದ ಆನಂದ ಅಥವ ಮುಕ್ತಿಯನ್ನು ಗಳಿಸಲು ಆಸೆಯನ್ನು ಪೂರ್ಣವಾಗಿ ವರ್ಜಿಸಬೇಕು. ಕಠಿಣವಾದ ತಪಸ್ಸನ್ನು ಆಚರಿಸಬೇಕು ಮತ್ತು ಇಂದ್ರಿಯಾತೀತವಾದ ಸಾತ್ವಿಕ ಜೀವನವನ್ನು ನಡೆಸಬೇಕು. ಸಮ್ಯಕ್ ದರ್ಶನ ಸಮ್ಯಕ್ ಜ್ಞಾನ ಮತ್ತು ಸಮ್ಯಕ್ ಚಾರಿತ್ರ್ಯವೆಂಬ ರತ್ನತ್ರಯಗಳ ತ್ರಿವೇಣಿ ಸಂಗಮದಲ್ಲಿ ಸಾಧನೆಯ ಸ್ನಾನ ಮಾಡಿದವನು ಕರ್ಮಬಂಧನದಿಂದ ಬಿಡುಗಡೆ ಹೊಂದಿ ಮೋಕ್ಷವನ್ನು ಪಡೆಯುವನೆಂದು ಹೇಳಿದನು. 1. ಅಹಿಂಸಾತತ್ವ. ಜೈನಮತವು ಅಹಿಂಸೆಯನ್ನು ಬಹು ದೊಡ್ಡ ಗುಣವೆಂದು ಪರಿಗಣಿಸುತ್ತದೆ. 2. ಕಾಯಾ-ವಾಚಾ, ಮನಸಾ ಅಹಿಂಸೆಯನ್ನು ಪಾಲಿಸಬೇಕು. 3. ಜೀವ-ಬ್ರಹ್ಮಾಂಡದಲ್ಲಿರುವ ಚರಾಚರ ವಸ್ತುಗಳೆಲ್ಲದರಲ್ಲೂ ಜೀವ ಅಥವ ಆತ್ಮವಿದೆ. ಆದ್ದರಿಂದ ಅವುಗಳಿಗೆ ಯಾವುದೇ ರೀತಿಯ ನೋವನ್ನೂ ಉಂಟುಮಾಡಕೂಡದೆಂದು ಜೈನಮತವು ತಿಳಿಸುತ್ತದೆ. 4. ಜೈನಮತವು ಸತ್‌ಚಾರಿತ್ರ್ಯದ ಬಗ್ಗೆ ಒತ್ತಿಹೇಳುತ್ತದೆ. ಜೈನ ಮತವು ಒಂದು ನೈತಿಕ ಧರ್ಮವೆಂದೂ ಪರಿಗಣಿಸಲ್ಪಟ್ಟಿದೆ. ಅಸತ್ಯ ನುಡಿಯಬಾರದು, ಆಸ್ತಿಯನ್ನು ಹೊಂದಿರಕೂಡದು, ಕಳ್ಳತನ ಮಾಡಬಾರದು. ಜೀವಕ್ಕೆ ನೋವನ್ನುಂಟುಮಾಡದಿರುವುದು. ಮತ್ತು ದಯೆಯನ್ನು ತೋರುವುದು ನೈತಿಕ ನಿಯಮಗಳಾಗಿವೆ. 5. ಮಹಾವೀರನು ವೇದಗಳ ಪರಮಾಧಿಕಾರವನ್ನಾಗಲೀ ದೇವರ ಅಸ್ತಿತ್ವವನ್ನಾಗಲೀ ಒಪ್ಪಲಿಲ್ಲ. ಅಂತೆಯೆ ಜೈನರು ಪ್ರಪಂಚವು ದೇವರ ಸೃಷ್ಟಿಯೆಂಬುದನ್ನೂ ನಂಬುವುದಿಲ್ಲ. ಜೈನಧರ್ಮೀಯರು ಪಂಚಪರಮೇಷ್ಠಿ ಮಂತ್ರವನ್ನು ಪಾಲಿಸಬೇಕು. ಅದೆಂದರೆ ಅರ್ಹತ್, ಸಿದ್ಧ, ಆಚಾರ್ಯ, ಉಪಾಧ್ಯಾಯ ಮತ್ತು ಸಾಧುಸಂತರನ್ನು ಆಧರಿಸಿ ಉಪಚರಿಸುವುದು, ಪಂಚಪರಮೇಷ್ಠಿ ಮಂತ್ರವು ಜೈನರಿಗೆ ಅತ್ಯಂತ ಪವಿತ್ರ ಮಂತ್ರವಾಗಿದ್ದು ಅದನ್ನು ಜೈನರ ಗಾಯತ್ರಿ ಮಂತ್ರವೆಂದೂ ಕರೆಯುತ್ತಾರೆ. ಮಹಾವೀರನ ವ್ಯಕ್ತಿತ್ವ ಮತ್ತು ಅವನ ಸಾಮಾಜಿಕ ಸ್ಥಾನಮಾನವೂ ಹಾಗೂ ಅವನು ಧರ್ಮಪ್ರಸಾರಕ್ಕಾಗಿ ವ್ಯವಸ್ಥೆಗೊಳಿಸಿದ್ದ ಸಂನ್ಯಾಸಿಗಳ ಸಂಘಸಂಸ್ಥೆಗಳು ಜೈನಮತವನ್ನು ಜನಪ್ರಿಯಗೊಳಿಸುವುದರಲ್ಲಿ ಬಹುಮುಖ್ಯ ಪಾತ್ರವಹಿಸಿದ್ದವು.

## ಜೈನಮತದ ಪ್ರಸಾರ

ಜೈನಮತವು ಆದರ ಆರಂಭದ ದಿವಸಗಳಲ್ಲಿ ಬೌದ್ಧಮತಕ್ಕಿಂತಲೂ ಹೆಚ್ಚು ಯಶಸ್ವಿಯಾಗಿತ್ತೆಂದು ಜೈನರ ಶಾಸನಗಳಿಂದಲೂ ಮತ್ತು ಸಾಹಿತ್ಯಾಧಾರಗಳಿಂದಲೂ ತಿಳಿದುಬರುತ್ತದೆ. ರಾಜಗೃಹ, ಮಿಥಿಲ, ಕೌಸಾಂಬಿ ಉಜ್ಜೈನಿ, ಚಂಪ, ಶ್ರಾವಷ್ಠಿ ಹಾಗೂ ಮತ್ತಿತರ ಸ್ಥಳಗಳಿಗೆ ಮಹಾವೀರನು ನೀಡಿದ ಭೇಟಿಯು ಧರ್ಮಪ್ರಸಾರ ಕಾರ್ಯದಲ್ಲಿ ಮಹತ್ವಪೂರ್ಣವಾಗಿತ್ತು. ಅವನ ಶಿಷ್ಯವರ್ಗಕ್ಕೆ ಸೇರಿದ ಗಣಾಧರರೂ, ಸಂನ್ಯಾಸಿಗಳೂ ಮತ್ತು ಸಂನ್ಯಾಸಿನಿಯರೂ ಧರ್ಮಪ್ರಸಾರ ಕಾರ್ಯದಲ್ಲಿ ಪ್ರಮುಖ ಪಾತ್ರವಹಿಸಿದ್ದರು. ಮಹಾವೀರನ ಮತ್ತು ಅವನ ಅನುಯಾಯಿಗಳು ತಮ್ಮ ತತ್ವಗಳನ್ನು ಸಂಸ್ಕೃತ ಭಾಷೆಗೆ ಬದಲಾಗಿ ಜನಸಾಮಾನ್ಯರ ಭಾಷೆಯಲ್ಲಿ ಅವರಿಗೆ ಅರ್ಥವಾಗುವ ರೀತಿಯಲ್ಲಿ ಬೋಧಿಸಿದರು. ಜನಸಾಮಾನ್ಯರಿಗೆ ಸುಲಭವಾಗಿ ಅರ್ಥವಾಗದ ದೇವರು, ಆತ್ಮ ಮತ್ತು ಪರಮಾತ್ಮ ಮುಂತಾದ ಗಹನ ವಿಷಯಗಳನ್ನು ಬಿಟ್ಟು ಸರಳವಾದ ನೈತಿಕ ಮಾರ್ಗಗಳನ್ನು ಬೋಧಿಸಿದರು. ಮೇಲಾಗಿ ಜೈನಧರ್ಮೀಯರಿಗೆ ಅಜಾತಶತ್ರು, ಬಿಂಬಸಾರ ಮೊದಲಾದ ದೊರೆಗಳಿಂದ ದೊರೆತ ಪ್ರೋತ್ಸಾಹವೂ ಕೂಡ ಅಧರ್ಮವು ಶೀಘ್ರವಾಗಿ ಹರಡುವುದಕ್ಕೆ ಕಾರಣವಾಗಿದ್ದವು.

ಮಹಾವೀರನು ಧರ್ಮ ಪ್ರಸಾರಕ್ಕೆ ಸ್ಥಾಪಿಸಿದ್ದ ಸಂಘಸಂಸ್ಥೆಗಳು ಧರ್ಮಪ್ರಸಾರ ಕಾರ್ಯದಲ್ಲಿ ಮಹತ್ವ ಪೂರ್ಣ ಪಾತ್ರವಹಿಸಿದ್ದವು. ಅವರ ಬೋಧನೆಗಳಿಂದ ಮೋಕ್ಷ ಸಾಧನೆಗಾಗಿ ಆಚರಿಸಲ್ಪಡುತ್ತಿದ್ದ ಹಿಂಸಾತ್ಮಕವಾದ ಯಜ್ಞಯಾಗಾದಿಗಳು ಮತ್ತು ವ್ರತ ನಿಯಮಗಳು ನಿಷ್ಪ್ರಯೋಜಕಗಳಾದವು. ಜೈನರು ಅಹಿಂಸಾ ತತ್ವಕ್ಕೆ ಕೊಟ್ಟ ಮಹತ್ವದಿಂದಾಗಿ ಅದು ಹೆಚ್ಚು ಜನಪ್ರಿಯವಾಯಿತು. ಇದಲ್ಲದ ಜೈನ ಮತಾವಲಂಬಿಗಳಾದವರೂ ಕೂಡ ಅಹಿಂಸಾ ತತ್ವವನ್ನು ತಮ್ಮ ದಿನನಿತ್ಯ ಜೀವನದಲ್ಲಿ ಅನುಸರಿಸಿ ಜನರನ್ನು ಧರ್ಮದ ಕಡೆಗೆ ಆಕರ್ಷಿಸಿದರು. ಮಹಾವೀರನ ನಿಷ್ಠಾವಂತ ಅನುಯಾಯಿಗಳು ದೇಶದ ವಿವಿಧ ಭಾಗಗಳಲ್ಲಿ ಸಂಚರಿಸಿ ಧರ್ಮಪ್ರಸಾರ ಮಾಡಿದರು. ಅಜಾತ ಶತ್ರುವಿನ ಉತ್ತರಾಧಿಕಾರಿಯಾದ ಉದಯನನು ಜೈನಮತದಲ್ಲಿ ನಿಷ್ಠೆಯುಳ್ಳವನಾಗಿದ್ದನು. ಅಂತೆಯೆ ನಂದ ಸಂತತಿಯವರೂ ಕೂಡ ಜೈನಧರ್ಮೀಯರಾಗಿದ್ದರೆಂದು ಕೆಲವು ಇತಿಹಾಸಕಾರರು ಅಭಿಪ್ರಾಯಪಡುವರು. ಕ್ರಿ.ಪೂ. ನಾಲ್ಕನೆ ಶತಮಾನದ ಅಂತ್ಯದಲ್ಲಿ ಜೈನರ ಗುರು ಭದ್ರಬಾಹು ಎಂಬವನ ನೇತೃತ್ವದಲ್ಲಿ ಜೈನರು ಶ್ರವಣಬೆಳಗೊಳಕ್ಕೆ ಬಂದು ದಕ್ಷಿಣಭಾರತದಲ್ಲೂ ತಮ್ಮ ಧರ್ಮವನ್ನು ಪ್ರಸಾರಮಾಡಿದರು. ಹೀಗೆ ಬಂದವರಲ್ಲಿ ಮೌರ್ಯ ಚಕ್ರವರ್ತಿ ಚಂದ್ರಗುಪ್ತ ಮೌರ್ಯನೂ ಒಬ್ಬನಾಗಿದ್ದನು. ಚಂದ್ರಗುಪ್ತ ಮೌರ್ಯನು ತನ್ನ ಆಳ್ವಿಕೆಯ ಕೊನೆಯ ಭಾಗದಲ್ಲಿ ಜೈನಮತಾವಲಂಬಿಯಾಗಿ ಸಿಂಹಾಸನವನ್ನು ತ್ಯಜಿಸಿ ಭದ್ರಬಾಹುವಿನೊಂದಿಗೆ ಶ್ರವಣಬೆಳಗೊಳಕ್ಕೆ ಬಂದು ಹನ್ನೆರಡು ವರ್ಷಗಳು ಜೀವಿಸಿದ್ದು ಅನಂತರ ಇಲ್ಲಿನ ಚಂದ್ರಗಿರಿ ಬೆಟ್ಟದ ಮೇಲೆ ಸಲ್ಲೇಖನ ವ್ರತವನ್ನು ಕೈಗೊಂಡು ಕಾಲವಾದನೆಂದು ಐತಿಹಾಸಿಕ ದಾಖಲೆಗಳಿಂದಲೂ ಮತ್ತು ಸ್ಥಳ ಪುರಾಣದಿಂದಲೂ ತಿಳಿದುಬರುತ್ತದೆ. ಕ್ರಿ.ಪೂ.ಎರಡನೆ ಶತಮಾನದಲ್ಲಿ ಕಳಿಂಗ ಅಥವ ಇಂದಿನ ಒರಿಸ್ಸ ರಾಜ್ಯದ ರಾಜನಾಗಿದ್ದ

ಖಾರವೇಲನು ಜೈನಧರ್ಮವನ್ನು ಅವಲಂಬಿಸಿ ಅನೇಕ ಸ್ತೂಪಗಳನ್ನು ನಿರ್ಮಿಸಿದುದಾಗಿ ಅವನ ಹತಿಗುಂಪ ಶಾಸನವು ತಿಳಿಸುತ್ತದೆ. ಕ್ರಿ.ಪೂ. ಒಂದನೆ ಶತಮಾನದಲ್ಲಿ ಉಜ್ಜೈನಿಯು ಜೈನಧರ್ಮದ ಪ್ರಮುಖ ಕೇಂದ್ರವಾಗಿತ್ತು. ಅಂತೆಯೇ ಕುಶಾನರ ಕಾಲದಲ್ಲಿ ಮಥುರವು ಈ ಧರ್ಮದ ಪ್ರಮುಖ ಕೇಂದ್ರಗಳಲ್ಲೊಂದಾಗಿತ್ತು.

ಕ್ರಿ.ಶ. 5 ನೆಯ ಶತಮಾನದಿಂದೀಚೆಗೆ ದಕ್ಷಿಣ ಭಾರತದಲ್ಲಿ ಅದರಲ್ಲೂ ಮುಖ್ಯವಾಗಿ ಕರ್ಣಾಟಕದಲ್ಲಿ ಜೈನಧರ್ಮಕ್ಕೆ ವಿಶೇಷ ಪ್ರೋತ್ಸಾಹವು ದೊರೆಕಿತು. ಕರ್ಣಾಟಕ ರಾಜ್ಯವನ್ನಾಳಿದ ಕದಂಬ, ಗಂಗ, ಚಾಳುಕ್ಯ, ರಾಷ್ಟ್ರಕೂಟ ಮತ್ತು ಹೊಯ್ಸಳ ಹಾಗೂ ವಿಜಯನಗರ ಮೊದಲಾದ ರಾಜಸಂತತಿಗಳವರು ಪ್ರೋತ್ಸಾಹ ನೀಡಿದ್ದರು. ಕದಂಬ ಸಂತತಿಯ ಮೃಗೇಶವರ್ಮ ಮೊದಲಾದವರು ಜೈನ ಸಂಪ್ರದಾಯಕ್ಕೆ ಪ್ರೋತ್ಸಾಹ ನೀಡಿದ್ದುದಾಗಿ ಅವರ ತಾಮ್ರಪಟದ ಶಾಸನಗಳಿಂದ ತಿಳಿದುಬರುತ್ತದೆ. ಗಂಗರಲ್ಲಿ ಪ್ರಸಿದ್ಧರಾದ ದುರ್ವಿನೀತ ಮತ್ತು ಎರಡನೆ ಶಿವಮಾರನು ಜೈನಧರ್ಮೀಯರಾಗಿದ್ದರೆಂದು ಕೆಲವು ಇತಿಹಾಸಕಾರರು ಅಭಿಪ್ರಾಯ ಪಟ್ಟಿರುವರು. ಜೈನಯತಿ ಪೂಜ್ಯಪಾದ ದೇವನಂದಿ ಎಂಬವನು ದುರ್ವಿನೀತನಿಗೆ ಗುರುವಾಗಿದ್ದನೆಂದು ಒಂದು ಹೇಳಿಕೆಯಿದೆ. ಶಿವಮಾರನು ಜೈನನಾಗಿದ್ದು ಶ್ರವಣಬೆಳಗೊಳದ ಚಂದ್ರಪ್ರಭ ಬಸದಿಯನ್ನೂ ರಾಚಮಲ್ಲ ಮಾರಸಿಂಹನ ಮಂತ್ರಿಯೂ ಮತ್ತು ದಂಡನಾಯಕನೂ ಆಗಿದ್ದ ಚಾಮುಂಡರಾಯನು ಗೊಮ್ಮಟೇಶ್ವರ ಅಥವ ಬಾಹುಬಲಿ ವಿಗ್ರಹವನ್ನು ನಿರ್ಮಿಸಿದರು. ಕರ್ಣಾಟಕವನ್ನಾಳಿದ ಚಾಳುಕ್ಯ ದೊರೆಗಳು ಪರಮತ ಸಹಿಷ್ಣುಗಳಾಗಿದ್ದು ಶೈವ, ವೈಷ್ಣವ, ಜೈನ ಮತ್ತು ಬೌದ್ಧ ಮತಗಳಿಗೆ ಪ್ರೋತ್ಸಾಹ ನೀಡಿದ್ದರು. ಎರಡನೇ ಪುಲಿಕೇಶಿಯ ಸೇನಾನಿಯೂ ಮತ್ತು ಐಹೊಳೆ ಶಾಸನದ ರಚನೆಕಾರನೂ ಆಗಿದ್ದ ರವಿಕೀರ್ತಿಯ ಜೈನನಾಗಿದ್ದನು. ಚಾಳುಕ್ಯರ ರಾಜಧಾನಿಯಾಗಿದ್ದ ಬಾದಾಮಿಯಲ್ಲೇ ಅಲ್ಲದೆ ಐಹೊಳೆ, ಪಟ್ಟದಕಲ್ಲು ಮೊದಲಾದ ಕಡೆಗಳಲ್ಲಿ ಗುಹಾಂತರ್ದೇವಾಲಯಗಳು ಮತ್ತು ಬಸದಿಗಳು ನಿರ್ಮಿತವಾದವು. ಕ್ರಿ.ಶ. ಎಂಟನೆ ಶತಮಾನದಿಂದ ಹತ್ತನೆ ಶತಮಾನದವರೆಗೆ ಮಾನ್ಯಖೇಟವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ವೈಭವದಿಂದ ರಾಜ್ಯವಾಳಿದ ರಾಷ್ಟ್ರಕೂಟರ ದೊರೆಗಳಲ್ಲನೇಕರು ಜೈನ ಧರ್ಮಕ್ಕೆ ವಿಶೇಷ ಪ್ರೋತ್ಸಾಹ ತೋರಿಸಿದ್ದರು. ಅವರ ಉದಾರ ಪ್ರೋತ್ಸಾಹದಿಂದ ಜೈನ ಸಾಹಿತ್ಯ ಮತ್ತು ಕಲೆಗಳು ಅಭಿವೃದ್ಧಿ ಹೊಂದಿದವು. ರಾಷ್ಟ್ರಕೂಟರ ಆಸ್ಥಾನದಲ್ಲಿ ಅನೇಕ ಜೈನ ಕವಿಗಳು ಮತ್ತು ವಿದ್ವಾಂಸರು ಆಶ್ರಯ ಪಡೆದಿದ್ದರು. ರಾಷ್ಟ್ರಕೂಟರ ದೊರೆ ಅಮೋಘವರ್ಷ ನೃಪತುಂಗನ ಕಾಲದಲ್ಲಿ ಜಿನಸೇನ ಮತ್ತು ಗುಣಭದ್ರರು 'ಮಹಾಪುರಾಣ' ಎಂಬ ಪ್ರಸಿದ್ಧ ಕೃತಿಯನ್ನು ರಚಿಸಿದರು. ಅಮೋಘವರ್ಷನು ತನ್ನ ಜೀವನದ ಕೊನೆಯ ವರ್ಷಗಳಲ್ಲಿ ಜೈನಮತಾವಲಂಬಿಯಾಗಿ 'ರತ್ನಮಾಲಿಕಾ' ಎಂಬ ಕೃತಿಯನ್ನು ರಚಿಸಿದನೆಂದು ಹೇಳಲಾಗಿದೆ. ಅವನ ಉತ್ತರಾಧಿಕಾರಿಗಳಲ್ಲೊಬ್ಬನಾದ ನಾಲ್ಕನೆ ಇಂದ್ರನು ಜೈನರ ರೀತಿಯ ಸಂನ್ಯಾಸವ್ರತವನ್ನಾಚರಿಸಿ ಕಾಲವಾದನೆಂದು ಶಾಸನವೊಂದು ತಿಳಿಸುತ್ತದೆ. ಕ್ರಿ.ಶ. ಹನ್ನೊಂದನೆ ಶತಮಾನದಲ್ಲಿ ಜೈನಧರ್ಮವು ಗುಜರಾತಿನಲ್ಲಿ ಪ್ರಸಿದ್ಧ ಧರ್ಮವಾಗಿತ್ತು, ಕಲ್ಯಾಣಿಯ ಚಾಳುಕ್ಯರ ದೊರೆ ಸಿದ್ಧರಾಜ (1094-1143) ಮತ್ತು ಅವನ ಮಗ ಕುಮಾರಪಾಲನು ಜೈನಧರ್ಮೀಯರಾಗಿದ್ದು ಜೈನ ಬಸದಿಗಳ ನಿರ್ಮಾಣಕ್ಕೂ ಮತ್ತು

ಸಾಹಿತ್ಯ ರಚನೆಗೂ ಪ್ರೋತ್ಸಾಹ ನೀಡಿದ್ದರು. ಕುಮಾರಪಾಲನ ಆಸ್ಥಾನದಲ್ಲಿ ರಾಜಪಂಡಿತನಾಗಿದ್ದ ಹೇಮಚಂದ್ರನು ಜೈನನಾಗಿದ್ದು ಘನವಿದ್ವಾಂಸನಾಗಿದ್ದನು. ಕಲ್ಯಾಣಿ ಚಾಳುಕ್ಯರ ನಂತರ ಸ್ವಲ್ಪಕಾಲ ರಾಜ್ಯವಾಳಿದ ಕಾಳಚೂರಿಗಳು ಶೈವ ಧರ್ಮೀಯರಾಗಿದ್ದರೂ ಜೈನಮತಕ್ಕೆ ಪ್ರೋತ್ಸಾಹ ಕೊಟ್ಟಿದ್ದರು.

ದೋರಸಮುದ್ರದ ಹೊಯ್ಸಳರ ಕಾಲದಲ್ಲಿ ಜೈನಮತಕ್ಕೆ ವಿಶೇಷ ಪ್ರಾಧಾನ್ಯತೆ ದೊರೆಕಿದ್ದಿತು. ಹೊಯ್ಸಳರ ರಾಜ್ಯಸ್ಥಾಪಕನಾದ ಸಳನು ಸುದತ್ತಾಚಾರ್ಯ ಎಂಬ ಜೈನಗುರುವಿನ ಆಶೀರ್ವಾದದಿಂದ ರಾಜ್ಯಸ್ಥಾಪನೆ ಮಾಡಿದುದಾಗಿ ಶಾಸನಗಳಿಂದ ತಿಳಿದುಬರುವುದು. ಈ ಸಂತತಿಯ ರಾಜರುಗಳಲ್ಲಿ ಪ್ರಸಿದ್ಧನಾದ ವಿಷ್ಣುವರ್ಧನನು ಮೊದಲಿಗೆ ಜೈನನಾಗಿದ್ದನೆಂದು ಜೈನರ ಸಂಪ್ರದಾಯಗಳು ತಿಳಿಸುತ್ತವೆ. ಅವನ ಪಟ್ಟದ ರಾಣಿ ಶಾಂತಲಾದೇವಿಯೂ ಮತ್ತು ಅವನ ಅಮಾತ್ಯ ಗಂಗರಾಜನು ಜೈನಧರ್ಮೀಯರಾಗಿದ್ದು ಅನೇಕ ಬಸದಿಗಳನ್ನು ಮತ್ತು ಸ್ತೂಪಗಳನ್ನು ನಿರ್ಮಿಸಿದರು. ವಿಜಯನಗರದ ಅರಸರ ಕಾಲದಲ್ಲೂ ಜೈನಧರ್ಮಕ್ಕೆ ಪ್ರೋತ್ಸಾಹವು ದೊರೆಕಿದ್ದಿತು. ಭಾರತದಲ್ಲಿ ಮುಸಲ್ಮಾನರ ಅಧಿಕಾರವು ಸ್ಥಾಪಿತವಾದ ಮೇಲೂ ಜೈನಮತವು ಅವ್ಯಾಹತವಾಗಿ ಮುಂದುವರಿಯಿತು. ಇದಕ್ಕೆ ಜೈನಮತೀಯರು ಅನುಸರಿಸುತ್ತಿದ್ದ ಶಾಂತಿಯುತ ಮತ್ತು ತಾಟಸ್ಥ್ಯ ಮಾರ್ಗವೂ ಕಾರಣವಾಗಿತ್ತು. ಆದರೆ ಕ್ರಮೇಣ ವೈಷ್ಣವ ಮತ್ತು ವೀರಶೈವ ಮತಗಳ ಏಳಿಗೆಯಿಂದಾಗಿ ಅವರ ಸಂಖ್ಯೆಯು ಕಡಿಮೆಯಾಗತೊಡಗಿತು. ಆದಾಗ್ಯೂ ಜೈನರು ಉದಾರ ಭಾವನೆಯನ್ನು ಹೊಂದಿದ್ದ ಮೊಗಲ್‌ಚಕ್ರವರ್ತಿ ಅಕ್ಬರನಿಂದ ಪ್ರೋತ್ಸಾಹ ಪಡೆದಿದ್ದರು. ವಿಜಯಸೂರಿ ಮತ್ತು ವಿಜಯಸೇನಸೂರಿ ಎಂಬ ಪ್ರಸಿದ್ಧ ಜೈನವಿದ್ವಾಂಸರು ಅಕ್ಬರನಿಂದ ಮನ್ನಣೆ ಪಡೆದಿದ್ದರು.

### ಜೈನಮತದಲ್ಲಿ ಒಡಕು

ಮಹಾವೀರನು ಕಾಲವಾದ ಇನ್ನೂರು ವರ್ಷಗಳ ತರುವಾಯದಲ್ಲಿ ಜೈನ ಧರ್ಮೀಯರಲ್ಲಿ ಒಡಕುಂಟಾಗಿ ಶ್ವೇತಾಂಬರ ಮತ್ತು ದಿಗಂಬರ ಎಂಬ ಎರಡು ಪಂಥಗಳು ಅಸ್ತಿತ್ವಕ್ಕೆ ಬಂದವು. ಕ್ರಿ.ಪೂ.ನಾಲ್ಕನೆ ಶತಮಾನದ ಅಂತ್ಯದಲ್ಲಿ ಮಗಧ ರಾಜ್ಯದಲ್ಲಿ ಭೀಕರ ಕ್ಷಾಮವು ತಲೆದೋರಿ ಹನ್ನೆರಡು ವರ್ಷಗಳ ಕಾಲ ಮುಂದುವರಿಯಿತು. ಕ್ಷಾಮದ ಭೀಕರತೆಯನ್ನು ನೋಡಲಾಗದ ಜೈನಧರ್ಮೀಯರನೇಕರು ಭದ್ರಬಾಹು ಎಂಬ ಗುರುವಿನ ನೇತೃತ್ವದಲ್ಲಿ ದಕ್ಷಿಣ ಭಾರತದ ಕರ್ನಾಟಕ ರಾಜ್ಯಕ್ಕೆ ಬಂದು ನೆಲಸಿದರು. ಮತ್ತೆ ಕೆಲವರು ಸ್ಥೂಲಭದ್ರನ ನೇತೃತ್ವದಲ್ಲಿ ಮಗಧ ರಾಜ್ಯದಲ್ಲಿಯೇ ಉಳಿದರು. ಅವರು ಕ್ರಿ.ಪೂ. 300ರಲ್ಲಿ ಪಾಟಲೀಪುತ್ರದಲ್ಲಿ ಸಭೆಸೇರಿ ಜೈನರ ಮಾರ್ಗದರ್ಶನಕ್ಕಾಗಿ ಹನ್ನೆರಡು ಅಂಗಗಳನ್ನು ರೂಪಿಸಿದರು. ಕ್ಷಾಮ ಪರಿಸ್ಥಿತಿಯು ಮುಗಿದ ನಂತರ ಮಗಧಕ್ಕೆ ಹಿಂದಿರುಗಿದ ಜೈನರು ತಮ್ಮ ಸಹಧರ್ಮೀಯರು ರೂಪಿಸಿದ್ದ ನಿಯಮಗಳಲ್ಲಿ ಕೆಲವನ್ನು ಒಪ್ಪಿಕೊಳ್ಳಲು ನಿರಾಕರಿಸಿದರು. ಅಲ್ಲದೆ ಅವರು ಮಹಾವೀರನ ತತ್ವಗಳಲ್ಲಿ ಹಲವಾರು ಬದಲಾವಣೆಗಳನ್ನು ಮಾಡಿಕೊಂಡು ಬದಲಾವಣೆಗೊಳ್ಳುತ್ತಿದ್ದ ಸಾಮಾಜಿಕ ಪರಿಸರಕ್ಕೆ ಹೊಂದಿಕೊಂಡಿದ್ದರು. ಭದ್ರಬಾಹುವಿನ ಶಿಷ್ಯರಾದರೊ ಮಹಾವೀರನ ತತ್ವಗಳನ್ನು ಕಟ್ಟುನಿಟ್ಟಾಗಿ ಅನುಸರಿಸುವವರಾಗಿದ್ದರು.

ಹೀಗಾಗಿ ಜೈನ ಧರ್ಮೀಯರಲ್ಲಿ ಒಡಕುಂಟಾಗಿ ದಿಗಂಬರ ಮತ್ತು ಶ್ವೇತಾಂಬರ ಎಂಬ ಎರಡು ಪಂಥಗಳು ಅಸ್ತಿತ್ವಕ್ಕೆ ಬಂದವು.

ಕ್ರಿ.ಶ. 512ರಲ್ಲಿ ಗುಜರಾತಿನ ವಲ್ಲಭಿಯಲ್ಲಿ ಜೈನರ ಎರಡನೆ ಸಮ್ಮೇಳನವು ಸಮಾವೇಶಗೊಂಡಿತು. ದೇವರ್ದಿ ಕ್ಷಮಾಶ್ರವಣ ಎಂಬುವನು ಇದರ ಅಧ್ಯಕ್ಷತೆ ವಹಿಸಿದ್ದನು. ಈ ಸಭೆಯಲ್ಲಿ ಶ್ವೇತಾಂಬರರು ಹಿಂದೆಯೆ ರಚಿಸಿದ್ದ ಹನ್ನೆರಡು ಅಂಗಗಳನ್ನು ಪುನರ್‌ರಚಿಸಿದ್ದಲ್ಲದೆ ಜೈನಸಿದ್ಧಾಂತದ ಬಗ್ಗೆ ಒಂದು ಬೃಹತ್ ಕೃತಿಯನ್ನು ಹೊರತಂದರು. ಮುಂದಿನ ಶತಮಾನಗಳಲ್ಲಿ ದಿಗಂಬರ ಮತ್ತು ಶ್ವೇತಾಂಬರ ಪಂಥೀಯರಲ್ಲಿ ಇನ್ನೂ ಕೆಲವು ಉಪಪಂಥಗಳು ಅಸ್ತಿತ್ವಕ್ಕೆ ಬಂದವು.

### ಜೈನಮತದ ಅವನತಿ

ಜೈನಧರ್ಮದ ಅವನತಿಗೆ ಹಲವಾರು ಕಾರಣಗಳಿದ್ದವು. ವರ್ಧಮಾನ ನಂತರ ಸಂಘದ ನಿರ್ದೇಶಕರಾಗಿದ್ದ ಸುಧರ್ಮ, ಜಂಬುಸ್ವಾಮಿ ಹಾಗೂ ಭದ್ರಬಾಹು ಇವರುಗಳ ನಂತರ ಸಂಘದ ನಿರ್ದೇಶಕರಲ್ಲಿ ಕಂಡುಬಂದ ಅಸಮರ್ಥತೆಯು ಕಾರಣವಾಗಿತ್ತು. ಇದರಿಂದಾಗಿ ಧರ್ಮಕ್ಕಾಗಿ ಸರ್ವಸ್ವವನ್ನೂ ತ್ಯಾಗಮಾಡಿ ನಿಷ್ಠೆಯಿಂದ ಧರ್ಮಪ್ರಸಾರಮಾಡುವ ಜನರು ತೀರ ವಿರಳವಾದರು. ಎರಡನೆಯದಾಗಿ ಜೈನಧರ್ಮೀಯರಲ್ಲೇ ಧರ್ಮದ ಬಗ್ಗೆ ಮೊದಲಿದ್ದ ಅಭಿಮಾನ ಮತ್ತು ಉತ್ಸಾಹಗಳು ಕಡಿಮೆಯಾದವು. ಮೂರನೆಯದಾಗಿ, ಜೈನಧರ್ಮಕ್ಕೆ ಸ್ಥಳೀಯ ರಾಜರುಗಳ ಉದಾರ ಪ್ರೋತ್ಸಾಹವನ್ನು ಬಿಟ್ಟರೆ ಬೌದ್ಧಮತಕ್ಕೆ ಅಶೋಕ ಚಕ್ರವರ್ತಿ ಹಾಗೂ ಕಾನಿಷ್ಕನು ತೋರಿಸಿದಂತಹ ರಾಷ್ಟ್ರಮಟ್ಟದ ಪ್ರೋತ್ಸಾಹವು ದೊರಕದೆ ಅದು ಕೇವಲ ಸ್ಥಳೀಯ ಇಲ್ಲದೆ ಪ್ರಾದೇಶಿಕ ಮಟ್ಟದಲ್ಲಿಯೆ ಉಳಿಯಿತು. ನಾಲ್ಕನೆಯದಾಗಿ, ಜೈನ ಮತವು ಬೌದ್ಧಮತದಂತೆ ಅಪಾರ ಸಂಖ್ಯೆಯಲ್ಲಿ ಜನರನ್ನು ಆಕರ್ಷಿಸುವುದರಲ್ಲಿ ವಿಫಲವಾಯಿತು. ಜೈನ ಧರ್ಮದಲ್ಲಿನ ಕಠಿಣವಾದ ಕೆಲವು ವ್ರತನಿಯಮಗಳು ಜನಸಾಮಾನ್ಯರ ಆಚರಣೆಗೆ ಕಷ್ಟವಾಗಿದ್ದವು. ಐದನೆಯದಾಗಿ. ಜೈನ ಧರ್ಮೀಯರಲ್ಲಿ ಆಂತರಿಕವಾಗಿ ಒಡಕುಂಟಾದುದು ಅದರ ಅವನತಿಗೆ ಮತ್ತೊಂದು ಕಾರಣವಾಗಿತ್ತು. ಈ ಕೆಲವು ಕಾರಣಗಳೇ ಅಲ್ಲದೆ ಬೌದ್ಧಮತದ ಏಳಿಗೆಯೂ ಹಾಗೂ ಮುಂದಿನ ಶತಮಾನಗಳಲ್ಲಿ ಹಿಂದೂಧರ್ಮದ ಪುನರ್ ಸ್ಥಾಪನೆಗಾಗಿ ಆರಂಭವಾದ ಚಳುವಳಿಗಳೂ ಜೈನಧರ್ಮದ ಪ್ರಗತಿಯನ್ನು ಕುಂಠಿತಗೊಳಿಸಿದವು. ಹಿಂದೂ ಧರ್ಮದ ಚೇತನಾಶಕ್ತಿಗಳು ಜೈನ ಧರ್ಮೀಯರ ನಂಬಿಕೆಗಳನ್ನು ಅಲುಗಾಡಿಸಿ ಜೈನಧರ್ಮೀಯರೂ ಕೂಡ ಹಿಂದೂಗಳಂತೆ ವಿಗ್ರಹಾರಾಧನೆಯನ್ನು ಕೈಗೊಂಡರು. ಜೈನರು ಹಿಂದೂ ಧರ್ಮೀಯರ ಆಚರಣೆಗಳನ್ನು ಅನುಸರಿಸತೊಡಗಿ ಹಿಂದೂಧರ್ಮದೊಳಗೆ ವಿಲೀನಗೊಳ್ಳತೊಡಗಿದರು. ವ್ಯಾವಹಾರಿಕ ದೃಷ್ಟಿಯಲ್ಲಿ ಜೈನರು ಹಿಂದೂಗಳೆಂದು ಪರಿಗಣಿಸಲ್ಪಟ್ಟರು. ಜೈನಧರ್ಮವು ಭಾರತದ ಪೂರ್ವ ಭಾಗದಲ್ಲಿ ಅವಸಾನಹೊಂದಿ ಪಶ್ಚಿಮ ಹಾಗೂ ದಕ್ಷಿಣ ಭಾರತದಲ್ಲಿ ನೆಲೆನಿಂತಿತು. ಉಜ್ಜೈನಿ ಮತ್ತು ಮಥುರಗಳು ಜೈನರ ಕೇಂದ್ರಗಳಾದವು. ಜೈನ ಧರ್ಮವು ಬೌದ್ಧ ಧರ್ಮಕ್ಕೆ ಸರಿಸಮಾನವಾಗಿ ನಿಲ್ಲದೆ ಹೋದರೂ, ಅದರಲ್ಲಿನ ಕೆಲವು ನಿಷ್ಠಾವಂತ

ವ್ಯಕ್ತಿಗಳು ಹಾಗೂ ಸಂಘಸಂಸ್ಥೆಗಳು ಅದೊಂದು ಜೀವಂತ ಧರ್ಮವಾಗಿ ತನ್ನ ತಾಯ್ನಾಡಿನಲ್ಲಿ ಉಳಿಯಲು ಶ್ರಮಿಸಿರುವುದು ಗಮನಿಸಬೇಕಾದ ಸಂಗತಿಯಾಗಿರುತ್ತದೆ.

**ಜೈನ ಧರ್ಮದ ಕೊಡುಗೆಗಳು**

ಸಾಹಿತ್ಯ: ಭಾರತದಲ್ಲಿ ಜೈನರು ಸಂಖ್ಯೆಯಲ್ಲಿ ಕಡಿಮೆಯಿದ್ದರೂ ಅವರು ಭಾರತೀಯ ಸಂಸ್ಕೃತಿಗೆ ಅತ್ಯಮೂಲ್ಯ ಕೊಡುಗೆಗಳನ್ನು ಸಲ್ಲಿಸಿದ್ದಾರೆ. ಮೊದಲನೆಯದಾಗಿ ಜೈನಧರ್ಮೀಯರು ಸಾಹಿತ್ಯ ಪ್ರಪಂಚಕ್ಕೆ ಅಪಾರ ಸೇವೆ ಸಲ್ಲಿಸಿದ್ದಾರೆ. ಜೈನ ವಿದ್ವಾಂಸರು ತಮ್ಮ ಧರ್ಮದ ಬಗೆಗೇ ಅಲ್ಲದೆ ಲೌಕಿಕ ವಿಷಯಗಳ ಬಗ್ಗೆಯೂ ಹಲವಾರು ಕೃತಿಗಳನ್ನು ರಚಿಸಿ ಸಾಹಿತ್ಯ ಕ್ಷೇತ್ರವನ್ನು ಶ್ರೀಮಂತಗೊಳಿಸಿದ್ದಾರೆ. ಮಹಾವೀರನು ಕಾಲವಾದ ಇನ್ನೂರು ವರ್ಷಗಳ ನಂತರದಲ್ಲಿ ಪಾಟಲೀಪುತ್ರದಲ್ಲಿ ಸಮಾವೇಶಗೊಂಡಿದ್ದ ಜೈನರ ಸಭೆಯು ಜೈನರಧಾರ್ಮಿಕ ಸಾಹಿತ್ಯವನ್ನು ಪರಿಷ್ಕರಿಸಿ ಪುನರ್‌ರಚಿಸಿತು. ಆದರೆ ಈ ಸಭೆಯು ಪರಿಷ್ಕೃತಗೊಳಿಸಿ ರೂಪಿಸಿದ ಧಾರ್ಮಿಕ ಸೂತ್ರಗಳ ಅಧಿಕಾರವನ್ನು ಎಲ್ಲ ಜೈನರೂ ಒಪ್ಪಿಕೊಳ್ಳಲಿಲ್ಲ. ಅರ್ಧಮಾಗಧಿ ಭಾಷೆಯಲ್ಲಿ ಬರೆಯಲಾಗಿದ್ದ ಧಾರ್ಮಿಕ ಸೂತ್ರಗಳಲ್ಲಿ ಅನೇಕ ಬದಲಾವಣೆಗಳಾದವು. ಸ್ಕಂದಿಲ ಮತ್ತು ನಾಗಾರ್ಜುನ ಎಂಬುವರು ಹಳೆಯ ಸೂತ್ರಗಳಲ್ಲಿನ ಕ್ಲಿಷ್ಟತೆಯನ್ನು ಬಗೆಹರಿಸಲು ಬಹಳವಾಗಿ ಶ್ರಮಿಸಿದರು. ಕ್ರಿ.ಶ. 512ರಲ್ಲಿ ವಲ್ಲಭಿಯಲ್ಲಿ ಸಮಾವೇಶಗೊಂಡ ಎರಡನೆ ಜೈನ ಸಮ್ಮೇಳನವು ಧಾರ್ಮಿಕ ಸೂತ್ರಗಳ ಅಂತಿಮಸಂಕಲನವನ್ನು ಹೊರತಂದಿತು. ಈ ಸಭೆಯು ಜೈನಧರ್ಮದ ಸೂತ್ರಗಳೆಲ್ಲವನ್ನೂ ಪರಿಷ್ಕರಿಸಿ ಆರು ಗುಂಪುಗಳಾಗಿ ವರ್ಗೀಕರಿಸಿತು. ಅವುಗಳೆಂದರೆ, 1. ಹನ್ನೆರಡು ಅಂಗಗಳು, 2. ಹನ್ನೆರಡು ಉಪಾಂಗಗಳು,3. ಹತ್ತು ಪ್ರಕರಣಗಳು, 4. ಆರು ಚೆಡ್ಡಸೂತ್ರಗಳು, 5. ನಾಲ್ಕು ಮೂಲಸೂತ್ರಗಳು, 6. ನಾಲ್ಕು ವಿವಿಧಗ್ರಂಥ ಸೂತ್ರಗಳು. ಇವುಗಳಲ್ಲಿ ಮೊದಲನೆಯದಾದ ಹನ್ನೆರಡು ಅಂಗಗಳು ಪುರಾಣಗಳ ಮತ್ತು ಕಥೆಗಳ ಸಹಾಯದಿಂದ ಜೈನಧರ್ಮದ ತತ್ತ್ವೋಪದೇಶಗಳನ್ನೂ ಮತ್ತು ಸಂನ್ಯಾಸಿಗಳಿಗೆ ನಡವಳಿಕೆಯ ನಿಯಮಾವಳಿಗಳನ್ನು ಕುರಿತು ತಿಳಿಸುತ್ತವೆ. ಹನ್ನೆರಡು ಉಪಾಂಗಗಳು ಹೆಚ್ಚು ಕಡಿಮೆ ಮೊದಲನೆಯ ಅಂಗಗಳಿಗೆ ಸಂಬಂಧಿಸಿದ ವಿಷಯಗಳನ್ನೇ ಒಳಗೊಂಡಿವೆ. ಹತ್ತು ಪ್ರಕರಣಗಳು ಕಾವ್ಯರೂಪದಲ್ಲಿದ್ದು ಜೈನಧರ್ಮದ ತತ್ವಗಳಿಗೆ ಸಂಬಂಧಿಸಿದ ವಿವಿಧ ವಿಷಯಗಳನ್ನೊಳಗೊಂಡಿವೆ. ಚೆಡ್ಡಸೂತ್ರಗಳು ಸಂನ್ಯಾಸಶ್ರಮಗಳಲ್ಲಿನ ಶಿಸ್ತು ಮತ್ತು ಶಿಸ್ತನ್ನು ಉಲ್ಲಂಘಿಸಿದಾಗ ಅದಕ್ಕೆ ಅನುಭವಿಸಬೇಕಾದ ಶಿಕ್ಷೆಗಳನ್ನು ಕುರಿತು ತಿಳಿಸುತ್ತವೆ. ಮೂಲಸೂತ್ರಗಳು ಜೈನಧರ್ಮದ ಮೂಲಭೂತ ನಿಯಮಗಳನ್ನು ತಿಳಿಸುತ್ತವೆ. ಉಳಿದ ಕೃತಿಗಳು ಧಾರ್ಮಿಕ, ಆರ್ಥಿಕ ಹಾಗೂ ಲೌಕಿಕ ವಿಷಯಗಳನ್ನು ಕುರಿತು ತಿಳಿಸುತ್ತವೆ.

ಜೈನ ವಿದ್ವಾಂಸರು ಧಾರ್ಮಿಕ ಸಾಹಿತ್ಯವನ್ನೇ ಅಲ್ಲದೆ ವಿವಿಧ ರೀತಿಯ ಸಾಹಿತ್ಯವನ್ನೂ ರಚಿಸಿದರು. ಸಿದ್ಧಸೇನ, ಸಂಘದಾಸ ಮೊದಲಾದ ವಿದ್ವಾಂಸರು ಭಾಷ್ಯಗಳ ರೂಪದಲ್ಲಿ ಪ್ರಾಕೃತ ಭಾಷೆಯಲ್ಲಿ ವ್ಯಾಖ್ಯಾನ ಕೃತಿಗಳನ್ನು ರಚಿಸಿದರು. ಕಾಲಾನುಕ್ರಮದಲ್ಲಿ ಸಂಸ್ಕೃತ ಭಾಷೆಯಲ್ಲೂ ಟೀಕಾಗ್ರಂಥಗಳು ರಚಿತವಾದವು. ಹರಿಭದ್ರ (9ನೇ ಶತಮಾನ)

ಎಂಬ ವಿದ್ವಾಂಸನು ಸಂಸ್ಕೃತದಲ್ಲಿ ಉತ್ತಮ ಕೃತಿಗಳನ್ನು ರಚಿಸಿದನು. ಸಿದ್ಧಸೇನ, ಅಕಲಂಕ, ಮತ್ತು ಪೂಜ್ಯಪಾದ ಮೊದಲಾದವರು ಜೈನರ ದಾರ್ಶನಿಕ ಶಾಸ್ತ್ರಕ್ಕೆ ಅಮೋಘ ಸೇವೆ ಸಲ್ಲಿಸಿದರು. ಅಂತೆಯೆ ದಿಗಂಬರ ಪಂಥಕ್ಕೆ ಸೇರಿದ ಕುಂದಕುಂದಚಾರ್ಯ, ವಟ್ಟಕೇರಸ್ವಾಮಿ, ಕಾರ್ತಿಕೇಯ, ಸಾಮೀತಭದ್ರ, ಮಾತುಂಗ ಮೊದಲಾದವರು ಸಂಸ್ಕೃತ ಮತ್ತು ಪ್ರಾಕೃತ ಭಾಷೆಗಳೆರಡರಲ್ಲೂ ಕೃತಿಗಳನ್ನು ರಚಿಸಿ ದಿಗಂಬರ ಪಂಥೀಯರ ದಾರ್ಶನಿಕತೆಯನ್ನು ಪ್ರತಿಪಾದಿಸಿದರು. ಜೈನವಿದ್ವಾಂಸರು ದೇಶೀಯ ಭಾಷೆಗಳ ಬೆಳವಣಿಗೆಗೂ ಅಮೋಘ ಸೇವೆ ಸಲ್ಲಿಸಿದ್ದಾರೆ. ಕನ್ನಡ, ಮರಾಠಿ, ಗುಜರಾತಿ, ಮತ್ತು ಹಿಂದಿ ಭಾಷೆಗಳಲ್ಲೂ ಅತ್ಯುತ್ತಮ ಕೃತಿಗಳನ್ನು ರಚಿಸಿರುವರು. ಮೇಲಾಗಿ ಅವರು ಸಂಸ್ಕೃತದಲ್ಲಿ ವಿವರಣಾತ್ಮಕ, ದಾರ್ಶನಿಕ ಮತ್ತು ಅಲಂಕಾರ ಗ್ರಂಥಗಳನ್ನೂ ಛಂದಸ್ಸು, ತರ್ಕಶಾಸ್ತ್ರ, ವ್ಯಾಕರಣ, ನಿಘಂಟು ಮತ್ತು ಗಣಿತ ಶಾಸ್ತ್ರಗಳನ್ನೂ ಕುರಿತು ಶ್ರೇಷ್ಠ ಕೃತಿಗಳನ್ನು ರಚಿಸಿ ಸಾಹಿತ್ಯ ಕ್ಷೇತ್ರಕ್ಕೆ ವಿಶೇಷವಾದ ಕೊಡುಗೆಗಳನ್ನಿತ್ತಿದ್ದಾರೆ.

### ವಾಸ್ತುಶಿಲ್ಪ ಮತ್ತು ಶಿಲ್ಪಕಲೆ

ಜೈನಧರ್ಮೀಯರು ವಾಸ್ತುಶಿಲ್ಪ ಮತ್ತು ಶಿಲ್ಪಕಲಾ ಕ್ಷೇತ್ರಕ್ಕೂ ಮಹತ್ವಪೂರ್ಣ ಕೊಡುಗೆಗಳನ್ನು ಸಲ್ಲಿಸಿದ್ದಾರೆ. ಕ್ರಿ.ಶ. 11 ಮತ್ತು 12ನೇ ಶತಮಾನಗಳ ವಾಸ್ತುಶಿಲ್ಪದಲ್ಲಿ ಜೈನರ ವಾಸ್ತುಶಿಲ್ಪದ ಸೌಂದರ್ಯ ಎದ್ದು ಕಾಣುತ್ತದೆ. ಕ್ರಿ.ಶ.ದ ಆರಂಭದ ಶತಮಾನಗಳಲ್ಲಿ ಜೈನರು ಬೌದ್ಧರಂತೆ ತಮ್ಮ ಗುರುಗಳ ಗೌರವಾರ್ಥವಾಗಿ ಕಂಬ ಸಾಲುಗಳಿಂದ ಕೂಡಿ ಅಲಂಕೃತವಾದ ಅನೇಕ ಬಸದಿಗಳನ್ನು, ವಿಹಾರಗಳನ್ನು ಮತ್ತು ಸ್ತೂಪಗಳನ್ನು ನಿರ್ಮಿಸಿದರು. ಜೈನರ ಗುರುಗಳ ವಿಗ್ರಹಗಳಿಂದ ಕೂಡಿರುವ ಇಂತಹ ಹಲವಾರು ಬಸದಿಗಳನ್ನು ಮತ್ತು ಸ್ತೂಪಗಳನ್ನು ಮಥುರ, ಬಂದೇಲ್‌ಖಂಡ, ಮಧ್ಯಭಾರತ ರಾಜಾಸ್ಥಾನ, ಗುಜರಾತು ಹಾಗೂ ಕರ್ಣಾಟಕ ಮೊದಲಾದ ಕಡೆಗಳಲ್ಲಿ ಇಂದೂ ನೋಡಬಹುದಾಗಿದೆ. ಮಧ್ಯಭಾರತದ ಉದಯಗಿರಿ ಬೆಟ್ಟಗಳಲ್ಲೂ ಮತ್ತು ಎಲ್ಲೋರ ಮೊದಲಾದ ಕಡೆಗಳಲ್ಲೂ ಕಂಡುಬರುವ ಕಲಾಕೃತಿಗಳು ಅವರ ವಾಸ್ತುಶಿಲ್ಪ ಕಲೆಯ ಸಾಧನೆಗೆ ಮುಖ್ಯ ನಿದರ್ಶನಗಳಾಗಿವೆ. ಹಾಗೆಯೆ ಕ್ರಿ.ಪೂ. ಎರಡನೆ ಶತಮಾನದಲ್ಲಿ ಒರಿಸ್ಸದ ಹತಿಗುಂಪದಲ್ಲಿ ಗುಹಾಂತರ್ದೇವಾಲಯಗಳನ್ನು ನಿರ್ಮಿಸಿದ್ದರು. ಅಂತೆಯೆ ಬೇರೆ ಬೇರೆ ಕಾಲಗಳಲ್ಲಿ ನಿರ್ಮಿತವಾಗಿರುವ ಗುಹಾಲಯಗಳನ್ನು ಜುನ್ನಾಗಢ್, ಜುಮ್ನಾರ್, ಉಸ್ಮಾನಬಾದ್, ಗಿರ್ನಾರ್ ಮತ್ತು ಕಾಥೇವಾರ ಮತ್ತಿತರ ಕಡೆಗಳಲ್ಲಿ ಕಾಣಬಹುದಾಗಿದೆ. ಜೈನರ ಪವಿತ್ರ ಯಾತ್ರಾಸ್ಥಳಗಳಾದ ಪಾವಪುರಿ ಮತ್ತು ರಾಜಗಿರಿಗಳಲ್ಲೂ ದೇವಾಲಯಗಳು ನಿರ್ಮಿತವಾದವು. ರಾಜಾಸ್ಥಾನದ ಚಿತ್ತೂರಿನಲ್ಲಿರುವ ಜೈನಗೋಪುರವು ಅವರ ವಾಸ್ತುಶಿಲ್ಪ ಪ್ರತಿಭೆಯ ಸಾರಸಂಗ್ರಹವಾಗಿದೆ.

ಜೈನರ ಶಿಲ್ಪಕಲಾಕಾರರು ಕೆತ್ತಿರುವ ಮೂರ್ತಿಶಿಲ್ಪಗಳು ವಿಶ್ವವಿಖ್ಯಾತವಾಗಿವೆ. ಶ್ರವಣ ಬೆಳಗೊಳ, ಹಳೇಬೀಡು ಮತ್ತು ಕಾರ್ಕಳಗಳಲ್ಲಿರುವ ಬಾಹುಬಲಿ ವಿಗ್ರಹಗಳು ನೋಡಲು ಬಹು ಸುಂದರವಾಗಿವೆ. ಇವುಗಳಲ್ಲೆಲ್ಲಾ ಶ್ರವಣಬೆಳಗೊಳದಲ್ಲಿರುವ ಗೊಮ್ಮಟೇಶ್ವರನ ಅಥವ ಬಾಹುಬಲಿಯ ವಿಗ್ರಹವು ಪ್ರಪಂಚದ ವಿಸ್ಮಯಗಳಲ್ಲೊಂದಾಗಿದೆ.

ಈ ವಿಗ್ರಹವು 57 ಅಡಿ ಎತ್ತರವಿದ್ದು ಒಂದೇ ಒಂದು ಬೃಹತ್ ಶಿಲೆಯಲ್ಲಿ ಕೆತ್ತಲ್ಪಟ್ಟಿದೆ. ಇದನ್ನು ಕ್ರಿ.ಶ. 984ರಲ್ಲಿ ಗಂಗರ ರಾಜನಾದ ಮಾರಸಿಂಹನ ಮಂತ್ರಿಯಾಗಿದ್ದ ಚಾವುಂಡರಾಯನು ಕೆತ್ತಿಸಿದನು. ಶ್ರವಣಬೆಳಗೊಳವು ಜೈನರ ಪವಿತ್ರ ಯಾತ್ರಾಸ್ಥಳವೂ ಆಗಿರುತ್ತದೆ. ಇಲ್ಲಿ ಹನ್ನೆರಡು ವರ್ಷಕ್ಕೊಮ್ಮೆ ಮಹಾಮಸ್ತಾಬಿಷೇಕ ಪೂಜೆಯು ನೆರವೇರುತ್ತದೆ. ಈ ಸಂದರ್ಭದಲ್ಲಿ ದೇಶದ ವಿವಿಧ ಭಾಗಗಳಿಂದ ಜೈನರು ಲಕ್ಷಾಂತರ ಸಂಖ್ಯೆಯಲ್ಲಿ ನೆರದು ಪೂಜೆಯಲ್ಲಿ ಪಾಲ್ಗೊಳ್ಳುತ್ತಾರೆ. ಶ್ರವಣಬೆಳಗೊಳವು ಪ್ರವಾಸಿಗರ ಕೇಂದ್ರವೂ ಆಗಿರುತ್ತದೆ.

ಜೈನರ ಇತರ ಕೊಡುಗೆಗಳಲ್ಲಿ ಅಹಿಂಸಾತತ್ವದ ಕೊಡುಗೆಯು ಮತ್ತೊಂದು ಪ್ರಮುಖ ಕೊಡುಗೆಯಾಗಿದೆ. ಅಹಿಂಸಾತತ್ವವನ್ನು ಉಪನಿಷತ್ತುಗಳು ಬೋಧಿಸಿದರೂ ಜೈನಧರ್ಮವು ಈ ತತ್ವವನ್ನು ಒತ್ತಿಹೇಳಿ ವ್ಯಾಪಕಗೊಳಿಸಿತು. ಜೈನಧರ್ಮೀಯರು ವಿದ್ಯಾಭ್ಯಾಸ ಮತ್ತು ಸಮಾಜ ಕಲ್ಯಾಣಕ್ಷೇತ್ರಗಳಿಗೆ ಮಹತ್ತರ ಕೊಡುಗೆಗಳನ್ನಿತ್ತಿರುವರು. ಜೈನರಲ್ಲಿ ಧನಿಕರಾಗಿರುವ ಕೆಲವರು ಧಾರ್ಮಿಕ ಪುಣ್ಯಸಂಪಾದನೆಗಾಗಿ ಶಾಲೆಗಳು, ಆಸ್ಪತ್ರೆಗಳು, ಧರ್ಮಛತ್ರಗಳು, ಮತ್ತು ಕಲ್ಯಾಣ ಮಂದಿರಗಳನ್ನು ಕಟ್ಟಿಸಿ ಸಾಂಸ್ಕೃತಿಕ ಪ್ರಗತಿಗೂ ಕಾರಣರಾಗಿದ್ದಾರೆ.

ಜೈನರು ಕಾವ್ಯಸಾಹಿತ್ಯಕ್ಕೂ ಅಪಾರ ಸೇವೆ ಸಲ್ಲಿಸಿದ್ದಾರೆ. ಅವರು ರಚಿಸಿರುವ ಚರಿತ್ರೆಗಳು ಕಥೆಯ ರೂಪದಲ್ಲಿ ಜೈನ ತೀರ್ಥಂಕರರ ಬಗ್ಗೆ ಅನೇಕ ವಿಷಯಗಳನ್ನೊದಗಿಸುತ್ತವೆ. ಪ್ರಬಂಧಗಳು ಸಂನ್ಯಾಸಿಗಳ ಜೀವನವನ್ನು ಕುರಿತು ತಿಳಿಸುತ್ತವೆ. ಕ್ರಿ.ಶ. ಹನ್ನೆರಡನೆ ಶತಮಾನದಲ್ಲಿ ಜೀವಿಸಿದ್ದ ಸುಪ್ರಸಿದ್ಧ ಜೈನ ಬರಹಗಾರನಾದ ಹೇಮಚಂದ್ರನು (ಗುಜರಾತು) ಧರ್ಮದ ಬಗ್ಗೆಯೇ ಅಲ್ಲದೆ, ಕಾವ್ಯ, ನಿಘಂಟು, ವ್ಯಾಕರಣದ ಬಗ್ಗೆಯೂ ಅನೇಕ ಕೃತಿಗಳನ್ನು ರಚಿಸಿದನು. ಅವನು ರಚಿಸಿರುವ ಜೀವನ ಚರಿತ್ರೆಗಳಲ್ಲಿ 'ಮಹಾವೀರ ಚರಿತ'ವು ಹೆಚ್ಚು ಹೆಸರುವಾಸಿಯಾದುದು.

**ಬೌದ್ಧಮತ: ಗೌತಮಬುದ್ಧ**

ಕ್ರಿ.ಪೂ.ಆರನೇ ಶತಮಾನದಲ್ಲಿ ಭಾರತದಲ್ಲಿ ಜನ್ಮವೆತ್ತಿದ ಧರ್ಮಗಳಲ್ಲಿ ಬೌದ್ಧಮತವು ಹೆಚ್ಚು ಪ್ರಸಿದ್ಧಿಯಾದದು. ಸಿದ್ಧಾರ್ಥ ಅಥವ ಗೌತಮಬುದ್ಧನು ಇದರ ಸ್ಥಾಪಕ. ಕ್ರಿ.ಪೂ. ಆರನೇ ಶತಮಾನದಲ್ಲಿ ಸಣ್ಣ ರಾಜ್ಯವೊಂದರ ರಾಜಕುಮಾರನೊಬ್ಬನು ಆರು ಶತಮಾನಗಳ ತರುವಾಯದಲ್ಲಿ ಏಸುಕ್ರಿಸ್ತನು ಸ್ಥಾಪಿಸಿದಂತಹ ಶಾಂತಿಯುತವಾದ ಧರ್ಮ ಸಾಮ್ರಾಜ್ಯವನ್ನು ಸ್ಥಾಪಿಸಿ ಅದರ ನಾಯಕನಾಗುವನೆಂದು ಯಾರೂ ಊಹಿಸಿರಲಾರರು.

ಗೌತಮ ಅಥವ ಸಿದ್ಧಾರ್ಥನು ಕ್ರಿ.ಪೂ. 566ರಲ್ಲಿ ನೇಪಾಳದ ಪ್ರಸ್ತಭೂಮಿಯ ಲುಂಬಿನಿವನದಲ್ಲಿ ಜನ್ಮವೆತ್ತಿದನು. ಶದ್ಧೋದನ ಮತ್ತು ಮಾಯಾದೇವಿ ಎಂಬವರು ಇವನ ತಂದೆತಾಯಿಗಳು. ಶುದ್ಧೋದನನು ಶಾಕ್ಯರ ಬಣದ ಗಣರಾಜ್ಯಕ್ಕೆ ದೊರೆಯಾಗಿದ್ದನು. ಕಪಿಲವಸ್ತು ಇವನ ರಾಜಧಾನಿ. ಗೌತಮನ ಹುಟ್ಟಿನ ಬಗ್ಗೆ

ಹಲವಾರು ಕಥೆಗಳು ಹೇಳಲ್ಪಟ್ಟಿವೆ. ಇವನು ಹುಟ್ಟಿದ ನಕ್ಷತ್ರಗಳನ್ನು ನೋಡಿದ ಜ್ಯೋತಿಷ್ಯಕಾರರು ಗೌತಮನು ರಾಜನಾಗುವನು ಇಲ್ಲವೆ ಸಂನ್ಯಾಸಿಯಾಗಿ ತನ್ನ ಹೆಸರನ್ನು ಪ್ರಸಿದ್ಧಿಪಡಿಸಿಕೊಳ್ಳುವನು ಎಂದು ಭವಿಷ್ಯ ನುಡಿದಿದ್ದರು. ಗೌತಮನಿಗೆ ದುರಾದೃಷ್ಟವಶಾತ್ ತನ್ನ ತಾಯಿಯ ಪ್ರೀತಿ ಮತ್ತು ಮಮತೆಗಳ ದೇಗುಲದಲ್ಲಿ ಬೆಳೆಯುವ ಅವಕಾಶವು ತಪ್ಪಿಹೋಯಿತು. ಮಾಯಾದೇವಿಯು ಮಗುವಿಗೆ ಜನನವಿತ್ತ ಏಳನೆದಿವಸ ತೀರಿಕೊಂಡಳು. ಸಿದ್ಧಾರ್ಥನು ಅನಂತರ ತನ್ನ ಚಿಕ್ಕಮ್ಮನಾದ ಮಹಾಪ್ರಜಾಪತಿ ಗೌತಮಿಯ ಲಾಲನೆ ಮತ್ತು ಪಾಲನೆಯಲ್ಲಿ ಬೆಳದನು. ಇದರಿಂದಾಗಿ ಸಿದ್ಧಾರ್ಥನಿಗೆ ಗೌತಮನೆಂಬ ಹೆಸರುಬಂದಿತು. ಜ್ಯೋತಿಷ್ಯಕಾರರ ವಾಣಿಯನ್ನು ತಿಳಿದ ಶುದ್ಧೋದನನು ಬಹಳ ವ್ಯಾಕುಲಗೊಂಡನು. ಅವನು ತನ್ನ ಏಕೈಕ ಪುತ್ರನು ಸಂನ್ಯಾಸಿಯಾಗದಂತೆ ನೋಡಿಕೊಳ್ಳಲು ಹಲವಾರು ಮುಂಜಾಗ್ರತೆ ಕ್ರಮಗಳನ್ನು ಕೈಗೊಂಡನು. ರಾಜಕುಮಾರನಿಗೆ ಬೇಕಾಗಿದ್ದ ಅವಶ್ಯಕ ವಿದ್ಯೆಯನ್ನು ಕಲಿಸಲು ಒಳ್ಳೆಯ ಗುರುಗಳನ್ನು ನೇಮಿಸಿದನು. ಶುದ್ಧೋದನನು ಪ್ರಪಂಚದ ಉಪಾದಿಗಳ ಕಡೆ ತನ್ನ ಮಗನ ಗಮನವು ಹರಿಯದಂತೆ ನೋಡಿಕೊಳ್ಳಲು ಅವನಿಗಾಗಿ ಮಳೆಗಾಲ, ಬೇಸಿಗೆಕಾಲ ಮತ್ತು ಚಳಿಗಾಲಕ್ಕೆ ಸರಿಹೊಂದುವಂತೆ ಮೂರು ಪ್ರತ್ಯೇಕ ಅರಮನೆಗಳನ್ನು ಕಟ್ಟಿಸಿ ಎಲ್ಲಾರೀತಿಯ ವೈಭವದ ಜೀವನ ನಡೆಸಲು ಏರ್ಪಾಟು ಮಾಡಿದನು. ಗೌತಮನು ವಯಸ್ಸಿಗೆ ಬಂದಮೇಲೆ ನೆರೆಯ ರಾಜ್ಯದ ರಾಜಕುಮಾರಿ ಯಶೋಧರೆ ಎಂಬ ರೂಪವತಿಯಾದ ಕನ್ಯೆಯನ್ನು ತಂದು ವಿವಾಹ ಮಾಡಿದನು. ಸುಮಾರು ಹತ್ತು ವರ್ಷಗಳ ಕಾಲ ದಾಂಪತ್ಯ ಜೀವನ ನಡೆಸಿದನು. ಆದರೆ ಶುದ್ಧೋದನನ ಮುಂಜಾಗರೂಕತೆಯ ಕ್ರಮಗಳೆಲ್ಲವೂ ವಿಫಲವಾದವು. ವೈಭವದ ಮಧ್ಯೆ ಬೆಳೆಯುತ್ತಿದ್ದ ಗೌತಮನಿಗೆ ಆ ವೈಭವದಿಂದ ಸಂತೋಷಕ್ಕೆ ಬದಲಾಗಿ ಜಿಗುಪ್ಸೆಯು ಉಂಟಾಗಿ ಇವೆಲ್ಲವೂ ನಶ್ವರವಾದವುಗಳೆಂದು ಮನವರಿಕೆಯಾಗತೊಡಗಿತು.

ಒಂದಾನೊಂದು ದಿವಸ ಗೌತಮನು ವಿಹಾರಾರ್ಥವಾಗಿ ಅರಮನೆಯಿಂದ ಹೊರಹೊರಟು ರಾಜಧಾನಿಯ ಬೀದಿಯಲ್ಲಿ ಹೋಗುತ್ತಿರುವಾಗ ಅವನು ನೋಡಿದ ರೋಗ, ಮುಪ್ಪು ಮತ್ತು ಶವದ ಸ್ಮಶಾನ ಯಾತ್ರೆಯ ದೃಶ್ಯಗಳು ಅವನ ಮನಸ್ಸಿನಲ್ಲಿ ಜೀವನದ ರಹಸ್ಯದ ಬಗ್ಗೆ ಕ್ರಾಂತಿಯ ಅಲೆಗಳನ್ನೆಬ್ಬಿಸಿದವು. ಈ ದೃಶ್ಯಗಳು ಮಾನವನ ಜೀವನದ ಸುಖದುಃಖಗಳ ಕಡೆ ಅವನ ಗಮನವನ್ನು ಸೆಳೆದು ಅವನನ್ನು ಚಿಂತೆಯ ಸಾಗರದಲ್ಲಿ ಮುಳುಗಿಸಿದವು. ಗೌತಮನು ಮಾನವನ ದುಃಖಕ್ಕೆ ಕಾರಣವನ್ನೂ ಮತ್ತು ಅದರ ಬಿಡುಗಡೆಯ ಮಾರ್ಗವನ್ನೂ ಕಂಡುಹಿಡಿಯಲು ನಿರ್ಧರಿಸಿದನು. ಈ ನಡುವೆ ಅವನ ಹೆಂಡತಿ ಯಶೋಧರೆಯು ಗಂಡುಮಗುವಿಗೆ ಜನ್ಮವಿತ್ತಳು. ಗೌತಮನು ಈ ಒಂದು ಸಂತೋಷದ ಘಟನೆಯಿಂದ ಆನಂದ ಪಡುವುದಕ್ಕೆ ಬದಲಾಗಿ ಜೀವನದ ಮತ್ತೊಂದು ಬಂಧನವೆಂದು ಪರಿಗಣಿಸಿ ಆ ಮಗುವಿಗೆ 'ರಾಹುಲ'ನೆಂದು ನಾಮಕರಣ ಮಾಡಿಸಿದನು.

ಬಾಹ್ಯ ಜಗತ್ತಿನ ಬಂಧನಕ್ಕೆ ಕಾರಣವಾದ ಅಂಶಗಳ ಬಗ್ಗೆ ಚಿಂತಾಮಗ್ನನಾಗಿದ್ದ ಗೌತಮನು ಒಂದು ದಿನ ಅರಮನೆಗೆ ಹಿಂತಿರುಗಿ ಬರುವ ವೇಳೆಗೆ ಅವನ ಮನಸ್ಸಿಗೆ

ಉಲ್ಲಾಸವನ್ನುಂಟುಮಾಡಲು ಅಪ್ಸರೆಯರಂತಹ ಸ್ತ್ರೀಯರಿಂದ ನೃತ್ಯ ಮತ್ತು ಸಂಗೀತದ ಮನರಂಜನೆಯ ಏರ್ಪಾಟನ್ನು ಮಾಡಲಾಗಿತ್ತು. ಆದರೆ ಗೌತಮನು ಅವರ ಕಡೆ ತಿರುಗಿಯೂ ನೋಡದೆ ಕೊಠಡಿಯನ್ನು ಸೇರಿದನು. ಮಧ್ಯರಾತ್ರಿಯಲ್ಲಿ ಗೌತಮನು ತನ್ನ ಸುಪ್ಪತ್ತಿಗೆಯ ಮೇಲೆ ಪದ್ಮಾಸನನಾಗಿ ಕುಳಿತು ತನ್ನನ್ನು ಕಾಡುತ್ತಿದ್ದ ಸಮಸ್ಯೆಗಳಿಗೆ ಪರಿಹಾರ ಮಾರ್ಗಗಳನ್ನು ಕಂಡುಹಿಡಿಯಲು ತಪಸ್ಸನ್ನು ಕೈಗೊಳ್ಳಬೇಕೆಂದು ನಿರ್ಧರಿಸಿ ತನ್ನ ನೆಚ್ಚಿನ ಕುದುರೆ ಕಂಟಕನನ್ನು ಅಣಿಗೊಳಿಸಿ ತರುವಂತೆ ಸೇವಕನಾದ ಚೆನ್ನನಿಗೆ ತಿಳಿಸಿದನು. ಅಂತೆಯೆ ಚೆನ್ನನು ಕುದುರೆಯನ್ನು ಅಣಿಗೊಳಿಸಿ ಹಿಡಿದು ಸಿದ್ಧವಾಗಿ ನಿಂತಿದ್ದನು. ಗೌತಮನಿಗೆ ಹೊರಡುವ ಮುನ್ನ ತನ್ನ ಪತ್ನಿ ಮತ್ತು ಮಗನನ್ನು ನೋಡುವ ಮನಸ್ಸಾಯಿತು. ಯಶೋಧರೆಯು ಮಲ್ಲಿಗೆ ಹೂಗಳನ್ನು ಹರಡಿದ್ದ ಹಾಸಿಗೆಯ ಮೇಲೆ ಮಗುವಿನೊಂದಿಗೆ ಗಾಢವಾಗಿ ನಿದ್ರೆ ಮಾಡುತ್ತಿದ್ದಳು. ಸುಖವಾಗಿ ನಿದ್ರಿಸುತ್ತಿದ್ದ ತನ್ನ ಪತ್ನಿ ಮತ್ತು ಮಗುವನ್ನು ನೋಡಿದ ಗೌತಮನಿಗೆ ಮಗುವನ್ನು ಕೈಗೆ ತೆಗೆದುಕೊಂಡು ಆಲಂಗಿಸಬೇಕೆಂಬ ಬಯಕೆಯುಂಟಾಯಿತು. ಆದರೆ ಆ ಬಯಕೆಯನ್ನು ಅದುಮಿಹಿಡಿದು ಹಾಗೆ ಮಾಡದೆ ತನ್ನ ನಿರ್ಧಾರದಂತೆ ಎಲ್ಲವನ್ನೂ ತೊರೆದು ಸತ್ಯಾನ್ವೇಷಣೆಗಾಗಿ ತಪಸ್ಸನ್ನು ಕೈಗೊಳ್ಳಲು ಕಾಡಿಗೆ ಹೊರಟನು. ಆಗ ಗೌತಮನಿಗೆ ಇನ್ನೂ 29 ವರ್ಷ ವಯಸ್ಸು, ಹೀಗೆ ಕುದುರೆಯೇರಿ ಹೊರಟ ಗೌತಮನು ಅನೋಮ ನದಿಯ ದಂಡೆಯನ್ನು ತಲುಪಿದ ಮೇಲೆ, ತಾನು ಧರಿಸಿದ್ದ ಒಡವೆ ವಸ್ತ್ರಗಳೆಲ್ಲವನ್ನೂ ಚೆನ್ನದ ಕೈಗಿತ್ತು ಅವನನ್ನು ರಾಜಧಾನಿಗೆ ಹಿಂತಿರುಗುವಂತೆ ತಿಳಿಸಿದನು. ಇದರೊಂದಿಗೆ ಅವನ ಗೃಹಸ್ಥ ಜೀವನದ ಬಂಧನದ ಹಂತವು ಕೊನೆಗೊಂಡು ಮಾನವನಿಗೆ ಮುಕ್ತಿ ಮಾರ್ಗದ ದಾರಿತೋರಿಸಿ ಕೊಡುವ ಜೀವನದ ಮತ್ತೊಂದು ಹಂತವು ಆರಂಭವಾಯಿತು.

ಅರಮನೆಯ ವೈಭವ ಜೀವನವನ್ನು ತ್ಯಜಿಸಿ ತಪಸ್ಸಿಗೆ ಹೊರಟ ಗೌತಮನು ತನ್ನ ಸಂದೇಹಗಳಿಗೆ ಪರಿಹಾರ ಮಾರ್ಗಗಳನ್ನು ಕಂಡುಕೊಳ್ಳಲು ಮೊದಲು ಇಬ್ಬರು ಗುರುಗಳಲ್ಲಿ ಪ್ರಯತ್ನಿಸಿದನು. ರಾಜಗೃಹದಲ್ಲಿ ತಪಶ್ಚರ್ಯದಲ್ಲಿ ನಿರತರಾಗಿದ್ದ ಅಲಾರ ಮತ್ತು ಉದ್ರಕ ಎಂಬ ಇಬ್ಬರು ಗುರುಗಳನ್ನು ಭೇಟಿಮಾಡಿದನು. ಆದರೆ ಅವರ ವ್ಯಾಖ್ಯಾನಗಳಿಂದ ಅವನಿಗೆ ಸಮಾಧಾನಕರವಾದ ಉತ್ತರವು ದೊರೆಯದೆ ಅವನ ಮಾನಸಿಕ ಅಶಾಂತಿಯು ಮತ್ತಷ್ಟು ಹೆಚ್ಚಾಯಿತು. ಈ ಪರಿಸ್ಥಿತಿಯಲ್ಲಿ ಗೌತಮನು ತನ್ನದೇ ಆದ ಮಾರ್ಗವನ್ನು ಹಿಡಿದು ಮುಂದುವರಿದನು. ಅನಂತರ ಅವನು ಇಂದಿನ ಬೌದ್ಧಗಯೆಯ ಸಮೀಪದಲ್ಲಿರುವ ಉರುವೆಲ ಎಂಬ ಅರಣ್ಯದಲ್ಲಿ ಕಠಿಣ ತಪಸ್ಸಿಗೆ ಕುಳಿತನು. ಈ ಸಮಯದಲ್ಲಿ ಐವರು ಸಂನ್ಯಾಸಿಗಳು ಅವನ ಶಿಷ್ಯರಾಗಿ ಸೇರಿದರು. ಗೌತಮನು ಆಹಾರ ನಿದ್ರೆಗಳನ್ನು ಲೆಕ್ಕಿಸದೆ ಸುಮಾರು ಆರು ವರ್ಷಗಳು ಕಠಿಣ ತಪಸ್ಸು ಮಾಡಿದನು. ಆದರೆ ಇದರಿಂದಲೂ ಅವನಿಗೆ ಸರಿಯಾದ ಉತ್ತರವು ದೊರೆಯಲಿಲ್ಲ. ಆಹಾರ ನಿದ್ರೆಗಳಿಲ್ಲದ ಅವನು ಕೇವಲ ಎಲುಬುಗಳಿಂದ ಕೂಡಿದ ಅಸ್ಥಿಪಂಜರವಾದನು. ದೇಹದಂಡನೆಯಿಂದಲೂ ಅವನನ್ನು ಕಾಡುತ್ತಿದ್ದ ಸಮಸ್ಯೆಗೆ ಉತ್ತರವು ಸಿಗಲಿಲ್ಲ. ಕೊನೆಗೆ ಗೌತಮನು ಕಠಿಣ ತಪಸ್ಸನ್ನು ಕೈಬಿಟ್ಟು ಅರಣ್ಯದಲ್ಲಿ ಅಲೆದಾಡತೊಡಗಿದನು. ಹೀಗೆ ಅಲೆದಾಡುತ್ತಿರುವಾಗ ಒಂದು ದಿನ ಅರಣ್ಯದಲ್ಲಿದ್ದ

ದೇವರ ಪೂಜೆಗಾಗಿ ಹೋಗಿದ್ದ ಉರುವೆಲ ಗ್ರಾಮದ ವರ್ತಕನ ಮಗಳು ಸುಜಾತ ಎಂಬವಳು ನೀಡಿದ ಹಾಲನ್ನು ಸ್ವೀಕರಿಸಿ ಸೇವಿಸಿದನು. ಗೌತಮನ ಈ ವರ್ತನೆಯಿಂದ ಬೇಸರಗೊಂಡ ಅವನ ಶಿಷ್ಯರು ಅವನನ್ನು ಅಗಲಿಹೋದರು. ತರುವಾಯ ಗೌತಮನು ನಿರಂಜನ ನದಿಯಲ್ಲಿ ಸ್ನಾನಮಾಡಿ ಬೌದ್ಧಗೆಯೆಯ ಹತ್ತಿರವಿದ್ದ ಅಶ್ವಥ ವೃಕ್ಷದ ಕೆಳಗೆ ಧ್ಯಾನಾಸಕ್ತನಾಗಿ ಕುಳಿತನು. ಅವನಿಗೆ ಅದೇ ದಿವಸ ಜ್ಞಾನೋದಯವಾಯಿತು. ಅಂದಿನಿಂದ ಅವನು ಬುದ್ಧನೆಂದು ಕರೆಯಲ್ಪಟ್ಟನು. ಆ ವೃಕ್ಷವು ಬೋಧಿವೃಕ್ಷವೆಂದು ಕರೆಯಲ್ಪಟ್ಟಿತು. ಮಹಾಜ್ಞಾನವನ್ನು ಪಡೆದು ಬುದ್ಧನಾದ ಗೌತಮನು ಮೂರನೆ ದಿವಸ ತಪುಸ್ಸ ಮತ್ತು ಭಲ್ಲಿಕ ಎಂಬ ಇಬ್ಬರು ವರ್ತಕರು ನೀಡಿದ ಜೇನುತುಪ್ಪವನ್ನು ಸ್ವೀಕರಿಸಿದನು. ಮತ್ತು ಅವರ ಅಪೇಕ್ಷೆಯಂತೆ ಅವರನ್ನು ಶಿಷ್ಯರನ್ನಾಗಿ ಸ್ವೀಕರಿಸಿದನು.

ಮಾನವನ ದುಃಖಗಳಿಗೆ ಕಾರಣಗಳನ್ನೂ ಮತ್ತು ಅದರ ಪರಿಹಾರಕ್ಕೆ ಮಾರ್ಗವನ್ನು ಕಂಡುಹಿಡಿದ ಬುದ್ಧನು ತನ್ನ ದಿವ್ಯಸಂದೇಶವನ್ನು ಮಾನವ ಕೋಟಿಗೆ ತಿಳಿಯಪಡಿಸಲು ಉದ್ಯುಕ್ತನಾದನು. ಅವನು ಮೊಟ್ಟಮೊದಲಿಗೆ ತನ್ನ ಪ್ರಥಮ ಪ್ರವಚನವನ್ನು ಬೆನಾರಸ್ಸಿನ ಹರಿಣಗಳ ಉದ್ಯಾನವನ (Deer Park)ದಲ್ಲಿ ಆರಂಭಿಸಿದನು. ಈ ಸಂದರ್ಭದಲ್ಲಿ ಹಿಂದೆ ಅಗಲಿ ಹೋಗಿದ್ದ ಅವನ ಐವರು ಶಿಷ್ಯರು ಅವನನ್ನು ಭೇಟಿಯಾದರು ಮತ್ತು ಅವನ ಶಿಷ್ಯರಾದರು. ರಾಜಗೃಹದಲ್ಲಿದ್ದ ಸಂಜಯ ಎಂಬ ಸಂನ್ಯಾಸಿಯೊಬ್ಬನು ಸಾರಿಪುತ್ರ, ಮೊದ್ಗಲ್ಯಯಾಯಣ ಮತ್ತಿತರ ಅನುಯಾಯಿಗಳೊಂದಿಗೆ ಅವನ ಶಿಷ್ಯವೃಂದವನ್ನು ಸೇರಿದರು. ಬುದ್ಧನ ತಂದೆ ಶುದ್ಧೋದನನು ತನ್ನ ಮಗನನ್ನು ಕಪಿಲವಸ್ತುವಿಗೆ ಬರಮಾಡಿಕೊಂಡು ಅವನಿಗೆ ತಲೆಬಾಗಿ ವಂದಿಸಿದನು. ಅವನ ಹೆಂಡತಿ ಮತ್ತು ಚಿಕ್ಕಮ್ಮ ಅವನಶಿಷ್ಯರಾದರು. ಶಾಕ್ಯರ ನೂರಾರು ರಾಜರುಗಳು ಹಳದಿ ಬಟ್ಟೆಯನ್ನು ತೊಟ್ಟು ಸಂನ್ಯಾಸದೀಕ್ಷೆ ಕೈಗೊಂಡರು. ಅರಮನೆಯ ಹಡಪದವನ್ನೂ ಮತ್ತು ರಾಜನ ಉಡುಪುಗಳ ಮೇಲ್ವಿಚಾರಕನೂ ಆಗಿದ್ದ ಉಪಾಲಿಯು ತನ್ನ ಮನೆಯನ್ನು ತೊರೆದು ಬುದ್ಧನ ಅನುಯಾಯಿಯಾದನು. ಈ ರೀತಿಯಲ್ಲಿ ಬುದ್ಧನ ಅನುಯಾಯಿಗಳ ಸಂಖ್ಯೆಯು ದಿನೇ ದಿನೇ ಹೆಚ್ಚುತ್ತಾ ಹೋಯಿತು. ಬುದ್ಧನು ದೇಶದ ವಿವಿಧ ಭಾಗಗಳಲ್ಲಿ ಸಂಚರಿಸಿ ತನ್ನ ಧರ್ಮವನ್ನು ಪ್ರಸಾರಮಾಡಿ ಸಹಸ್ರಾರು ಸಂಖ್ಯೆಯಲ್ಲಿ ಜನರನ್ನು ತನ್ನ ಧರ್ಮಕ್ಕೆ ಪರಿವರ್ತಿಸಿದನು. ರಾಜರುಗಳು, ಸಮಾಜದಲ್ಲಿ ಗಣ್ಯಸ್ಥಾನಗಳನ್ನು ಪಡೆದಿದ್ದವರು ಧನಿಕ ವರ್ತಕರು ಮತ್ತಿತರು ಅವನ ಧರ್ಮಕ್ಕೆ ಸೇರಿದರು. ಆನಂದ ಎಂಬುವನು ಅವನ ಅಚ್ಚುಮೆಚ್ಚಿನ ಶಿಷ್ಯನಾಗಿದ್ದನು. ಶ್ರಾವಸ್ತಿಯ ಶ್ರೀಮಂತ ವರ್ತಕ ಸುದತ್ತನೆಂಬುವನು ಜೇತ ಎಂಬ ರಾಜಕುಮಾರನ ಉದ್ಯಾನವನ್ನು ಅಪಾರ ಹಣವನ್ನು ಕೊಟ್ಟು ಕೊಂಡುಕೊಂಡು ಬುದ್ಧನಿಗೆ ಒಪ್ಪಿಸಿದನು. ಬುದ್ಧನು ಅಂದಿನ ಭಾರತದ ಪ್ರಮುಖ ನಗರಗಳಾದ, ಬೆನಾರಸ್ ಮಗಧ, ರಾಜಗೃಹ, ವೈಶಾಲಿ, ಶ್ರಾವಸ್ತಿ, ಕೌಸಾಂಬಿ, ಪಾಟಲೀಪುತ್ರ ಮತ್ತು ಕಪಿಲವಸ್ತುಗಳಿಗೆ ಭೇಟಿ ನೀಡಿ ಧರ್ಮ ಪ್ರಸಾರ ಮಾಡಿದನು. ಬುದ್ಧನು ತನ್ನ ಧರ್ಮ ಪ್ರಸಾರಕ್ಕಾಗಿ ಅನೇಕ ಸಂಘಗಳನ್ನು ಸ್ಥಾಪಿಸಿದನು. ಅವನು ಸ್ಥಾಪಿಸಿದ ಮೊದಲ ಸಂಘದಲ್ಲಿ ಅರವತ್ತು ಜನ ಸಂನ್ಯಾಸಿಗಳಿದ್ದರು. ಮೊದಲಿಗೆ ಬುದ್ಧನು ಸ್ತ್ರೀಯರನ್ನು ಸಂಘಗಳಿಗೆ ಸೇರಿಸಲು ಅಸಮ್ಮತಿ ಸೂಚಿಸಿದನು. ಆದರೆ

ಅವನ ಚಿಕ್ಕಮ್ಮ ಮಹಾಪ್ರಜಾಪತಿ ಗೌತಮಿಯ ಹಾಗೂ ಆನಂದನ ಒತ್ತಾಯದ ಮೇರೆಗೆ ಸ್ತ್ರೀಯರೂ ಸಂಘಕ್ಕೆ ಸೇರಲು ಅನುಮತಿ ನೀಡಿದನು. ಇದರಿಂದಾಗಿ ಬೌದ್ಧ ಸಂನ್ಯಾಸಿನಿಯರ ಅಥವ ಭಿಕ್ಷುಣಿಯರಿಂದ ಕೂಡಿದ ಸಂಘವು ಅಸ್ತಿತ್ವಕ್ಕೆ ಬಂದಿತು. ದೈವ ಸ್ವರೂಪವಾದ ಬುದ್ಧನ ವ್ಯಕ್ತಿತ್ವ, ಮಾನವ ಕುಲದ ಬಗ್ಗೆ ಅವನಲ್ಲಿದ್ದ ಪ್ರೀತಿ ಮತ್ತು ಸಹಾನುಭೂತಿ, ಸರಳವೂ ಮತ್ತು ಅರ್ಥವತ್ತಾದ ರೀತಿಯ ಅವನ ಬೋಧನಾಕ್ರಮ. ಅವನ ಮತ್ತು ಅವನ ಶಿಷ್ಯರ ಹಾಗೂ ಭಿಕ್ಷುಣಿಯರ ಆದರ್ಶಯುತವಾದ ನಡೆನುಡಿಗಳು ಅವನ ಜೀವಿತ ಕಾಲದಲ್ಲಿಯೇ ಬೌದ್ಧ ಧರ್ಮವು ಒಂದು ಪ್ರಬಲ ಧರ್ಮವಾಗಿ ಬೆಳೆದು ಹರಡುವುದಕ್ಕೆ ಕಾರಣವಾದವು. ಆದರೆ ಬುದ್ಧನಿಗೂ ವಿರೋಧಿಗಳಿಲ್ಲದಿರಲಿಲ್ಲ. ಅವನ ಚಿಕ್ಕಪ್ಪನ ಮಗನಾದ ದೇವದತ್ತ ಎಂಬುವನು ಅವನನ್ನು ವಿರೋಧಿಸಿದ್ದಲ್ಲದೆ ಅವನನ್ನು ಕೊಲ್ಲುವುದಕ್ಕೂ ಸಂಚುನಡೆಸಿ ವಿಫಲನಾದನು. ಬುದ್ಧನು ಈ ರೀತಿಯಲ್ಲಿ ತಾನು ಪಡೆದ ಪರಮ ಜ್ಞಾನವನ್ನು ಸುಮಾರು ನಲವತ್ತೈದು ವರ್ಷಗಳ ಕಾಲ ನಿರಂತರವಾಗಿ ಬೋಧಿಸಿ ಕ್ರಿ.ಪೂ. 486ರಲ್ಲಿ ಇಂದಿನ ಬಿಹಾರದ ಗೋರಕಪುರ ಜಿಲ್ಲೆಯ ಕುಶಿನಾರ ಎಂಬಲ್ಲಿ, ವೈಶಾಖ ಪೂರ್ಣ ಹುಣ್ಣಿಮೆಯ (ಮೇ ತಿಂಗಳು) ದಿನ ನಿರ್ವಾಣ ಹೊಂದಿದನು, ಅವನ ಜನನ, ಜ್ಞಾನೋದಯ ಮತ್ತು ಸಾವು ಎಲ್ಲವೂ ಪೂರ್ಣ ಹುಣ್ಣಿಮೆಯ ದಿನ ಸಂಭವಿಸಿದವು. ಆದ್ದರಿಂದ ಆ ದಿನವು ಮೂರು ರೀತಿಯಲ್ಲೂ ಬೌದ್ಧರಿಗೆ ಪವಿತ್ರವಾದುದಾಗಿದೆ. ಬುದ್ಧನ ಶರೀರವನ್ನು ದಹನ ಮಾಡಿದ ನಂತರ ಅವನ ಚಿತಾಭಸ್ಮವನ್ನು ದೇಶದ ವಿವಿಧ ಭಾಗಗಳಿಗೆ ತೆಗೆದುಕೊಂಡು ಹೋಗಿ ಅದನ್ನು ಕುಂಭಗಳಲ್ಲಿಟ್ಟು ಹೂಳಿ ಅದರ ಮೇಲೆ ಸ್ತೂಪಗಳನ್ನು ನಿರ್ಮಿಸಲಾಯಿತು. ಇಂತಹ ಸ್ತೂಪಗಳು ನೇಪಾಳದ ಗಡಿಯಲ್ಲಿನ ಪಿಪ್ರವದಲ್ಲೂ, ತಕ್ಷಶಿಲೆ ಮತ್ತು ನಾಗಾರ್ಜುನಕೊಂಡಗಳಲ್ಲೂ ಭೂ ಸಂಶೋಧಕರಿಗೆ ದೊರೆತಿವೆ.

### ಬೌದ್ಧಮತದ ತತ್ವಗಳು

ಬೌದ್ಧ ಮತದ ತತ್ವಗಳು ಸರಳವೂ ಮತ್ತು ಸುಲಭವೂ ಆಗಿದ್ದು ಅವುಗಳು ಜನ ಸಾಮಾನ್ಯರಿಗೂ ಅರ್ಥವಾಗುವಂತಿದ್ದವು. ಬುದ್ಧನು ಮುಖ್ಯವಾಗಿ ನಾಲ್ಕು ತತ್ವಗಳನ್ನು ಬೋಧಿಸಿದನು. 1. ಪ್ರಪಂಚದಲ್ಲಿ ದುಃಖವಿದೆ. 2. ದುಃಖಕ್ಕೆ ಆಸೆಯೇ ಕಾರಣ, 3. ಆಸೆಯನ್ನು ಬಿಟ್ಟರೆ ದುಃಖವನ್ನು ಕೊನೆಗಾಣಿಸಬಹುದು. 4. ಅದಕ್ಕೆ ಇರುವ ಮಾರ್ಗವೆಂದರೆ ಅಷ್ಟಾಂಗಿಕ ಮಾರ್ಗ ಅಥವ ಅಷ್ಟವಿಧ ಮಾರ್ಗ. ಅವುಗಳೆಂದರೆ 1. ಸಮ್ಯಕ್ ದೃಷ್ಟಿ, ದುಃಖಕ್ಕೆ ಕಾರಣವನ್ನೂ ಮತ್ತು ಅದನ್ನು ಕೊನೆಗಾಣಿಸಲು ಇರುವ ಮಾರ್ಗವನ್ನು ಸರಿಯಾಗಿ ತಿಳಿದುಕೊಳ್ಳುವುದು ಸಮ್ಯಕ್ ದೃಷ್ಟಿ. 2. ಸಮ್ಯಕ್ ಸಂಕಲ್ಪ: ಪ್ರಪಂಚದ ಸುಖ ಭೋಗಗಳು ರಾಗದ್ವೇಷ ಲೋಭ, ಮದ, ಮಾತ್ಸರ್ಯಗಳನ್ನು ತೊರೆದು ನಿರ್ವಾಣ ಶಾಂತಿಯನ್ನು ಪಡೆಯಲು ಸ್ಥಿರ ಸಂಕಲ್ಪ ಮಾಡುವುದು. ಸಮ್ಯಕ್ ಸಂಕಲ್ಪ. 3. ಸಮ್ಯಕ್ ವಚನ. ಆಡುವ ಮಾತಿನಲ್ಲಿ ಕಪಟತನವಿರಬಾರದು. ಮತ್ತು ಆಡುವ ಮಾತಿನಿಂದ ಇತರರ ಮನಸ್ಸಿಗೆ ನೋವುಂಟಾಗಬಾರದು. ಚಾಡಿಹೇಳುವಿಕೆಯಿಂದ ಇತರರಿಗೆ ಅನ್ಯಾಯ ಮತ್ತು ಕೆಡುಕು ಉಂಟಾಗುತ್ತದೆ. ಆದ್ದರಿಂದ ಆಡುವ ಮಾತಿನಲ್ಲಿ ಸತ್ಯವನ್ನು ಉಳಿಸಿಕೊಂಡು ಹಿತವಾದ

ಮತ್ತು ಮಿತವಾದ ಮಾತುಗಳನ್ನಾಡುವುದು ಸಮ್ಯಕ್ ವಚನ, 4. ಸಮ್ಯಕ್ ಜೀವನ: ಯಾವ ಸಂದರ್ಭದಲ್ಲೂ ಹೀನ ಕೆಲಸವನ್ನು ಮಾಡದೆ ತನಗೂ ಮತ್ತು ಸಮಾಜಕ್ಕೂ ಕೆಡಕುಂಟಾಗದಂತೆ ಉತ್ತಮ ರೀತಿಯಲ್ಲಿ ಜೀವನ ನಡೆಸುವುದು ಸಮ್ಯಕ್ ಜೀವನ. 5. ಸಮ್ಯಕ್ ಕರ್ಮ: ಮಾಡುವ ಕೆಲಸ ಒಳ್ಳೆಯದಾಗಿರಬೇಕು. ಕೊಲ್ಲದಿರುವುದು ಕಳ್ಳತನ ಮಾಡದಿರುವುದು, ವಿಷಯ ಲೋಲುಪನಾಗದಿರುವುದು ಮದ್ಯಮಾಂಸಗಳನ್ನು ಸೇವಿಸದಿರುವುದು ಮೊದಲಾದವುಗಳು ಸಮ್ಯಕ್ ಕರ್ಮ, 6. ಸಮ್ಯಕ್ ವ್ಯಾಯಾಮ: ಸದಾ ಜಾಗರೂಕತೆ, ದಿವ್ಯಧ್ಯಾನ, ಸದ್ಭಾವನೆಯನ್ನು ಮನಸ್ಸಿನಲ್ಲಿ ನೆಲೆಗೊಳಿಸಿಕೊಂಡು ಕೆಟ್ಟ ವಿಚಾರಗಳು ಮನಸ್ಸಿನೊಳಗೆ ಸುಳಿಯದಂತೆ ನೋಡಿಕೊಳ್ಳುವುದು ಸಮ್ಯಕ್ ವ್ಯಾಯಮ 7. ಸಮ್ಯಕ್ ಸ್ಮೃತಿ: ಕೆಟ್ಟ ಆಲೋಚನೆಗಳನ್ನು ದೂರವಿಡುವುದು ಸಮ್ಯಕ್ ಸ್ಮೃತಿ. 8. ಸಮ್ಯಕ್ ಸಮಾಧಿ: ಮೋಕ್ಷ ಅಥವಾ ನಿರ್ವಾಣ ಸಾಧಕನು ಈ ಮೇಲೆ ಹೇಳಿರುವ ಏಳು ಮಾರ್ಗಗಳನ್ನು ಸರಿಯಾಗಿ ಪಾಲಿಸಿಕೊಂಡು ಬಂದು ಎಂಟನೇ ಹಂತವಾದ ಈ ಹಂತದಲ್ಲಿ ಭವ ಬಂಧನದಿಂದ ಜೀವನ್ಮುಕ್ತನಾಗಿ ಶಾಶ್ವತವಾದ ಶಾಂತಿಯನ್ನು ಪಡೆಯುವುದು ಸಮ್ಯಕ್ ಸಮಾಧಿ. ಇದಕ್ಕೆ ನಿರ್ವಾಣವೆಂದೂ ಕರೆಯುತ್ತಾರೆ. ನಿರ್ವಾಣವೆಂದರೆ ಜನನ ಮರಣಗಳ ಸಂಕೋಲೆಯಿಂದ, ಸುಖದುಃಖಗಳಿಂದ ರೋಗರುಜಿನಗಳಿಂದ ಮುಕ್ತವಾದ ಆನಂದಮಯ ಸ್ಥಿತಿ.

**2. ಕರ್ಮತತ್ವ:** ಬುದ್ಧನೂ ಕೂಡ ವರ್ಧಮಾನನಂತೆ ಕರ್ಮ ಮತ್ತು ಪುನರ್ಜನ್ಮಗಳಲ್ಲಿ ನಂಬಿಕೆಯಿಟ್ಟಿದ್ದನು. 3. ನಿರೀಶ್ವರವಾದ. ಬುದ್ಧನು ದೇವರಿರುವನೆಂದಾಗಲೀ ಅಥವ ಇಲ್ಲವೆಂದಾಗಲೀ ಯಾವುದನ್ನೂ ಸ್ಪಷ್ಟವಾಗಿ ಹೇಳಿರುವುದಿಲ್ಲ. ಅವನು ತನ್ನ ಅನುಯಾಯಿಗಳಿಗೆ ಸದ್ಗುಣ ಮತ್ತು ಸತ್‌ಚಾರಿತ್ರ್ಯದಿಂದ ಕೂಡಿದ ಜೀವನವನ್ನು ನಡೆಸುವಂತೆ ಕರೆಕೊಟ್ಟನು. ಗುಣ ಮತ್ತು ನೈತಿಕ ಜೀವನದ ಬಗ್ಗೆ ಒತ್ತಿ ಹೇಳಿದನು. ಮೋಕ್ಷ ಸಾಧನೆಗಾಗಿ ದೇಹ ದಂಡನೆಯಿಂದ ಕೂಡಿದ ಕಠಿಣ ನಿಯಮಗಳನ್ನು ಯಾರೂ ಅನುಸರಿಸಬೇಕಾಗಿಲ್ಲವೆಂದು ತಿಳಿಸಿದನು. ಆದರೆ ಅವರು ಭೋಗಾಸಕ್ತ ಜೀವನದಿಂದ ದೂರವಿರಬೇಕೆಂತಲೂ ಮತ್ತು ಶಿಸ್ತು ಸಂಯಮಗಳಿಂದ ಕೂಡಿದ ಜೀವನ ನಡೆಸಬೇಕೆಂದು ಆದೇಶ ನೀಡಿದನು. ಬೌದ್ಧಮತದಲ್ಲಿ ಗೃಹಸ್ಥರು ಕೂಡ ಅನುಸರಿಸಲು ಅನುಕೂಲವಾದ ನಿಯಮಗಳಿವೆ. ಅದೆಂದರೆ, ಮಧ್ಯಮಮಾರ್ಗ: ಬೌದ್ಧಮತವನ್ನು ಅನುಸರಿಸುವ ಗೃಹಸ್ಥರನ್ನು ಉಪಾಸಕರು, ಗೃಹಿಣಿಯರನ್ನು ಉಪಾಸಿಕರು ಎಂದು ಕರೆಯುತ್ತಾರೆ. ಬೌದ್ಧ ಸಂನ್ಯಾಸಿಗಳನ್ನು ಆಚಾರ್ಯ, ಭಿಕ್ಷು, ಥೇರಾ ಎಂದು ಕರೆಯುತ್ತಾರೆ. ಬುದ್ಧನು ಬೌದ್ಧ ಮತಾನುಯಾಯಿಗಳಿಗೆ ಸಹನೆ, ಧರ್ಮ, ಸತ್ಯ ಮತ್ತು ಅಹಿಂಸಾ ತತ್ವಗಳನ್ನು ತಪ್ಪದೆ ಪಾಲಿಸಬೇಕೆಂದು ತಿಳಿಸಿದನು. 4. ಧರ್ಮದ ಬಗೆಗೆ ವೇದಗಳ ಪರಮಾಧಿಕಾರವನ್ನು ಬುದ್ಧನು ನಿರಾಕರಿಸಿದನು. ಪೂಜೆ ಪುರಸ್ಕಾರಗಳನ್ನೂ, ಯಜ್ಞಯಾಗಾದಿಗಳನ್ನೂ, ವ್ರತಾಚರಣೆಗಳನ್ನು ಮತ್ತು ಧರ್ಮದ ಮೇಲೆ ಬ್ರಾಹ್ಮಣ ಪುರೋಹಿತರು ಹೊಂದಿದ್ದ ಏಕಸ್ವಾಮ್ಯತೆಯನ್ನು ಖಂಡಿಸಿದನು. ಪ್ರಾರ್ಥನೆಗಳಿಂದಾಗಲೀ, ಯಜ್ಞಯಾಗಾದಿಗಳನ್ನು ಮಾಡುವುದರಿಂದಾಗಲೀ ಮೋಕ್ಷವು ದೊರೆಯದೆಂದೂ, ಅದಕ್ಕೆ ಇರುವ ಮಾರ್ಗವೆಂದರೆ ಶುದ್ಧ ಪ್ರಾಮಾಣಿಕ ಜೀವನ ನಡೆಸುವುದೆಂದು ಸ್ಪಷ್ಟವಾಗಿ

ಹೇಳಿದನು. ಬೌದ್ಧಮತವು ಒಳ್ಳೆಯ ನಡತೆ ಮತ್ತು ಉನ್ನತ ಮಟ್ಟದ ನೈತಿಕತೆಯ ಧರ್ಮವಾಗಿರುತ್ತದೆ. ಇದರಲ್ಲಿ ಪೌರೋಹಿತ್ಯಕ್ಕೆ ಸ್ಥಾನವಿರುವುದಿಲ್ಲ. ಮೇಲಾಗಿ ಬೌದ್ಧಮತವು ಜಾತಿಮತಗಳ ಮೇಲು ಕೀಳೆಂಬ ಭೇಧ ಭಾವನೆಯಿಲ್ಲದೆ (egalitarian) ಮಾನವ ಸಮಾನತೆಯನ್ನು ಬೋಧಿಸಿದ ಧರ್ಮಗಳಲ್ಲಿ ವಿಶ್ವದಲ್ಲೇ ಮೊಟ್ಟಮೊದಲನೆಯದಾಗಿದೆ. ಬೌದ್ಧಮತವು ಯಾವುದೇ ಒಂದು ವರ್ಗದ ಇಲ್ಲವೇ ಜಾತಿಯ ಹಾಗೂ ಯಾವುದೇ ಒಂದು ವೃತ್ತಿಯ ಜನಗಳಿಗೆ ಸೀಮಿತವಾಗಿರಲಿಲ್ಲ. ಇದರಲ್ಲಿ ಎಲ್ಲರಿಗೂ ಸಮಾನ ಅವಕಾಶವಿದ್ದಿತು. ಈ ದಿಸೆಯಲ್ಲಿ ಬುದ್ಧನು ಜಾತೀಯತೆಯ ಕಟ್ಟುಪಾಡುಗಳನ್ನು ವಿರೋಧಿಸಿ ಸಮಾಜಸುಧಾರಣೆಗೂ ಪ್ರಯತ್ನಿಸಿದ್ದಲ್ಲದೆ ಮುಂದೆ ಸಮಾಜ ಸುಧಾರಣೆಯನ್ನು ತೀವ್ರವಾಗಿ ಕೈಗೊಂಡ ಬಸವೇಶ್ವರ ಮೊದಲಾದ ಸಮಾಜ ಸುಧಾರಕರಿಗೆ ಮಾರ್ಗದರ್ಶನ ಹಾಕಿಕೊಟ್ಟನು.

### ಧಾರ್ಮಿಕ ಸಂಘಗಳು

ಗೌತಮ ಬುದ್ಧನು ಮಹಾ ಚಿಂತನಕಾರನೂ ಮತ್ತು ಧಾರ್ಮಿಕ ನಾಯಕನಾಗಿದ್ದುದಲ್ಲದೆ ಒಳ್ಳೆಯ ಸಂಘಟಕನೂ ಮತ್ತು ಸಂಘ ಸಂಸ್ಥೆಗಳ ವ್ಯವಸ್ಥಾಪಕನೂ ಆಗಿದ್ದನು. ಅವನು ಸ್ಥಾಪಿಸಿದ ಭಿಕ್ಷುಗಳ ಮತ್ತು ಭಿಕ್ಷುಣಿಯರ ಸಂಘಗಳು ಅವನ ವ್ಯವಸ್ಥಾ ಸಾಮರ್ಥ್ಯಕ್ಕೆ ಉತ್ತಮ ನಿದರ್ಶನಗಳಾಗಿವೆ. ಅವನ ಪ್ರಾಮಾಣಿಕತೆ ಜೀವಿಗಳ ಬಗ್ಗೆ ಸಹಾನುಭೂತಿ, ವಿನಮ್ರಭಾವನೆ ಮತ್ತು ವಾಕ್ಚಾತುರ್ಯ, ಆಕರ್ಷಕ ವ್ಯಕ್ತಿತ್ವವು, ರಾಜರುಗಳನ್ನೂ ಮತ್ತು ಜನಸಾಮಾನ್ಯರನ್ನೂ ಬೌದ್ಧಮತದ ಕಡೆ ಆಕರ್ಷಿಸಿತು. ಬಡವರು ದುರ್ಬಲರು ಹಾಗೂ ವ್ಯಾಧಿಗ್ರಸ್ತರ ಬಗ್ಗೆ ಅವನಲ್ಲಿದ್ದ ಅನುಕಂಪ ಮತ್ತು ದಯೆ ಮೊದಲಾದ ಗುಣಗಳಲ್ಲಿ ಅವನು ಏಸುಕ್ರಿಸ್ತನಂತಿದ್ದನು. ಬುದ್ಧ ಮತ್ತು ಏಸುಕ್ರಿಸ್ತರಿಬ್ಬರೂ ಶಾಂತಿ ಸಂದೇಶದ ದೂತರಾಗಿದ್ದರು. ಬುದ್ಧನು ಕಾಲವಾದ ಮೇಲೆ ಅವನ ಶಿಷ್ಯರು ಹೆಚ್ಚಿನ ಉತ್ಸಾಹ ಶ್ರದ್ಧೆ ಮತ್ತು ಆಸಕ್ತಿಯಿಂದ ಬೌದ್ಧಮತವನ್ನು ದೇಶವಿದೇಶಗಳಲ್ಲಿ ಪ್ರಸಾರಮಾಡಿದರು. ಕಟ್ಟುನಿಟ್ಟಾದ ಶಿಸ್ತಿನ ನಿಯಮಗಳಿಂದ ಕೂಡಿದ್ದ ಬೌದ್ಧ ಸಂಘಗಳು ಬುದ್ಧನ ಸುವಾರ್ತೆಯ ಸಂದೇಶದ ಜ್ಯೋತಿಯನ್ನು ದೇಶವಿದೇಶಗಳಲ್ಲಿ ಬೆಳಗಿಸುವುದರಲ್ಲಿ ಪ್ರಮುಖ ಪಾತ್ರವಹಿಸಿದವು.

### ಬೌದ್ಧರ ಸಭೆಗಳು

ಬುದ್ಧನು ಕಾಲವಾದ ಕೆಲವು ಸಮಯದಲ್ಲಿಯೇ ಬೌದ್ಧರ ಪ್ರಥಮ ಸಮ್ಮೇಳನವನ್ನು ಮಹಾಕಸ್ಸಪ ಎಂಬವನು ರಾಜಗೃಹದಲ್ಲಿ ಸಮಾವೇಶಗೊಳಿಸಿದನು. ಬುದ್ಧನ ಉಪದೇಶಗಳನ್ನು ಸಂಗ್ರಹಿಸಿ ಅವುಗಳನ್ನು ಗ್ರಂಥಗಳರೂಪದಲ್ಲಿ ಹೊರತರುವುದು, ಭಿಕ್ಷುಗಳು ಮತ್ತು ಭಿಕ್ಷುಣಿಯರಿಗೆ ಮಾರ್ಗದರ್ಶನವಾದ ನಿಯಮಗಳನ್ನು ರೂಪಿಸುವುದು ಇದರ ಮುಖ್ಯ ಉದ್ದೇಶವಾಗಿತ್ತು. ಆನಂದ ಮತ್ತು ಉಪಾಲಿ ಈ ಸಭೆಯ ಚರ್ಚೆಗಳಲ್ಲಿ ಭಾಗವಹಿಸಿದ್ದರು. ಬೌದ್ಧಮತದ ಪವಿತ್ರ ಸಾಹಿತ್ಯ ಕೃತಿಗಳಾದ ಸುತ್ತ ಪಿಟಕ, ವಿನಯ ಪಿಟಕ ಮತ್ತು ಅಭಿದಮ್ಮ ಪಿಟಕಗಳ ರಚನೆಯು ಆರಂಭವಾಯಿತು. ಸುತ್ತ ಪಿಟಕದಲ್ಲಿ ಬುದ್ಧನ ಬೋಧನೆಗಳೂ ವಿನಯ

ಪಿಟಕದಲ್ಲಿ ಬೌದ್ಧ ಸಂನ್ಯಾಸಿಗಳ ನಡವಳಿಕೆ ಹಾಗೂ ಬೌದ್ಧ ಸಂಘಗಳಿಗೆ ಸಂಬಂಧಿಸಿದ ನಿಯಮಗಳು ಅಡಕವಾಗಿವೆ. ಬೌದ್ಧ ಧರ್ಮೀಯರಿಗೆ ತ್ರಿಪಿಟಕಗಳು ಮತ್ತು ಸಂಘಗಳು ಮುಖ್ಯವಾದವು. ಪ್ರತಿಯೊಬ್ಬ ಬೌದ್ಧ ಮತಾವಲಂಭಿಯೂ ಬೌದ್ಧರ ಗಾಯಿತ್ರಿ ಮಂತ್ರಗಳಾದ ಬುದ್ಧಂ ಶರಣಂ ಗಚ್ಛಾಮಿ, ಸಂಘಂ ಶರಣಂ ಗಚ್ಛಾಮಿ, ಧರ್ಮಂ ಶರಣಂ ಗಚ್ಛಾಮಿ ಎಂಬ ಸೂತ್ರಗಳನ್ನು ಪ್ರತಿದಿನವೂ ಪಠಿಸಬೇಕು. ಇವುಗಳನ್ನು ತ್ರಿಪಿಟಕಗಳು (ತ್ರಿರತ್ನ) ಎಂದು ಕರೆಯುತ್ತಾರೆ.

ಕಾಲವು ಉರುಳಿದಂತೆಲ್ಲಾ ಸಂಘಗಳಲ್ಲಿನ ಶಿಸ್ತಿನ ಬಗ್ಗೆ ಭಿನ್ನಾಭಿಪ್ರಾಯಗಳು ತಲೆದೋರಿದವು. ವೈಶಾಲಿಯಲ್ಲಿದ್ದ ಬೌದ್ಧ ಸಂನ್ಯಾಸಿಗಳು ಸಂನ್ಯಾಸಾಶ್ರಮಗಳಲ್ಲಿನ ಶಿಸ್ತಿನ ಕಠಿಣ ನಿಯಮಗಳನ್ನು ವಿರೋಧಿಸಿದರು. ಈ ವಿರೋಧವನ್ನು ಬಗೆಹರಿಸಲೋಸುಗ ವೈಶಾಲಿಯಲ್ಲಿ ಎರಡನೇ ಬೌದ್ಧ ಸಮ್ಮೇಳನವನ್ನು ಸಮಾವೇಶಗೊಳಿಸಲಾಯಿತು. ಈ ಸಭೆಯು ಬುದ್ಧನು ನಿರ್ವಾಣ ಹೊಂದಿದ ಸುಮಾರು ಒಂದು ಶತಮಾನದ ನಂತರ ಸಮಾವೇಶಗೊಂಡಿತ್ತು. ಈ ಸಭೆಯು ಬೌದ್ಧ ಭಿಕ್ಷುಗಳ ಮತ್ತು ಸಂನ್ಯಾಸಿಗಳ ಅಶಿಸ್ತನ್ನು ಖಂಡಿಸಿದ್ದಲ್ಲದೆ ತಪ್ಪು ಮಾಡಿದ ಸಂನ್ಯಾಸಿಗಳ ಬಗ್ಗೆ ಕ್ರಮವನ್ನು ಕೈಗೊಂಡಿತು. ಮೂರನೆ ಬೌದ್ಧ ಸಮ್ಮೇಳನವು ಅಶೋಕ ಚಕ್ರವರ್ತಿಯ ಕಾಲದಲ್ಲಿ ಅವನ ರಾಜಧಾನಿಯಾಗಿದ್ದ ಪಾಟಲೀಪುತ್ರದಲ್ಲಿ ಮೊಗ್ಗಲಿಪುತ್ತಟಿಸ್ಸ ಎಂಬವನ ಅಧ್ಯಕ್ಷತೆಯಲ್ಲಿ ಸಮಾವೇಶಗೊಂಡಿತು. ಈ ಸಮಯಕ್ಕಾಗಲೇ ಬೌದ್ಧಧರ್ಮೀಯರಲ್ಲಿ ಆಚರಣೆಗೆ ಬಂದಿದ್ದ ಪದ್ಧತಿಗಳನ್ನು ತೀವ್ರವಾಗಿ ಖಂಡಿಸಿ ಅವುಗಳನ್ನು ಕೈಬಿಡುವಂತೆ ಕರೆಕೊಡಲಾಯಿತು. ಅಲ್ಲದೆ ಬುದ್ಧನ ಬೋಧನೆಗಳನ್ನು ನಿಷ್ಠೆಯಿಂದ ಪಾಲಿಸಿಕೊಂಡು ಹೋಗುವಂತೆ ತಿಳಿಸಲಾಯಿತು. ಮೇಲಾಗಿ ಅಶೋಕನು ಬೌದ್ಧ ಧರ್ಮದಲ್ಲಿ ಹೆಚ್ಚಿನ ಆಸಕ್ತಿ ಹೊಂದಿದ್ದು ಅದನ್ನು ವಿಶ್ವದ ಪ್ರಮುಖ ಧರ್ಮಗಳಲ್ಲೊಂದನ್ನಾಗಿ ಮಾಡಲು ಅನೇಕ ಕಾರ್ಯಕ್ರಮಗಳನ್ನು ರೂಪಿಸಿಕೊಂಡನು. ಅಶೋಕನು ಬೌದ್ಧಧರ್ಮ ಪ್ರಸಾರಕ್ಕಾಗಿ ದೇಶವಿದೇಶಗಳಿಗೆ ಅನೇಕ ಭಿಕ್ಷುಗಳನ್ನು ಕಳುಹಿಸಲು ವ್ಯವಸ್ಥೆ ಮಾಡಿದನು. ಬುದ್ಧನ ತತ್ವೋಪದೇಶಗಳನ್ನು ಕಲ್ಲು ಬಂಡೆಗಳ ಮೇಲೆ ಮತ್ತು ಸ್ತೂಪಗಳ ಮೇಲೆ ಕೆತ್ತಿಸಿ ಅದನ್ನು ಜನಪ್ರಿಯಗೊಳಿಸಿದನು. ನಾಲ್ಕನೆ ಬೌದ್ಧ ಸಮ್ಮೇಳನವು ಕುಶಾನರ ಚಕ್ರವರ್ತಿ ಕಾನಿಷ್ಕನ ಕಾಲದಲ್ಲಿ ಕಾಶ್ಮೀರದ ಶ್ರೀನಗರದಲ್ಲಿ ಕ್ರಿ.ಶ.ಒಂದನೇ ಶತಮಾನದಲ್ಲಿ ಸಮಾವೇಶಗೊಂಡಿತ್ತು. ವಸುಬಂಧು ಎಂಬ ಘನ ವಿದ್ವಾಂಸನು ಈ ಸಮ್ಮೇಳನದ ಅಧ್ಯಕ್ಷತೆ ವಹಿಸಿದ್ದನು. ಈ ವೇಳೆಗಾಗಲೇ ಬೌದ್ಧ ಧರ್ಮೀಯರಲ್ಲಿ ತೀವ್ರವಾದ ಒಡಕುಂಟಾಗಿದ್ದು ಹೀನಯಾನ ಮತ್ತು ಮಹಾಯಾನ ಎಂಬ ಎರಡು ಪಂಥಗಳು ಅಸ್ತಿತ್ವಕ್ಕೆ ಬಂದಿದ್ದವು.

**ಬೌದ್ಧ ಧರ್ಮದಲ್ಲಿ ಒಡಕು**

ಜೈನಧರ್ಮೀಯರಂತೆ ಬೌದ್ಧಧರ್ಮೀಯರಲ್ಲೂ ಕಾಲಾನುಕ್ರಮದಲ್ಲಿ ಅನೇಕ ರೀತಿಯ ವ್ರತಾಚರಣೆಗಳು ಆಚರಣೆಗೆ ಬಂದು ಅವರಲ್ಲೂ ಒಡಕು ಕಂಡುಬಂದಿತು. ಆಗಾಗ್ಗೆ ಸಮಾವೇಶಗೊಂಡಿದ್ದ ಬೌದ್ಧ ಸಮ್ಮೇಳನಗಳಲ್ಲಿ ನಡೆದ ಚರ್ಚೆಗಳಿಂದ ಬೌದ್ಧ ಧರ್ಮೀಯರಲ್ಲಿದ್ದ ವಿರೋಧ ಪ್ರವೃತ್ತಿಗಳು ವ್ಯಕ್ತಪಟ್ಟವು. ಬೌದ್ಧ ಮತವು

ಕಾಲಾನುಕ್ರಮದಲ್ಲಿ ಹಿಂದೂ ಧರ್ಮದ ಪ್ರಭಾವಕ್ಕೊಳಗಾಯಿತು. ಏಕದೇವತಾರಾಧನೆ, ಬಹು ದೇವತಾರಾಧನೆ. ವಿಗ್ರಹಪೂಜೆ ಮತ್ತು ದೇವಾಲಯಗಳಲ್ಲಿ ನಡೆಸಲಾಗುತ್ತಿದ್ದ ಸಂಪ್ರದಾಯ ಮತ್ತು ವ್ರತಾಚರಣೆಗಳಿಗೆ ಹೊಂದಿಕೊಂಡಿದ್ದ ಭಾರತೀಯರ ಬಲವಾದ ನಂಬಿಕೆಗಳ ವಿರುದ್ಧ ಬೌದ್ಧಧರ್ಮವು ಸಂಘಟಿತ ಧರ್ಮವಾಗಿ ಮುಂದುವರಿಯುವುದು ಕಷ್ಟವಾಗಿ ಕಂಡುಬಂದಿತು. ಇದರಿಂದಾಗಿ ಬೌದ್ಧಧರ್ಮೀಯರಲ್ಲಿ ಒಡಕುಂಟಾಯಿತು. ಬುದ್ಧನು ತನ್ನ ಅನುಯಾಯಿಗಳಿಗೆ ತನ್ನನ್ನು ದೇವರೆಂದು ಪರಿಗಣಿಸಕೂಡದೆಂದು ತಿಳಿಸಿದ್ದನು. ಆದರೆ ಕಾಲಾನುಕ್ರಮದಲ್ಲಿ ಬೌದ್ಧಧರ್ಮೀಯರು ಬುದ್ಧನನ್ನು ಮತ್ತು ಬೋಧಿಸತ್ವರನ್ನೂ ದೇವರೆಂದು ಪೂಜಿಸತೊಡಗಿದರು. ವಿಗ್ರಹಾರಾಧನೆಗೆ ಅವಕಾಶವೇ ಇಲ್ಲದಿದ್ದ ಬೌದ್ಧ ಧರ್ಮದಲ್ಲಿ ವಿಗ್ರಹಾರಾಧನೆಯೂ ರೂಢಿಗೆ ಬಂದಿತು. ಹಿಂದೂಧರ್ಮೀಯರ ಪೂಜಾವಿಧಾನಗಳು ಜಾರಿಗೆ ಬಂದವು. ಇದರಿಂದಾಗಿ ಬೌದ್ಧ ಧರ್ಮೀಯರಲ್ಲಿ ಹೀನಯಾನ ಮತ್ತು ಮಹಾಯಾನ ಎಂಬ ಎರಡು ಪಂಥಗಳು ಹುಟ್ಟಿಕೊಂಡವು. ಬುದ್ಧನ ತತ್ವಗಳನ್ನು ಮತ್ತು ಸಂಘಗಳ ನಿಯಮಗಳನ್ನು ಚಾಚೂತಪ್ಪದೆ ಅನುಸರಿಸಿದವರು ಹೀನಯಾನ ಪಂಥೀಯರೆಂದೂ, ಇದಕ್ಕೆ ವಿರುದ್ಧವಾಗಿ ಹಿಂದೂಧರ್ಮದ ಆಚರಣೆಗಳನ್ನು ಅಳವಡಿಸಿಕೊಂಡವರು ಮಹಾಯಾನ ಪಂಥೀಯರೆಂದು ಕರೆಯಲ್ಪಟ್ಟರು. ಮಹಾಯಾನ ಪಂಥದ ತತ್ವಗಳು ಕಾನಿಷ್ಕನ ಕಾಲದಲ್ಲಿ ರೂಪುಗೊಂಡವು. ನಾಗಾರ್ಜುನ, ಅಸಂಗ, ಆರ್ಯದೇವ ಮತ್ತು ವಸುಬಂಧು ಮಹಾಯಾನ ಪಂಥದ ವ್ಯಾಖ್ಯಾನಕಾರರೂ ಮತ್ತು ಪ್ರತಿಪಾದಕರೂ ಆಗಿದ್ದರು.

ಹೀನಯಾನ ಮತ್ತು ಮತಾಯಾನಪಂಥದವರ ನಡುವಿನ ಭಿನ್ನಾಭಿಪ್ರಾಯಗಳು ಸುಸ್ಪಷ್ಟವಾಗಿದ್ದವು. 1. ಹೀನಯಾನ ಪಂಥದವರು ಸತ್ಕರ್ಮಗಳನ್ನು ಒತ್ತಿಹೇಳಿದರು. ಇದರಲ್ಲಿ ವಿಗ್ರಹಾರಾಧನೆ, ಮಂತ್ರೋಚ್ಚಾರಣೆ ಸಂಪ್ರದಾಯ ಆಚರಣೆಗಳಿಗೆ ಸ್ಥಾನವಿರುವುದಿಲ್ಲ. ಮಹಾಯಾನ ಪಂಥದವರು ಬುದ್ಧನನ್ನು ದೇವರಸ್ಥಾನಕ್ಕೇರಿಸಿ ಅವನನ್ನು ಪೂಜಿಸುವ ಪದ್ಧತಿಯನ್ನು ಆಚರಣೆಗೆ ತಂದು ಬುದ್ಧ (ಅವಲೋಕಿತೇಶ್ವರ) ಮತ್ತು ಭೋಧಿಸತ್ವರನ್ನು ಪೂಜಿಸತೊಡಗಿದರು. 2. ಹೀನಯಾನ ಪಂಥದವರು ಪಾಳೀ ಭಾಷೆಯನ್ನು ತಮ್ಮ ಧರ್ಮ ಪ್ರಚಾರಕ್ಕೂ ಕೃತಿಗಳ ರಚನೆಗೂ ಉಪಯೋಗಿಸಿದರೆ ಮಹಾಯಾನ ಪಂಥದವರು ಸಂಸ್ಕೃತ ಭಾಷೆಯನ್ನು ಉಪಯೋಗಿಸಿದರು. 3. ಹೀನಯಾನ ಪಂಥದವರು ಮೋಕ್ಷ ಅಥವಾ ನಿರ್ವಾಣವು ವ್ಯಕ್ತಿಗತವಾದುದೆಂದು ಅದು ಅವನು ಮಾಡುವ ಕೆಲಸಗಳನ್ನು ಅವಲಂಬಿಸಿರುತ್ತವೆಯೆಂದು ತಿಳಿಸಿದರು. ಆದರೆ ಮಾಹಾಯಾನ ಪಂಥವು ಎಲ್ಲರಿಗೂ ಮೋಕ್ಷವನ್ನು ದೊರಕಿಸಿಕೊಡುವುದನ್ನು ತನ್ನ ಗುರಿಯನ್ನಾಗಿ ಹೊಂದಿತ್ತು. 4. ಮಹಾಯಾನ ಪಂಥದವರು ವೈಧಿಕ ಧರ್ಮದ ತಾತ್ವಿಕ ವಿಚಾರಗಳು, ನಿರ್ವಾಣದ ಬಗೆಗಿದ್ದ ಕಲ್ಪನೆ ಹಾಗೂ ವಿಚಾರಗಳಿಂದ ಪ್ರಭಾವಿತರಾಗಿದ್ದರು. ಕೊನೆಯದಾಗಿ, ವೈಧಿಕ ಧರ್ಮದಲ್ಲಿ ಅನುಸ್ಠಾನಕ್ಕೆ ಬಂದ ಕ್ಲಿಷ್ಟಕರವಾದ ಆಚರಣೆಗಳಿಂದ ಮೋಕ್ಷಕ್ಕೆ ದಾರಿಕಾಣದ ಒಂದು ಸಂದಿಗ್ಧ ಪರಿಸ್ಥಿತಿಯಲ್ಲಿ ಬೌದ್ಧ ಧರ್ಮವು ಅದಕ್ಕೆ ಒಂದು ಸವಾಲಾಗಿ ಉದಯಿಸಿತು. ಹೀನಯಾನಪಂಥದವರು ಬುದ್ಧನ ಮೂಲಭೂತ, ಉಪದೇಶಗಳನ್ನು ಜೀವಂತವಾಗಿರಿಸಲು ಪ್ರಯತ್ನಿಸಿದರು.

ಆದರೆ ಮಹಾಯಾನ ಪಂಥದವರು ಕ್ರಿ.ಶ. ಒಂದನೇ ಶತಮಾನದ ನಂತರ ಮತ್ತೊಮ್ಮೆ ಪುನಶ್ಚೇತನಗೊಂಡ ವೈದಿಕ ಧರ್ಮಕ್ಕನುಸಾರವಾಗಿ ತಮ್ಮ ತತ್ತ್ವೋಪದೇಶಗಳಲ್ಲೂ ಮತ್ತು ನಂಬಿಕೆಗಳಲ್ಲೂ ಸೂಕ್ತ ಬದಲಾವಣೆಗಳನ್ನು ಮಾಡಿಕೊಂಡು ಬೌದ್ಧ ಧರ್ಮದ ಜ್ಯೋತಿಯು ನಂದಿಹೋಗದಂತೆ ನೋಡಿಕೊಂಡರು.

**ಬೌದ್ಧ ಮತದ ಅವನತಿಗೆ ಕಾರಣಗಳು**

ಬೌದ್ಧಮತವು ಅವನತಿ ಹೊಂದಲು ಅನೇಕ ಕಾರಣಗಳಿದ್ದವು. ಅವುಗಳಲ್ಲಿ ಮೊದಲನೆಯದು, ಬುದ್ಧನು ಕಾಲವಾದ ಮೇಲೆ ಅವನಷ್ಟೇ ಪ್ರಭಾವಶಾಲಿಯಾದ ವ್ಯಕ್ತಿಯಿಲ್ಲದಿದ್ದದ್ದುದು ಅದರ ಅವನತಿಗೆ ಕಾರಣವಾಗಿತ್ತು. ಬೌದ್ಧಮತದ ಜನಪ್ರಿಯತೆಗೆ ಬುದ್ಧನ ವ್ಯಕ್ತಿತ್ವವು ಕಾರಣವಾಗಿತ್ತು. ಆದರೆ ಅವನ ತರುವಾಯ ಆ ಧರ್ಮದ ನಾಯಕರಾದವರು ಆ ವ್ಯಕ್ತಿತ್ವಕ್ಕೆ ಬಹಳ ದೂರವಿದ್ದರು. ಬುದ್ಧನು ಗೊತ್ತುಪಡಿಸಿದ್ದ ಸಾಂಘಿಕ ನಿಯಮಗಳನ್ನು ಬೌದ್ಧ ಸಂಘಗಳು ಪಾಲಿಸುವುದರಲ್ಲಿ ಅನಾದರಣೆ ತೋರಿಸಿದವು. ಇದರಿಂದಾಗಿ ಬೌದ್ಧ ಸಂಘಗಳ ಬಗೆಗಿದ್ದ ಗೌರವ ಮತ್ತು ಪೂಜ್ಯಭಾವನೆಗಳು ಕಡಿಮೆಯಾದವು. ಎರಡನೆಯದಾಗಿ ಬೌದ್ಧ ಭಿಕ್ಷುಗಳಲ್ಲಿ ಧರ್ಮದ ಬಗೆಗಿನ ಧಾರ್ಮಿಕ ಉತ್ಸಾಹ ಮತ್ತು ನಿಸ್ವಾರ್ಥ ಮನೋಭಾವನೆಗಳು ಕಡಿಮೆಯಾಗುತ್ತಾ ಬಂದು, ಭಿಕ್ಷುಗಳು ಸೋಮಾರಿಗಳೂ, ವಿಷಯಲಂಪಟರೂ ಹಾಗೂ ಲೌಕಿಕ ಜೀವನದಲ್ಲಿ ಆಸಕ್ತಿಯುಳ್ಳವರೂ ಆಗಿ ಧರ್ಮದ ಅವನತಿಗೆ ಕಾರಣವಾದರು. ಮೂರನೆಯದಾಗಿ, ಶುಂಗರು ಮತ್ತು ಕಣ್ವಸಂತತಿಯ ದೊರೆಗಳು ವೈದಿಕ ಮತಕ್ಕೆ ನೀಡಿದ ಪ್ರೋತ್ಸಾಹದಿಂದ ಹಿಂದೂ ಧರ್ಮವು ಪುನಶ್ಚೇತಗೊಂಡು ಬೌದ್ಧ ಮತದ ಅವನಿತಿಗೆ ಕಾರಣವಾಯಿತು. ಪುನಶ್ಚೇತನಗೊಂಡ ವೈದಿಕ ಮತವು ಬೌದ್ಧ ಮತದ ದೌರ್ಬಲ್ಯವನ್ನು ಪೂರ್ಣವಾಗಿ ಉಪಯೋಗಿಸಿ ಕೊಂಡಿತು. ಬೌದ್ಧ ಧರ್ಮವು ಸರಳ ಧರ್ಮವಾಗಿದ್ದು ಅದರಲ್ಲಿ ಪುರೋಹಿತರಾಗಲೀ, ವಿಗ್ರಹಾರಾಧನೆಗಾಗಲೀ, ಉತ್ಸವ ಸಮಾರಂಭಗಳಿಗಾಗಲೀ ಅವಕಾಶವಿಲ್ಲದಿದ್ದುದರಿಂದ, ಇವುಗಳನ್ನೆಲ್ಲಾ ಇಚ್ಛಿಸುತ್ತಿದ್ದ ಜನಗಳನ್ನು ತನ್ನ ಕಡೆ ಆಕರ್ಷಿಸುವುದರಲ್ಲಿ ಹೆಚ್ಚು ಯಶಸ್ವಿಯಾಗಲಿಲ್ಲ. ಪೂಜೆ ಪುರಸ್ಕಾರಗಳಲ್ಲಿ ಅಪಾರ ನಂಬಿಕೆಯನ್ನಿಟ್ಟಿದ್ದ ಜನರಿಗೆ ಪೂಜಿಸಲು ಯಾವುದಾದರೂ ಒಂದು ವಿಗ್ರಹ ಅಥವಾ ವಸ್ತುವು ಬೇಕಾಗಿದ್ದಿತು. ಮಹಾಯಾನ ಪಂಥದವರು ವಿಗ್ರಹಾರಾಧನೆಯನ್ನು ಆರಂಭಿಸಿದ ಮೇಲೆ ಬೌದ್ಧಮತವೂ ಹಿಂದೂ ಧರ್ಮದ ಹಾದಿಯಲ್ಲೇ ಮುಂದುವರಿಯುತ್ತಿದೆಯೆಂದೂ ಜನರು ಭಾವಿಸತೊಡಗಿದರು. ಕರ್ಮ ಮತ್ತು ಪುನರ್ಜನ್ಮಗಳ ತತ್ವಗಳನ್ನು ಉಪನಿಷತ್ತುಗಳಿಂದ ತೆಗೆದುಕೊಂಡ ಬೌದ್ಧ ಮತವು ಕಾಲಾನುಕ್ರಮದಲ್ಲಿ ಹಿಂದೂಗಳ ಪೂಜಾವಿಧಾನಗಳನ್ನು ಅನುಕರಣೆ ಮಾಡಿತು. ನಾಲ್ಕನೆಯದಾಗಿ, ಬೌದ್ಧ ಧರ್ಮವು ಉಪನಿಷತ್ತುಗಳಲ್ಲಿನ ದಾರ್ಶನಿಕ ತತ್ವಗಳನ್ನು ಮೀರಿಸುವಂತಹ ತತ್ವಗಳನ್ನು ಕೊಡಲಾಗಲಿಲ್ಲ. ಬುದ್ಧನ ಹಲವಾರು ಬೋಧನೆಗಳಿಗೆ ಉಪನಿಷತ್ತುಗಳು ಮೂಲಧಾರವಾಗಿದ್ದವು. ಬೌದ್ಧ ಧರ್ಮದ ನೀತಿ ನಿಯಮಗಳಲ್ಲಿ ಆಧ್ಯಾತ್ಮಿಕತೆಯ ಅಭಾವವು ಕಂಡುಬರುತ್ತಿದ್ದ ಸನ್ನಿವೇಶದಲ್ಲಿ ಹಿಂದೂ ಧರ್ಮದ ಪ್ರತಿಪಾದಕರಾದ ಕುಮಾರಿಲ ಭಟ್ಟ ಮತ್ತು ಶಂಕರಾಚಾರ್ಯರಿಂದ ವೈದಿಕ ಧರ್ಮವು

ಪುನರುಜ್ಜೀವನಗೊಂಡು ಬೌದ್ಧ ಧರ್ಮದ ಅಡಿಪಾಯವನ್ನೇ ಅಲುಗಾಡಿಸಿತು. ಐದನೆಯದಾಗಿ ಬೌದ್ಧ ಧರ್ಮವು ಪ್ರತಿಪಾದಿಸಿದ ನಿರಾಶವಾದವೂ ಅದರ ಅವನತಿಗೆ ಕಾರಣವಾಗಿತ್ತು. ಆರನೆಯದಾಗಿ ಅಶೋಕ ಮತ್ತು ಕಾನಿಷ್ಕ ಮೊದಲಾದ ದೊರೆಗಳು ತೋರಿಸಿದ್ದ ಪ್ರೋತ್ಸಾಹ ಕಾಲನುಕ್ರಮದಲ್ಲಿ ಅದಕ್ಕೆ ಇಲ್ಲದೆ ಹೋದುದು ಅದರ ಅವನತಿಗೆ ಮತ್ತೊಂದು ಕಾರಣವಾಯಿತು. ಸುಂಗ, ವಾಕಾಟಕ ಮತ್ತು ಗುಪ್ತ ಸಂತತಿಯ ದೊರೆಗಳು ಹಿಂದೂ ಧರ್ಮಕ್ಕೆ ತೋರಿಸಿದ ವಿಶೇಷ ಪ್ರೋತ್ಸಾಹವು ಬೌದ್ಧ ಧರ್ಮದ ಅವನತಿಯನ್ನು ತೀವ್ರಗೊಳಿಸಿತು. ಏಳನೆಯದಾಗಿ, ವಿದೇಶಿಯರ ಧಾಳಿಗಳು ಬೌದ್ಧ ಧರ್ಮದ ಮುಂದುವರಿಯುವಿಕೆಗೆ ಬಲವಾದ ಏಟು ಕೊಟ್ಟವು. ಕ್ರಿ.ಶ.ಐದನೆ ಶತಮಾನದಲ್ಲಿ ಭಾರತದ ಮೇಲೆ ಹೂಣರು ಮಾಡಿದ ಧಾಳಿಯಿಂದ ಬೌದ್ಧಧರ್ಮೀಯರು ಅಪಾರ ನಷ್ಟವನ್ನು ಹೊಂದಿದರು. ಹಲವಾರು ಬೌದ್ಧ ಸಂನ್ಯಾಸಿಗಳನ್ನು ಕ್ರೂರಿಗಳಾದ ಹೂಣರು ಕೊಂದು ಹಾಕಿದರು. ಅವರ ಆಶ್ರಮಗಳನ್ನು ಮತ್ತು ಗ್ರಂಥ ಭಂಡಾರಗಳನ್ನು ಸುಟ್ಟು ಹಾಕಿದರು. ಕ್ರಿ.ಶ. ಹನ್ನೆರಡನೇ ಶತಮಾನದಲ್ಲಿ ಬೌದ್ಧ ಧರ್ಮವು ಬಂಗಾಳ ಮತ್ತು ಬಿಹಾರಗಳಿಂದ ಹೊರದೂಡಲ್ಪಟ್ಟಿತು. ಪಾಲ ಸಂತತಿಯ ದೊರೆಗಳು ಹಿಂದೂ ಮತಕ್ಕೆ ಪ್ರೋತ್ಸಾಹ ನೀಡಿದರು. ಹಾಗೆಯೇ ಬಿಹಾರದಲ್ಲಿ ಮುಂದಿನ ಶತಮಾನಗಳಲ್ಲಿ ಬೌದ್ಧ ಧರ್ಮೀಯರ ಮೇಲೆ ಮುಸಲ್ಮಾನರು ಎಸಗಿದ ಕ್ರೂರ ಕೃತ್ಯಗಳು ಬೌದ್ಧ ಧರ್ಮಕ್ಕೆ ಅಲ್ಲಿ ದೊಡ್ಡ ಆಘಾತವನ್ನುಂಟುಮಾಡಿದವು. ಈ ರೀತಿಯ ಹಲವಾರು ಕಾರಣಗಳಿಂದ ಬೌದ್ಧ ಧರ್ಮವು ಭಾರತದಲ್ಲಿ ಅವನತಿಯನ್ನು ಹೊಂದಿತು. ಆದಾಗ್ಯೂ ಬೌದ್ಧ ಧರ್ಮವು ತನಗೆ ಜನ್ಮವಿತ್ತ ಭಾರತ ದೇಶದಿಂದ ಸಂಪೂರ್ಣವಾಗಿ ಕಣ್ಮರೆಯಾಯಿತೆಂದು ಅಭಿಪ್ರಾಯ ಪಡುವುದು ಸರಿಯಲ್ಲ. ಬೌದ್ಧ ಸಂಘಗಳಲ್ಲಿನ ಒಡಕು ಮಹಾಯಾನ ಪಂಥದ ಯಶಸ್ಸು ಮೊದಲಾದ ಅಂಶಗಳು ಬೌದ್ಧ ಧರ್ಮವು ಕಾಲಾನುಕ್ರಮದಲ್ಲಿ ಹಿಂದೂ ಧರ್ಮದಲ್ಲಿ ವಿಲೀನಗೊಳ್ಳಲು ಅವಕಾಶವಾಗಿ ಅದರ ಹಲವಾರು ಅಂಶಗಳು ಹಿಂದೂ ಧರ್ಮದಲ್ಲಿ ಬೆರತು ಹೋದವು. ಬೌದ್ದ ಧರ್ಮವೂ ಕೂಡ ಹಿಂದೂ ಧರ್ಮದ ಮೇಲೆ ಸಾಕಷ್ಟು ಪ್ರಭಾವ ಬೀರಿರುವುದನ್ನು ಯಾರೂ ತಳ್ಳಿಹಾಕುವಂತಿಲ್ಲ. ಬೌದ್ಧ ಧರ್ಮೀಯರು ಹಿಂದೂ ಧರ್ಮದಿಂದ ಆಸ್ತಿಕತೆಯನ್ನೂ, ವಿಗ್ರಹಾರಾಧನೆಯನ್ನೂ ಹಾಗೂ ವೈದಿಕ ಧರ್ಮದ ಭಾಷೆಯಾದ ಸಂಸ್ಕೃತ ಭಾಷೆಯನ್ನು ಅನುಕರಣೆ ಮಾಡಿದರೆ ಹಿಂದೂಗಳು ಮಹಾತ್ಮ ಬುದ್ಧನ ಅಮರ ಸಂದೇಶವಾದ ಅಹಿಂಸಾತತ್ವವನ್ನು ತಮ್ಮ ಧರ್ಮದಲ್ಲಿ ಅಳವಡಿಸಿಕೊಂಡರು ಮತ್ತು ಬುದ್ಧನನ್ನೂ ಕೂಡ ವಿಷ್ಣುವಿನ ಅವತಾರಗಳಲ್ಲಿ ಒಂದೆಂದು ಪರಿಗಣಿಸಿ ಪೂಜಿಸತೊಡಗಿದರು.

## ಬೌದ್ಧ ಧರ್ಮದ ಕೊಡುಗೆಗಳು

**ಸಾಹಿತ್ಯ**

ಬೌದ್ಧ ಮತವು ಭಾರತದ ಸಂಸ್ಕೃತಿಗೆ ಶ್ಲಾಘನೀಯ ಕೊಡುಗೆಗಳನ್ನಿತ್ತಿದೆ. ಮೊದಲನೆಯದಾಗಿ ಸಾಹಿತ್ಯ ಕ್ಷೇತ್ರಕ್ಕೆ ಬೌದ್ಧ ಮತೀಯರು ನೀಡಿರುವ ಕೊಡುಗೆಗಳು ಮಹತ್ವ ಪೂರ್ಣವಾಗಿವೆ. ಬೌದ್ಧ ಧರ್ಮೀಯರು ತಮ್ಮ ಧರ್ಮದ ಬಗ್ಗೆ ದೇಶೀಯ

ಮತ್ತು ವಿದೇಶೀಯ ಭಾಷೆಗಳಲ್ಲಿ ವಿಪುಲವಾಗಿ ಕೃತಿಗಳನ್ನು ರಚಿಸಿ ಸಾಹಿತ್ಯ ಕ್ಷೇತ್ರಕ್ಕೆ ಅಪಾರ ಸೇವೆ ಸಲ್ಲಿಸಿದ್ದಾರೆ. ಪಾಳೀ, ಮಾಗಧಿ, ಮತ್ತಿತರ ಭಾಷೆಗಳಲ್ಲಿ ಭಾರತದಲ್ಲಿ ಧಾರ್ಮಿಕ ಸಾಹಿತ್ಯವು ರಚಿಸಲ್ಪಟ್ಟಿತು. ಬುದ್ಧನ ಬೋಧನೆಗಳನ್ನು, 'ತ್ರಿಪಿಟಕ' ಎಂಬ ಗ್ರಂಥಗಳಲ್ಲಿ ಸಂಗ್ರಹಿಸಿ ನೀಡಲಾಗಿದೆ. ಅವುಗಳೆಂದರೆ, 1. ವಿನಯ ಪಿಟಕ, 2. ಸುತ್ತ ಪಿಟಕ, 3. ಅಭಿದಮ್ಮಪಿಟಕ. ತ್ರಿಪಿಟಕ ಎಂದರೆ ಮೂರು ಬುಟ್ಟಿಗಳು ಎಂದರ್ಥ. ಈ ಮೂರು ಗ್ರಂಥಗಳ ಸಮೂಹವು ಬೌದ್ಧ ದರ್ಶನದ ಆಧಾರ ಗ್ರಂಥಗಳಾಗಿವೆ.

ಧಾರ್ಮಿಕ ಸಾಹಿತ್ಯಕ್ಕೆ ಹೊಂದಿಕೊಂಡಂತೆ ಬೌದ್ಧ ವಿದ್ವಾಂಸರು ಕೆಲವು ವ್ಯಾಖ್ಯಾನ ಕೃತಿಗಳನ್ನು ಮತ್ತು ಟಿಪ್ಪಣಿಗಳನ್ನು ರಚಿಸಿರುವರು. ಇವುಗಳಲ್ಲಿ ಮಿಳಿಂದಪನ್ನ, ನೆಟ್ಟಿಪಕರಣ ಮತ್ತು ಪಿಟಕೋಪದೇಶ ಮೊದಲಾದ ಕೃತಿಗಳು ಹೆಸರುವಾಸಿಯಾದವುಗಳು. ಮಿಳಿಂದಪನ್ನ ಕೃತಿಯು ಗ್ರೀಕರ ದೊರೆ ಮಿಳಿಂದನಿಗೂ ಮತ್ತು ನಾಗಸೇನ ಎಂಬ ಬೌದ್ಧ ಭಿಕ್ಷುವಿಗೂ ನಡೆದ ಸಂಭಾಷಣೆಯ ವಿಷಯಗಳನ್ನೊಳಗೊಂಡಿದೆ. ನೆಟ್ಟಿಪಕರಣವು ಬುದ್ಧನ ಬೋಧನೆಗಳನ್ನು ಕ್ರಮಬದ್ಧವಾಗಿ ತಿಳಿಸುವ ಕೃತಿಯಾಗಿದೆ. ಪಿಟಕೋಪ ದೇಶವು ಪಿಟಕಗಳ ಅಧ್ಯಯನಕ್ಕೆ ಮಾರ್ಗದರ್ಶನ ಮಾಡುತ್ತದೆ. ಕ್ರಿ.ಶ.ಐದನೆ ಶತಮಾನದಲ್ಲಿ ಸಿಲೋನಿನಲ್ಲಿ ಜೀವಿಸಿದ್ದ ಬುದ್ಧಘೋಷ ಎಂಬುವನು ಪಾಳೀ ಭಾಷೆಯಲ್ಲಿನ ತ್ರಿಪಿಟಕಗಳ ಮೇಲೆ ವ್ಯಾಖ್ಯಾನಗಳನ್ನು ಬರೆದನು. ಇವನು ರಚಿಸಿರುವ 'ವಿಶುದ್ಧಿ ಮಗ್ಗ' ಎಂಬ ಕೃತಿಯು ಅತ್ಯಂತ ಮಹತ್ವಪೂರ್ಣ ಕೃತಿಯಾಗಿದೆ. ಬುದ್ಧದತ್ತ, ಆನಂದ, ಧಮ್ಮಪಾಲ, ಉಪಸೇನ, ಕಸ್ಸಪ, ಧಮ್ಮಸಿರಿ ಮತ್ತು ಮಹಾಸಾಮಿ ಎಂಬುವರು ಪ್ರಸಿದ್ಧ ವ್ಯಾಖ್ಯಾನಕಾರರಾಗಿದ್ದರು. ದೀಪವಂಶ ಮತ್ತು ಮಹಾವಂಶ ಎಂಬ ಕೃತಿಗಳು ಸಿಲೋನಿನಲ್ಲಿರುವ ಪಾಳೀಭಾಷೆಯ ಎರಡು ಐತಿಹಾಸಿಕ ಕೃತಿಗಳಾಗಿವೆ. ದೀಪವಂಶದ ಕರ್ತೃವು ಯಾರೆಂಬುದು ಇನ್ನೂ ತಿಳಿದು ಬಂದಿಲ್ಲ. ಮಹಾವಂಶವನ್ನು ಕ್ರಿ.ಶ.ಐದನೆ ಶತಮಾನದಲ್ಲಿ ಮಹಾನಮ ಎಂಬುವನು ರಚಿಸಿದನೆಂದು ಹೇಳಲಾಗಿದೆ.

ಬೌದ್ಧ ವಿದ್ವಾಂಸರು ಸಂಸ್ಕೃತ ಸಾಹಿತ್ಯದ ಬೆಳವಣಿಗೆಗೂ ವಿಶೇಷ ಸೇವೆ ಸಲ್ಲಿಸಿದ್ದಾರೆ. ಮಹಾಯಾನ ಪಂಥದವರ ಧಾರ್ಮಿಕ ಸಾಹಿತ್ಯವು ಸಂಸ್ಕೃತ ಭಾಷೆಯಲ್ಲಿದೆ. ಮಹಾಯಾನ ಪಂಥದ ಸಂಸ್ಕೃತ ಬರಹಗಾರರ ಪ್ರತಿಭಾ ಶಕ್ತಿಗೆ ಬುದ್ಧನ ಜೀವನ ಚರಿತ್ರೆಯನ್ನು ಕುರಿತು ತಿಳಿಸುವ 'ಲಲಿತ ವಿಸ್ತಾರ' ಎಂಬ ಕೃತಿಯು ಉತ್ತಮ ನಿದರ್ಶನವಾಗಿದೆ. ಮಹಾಯಾನ ಪಂಥದವರ ಧಾರ್ಮಿಕ ಕೃತಿಗಳನ್ನು 'ವೈಪುಲ್ಯಸೂತ್ರ'ಗಳೆಂದು ಕರೆಯುತ್ತಾರೆ. ಲಲಿತ ವಿಸ್ತಾರ 'ಪ್ರಜ್ಞಾಪರಿಮಿತ', 'ಸದ್ಧರ್ಮ ಪುಂಡರಿಕ' ಕೃತಿಗಳು ಪ್ರಸಿದ್ಧ ವೈಪುಲ್ಯಸೂತ್ರ ಕೃತಿಗಳಾಗಿವೆ. ಬೌದ್ಧಧರ್ಮದ ಉದ್ದಾಮಪಂಡಿತನಾದ ನಾಗಾರ್ಜುನನು 'ಶಟಸಹಸ್ರಿಕ', ಪ್ರಜ್ಞಾಪರಿಮಿತ ಮತ್ತು ಮಾಧ್ಯಮಿಕ ಸೂತ್ರಗಳು ಎಂಬ ಪ್ರಸಿದ್ಧ ಕೃತಿಗಳನ್ನು ರಚಿಸಿರುವನು. ಆರ್ಯದೇವ ಎಂಬವನು ಮತ್ತೊಬ್ಬ ಬರಹಗಾರನಾಗಿದ್ದನು. ಅಸಂಗನು 'ಮಹಾಯಾನ ಸೂತ್ರಾಲಂಕಾರ'ವನ್ನೂ ಅವನ ಸೋದರವಸುಬಂಧು 'ಅಭಿದಮ್ಮಕೋಶ'ವನ್ನೂ

ರಚಿಸಿರುವನು. ದಿನ್ನಾಗ, ಚಂದ್ರ ಗೋಮಿನ್ ಮತ್ತು ಶಾಂತಿದೇವ ಎಂಬುವರು ಘನ ವಿದ್ವಾಂಸರಾಗಿದ್ದರು. ಪೌರಾಣಿಕ ಸಾಹಿತ್ಯ ಕೃತಿಗಳ ರಚನೆಯಲ್ಲಿ ಅಶ್ವಘೋಷನ ಹೆಸರು ಪ್ರಸಿದ್ಧಿಯಾಗಿದೆ. ಇವನನ್ನು ವಾಲ್ಮೀಕಿ ಮೊದಲಾದ ಶ್ರೇಷ್ಠ ಬರಹಗಾರರಿಗೆ ಹೋಲಿಸಲಾಗಿದೆ. ಬುದ್ಧಚರಿತ, ಸೌಂದರಾನಂದಕಾವ್ಯ, ಸೂತ್ರಾಲಂಕಾರ ಮತ್ತು ಮಹಾಯಾನ ಶ್ರದ್ಧೋತ್ಪಾದ ಎಂಬ ಕೃತಿಗಳು ಇವನ ಪ್ರಸಿದ್ಧ ಕೃತಿಗಳಾಗಿವೆ.

**ವಾಸ್ತು ಶಿಲ್ಪ, ಶಿಲ್ಪ ಕಲೆ ಮತ್ತು ಚಿತ್ರಕಲೆ**

ಬೌದ್ಧಮತವು ಭಾರತದ ವಾಸ್ತುಶಿಲ್ಪ, ಶಿಲ್ಪಕಲೆ ಮತ್ತು ಚಿತ್ರಕಲೆಗೆ ಅಮೋಘವಾದ ಕೊಡುಗೆಗಳನ್ನು ಸಲ್ಲಿಸಿದೆ. ಬೌದ್ಧಮತವು ಏಳಿಗೆ ಹೊಂದುವುದಕ್ಕೆ ಮುಂಚೆ ಕಲೆಯು ಧರ್ಮದ ಅಡಿಯಾಳಾಗಿದ್ದಿತು. ಇದರಿಂದಾಗಿ ವೈದಿಕ ಯುಗದಲ್ಲಿ ವಾಸ್ತುಶಿಲ್ಪವು ಯಜ್ಞಯಾಗಾದಿಗಳನ್ನು ಮಾಡಲು ಯಜ್ಞ ವೇದಿಕೆಗಳನ್ನು ನಿರ್ಮಿಸುವುದಕ್ಕೆ ಮಿತಿಗೊಂಡಿತ್ತು. ಆದರೆ ಬೌದ್ಧ ಮತದ ಏಳಿಗೆಯಿಂದ ಧಾರ್ಮಿಕ ಸ್ವರೂಪವಾದ ಕಟ್ಟಡಗಳ ನಿರ್ಮಾಣಕ್ಕೆ ಪ್ರೇರಣೆಯು ದೊರೆಕಿತು. ಬೌದ್ಧಮತದ ಏಳಿಗೆಯಿಂದಾಗಿ ಕಲೆಯ ವಿವಿಧ ಮುಖಗಳಾದ ವಾಸ್ತುಶಿಲ್ಪ. ಶಿಲ್ಪಕಲೆ ಮತ್ತು ವರ್ಣಚಿತ್ರಕಲೆಯು ಏಳಿಗೆ ಹೊಂದಿದವು. ಬೌದ್ಧಭಿಕ್ಷುಗಳಿಗೆ ವಸತಿ ಸೌಕರ್ಯಗಳನ್ನು ಕಲ್ಪಿಸಿಕೊಡುವ ಸಲುವಾಗಿ ದೇಶದಾದ್ಯಂತ ವಿಹಾರಗಳು ನಿರ್ಮಿತವಾದವು. ಗುಹಾಂತರ್ದೇವಾಲಯಗಳ ಸ್ತೂಪಗಳ ಮತ್ತು ವಿಹಾರಗಳ ನಿರ್ಮಾಣವು ಬೌದ್ಧರಿಂದ ಆರಂಭವಾಯಿತು. ಬೌದ್ಧವಿಹಾರಗಳು, ಸ್ತೂಪಗಳು ದೇವಾಲಯಗಳು ಮತ್ತಿತರ ಸ್ಮಾರಕಗಳ ಮೇಲೆ ಬುದ್ಧನ ಮತ್ತು ಬೋಧಿಸತ್ವರ ಜೀವನಕ್ಕೆ ಸಂಬಂಧಿಸಿದ ನಾನಾ ಭಂಗಿಯ ಸುಂದರ ವಿಗ್ರಹಗಳು ಕೆತ್ತಲ್ಪಟ್ಟು ಶಿಲ್ಪಕಲೆಗೆ ಪ್ರೋತ್ಸಾಹವು ದೊರಕಿತು. ಸಾಂಚಿ, ಬರ್‌ಹತ್, ಕನ್ಹೇರಿ, ಕಾರ್ಲೆ, ನಾಸಿಕ್, ಅಮರಾವತಿ, ನಾಗಾರ್ಜುನಕೊಂಡ ಮೊದಲಾದ ಸ್ಥಳಗಳಲ್ಲಿರುವ ಗುಹಾಂತರ್ದೇವಾಲಯಗಳು ಹಾಗೂ ಅಶೋಕ ಚಕ್ರವರ್ತಿಯು ನಿರ್ಮಿಸಿದ ಶಿಲಾಸ್ಥಂಭಗಳು ಬೌದ್ಧರ ವಾಸ್ತುಶಿಲ್ಪಕಲಾ ಕೌಶಲಕ್ಕೆ ಸಾಕ್ಷಿಯಾಗಿವೆ. ಭಾರತದಲ್ಲಿ ಹೆಲನಿಕ್ ಅಥವ ಗ್ರೀಕ್ ಸಂಸ್ಕೃತಿಯ ಪ್ರಸಾರದಿಂದಾಗಿ ಭಾರತೀಯ ಕಲೆಯು ಪ್ರಭಾವಗೊಂಡು ಗ್ರೀಕ್ ಮಾದರಿಯಲ್ಲಿ ಬುದ್ಧನ ವಿಗ್ರಹಗಳನ್ನು ಕೆತ್ತಲಾಗಿರುವುದನ್ನು ಗಾಂಧಾರ ಶಿಲ್ಪಕಲೆಯಲ್ಲಿ ನೋಡಬಹುದಾಗಿದೆ. ಬುದ್ಧನ ಮತ್ತು ಬೋಧಿಸತ್ವರ ಜೀವನವನ್ನು ಶಿಲ್ಪಕಲೆಯಲ್ಲೇ ಅಲ್ಲದೆ ವರ್ಣಚಿತ್ರಕಲೆಯಲ್ಲೂ ವ್ಯಕ್ತಪಡಿಸಲಾಗಿದೆ. ಅಜಂತ, ಬಾಗ್, ಸಿಗಿರಿಯ ಮೊದಲಾದ ಕಡೆಗಳಲ್ಲಿರುವ ಗುಹೆಗಳಲ್ಲಿ ಬೌದ್ಧರ ವರ್ಣಚಿತ್ರಕಲೆಯನ್ನು ಈಗಲೂ ನೋಡಿ ಆನಂದಿಸಬಹುದಾಗಿದೆ.

ಬೌದ್ಧಮತವು ಬೌದ್ಧಿಕ ಸ್ವಾತಂತ್ರ್ಯಕ್ಕೆ ಪ್ರೋತ್ಸಾಹ ನೀಡಿತು. ವೇದಗಳು ಮತ್ತು ಪುರೋಹಿತರ ಧಾರ್ಮಿಕ ಪರಮಾಧಿಕಾರವನ್ನು ಮತ್ತು ಕ್ಲಿಷ್ಟವಾದ ವ್ರತಾಚರಣೆಗಳನ್ನು ಖಂಡಿಸಿ ಜನರಲ್ಲಿ ವಿಚಾರ ಶಕ್ತಿಯು ಬೆಳೆಯುವಂತೆ ಮಾಡಿತು. ಇದರ ಪರಿಣಾಮವಾಗಿ ದಾರ್ಶನಿಕ ಶಾಸ್ತ್ರಕ್ಕೆ ಸಂಬಂಧಿಸಿದಂತೆ ದಾರ್ಶನಿಕರು ಸ್ವತಂತ್ರವಾಗಿ ವಿಚಾರ ಮಾಡಿ ದಾರ್ಶನಿಕ ಜಗತ್ತಿಗೆ ಮೂಲಭೂತ ಕೊಡುಗೆಗಳನ್ನು ಸಲ್ಲಿಸಿದರು. ಅವರಲ್ಲಿ ಅಶ್ವಘೋಷ, ನಾಗರ್ಜುನ, ಧರ್ಮಕೀರ್ತಿ ಮತ್ತು ವಸುಬಂಧು ಹೆಚ್ಚು ಪ್ರಸಿದ್ಧರಾದವರು.

ಕೊನೆಯದಾಗಿ ಬೌದ್ಧ ಮತವು ಭಾರತದ ಪ್ರತ್ಯೇಕತೆಯನ್ನು ಕೊನೆಗಾಣಿಸಿ ಹೊರ ದೇಶಗಳೊಂದಿಗೆ ಧಾರ್ಮಿಕ ಮತ್ತು ಸಾಂಸ್ಕೃತಿಕ ಸಂಪರ್ಕವು ಬೆಳೆಯುವಂತೆ ಮಾಡಿತು. ಅಶೋಕ, ಕಾನಿಷ್ಕ ಮೊದಲಾದ ಚಕ್ರವರ್ತಿಗಳಿಂದ ಹೊರದೇಶಗಳಲ್ಲಿ ಬೌದ್ಧಧರ್ಮವನ್ನು ಪ್ರಸಾರ ಮಾಡಲು ಕಳುಹಿಸಲ್ಪಟ್ಟ ಬೌದ್ಧ ಭಿಕ್ಷುಗಳು ಧರ್ಮಪ್ರಸಾರದ ಜೊತೆಗೆ ಭಾರತದ ಸಂಸ್ಕೃತಿಯನ್ನೂ ಚೀನಾ, ಕೊರಿಯ, ಮಂಗೋಲಿಯ, ಜಪಾನ್, ಬರ್ಮಾ, ಸಿಲೋನ್, ಆಗ್ನೇಯ ಏಷ್ಯಾ ರಾಜ್ಯಗಳು ಹಾಗೂ ಮಧ್ಯ ಏಷ್ಯಾ, ಅಲೆಗ್ಸಾಂಡ್ರಿಯ, ಸಿರಿಯ, ಏಪಿರಸ್ ಮತ್ತು ಕಾರಿಂತ್ ಮೊದಲಾದ ರಾಜ್ಯಗಳಲ್ಲೂ ಹರಡಿದರು. ಅಂದಿನಿಂದ ಬೌದ್ಧ ಮತಕ್ಕೆ ಮತಾಂತರಗೊಂಡ ವಿದೇಶೀಯರು ಭಾರತವನ್ನು ತಮ್ಮ ಧರ್ಮದ ಪವಿತ್ರಭೂಮಿಯೆಂದು ತಿಳಿದರು. ಅಲ್ಲದೆ ಬುದ್ಧನ ಜನ್ಮಭೂಮಿಯಾದ ಭಾರತಕ್ಕೆ ಭೇಟಿ ಕೊಡಬೇಕೆಂಬ ಹಂಬಲವು ಅವರಲ್ಲಿ ಬೆಳೆಯಿತು. ಬೌದ್ಧಮತದ ನಿಕಟವಾದ ಧಾರ್ಮಿಕ ಸಂಬಂಧದಿಂದಾಗಿ ವಿದೇಶೀಯರನೇಕರು ಭಾರತದ ಬಗ್ಗೆ ಹೆಚ್ಚಿನ ಗೌರವ ತಳೆದು ಸಮೀಪವರ್ತಿಗಳಾದರು. ಬೌದ್ಧ ಮತವು ವಿದೇಶಗಳಲ್ಲಿ ಬಲವಾಗಿ ಬೇರೂರಿ ಅಲ್ಲಿ ಇಂದಿಗೂ ಒಂದು ಜೀವಂತ ಧರ್ಮವಾಗಿ ಉಳಿಯುವಂತಾಯಿತು. ಹೀಗೆ ಬೌದ್ಧ ಮತವು ವೈವಿಧ್ಯಮಯವಾದ ತನ್ನ ಕೊಡುಗೆಗಳ ಮೂಲಕ ಭಾರತದ ಸಂಸ್ಕೃತಿಗೆ ಅಮೂಲ್ಯ ಸೇವೆ ಸಲ್ಲಿಸಿ ಅದರ ಹಿರಿಮೆಯನ್ನು ಹೆಚ್ಚಿಸಿದೆ.

ಅಧ್ಯಾಯ-7

# ಕ್ರಿ.ಪೂ. 600ರಿಂದ 324ವರೆಗಿನ ಉತ್ತರ ಭಾರತದ ರಾಜಕೀಯ ಪರಿಸ್ಥಿತಿ

ಕ್ರಿ.ಪೂ. ಆರನೇ ಶತಮಾನದಿಂದ ಕ್ರಿ.ಪೂ. 324ರ ಅವಧಿಯ ಕಾಲದ ಭಾರತದ ಇತಿಹಾಸವು ಅನೇಕ ಕಾರಣಗಳಿಂದ ಬಹುಮುಖ್ಯ ಘಟನೆಗಳಿಂದ ಕೂಡಿದೆ. ಮೊದಲನೆಯದಾಗಿ ಧಾರ್ಮಿಕ ವಿಷಯಕ್ಕೆ ಸಂಬಂಧಿಸಿದಂತೆ ಈ ಶತಮಾನದಲ್ಲಿ ವೈದಿಕ ಧರ್ಮಕ್ಕೆ ದೊಡ್ಡ ಸವಾಲಾಗಿ ಜೈನ ಮತ್ತು ಬೌದ್ಧಮತಗಳು ಅಸ್ತಿತ್ವಕ್ಕೆ ಬಂದವು. ಈ ಎರಡು ಧರ್ಮಗಳ ಏಳಿಗೆ ಪ್ರಚಾರ ಮತ್ತು ಅವುಗಳ ಕೊಡುಗೆಗಳ ಬಗ್ಗೆ ಹಿಂದಿನ ಅಧ್ಯಾಯದಲ್ಲಿ ಪ್ರಸ್ತಾಪಿಸಲಾಗಿದೆ. ಎರಡನೆಯದಾಗಿ, ಈ ಅವಧಿಯಲ್ಲಿ ಭಾರತದಲ್ಲಿ ಪ್ರಬಲ ರಾಜ್ಯಗಳು ಅಸ್ತಿತ್ವಕ್ಕೆ ಬಂದವು. ಕ್ರಿ.ಪೂ. ಆರನೇ ಶತಮಾನಕ್ಕೆ ಹಿಂದಿನ ಶತಮಾನಗಳಲ್ಲಿ ಸಪ್ತಸಿಂಧು ಮತ್ತು ಮಧ್ಯಪ್ರದೇಶವು ಬಿರುಸಾದ ರಾಜಕೀಯ ಚಟುವಟಿಕೆಗಳ ಕೇಂದ್ರವಾಗಿದ್ದವು. ಆದರೆ ಕ್ರಿ.ಪೂ. ಆರನೇ ಶತಮಾನದಲ್ಲಿ ಭಾರತದ ಪೂರ್ವಭಾಗವು ರಾಜಕೀಯ ಚಟುವಟಿಕೆಗಳ ಕೇಂದ್ರವಾಗಿ ಪ್ರಬಲ ಸಾಮ್ರಾಜ್ಯ ಸ್ಥಾಪನೆಯ ಪ್ರಯತ್ನದ ರಾಜಕೀಯ ಪ್ರವೃತ್ತಿಯು ಈ ಕಾಲದಲ್ಲಿ ಕಂಡುಬರತೊಡಗಿತು. ಮೂರನೆಯದಾಗಿ, ಈ ಕಾಲದಲ್ಲಿ ಭಾರತದ ಮೇಲೆ ವಿದೇಶಿಯರ ಆಕ್ರಮಣಗಳು ಆರಂಭವಾದವು. ಕ್ರಿ.ಪೂ.ಆರನೇ ಶತಮಾನದಲ್ಲಿ ಭಾರತದ ವಾಯುವ್ಯ ಸರಹದ್ದಿನ ಭಾಗಗಳು ಪರ್ಶಿಯನ್ನರ ರಾಜಕೀಯ, ಸೈನಿಕ ಮತ್ತು ಸಾಂಸ್ಕೃತಿಕ ಪ್ರಭಾವಕ್ಕೊಳಗಾದವು. ಅಂತೆಯೆ ಕ್ರಿ.ಪೂ.ನಾಲ್ಕನೆ ಶತಮಾನದಲ್ಲಿ ಅಲೆಗ್ಸಾಂಡರನ ನೇತೃತ್ವದಲ್ಲಿ ಗ್ರೀಕರು ಭಾರತದ ಮೇಲೆ ಆಕ್ರಮಣ ಮಾಡಿದರು. ಈ ಆಕ್ರಮಣಗಳಿಂದ ಭಾರತವು ಪರ್ಶಿಯನ್ ಮತ್ತು ಹೆಲೆನಿಸ್ಟಿಕ್ ಸಂಸ್ಕೃತಿಯ ಪ್ರಭಾವಕ್ಕೊಳಗಾಯಿತು. ಮೇಲಾಗಿ ಭಾರತವು ಪರ್ಶಿಯನ್ನರ ಮತ್ತು ಗ್ರೀಕರ ಆಕ್ರಮಣಗಳ ಮೂಲಕ ಪಾಶ್ಚಾತ್ಯ ರಾಷ್ಟ್ರಗಳೊಂದಿಗೆ ಸಂಪರ್ಕ ಪಡೆಯುವಂತಾಯಿತು. ನಾಲ್ಕನೆಯದಾಗಿ, ಈ ಕಾಲದ ಘಟನೆಗಳ ಅಧ್ಯಯನದಿಂದ ಭಾರತದ ಇತಿಹಾಸವು ಒಂದು ನಿರ್ದಿಷ್ಟ ಸ್ವರೂಪವನ್ನು ಪಡೆಯತೊಡಗಿದುದು ಕಂಡುಬರುತ್ತದೆ. ಈ ಕಾಲದಲ್ಲಿ ಏಳಿಗೆ ಹೊಂದಿದ ಹದಿನಾರು ರಾಜ್ಯಗಳಲ್ಲಿ ನಾಲ್ಕು ರಾಜ್ಯಗಳು ಅತ್ಯಂತ ಪ್ರಬಲ ರಾಜ್ಯಗಳಾಗಿ ಮಾರ್ಪಟ್ಟು ಭಾರತದ ರಾಜಕೀಯ ಇತಿಹಾಸದ ಚಟುವಟಿಕೆಗಳ ಕೇಂದ್ರಗಳಾದವು.

## ಪ್ರಮುಖ ರಾಜ್ಯಗಳು

ಕ್ರಿ.ಪೂ.ಆರನೇ ಶತಮಾನದಲ್ಲಿ ಇಡೀ ಉತ್ತರ ಭಾರತದ ಮೇಲೆ ಒಡೆತನವನ್ನು ಸ್ಥಾಪಿಸಿದ್ದ ಯಾವೊಬ್ಬ ರಾಜನೂ ಇರಲಿಲ್ಲ. ಈ ಕಾಲದಲ್ಲಿ ಉತ್ತರಭಾರತದಲ್ಲಿ ಅನೇಕ ಸ್ವತಂತ್ರ ರಾಜ್ಯಗಳಿದ್ದವು. ಮತ್ತು ಇವುಗಳ ರಾಜಕೀಯ ವ್ಯವಸ್ಥೆಯೂ ಕೂಡ ಒಂದೇ ತೆರನಾಗಿರಲಿಲ್ಲ. ಕೆಲವು ರಾಜ್ಯಗಳು ರಾಜಪ್ರಭುತ್ವವನ್ನೂ ಮತ್ತೆ ಕೆಲವು ಸ್ವಲ್ಪ ಜನಾಧಿಪತ್ಯವನ್ನೂ ಮತ್ತು ಇನ್ನೂ ಕೆಲವು ಗಣರಾಜ್ಯ ವ್ಯವಸ್ಥೆಯನ್ನು ಹೊಂದಿದ್ದವು. ಈ ಕಾಲದಲ್ಲಿದ್ದ ರಾಜ್ಯಗಳಲ್ಲಿ ಪ್ರಮುಖವಾದವುಗಳೆಂದರೆ: 1. ಕಾಶಿ (ಬೆನಾರಿಸ್), 2. ಕೋಸಲ (ಔಧ್), 3. ಅಂಗ (ಪೂರ್ವ ಬಿಹಾರ), 4. ಮಗಧ (ದಕ್ಷಿಣ ಬಿಹಾರ), 5. ವೃಜಿ (ಉತ್ತರ ಬಿಹಾರ), 6. ಮಲ್ಲ (ಗೋರಕ ಪುರಜಿಲ್ಲೆ), 7. ಚೇದಿ (ಬಂದೇಲ್ ಖಂಡ), 8. ವತ್ಸ (ಅಲಹಾಬಾದ್ ಪ್ರದೇಶ), 9. ಕುರು (ದೆಹಲಿ, ಮೀರತ್, ಮತ್ತು ಸ್ಥಾಣೇಶ್ವರ ಜಿಲ್ಲೆಗಳು), 10. ಪಾಂಚಾಲ (ಆಧುನಿಕ ರೋಹಿಲ್ ಖಂಡ), 11. ಮತ್ಸ (ಜೈಪುರ), 12. ಸೂರಸೇನ (ಮಥುರ), 13. ಅಸ್ಮಕ (ಗೋದಾವರಿ ಸಮೀಪ), 14. ಅವಂತಿ (ಮಧ್ಯಮಾಳ್ವ), 15. ಗಾಂಧಾರ (ಇಂದಿನ ಪಾಕಿಸ್ತಾನದ ಪೆಷಾವರ್ ಮತ್ತು ರಾವಲ್ಪಿಂಡಿ ಜಿಲ್ಲೆಗಳು), 16. ಕಾಂಬೋಜ (ವಾಯುವ್ಯ ಭಾರತ) ಇವುಗಳಲ್ಲಿ ವೃಜಿಗಳು, ಶಾಕ್ಯರು ಮತ್ತು ಮಲ್ಲರು ಗಣರಾಜ್ಯ ವ್ಯವಸ್ಥೆಯನ್ನು ಹೊಂದಿದ್ದರು. ಹಿಂದಿನ ಯುಗದಲ್ಲಿ ಪ್ರಬಲವಾಗಿದ್ದ ಕುರು ಮತ್ತು ಪಾಂಚಾಲ ರಾಜ್ಯಗಳು ಈ ಶತಮಾನದಲ್ಲಿ ದುರ್ಬಲವಾಗಿದ್ದವು. ಈ ರಾಜ್ಯಗಳಲ್ಲಿ ಶ್ರೇಷ್ಠ ಸ್ಥಾನಕ್ಕಾಗಿ ಮುಂದಿನ ಶತಮಾನದಲ್ಲಿ ನಡೆದ ಹೋರಾಟದಲ್ಲಿ ಕೆಲವು ರಾಜ್ಯಗಳು ಜಯಗಳಿಸಿ ರಾಜಕೀಯ ಶಕ್ತಿಯ ಕೇಂದ್ರಗಳಾದವು. ಇವುಗಳಲ್ಲಿ ಅವಂತಿ, ವತ್ಸ, ಕೋಸಲ ಮತ್ತು ಮಗಧ ರಾಜ್ಯಗಳು ಮುಖ್ಯವಾದವು.

### ಅವಂತಿ

ಅವಂತಿ ರಾಜ್ಯವನ್ನು ಪ್ರದ್ಯೋತ್ಯರು ಎಂಬುವರು ಆಳುತ್ತಿದ್ದರು. ಉಜ್ಜೈನಿಯು ಇವರ ರಾಜಧಾನಿಯಾಗಿದ್ದು ಚಂಡ ಪ್ರದ್ಯೋತ ಮಹಾಸೇನ ಎಂಬುವನು ಇವರ ರಾಜನಾಗಿದ್ದನು. ಇವನು ಬುದ್ಧನ ಸಮಕಾಲೀನ, ಇವನು ತನ್ನ ಶಕ್ತಿ ಸಾಮರ್ಥ್ಯಗಳಿಂದ ನೆರೆಯ ರಾಜ್ಯಗಳನ್ನು ಗೆದ್ದು ತನ್ನ ರಾಜ್ಯವನ್ನು ಪ್ರಬಲಗೊಳಿಸಿದನು. ಇವನ ಪ್ರಾಬಲ್ಯದಿಂದ ಹೆದರಿದ ಮಾಗಧ ರಾಜ್ಯದ ದೊರೆ ಅಜಾತಶತ್ರುವು ರಾಜಗೃಹದ ರಕ್ಷಣೆಗಾಗಿ ಕೋಟೆಯನ್ನು ನಿರ್ಮಿಸಿದನು. ಪ್ರದ್ಯೋತನು ವತ್ಸ ಮತ್ತು ಸೂರಸೇನ ರಾಜ್ಯಗಳ ರಾಜರೊಂದಿಗೆ ವೈವಾಹಿಕ ಸಂಬಂಧಗಳನ್ನು ಏರ್ಪಡಿಸಿಕೊಂಡಿದ್ದನು. ಇವನು ತನ್ನ ಕ್ರೂರ ಕೃತ್ಯಗಳಿಂದ ಚಂಡ ಎಂಬ ಅಡ್ಡ ಹೆಸರಿನಿಂದ ಕರೆಯಲ್ಪಟ್ಟಿದ್ದರೂ ತನ್ನ ಜೀವನದ ಕೊನೆಯ ಭಾಗದಲ್ಲಿ ಬೌದ್ಧಮತದಿಂದ ಆಕರ್ಷಿತನಾಗಿ ಬೌದ್ಧಮತಕ್ಕೆ ಪ್ರೋತ್ಸಾಹ ನೀಡಿದನು. ಅವಂತಿ ರಾಜ್ಯವು ಮುಂದೆ ಮಗಧ ರಾಜ್ಯವು ಪ್ರವರ್ಧಮಾನಕ್ಕೆ ಬಂದಾಗ ಅದರಲ್ಲಿ ವಿಲೀನಗೊಂಡಿತು.

### ವತ್ಸ

ವತ್ಸರಾಜ್ಯವನ್ನು ಪೌರವ ಎಂಬ ರಾಜರುಗಳು ಆಳುತ್ತಿದ್ದರು. ಕೌಸಾಂಬಿಯು

ಇವರ ರಾಜಧಾನಿಯಾಗಿತ್ತು. ಉದಯನ ಎಂಬುವನು ಇವರ ರಾಜ. ಇವನು ಅನೇಕ ಪುರಾಣ ಕಥೆಗಳಲ್ಲಿ ನಾಯಕನಾಗಿದ್ದಾನೆ. ಉದಯನನು ಒಬ್ಬ ಪ್ರಬಲ ರಾಜನಾಗಿದ್ದು ಅನೇಕ ಆಕ್ರಮಣಗಳನ್ನು ಮಾಡಿದುದಾಗಿಯೂ ಅವಂತಿ, ಅಂಗ ಮತ್ತು ಮಗಧ ರಾಜ್ಯಗಳ ರಾಜ ಸಂತತಿಗಳೊಂದಿಗೆ ವೈವಾಹಿಕ ಸಂಬಂಧಗಳನ್ನು ಏಪಳಡಿಸಿಕೊಂಡಿದ್ದುದಾಗಿಯೂ, ತಿಳಿದು ಬರುತ್ತದೆ. ಇವನಿಗೆ ವಾಸವದತ್ತ, ಸುಮತಿ ಮತ್ತು ಪದ್ಮಾವತಿ ಎಂಬ ಮೂವರು ರಾಣಿಯರಿದ್ದರು. ಉದಯನನ ದಿಗ್ವಿಜಯಗಳ ಜೊತೆಗೆ ವೈವಾಹಿಕ ಸಂಬಂಧಗಳೂ ಸೇರಿ ಅವನು ಒಂದು ವಿಶಾಲ ರಾಜ್ಯಕ್ಕೆ ರಾಜನಾದನು. ಅವನ ರಾಜ್ಯವು ಅವಂತಿಯಿಂದ ಅಂಗ ಮತ್ತು ಕಳಿಂಗದವರೆಗೂ ವಿಸ್ತರಿಸಿಕೊಂಡಿದ್ದಿತೆಂದು ಹೇಳಲಾಗಿದೆ. ಕಥಾಸರಿತ್ಸಾಗರದಲ್ಲಿ ಇವನ ದಿಗ್ವಿಜಯದ ಪ್ರಸ್ತಾಪವಿದೆ. ಉದಯನನು ಬೌದ್ಧ ಮತಕ್ಕೆ ಹೆಚ್ಚು ಪ್ರೋತ್ಸಾಹ ನೀಡಿದ್ದನು. ಇವನ ಕಾಲದಲ್ಲಿ ಕೌಸಂಬಿಯು ಬೌದ್ಧ ಧರ್ಮದ ಚಟುವಟಿಕೆಗಳ ಕೇಂದ್ರವೂ ಆಗಿದ್ದಿತು.

**ಕೋಸಲ**

ಕೋಸಲ ರಾಜ್ಯವನ್ನು ಇಕ್ಷ್ವಾಕು ಸಂತತಿಗೆ ಸೇರಿದ ರಾಜರುಗಳು ಆಳುತ್ತಿದ್ದರು. ಕೋಸಲವು ಈ ಕಾಲದಲ್ಲಿ ಒಂದು ಪ್ರಬಲ ರಾಜ್ಯವಾಗಿತ್ತು. ಅಯೋಧ್ಯ, ಸ್ರಾವಷ್ಠಿ ಮತ್ತು ಸಕೇತಗಳು ಈ ರಾಜ್ಯದಲ್ಲಿನ ಪ್ರಮುಖ ನಗರಗಳಾಗಿದ್ದವು. ಬುದ್ಧನ ಕಾಲದಲ್ಲಿ ಪ್ರಸೇನಜಿತ್ ಎಂಬುವನು ಕೋಸಲದ ರಾಜನಾಗಿದ್ದನು. ಇವನು ತನ್ನ ಮಗಳು ವಜಿರ ಎಂಬುವನ್ನು ಮಗಧ ರಾಜ್ಯದ ಅಜಾತಶತ್ರುವಿಗೂ ತನ್ನ ತಂಗಿಯನ್ನು ಬಿಂಬ ಸಾರನಿಗೂ ಕೊಟ್ಟು ವಿವಾಹ ಮಾಡಿದ್ದನು. ಪ್ರಸೇನಜಿತ್ತನು ಬೌದ್ಧ ಮತಕ್ಕೆ ವಿಶೇಷ ಪ್ರೋತ್ಸಾಹ ನೀಡಿದ್ದನು. ಬೌದ್ಧ ಸಂನ್ಯಾಸಿಗಳಿಗಾಗಿ ಅನೇಕ ವಿಹಾರಗಳನ್ನು ಕಟ್ಟಿಸಿದ್ದನು. ಅಂತೆಯೆ ಬ್ರಾಹ್ಮಣರಿಗೂ ಭೂಮಿಯನ್ನು ದತ್ತಿಯನ್ನಾಗಿ ಕೊಟ್ಟಿದ್ದನು. ಪ್ರಸೇನಜಿತ್ತನ ತರುವಾಯ ಕೋಸಲ ರಾಜ್ಯವು ಮಗಧ ರಾಜ್ಯದಲ್ಲಿ ಸೇರಿಹೋಯಿತು.

**ಮಗಧ ರಾಜ್ಯ**

ಮಗಧ ರಾಜ್ಯವು ಕ್ರಿ.ಪೂ. ಆರನೇ ಶತಮಾನದಲ್ಲಿ ಒಂದು ಪ್ರಮುಖ ರಾಜಕೀಯ ಶಕ್ತಿಯಾಗಿ ಏಳಿಗೆ ಹೊಂದಿತು. ಈ ರಾಜ್ಯವನ್ನು ಅಸುರರು ಎಂಬ ವಂಶದವರು ಮಹಾಭಾರತದ ಕಾಲದಲ್ಲೇ ಆಳುತ್ತಿದ್ದುದಾಗಿ ಮಹಾಭಾರತದಲ್ಲಿ ಉಲ್ಲೇಖಿತವಾಗಿದೆ. ವಸು ಮತ್ತು ಅವನ ಮಗ ಬೃಹದ್ರತ ಹಾಗೂ ಜರಾಸಂಧ ಮಗಧ ರಾಜ್ಯದ ರಾಜರುಗಳಾಗಿದ್ದರು. ಜರಾಸಂಧನ ಸಂತತಿಯವರ ಆಳ್ವಿಕೆಯು ಬುದ್ಧನ ಕಾಲದಲ್ಲಿ ಕೊನೆಗೊಂಡಿತು. ಕ್ರಿ.ಪೂ.ಐದನೇ ಶತಮಾನದಲ್ಲಿ ಮಗಧ ರಾಜ್ಯವನ್ನು ಶಿಶುನಾಗವಂಶದವರು ಆಳುತ್ತಿದ್ದರೆಂದು ಪುರಾಣಗಳು ತಿಳಿಸುತ್ತವೆ. ಆದರೆ ಬೌದ್ಧ ಗ್ರಂಥಗಳು ಹರ್ಯಾಂಕ ಮತ್ತು ಶಿಶುನಾಗ ಎಂಬ ಸಂತತಿಗಳು ಈ ರಾಜ್ಯವನ್ನು ಆಳುತ್ತಿದ್ದುವೆಂದು ತಿಳಿಸುತ್ತವೆ.

**ಬಿಂಬಸಾರ**

ಮಗಧ ರಾಜ್ಯವು ಬಿಂಬಸಾರನ ಕಾಲದಲ್ಲಿ ಪ್ರವರ್ಧಮಾನಕ್ಕೆ ಬಂದಿತು. ಮೊದಲಿಗೆ ಈ ರಾಜ್ಯವು ಕೋಸಲ ರಾಜ್ಯಕ್ಕಿಂತಲೂ ವಿಸ್ತೀರ್ಣದಲ್ಲಿ ಬಹಳ

ಚಿಕ್ಕದಾಗಿತ್ತು. ಪುರಾಣಗಳು ಬಿಂಬಸಾರನು ಶಿಶುನಾಗ ಸಂತತಿಗೆ ಸೇರಿದವನೆಂದೂ ಬೌದ್ಧ ಗ್ರಂಥಗಳು ಅವನು ಹರ್ಯಾಂಕ ವಂಶಕ್ಕೆ ಸೇರಿದವನೆಂದು ತಿಳಿಸುತ್ತವೆ. ಒಟ್ಟಿನಲ್ಲಿ ಈ ಎರಡು ಸಂತತಿಗಳು ಮಗಧ ರಾಜ್ಯವನ್ನು ಸುಮಾರು ಎರಡು ಶತಮಾನಗಳ ಕಾಲ ಆಳಿದುದಾಗಿ ಕಂಡು ಬರುತ್ತದೆ.

ಬಿಂಬಸಾರನು ಕ್ರಿ.ಪೂ. 545ರಲ್ಲಿ ಸಿಂಹಾಸನಕ್ಕೆ ಬಂದನು. ಇವನು ತನ್ನ ರಾಜ್ಯವನ್ನು ಸೈನಿಕ ಶಕ್ತಿಯಿಂದಲೂ ಮತ್ತು ವೈವಾಹಿಕ ಸಂಬಂಧಗಳಿಂದಲೂ ವಿಸ್ತರಿಸಿದನು. ಬಿಂಬಸಾರನು ತನ್ನ ನೆರೆಯ ರಾಜ್ಯಗಳೊಂದಿಗೆ ಒಳ್ಳೆಯ ಸಂಬಂಧಗಳನ್ನು ಇಟ್ಟುಕೊಂಡಿದ್ದನು. ಮಾದ್ರ, ಕೋಸಲ ಮತ್ತು ವೈಶಾಲಿಗಳ ರಾಜ್ಯಗಳ ರಾಜಮನೆತನಗಳೊಂದಿಗೆ ವೈವಾಹಿಕ ಸಂಬಂಧಗಳನ್ನು ಬೆಳೆಸಿ ಮಗಧ ರಾಜ್ಯದ ಪ್ರಭಾವವನ್ನು ಹೆಚ್ಚಿಸಿದನು. ಇವನ ರಾಣಿಯರಲ್ಲಿ ಪ್ರಮುಖಳಾಗಿದ್ದ ಕೋಸಲದೇವಿಯು ಕೋಸಲ ರಾಜ್ಯದ ಪ್ರಸೇನ ಜಿತ್ತನ ಸೋದರಿಯಾಗಿದ್ದಳು. ಈ ವಿವಾಹದಿಂದ ಕಾಶಿ ಪ್ರದೇಶವು ಅವನಿಗೆ ಬಳುವಳಿಯಾಗಿ ಬಂದಿತು. ಲಿಚ್ಚವಿ ಗಣರಾಜ್ಯದ ಮುಖಂಡನಾಗಿದ್ದ ಚೇತಕ ಎಂಬುವನ ಮಗಳಾಗಿದ್ದ ಚೆಲ್ಲನ ಎಂಬುವಳನ್ನು ವಿವಾಹವಾಗಿ ಆ ರಾಜ್ಯದ ಸಖ್ಯವನ್ನು ಬೆಳೆಸಿದನು. ಅಂತೆಯೆ ಪಂಜಾಬಿನ ಮಾದ್ರ ರಾಜ್ಯದ ರಾಜನ ಮಗಳಾದ ಖೇಮ ಎಂಬುವಳನ್ನು ವಿವಾಹವಾಗಿ ಆ ರಾಜ್ಯದ ಮೈತ್ರಿಗಳಿಸಿದನು. ಮಾಳ್ವ ಮತ್ತು ಗಾಂಧಾರ ರಾಜ್ಯಗಳೊಂದಿಗೆ ಬಂಬಿಸಾರನು ರಾಜತಾಂತ್ರಿಕ ಸಂಬಂಧ ಹೊಂದಿದ್ದನು.

ಮಗಧ ರಾಜ್ಯಕ್ಕೆ ಪರ್ವತಗಳಿಂದ ಮತ್ತು ನದಿಗಳಿಂದ ನೈಸರ್ಗಿಕ ರಕ್ಷಣೆಯು ಇದ್ದಿತು. ಈ ಬೌಗೋಳಿಕ ಅನುಕೂಲವು ಬಿಂಬಸಾರನ ರಾಜ್ಯವಿಸ್ತರಣಾ ನೀತಿಗೆ ಅನುಕೂಲವಾಗಿ ಪರಿಣಮಿಸಿದ್ದಿತು. ಇದಲ್ಲದೆ ಲಾಭದಾಯಕವಾದ ವ್ಯಾಪಾರವೂ ಮತ್ತು ವ್ಯವಸಾಯದ ಉತ್ಪನ್ನಗಳೂ ಮಗಧ ರಾಜ್ಯದ ಆದಾಯವನ್ನು ಹೆಚ್ಚಿಸಿದ್ದವು. ಗಿರಿ ಶಿಖರಗಳಿಂದ ಆವೃತ್ತವಾಗಿದ್ದ ಗಿರಿವ್ರಜ ಇವನ ರಾಜಧಾನಿಯಾಗಿತ್ತು. ಬಿಂಬಸಾರನು ಗಿರಿವ್ರಜಕ್ಕೆ ಉತ್ತರದಿಕ್ಕಿನಲ್ಲಿ ರಾಜಗೃಹ ಎಂಬ ಹೊಸ ಪಟ್ಟಣವನ್ನು ನಿರ್ಮಿಸಿದನು. ಗೌತಮ ಬುದ್ಧನು ರಾಜಗೃಹಕ್ಕೆ ಭೇಟಿ ಕೊಟ್ಟಿದ್ದುದಾಗಿ ಬೌದ್ಧ ಗ್ರಂಥಗಳು ತಿಳಿಸುತ್ತವೆ. ಬಿಂಬಸಾರನು ಅಂಗರಾಜ್ಯದ ಬ್ರಹ್ಮದತ್ತನನ್ನು ಸೋಲಿಸಿ ಆ ರಾಜ್ಯವನ್ನು ಮಗಧ ರಾಜ್ಯಕ್ಕೆ ಸೇರಿಸಿಕೊಂಡನು. ಬಿಂಬಸಾರನು ರಾಜ್ಯವಿಸ್ತರಣೆಯಲ್ಲೇ ಆಸಕ್ತಿಯುಳ್ಳವನಾಗಿರದೆ ಒಳ್ಳೆಯ ಆಡಳಿತ ವ್ಯವಸ್ಥೆಯನ್ನೂ ತನ್ನ ರಾಜ್ಯಕ್ಕೆ ರೂಪಿಸಿದ್ದನು. ಮಹಾಮಾತ್ರರು ಎಂಬ ದಕ್ಷ ಅಧಿಕಾರಿಗಳನ್ನು ಆಡಳಿತದಲ್ಲಿ ನೇಮಿಸಿಕೊಂಡಿದ್ದನು. ತಪ್ಪು ಮಾಡಿದ ಅಧಿಕಾರಿಗಳನ್ನು ಬಹಳ ಕ್ರೂರವಾಗಿ ಶಿಕ್ಷಿಸುತ್ತಿದ್ದನು.

ಬಿಂಬಸಾರನ ಧಾರ್ಮಿಕ ನಿಲುವಿನ ಬಗ್ಗೆ ಜೈನ ಮತ್ತು ಬೌದ್ಧ ವಿದ್ವಾಂಸರು ತಮ್ಮದೇ ಆದ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಜೈನರು ಬಿಂಬಸಾರನು ಮಹಾವೀರನಿಗೆ ಗೌರವ ತೋರಿಸುತ್ತಿದ್ದನೆಂದೂ, ಬೌದ್ಧರು ಗೌತಮ ಬುದ್ಧನ ಬಗ್ಗೆ ಅವನು ಅಪಾರ ಗೌರವ ಹೊಂದಿದ್ದನೆಂದೂ ಮತ್ತು ಗೌತಮ ಬುದ್ಧನಿಗೆ ಉಡುಗೊರೆಯಾಗಿ ವೇಲುವನ ಎಂಬ ಉದ್ಯಾನವನ್ನು ಕೊಟ್ಟಿದ್ದನೆಂದೂ ಅಲ್ಲದೆ ತನ್ನ ಖಾಸಗಿ ವೈದ್ಯನಾಗಿದ್ದ ಜೀವಕ ಎಂಬವನನ್ನು ಬುದ್ಧನ ಸೇವೆಗೆ ಕಳುಹಿಸಿದ್ದನೆಂದು

ಹೇಳುತ್ತಾರೆ. ವೈದಿಕ ಮತಕ್ಕೂ ಬಿಂಬಸಾರನು ಪ್ರೋತ್ಸಾಹ ನೀಡಿದ್ದನು. ಬಿಂಬಸಾರನು ಸುಮಾರು ಐವತ್ತು ವರ್ಷಗಳಿಗೂ ಹೆಚ್ಚು ಕಾಲ ರಾಜ್ಯವಾಳಿದನು. ಅವನ ಮರಣಾಂತರ ಅವನ ಮಗನಾದ ಅಜಾತ ಶತ್ರುವು ಮಗಧ ರಾಜ್ಯದ ಸಿಂಹಾಸನವನ್ನೇರಿದನು.

**ಅಜಾತ ಶತ್ರು**

ಅಜಾತ ಶತ್ರು ಕ್ರಿ.ಪೂ. 490ರಲ್ಲಿ ಸಿಂಹಾಸನಕ್ಕೆ ಬಂದು ಸುಮಾರು 32 ವರ್ಷಗಳು ರಾಜ್ಯವಾಳಿದನು. ಅವನು ತನ್ನ ತಂದೆ ಬಿಂಬಸಾರನನ್ನು ಕೊಂದು ಪಟ್ಟಕ್ಕೆ ಬಂದನೆಂದು ಬೌದ್ಧ ಗ್ರಂಥಗಳು ತಿಳಿಸುತ್ತವೆ. ಅಜಾತ ಶತ್ರು ಅಕ್ರಮಣಕಾರಿ ನೀತಿಯನ್ನು ಅನುಸರಿಸಿ ರಾಜ್ಯವನ್ನು ವಿಸ್ತರಿಸಿದನು. ಇವನು ಸಿಂಹಾಸನವನ್ನೇರಿದ ತಕ್ಷಣದಲ್ಲೇ ಕೋಸಲದ ರಾಜ ಪ್ರಸೇನಜಿತ್ತನೊಂದಿಗೆ ಕಾಶಿ ಪ್ರದೇಶದ ಒಡೆತನಕ್ಕಾಗಿ ಯುದ್ಧ ಮಾಡಬೇಕಾಯಿತು. ಈ ಯುದ್ಧವು ಕೆಲವು ಕಾಲ ಮುಂದುವರಿದು ಕೊನೆಗೆ ಕಾಶಿ ಪ್ರದೇಶವನ್ನು ಪ್ರಸೇನಜಿತನು ಬಿಟ್ಟುಕೊಟ್ಟಿದ್ದಲ್ಲದೆ ತನ್ನ ಮಗಳು ವಜಿರಳನ್ನು ಅಜಾತ ಶತ್ರುವಿಗೆ ಕೊಟ್ಟು ವಿವಾಹ ಮಾಡಿದನು. ಇದಾದ ನಂತರ ಅಜಾತ ಶತ್ರು ತನ್ನ ಗಮನವನ್ನು ವೈಶಾಲಿಯ ವೃಜಿ ಹಾಗೂ ಲಿಚ್ಛವಿ ಗಣ ರಾಜ್ಯಗಳ ಮೇಲೆ ಹರಿಸಿದನು. ಜೈನರ ಸಾಹಿತ್ಯಾಧಾರಗಳ ಪ್ರಕಾರ ಒಟ್ಟು ಮೂವತ್ತಾರು ಗಣ ರಾಜ್ಯಗಳು ಒಂದು ಒಕ್ಕೂಟವನ್ನೂ ಏರ್ಪಡಿಸಿಕೊಂಡು ಅಜಾತಶತ್ರುವಿನ ವಿರುದ್ಧ ಯುದ್ಧಕ್ಕೆ ಸಿದ್ಧವಾಗಿದ್ದವೆಂದೂ ಮತ್ತು ಲಿಚ್ಛವಿ ಗಣರಾಜ್ಯವು ಈ ಒಕ್ಕೂಟದ ಮುಂದಾಳತ್ವವನ್ನು ವಹಿಸಿದ್ದಿತೆಂದು ಹೇಳಲಾಗಿದೆ. ಅಜಾತ ಶತ್ರುವು ಈ ಒಕ್ಕೂಟವನ್ನು ಹತ್ತಿಕ್ಕಲು ನಿರ್ಧರಿಸಿ ಮುಂಜಾಗರೂಕತೆಯ ಕ್ರಮಗಳನ್ನು ಕೈಗೊಂಡಿದ್ದನು. ಅವನು ಮುಂಜಾಗ್ರತೆಯ ಕ್ರಮವಾಗಿ ಗಂಗಾ ಮತ್ತು ಸೋನಾ ನದಿಗಳ ಸಂಗಮ ಸ್ಥಾನದ ಹತ್ತಿರವಿದ್ದ ಪಾಟಲೀಗ್ರಾಮ ಎಂಬ ಹಳ್ಳಿಯ ಸುತ್ತಲೂ ಒಂದು ಕೋಟೆಯನ್ನು ನಿರ್ಮಿಸಿದನು. ಈ ಗ್ರಾಮವು ಮುಂದೆ ಒಂದು ದೊಡ್ಡ ನಗರವಾಗಿ ಬೆಳೆದು ಮುಂದೆ ಇತಿಹಾಸ ಪ್ರಸಿದ್ಧ ಮೌರ್ಯರು ಮತ್ತು ಗುಪ್ತರ ರಾಜಧಾನಿಯೂ ಆಯಿತು. ಅಜಾತ ಶತ್ರುವು ಪೂರ್ವ ಭಾವಿ ಸಿದ್ಧತೆಗಳನ್ನು ಮಾಡಿಕೊಂಡು ಗಣರಾಜ್ಯಗಳ ಒಕ್ಕೂಟದ ವಿರುದ್ಧ ಹೋರಾಡಿ ವಿಜಯಗಳಿಸಿದನು. ಅವಂತಿ ರಾಜ್ಯದ ಚಂಡಪ್ರದ್ಯೋತನು ತನ್ನ ರಾಜ್ಯದ ಮೇಲೆ ಆಕ್ರಮಣ ಮಾಡುವ ಉದ್ದೇಶವನ್ನು ಹೊಂದಿರುವನೆಂದು ತಿಳಿದ ಅಜಾತಶತ್ರುವು ತನ್ನ ರಾಜಧಾನಿ ರಾಜಗೃಹದ ಸುತ್ತಲೂ ರಕ್ಷಣೆಗಾಗಿ ಕೋಟೆಯನ್ನು ನಿರ್ಮಿಸಿದನು. ಕೋಸಲ, ವೈಶಾಲಿಗಳ ಮೇಲಿನ ವಿಜಯವೂ ಮತ್ತು ಗಣರಾಜ್ಯಗಳ ಪ್ರಬಲ ಒಕ್ಕೂಟದ ವಿರುದ್ಧ ಅವನು ಗಳಿಸಿದ ವಿಜಯವೂ ಸೇರಿ ಮಗಧ ರಾಜ್ಯವು ಪ್ರಾಚೀನ ಭಾರತದಲ್ಲಿ ಒಂದು ಪ್ರಬಲ ಸಾಮ್ರಾಜ್ಯವಾಗಿ ಮಾರ್ಪಟ್ಟಿತು.

ಅಜಾತ ಶತ್ರುವಿನ ಧಾರ್ಮಿಕ ನೀತಿಯ ಬಗ್ಗೆ ಜೈನರು ಮತ್ತು ಬೌದ್ಧರು ಪರಸ್ಪರ ವಿರುದ್ಧ ಅಭಿಪ್ರಾಯಗಳನ್ನು ವ್ಯಕ್ತಪಡಿಸಿರುವರು. ಅವನು ಮಹಾವೀರನ ಬಗ್ಗೆ ಹೆಚ್ಚಿನ ಗೌರವ ಹೊಂದಿದ್ದನೆಂದು ಜೈನರು ಹೇಳುತ್ತಾರೆ. ಮೊದಲಿಗೆ ಅಜಾತಶತ್ರುವು ಬೌದ್ಧರ ವಿರೋಧಿಯಾಗಿದ್ದನು. ಆದರೆ ಅವನು ಸ್ವಲ್ಪ ಕಾಲದಲ್ಲಿಯೇ

ಬುದ್ಧನ ಉಪದೇಶಗಳಿಗೆ ಮಾರುಹೋದುದಲ್ಲದೆ ಬುದ್ಧನನ್ನು ಭೇಟಿಮಾಡಿ ಅವನಿಗೆ ಶರಣುಹೋದನು. ಅಜಾತಶತ್ರುವು ಬೌದ್ಧಮತದಿಂದ ಪ್ರಭಾವಿತನಾದ ಮೇಲೆ ತನ್ನ ಶ್ರದ್ಧಾಭಕ್ತಿಯ ಸೂಚಕವಾಗಿ ಚೈತ್ಯಗಳನ್ನೂ ಮತ್ತು ವಿಹಾರಗಳನ್ನು ರಾಜಗೃಹದಲ್ಲಿ ಕಟ್ಟಿಸಿದನು. ಬುದ್ಧನು ಕಾಲವಾದ ಸಮಯದಲ್ಲಿಯೆ ರಾಜಗೃಹದಲ್ಲಿ ಸಮಾವೇಶಗೊಂಡ ಬೌದ್ಧರ ಪ್ರಥಮ ಸಮ್ಮೇಳನಕ್ಕೆ ಎಲ್ಲ ರೀತಿಯ ಅನುಕೂಲಗಳನ್ನು ಕಲ್ಪಿಸಿಕೊಟ್ಟು ಸಮ್ಮೇಳನದ ಯಶಸ್ಸಿಗೆ ಕಾರಣನಾದನು. ಒಟ್ಟಿನಲ್ಲಿ ಅಜಾತಶತ್ರುವು ಸಾಮ್ರಾಜ್ಯ ಸ್ಥಾಪಕನಾಗಿ ಮತ್ತು ಬೌದ್ಧ ಮತದ ಪ್ರೋತ್ಸಾಹಕನಾಗಿ ಪ್ರಾಚೀನ ಭಾರತದ ಇತಿಹಾಸದಲ್ಲಿ ಖ್ಯಾತಿಗಳಿಸಿ ಕೊಂಡಿದ್ದಾನೆ.

ಅಜಾತಶತ್ರುವಿನ ಮರಣಾನಂತರ ಅವನ ಮಗ ದರ್ಶಕ ಎಂಬುವನು ಅಧಿಕಾರಕ್ಕೆ ಬಂದನು. ಅವನ ತರುವಾಯ ಉದಯ, ಅನಿರುದ್ಧ, ಮುಂಡ ಮತ್ತು ನಾಗದರ್ಶಕ ಎಂಬುವರು ಮಗಧ ರಾಜ್ಯವನ್ನು ಆಳಿದುದಾಗಿಯೂ ಮತ್ತು ಇವರೆಲ್ಲರೂ ಪಿತೃಘಾತಕರಾಗಿದ್ದರೆಂದು ಬೌದ್ಧರ ಸಂಪ್ರದಾಯಗಳು ತಿಳಿಸುತ್ತವೆ. ಇದರಿಂದ ಅಸಮಾಧಾನಗೊಂಡ ಪ್ರಜೆಗಳು ಅವರ ಅಧಿಕಾರವನ್ನು ಕೊನೆಗಾಣಿಸಲು ನಿರ್ಧರಿಸಿ ನಾಗದರ್ಶಕನ ಮಂತ್ರಿಯಾಗಿದ್ದ ಶಿಶುನಾಗನಿಗೆ ಬೆಂಬಲ ನೀಡಿದರು. ಪ್ರಜೆಗಳ ಅಪೇಕ್ಷೆಯಂತೆ ಶಿಶುನಾಗನು ನಾಗದರ್ಶಕನನ್ನು ಪದಚ್ಯುತಿಗೊಳಿಸಿ ಅಧಿಕಾರರೂಢನಾದನು.

ಶಿಶುನಾಗನು ಆವಂತಿ, ವತ್ಸ ಮತ್ತು ಕೋಸಲ ರಾಜ್ಯಗಳನ್ನು ಜಯಸಿ ಮಗಧ ರಾಜ್ಯವನ್ನು ವಿಸ್ತರಿಸಿದನು. ಶಿಶುನಾಗ ನಂತರ ಅವನ ಮಗನಾದ ಕಾಲಾಶೋಕ ಅಥವ ಕಾಕವರ್ಣ ಎಂಬುವನು ರಾಜನಾದನು. ಇವನು ರಾಜಗೃಹದಿಂದ ಪಾಟಲೀಪುತ್ರಕ್ಕೆ ತನ್ನ ವಾಸಸ್ಥಾನವನ್ನು ಬದಲಾಯಿಸಿದನು ಮತ್ತು ಕೆಲವು ವೇಳೆ ವೈಶಾಲಿಯಲ್ಲೂ ಇರುತ್ತಿದ್ದನು. ಇವನ ಕಾಲದಲ್ಲಿ ವೈಶಾಲಿಯಲ್ಲಿ ಎರಡನೆ ಬೌದ್ಧ ಸಮ್ಮೇಳನವು ಜರುಗಿತು. ಇವನು ತನ್ನ ಅವಿಧೇಯ ರಾಣಿಯ ಒಳಸಂಚಿನಿಂದ ಅರಮನೆಯಲ್ಲೇ ಕೊಲೆಮಾಡಲ್ಪಟ್ಟನು. ಇವನ ಮರಣದೊಂದಿಗೆ ಶಿಶುನಾಗ ಸಂತತಿಯವರ ಆಳ್ವಿಕೆಯೂ ಕೊನೆಗೊಂಡಿತು.

**ನಂದರು**

ನಂದ ಸಂತತಿಯ ಸ್ಥಾಪಕರ ಬಗ್ಗೆ ಜೈನ ಮತ್ತು ಬೌದ್ಧ ಗ್ರಂಥಗಳೇ ಅಲ್ಲದೆ ಪುರಾಣಗಳೂ ಪರಸ್ಪರ ವಿರುದ್ಧ ಅಭಿಪ್ರಾಯಗಳನ್ನು ವ್ಯಕ್ತಪಡಿಸಿವೆ. ಮಹಾಪದ್ಮನಂದ ಅಥವ ಮಹಾಪದ್ಮಪತಿ ಎಂಬುವನು ನಂದ ಸಂತತಿಯ ಸ್ಥಾಪಕ, ಇವನಿಗೆ ಉಗ್ರಸೇನ ಎಂಬ ಹೆಸರೂ ಇದ್ದಿತು. ಮಹಾಪದ್ಮನಂದನು ಕೀಳು ಜಾತಿಯೊಂದಕ್ಕೆ ಸೇರಿದವನು. ಇವನು ಅರಮನೆಯ ಊಳಿಗದವಳ ಹೊಟ್ಟೆಯಲ್ಲಿ ನಾಪಿತ ಜಾತಿಯವನಿಗೆ ಹುಟ್ಟಿದವನೆಂದು ಜೈನರ ಪರಿಶಿಷ್ಟಪರ್ವವು ತಿಳಿಸುತ್ತದೆ. ಈ ನಾಪಿತನು ಕಾಲಾಶೋಕನ ರಾಣಿಯೊಂದಿಗೆ ಸಖ್ಯವನ್ನು ಬೆಳಸಿ ರಾಜನನ್ನೂ ಮತ್ತು ಅವನ ಮಕ್ಕಳನ್ನೂ ಕೊಲ್ಲಿಸಿ ತಾನೇ ರಾಜನಾದನೆಂದು ಪುರಾಣಗಳಿಂದ ತಿಳಿದುಬರುತ್ತದೆ. ನಂದ ಸಂತತಿಯವರ ಮೂಲವೇನೇ ಇದ್ದರೂ ಅವರು ಶಿಶುನಾಗರ ನಂತರ ಮಗಧ ರಾಜ್ಯಕ್ಕೆ ಒಡೆಯರಾಗಿ ಕೆಲವು ಕಾಲ ರಾಜ್ಯವಾಳಿದುದು ಐತಿಹಾಸಿಕ ಸಂಗತಿಯಾಗಿದೆ. ನಂದರ ಸಾಮ್ರಾಜ್ಯವು

ಪಶ್ಚಿಮದಲ್ಲಿ ಅವಂತಿಯಿಂದ ಪೂರ್ವದಲ್ಲಿ ಅಂಗರಾಜ್ಯದವರೆಗೂ ವಿಸ್ತರಿಸಿತ್ತು. ಕಳಿಂಗ ರಾಜ್ಯದ ಮೇಲೂ ಇವರು ತಮ್ಮ ಅಧಿಕಾರದ ಪ್ರಭಾವವನ್ನು ಬೀರಿದರು. ಈ ಸಂತತಿಯಲ್ಲಿ ಒಟ್ಟು ಒಂಬತ್ತು ಜನ ರಾಜ್ಯವಾಳಿದುದಾಗಿ ಕಂಡುಬರುತ್ತವೆ. ಧನನಂದ ಎಂಬುವನು ಇವರ ಕೊನೆಯ ದೊರೆ.

ಅಲೆಗ್ಸಾಂಡರನು ಭಾರತದ ಮೇಲೆ ದಂಡಯಾತ್ರೆ ಕೈಗೊಂಡ ಸಮಯದಲ್ಲಿ ಭಾರತದಲ್ಲಿ ಒಂದು ಪ್ರಬಲ ಸಾಮ್ರಾಜ್ಯವಿದ್ದಿತೆಂದು ಗ್ರೀಕರ ಆಧಾರಗಳಲ್ಲೂ ಪ್ರಸ್ತಾಪವಿದೆ. ಆ ಸಾಮ್ರಾಜ್ಯವೇ ನಂದರ ಸಾಮ್ರಾಜ್ಯ. ಧನನಂದನು ಬಲದಲ್ಲೂ ಮತ್ತು ಐಶ್ವರ್ಯದಲ್ಲೂ ಬಹಳ ಪ್ರಬಲನಾಗಿದ್ದನು. ಆದರೆ ಇವನ ಆಡಳಿತವು ಪ್ರಜಾಪೀಡಕವಾಗಿತ್ತು. ಪಾಟಲೀಪುತ್ರವು ಇವನ ರಾಜಧಾನಿಯಾಗಿತ್ತು. ಧನನಂದನ ಸೈನ್ಯವು 20,000 ಅಶ್ವದಳ 2,00,000 ಪದಾತಿಸೈನ್ಯ 2000 ರಥಗಳಿಂದಲೂ ಮತ್ತು 3,000 ಗಜಸೈನ್ಯದಿಂದಲೂ ಕೂಡಿದ್ದಿತು. ಧನನಂದನು ಅಪಾರ ಸೈನ್ಯವನ್ನೂ ಮತ್ತು ಐಶ್ವರ್ಯವನ್ನೂ ಹೊಂದಿದ್ದರೂ ಪ್ರಜೆಗಳ ಮೇಲೆ ಹೆಚ್ಚಿನ ಕರಭಾರವನ್ನು ಹೊರಿಸಿ ಜನಪ್ರಿಯತೆ ಕಳೆದುಕೊಂಡಿದ್ದನು. ಈ ಅತೃಪ್ತ ಜನಗಳು ಚಂದ್ರಗುಪ್ತನನ್ನು ತಮ್ಮ ನಾಯಕನನ್ನಾಗಿ ಮಾಡಿಕೊಂಡರು. ಚಂದ್ರಗುಪ್ತ ಮೌರ್ಯನು ಕ್ರಿ.ಪೂ. 324 ರಲ್ಲಿ ಧನನಂದನನ್ನು ಕೊಂದು ಮೌರ್ಯ ಸಂತತಿಯನ್ನು ಸ್ಥಾಪಿಸಿದನು.

**ವಿದೇಶೀಯರ ಧಾಳಿಗಳು: ಪರ್ಶಿಯನ್ನರು.**

ಕ್ರಿ.ಪೂ. ಆರನೇ ಶತಮಾನವು ಭಾರತದ ಧಾರ್ಮಿಕ ಇತಿಹಾಸದಲ್ಲೇ ಅಲ್ಲದೆ ರಾಜಕೀಯ ಇತಿಹಾಸ ದೃಷ್ಟಿಯಿಂದಲೂ ಮಹತ್ವಪೂರ್ಣ ಶತಮಾನವಾಗಿರುತ್ತದೆ. ಈ ಶತಮಾನದಲ್ಲಿ ಭಾರತದ ವಾಯುವ್ಯ ಭಾಗದ ಮೇಲೆ ಪ್ರಪ್ರಥಮವಾಗಿ ವಿದೇಶಿಯರು ಧಾಳಿಮಾಡಿದರು. ಇವರಲ್ಲಿ ಪರ್ಶಿಯನ್ನರು ಮೊದಲಿಗರು. ಕ್ರಿ.ಪೂ. ಆರನೇ ಶತಮಾನದ ಉತ್ತರಾರ್ಧದಲ್ಲಿ ಪರ್ಶಿಯದ ಅಕೆಮೇನಿಯನ್ ಸಾಮ್ರಾಜ್ಯದ ಸ್ಥಾಪಕನಾದ ಸೈರಸ್ಸನು (ಕ್ರಿ.ಪೂ. 558-530) ಗೆಡ್ರೋಸಿಯದ ಮೂಲಕ ಭಾರತದ ಮೇಲೆ ಸೈನಿಕ ಧಾಳಿಮಾಡಿದನು. ಅಫ್‌ಘಾನಿಸ್ತಾನದ ಪ್ರಸಿದ್ಧ ನಗರವಾಗಿದ್ದ ಕಪಿಸವನ್ನು ಸೈರಸ್ಸನು ನಾಶಮಾಡಿದನೆಂದು ಗ್ರೀಕ್ ಇತಿಹಾಸಕಾರ ಪ್ಲಿನಿಯು ಹೇಳುತ್ತಾನೆ. ಸೈರಸ್ಸನು ಗಾಂಧಾರ ರಾಜ್ಯವನ್ನು ಗೆದ್ದು ಅದನ್ನು ಪರ್ಶಿಯನ್ ಸಾಮ್ರಾಜ್ಯದ ಒಂದು ಭಾಗವನ್ನಾಗಿ ಮಾಡಿಕೊಂಡಿದ್ದನೆಂದು ಹೇಳಲಾಗಿದೆ. ಈ ಸಮಯದಲ್ಲಿ ಗಾಂಧಾರದ ರಾಜನಾಗಿದ್ದ ಪುಕ್ಕುಸತಿ ಎಂಬುವನು ಮಗಧ ರಾಜ್ಯದ ಬಿಂಬಸಾರನ ಸಹಾಯವನ್ನು ಕೇಳಿದನೆಂದು ಗ್ರೀಕರ ಆಧಾರಗಳು ತಿಳಿಸುತ್ತವೆ. ಅಕೆಮೇನಿಯನ್ ಸಾಮ್ರಾಟನಾಗಿದ್ದ ಸೈರಸ್ಸನು ಬ್ಯಾಕ್ಟ್ರಿಯನ್ನರು ಮತ್ತು ಭಾರತೀಯರನ್ನು ತನ್ನ ಆಳ್ವಿಕೆಗೊಳಪಡಿಸಿಕೊಂಡಿದ್ದನೆಂದು ಮತ್ತು ಅವನು ತನ್ನ ಸಾಮ್ರಾಜ್ಯವನ್ನು ಸಿರಿಯದಿಂದ ಇರಿತಿರೇನಿಯನ್ (ಹಿಂದೂ ಮಹಾಸಾಗರ) ವರೆಗೆ ವಿಸ್ತರಿಸಿದ್ದನೆಂದು ಗ್ಸನೋಫಾನ್ ತಿಳಿಸುತ್ತಾನೆ. ಸೈರಸ್ಸನ ಮರಣಾನಂತರ ಅವನ ಮಗ ಒಂದನೇ ಡೇರಿಯಸ್ಸನು (ಕ್ರಿ.ಪೂ. 522-486) ಪರ್ಶಿಯದ ಸಾಮ್ರಾಟನಾದನು. ಒಂದನೇ ಡೇರಿಯಸ್ಸನ ಬೆಹಿಸ್ಟಾನ್ ಶಾಸನವು ಗಾಂಧಾರ ರಾಜ್ಯದ ಪ್ರಜೆಗಳು ಪರ್ಶಿಯನ್ ಸಾಮ್ರಾಜ್ಯದ ಪ್ರಜೆಗಳಾಗಿದ್ದರೆಂದು ತಿಳಿಸುತ್ತದೆ. ಡೇರಿಯಸ್ಸನು ಕ್ರಿ.ಪೂ. 527ರಲ್ಲಿ ಸ್ಕೈಲಾಕ್ಸ್ ಎಂಬುವನ ನೇತೃತ್ವದಲ್ಲಿ

ಸಿಂಧೂ ನದಿಯ ಬಯಲನ್ನು ಅನ್ವೇಷಣೆ ಮಾಡಲು ನೌಕಾತಂಡವೊಂದನ್ನು ಕಳುಹಿಸಿದ್ದನೆಂದು ಗ್ರೀಕ್ ಇತಿಹಾಸಕಾರ ಹೆರೋಡೋಟಸ್ ತನ್ನ 'ಹಿಸ್ಟಾರಿಕ' ಕೃತಿಯಲ್ಲಿ ತಿಳಿಸುತ್ತಾನೆ. ಡೇರಿಯಸ್ ಚಕ್ರವರ್ತಿಯು ರಜಪುಟಾಣದವರೆಗಿನ ಸಿಂಧೂನದಿಯ ಬಯಲಿನ ಪ್ರದೇಶವನ್ನು ಆಕ್ರಮಿಸಿಕೊಂಡಿದ್ದು ಈ ಭಾಗವನ್ನು ತನ್ನ ಸಾಮ್ರಾಜ್ಯದ ಇಪ್ಪತ್ತನೆ ಸತ್ರಪಿಯನ್ನಾಗಿ ಮಾಡಿಕೊಂಡಿದ್ದನೆಂಬುದಕ್ಕೆ ದಾಖಲೆಗಳಿವೆ. ಇದಲ್ಲದೆ ಈ ಸತ್ರಪಿಯು ಜನಭರಿತವೂ ಮತ್ತು ಶ್ರೀಮಂತವೂ ಆದ ಪ್ರದೇಶವಾಗಿದ್ದು ಆದರಿಂದ ಚಿನ್ನದ ರೂಪದಲ್ಲಿ ಒಂದೂವರೆ ಕೋಟಿ ರೂಪಾಯಿಗಳಷ್ಟು ಪೊಗದಿಯ ಡೇರಿಯಸ್‌ಸ್ಸನ ಖಜಾನೆಗೆ ಸಲ್ಲುತ್ತಿತ್ತು. ಪರ್ಶಿಯನ್ ಸಾಮ್ರಾಜ್ಯದ ಏಷ್ಯಾದ ಪ್ರಾಂತ್ಯಗಳಿಂದ ಬರುತ್ತಿದ್ದ ಒಟ್ಟು ವರಮಾನದ 1/3 ಭಾಗ ಪೊಗದಿಯು ಈ ಸತ್ರಪಿಯಿಂದ ಬರುತ್ತಿದ್ದಿತೆಂದು ಗ್ರೀಕ್ ಇತಿಹಾಸಕಾರರು ತಿಳಿಸುತ್ತಾರೆ.

ಒಂದನೇ ಡೇರಿಯಸ್ಸನ ನಂತರ ಪರ್ಶಿಯದ ಸಾಮ್ರಾಟನಾದ ಜರ್‌ಕ್ಸಿಸ್ ಚಕ್ರವರ್ತಿ (ಕ್ರಿ.ಪೂ. 486-465) ಕಾಲದಲ್ಲೂ ಪರ್ಶಿಯನ್ನರ ಅಧಿಕಾರವು ವಾಯುವ್ಯ ಭಾರತದ ಮೇಲೆ ಮುಂದುವರಿದಿದ್ದಿತು. ಜರ್‌ಕ್ಸಿಸ್‌ನು ಗ್ರೀಸಿನ ಮೇಲೆ ಆಕ್ರಮಣ ಮಾಡಿದಾಗ ಅ ಸೈನ್ಯದಲ್ಲಿ ಭಾರತೀಯ ಸೈನಿಕರು ಮತ್ತು ಅಶ್ವದಳವೂ ಇದ್ದಿತೆಂದು ಹೇಳಲಾಗಿದೆ. ಪ್ಲಟೇಯಿಯಾ ಎಂಬಲ್ಲಿ ನಡೆದ ಯುದ್ಧದಲ್ಲಿ ಗ್ರೀಕರ ಕೈಯಿಂದ ಪರ್ಶಿಯನ್ನರು ಅನುಭವಿಸಿದ ಸೋಲಿನಿಂದ ಅಕೆಮೆನಿಯನ್ ಸಾಮ್ರಾಜ್ಯದ ಅವನತಿಯು ಆರಂಭವಾಯಿತು. ಆಕೆಮೇನಿಯನ್ ಸಂತತಿಯ ಕೊನೆಯ ಚಕ್ರವರ್ತಿಯಾದ ಮೂರನೆ ಡೇರಿಯಸ್ಸನನ್ನು ಕ್ರಿ.ಪೂ. 330ರಲ್ಲಿ ಅಲೆಂಗ್ಸಾಡರನು ಪರ್ಶಿಯಾದ ಮೇಲೆ ಧಾಳಿಮಾಡಿ ಆರ್ಬೆಲ ಯುದ್ಧದಲ್ಲಿ ಸಂಪೂರ್ಣವಾಗಿ ಸೋಲಿಸುವವರೆಗೂ ಸಿಂಧೂ ಪ್ರದೇಶದ ಮೇಲೆ ಪರ್ಶಿಯನ್ನರ ಅಧಿಕಾರವು ಮುಂದುವರಿದಿದ್ದು ಅನಂತರ ಕೊನೆಗೊಂಡಿತು. ಅಲೆಗ್ಸಾಂಡರನು ಕ್ರಿ.ಪೂ. 327ರಲ್ಲಿ ಭಾರತದ ಮೇಲೆ ಧಾಳಿ ಮಾಡಿದಾಗ ಪಂಜಾಬು ಪ್ರದೇಶದಲ್ಲಿ ಅನೇಕ ಸಣ್ಣ ಪುಟ್ಟ ರಾಜ್ಯಗಳಿದ್ದವು. ಕಾಬೂಲ್ ನದಿಯಿಂದ ಉತ್ತರ ಭಾಗಕ್ಕಿದ್ದ ಪ್ರದೇಶವನ್ನು ಅಶ್ವಕರು ಎಂಬವರು ಆಳುತ್ತಿದ್ದರು. ಗಾಂಧಾರ ರಾಜ್ಯವು ಪುಷ್ಕಲವತಿ ಮತ್ತು ತಕ್ಷಶಿಲೆ ಎಂಬ ಎರಡು ರಾಜ್ಯಗಳಾಗಿ ಒಡೆಯಲ್ಪಟ್ಟಿತ್ತು. ತಕ್ಷಶಿಲೆಯ ಉತ್ತರ ಭಾಗಕ್ಕೆ ಉರಸ ಮತ್ತು ಅಭಿಹರರ ರಾಜ್ಯಗಳಿದ್ದವು. ಜೀಲಂ ಮತ್ತು ಚೀನಾಬ್ ನದಿಗಳ ನಡುವೆ ಪೌರವರ ಎರಡು ರಾಜ್ಯಗಳೂ ಮತ್ತು ಅವುಗಳ ನೆರೆಯ ಭಾಗದಲ್ಲಿ ಸಿಬಿ, ಮಾಳವ, ಕ್ಷುದ್ರಕ ಮತ್ತು ಅಂಬಸ್ಥರ ರಾಜ್ಯಗಳಿದ್ದು ಭಾರತದ ವಾಯುವ್ಯ ಭಾಗದಲ್ಲಿ ಹಲವಾರು ಸಣ್ಣ ಪುಟ್ಟ ರಾಜ್ಯಗಳು ಅಸ್ತಿತ್ವಕ್ಕೆ ಬಂದಿದ್ದುದಾಗಿ ಕಂಡುಬರುತ್ತದೆ.

## ಭಾರತದ ಮೇಲೆ ಪರ್ಶಿಯನ್ನರ ಪ್ರಭಾವ

ಭಾರತ ಮತ್ತು ಪರ್ಶಿಯಗಳಿಗೆ ಚಾರಿತ್ರಿಕ ಯುಗದ ಆರಂಭದಿಂದಲೂ ಸಂಬಂಧ ಏರ್ಪಟ್ಟಿದ್ದಾಗಿ ಆರ್ಯರ ಋಗ್ವೇದದಲ್ಲೂ ಮತ್ತು ಪರ್ಶಿಯನ್ನರ 'ಜೆಂಡ ಅವೆಸ್ತ'ದಲ್ಲೂ ಪ್ರಸ್ತಾಪಿಸಲಾಗಿರುವ ಇಂದ್ರ. ವರುಣ ಮೊದಲಾದ ದೇವತೆಗಳ ಹೆಸರುಗಳಿಂದ ತಿಳಿದುಬರುತ್ತದೆ. ಇದರಿಂದ ಈ ಎರಡು ಜನಾಂಗಗಳು ಪರಸ್ಪರ

ಪ್ರಭಾವಿತರಾಗಿರುವುದಾಗಿ ಕಂಡುಬರುತ್ತದೆ. ತರುವಾಯದಲ್ಲಿ ಭಾರತದಲ್ಲಿ ಜಾರಿಗೆ ಬಂದ ಸೂರ್ಯನ ಪೂಜೆಯು ಬಹುಶಃ ಪರ್ಶಿಯನ್ನರ ಸಂಪರ್ಕದಿಂದ ಉಂಟಾಯಿತೆಂದು ಅಭಿಪ್ರಾಯ ಪಡಲಾಗಿದೆ. ಆದರೆ ಭಾರತ ಮತ್ತು ಪರ್ಶಿಯಗಳ ನಡುವೆ ರಾಜಕೀಯ ಮತ್ತು ಸಾಂಸ್ಕೃತಿಕ ಸಂಬಂಧಗಳು ಭಾರತದ ಮೇಲೆ ಪರ್ಶಿಯನ್ನರ ಅಧಿಕಾರದ ಸ್ಥಾಪನೆಯಿಂದ ಆರಂಭವಾದವು. ಪರ್ಶಿಯನ್ನರ ಆಳ್ವಿಕೆಯಿಂದ ಭಾರತೀಯರು ಅನೇಕ ವಿಷಯಗಳನ್ನು ಅರಿತರು. ಪರ್ಶಿಯನ್ನರ ಆಕ್ರಮಣದ ಪರಿಣಾಮವಾಗಿ ಭಾರತ ಮತು ಪರ್ಶಿಯಾಗಳಿಗೆ ಭೂಮಾರ್ಗವಾಗಿ ಸಂಪರ್ಕವೇರ್ಪಟ್ಟಿತು. ಭಾರತದ ವಾಯುವ್ಯ ಪ್ರದೇಶಗಳ ಮೇಲೆ ಪರ್ಶಿಯನ್ನರು ಹೆಚ್ಚಿನ ಪ್ರಭಾವ ಬೀರಿದರು. ಪರ್ಶಿಯನ್ ಸಾಮ್ರಾಟರ ಸೇವೆಯಲ್ಲಿದ್ದು ಗ್ರೀಕರ ವಿರುದ್ಧ ಹೋರಾಡಿದ ಭಾರತದ ಯೋಧರು ಗ್ರೀಕರ ಪರಿಚಯ ಪಡೆದರು. ಅಂತೆಯೆ ಗ್ರೀಕರಲ್ಲೂ ಭಾರತದ ಬಗ್ಗೆ ಹೆಚ್ಚು ತಿಳಿದುಕೊಳ್ಳಬೇಕೆಂಬ ಹಂಬಲವು ಹೆಚ್ಚಿತು. ಪರ್ಶಿಯನ್ ಸಾಮ್ರಾಜ್ಯದ ಇಪ್ಪತ್ತನೆ ಸತ್ರಪಿಯಾಗಿದ್ದ ಪಂಜಾಬ್ ಪ್ರಾಂತ್ಯದಲ್ಲಿ ಸರ್ಕಾರದ ಸೇವೆಯಲ್ಲಿ ಪರ್ಶಿಯನ್ ಅಧಿಕಾರಿಗಳಿದ್ದುದರ ಪರಿಣಾಮವಾಗಿ ಅದರ ಪ್ರಭಾವವು ಅಲ್ಲಿನ ಆಡಳಿತದ ಮೇಲೂ ಮತ್ತು ಜನರ ಸಂಪ್ರದಾಯ ಆಚರಣೆಗಳ ಮೇಲೂ ಕಂಡುಬಂದಿತು. ಪರ್ಶಿಯನ್ ಅಧಿಕಾರಿಗಳಲ್ಲಿ ಕೆಲವರನ್ನು ಚಂದ್ರಗುಪ್ತಮೌರ್ಯನು ತನ್ನ ಸೇವೆಯಲ್ಲಿ ನೇಮಿಸಿಕೊಂಡಿದ್ದುದಾಗಿ ತಿಳಿದು ಬರುತ್ತದೆ. ಅವರಲ್ಲಿ 'ತಹಸಪ' ಎಂಬವನನ್ನು ಕಾಥೇವಾಡದ ರಾಜ್ಯಪಾಲನನ್ನಾಗಿ ನೇಮಿಸಿದ್ದುದಾಗಿ ಜುನ್ನಾಘಡ್‌ನ ಗಿರ್ನಾರ್ ಶಾಸನದಲ್ಲಿ ಉಲ್ಲೇಖಿತವಾಗಿದೆ. ಅಂತೆಯೆ ಚಂದ್ರಗುಪ್ತಮೌರ್ಯನು ಸೆಲ್ಯೂಕಸ್ಸನನ್ನು ಸೋಲಿಸಿ ಅವನ ಮಗಳನ್ನು ಮದುವೆ ಮಾಡಿಕೊಂಡದ್ದು ಭಾರತ ಮತ್ತು ಇರಾನ್‌ಗಳ ಬಾಂಧವ್ಯದ ಮತ್ತೊಂದು ಉದಾಹರಣೆಯಾಗಿದೆ. ಈ ಕಾಲದ ಭಾರತೀಯರ ನಾಣ್ಯಗಳ ಮೇಲೂ ಪರ್ಶಿಯನ್ನರು ಪ್ರಭಾವ ಬೀರಿರುವುದಾಗಿ ಕಂಡುಬರುತ್ತದೆ. ಪರ್ಶಿಯನ್ನರ ಸಂಪರ್ಕದಿಂದ ಭಾರತದಲ್ಲಿ ಚಿನ್ನ ಮತ್ತಿತರ ಲೋಹಗಳಿಂದ ಮಾಡಿದ ನಾಣ್ಯಗಳು ಬಳಕೆಗೆ ಬಂದವು. ಪಂಚ್‌ಮಾರ್ಕಿನ ನಾಣ್ಯಗಳನ್ನು ಪರ್ಶಿಯನ್ನರ ನಾಣ್ಯಗಳನ್ನು ಅನುಸರಿಸಿ ಚಲಾವಣೆಗೆ ತರಲಾಯಿತೆಂದು ಅಭಿಪ್ರಾಯಪಡಲಾಗಿದೆ. ಇರಾನಿನವರು ಅಥವ ಪರ್ಶಿಯನ್ನರು ನಿಜಕ್ಕೂ ಭಾರತೀಯಾರ್ಯರ ಕುಲದವರು. ಈ ಎರಡು ಜನಾಂಗಗಳ ಭಾಷೆ ಮತ್ತು ಪವಿತ್ರ ಗ್ರಂಥಗಳಲ್ಲೂ ತೀರ ಹತ್ತಿರದ ಸಾಮ್ಯ ಕಂಡುಬರುತ್ತದೆ. ಇರಾನಿಯನ್ನರ ಪವಿತ್ರ ಗ್ರಂಥವಾದ 'ಜೆಂಡ ಅವಸ್ತಾ' ಭಾಷೆಯಲ್ಲಿಯೂ ಛಂದಸ್ಸಿನಲ್ಲಿಯೂ, ದೇವತಾ ಕಲ್ಪನೆಯಲ್ಲಿಯೂ ವೇದಗಳಿಗೆ ಬಹಳ ಹತ್ತಿರವಾಗಿದೆ. ಕ್ರಿ.ಶ. 632ರಲ್ಲಿ ಇಸ್ಲಾಂ ಧ್ವಜದೊಡನೆ ಅರಬರು ಇರಾನನ್ನು ಪ್ರವೇಶಿಸಿದರು. ಇದಾದ ಇಪ್ಪತ್ತು ವರ್ಷಗಳೊಳಗೆ ಇಡೀ ಇರಾನ್ ಇಸ್ಲಾಂ ಸ್ವೀಕರಿಸಿತು. ಈ ಸಂದರ್ಭದಲ್ಲಿ ಇಸ್ಲಾಂ ಅನ್ನು ಸ್ವೀಕರಿಸಲಿಚ್ಚಿಸದ ಜರತುಷ್ಟನ ಅನುಯಾಯಿಗಳು ಭಾರತಕ್ಕೆ ಓಡಿಬಂದರು. ಇರಾನಿಯನ್ನರ ಮಹಾಪುರಾಣ 'ಶಾಹನಾಮ' ಜಗತ್‌ಪ್ರಸಿದ್ಧ ಉಮರ್ ಖಯಾಂ. ಖೊರಾಸನ್ ಮೊದಲಾದೆಡೆಗಳಲ್ಲಿನ ಅನುಪಮವಾದ ವಾಸ್ತುಶಿಲ್ಪಗಳು, ವೈಶಿಷ್ಟ್ಯ ಪೂರ್ಣವಾದ ಪಾರಸೀಕ ಸಂಗೀತ ಮತ್ತು ಚಿತ್ರಶೈಲಿ ಭಾರತೀಯರ ಮೇಲೆ ಪ್ರಭಾವ ಬೀರಿದವು. ಪರ್ಶಿಯಾನ್ ಭಾಷೆಯು ಅರಬರ ಸಂಪರ್ಕದಿಂದ ಎಷ್ಟು ಹುಲುಸಾಗಿ

ಮತ್ತು ಮಧುರವಾಗಿ ಬೆಳೆಯಿತೆಂದರೆ ತರುವಾಯದಲ್ಲಿ ಭಾರತದಲ್ಲಿ ಪ್ರಭುತ್ವ ಸ್ಥಾಪಿಸಿದ ಮುಸ್ಲಿಂ ಸಂತತಿಗಳು ಬಹುತರವಾಗಿ ಪರ್ಶಿಯನ್ ಭಾಷೆಯನ್ನು ಆಡಳಿತದ ಮಾಧ್ಯಮವನ್ನಾಗಿ ಮಾಡಿಗೊಂಡವು. ಭಾರತೀಯ ಭಾಷೆಗಳ ಮೇಲೂ ಪರ್ಶಿಯನ್ ಭಾಷೆಯ ಪ್ರಭಾವವು ಗಮನಾರ್ಹವಾಗಿದೆ. ಪರ್ಶಿಯನ್ನರು ಪಂಜಾಬು ಪ್ರಾಂತ್ಯದಲ್ಲಿ ಖರೋಸ್ಟಿಲಿಪಿಯನ್ನು ಜಾರಿಗೆ ತಂದರು. ಬಲದಿಂದ ಎಡಕ್ಕೆ ಬರೆಯಲಾಗುತ್ತಿದ್ದ ಈ ಲಿಪಿಯು ಸಿಂದ್ ಭಾಗದಲ್ಲಿ ಕ್ರಿ.ಶ. ನಾಲ್ಕನೆ ಶತಮಾನದವರೆಗೂ ಬಳಕೆಯಲ್ಲಿದ್ದಿತು. ಅಶೋಕ ಚಕ್ರವರ್ತಿಯೂ ಕೂಡ ತನ್ನ ಸಾಮ್ರಾಜ್ಯದ ಈ ಭಾಗದಲ್ಲಿ ಖರೋಸ್ಟಿ ಲಿಪಿಯನ್ನು ತನ್ನ ಧರ್ಮಪ್ರಸಾರಕ್ಕೂ ಮತ್ತು ಆಡಳಿತ ವ್ಯವಹಾರಕ್ಕೂ ಬಳಸಿಕೊಂಡಿದ್ದನು. ಇದಲ್ಲದೆ ಬಂಡೆಗಳು ಮತ್ತು ಶಿಲಾಸ್ಥಂಭಗಳ ಮೇಲೆ ರಾಜಾಜ್ಞೆಗಳನ್ನು ಮತ್ತು ಸಾಧನೆಗಳನ್ನು ಕೆತ್ತಿಸುವ ಪದ್ಧತಿಯನ್ನು ಜಾರಿಗೆ ತಂದ ಡೇರಿಯಸ್ಸನಿಂದ ಅಶೋಕನು ಪ್ರಭಾವಿತನಾಗಿ ತನ್ನ ಧರ್ಮ ಸಂದೇಶಗಳನ್ನು ಕಲ್ಲುಬಂಡೆಗಳ ಮೇಲೆ ಕೆತ್ತಿಸುವ ಪದ್ಧತಿಯನ್ನು ಅನುಕರಣೆ ಮಾಡದುದಾಗಿ ಕಂಡುಬರುತ್ತದೆ. ಭಾರತೀಯ ಕಲೆ ಮತ್ತು ವಾಸ್ತುಶಿಲ್ಪದ ಮೇಲೂ ಪರ್ಶಿಯನ್ನರ ಪ್ರಭಾವವು ಕಂಡುಬರುತ್ತದೆ. ಅಶೋಕನ ಸ್ಥಂಭಗಳ ಮೇಲೆ ಕಂಡುಬರುವ ಗಂಟೆಯ ಆಕಾರವೂ ಮತ್ತು ಕಕ್ಷೆಗಳಿಂದ ಕೂಡಿರುವ ಸಿಂಹಗಳ ಚಿತ್ರಗಳು ಪರ್ಶಿಯನ್ನರ ಪ್ರಭಾವವನ್ನು ಸೂಚಿಸುತ್ತವೆ. ಭಾರತೀಯರು ಪರ್ಶಿಯನ್ನರ ಆಡಳಿತ ವ್ಯವಸ್ಥೆಯಿಂದಲೂ ಅನೇಕ ಹೊಸ ವಿಷಯಗಳನ್ನು ತಿಳಿದುಕೊಂಡರು. ಪುರಾತನ ಜಗತ್ತಿನಲ್ಲಿ ಪರ್ಶಿಯನ್ನರು ವಿಶಾಲ ಸಾಮ್ರಾಜ್ಯವನ್ನು ಸ್ಥಾಪಿಸಿ ಅದಕ್ಕೆ ಅತ್ಯುತ್ತಮವಾದ ಆಡಳಿತ ಯಂತ್ರವನ್ನು ರೂಪಿಸಿ ಮುಂದೆ ಪ್ರಾಚೀನ ಭಾರತದಲ್ಲಿ ಮೊದಲ ಬಾರಿಗೆ ವಿಶಾಲ ಸಾಮ್ರಾಜ್ಯವನ್ನು ಸ್ಥಾಪಿಸಿ ದಕ್ಷ ಆಡಳಿತವನ್ನು ರೂಪಿಸಿದ ಮೌರ್ಯರ ಚಕ್ರವರ್ತಿ ಚಂದ್ರಗುಪ್ತಮೌರ್ಯನಿಗೆ ಮಾರ್ಗದರ್ಶಕರಾದರೆಂದು ಇತಿಹಾಸಕಾರರು ಅಭಿಪ್ರಾಯ ಪಟ್ಟಿರುವರು. ಈ ರೀತಿಯಲ್ಲಿ ಪರ್ಶಿಯನ್ನರು ಭಾರತದ ಮೇಲೆ ತಮ್ಮ ಅಧಿಕಾರ ಸ್ಥಾಪನೆಯಿಂದ ತಮ್ಮ ಪ್ರಭಾವವನ್ನು ಬೀರುವುದರ ಜೊತೆಗೆ ಭಾರತದ ಸಂಸ್ಕೃತಿಯ ಪರಿಚಯವನ್ನೂ ಪಾಶ್ಚಾತ್ಯ ಜಗತ್ತಿಗೂ ಮಾಡಿಕೊಟ್ಟು ಭಾರತದ ಬಗ್ಗೆ ವಿದೇಶೀಯರಲ್ಲಿ ಹೆಚ್ಚಿನ ಆಸಕ್ತಿಯನ್ನು ಹುಟ್ಟಿಸಿದರು. ಅಲೆಗ್ಸಾಂಡರನ ದಂಡಯಾತ್ರೆಗೆ ಪರ್ಶಿಯನ್ನರು ದಾರಿಮಾಡಿಕೊಟ್ಟರು.

### ಗ್ರೀಕರ ಆಕ್ರಮಣ: ಅಲೆಗ್ಸಾಂಡರನ ದಂಡಯಾತ್ರೆ

ಪರ್ಶಿಯನ್ನರ ನಂತರ ಭಾರತದ ಮೇಲೆ ಧಾಳಿ ಮಾಡಿದ ವಿದೇಶೀಯರಲ್ಲಿ ಗ್ರೀಕರು ಎರಡನೆಯವರಾಗಿದ್ದಾರೆ. ಗ್ರೀಕರು ಕ್ರಿ.ಪೂ.ನಾಲ್ಕನೆ ಶತಮಾನದ ಮಧ್ಯಭಾಗದಲ್ಲಿ ಮ್ಯಾಸಿಡೋನಿಯ ರಾಜ್ಯದ ಎರಡನೆ ಫಿಲಿಪ್ಪನ ನೇತೃತ್ವದಲ್ಲಿ ಪ್ರಬಲ ಶಕ್ತಿಯಾಗಿ ಮಾರ್ಪಟ್ಟರು. ಫಿಲಿಪ್ಪನು ತನ್ನ ದಕ್ಷತೆ ಮತ್ತು ಸಾಮರ್ಥ್ಯಗಳಿಂದ ಗ್ರೀಸಿನ ನಗರ ರಾಜ್ಯಗಳಲ್ಲಿ ಏರ್ಪಟ್ಟಿದ್ದ ಅರಾಜಕತೆಯನ್ನು ಕೊನೆಗಾಣಿಸಿ ಅವುಗಳನ್ನು ಮ್ಯಾಸಿಡೋನಿಯ ರಾಜ್ಯದ ಹತೋಟಿಗೆ ಒಳಪಡಿಸಿಕೊಂಡನು. ಫಿಲಿಪ್ಪನು ತನ್ನ ಶತ್ರುರಾಜ್ಯವಾಗಿದ್ದ ಪರ್ಶಿಯಾ ಸಾಮ್ರಾಜ್ಯದ ಮೇಲೆ ಆಕ್ರಮಣ ಮಾಡಲು ಸಿದ್ಧತೆಯಲ್ಲಿ ತೊಡಗಿದ್ದಾಗ ಕೊಲೆಮಾಡಲ್ಪಟ್ಟನು. ಅನಂತರ ಅವನ ಆಸೆ ಆಕಾಂಕ್ಷೆಗಳನ್ನು ಈಡೇರಿಸುವ ಜವಾಬ್ದಾರಿಯು ಅವನ ಮಗ ವಿಖ್ಯಾತ ಅಲೆಗ್ಸಾಂಡರನ ಪಾಲಿಗೆ

ಬಂದಿತು. ಅಲೆಗ್ಸಾಂಡರನು ತನ್ನ 22ನೇ ವಯಸ್ಸಿನಲ್ಲಿ ರಾಜನಾದನು. ಅಲೆಗ್ಸಾಂಡರನು ತನ್ನ ತಂದೆಯಿಂದ ಒಳ್ಳೆಯ ಸೈನಿಕ ಶಿಕ್ಷಣ ಪಡೆದಿದ್ದನು. ಗ್ರೀಸಿನ ಪ್ರಸಿದ್ಧ ತತ್ವಜ್ಞಾನಿಗಳಲ್ಲೊಬ್ಬನಾಗಿದ್ದ ಅರಿಸ್ಟಾಟಲ್ ಇವನ ಗುರುವಾಗಿದ್ದನು. ಅಲೆಗ್ಸಾಂಡರನು ಒಳ್ಳೆಯ ಯೋಧನೂ, ಸೇನಾಚತುರನೂ, ಚಾಣಾಕ್ಷನೂ ಮತ್ತು ಮಹಾ ಹೋರಾಟಗಾರನೂ ಆಗಿದ್ದನು. ಅಧಿಕಾರರೂಢನಾದ ಕೆಲವು ದಿವಸಗಳಲ್ಲಿಯೆ ಗ್ರೀಸಿನ ನಗರ ರಾಜ್ಯಗಳಲ್ಲಿ ತನ್ನ ತಂದೆಯ ಮರಣದ ನಂತರ ಏರ್ಪಟ್ಟಿದ್ದ ಅರಾಜಕತೆಯ ಪರಿಸ್ಥಿತಿಯನ್ನು ಕೊನೆಗಾಣಿಸಿ ಪರ್ಶಿಯಾ ಸಾಮ್ರಾಜ್ಯದ ಮೇಲೆ ಧಾಳಿ ಮಾಡಲು ಒಂದು ದೊಡ್ಡ ಸೈನ್ಯವನ್ನು ಸಜ್ಜುಗೊಳಿಸಿದನು. ತಾನೇ ಸೈನ್ಯದ ನಾಯಕತ್ವವನ್ನು ವಹಿಸಿ ಮೊದಲು ಈಜಿಪ್ಟ್ ಮತ್ತು ಏಷ್ಯಾ ಮೈನರ್‌ಗಳನ್ನು ಗೆದ್ದು ತನ್ನ ಸಾಮ್ರಾಜ್ಯಕ್ಕೆ ಸೇರಿಸಿಕೊಂಡು, ಪರ್ಶಿಯಾ ಸಾಮ್ರಾಜ್ಯದ ಮೇಲೆ ಧಾಳಿಮಾಡಿದನು. ಕ್ರಿ.ಪೂ. 330ರಲ್ಲಿ ನಡೆದ ಅರ್ಬೆಲ ಕದನದಲ್ಲಿ ಪರ್ಶಿಯದ ಚಕ್ರವರ್ತಿ ಮೂರನೆ ಡೇರಿಯಸ್ಸನನ್ನು ಸಂಪೂರ್ಣವಾಗಿ ಸೋಲಿಸಿದನು. ಡೇರಿಯಸ್ಸನು ತಲೆತಪ್ಪಿಸಿಕೊಂಡು ಹೋಗುವ ಪ್ರಯತ್ನದಲ್ಲಿದ್ದಾಗ ಅವನ ಶತ್ರುವೊಬ್ಬನಿಂದ ಕೊಲೆ ಮಾಡಲ್ಪಟ್ಟನು. ಅಲೆಗ್ಸಾಂಡರು ಪರ್ಶಿಯನ್ ಸಾಮ್ರಾಜ್ಯದ ರಾಜಧಾನಿಯಾಗಿದ್ದ ಪರ್ಸಿಪೋಲಿಸ್ ಮತ್ತು ಸೂಸನಗರಗಳನ್ನು ಮುತ್ತಿ ಲೂಟಿಮಾಡಿ ಅವುಗಳಿಗೆ ಬೆಂಕಿ ಇಡಿಸಿದನು.

ಪರ್ಶಿಯದ ಮೇಲಿನ ವಿಜಯದಿಂದ ಉತ್ತೇಜಿತನಾದ ಅಲೆಗ್ಸಾಂಡರನು ಅಪ್ಘಾನಿಸ್ಥಾನ ಮತ್ತು ಕಾಬೂಲ್‌ಗಳನ್ನು ವಶಪಡಿಸಿಕೊಂಡು ಭಾರತದ ಮೇಲೆ ತನ್ನ ದಂಡ ಯಾತ್ರೆಯನ್ನು ಮುಂದುವರಿಸಿದನು. ಈ ಸಮಯದಲ್ಲಿ ಭಾರತದಲ್ಲಿದ್ದ ರಾಜಕೀಯ ಪರಿಸ್ಥಿತಿಯೂ ಅವನಿಗೆ ಅನುಕೂಲವಾಗಿತ್ತು. ದೇಶದಲ್ಲಿ ಹಲವಾರು ಸಣ್ಣಪುಟ್ಟ ರಾಜ್ಯಗಳು ಅಸ್ತಿತ್ವದಲ್ಲಿದ್ದು ಅವುಗಳಲ್ಲಿ ದ್ವೇಷಾಸೂಯೆಗಳು ತುಂಬಿತುಳುಕುತ್ತಿತ್ತು, ಇದರಿಂದಾಗಿ ಅಲೆಗ್ಸಾಂಡರನು ಭಾರತದಲ್ಲಿ ತನ್ನ ಕಾರ್ಯಾಚರಣೆಗಳಿಗೆ ಒಳಪಟ್ಟಿದ್ದ ಪ್ರದೇಶದಲ್ಲಿ ಒಬ್ಬ ರಾಜನ ವಿರುದ್ಧ ಮತ್ತೊಬ್ಬನನ್ನು ಎತ್ತಿಕಟ್ಟಿ ತನ್ನ ಉದ್ದೇಶವನ್ನು ಸಾಧಿಸಿಕೊಳ್ಳುವುದರಲ್ಲಿ ಯಾವ ಕಷ್ಟವನ್ನೂ ಕಾಣಲಿಲ್ಲ. ಕೆಲವರು ತಮ್ಮ ಅಧಿಕಾರ ಮತ್ತು ಆರೆಸೊತ್ತಿಗೆಗಳನ್ನು ಉಳಿಸಿಕೊಂಡು ಇತರರನ್ನು ನಾಶಮಾಡಬೇಕೆಂದು ಬಯಸಿ ಶತ್ರುವಿನ ಪಕ್ಷವನ್ನು ಸೇರಿ ಅವನಿಗೆ ಸಹಾಯಮಾಡಿದರು. ಮತ್ತೆ ಕೆಲವರು ಒಟ್ಟುಗೂಡಿ ಅಲೆಗ್ಸಾಂಡರನನ್ನು ಎದುರಿಸಬೇಕೆಂಬ ಅಪೇಕ್ಷೆಯನ್ನು ಹೊಂದಿದ್ದರೂ ಕಾಲಾವಕಾಶದ ಮತ್ತು ಸಾಧನ ಸಂಪತ್ತುಗಳ ಕೊರತೆಯಿಂದಾಗಿ ನಿಷ್ಕ್ರಿಯಾರಾದರು. ಅಲೆಗ್ಸಾಂಡರನು ಭಾರತದ ಮೇಲಿನ ತನ್ನ ದಂಡಯಾತ್ರೆಯಲ್ಲಿ ಮೊದಲಿಗೆ ಪುಷ್ಕಲವತಿಯ ಅಸ್ಟೆಸ್‌ರಾಜನ ಪ್ರತಿಭಟನೆಯನ್ನು ಎದುರಿಸಬೇಕಾಯಿತು. ಆದರೆ ಅವನು ಅಲೆಗ್ಸಾಂಡರನಿಗೆ ಯಾವ ವಿಧದಲ್ಲೂ ಸರಿಸಮಾನನಾಗಿರಲಿಲ್ಲ. ಆದ್ದರಿಂದ ಅವನ ರಾಜ್ಯವು ಬಹು ಸುಲಭವಾಗಿ ಅಲೆಗ್ಸಾಂಡರನ ವಶವಾಯಿತು. ಇದಾದ ನಂತರ ಅಲೆಗ್ಸಾಂಡರನ, ಸೈನ್ಯವೂ ಮತ್ತು ಆವನ ದಂಡನಾಯಕರುಗಳಾದ ಹೆಪಾಸ್ಟಿಯನ್ ಮತ್ತು ಪರ್ಡಿಕಾಸ್ ನೇತೃತ್ವದಲ್ಲಿದ್ದ ಸೈನ್ಯಗಳೂ ಒಟ್ಟುಗೂಡಿ, ತಕ್ಷಶಿಲೆಯ ಕಡೆ ಮುಂದುವರಿದವು. ತಕ್ಷಶಿಲೆಯ ರಾಜನಾಗಿದ್ದ ಅಂಬಿಯು ಅಲೆಗ್ಸಾಂಡರನಿಗೆ ಶರಣಾಗತನಾಗಿ ಗ್ರೀಕರಿಗೆ ಸ್ವಾಗತ ಬಯಸಿದ್ದಲ್ಲದೆ ಜೀಲಂ ಮತ್ತು ಚೀನಾಬ್ ನದಿಗಳ ನಡುವಿನ ಪ್ರದೇಶಕ್ಕೆ ರಾಜನಾಗಿದ್ದ ತನ್ನ ಶತ್ರು

ಪೋರಸ್ಸನನ್ನು ಸೋಲಿಸುವುದಕ್ಕೂ ಅಲೆಗ್ಸಾಂಡರನಿಗೆ ಸಹಾಯ ಮಾಡಿದನು. ಪ್ರವಾಹದಿಂದ ತುಂಬಿ ಹರಿಯುತ್ತಿದ್ದ ಜೀಲಂ ನದಿಯನ್ನು ದಾಟಿ ನದಿಯ ಮತ್ತೊಂದು ದಡದಲ್ಲಿ ಶತ್ರು ಸೈನ್ಯದ ವಿರುದ್ಧ ಹೋರಾಡುವುದು ಅಲೆಗ್ಸಾಂಡರನಿಗೆ ಸುಲಭವಾದ ಕೆಲಸವಾಗಿರಲಿಲ್ಲ. ಅಲೆಗ್ಸಾಂಡರನು ತನ್ನ ಸಮಯವನ್ನು ವ್ಯರ್ಥ ಮಾಡದೆ ಧೈರ್ಯದಿಂದ ತಕ್ಷಶಿಲೆಯ ಸಮೀಪದಲ್ಲಿ ಬೀಡುಬಿಟ್ಟಿದ್ದ ತನ್ನ ಸೈನಿಕ ಶಿಬಿರಕ್ಕೆ ಹದಿನಾರು ಮೈಲಿಗಳ ದೂರದಲ್ಲಿ ಜೀಲಂ ನದಿಗೆ ದೋಣಿಗಳ ಸೇತುವೆಯನ್ನು ನಿರ್ಮಿಸಿ ಅದನ್ನು ದಾಟಿ ಶತ್ರುವಿನ ಮೇಲೆ ಆಕ್ರಮಣ ಮಾಡಿದನು. ಉತ್ತಮ ರೀತಿಯ ಸೇನಾವ್ಯೂಹ, ಒಳ್ಳೆಯ ಅಶ್ವಪಡೆ ಮತ್ತು ಪೋರಸ್ಸನ ಗಜಸೈನ್ಯದ ಮಂದಗತಿಯ ಚಲನೆಯಿಂದೊದಗಿದ ಅನುಕೂಲ, ಹಾಗೂ ಹಿಂದಿನ ರಾತ್ರಿ ಮಳೆ ಬಿದ್ದು ಭೂಮಿಯು ಜಾರುತ್ತಿದ್ದು ಪುರೂರವನ ಸೈನ್ಯ ಚಲನೆಗೆ ಅನಾನುಕೂಲವಾಗಿದ್ದುದರಿಂದ ವಿಜಯಲಕ್ಷ್ಮಿಯು ಅಲೆಗ್ಸಾಂಡರನಿಗೆ ಒಲಿಯುವುದರಲ್ಲಿ ಸಂಶಯವು ಕಂಡುಬರಲಿಲ್ಲ. ಎರಡು ಕಡೆಯ ಸೈನ್ಯಗಳಿಗೂ ನಡೆದ ಜೀಲಂ ಅಥವ, ಹೈಡಾಸ್‌ಪಸ್ ಕದನದಲ್ಲಿ ಪುರೂರವನ ಸೈನ್ಯವು ಎಷ್ಟೇ ದೊಡ್ಡದಾಗಿದ್ದರೂ ಸಂಪೂರ್ಣವಾಗಿ ಸೋತಿತು. ಪುರೂರವನು ಸೆರೆಹಿಡಿಯಲ್ಪಟ್ಟನು. ಅವನನ್ನು ಅಲೆಗ್ಸಾಂಡರನ ಮುಂದೆ ತಂದು ನಿಲ್ಲಿಸಿದಾಗ ಅಲೆಗ್ಸಾಂಡರನು ಅಲೆಗ್ಸಾಂಡರನು ನಿನ್ನನ್ನು ಹೇಗೆ ಕಾಣಬೇಕು ಎಂದು ಕೇಳಲು ನನ್ನನ್ನು ರಾಜನಂತೆಯೆ ಗೌರವಿಸಬೇಕೆಂದು ಉತ್ತರ ಕೊಟ್ಟನು. ಪುರೂರವನ ಧೈರ್ಯ ಸಾಹಸಗಳನ್ನು ಮೆಚ್ಚಿಕೊಂಡ ಅಲೆಗ್ಸಾಂಡರನು ಅವನ ರಾಜ್ಯವನ್ನು ಅವನಿಗೆ ವಹಿಸಿಕೊಟ್ಟು ಅವನನ್ನು ತನ್ನ ಸಾಮಂತನನ್ನಾಗಿ ಮಾಡಿಕೊಂಡನು. ಇದಾದ ನಂತರ ಅಲೆಗ್ಸಾಂಡರನು ಸಂಗಲದ ಕ್ಷತ್ರಿಯ ಬಣಗಳೊಂದಿಗೆ ಹೋರಾಟಮಾಡಿ ಅವರನ್ನು ಸೋಲಿಸಿ ಅವರ ರಾಜಧಾನಿಯನ್ನು ನೆಲಸಮ ಮಾಡಿದನು. ಈ ರಾಜ್ಯದ ಪೂರ್ವಕ್ಕಿದ್ದ ಸೌಭೂತಿಯು ಆಕ್ರಮಣಕಾರನೊಂದಿಗೆ ಸ್ನೇಹವನ್ನು ಮಾಡಿಕೊಂಡನು. ಅಲೆಗ್ಸಾಂಡರನು ಮುಂದೆ ಗಂಗಾನದಿಯ ಬಯಲಿನಲ್ಲಿದ್ದ ರಾಜ್ಯಗಳ ಮೇಲೆ ಆಕ್ರಮಣ ಮಾಡುವ ಉದ್ದೇಶವನ್ನಿಟ್ಟುಕೊಂಡಿದ್ದನು. ಆದರೆ ಮಗಧ ರಾಜ್ಯದ ವೈಭವವನ್ನೂ ಮತ್ತು ಸೈನಿಕ ಶಕ್ತಿಯನ್ನೂ ತಿಳಿದ ಗ್ರೀಕ್ ಸೈನಿಕರು ಅದರ ವಿರುದ್ಧ ಹೋರಾಟ ಮಾಡಲು ಹಿಂಜರಿದರು. ಅಲ್ಲದೆ ತಮ್ಮ ಮನೆಮಠಗಳನ್ನು ಬಿಟ್ಟು ಮೂರು ಸಾವಿರ ಮೈಲಿಗಳಿಗೂ ಹೆಚ್ಚು ದೂರ ಬಂದಿದ್ದ ಗ್ರೀಕ್ ಸೈನಿಕರು ಇನ್ನು ಮುಂದೆ ಭಾರತದಲ್ಲಿ ಹೋರಾಡಲು ತಮ್ಮ ಅಸಮ್ಮತಿಯನ್ನು ವ್ಯಕ್ತಪಡಿಸಿದರು. ಅಲೆಗ್ಸಾಂಡರನು ವಿಧಿಯಿಲ್ಲದೆ ತನ್ನ ಸೈನ್ಯಕ್ಕೆ ಹಿಂದಿರುಗಲು ಆಜ್ಞೆಮಾಡಿದನು. ಇದರೊಂದಿಗೆ ಅಲೆಗ್ಸಾಂಡರನ ಭಾರತದ ಮೇಲಿನ ದಂಡಯಾತ್ರೆಯು ಕೊನೆಗೊಂಡಿತು. ಅಲೆಗ್ಸಾಂಡರನು ಹಿಂದಿರುಗಿ ಹೋಗುವಾಗ ಬ್ಯಾಬಿಲಾನ್ ಮಾರ್ಗವನ್ನು ಆರಿಸಿಕೊಂಡನು.

ಅಲೆಗ್ಸಾಂಡರನು ಹಿಂದಿರುಗಿ ಹೋಗುವಾಗ ಗಣರಾಜ್ಯಗಳಾಗಿದ್ದ ಮಲ್ಲರು, ಕ್ಷುದ್ರಕರು, ಅರ್ಜುನಯನರು, ಅಂಬಸ್ಟರು ಮೊದಲಾದವರಿಂದ ಅಪಾರ ಕಷ್ಟನಷ್ಟಗಳನ್ನು ಅನುಭವಿಸಬೇಕಾಯಿತು. ಆದರೂ ಸಹಸ್ರಾರು ಜನರು ಅಲೆಗ್ಸಾಂಡರನ ಸೈನಿಕರಿಂದ ಹತರಾದರು. ಬ್ರಾಹ್ಮಣ ಬಾದಿನ ಮೇಲೆ ಮಾಡಿದ ಆಕ್ರಮಣದಿಂದ ಸಂಭವಿಸಿದ ಅನಾಹುತವು ಭೀಕರವಾಗಿತ್ತು. ಅಲೆಗ್ಸಾಂಡರನು ಭಾರತದಲ್ಲಿ ತನ್ನ ಕೊನೆಯ

ತಾಣವಾದ ಪಟ್ಟಾಲವನ್ನು ಕ್ರಿ.ಪೂ. 325ರಲ್ಲಿ ತಲುಪಿ ಅಲ್ಲಿಂದ ಸ್ವದೇಶಾಭಿಮುಖವಾಗಿ ತನ್ನ ಮರು ಪ್ರಯಾಣವನ್ನು ಮುಂದುವರಿಸಿದನು. ಆದರೆ ಹಿಂದಿರುಗಿ ಹೋಗುವಾಗ ಅವನ ಆರೋಗ್ಯ ಹದಗೆಟ್ಟು ಅವನು ಜ್ವರಪೀಡಿತನಾಗಿ ಮಾರ್ಗ ಮಧ್ಯದಲ್ಲಿಯೆ ಬ್ಯಾಬಿಲಾನ್ ನಗರದಲ್ಲಿ ಕ್ರಿ.ಪೂ. 323ರಲ್ಲಿ ತನ್ನ 32ನೆ ವಯಸ್ಸಿನಲ್ಲಿ ಕಾಲವಾದನು.

ಅಲೆಗ್ಸಾಂಡರನು ಕಾಲವಾದ ಮೇಲೆ ಭಾರತದಲ್ಲಿದ್ದ ಗ್ರೀಕರೂ ಕ್ರಮೇಣವಾಗಿ ಅದೃಶ್ಯರಾದರು. ಭಾರತದಲ್ಲಿ ತಾನು ಗೆದ್ದು ವಶಪಡಿಸಿಕೊಂಡಿದ್ದ ಪ್ರದೇಶಗಳ ಮೇಲಿನ ಆಡಳಿತವನ್ನು ನೋಡಿಕೊಳ್ಳಲು ಅವನ ನೇಮಿಸಿದ್ದ ಸತ್ರಪರು ಕೊಲೆಮಾಡಲ್ಪಟ್ಟರು ಇಲ್ಲವೆ ಅವರು ಅಧಿಕಾರ ಮತ್ತು ಸ್ಥಾನಗಳನ್ನು ಕಳೆದುಕೊಂಡರು. ಅಫ್‌ಘಾನಿಸ್ಥಾನದಲ್ಲಿ ಗ್ರೀಕ್ ಸತ್ರಪನಾಗಿದ್ದ ಪಿಲಿಪ್ಪನ ಕೊಲೆಯು ಗ್ರೀಕರ ಅಧಿಕಾರವನ್ನು ಕೊನೆಗಾಣಿಸುವ ಪ್ರಯತ್ನದಲ್ಲಿ ಮೊದಲನೆಯದಾಗಿತ್ತು. ಅನಂತರ ಗ್ರೀಕರ ಅಧಿಕಾರವನ್ನು ಪೂರ್ಣವಾಗಿ ಕೊನೆಗಾಣಿಸಲು ತೀವ್ರ ಪ್ರಯತ್ನಗಳು ಮುಂದುವರಿದವು. ದೇಶದ ವಿವಿಧ ಭಾಗಗಳನ್ನು ಸಂಘಟಿಸಿ ಒಂದು ಕೇಂದ್ರಾಧಿಕಾರಕ್ಕೆ ಒಳಪಡಿಸಲು ರಾಷ್ಟ್ರ ವೀರನೊಬ್ಬನ ಏಳಿಗೆಗೆ ಉತ್ತಮ ಸನ್ನಿವೇಶವು ಒದಗಿ ಬಂದಿತು. ಮೌರ್ಯಸಂತತಿಯ ಸ್ಥಾಪಕನಾದ ಚಂದ್ರಗುಪ್ತಮೌರ್ಯನು ಸನ್ನಿವೇಶದ ಅನುಕೂಲವನ್ನು ಪಡೆದುಕೊಂಡು ಮೊದಲು ಮಗಧ ರಾಜ್ಯದ ಅಧಿಪತಿಗಳಾಗಿದ್ದ ನಂದರನ್ನು ನಿರ್ಮೂಲನಮಾಡಿ ಅನಂತರ ತನ್ನ ಸೈನಿಕ ದಂಡಯಾತ್ರೆಗಳಿಂದ ಭಾರತದ ವಿವಿಧ ಭಾಗಗಳನ್ನು ಗೆದ್ದು ವಶಪಡಿಸಿಕೊಂಡು ವಿಶಾಲವಾದ ಒಂದು ಪ್ರಬಲ ಸಾಮ್ರಾಜ್ಯವನ್ನು ಸ್ಥಾಪಿಸಿದನು. ಅಲೆಗ್ಸಾಂಡರನ ಮರಣಾ ನಂತರ ಸಿರಿಯಾ ಭಾಗಕ್ಕೆ ರಾಜನಾಗಿದ್ದ ಸೆಲ್ಯೂಕಸ್ ನಿಕೇಟರನು ಭಾರತದ ಮೇಲೆ ಆಕ್ರಮಣ ಮಾಡಲು ಪ್ರಯತ್ನಿಸಿದಾಗ ಭಾರತದ ರಾಜಕೀಯ ಸ್ಥಿತಿಯು ಸಂಪೂರ್ಣವಾಗಿ ಬದಲಾವಣೆಗೊಂಡಿದ್ದಿತು.

### ಅಲೆಗ್ಸಾಂಡರನ ದಂಡಯಾತ್ರೆಯ ಪರಿಣಾಮಗಳು

ಭಾರತದ ಮೇಲೆ ಅಲೆಗ್ಸಾಂಡರನ ದಂಡಯಾತ್ರೆಯಿಂದ ಭಾರತದ ರಾಜಕೀಯ, ಸಾಮಾಜಿಕ ಮತ್ತು ಸೈನಿಕ ವ್ಯವಸ್ಥೆಯ ಮೇಲೆ ಯಾವುದೇ ರೀತಿಯ ಮಹತ್ವಪೂರ್ಣ ಪರಿಣಾಮಗಳುಂಟಾಗಿದಿದ್ದರೂ, ಅವನ ದಂಡಯಾತ್ರೆಯಿಂದ ಕೆಲವು ಪರೋಕ್ಷ ಪರಿಣಾಮಗಳು ಉಂಟಾದುದನ್ನು ಗುರುತಿಸಬಹುದಾಗಿದೆ. ಅಲೆಗ್ಸಾಂಡರನು ಮರಣವಾದ ಕೆಲವು ವರ್ಷಗಳಲ್ಲಿಯೆ ಭಾರತದಲ್ಲಿ ಗ್ರೀಕರ ಅಧಿಕಾರವು ಕೊನೆಗಂಡರೂ ಎರಡು ದೇಶಗಳ ನಡುವಿನ ಸಂಬಂಧವು ಇದರೊಂದಿಗೆ ಕೊನೆಗೊಳ್ಳದೆ ಮುಂದಿನ ಶತಮಾನಗಳಲ್ಲಿ ಹೆಚ್ಚು ಹೆಚ್ಚಾಗಿ ವೃದ್ಧಿಗೊಂಡಿತು. ಅಲೆಗ್ಸಾಂಡರನ ಆಕ್ರಮಣದಿಂದ ಭಾರತೀಯರು ಅನೇಕ ವಿಷಯಗಳನ್ನು ಕಲಿತರು. ಅವುಗಳಲ್ಲಿ ಮೊದಲನೆಯದೆಂದರೆ ರಾಜಕೀಯ ಏಕತೆ, ಭಾರತೀಯರು ತಮ್ಮ ಸೋಲಿಗೆ ತಮ್ಮಲ್ಲಿದ್ದ ಅನೈಕ್ಯತೆಯು ಕಾರಣವೆಂದು ಗ್ರೀಕರ ಆಕ್ರಮಣದಿಂದ ಕಂಡುಕೊಂಡರು. ಅಂತೆಯೆ ಸಣ್ಣ ಪುಟ್ಟ ರಾಜ್ಯಗಳಿಗೆ ಬದಲಾಗಿ ಪ್ರಬಲ ರಾಜ್ಯವೊಂದರ ಸ್ಥಾಪನೆಯ ಆವಶ್ಯಕತೆಯು ಭಾರತೀಯರಿಗಾಯಿತು. ರಾಜಕೀಯ ಅನೈಕ್ಯತೆಯ ಪರಿಸ್ಥಿತಿಯ ಅನುಕೂಲವನ್ನು ಪಡೆದುಕೊಂಡು ಚಂದ್ರಗುಪ್ತಮೌರ್ಯನು ಮೊದಲ ಬಾರಿಗೆ ಪ್ರಬಲವೂ ಮತ್ತು

ವಿಶಾಲವಾದ ಸಾಮ್ರಾಜ್ಯವನ್ನು ಸ್ಥಾಪಿಸಿದನು. ಆದ್ದರಿಂದ ಗ್ರೀಕರ ಆಕ್ರಮಣವು ದೇಶದಲ್ಲಿ ರಾಜಕೀಯ ಏಕತೆಗೆ ಅನುಕೂಲ ಮಾಡಿಕೊಟ್ಟಿತು. ಎರಡನೆಯದಾಗಿ ಪಾಶ್ಚಾತ್ಯ ಜಗತ್ತಿಗೆ ಭಾರತದ ಹೆಚ್ಚಿನ ಪರಿಚಯವುಂಟಾಯಿತು. ಇದರಿಂದಾಗಿ ಪೌರ್ವಾತ್ಯ ಮತ್ತು ಪಾಶ್ಚಾತ್ಯ ದೇಶಗಳ ನಡುವೆ ವ್ಯಾಪಾರ ವಾಣಿಜ್ಯ ಹಾಗೂ ಸಾಂಸ್ಕೃತಿಕ ಸಂಪರ್ಕಗಳು ವೃದ್ಧಿಗೊಳ್ಳಲು ಅನುಕೂಲವಾಯಿತು. ಮೂರನೆಯದಾಗಿ, ಅಲೆಗ್ಸಾಂಡರನ ಆಕ್ರಮಣದ ಪರಿಣಾಮವಾಗಿ ಯವನರು ಭಾರತದ ವಾಯುವ್ಯ ಗಡಿಯಲ್ಲಿ ನೆಲಸಲಾರಂಭಿಸಿದರು. ಅವರಲ್ಲಿ ಪ್ರಬಲರಾಗಿದ್ದ ಕೆಲವರು ಮೌರ್ಯರ ಅಧಿಕಾರವು ಅವನತಿ ಹೊಂದಿದ ನಂತರ ಸ್ವತಂತ್ರ ರಾಜ್ಯಗಳನ್ನು ಸ್ಥಾಪಿಸಿ ಕೊಂಡರು, ನಾಲ್ಕನೆಯದಾಗಿ, ಹೆಲನಿಸ್ಟಿಕ್ ಸಂಸ್ಕೃತಿಯು ಭಾರತದಲ್ಲಿ ಪ್ರಸಾರವಾಗಲು ಸಾಧ್ಯವಾಯಿತು. ಪಂಜಾಬ್ ಪ್ರಾಂತ್ಯದ ಮೇಲೆ ಗ್ರೀಕರು ಹೊಂದಿದ್ದ ಅಧಿಕಾರದ ಪ್ರಭಾವದಿಂದಾಗಿ ಗ್ರೀಕರ ಮಾದರಿಯ ಅನುಕರಣೆಯಿಂದ ಕೂಡಿದ ನಾಣ್ಯಗಳು ಬಳಕೆಗೆ ಬಂದವು. ಅಲೆಗ್ಸಾಂಡರನು ತನ್ನ ದಂಡಯಾತ್ರೆಯ ಕಾಲದಲ್ಲಿ ನಿರ್ಮಿಸಿದ ಕಾಲೋನಿಗಳು ಮತ್ತು ನಗರಗಳು ಪೌರ್ವಾತ್ಯ ಮತ್ತು ಪಾಶ್ಚಾತ್ಯ ರಾಜ್ಯಗಳ ಸಾಂಸ್ಕೃತಿಕ ವಿನಿಮಯ ಕೇಂದ್ರಗಳಾದವು. ಭಾರತೀಯರು ಗ್ರೀಕರ ಖಗೋಳಶಾಸ್ತ್ರ, ನಾಣ್ಯ ಪದ್ಧತಿ, ಕಲೆ ಮೊದಲಾದ ವಿಷಯಗಳ ಪರಿಚಯ ಪಡೆದರು. ಅಂತೆಯೆ ಗ್ರೀಕರೂ ಭಾರತೀಯರ ಧರ್ಮ, ತತ್ವಶಾಸ್ತ್ರ ಮತ್ತು ದಾರ್ಶನಿಕತೆಯ ಪರಿಚಯ ಪಡೆದರು. ಗ್ರೀಕರು ಭಾರತದ ವಾಸ್ತುಶಿಲ್ಪಕಲೆಯ ಮೇಲೂ ತಮ್ಮ ಪ್ರಭಾವ ಬೀರಿದರು. ಗಾಂಧಾರದ ವಾಸ್ತುಶಿಲ್ಪ ಮತ್ತು ಶಿಲ್ಪಕಲೆಯ ಮೇಲೆ ಗ್ರೀಕರ ವಾಸ್ತುಶಿಲ್ಪ ಮತ್ತು ಶಿಲ್ಪಕಲೆಯ ಪ್ರಭಾವವು ಕಂಡುಬರುತ್ತದೆ. ಕೊನೆಯದಾಗಿ, ಅಲೆಗ್ಸಾಂಡರನ ಜೊತೆಯಲ್ಲಿ ಭಾರತಕ್ಕೆ ಬಂದಿದ್ದ ಗ್ರೀಕ್ ವಿದ್ವಾಂಸರು ಭಾರತೀಯರ ಬಗ್ಗೆ ಅಮೂಲ್ಯ ವಿಷಯಗಳನ್ನು ಸಂಗ್ರಹಿಸಿ ಮುಂದಿನ ಪಾಶ್ಚಾತ್ಯ ವಿದ್ವಾಂಸರಿಗೆ ಉಪಕಾರ ಮಾಡಿದರು.

**ಆಡಳಿತ ವ್ಯವಸ್ಥೆ**

ಕ್ರಿ.ಪೂ. ಆರನೇ ಶತಮಾನದಲ್ಲಿ ಭಾರತವು ರಾಜಕೀಯ ಅನೈಕ್ಯತೆಯಿಂದ ಕೂಡಿದ್ದು ಮುಂದಿನ ಕೆಲವು ಶತಮಾನಗಳ ನಂತರದಲ್ಲಿ ಪ್ರಬಲವಾದ ಮೌರ್ಯ ಸಾಮ್ರಾಜ್ಯವು ಸ್ಥಾಪಿತವಾಗುವುದರಲ್ಲಿತ್ತು. ಬುದ್ಧನ ಕಾಲದ ಭಾರತವು ಹಲವಾರು ಸಣ್ಣ ಪುಟ್ಟ ರಾಜ್ಯಗಳಿಂದ ಕೂಡಿದ್ದು. ಅವುಗಳು ಅಧಿಕಾರಕ್ಕಾಗಿ ಪರಸ್ಪರ ಹೋರಾಟದಲ್ಲಿ ತೊಡಗಿದ್ದು ಪರ್ಶಿಯನ್ನರ ಮತ್ತು ಗ್ರೀಕರ ಆಕ್ರಮಣಗಳಿಗೆ ಅನುಕೂಲ ಮಾಡಿಕೊಟ್ಟಿದ್ದವು. ಈ ಕಾಲದಲ್ಲಿ ಉತ್ತರ ಭಾರತದಲ್ಲಿದ್ದ ರಾಜ್ಯಗಳನ್ನು ಸ್ಥೂಲವಾಗಿ ನಾಲ್ಕು ವರ್ಗಗಳನ್ನಾಗಿ ಮಾಡಬಹುದು. 1. ಕೋಸಲ ಮತ್ತು ಮಗಧ ಸಾಮ್ರಾಜ್ಯಗಳು, 2. ಸಾಮಾನ್ಯ ರಾಜರುಗಳಿಂದ ಆಳಲ್ಪಡುತ್ತಿದ್ದ ಮತ್ಸ್ಯ ಮತ್ತು ಸೂರಸೇನ ರಾಜ್ಯಗಳು, 3. ರಿಪಬ್ಲಿಕ್ ಸರ್ಕಾರಗಳನ್ನು ಹೊಂದಿದ್ದ ಮಲ್ಲರು, ಮೌರ್ಯರು ಮೊದಲಾದವರ ರಾಜ್ಯಗಳು, 4. ಸ್ವಾಯತ್ತತೆ ಮತ್ತು ಪ್ರಜಾಪ್ರಭುತ್ವ ಪದ್ಧತಿಯನ್ನು ಹೊಂದಿದ್ದ ಮಾಳವರು ಕ್ಷುದ್ರಕರು ಮೊದಲಾದವರ ಸ್ವರಾಜ್ಯಗಳು. ಇದರಿಂದ ಪ್ರಾಚೀನ ಭಾರತೀಯರು ರಾಜಕೀಯ ಕ್ಷೇತ್ರದಲ್ಲಿ ಹಲವಾರು ಪ್ರಯೋಗಗಳನ್ನು ಮಾಡಿದ್ದುದಾಗಿ ಕಂಡುಬರುವುದಲ್ಲದೆ ಪ್ರಜಾ ಸರ್ಕಾರದಲ್ಲೂ ಅವರು ಮಾಡಿದ್ದ ಪ್ರಯೋಗವು ಶ್ಲಾಘನೀಯವಾಗಿದ್ದಿತು. ಆದರೆ ಈ ಸಣ್ಣ ಪುಟ್ಟ ಪ್ರಜಾರಾಜ್ಯಗಳು ಅಂದಿನ ಭಾರತದ

ರಾಜಕೀಯ ಅಧಿಕಾರದ ಸ್ಪರ್ಧೆಯಲ್ಲಿ ಉಳಿದು ಮುಂದುವರಿಯುವುದು ಕಷ್ಟದ ಕೆಲಸವಾಗಿದ್ದು ಅವುಗಳನ್ನು ಪ್ರಬಲ ರಾಜರುಗಳು ಸುಲಭವಾಗಿ ಗೆದ್ದು ವಶಪಡಿಸಿಕೊಳ್ಳುತ್ತಿದ್ದರು. ಒಟ್ಟಿನಲ್ಲಿ ಹೇಳುವುದಾದರೆ ಕ್ರಿ.ಪೂ.ಆರನೇ ಶತಮಾನದಲ್ಲಿ ಪೂರ್ವ ಭಾರತದಲ್ಲಿ ಮುಖ್ಯವಾಗಿ ಮಗಧ ರಾಜ್ಯದ ಸ್ಥಾಪನೆಯೂ ಹರ್ಯಾಂಕ, ಶಿಶುನಾಗ ಮತ್ತು ನಂದ ಸಂತತಿಯವರ ಏಳಿಗೆಯೂ ಮುಂದೆ ಸ್ಥಾಪಿತವಾಗಲಿದ್ದ ಮೌರ್ಯರ ಪ್ರಬಲ ಸಾಮ್ರಾಜ್ಯದ ಮುನ್ಸೂಚಕವಾಗಿದ್ದವು.

**ರಾಜತ್ವ**

ರಾಜತ್ವವು ವಂಶ ಪಾರಂಪರ್ಯ ಪದ್ಧತಿಯಾಗಿದ್ದರೂ ಕೆಲವು ವೇಳೆ ರಾಜನನ್ನು ಚುನಾಯಿಸುವ ಪದ್ಧತಿಯೂ ರೂಢಿಯಲ್ಲಿತ್ತು. ಇದುವರೆವಿಗೂ ಕ್ಷತ್ರಿಯ ಜಾತಿಯವರ ಏಕಸ್ವಾಮ್ಯವಾಗಿದ್ದ ರಾಜತ್ವ ಪದ್ಧತಿಯ ಜೊತೆಗೆ ಶೂದ್ರ ಜಾತಿಗೆ ಸೇರಿದವರೂ ರಾಜರುಗಳಾದ ನಿದರ್ಶನಗಳು ಈ ಕಾಲದಲ್ಲಿ ಕಂಡುಬಂದವು. ಶೂದ್ರ ಜಾತಿಗೆ ಸೇರಿದ ನಂದರು ಇದಕ್ಕೆ ನಿದರ್ಶನವಾಗಿದ್ದಾರೆ. ರಾಜರುಗಳು ಸ್ವೇಚ್ಛಾನುಸಾರವಾಗಿ ರಾಜ್ಯವಾಳುವಂತಿರಲಿಲ್ಲ. ನಿರಂಕುಶ ರಾಜರುಗಳನ್ನು ಉಚ್ಚಾಟನೆ ಮಾಡಿದ ನಿದರ್ಶನಗಳಿವೆ. ಪ್ರಜಾಪೀಡಕರಾಗಿದ್ದ ನಂದ ಸಂತತಿಯ ರಾಜನನ್ನು ಚಂದ್ರಗುಪ್ತಮೌರ್ಯನ ನಾಯಕತ್ವದಲ್ಲಿ ಜನಗಳು ಉಚ್ಚಾಟನೆ ಮಾಡಿದುದು ಸ್ಪಷ್ಟವಾಗಿದೆ. ಆದ್ದರಿಂದ ಈ ಕಾಲದಲ್ಲೂ ರಾಜನಾದವನು ಧರ್ಮದ ನಿಯಮಗಳಿಗೆ ಸಾಮಾಜಿಕ ನ್ಯಾಯ ನಿಬಂಧನೆಗಳಿಗೆ ವಿರುದ್ಧವಾಗಿ ಆಳ್ವಿಕೆ ಮಾಡುವಂತಿರಲಿಲ್ಲ. ವಿಶಾಲವಾದ ರಾಜ್ಯಗಳ ಸ್ಥಾಪನೆಯಿಂದಾಗಿ ಅವುಗಳನ್ನು ಒಂದೇ ಕೇಂದ್ರದಿಂದ ಆಳುವುದು ಕಷ್ಟವಾಗಿ ಕಂಡುಬಂದಿತು. ಆದ್ದರಿಂದ ಮಗದಾಧಿಪತಿಯಾಗಿದ್ದ ಬಿಂಬಸಾರನು ತನ್ನ ಸಾಮ್ರಾಜ್ಯದ ಭಾಗವಾಗಿದ್ದ ಅಂಗರಾಜ್ಯಕ್ಕೆ ತನ್ನ ಮಗ ಅಜಾತಶತ್ರುವನ್ನು ರಾಜ್ಯಪಾಲನನ್ನಾಗಿ ನೇಮಿಸಿದ್ದನು.

ರಾಜನು ತನಗೆ ಆಡಳಿತದಲ್ಲಿ ಸಹಾಯ ಮಾಡಲು ಅನೇಕ ಅಧಿಕಾರಗಳನ್ನು ನೇಮಿಸಿಕೊಂಡಿದ್ದನು. ಹಿಂದಿನ ಶತಮಾನಗಳಲ್ಲಿದ್ದಂತೆ ಈ ಕಾಲದಲ್ಲೂ ಪುರೋಹಿತನ ಮತ್ತು ಸೇನಾಪತಿಯ ಹುದ್ದೆಗಳು ಬಹುಮುಖ್ಯವಾಗಿದ್ದವು. ಇವುಗಳ ಜೊತೆಗೆ ಮಹಾಮಾತ್ರರು ಎಂಬ ಅಧಿಕಾರಿಗಳ ಹೊಸ ಹುದ್ದೆಯು ಈ ಕಾಲದಲ್ಲಿ ಅಸ್ತಿತ್ವಕ್ಕೆ ಬಂದಿತು. ಇವರ ಕೆಲಸ ಕಾರ್ಯಗಳು ಸಾರ್ವತ್ರಿಕವಾಗಿದ್ದವು. ಸಾರ್ವತ್ರಿಕ ಆಡಳಿತ ನ್ಯಾಯಾಡಳಿತ ಸೈನ್ಯಾಡಳಿತ ರೆವಿನ್ಯೂ ಮೊದಲಾದುವುಗಳು ಇವರ ವಿಚಕ್ಷಣೆಗೆ ಒಳಪಟ್ಟಿದ್ದವು.

ರಾಜನು ನ್ಯಾಯದ ಅಂತಿಮ ತೀರ್ಪುಗಾರನಾಗಿದ್ದನು. ಸಾಮಾನ್ಯವಾಗಿ ಸಣ್ಣಪುಟ್ಟ ಜಗಳಗಳನ್ನು ವ್ಯಾವಹಾರಿಕ ಮಹಾಮಾತ್ರರು ಸ್ಥಳೀಯ ಸಂಪ್ರದಾಯ ಪದ್ಧತಿಗಳಿಗನುಸಾರವಾಗಿ ವಿಚಾರಣೆ ಮಾಡಿ ತೀರ್ಪು ನೀಡುತ್ತಿದ್ದರು. ಆದರೆ ಈ ಕಾಲದಲ್ಲಿ ನ್ಯಾಯದ ವಿಷಯದಲ್ಲಿ ಕಾನೂನಿನ ಸಮಾನತೆಯು ಇರಲಿಲ್ಲ. ರಾಜನ ಮತ್ತೊಂದು ಬಹುಮುಖ್ಯ ಕರ್ತವ್ಯವು ಪ್ರಜಾರಕ್ಷಣೆಯಾಗಿದ್ದಿತು. ಇದಕ್ಕಾಗಿ ಅವನು ಬಹು ದೊಡ್ಡ ಸೈನ್ಯವನ್ನಿಟ್ಟುಕೊಂಡಿದ್ದನು. ಈ ಕಾಲದ ಭಾರತೀಯ ಸೈನಿಕ ಶಕ್ತಿಯ ಮತ್ತು ಸೈನಿಕರ ಯುದ್ಧ ಕೌಶಲದ ಬಗ್ಗೆ ಗ್ರೀಕರ ಬರವಣಿಗೆಗಳಲ್ಲಿ ಮಾಹಿತಿಗಳು

ದೊರಕುತ್ತವೆ. ಮಗಧ ಸಾಮ್ರಾಜ್ಯದ ಸೈನ್ಯದ ಶಕ್ತಿ ಸಾಮಾರ್ಥ್ಯಗಳನ್ನು ತಿಳಿದಿದ್ದ ಗ್ರೀಕ್ ಸೈನಿಕರು ಅಲೆಗ್ಸಾಂಡರನು ಗಂಗಾನಧಿಯ ಬಯಲಿನ ಕಡೆ ತನ್ನ ದಂಡಯಾತ್ರೆಯನ್ನು ಮುಂದುವರಿಸುವ ಆಸೆಯನ್ನು ವ್ಯಕ್ತಪಡಿಸಿದಾಗ ಅವರು ಮಗಧ ರಾಜ್ಯದ ಸೈನ್ಯದ ವಿರುದ್ಧ ಹೋರಾಡಲು ತಮ್ಮ ಅಸಮ್ಮತಿಯನ್ನು ಸೂಚಿಸಿದರು. ಇದರಿಂದ ಭಾರತೀಯರ ಸೈನ್ಯವು ಶಕ್ತಿಯುತವಾಗಿತ್ತೆಂದು ಅಭಿಪ್ರಾಯಪಡಬಹುದಾಗಿದೆ. ಸೈನ್ಯದ ಮೇಲ್ವಿಚಾರಣೆ ನೋಡಿಕೊಳ್ಳಲು ಸೇನಾನಾಯಕರು ಎಂಬ ಪ್ರತ್ಯೇಕ ಅಧಿಕಾರಿಗಳಿದ್ದರು. ಸೈನ್ಯವು ಗಜಸೈನ್ಯ, ರಥ, ಅಶ್ವದಳ ಮತ್ತು ಪದಾತಿ ಸೈನ್ಯದಿಂದ ಕೂಡಿತ್ತು. ಬಿಲ್ಲುಬಾಣಗಳು, ಭರ್ಜಿ ಮತ್ತು ಖಡ್ಗಗಳು ಯುದ್ಧದ ಶಸ್ತ್ರಾಸ್ತ್ರಗಳಾಗಿದ್ದವು. ಈ ಕಾಲದಲ್ಲಿನ ಸೈನಿಕ ವ್ಯವಸ್ಥೆಯಲ್ಲಿದ್ದ ಒಂದು ಬಹುಮುಖ್ಯ ದೋಷವೆಂದರೆ ಗಜಸೈನ್ಯವನ್ನು ಹೆಚ್ಚಾಗಿ ಅವಲಂಬಿಸಿದುದು. ಗಜಸೈನ್ಯದ ಮಂದಗತಿಯ ಚಲನೆಯಿಂದಾಗಿ ಪುರೂರವನು ಅಲೆಗ್ಸಾಂಡರನ ಸುಸಜ್ಜಿತವಾದ ಅಶ್ವಪಡೆಯ ಕೈಯಿಂದ ಸೋಲನ್ನು ಅನುಭವಿಸಿದುದರಲ್ಲಿ ಆಶ್ಚರ್ಯವಿರಲಾರದು.

ಭೂಕಂದಾಯವು ಸರ್ಕಾರದ ಮುಖ್ಯ ವರಮಾನವಾಗಿತ್ತು. ಕಂದಾಯ ವಸೂಲಿಗಾಗಿ ಭಗದುಗ್ಗ ಎಂಬ ಅಧಿಕಾರಿಗಳಿದ್ದರು. ರೈತರು ಬೆಳೆದ ಫಸಲಿನ ಷಡ್ಭಾಗವನ್ನು ಕಂದಾಯವಾಗಿ ವಸೂಲಿ ಮಾಡಲಾಗುತ್ತಿತ್ತು. ಗ್ರಾಮದ ಮುಖಂಡನು ಗ್ರಾಮದ ರೆವಿನ್ಯೂ ಅಧಿಕಾರಿಯಾಗಿದ್ದನು. ಇವನನ್ನು ಗ್ರಾಮ ಭೋಜಕ ಎಂದು ಕರೆಯುತ್ತಿದ್ದರು. ರಾಜರು ಪೊಗದಿ ರೂಪದಲ್ಲಿ ಸಣ್ಣಪುಟ್ಟ ರಾಜರುಗಳಿಂದ ಕಪ್ಪಕಾಣಿಕೆಗಳನ್ನು ಪಡೆಯುತ್ತಿದ್ದರು. ಸಿವಿಲ್ ಮತ್ತು ಸೈನಿಕ ಸಿಬ್ಬಂದಿಯ ಸಂಬಳ ರಾಜ ಮತ್ತು ಅವನ ಪರಿವಾರಕ್ಕೆ ಸಂಬಂಧಿಸಿದ ಬಾಬತ್ತುಗಳು ಸರ್ಕಾರದ ಖರ್ಚು ವೆಚ್ಚಗಳ ಬಾಬತ್ತುಗಳಾಗಿದ್ದವು.

ಈ ಕಾಲದಲ್ಲಿದ್ದ ರಿಪಬ್ಲಿಕ್ ರಾಜ್ಯಗಳ ಆಡಳಿತ ವ್ಯವಸ್ಥೆಯು ಅಚ್ಚುಕಟ್ಟಾಗಿದ್ದಿತು. ಇವುಗಳ ಆಡಳಿತ ವ್ಯವಸ್ಥೆಯ ಬಗ್ಗೆ ಜೈನ ಮತ್ತು ಬೌದ್ಧರ ಗ್ರಂಥಗಳಲ್ಲೂ, ಪುರಾಣಗಳು ಹಾಗೂ ಗ್ರೀಕರ ಬರವಣಿಗೆಗಳಲ್ಲೂ ಸಾಕಷ್ಟು ವಿವರಗಳು ದೊರೆಯುತ್ತವೆ. ಇವುಗಳ ಆಡಳಿತವನ್ನು ಪರಿಷತ್ ಎಂಬ ಸಭೆಯು ನಿರ್ವಹಿಸುತ್ತಿತ್ತು. ಪರಿಷತ್ತಿನ ಸದಸ್ಯರು ಸಮಸ್ತಗಾರ ಅಥವ ಸಭಾಂಗಣದಲ್ಲಿ ಸಭೆಸೇರುತ್ತಿದ್ದರು. ಸಾಮಾನ್ಯವಾಗಿ ಸರ್ವಾನುಮತದಿಂದ ತೀರ್ಮಾನಗಳನ್ನು ಕೈಗೊಳ್ಳಲಾಗುತ್ತಿತ್ತು. ಭಿನ್ನಾಭಿಪ್ರಾಯಗಳು ವ್ಯಕ್ತಪಟ್ಟ ಸಮಯದಲ್ಲಿ ಮಧ್ಯಸ್ಥಿಕೆಗಾರರಿಗೆ ಅವುಗಳನ್ನು ಒಪ್ಪಿಸಲಾಗುತ್ತಿತ್ತು. ರಾಜಧಾನಿಯಲ್ಲಿದ್ದ ಪರಿಷತ್ತೇ ಅಲ್ಲದೆ ರಾಜ್ಯದ ಇತರ ಪ್ರಮುಖ ಸ್ಥಳಗಳಲ್ಲಿ ಸ್ಥಳೀಯ ಸಭೆಗಳೂ ಇರುತ್ತಿದ್ದವು. ಸರ್ಕಾರದ ಸೇವೆಯಲ್ಲಿದ್ದ ಹಿರಿಯರನ್ನು ಬಹಳ ಗೌರವದಿಂದ ಕಾಣಲಾಗುತ್ತಿತ್ತು. ರಾಜನ್, ಗಣರಾಜನ್ ಅಥವ ಸಂಘಮುಖ್ಯ ಎಂಬುವರು ಗಣರಾಜ್ಯದ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಾಗಿದ್ದರು. ಉಪರಾಜನ್ ಸೇನಾಪತಿ ಮತ್ತು ಭಂಡಗಾರಿಕ ಎಂಬುವರು ಇತರ ಮುಖ್ಯ ಅಧಿಕಾರಿಗಳಾಗಿದ್ದರು.

**ಸಾಮಾಜಿಕ ಸ್ಥಿತಿ**

ಸಾಮಾಜಿಕ ವ್ಯವಸ್ಥೆಯಲ್ಲಿ ಕುಟುಂಬ ಜೀವನವು ಮುಖ್ಯ ವ್ಯವಸ್ಥೆಯಾಗಿತ್ತು. ಹಲವಾರು ಕುಟುಂಬಗಳು ಸಮೂಹವು ಗ್ರಾಮವಾಗಿತ್ತು. ಇಂತಹ ಗ್ರಾಮಗಳಲ್ಲಿ

ಒಂದು ಸಾವಿರದವರೆಗೆ ಕುಟುಂಬಗಳ ವಾಸಿಸುತ್ತಿದ್ದವು. ಮನೆಗಳನ್ನು ಮಣ್ಣಿನ ಗೋಡೆಗಳಿಂದ ನಿರ್ಮಿಸಿದ್ದರು ಮತ್ತು ಅವುಗಳ ಮೇಲ್ಛಾವಣಿಗಳಿಗೆ ಹುಲ್ಲಿನ ಇಲ್ಲವೆ ಸೋಗೆಯ ಗರಿಗಳನ್ನು ಹೊದಿಸಿರುತ್ತಿದ್ದರು. ಕೆಲವು ವೇಳೆ ಮಣ್ಣಿನಿಂದ ಮುಚ್ಚಿರುತ್ತಿದ್ದರು. ಹಳ್ಳಿಗಳ ಸುತ್ತಲೂ ರಕ್ಷಣೆಗಾಗಿ ಗೋಡೆಗಳನ್ನು ನಿರ್ಮಿಸಿಕೊಳ್ಳುತ್ತಿದ್ದರು. ರಾಜರು ಮತ್ತು ಶ್ರೀಮಂತರು ಅಲಂಕೃತವಾದ ಒಳ್ಳೆಯ ಗೃಹಗಳಲ್ಲಿ ವಾಸಿಸುತ್ತಿದ್ದರು. ಈ ಕಾಲದ ರಾಜರುಗಳ ಅರಮನೆಗಳು ಹಿಂದಿನ ರಾಜರುಗಳ ಅರಮನೆಗಳಿಗಿಂತಲೂ ಹೆಚ್ಚಿನ ಸೌಲಭ್ಯಗಳನ್ನು ಹೊಂದಿದ್ದವು. ವಿಶಾಲವಾದ ಸಭಾಂಗಣಗಳು, ಉದ್ಯಾನವನಗಳು, ಆಟದ ಮೈದಾನಗಳು, ಚಿಲುಮೆಗಳು ಇದ್ದವು. ನಗರಗಳಲ್ಲಿ ರಾಜರುಗಳು, ಸರ್ಕಾರದ ಅಧಿಕಾರಿಗಳು, ಶ್ರೀಮಂತವರ್ತಕರು, ವಿದ್ವಾಂಸರು ಮೊದಲಾದವರು ವಾಸಿಸುತ್ತಿದ್ದರು. ನಗರ ಜೀವನವು ಬಹಳವಾಗಿ ಮುಂದುವರಿದಿದ್ದಿತು. ನಗರಗಳ ರಕ್ಷಣೆಗಾಗಿ ಸುತ್ತಲೂ ಕೋಟೆಗಳನ್ನು ನಿರ್ಮಿಸಿದ್ದರು. ನಗರಗಳ ನಿವಾಸಿಗಳಿಗೆ ಅನೇಕ ರೀತಿಯ ಅನುಕೂಲಗಳನ್ನು ಕಲ್ಪಿಸಿಕೊಡಲಾಗಿತ್ತು. ಉದ್ಯಾನವನಗಳು, ಸಾರ್ವಜನಿಕ ಸಭಾಂಗಣಗಳು, ಒಳ್ಳೆಯ ರಸ್ತೆಗಳು, ಮನರಂಜನೆಗಾಗಿ ನೃತ್ಯಮಂದಿರಗಳು ಮೊದಲಾದ ಅನುಕೂಲಗಳನ್ನು ಪಡೆದಿದ್ದರು. ಚಂಪ, ರಾಜಗೃಹ, ಕೌಸಾಂಬಿ, ಉಜ್ಜೈನಿ, ಬನಾರಿಸ್ ಮತ್ತು ಪಾಟಲೀಪುತ್ರಗಳು ಈ ಕಾಲದ ಪ್ರಮುಖ ನಗರಗಳಾಗಿದ್ದವು.

ಜನರು ಹೆಚ್ಚಾಗಿ ಸಸ್ಯಾಹಾರಿಗಳಾಗಿದ್ದರು. ಜೈನ ಮತ್ತು ಬೌದ್ಧಮತಗಳ ಪ್ರಭಾವದಿಂದಾಗಿ ಪ್ರಾಣಿಗಳನ್ನು ಆಹಾರಕ್ಕಾಗಿ ಕೊಲ್ಲುವುದು ಬಹಳ ಮಟ್ಟಿಗೆ ಕಡಿಮೆಯಾಗಿದ್ದಿತು. ಗೋಹತ್ಯೆಯನ್ನು ಮಹಾಪಾಪವೆಂದು ಭಾವಿಸಿದ್ದರು. ವಾಯುವ್ಯ ಭಾರತದಲ್ಲಿನ ಜನಗಳು ಅಕ್ಕಿಯನ್ನು ಹೆಚ್ಚಾಗಿ ಉಪಯೋಗಿಸುತ್ತಿದ್ದರೆಂದು ಗ್ರೀಕ್ ಬರಹಗಾರರು ತಿಳಿಸುತ್ತಾರೆ. ಜನಸಾಮಾನ್ಯರ ಉಡುಗೆತೊಡಿಗೆಗಳು ಸರಳವಾಗಿದ್ದವು. ಹತ್ತಿಯಿಂದ ಮಾಡಿದ ಉಡುವುಗಳನ್ನು ಜನಸಾಮಾನ್ಯರೂ ಶ್ರೀಮಂತರು ರೈಷ್ಮೇಯ ಉಡುಪುಗಳನ್ನೂ ತೊಡುತ್ತಿದ್ದರು. ಗಂಡಸರು ಮತ್ತು ಹೆಂಗಸರು ಆಭರಣಪ್ರಿಯರಾಗಿದ್ದರು. ಕಿವಿಯೋಲೆ, ತೋಳಬಂದಿ, ಕಾಲ್ಗಡಗ, ಕೊರಳಹಾರ ಬಳೆಗಳು ಮುಖ್ಯ ಆಭರಣಗಳಾಗಿದ್ದವು. ಸೌಂದರ್ಯೋಪಾಸಕ ವಸ್ತುಗಳನ್ನು ಅಲಂಕರಿಸಿಕೊಳ್ಳಲು ಉಪಯೋಗಿಸುತ್ತಿದ್ದರು. ಜನಗಳು ಕಾಲಿಗೆ ಜೋಡುಗಳನ್ನು ಹಾಕುತ್ತಿದ್ದರು ಮತ್ತು ಛತ್ರಿಗಳನ್ನು ಉಪಯೋಗಗಿಸುತ್ತಿದ್ದರು. ಸಂಗೀತ ಮತ್ತು ನೃತ್ಯ ಹಾಗೂ ವಾದ್ಯಸಂಗೀತ ಮುಖ್ಯ ಮನರಂಜನೆಗಳಾಗಿದ್ದವು. ಸಮಾಜದಲ್ಲಿನ ಗಣ್ಯರು ಬೇಟೆ ಜೂಜಾಟಗಳಲ್ಲಿ ಆಸಕ್ತಿ ಹೊಂದಿದ್ದರು. ಪಾನೀಯಗಳನ್ನು ಸೇವಿಸುತ್ತಿದ್ದರು. ನೃತ್ಯಕಲೆಗೆ ರಾಜರುಗಳು ಪ್ರೋತ್ಸಾಹ ನೀಡಿದ್ದರು. ನಾಟಕಗಳು ಪ್ರದರ್ಶನ, ಗೂಳಿ, ಟಗರು, ಕೋಳಿ ಕಾಳಗ ಮೊದಲಾದವು ಇತರ ವಿನೋದಗಳಾಗಿದ್ದುವೆಂದು ಬೌದ್ಧರ ಗ್ರಂಥಗಳು ತಿಳಿಸುತ್ತವೆ. ಸ್ತ್ರೀಯರು ಗಂಡಸರಿಗೆ ಸರಿಸಮಾನವಾದ ಸ್ಥಾನಮಾನಗಳನ್ನು ಹೊಂದಿರದಿದ್ದರೂ ಸಮಾಜದಲ್ಲಿ ಗೌರವಯುತವಾದ ಸ್ಥಾಮಾನಗಳನ್ನು ಹೊಂದಿದ್ದರು. ಸ್ತ್ರೀಯರು ವಿದ್ಯೆ ಕಲಿಯಲು ಅವಕಾಶವಿದ್ದಿತು. ಕೆಲವು ಭಾಗಗಳಲ್ಲಿ ನಿಯೋಗ ಪದ್ಧತಿಯು ರೂಢಿಯಲ್ಲಿತ್ತು.

ಸತಿ ಪದ್ಧತಿಯು ರೂಢಿಯಲ್ಲಿದ್ದಿತೆಂಬುದನ್ನು ನಿರ್ಧಿಷ್ಟವಾಗಿ ಹೇಳಲು ಸಾಧ್ಯವಿಲ್ಲ. ಜಾತಿಯ ಕಟ್ಟುಪಾಡುಗಳು ಬಿಗಿಯಾಗಿದ್ದವು. ಆದರೆ ಕೆಲವು ವೇಳೆ ಅವುಗಳನ್ನು ಉಲ್ಲಂಘಿಸಿದ ನಿದರ್ಶನಗಳೂ ಇವೆ. ಕ್ಷತ್ರಿಯ ಜಾತಿಯವರು ಶೂದ್ರ ಜಾತಿಯ ಸ್ತ್ರೀಯರನ್ನು ವಿವಾಹವಾದ ನಿದರ್ಶನಗಳೇ ಅಲ್ಲದೆ ಯವನರೊಂದಿಗೆ ಅಂತರ್ಜಾತೀಯ ವಿವಾಹಗಳು ನಡೆದ ನಿದರ್ಶನಗಳೂ ಇವೆ. ಗುಲಾಮ ಪದ್ಧತಿಯು ರೂಢಿಯಲ್ಲಿತ್ತು. ಯುದ್ಧದಲ್ಲಿ ಸೆರೆಸಿಕ್ಕಿದವರು, ಸಾಲತೀರಿಸಲಾರದವರು, ಕ್ರಿಮಿನಲ್ ಅಪರಾಧಗಳನ್ನು ಮಾಡಿದವರನ್ನು ಗುಲಾಮರನ್ನಾಗಿ ಮಾಡಿಕೊಳ್ಳುತ್ತಿದ್ದರು. ಆದರೆ ಗುಲಾಮರ ಸ್ಥಿತಿಯು ಪ್ರಾಚೀನ ಈಜಿಪ್ಟ್, ಗ್ರೀಸ್ ಮತ್ತು ರೋಮ್ ದೇಶಗಳಲ್ಲಿನ ಗುಲಾಮರಷ್ಟು ಚಿಂತಾಜನಕವಾಗಿರಲಿಲ್ಲ. ಒಡೆಯರು ಗುಲಾಮರ ಬಗ್ಗೆ ಕರುಣೆ ತೋರಿಸುತ್ತಿದ್ದರು ಮತ್ತು ಒಡೆಯನ ಪ್ರೀತಿಗೆ ಪಾತ್ರರಾದ ಗುಲಾಮರನ್ನು ತರುವಾಯದಲ್ಲಿ ಬಿಡುಗಡೆ ಮಾಡಲಾಗುತ್ತಿತ್ತು.

**ಆರ್ಥಿಕ ಸ್ಥಿತಿ**

ವ್ಯವಸಾಯವು ಜನರ ಪ್ರಧಾನ ಕಸುಬಾಗಿದ್ದಿತು. ಜನರು ನಗರಗಳಿಗಿಂತ ಹೆಚ್ಚಾಗಿ ಗ್ರಾಮಾಂತರ ಪ್ರದೇಶಗಳಲ್ಲಿ ವಾಸಿಸುತ್ತಿದ್ದರು. ಸಾಮಾನ್ಯವಾಗಿ ಪ್ರತಿಯೊಂದು ಕುಟುಂಬವೂ ತನ್ನದೇ ಆದ ಭೂಮಿಯನ್ನು ಹೊಂದಿರುತ್ತಿತ್ತು. ಕೆಲವು ವೇಳೆ ವ್ಯವಸಾಯದ ಕಾರ್ಯಾಚರಣೆಗೆ ಕೂಲಿಗಳನ್ನು ನೇಮಿಸಿಕೊಳ್ಳುತ್ತಿದ್ದರು. ನೀರಾವರಿ ಕೆಲಸಗಳು, ಬೇಲಿಹಾಕುವುದು ಮುಂತಾದ ಕೆಲಸಗಳಲ್ಲಿ ರೈತರು ಪರಸ್ಪರ ಸಹಾಯ ಮಾಡಿಕೊಳ್ಳುತ್ತಿದ್ದರು. ದನಕರುಗಳನ್ನು ಮೇಯಿಸಲು ಪ್ರತಿಯೊಂದು ಹಳ್ಳಿಯೂ ಗೋಮಾಳಗಳನ್ನು ಹೊಂದಿದ್ದವು. ಪಂಜಾಬ್ ಪ್ರಾಂತ್ಯದಲ್ಲಿ ಭೂಮಿಯನ್ನು ಸಾಮೂಹಿಕವಾಗಿ ಉತ್ತು ಆದರ ಫಸಲನ್ನು ಎಲ್ಲರೂ ತಮ್ಮ ಆವಶ್ಯಕತೆಗಳಿಗನುಗುಣವಾಗಿ ಹಂಚಿಕೊಳ್ಳುತ್ತಿದ್ದರೆಂದು ನಿಯಾರ್‌ಕಸ್ ಹೇಳುತ್ತಾನೆ. ಹಳ್ಳಿಗಳಲ್ಲಿ ರೈತರೇ ಅಲ್ಲದೆ ಮಡಕೆ ಮಾಡುವವರು, ಬಡಗಿಗಳು, ಕಮ್ಮಾರರು ಇನ್ನೂ ಮುಂತಾದ ವಿವಿಧ ವೃತ್ತಿಗಳಿಗೆ ಸೇರಿದ ಜನರು ವಾಸಿಸುತ್ತಿದ್ದರು.

ಈ ಕಾಲದಲ್ಲಿನ ನಗರಗಳು ವಿವಿಧ ರೀತಿಯ ಆರ್ಥಿಕ ಚಟುವಟಿಕೆಗಳ ಕೇಂದ್ರಗಳಾಗಿದ್ದವು. ನಗರಗಳಲ್ಲಿ ಆಡಳಿತ ವರ್ಗದವರು, ವರ್ತಕರು ಮತ್ತಿತರ ವರ್ಗದ ಜನರು ವಾಸಿಸುತ್ತಿದ್ದರಿಂದ ಅವರ ಆವಶ್ಯಕತೆಗಳು ವಿವಿಧ ರೀತಿಯವುಗಳಾಗಿದ್ದವು. ಇದರಿಂದಾಗಿ ವಿವಿಧ ಕಸಬುಗಳಲ್ಲಿ ನುರಿತ ಉದ್ಯೋಗಿಗಳು ನಗರಗಳಿಗೆ ಆಕರ್ಷಿತರಾಗಿ ಬರುತ್ತಿದ್ದರು. ಅವರಲ್ಲಿ ಅಕ್ಕಸಾಲಿಗರ, ದಂತದ ಕೆಲಸ ಮಾಡುವವರು, ನೇಯ್ಗೆಯವರು, ಪೀಠೋಪಕರಣಗಳನ್ನು ಮಾಡುವವರು, ಕಟ್ಟಡಗಳ ನಿರ್ಮಾಣಕಾರರು ಮೊದಲಾದವರು ನಗರಗಳಲ್ಲಿ ವಾಸಿಸುತ್ತಿದ್ದರು. ಕೆಲವು ಪ್ರಮುಖ ಕಸಬುಗಳ ಕಸುಬುದಾರರು ಶ್ರೇಣಿಗಳನ್ನು ಏರ್ಪಡಿಸಿಕೊಂಡಿದ್ದರು. ಶ್ರೇಣಿಗಳ ಅಧ್ಯಕ್ಷನನ್ನು ಪ್ರಮುಖ, ಜೇಷ್ಠಕ, ಶ್ರೇಷ್ಠಿನ್ ಎಂಬ ಹೆಸರುಗಳಿಂದ ಕರೆಯುತ್ತಿದ್ದರು. ಕೆಲವು ವೇಳೆ ವಿವಿಧ ಶ್ರೇಣಿಗಳಿಗೆ ಒಬ್ಬನೇ ಮುಖಂಡನಿರುತ್ತಿದ್ದನು. ಅವನನ್ನು ಭಂಡಗಾರಿಕ ಎಂದು ಕರೆಯುತ್ತಿದ್ದರು. ವ್ಯಾಪಾರ ವಾಣಿಜ್ಯಗಳು ಮುಂದುವರಿದಿದ್ದವು.

ವ್ಯಾಪಾರವು ಆಂತರಿಕವಾಗಿಯೆ ಅಲ್ಲದೆ ಸಮುದ್ರದ ಮೂಲಕವೂ ಹೊರದೇಶಗಳೊಂದಿಗೆ ನಡೆಯುತ್ತಿತ್ತು. ವ್ಯಾಪಾರಕ್ಕಾಗಿ ಹೆದ್ದಾರಿಗಳನ್ನು ನಿರ್ಮಿಸಲಾಗಿತ್ತು. ಸಮುದ್ರದ ಮೇಲಿನ ವ್ಯಾಪಾರವು ಸಿಲೋನ್, ಬರ್ಮಾ, ಮಲಯ ದ್ವೀಪಗಳೊಂದಿಗೆ ಅಲ್ಲದೆ ಬ್ಯಾಬಿಲಾನ್ ಮತ್ತು ಪಾಶ್ಚಾತ್ಯ ದೇಶಗಳೊಂದಿಗೂ ನಡೆಯುತ್ತಿತ್ತು. ರೋಂ ದೇಶದೊಂದಿಗೆ ವ್ಯಾಪಾರ ಸಂಪರ್ಕವಿದ್ದಿತೆಂದು ಪ್ಲಿನಿ ಹೇಳುತ್ತಾನೆ. ಪಶ್ಚಿಮ ತೀರದಲ್ಲಿ ಬ್ರಿಗುಕಚ್ಚ, (ಬ್ರೋಚ್) ಮತ್ತು ಸ್ವಪಾರಪ್ಪ ಪೂರ್ವತೀರದಲ್ಲಿ ಕಾವೇರಿ ಪಟ್ಟಣ ಪ್ರಮುಖ ಬಂದರುಗಳಾಗಿದ್ದವು. ವರ್ತಕರು ಹತ್ತಿಬಟ್ಟೆ, ಮಸ್ಲಿನ್, ರೇಷ್ಮೆ, ದಂತ, ಚಿನ್ನ, ಚಿನ್ನದ ಆಭರಣಗಳು ಮತ್ತು ಸುಗಂಧ ದ್ರವ್ಯಗಳು ಮೊದಲಾದ ವಸ್ತುಗಳನ್ನು ಮಾರಾಟ ಮಾಡುತ್ತಿದ್ದರು. ವ್ಯಾಪಾರದಲ್ಲಿ ಪದಾರ್ಥವಿನಿಮಯ ಪದ್ಧತಿಯು ರೂಢಿಯಲ್ಲಿದ್ದರೂ ಹಣದ ಚಲಾವಣೆಯೂ ಇದ್ದಿತು. ವ್ಯಾಪಾರದಲ್ಲಿ ಕಾರ್ಷಪಣ, ಸುವರ್ಣ, ಪುರಾಣ ಮತ್ತು ಧರಣ ಎಂಬ ಬೆಳ್ಳಿಯ ನಾಣ್ಯಗಳನ್ನೂ ಉಪಯೋಗಿಸುತ್ತಿದ್ದರು. ನಾಣ್ಯಗಳ ಬೆಲೆಯು ಎಲ್ಲ ಕಡೆಯಲ್ಲೂ ಒಂದೇ ರೀತಿಯಲ್ಲಿರದೆ ಸ್ಥಳದಿಂದ ಸ್ಥಳಕ್ಕೆ ವ್ಯತ್ಯಾಸವನ್ನು ಹೊಂದಿರುತ್ತಿತ್ತು.

### ಧಾರ್ಮಿಕ ಸ್ಥಿತಿ

ಈ ಕಾಲದಲ್ಲಿ ಧಾರ್ಮಿಕ ಕ್ಷೇತ್ರದಲ್ಲಿ ಪ್ರಮುಖ ಬದಲಾವಣೆಗಳು ಕಂಡುಬಂದವು ಕ್ಷತ್ರಿಯ ಕುಲಕ್ಕೆ ಸೇರಿದ ವರ್ಧಮಾನ ಮತ್ತು ಸಿದ್ಧಾರ್ಥನು ಬ್ರಾಹ್ಮಣ ಧರ್ಮದ ವಿರುದ್ಧ ದಂಗೆಯೆದ್ದು ಜೈನಮತ ಮತ್ತು ಬೌದ್ಧಮತಗಳೆಂಬ ಎರಡು ಹೊಸ ಮತಗಳನ್ನು ಸ್ಥಾಪಿಸಿದರು. ಈ ಎರಡು ಹೊಸ ಮತಗಳ ಹಾಗೂ ಮತ್ತೆ ಕೆಲವು ಹೊಸ ಪಂಥಗಳ ಉದಯದಿಂದ ಬ್ರಾಹ್ಮಣ ಧರ್ಮವೂ ಸಾಕಷ್ಟು ಮಾರ್ಪಾಟು ಹೊಂದಿತು, ಬ್ರಾಹ್ಮಣ ಧರ್ಮವು ಕೆಲವು ಕಾಲ ಅಪ್ರಿಯವಾದರೂ ತರುವಾಯದಲ್ಲಿ ಬದಲಾವಣೆಗೊಳ್ಳುತ್ತಿದ್ದ ಸನ್ನಿವೇಶಕ್ಕೆ ತಕ್ಕಂತೆ ಮಾರ್ಪಾಟು ಮಾಡಿಕೊಂಡು ಪುನರುಜ್ಜೀವನಗೊಳ್ಳತೊಡಗಿತು. ಸ್ಯಂಗ ಸಂತತಿಯವರ ಆಳ್ವಿಕೆಯ ಕಾಲದಲ್ಲಿ ಬ್ರಾಹ್ಮಣ ಧರ್ಮದ ಪುನರುಜ್ಜೀವನ ಕಾರ್ಯವು ಆರಂಭವಾಯಿತು.

ಈ ಕಾಲದ ಧಾರ್ಮಿಕ ಸ್ಥಿತಿಯ ಮೇಲೆ ಗ್ರೀಕರ ಆಧಾರಗಳೂ ಅಲ್ಪಸ್ವಲ್ಪ ಬೆಳಕನ್ನು ಚೆಲ್ಲುತ್ತವೆ. ಈ ಕಾಲದಲ್ಲಿ ವೇದಗಳ ಕಾಲದಲ್ಲಿ ಪೂಜಿಸಲಾಗುತ್ತಿದ್ದ ಇಂದ್ರ, ಪರ್ಜನ್ಯ ಮೊದಲಾದ ದೇವತೆಗಳ ಜೊತೆಗೆ ಕಾರ್ತಿಕೇಯ ಮೊದಲಾದ ಹೊಸ ಹೊಸ ದೇವರುಗಳ ಪೂಜೆಯು ಅಸ್ತಿತ್ವಕ್ಕೆ ಬಂದಿತು. ವೃಕ್ಷಗಳ ಪೂಜೆ, ಯಕ್ಷ ದೇವತೆಗಳು ಜಲದೇವತೆ ಮೊದಲಾದ ದೇವತೆಗಳನ್ನು ಪೂಜಿಸುತ್ತಿದ್ದರೆಂದು ವಿದೇಶಿ ಬರಹಗಾರರು ಹೇಳುತ್ತಾರೆ. ವಿಗ್ರಹಾರಾಧನೆಯು ಈ ಕಾಲದಲ್ಲಿ ಹೆಚ್ಚು ಜನಪ್ರಿಯವಾಯಿತು. ಶಿವ, ಸ್ಕಂಧ ಮತ್ತು ವಿಶಾಕ ಮೊದಲಾದ ದೇವರುಗಳ ವಿಗ್ರಹಗಳನ್ನು ಮಾರಾಟ ಮಾಡಲಾಗುತ್ತಿತೆಂದು ಪಾಣಿನೀಯು ಹೇಳುತ್ತಾನೆ.

ಜೈನಮತ ಮತ್ತು ಬೌದ್ಧಮತಗಳ ಏಳಿಗೆಯಿಂದ ಧಾರ್ಮಿಕ ಕ್ಷೇತ್ರದಲ್ಲಿ ಮಾನವೀಯತೆಗೆ ಹೆಚ್ಚಿನ ಮಹತ್ವವು ದೊರಕಿತು. ಈ ಧರ್ಮಗಳ ಪ್ರಭಾವದಿಂದ ಎಲ್ಲ ಜೀವಿಗಳ ಬಗ್ಗೆ ಪ್ರೀತಿ, ಅನುಕಂಪ ಮತ್ತು ದಯೆ ಮೊದಲಾದ ಗುಣಗಳು

ಹೆಚ್ಚು ಆಚರಣೆಗೆ ಬಂದವು. ರಕ್ತಪಾತಯುತವಾದ ಯಜ್ಞಯಾಗಾದಿಗಳನ್ನು ಮಾಡುವುದು ಮುಂದುವರಿದರೂ ಜೈನ ಮತ್ತು ಬೌದ್ಧಮತೀಯರಿಂದ ಹೆಚ್ಚಾಗಿ ಪ್ರತಿಪಾದಿತವಾದ ಅಹಿಂಸಾ ನೀತಿಯ ಕಡೆಗೆ ಹೆಚ್ಚಿನ ಒಲವು ಕಂಡುಬಂದಿತು. ಪರಿವ್ರಾಜಕರ ಅಥವ ಶ್ರವಣರ ಸಂಘಗಳು ಧಾರ್ಮಿಕ ಕ್ಷೇತ್ರದಲ್ಲಿ ಹೊಸ ಹೊಸ ಮೌಲ್ಯಗಳನ್ನು ಜಾರಿಗೆ ತಂದವು. ಧಾರ್ಮಿಕ ಚರ್ಚೆಗಳ ಕಾಲವಾಗಿದ್ದ ಈ ಕಾಲದಲ್ಲಿ ಸಂಸ್ಕಾರ ಮತ್ತು ಕರ್ಮ ಸಿದ್ಧಾಂತದ ಅಭಿಪ್ರಾಯಗಳು ಹೆಚ್ಚು ಹೆಚ್ಚು ಜನಪ್ರಿಯವಾಗತೊಡಗಿದವು. ಜೈನ ಮತ್ತು ಬೌದ್ಧಮತೀಯರ ನಾಸ್ತಿಕವಾದದ ಜೊತೆಗೆ ಬ್ರಾಹ್ಮಣ ಧರ್ಮಕ್ಕೆ ಹೊಂದಿ ಕೊಂಡಂತೆ ಆಸ್ತಿಕವಾದದ ಪಂಥ ಚಳುವಳಿಗಳು ಈ ಕಾಲದಲ್ಲಿ ಆರಂಭವಾದವು. ಆದರೆ ಈ ವಿವಿಧ ಪಂಥಗಳ ನಡುವೆ ಸಂಯೋಜನೆ ಏರ್ಪಡಿಸುವುದಕ್ಕೂ ಪ್ರಯತ್ನಗಳು ನಡೆದವು. ಭಾಗವತ ಮತ್ತು ಪಾಶುಪತ ಅಥವ ಶಿವಭಾಗವತ ಪಂಥದವರ ದೇವರುಗಳು ಬ್ರಾಹ್ಮಣ ಧರ್ಮವು ಪ್ರತಿಪಾದಿಸಿದ ಪರಮಾತ್ಮನ ವಿವಿಧ ರೂಪಗಳೆಂಬ ಭಾವನೆಯು ಜನರಲ್ಲಿ ಬೆಳೆಯುವಂತೆ ಪ್ರಯತ್ನಿಸಲಾಯಿತು.

ಧಾರ್ಮಿಕ ನಾಯಕರು ಮತ್ತಿತರ ವಿಚಾರವಂತ ಸಮಾಜ ಸುಧಾರಕರು ಹೊರಗಡೆಯಿಂದ ಬ್ರಾಹ್ಮಣ ಧರ್ಮವನ್ನು ಟೀಕಿಸುತ್ತಿದ್ದ ಸಮಯದಲ್ಲಿ ಕೆಲವು ವಿಚಾರವಂತ ವೈದಿಕ ಧರ್ಮೀಯರು ತಮ್ಮ ಧರ್ಮವನ್ನು ಸ್ವಚ್ಛಗೊಳಿಸುವುದಕ್ಕೂ ಮತ್ತು ಸುಧಾರಣೆಗಳನ್ನು ಮಾಡುವುದಕ್ಕೂ ಪ್ರಯತ್ನಿಸಿದರು. ಇಂತಹ ಪ್ರಯತ್ನವೇ ಭಕ್ತಿ ಚಳವಳಿ. ಭಕ್ತಿ ಪಂಥವು ಭಾರತೀಯರಿಗೆ ಹೊಸದೇನಾಗಿರಲಿಲ್ಲ. ಸಿಂಧೂ ಕಣಿವೆಯ ನಾಗರಿಕತೆಯಲ್ಲೇ ಭಕ್ತಿ ಪಂಥದ ಉಗಮವು ಕಂಡುಬರುತ್ತವೆ. ಆದರೆ ಅದು ಈ ಕಾಲದಲ್ಲಿ ಹೆಚ್ಚು ಹೆಚ್ಚಾಗಿ ಪ್ರತಿಪಾದಿಸಲ್ಪಟ್ಟು ಅಪ್ರಿಯವಾಗುತ್ತಿದ್ದ ಬ್ರಾಹ್ಮಣ ಧರ್ಮಕ್ಕೆ ಮತ್ತೊಮ್ಮೆ ಜೀವ ಕಳೆಯನ್ನು ತಂದುಕೊಟ್ಟಿತು. ವಾಸುದೇವ ಕೃಷ್ಣನ ಭಕ್ತರು ಭಕ್ತಿ ಚಳವಳಿಯ ಪ್ರಸಾರದಲ್ಲಿ ಪ್ರಮುಖ ಪಾತ್ರ ವಹಿಸಿದ್ದರು. ಅವರು ವಾಸುದೇವಕರು ಅಥವ ಭಾಗವತರು ಎಂದು ಕರೆಯಲ್ಪಟ್ಟರು. ಭಾಗವತ ಧರ್ಮವು ಆಸ್ತಿಕ ವಾದದಿಂದ ಕೂಡಿತ್ತು ಮತ್ತು ಅದು ಸಂಪ್ರದಾಯ ಶರಣ ಹಿಂದೂ ಧರ್ಮಕ್ಕೆ ವಿರುದ್ಧವಾಗಿರಲಿಲ್ಲ. ಕೃಷ್ಣನ ಆರಾಧನೆಯಿಂದ ಕೂಡಿದ್ದ ಈ ಆಸ್ತಿಕವಾದ ಚಳವಳಿಯು ಕಾಲಾನುಕ್ರಮದಲ್ಲಿ ಪ್ರಬಲ ಚಳವಳಿಯಾಗಿ ಬೆಳೆದು ವೈಷ್ಣವ ಧರ್ಮದ ಏಳಿಗೆಗೆ ಕಾರಣವಾಯಿತು. ಕೃಷ್ಣನು ವಿಷ್ಣುವಿನ ಅವತಾರವೆಂದು ಪರಿಗಣಿಸಲ್ಪಟ್ಟನು. ಕೃಷ್ಣನ ಆರಾಧಕರು ಯಜ್ಞಯಾಗಾದಿಗಳನ್ನಾಗಲೀ ಅಥವ ವ್ಯಾಪಕವಾದ ವ್ರತಾಚರಣೆಗಳನ್ನಾಗಲೀ ಪ್ರೋತ್ಸಾಹಿಸಲಿಲ್ಲ ಅವರು ಕೃಷ್ಣಪರಮಾತ್ಮನನ್ನು ನಿಷ್ಕಲ್ಮಶ ಭಕ್ತಿಯಿಂದ ಪ್ರಾರ್ಥಿಸಿ ಅವನ ಕೃಪೆಯನ್ನುಗಳಿಸುವುದರ ಮೂಲಕ ಮುಕ್ತಿಯನ್ನು ಪಡೆಯಬಹುದೆಂದು ತಿಳಿಸಿದರು. ಜೈನ ಮತ್ತು ಬೌದ್ಧ ಮತಗಳು ನಿರೀಶ್ವರವಾದವನ್ನು ಪ್ರತಿಪಾದಿಸುತ್ತಿದ್ದ ಈ ಸಮಯದಲ್ಲಿ ಕೃಷ್ಣ ಅಥವ ವೈಷ್ಣವ ಪಂಥದ ಪ್ರತಿಪಾದಕರು ಭಕ್ತಿಯೆ ಮೋಕ್ಷಸಾಧನೆಗೆ ಮುಖ್ಯ ಮಾರ್ಗವೆಂದು ಒತ್ತಿ ಹೇಳಿದರು. ಒಟ್ಟಾರೆ ಹೇಳುವುದಾದರೆ ಭಾಗವತ ಧರ್ಮದವರು ಸಂಪ್ರದಾಯ ಹಿಂದೂ ಧರ್ಮದ ವಿರುದ್ಧ ದಂಗೆಯೇಳದೆ ಅದನ್ನು ಸುಧಾರಿಸುವುದರ ಮೂಲಕ ಜೈನ

ಮತ್ತು ಬೌದ್ಧಮತಗಳ ಸವಾಲನ್ನು ಎದುರಿಸಲು ಹಿಂದೂ ಧರ್ಮದಲ್ಲಿಯೇ ಸುಧಾರಣೆಗಳನ್ನು ಮಾಡಲು ಮುಂದೆ ಬಂದರು. ಅದು ಮುಂದಿನ ಶತಮಾನಗಳಲ್ಲಿ ಹೆಚ್ಚು ಯಶಸ್ಸುಗಳಿಸಿ ಹಿಂದೂಧರ್ಮವು ಅನೂಚಾನವಾಗಿ ಮುಂದುವರಿಯು-ವಂತಾಯಿತು.

**ವಾಸ್ತುಶಿಲ್ಪ ಮತ್ತು ಶಿಲ್ಪಕಲೆ**

ಮೌರ್ಯರ ಕಾಲಕ್ಕೆ ಮುಂಚೆ ಪ್ರಾಚೀನ ಭಾರತೀಯರು ತತ್ವಶಾಸ್ತ್ರ ಮತ್ತು ಸಾಹಿತ್ಯ ಕ್ಷೇತ್ರದಲ್ಲಿ ಸಾಧಿಸಿದಷ್ಟು ಮಹತ್ಸಾಧನೆಗಳನ್ನು ವಾಸ್ತುಶಿಲ್ಪ ಮತ್ತು ಶಿಲ್ಪಕಲಾ ಕ್ಷೇತ್ರದಲ್ಲಿ ಸಾಧಿಸಿದಂತೆ ಕಂಡುಬರುವುದಿಲ್ಲ. ಅವರು ಆಧ್ಯಾತ್ಮಿಕ ಸೌಧಗಳನ್ನು ನಿರ್ಮಿಸಿದರೇ ಹೊರತು ಭೌತಿಕವಾದ ಸೌಧಗಳನ್ನು ನಿರ್ಮಿಸಲಿಲ್ಲ. ಈ ಕಾಲದ ಕಟ್ಟಡಗಳೆಂದರೆ ಕೋಟೆಗಳು ಮತ್ತು ಕೆಲವು ನಗರಗಳ ನಿರ್ಮಾಣವಾಗಿದ್ದಿತು. ಆದರೆ ಅವುಗಳ ನಿರ್ಮಾಣಕ್ಕೆ ಮಣ್ಣು, ಮರ ಮತ್ತು ಬೊಂಬುಗಳನ್ನು ಹೆಚ್ಚಾಗಿ ಬಳಸುತ್ತಿದ್ದುದರಿಂದ ಅವುಗಳು ಬಹಳ ಕಾಲ ಉಳಿಯಲಾಗಲಿಲ್ಲ. ಇವುಗಳನ್ನು ಬಿಟ್ಟರೆ ಬೌದ್ಧರ ಸ್ತೂಪಗಳು ಈ ಕಾಲದ ವಾಸ್ತುಶಿಲ್ಪ ಕೃತಿಗಳಾಗಿವೆ. ಶಿಲ್ಪಕಲೆಗೆ ಸಂಬಂಧಿಸಿದಂತೆ ಜನಸಾಮಾನ್ಯರ ಪೂಜಾ ವಿಗ್ರಹಗಳಾದ ಯಕ್ಷರು, ನಾಗರು, ಗಂಧರ್ವರು ಅಪ್ಸರ ದೇವತೆಗಳ ಕಲಾಕೃತಿಗಳು ಈ ಕಾಲದ ಶಿಲ್ಪಕಲಾ ಕೃತಿಗಳಾಗಿದ್ದವು.

**ಶಿಕ್ಷಣ**

ಜೈನ ಮತ್ತು ಬೌದ್ಧರ ಸಾಹಿತ್ಯ ಕೃತಿಗಳಲ್ಲಿ ಈ ಕಾಲದ ವಿದ್ಯಾಭ್ಯಾಸ ಪದ್ಧತಿಯ ಬಗ್ಗೆ ಆಧಾರಗಳು ದೊರೆಯುತ್ತವೆ. ಗುರುಕುಲಗಳೇ ಅಲ್ಲದೆ ಕೆಲವು ಉನ್ನತ ವಿದ್ಯಾಭ್ಯಾಸದ ಕೇಂದ್ರಗಳೂ ಇದ್ದವು. ಅವುಗಳಲ್ಲಿ ತಕ್ಷಶಿಲೆಯು ಒಂದು ಪ್ರಸಿದ್ಧ ವಿದ್ಯಾ ಕೇಂದ್ರವಾಗಿತ್ತು. ಗಾಂಧಾರ ರಾಜ್ಯದ ರಾಜಧಾನಿಯಾಗಿದ್ದ ತಕ್ಷಶಿಲೆಯು ಬಹುಷಃ ಪ್ರಾಚೀನ ಭಾರತದ ವಿಶ್ವವಿದ್ಯಾನಿಲಯಗಳಲ್ಲಿ ಪುರಾತನವಾದುದಾಗಿತ್ತೆಂದು ಹೇಳಲಾಗಿದೆ. ಕ್ರಿ.ಪೂ. ಏಳನೆ ಶತಮಾನದ ವೇಳೆಗೆ ಈ ವಿಶ್ವವಿದ್ಯಾನಿಲಯ ಉನ್ನತ ವಿದ್ಯಾಭ್ಯಾಸದ ಕೇಂದ್ರವಾಗಿ ರಾಷ್ಟ್ರೀಯ ಖ್ಯಾತಿಯನ್ನು ಗಳಿಸಿ ದೇಶದ ವಿವಿಧ ಭಾಗಗಳಿಂದ ವಿದ್ಯಾರ್ಥಿಗಳನ್ನು ಆಕರ್ಷಿಸಿದ್ದಿತು. ಇಲ್ಲಿ ನೀಡಲಾಗುತ್ತಿದ್ದ ಶಿಕ್ಷಣವು ಉನ್ನತಮಟ್ಟದ್ದಾಗಿದ್ದು ರಾಜಕುಮಾರರು ವಿದ್ಯಾರ್ಜನೆಗಾಗಿ ಅಲ್ಲಿಗೆ ಹೋಗುತ್ತಿದ್ದರು. ಕೋಸಲದ ಪ್ರಸೇನಜಿತ್ ಮತ್ತು ರಾಜಕುಮಾರ ಜೀವಕ ಮೊದಲಾದವರು ಇಲ್ಲಿ ಕೆಲವು ವರ್ಷಗಳು ವಿದ್ಯಾರ್ಜನೆ ಮಾಡಿದುದ್ದಾಗಿ ಜಾತಕ ಕಥೆಗಳು ತಿಳಿಸುತ್ತವೆ. ಸುಪ್ರಸಿದ್ಧ ವ್ಯಾಕರಣ ಶಾಸ್ತ್ರಜ್ಞನಾಗಿದ್ದ ಪಾಣಿನಿಯು ಈ ವಿಶ್ವವಿದ್ಯಾನಿಲಯದ ಸುಪ್ರಸಿದ್ಧ ವಿದ್ಯಾರ್ಥಿಯಾಗಿದ್ದನೆಂದು ಡಾ.ಎ.ಎಸ್.ಅಲ್ಟೇಕರ್ ಅಭಿಪ್ರಾಯ ಪಟ್ಟಿರುವರು. ಚಾಣಕ್ಯನೂ ಕೂಡ ತಕ್ಷಶಿಲೆಯ ವಿದ್ಯಾರ್ಥಿಯಾಗಿದ್ದನೆಂದು ಹೇಳಲಾಗಿದೆ. ಇಲ್ಲಿನ ಪ್ರಾಧ್ಯಾಪಕರುಗಳು ಘನಪಂಡಿತರಾಗಿದ್ದು ರಾಜಗೃಹ, ಬೆನಾರಸ್ ಮಿಥಿಲ ಮತ್ತಿತರ ಪ್ರಮುಖ ನಗರಗಳಿಂದ ವಿದ್ಯಾರ್ಥಿಗಳನ್ನು ಆಕರ್ಷಿಸಿದರು. ಪಠ್ಯಕ್ರಮದಲ್ಲಿ ವೇದಗಳೇ ಅಲ್ಲದೆ ಹದಿನೆಂಟು ಕಲಾ ವಿಷಯಗಳು ಸೇರಿದ್ದುವೆಂದು ಜಾತಕ ಕಥೆಗಳು ತಿಳಿಸುತ್ತವೆ.

ವೈದ್ಯಕೀಯ, ಕಾನೂನುಶಾಸ್ತ್ರ ಮಿಲಿಟರಿ ವಿಜ್ಞಾನ ವಿಷಯಗಳಿಗೆ ತಕ್ಷಶಿಲೆಯು ಹೆಚ್ಚು ಖ್ಯಾತಿಗಳಿಸಿತ್ತು. ಪರ್ಶಿಯನ್ನರು ಮತ್ತು ಗ್ರೀಕರ ಆಕ್ರಮಣಗಳಿಂದಾಗಿ ತಕ್ಷಶಿಲೆಯು ವಿದೇಶೀಯರ ಪ್ರಭಾವಕ್ಕೊಳಗಾಗಿತ್ತು. ತಕ್ಷಶಿಲೆಯಲ್ಲಿ ಕೆಲವು ಗ್ರೀಕ್ ವಿದ್ವಾಂಸರೂ ಇದ್ದರೆಂದು ಕೆಲವು ಮೂಲಗಳು ತಿಳಿಸುತ್ತವೆ. ತಕ್ಷಶಿಲೆಯನ್ನು ಬಿಟ್ಟರೆ ಕಾಶಿಯು ಈ ಕಾಲದ ಮತ್ತೊಂದು ಪ್ರಮುಖ ವಿದ್ಯಾ ಕೇಂದ್ರವಾಗಿತ್ತು. ಆದರೆ ಅದು ತಕ್ಷಶಿಲೆಯಷ್ಟು ಪ್ರಾಚೀನವೂ ಮತ್ತು ಪ್ರಖ್ಯಾತವೂ ಆಗಿರಲಿಲ್ಲ. ತಕ್ಷಶಿಲೆಯಲ್ಲಿ ಬೋಧಿಸಲಾಗುತ್ತಿದ್ದ ವಿಷಯಗಳನ್ನೇ ಇಲ್ಲಿಯೂ ಹೇಳಿಕೊಡಲಾಗುತ್ತಿತ್ತು. ಆದರೆ ಕಾಶಿಯು ಸಂಗೀತ ವಿದ್ಯೆಗೆ ಪ್ರಸಿದ್ಧಿಯಾಗಿತ್ತು. ಜೈನಮತ ಮತ್ತು ಬೌದ್ಧಮತಗಳು ಏಳಿಗೆ ಹೊಂದಿದ ಮೇಲೆ ಆಶ್ರಮಗಳೂ ವಿದ್ಯಾಪ್ರಸಾರದಲ್ಲಿ ಪಾಲ್ಗೊಂಡವು.

ಅಧ್ಯಾಯ- 8

# ಮೌರ್ಯರು (ಕ್ರಿ.ಪೂ. 324-187)

ಕ್ರಿ.ಪೂ.ನಾಲ್ಕನೆ ಶತಮಾನದ ಕೊನೆಯ ಭಾಗದಲ್ಲಿ ಮೌರ್ಯ ಸಾಮ್ರಾಜ್ಯದ ಸ್ಥಾಪನೆಯು ಪ್ರಾಚೀನ ಭಾರತದ ಇತಿಹಾಸದಲ್ಲಿ ಅತ್ಯಂತ ಮಹತ್ವಪೂರ್ಣ ಘಟನೆಯಾಗಿರುತ್ತದೆ. ಚಂದ್ರಗುಪ್ತಮೌರ್ಯನು ಇದರ ಸ್ಥಾಪಕ. ಇವನು ಇದುವರೆವಿಗೂ ಅಸ್ತಿತ್ವದಲ್ಲಿದ್ದ ಸಣ್ಣಪುಟ್ಟ ರಾಜ್ಯಗಳನ್ನು ನಿರ್ಮೂಲಗೊಳಿಸಿ ಅವುಗಳ ಸ್ಥಾನದಲ್ಲಿ ಮೊಟ್ಟಮೊದಲ ಬಾರಿಗೆ ವಿಂಧ್ಯ ಪರ್ವತದಿಂದ ದಕ್ಷಿಣಕ್ಕೂ ವಿಸ್ತರಿಸಿದ್ದ ವಿಶಾಲ ಪ್ರದೇಶದ ಮೇಲೆ ತನ್ನ ಅಧಿಕಾರವನ್ನು ಸ್ಥಾಪಿಸಿ ಹಿಂದೆಂದೂ ಕಾಣದಿದ್ದಂತಹ ರಾಜಕೀಯ ಮತ್ತು ಆಡಳಿತ ಏಕತೆಯನ್ನು ಏರ್ಪಡಿಸಿ ಪ್ರಾಚೀನ ಭಾರತದ ಇತಿಹಾಸದಲ್ಲಿ ಒಬ್ಬ ಮಹಾನ್ ವ್ಯಕ್ತಿಯಾಗಿದ್ದಾನೆ. ಎರಡನೆಯದಾಗಿ ಮೌರ್ಯರ ಸಾಮ್ರಾಜ್ಯ ಸ್ಥಾಪನೆಯಿಂದಾಗಿ ಭಾರತದ ಇತಿಹಾಸದ ಅಧ್ಯಯನಕ್ಕೆ ಒಂದು ರೀತಿಯ ಪರಿಪೂರ್ಣತೆಯು ದೊರಕಿಮುಂದಿನ ಇತಿಹಾಸದ ಅಧ್ಯಯನವು ಅವ್ಯಹತವಾಗಿ ಮುಂದುವರಿಯುವಂತಾಯಿತು. ಮೂರನೆಯದಾಗಿ ಮೌರ್ಯ ಸಾಮ್ರಾಜ್ಯದ ಸ್ಥಾಪನೆಯೊಂದಿಗೆ ಭಾರತದ ಇತಿಹಾಸದ ಕಾಲಗಣನೆ ಮತ್ತು ವಂಶಾನುಕ್ರಮಣಿಕೆಯು ಕ್ರಮಬದ್ಧವಾಗತೊಡಗಿತು. ಇದಕ್ಕೆ ಮುಂಚಿನ ಭಾರತದ ಇತಿಹಾಸದ ಕಾಲಗಣನೆಯಲ್ಲಿ ಅಸ್ಪಷ್ಟತೆಯು ಹೆಚ್ಚಾಗಿದ್ದು ಇತಿಹಾಸಕಾರನಿಗೆ ಕಾಲಗಣನೆಯನ್ನು ನಿಷ್ಕರ್ಷೆ ಮಾಡಿ ಹೇಳುವುದರಲ್ಲಿ ಹಲವಾರು ರೀತಿಯ ತೊಡಕುಗಳು ಎದುರಾಗುತ್ತಿದ್ದವು. ಆದರೆ ಮೌರ್ಯಸಂತತಿಯವರ ಆಳ್ವಿಕೆಯು ಆರಂಭವಾದ ಮೇಲೆ ಇತಿಹಾಸಕಾರನಿಗೆ ಕಾಲಮಾನವನ್ನು ಸ್ಪಷ್ಟವಾಗಿ ನಿರ್ಧರಿಸಲು ಇದ್ದ ತೊಡಕುಗಳು ಕಡಿಮೆಯಾಗಿ ಕಾಲಗಣನೆಯನ್ನು ಕರಾರುವಾಕ್ಕಾಗಿ ಹೇಳಲು ಸಾಧ್ಯವಾಯಿತು. ಕೊನೆಯದಾಗಿ, ಮಹಾಮೇಧಾವಿ, ಸಾಮ್ರಾಟರೂ, ಮಿಲಿಟರಿ ಮತ್ತು ಆಡಳಿತ ಕೌಶಲದಲ್ಲಿ ಪ್ರತಿಭಾ ಸಂಪನ್ನರೂ ಧಾರ್ಮಿಕ ಸಹಿಷ್ಣುಗಳೂ ಹಾಗೂ ಕಲಾ ಪ್ರೋತ್ಸಾಹಕರೂ ಆಗಿದ್ದ ಮೌರ್ಯ ಚಕ್ರವರ್ತಿಗಳ ಬಹುಮುಖ ಸಾಧನೆಗಳು ಮುಂದೆ ಭಾರತವನ್ನಾಳಿದ ಹಲವಾರು ರಾಜಮನೆತನಗಳಿಗೆ ಮಾರ್ಗದರ್ಶಕವಾಗಿ ಭಾರತೀಯರು ಹೆಮ್ಮೆಪಟ್ಟುಕೊಳ್ಳುವಂತಾಯಿತು.

**ಆಧಾರಗಳು**

ಮೌರ್ಯರ ಕಾಲದ ಇತಿಹಾಸವನ್ನು ತಿಳಿಯಲು ದೊರೆತಿರುವ ಆಧಾರಗಳನ್ನು ಸ್ಥೂಲವಾಗಿ ನಾಲ್ಕು ವರ್ಗಗಳಾಗಿ ವಿಂಗಡಿಸಬಹುದು. 1. ಸಾಹಿತ್ಯಾಧಾರಗಳನ್ನು

ಅವಲಂಬಿಸಿರುವ ಪುರಾಣಕೃತಿಗಳು, 2. ಸಮಕಾಲೀನ ಜೈನ ಮತ್ತು ಬೌದ್ಧ ಸಾಹಿತ್ಯ ಕೃತಿಗಳು. 3. ವಿದೇಶೀಯರ ಬರವಣಿಗೆಗಳು, 4. ಪ್ರಾಕ್ತನ ಶಾಸ್ತ್ರಾಧಾರಗಳ ಗುಂಪಿಗೆ ಸೇರಿದ ಶಾಸನಗಳು, ಸ್ಮಾರಕಗಳು ಮತ್ತು ಕಲಾಕೃತಿಗಳು ಮುಖ್ಯ ಆಧಾರಗಳಾಗಿವೆ.

ಮೌರ್ಯ ಸಂತತಿಯವರ ಅಧಿಕಾರದ ಸ್ಥಾಪಕನಾದ ಚಂದ್ರಗುಪ್ತ ಮೌರ್ಯನು ನಂದ ಸಂತತಿಯ ಕೊನೆಯ ಅರಸನಾದ ಧನನಂದನನ್ನು ಕೊಂದು ಅಧಿಕಾರಕ್ಕೆ ಬಂದನೆಂಬುದನ್ನು ಪುರಾಣಗಳು ತಿಳಿಸುತ್ತವೆ. ಅಲ್ಲದೆ ಪುರಾಣಗಳ ಪ್ರಕಾರ ಮೌರ್ಯ ಸಂತತಿಯಲ್ಲಿ ಒಟ್ಟು ಹದಿಮೂರು ರಾಜರುಗಳು ಸುಮಾರು 232 ವರ್ಷಗಳ ಕಾಲ ರಾಜ್ಯವಾಳಿದುದಾಗಿ ತಿಳಿದುಬರುತ್ತದೆ. ನಂದರ ಅಧಿಕಾರವನ್ನು ಕೊನೆಗೊಳಿಸುವಲ್ಲಿ ಚಂದ್ರಗುಪ್ತ ಮೌರ್ಯನಿಗೆ ಚಾಣುಕ್ಯನು ಸಹಾಯ ಮಾಡಿದ ವಿಷಯವನ್ನು ಪುರಾಣಗಳು ತಿಳಿಸುತ್ತವೆ. ಅಂತೆಯೆ ಗುಪ್ತರ ಕಾಲಕ್ಕೆ ಸೇರಿದ ವಿಶಾಕದತ್ತನ ಮುದ್ರಾರಾಕ್ಷಸ ನಾಟಕವು ಚಂದ್ರಗುಪ್ತಮೌರ್ಯನ ಬಗ್ಗೆ ಹಲವಾರು ವಿಷಯಗಳನ್ನೊಳಗೊಂಡಿದೆ.

ಮೌರ್ಯರ ಕಾಲದ ಇತಿಹಾಸ ರಚನೆಗೆ ಸಮಕಾಲೀನ ಸಾಹಿತ್ಯ ಕೃತಿಯಾದ ಅರ್ಥಶಾಸ್ತ್ರವು ಅತ್ಯಂತ ಉಪಯುಕ್ತ ಕೃತಿಯಾಗಿದೆ. ಇದು ಸಂಸ್ಕೃತಿ ಭಾಷೆಯಲ್ಲಿ ಬರೆಯಲ್ಪಟ್ಟಿದೆ. ಈ ಗ್ರಂಥದ ರಚನೆಯ ಕಾಲದ ಬಗ್ಗೆ ಮತ್ತು ಕತೃವಿನ ಬಗ್ಗೆ ವಿದ್ವಾಂಸರಲ್ಲಿ ಒಮ್ಮತವಾದ ಅಭಿಪ್ರಾಯಗಳಿರುವುದಿಲ್ಲ. ಅರ್ಥಶಾಸ್ತ್ರದ ಮೂಲಕೃತಿಯು ಹಾಳಾಗಿಹೋಗಿದೆ. ಆದರೆ ಅದರ ಪ್ರತಿಯನ್ನು 1909ರಲ್ಲಿ ಪಂಡಿತ ಶಾಮಾಶಾಸ್ತ್ರಿಯವರು ಸಂಪಾದಿಸಿ ಪ್ರಕಟಿಸಿದರು. ಭಾರತೀಯರ ಸಂಪ್ರದಾಯದ ಪ್ರಕಾರ ಅರ್ಥಶಾಸ್ತ್ರದ ಕರ್ತವು ಕೌಟಿಲ್ಯ ಅಥವ ಚಾಣುಕ್ಯನೆಂದು ಒಪ್ಪಿಕೊಳ್ಳಲಾಗಿದೆ. ಈ ಅಭಿಪ್ರಾಯವನ್ನು ಸಮರ್ಥಿಸಿ ಕೆಲವು ಭಾರತೀಯ ವಿದ್ವಾಂಸರು, ದಂಡಿನ್, ಬಾಣ, ಕಾಮಾಂಡಕ ಮತ್ತು ವಾತ್ಸಾಯನ ಮೊದಲಾದವರು ತಮ್ಮ ಕೃತಿಗಳಲ್ಲಿ ಕೌಟಿಲ್ಯನ ಅರ್ಥಶಾಸ್ತ್ರದ ಬಗ್ಗೆ ಪ್ರಸ್ತಾಪಿಸಿರುವುದರಿಂದ ಈ ಕೃತಿಯು ಅವರಿಗಿಂತ ಮೊದಲೆ ರಚಿತವಾಗಿದ್ದಿತೆಂದು ಅಭಿಪ್ರಾಯ ಪಡುತ್ತಾರೆ ಮೆಗಾಸ್ತನೀಸನ 'ಇಂಡಿಕಾ' ಮತ್ತು ಕೌಟಿಲ್ಯನ ಅರ್ಥಶಾಸ್ತ್ರದಲ್ಲೂ ಪ್ರಸ್ತಾಪಿಸಲ್ಪಟ್ಟಿರುವ ರಾಜ್ಯವು ಮೌರ್ಯರ ರಾಜ್ಯವಾಗಿರುವುದರಿಂದ ಈ ಕೃತಿಯು ಕ್ರಿ.ಪೂ. ನಾಲ್ಕನೆ ಶತಮಾನದಲ್ಲಿ ರಚಿಸಲ್ಪಟ್ಟಿರಬಹುದೆಂದು ಅಭಿಪ್ರಾಯ ಪಡಲಾಗಿದೆ. ಮತ್ತೆ ಕೆಲವು ವಿದ್ವಾಂಸರು ಅರ್ಥಶಾಸ್ತ್ರದಲ್ಲಿ ಚಂದ್ರಗುಪ್ತಮೌರ್ಯನ ಬಗ್ಗೆ ಯಾವ ಪ್ರಸ್ತಾಪವೂ ಇಲ್ಲದಿರುವುದರಿಂದ ಈ ಕೃತಿಯು ಕೌಟಿಲ್ಯನ ತತ್ವಗಳನ್ನು ಅನುಸರಿಸಿ ತರುವಾಯದಲ್ಲಿ ರಚಿತವಾಗಿರಬೇಕೆಂದು ಅಭಿಪ್ರಾಯಪಡುವರು. ಪಾಶ್ಚಾತ್ಯ ವಿದ್ವಾಂಸರುಗಳಾದ ಎ.ಬಿ.ಕೀತ್ ಮತ್ತು ವಿಂಟರ್ ನಿಟ್ಜ್. ಈ ಕೃತಿಯು ಕೌಟಿಲ್ಯನ ಪಂಥ ಅಥವ ಶಾಲೆಗೆ ಸೇರಿದವರಿಂದ ಕ್ರಿ.ಶ.ಎರಡನೆ ಅಥವ ಮೂರನೆ ಶತಮಾನದಲ್ಲಿ ರಚಿತವಾಗಿರಬೇಕೆಂದು ಅಭಿಪ್ರಾಯ ಪಡುವರು. ಒಟ್ಟಿನಲ್ಲಿ ಅರ್ಥಶಾಸ್ತ್ರದ ಕತೃವಿನ ಬಗ್ಗೆ ಏನ್ನೇ ತಾರ್ಕಿಕ ಅಭಿಪ್ರಾಯಗಳಿದ್ದರೂ ಮೌರ್ಯರ ಕಾಲದ ಇತಿಹಾಸ ರಚನೆಗೆ ಅರ್ಥಶಾಸ್ತ್ರವು ಅತ್ಯುಪಯುಕ್ತವಾದ ಮಾಹಿತಿಗಳನ್ನು ನೀಡುತ್ತದೆ. ಅರ್ಥಶಾಸ್ತ್ರದಲ್ಲಿ ಪ್ರಸ್ತಾಪಿಸಲಾಗಿರುವ ವಿಷಯಗಳು ಬಹಳ ವ್ಯಾಪಕವಾಗಿವೆ. ಸರ್ಕಾರ, ಯುದ್ಧ ಮತ್ತು ಶಾಂತಿ, ರಾಜ್ಯದ ರಕ್ಷಣೆ, ಗೂಢಾಚಾರರು, ರಾಜನ ಕರ್ತವ್ಯಗಳು, ಆಧಾಯ ಮತ್ತು

ತೆರಿಗೆಗಳು, ಸಚಿವರು, ಅವರ ಕರ್ತವ್ಯಗಳು, ಅಪರಾಧ ಮತ್ತು ಅಪರಾಧದ ಕಾನೂನುಗಳು, ಸರ್ಕಾರದ ವಿವಿಧ ಇಲಾಖೆಗಳು, ಅಧಿಕಾರಿಗಳ ಸಂಬಳ ವಿದೇಶಾಂಗನೀತಿ ಮತ್ತಿತರ ವಿಷಯಗಳು ಇದರಲ್ಲಿ ಪ್ರಸ್ತಾಪಿಸಲ್ಪಟ್ಟಿವೆ. ಇದಲ್ಲದೆ ಅರ್ಥಶಾಸ್ತ್ರವು ಮೌರ್ಯರ ಸರ್ಕಾರದ ಲಕ್ಷಣಗಳನ್ನೂ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳನ್ನೂ ತಿಳಿಯಲು ಸಹಾಯಕವಾಗಿದೆ. ಮೇಲಾಗಿ ಅರ್ಥಶಾಸ್ತ್ರವು ಆಡಳಿತ ಕ್ಷೇತ್ರದಲ್ಲಿ ಪ್ರಾಚೀನ ಭಾರತೀಯರು ಗಳಿಸಿದ್ದ ಬುದ್ಧಿ ಕೌಶಲಕ್ಕೆ ಸಾಕ್ಷಿಭೂತವಾಗಿದೆ.

ಮೆಗಾಸ್ತನೀಸನ 'ಇಂಡಿಕ' ಗ್ರಂಥವು ಮೌರ್ಯರ ಕಾಲದ ಇತಿಹಾಸ ರಚನೆಗೆ ಮತ್ತೊಂದು ಬಹುಮುಖ್ಯ ಆಧಾರವಾಗಿದೆ. ಸೆಲ್ಯೂಕಸ್ ನಿಕೇಟರನು ಮೆಗಾಸ್ತನೀಸನನ್ನು ಗ್ರೀಕ್ ರಾಯಭಾರಿಯಾಗಿ ಚಂದ್ರಗ್ರುಗುಪ್ತ ಮೌರ್ಯನ ಆಸ್ಥಾನಕ್ಕೆ ಕಳುಹಿಸಿದ್ದನು. 'ಇಂಡಿಕ' ಗ್ರಂಥದ ಹಸ್ತಪ್ರತಿಯು ಹಾಳಾಗಿ ಹೋಗಿದೆ. 'ಇಂಡಿಕ'ದಲ್ಲಿ ಪ್ರಸ್ತಾಪಿಸಲಾಗಿರುವ ವಿಷಯಗಳು ಏರಿಯನ್, ಡಿಯೊಡೋರಸ್, ಸ್ಟ್ರಾಬೋ, ಪ್ಲಿನಿ ಜಸ್ಟಿನ್, ಪ್ಲೂಟಾರ್ಕ್ ಮೊದಲಾದ ಗ್ರೀಕ್ ಮತ್ತು ಲ್ಯಾಟಿನ್ ಬರಹಗಾರರ ಕೃತಿಗಳಲ್ಲಿ ಕಂಡುಬರುತ್ತವೆ. ಮೆಗಾಸ್ತನೀಸನು ಭಾರತದಲ್ಲಿ ಐದು ವರ್ಷಗಳ ಕಾಲ ರಾಯಭಾರಿಯಾಗಿದ್ದು ಕಣ್ಣಾರೆ ಕಂಡು, ಕಿವಿಯಾರೆ ಕೇಳಿದ ವಿಷಯಗಳನ್ನು ತನ್ನ ಗ್ರಂಥದಲ್ಲಿ ನಿರೂಪಿಸಿದ್ದಾನೆ. ಆದರೆ ಅವನು ತಾನು ಇತರರಿಂದ ಕೇಳಿದ ವಿಷಯಗಳ ಬಗ್ಗೆ ವಿಚಾರ ವಿಮರ್ಶೆ ಮಾಡಿದಂತೆ ಕಂಡುಬರುವುದಿಲ್ಲ. ಆದರೆ ತಾನು ನೋಡಿದ ಸಂಗತಿಗಳ ಬಗ್ಗೆ ನಿಜವಾದ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾನೆ. ರಾಜಧಾನಿ ಪಾಟಲೀಪುತ್ರದ ಬಗ್ಗೆ ಅವನು ನೀಡಿರುವ ವರ್ಣನೆಯು ಅಮೂಲ್ಯವಾಗಿದೆ. 'ಇಂಡಿಕ' ಗ್ರಂಥದಲ್ಲಿ ಎಷ್ಟೇ ಅಸ್ಪಷ್ಟತೆಯಿದ್ದರೂ ಅದೊಂದು ಅತ್ಯಮೂಲ್ಯ ಆಧಾರವಾಗಿದೆ. ಮೆಗಾಸ್ತನೀಸನ ಅಧ್ಯಯನದ ಆಸಕ್ತಿಯು ಬಹಳ ವ್ಯಾಪಕವಾಗಿತ್ತು. ಅವನು ಭಾರತದ ವೈಶಾಲ್ಯ, ಇಲ್ಲಿನ ಬಹುದೊಡ್ಡ ನದಿಗಳು, ಜನರ ಉಡಿಗೆ ತೊಡಿಗೆಗಳು, ಆಹಾರ ಪದಾರ್ಥಗಳು, ಸಂಪ್ರದಾಯಗಳು, 'ಲೋಹಸಂಪತ್ತು, ಪ್ರಾಣಿಗಳು, ನಗರಗಳು ಮತ್ತು ದೇಗುಲಗಳೇ ಮೊದಲಾದ ಕಟ್ಟಡಗಳ ಬಗೆ ದೀರ್ಘ ವಿವರಗಳನ್ನು ನೀಡುತ್ತಾನೆ.

ಅಶೋಕನ ಶಿಲಾಶಾಸನಗಳು ಅವನ ಸ್ವಭಾವ, ಮತ್ತು ಆದರ್ಶ ಸರ್ಕಾರ ಪದ್ಧತಿಯ ಬಗ್ಗೆ ವಿಶೇಷ ಮಾಹಿತಿಗಳನ್ನು ನೀಡುತ್ತವೆ. ಅಶೋಕನ ಬಗೆಗಿನ ಇತಿಹಾಸವು ಅವನ ಶಾಸನಗಳನ್ನು ಬಹಳ ಮಟ್ಟಿಗೆ ಅವಲಂಬಿಸಿರುತ್ತದೆ. ಅಂತೆಯೆ ಮೌರ್ಯರ ಕಾಲದ ಕಟ್ಟಡಗಳಾದ ಅರಮನೆ, ಗುಹಾಂತರ್ದೇವಾಲಯಗಳು ಸ್ತೂಪಗಳು ಮತ್ತಿತರ ಸ್ಮಾರಕಗಳು ಅನೇಕ ವಿಧದಲ್ಲಿ ಇತಿಹಾಸ ರಚನೆಗೆ ಸಹಾಯಕವಾಗುತ್ತವೆ. ಸಿಲೋನಿನ ವೃತ್ತಾಂತಗಳಾದ ದೀಪವಂಶ ಮತ್ತು ಮಹಾವಂಶಗಳು ಮತ್ತು ಬಿಂದುಸಾರನ ಆಸ್ಥಾನಕ್ಕೆ ರಾಯಭಾರಿಯಾಗಿ ಬಂದಿದ್ದ ಡೈಮೂಕಸ್‌ನ ಬರವಣಿಗೆಗಳು ಉಪಯುಕ್ತ ಆಧಾರಗಳಾಗಿವೆ.

**ಚಂದ್ರಗುಪ್ತಮೌರ್ಯ (ಕ್ರಿ.ಪೂ. 324-300)**

ಚಂದ್ರಗುಪ್ತ ಮೌರ್ಯನು ಮೌರ್ಯ ಸಾಮ್ರಾಜ್ಯದ ಸ್ಥಾಪಕ. ಇವನ ಮೂಲದ ಮತ್ತು ಆರಂಭದ ಜೀವನದ ಬಗ್ಗೆ ಸ್ಪಷ್ಟವಾಗಿ ಏನೂ ತಿಳಿದು ಬಂದಿಲ್ಲ. ಗ್ರೀಕ್ ಇತಿಹಾಸಕಾರ ಜಸ್ಟಿನ್ ಎಂಬುವನು ಚಂದ್ರಗುಪ್ತಮೌರ್ಯನು ಕೀಳು

ಕುಲವೊಂದಕ್ಕೆ ಸೇರಿದವರನೆಂದು ಹೇಳುತ್ತಾನೆ. ಗುಪ್ತರ ಕಾಲದಲ್ಲಿ ರಚಿತವಾಗಿರುವ ಮುದ್ರಾರಾಕ್ಷಸ ನಾಟಕದಲ್ಲಿ ಅದರ ಕರ್ತೃ ವಿಶಾಖದತ್ತನು ಚಂದ್ರಗುಪ್ತನ ಬಗ್ಗೆ ವೃಷಲ ಮತ್ತು ಕುಲಹೀನ ಎಂಬ ಪದಗಳನ್ನು ಬಳಸಿ ಜಸ್ಟಿನ್‌ನ ಅಭಿಪ್ರಾಯವನ್ನು ಬೆಂಬಲಿಸಿರುವುದಾಗಿ ಕಂಡುಬರುತ್ತದೆ. ಜೈನ ಮತ್ತು ಬೌದ್ಧ ಗ್ರಂಥಗಳ ಆಧಾರಗಳ ಪ್ರಕಾರ ಚಂದ್ರಗುಪ್ತನ ಪೂರ್ವಜರು ಮಯೂರಗಳ ಪೋಷಕರಾಗಿದ್ದರೆಂದು, ಮೌರ್ಯ ಎಂಬ ಪದವು ಮಯೂರ ಎಂಬ ಪದದ ವ್ಯುತ್ಪತ್ತಿಯೆಂದು ತಿಳಿದುಬರುತ್ತದೆ. ಅಲ್ಲದೆ ರಾಜಧಾನಿ ಪಾಟಲೀಪುತ್ರದ ರಾಜೋದ್ಯಾನದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಮಯೂರಗಳಿದ್ದುವೆಂದು ಅವುಗಳನ್ನು ಪಾಲಿಸುತ್ತಿದ್ದವರನ್ನು ಮಯೂರ ಪೋಷಕರೆಂದು ಕರೆಯುತ್ತಿದ್ದರೆಂದು ಮತ್ತು ಈ ಕುಲಕ್ಕೆ ಸೇರಿದವರು ಮೌರ್ಯ ಎಂದು ಕರೆಯಲ್ಪಟ್ಟರೆಂದು ವಿವರಣೆಗಳನ್ನು ಕೊಟ್ಟಿದ್ದಾರೆ. ಜೈನರ ಸಂಪ್ರದಾಯವೊಂದರ ಪ್ರಕಾರ ಚಂದ್ರಗುಪ್ತ ಮೌರ್ಯನು ಹಳ್ಳಿಯ ಮುಖಂಡನೊಬ್ಬನ ಮಗಳ ಮಗನೆಂದು ಮತ್ತು ಆ ಹಳ್ಳಿಯಲ್ಲಿ ಮಯೂರಗಳ ಪೋಷಕರು ವಾಸಿಸುತ್ತಿದ್ದರೆಂದು ಬಹುಶಃ ಮೌರ್ಯ ಎಂಬ ಪದವು ಮಯೂರ ಪೋಷಕ ಎಂಬ ಪದದ ವ್ಯುತ್ಪತ್ತಿಯೆಂದು ತಿಳಿದುಬರುತ್ತದೆ. ಆದ್ದರಿಂದ ಚಂದ್ರಗುಪ್ತಮೌರ್ಯನು ಒಂದು ಸಾಮಾನ್ಯ ಮೂಲಕ್ಕೆ ಸೇರಿದವನೆಂದು ಅಭಿಪ್ರಾಯ ಪಡಬಹುದಾಗಿದೆ. ಡಾ.ಎಚ್.ಸಿ. ರಾಯಚೌದುರಿಯವರು ಬೌದ್ಧ ಗ್ರಂಥವಾದ ಮಹಾಪರಿನಿಬ್ಬಣದ ಆಧಾರವನ್ನು ಅನುಸರಿಸಿ ಕ್ರಿ.ಪೂ. ಆರನೆ ಶತಮಾನದಲ್ಲಿದ್ದ ಪಿಪ್ಪಿಲವನ ಎಂಬ ಒಂದು ಸಣ್ಣ ಗಣರಾಜ್ಯಕ್ಕೆ ಇವನ ತಂದೆಯು ಒಡೆಯನಾಗಿದ್ದನೆಂದು ಆದ್ದರಿಂದ ಚಂದ್ರಗುಪ್ತ ಮೌರ್ಯನು ಕ್ಷತ್ರಿಯ ವಂಶಕ್ಕೆ ಸೇರಿದವನೆಂದು ಅಭಿಪ್ರಾಯಪಡುತ್ತಾರೆ. ಮತ್ತೊಂದು ಐತಿಹ್ಯದ ಪ್ರಕಾರ ನಂದ ಸಂತತಿಯ ರಾಜನೊಬ್ಬನಿಗೆ ಶೂದ್ರ ಜಾತಿಗೆ ಸೇರಿದ 'ಮುರಾ' ಎಂಬ ಉಪಪತ್ನಿಯಿದ್ದಳೆಂದೂ ಮತ್ತು ಅವಳು ಬಹುಶಃ ಚಂದ್ರಗುಪ್ತನ ತಾಯಿಯಾಗಿರಬೇಕೆಂದು ಮೌರ್ಯ ಎಂಬ ಪದವು 'ಮುರಾ' ಎಂಬ ಪದದಿಂದ ಬಂದಿದೆಯೆಂದು ತಿಳಿದುಬರುತ್ತದೆ. ಇದರಿಂದಾಗಿ ಚಂದ್ರಗುಪ್ತಮೌರ್ಯನ ಮೂಲದ ಬಗ್ಗೆ ಪರಸ್ಪರ ವಿರೋಧ ಅಭಿಪ್ರಾಯಗಳು ವ್ಯಕ್ತಪಟ್ಟಿದ್ದು ನಿಖರವಾಗಿ ಏನನ್ನೂ ಹೇಳಲು ಸಾಧ್ಯವಾಗಿಲ್ಲ.

### ಚಂದ್ರಗುಪ್ತ ಮೌರ್ಯನು ಅಧಿಕಾರಕ್ಕೆ ಬಂದುದು

ನಂದ ಸಂತತಿಯವರು ಮಗಧ ರಾಜ್ಯವನ್ನು ಆಳುತ್ತಿದ್ದ ಸಮಯದಲ್ಲಿ ಚಂದ್ರಗುಪ್ತ ಮೌರ್ಯನು ಇನ್ನೂ ಬಾಲಕನಾಗಿದ್ದನು. ಚಂದ್ರಗುಪ್ತ ಮೌರ್ಯನು (ಸಾಂಡ್ರೋ ಕೋಟಿಸ್) ಭಾರತದ ಮೇಲೆ ದಂಡೆತ್ತಿ ಬಂದಿದ್ದ ಅಲೆಗ್ಸಾಂಡರನನ್ನು ಪಂಜಾಬಿನಲ್ಲಿ ಭೇಟಿಮಾಡಿ ಜನಪ್ರಿಯತೆ ಕಳೆದುಕೊಂಡಿದ್ದ ನಂದರ ದೊರೆಯ ಮೇಲೆ ಆಕ್ರಮಣ ಮಾಡುವಂತೆ ಅವನಿಗೆ ತಿಳಿಸಿದನೆಂದು ಪ್ಲೂಟಾರ್ಕ್ ಹೇಳುತ್ತಾನೆ. ಚಂದ್ರಗುಪ್ತನ ಈ ಧೈರ್ಯದ ಮಾತುಗಳನ್ನು ಕೇಳಿದ ಅಲೆಗ್ಸಾಂಡರನು ತನಗೆ ಅದೊಂದು ರೀತಿಯ ಅವಮಾನದ ಮಾತೆಂದು ತಿಳಿದು ಅವನನ್ನು ಕೊಲ್ಲುವಂತೆ ಅಪ್ಪಣೆ ಮಾಡಿದನೆಂದು ಆದರೆ ಚಂದ್ರಗುಪ್ತನು ಹೇಗೋ ತಪ್ಪಿಸಿಕೊಂಡು ಬಂದನೆಂದೂ ಮುಂದೆ ಅವನಿಗೆ ಚಾಣಕ್ಯ ಎಂಬ ಬ್ರಾಹ್ಮಣನ ಸಹಾಯವು ದೊರಕಿ ಅವನು ಅಧಿಕಾರದ ಗದ್ದುಗೆಯೇರಿದನೆಂದು ಹೇಳಲಾಗಿದೆ. ಬೌದ್ಧರ ಸಂಪ್ರದಾಯವೊಂದರ

ಪ್ರಕಾರ ಚಂದ್ರಗುಪ್ತಮೌರ್ಯನು ಅವನ ತಾಯಿಯ ಒಡಲಿನಲಿದ್ದಾಗಲೇ ಅವನ ತಂದೆಯು ತೀರಿಕೊಂಡನೆಂದೂ, ಅನಂತರ ನಿಸ್ಸಹಾಯಕಳಾದ ತಾಯಿಯು ಪಾಟಲೀಪುತ್ರದಲ್ಲಿ ಆಶ್ರಯಪಡೆದು ಅಲ್ಲಿ ಅವನಿಗೆ ಜನ್ಮ ವಿತ್ತಳೆಂದು ತಿಳಿದುಬರುತ್ತದೆ. ಆದರೆ ಅವಳಿಗೆ ಈ ಮಗುವನ್ನು ಸಾಕುವುದು ಕಷ್ಟವಾಗಿ ಅವನನ್ನು ದನಕಾಯುವವನೊಬ್ಬನ ವಶಕ್ಕೊಪ್ಪಿಸಿದಳೆಂದೂ ಅವನು ಈ ಬಾಲಕನನ್ನು ದನಗಳನ್ನು ಕಾಯುವುದಕ್ಕೆ ನೇಮಿಸಿಕೊಂಡಿದ್ದನೆಂದು ಹೇಳಲಾಗಿದೆ. ಹೀಗೆ ದನಕಾಯುತ್ತಿದ್ದ ಬಾಲಕನು ಒಂದು ದಿನ ತನ್ನ ಸಂಗಡಿಗರೊಂದಿಗೆ ಅಣಕು ರಾಜಸಭೆಯೊಂದನ್ನು ಏರ್ಪಡಿಸಿ ಅದರಲ್ಲಿ ತಾನು ರಾಜನಾಗಿ ನ್ಯಾಯತೀರ್ಮಾನ ಕೊಡುತ್ತಿದ್ದುದನ್ನು ಅಕಸ್ಮಾತ್ತಾಗಿ ಆ ಮಾರ್ಗದಲ್ಲಿ ಹೋಗುತ್ತಿದ್ದ ಚಾಣಕ್ಯನು ನೋಡಿದನೆಂದೂ ಮತ್ತು ಅವನು ಮನದಲ್ಲೇ ಆ ಬಾಲಕನ ವರ್ತನೆಯ ಬಗ್ಗೆ ಸಂತಸಗೊಂಡು, ಅವನನ್ನು ಕೊಂಡು ಕೊಂಡು ತಕ್ಷಶಿಲೆಗೆ ಕರದುಕೊಂಡು ಬಂದು ತಕ್ಷಶಿಲೆಯಲ್ಲಿ ವಿದ್ಯಾಭ್ಯಾಸ ಮಾಡಿಸಿ ಅವನನ್ನು ಒಬ್ಬ ಸಮರ್ಥಯೋಧನನ್ನಾಗಿ ಮಾಡಿದನು. ಈ ಮೊದಲು ಚಾಣುಕ್ಯನು ನಂದರ ಸರ್ಕಾರದಲ್ಲಿ ದಾನ ಶಾಲೆಯ ಅಧ್ಯಕ್ಷನಾಗಿ ಕೆಲಸ ಮಾಡುತ್ತಿದ್ದು ಧನನಂದನ ಕೋಪಕ್ಕೆ ಪಾತ್ರನಾಗಿ ಕೆಲಸದಿಂದ ತೆಗೆದುಹಾಕಲ್ಪಟ್ಟಿದ್ದು ಅವಮಾನಿತನಾಗಿದ್ದನು. ಹೀಗೆ ಅವಮಾನಿತನಾಗಿದ್ದ ಚಾಣಕ್ಯನು ನಂದರ ವಿರುದ್ಧ ಸೇಡುತೀರಿಸಿಕೊಳ್ಳಲು ನಿರ್ಧರಿಸಿದ್ದನು. ಈಗ ಅವನು ಚಂದ್ರ ಗುಪ್ತನಿಗೆ ನಂದರ ಅಧಿಕಾರವನ್ನು ಕೊನೆಗಾಣಿಸಲು ಎಲ್ಲ ರೀತಿಯ ಸಹಾಯಮಾಡಿದನು. ಪರಾಕ್ರಮಶಾಲಿಯಾಗಿದ್ದ ಚಂದ್ರಗುಪ್ತ ಮೌರ್ಯನು ದೇಶವನ್ನು ಪ್ರಜಾಪೀಡಕರಾಗಿದ್ದ ನಂದರ ಆಳ್ವಿಕೆಯಿಂದಲೂ ಮತ್ತು ವಿದೇಶಿಯರಾದ ಗ್ರೀಕರ ಆಕ್ರಮಣದಿಂದಲೂ ರಕ್ಷಿಸಲು ಸಮರ್ಥನಾದನು. ಆದರೆ ಈ ಎರಡು ಸಾಧನೆಗಳಲ್ಲಿ ಅವನ ಮೊದಲನೆ ಸಾಧನೆ ಯಾವುದೆಂಬುದು ಸರಿಯಾಗಿ ತಿಳಿದು ಬಂದಿಲ್ಲ. ಗ್ರೀಕರನ್ನು ದೇಶದಿಂದ ಹೊರಗಟ್ಟುವುದರಲ್ಲಿ ಅವನಿಗೆ ಹಿಮಾಲಯ ಪ್ರಾಂತ್ಯದ ರಾಜನಾದ ಪರ್ವತಕನ ಸಹಾಯವೆ ಅಲ್ಲದೆ ಕಾಂಬೋಜರು ಮತ್ತು ಬಲ್ಹಿಕರು ಮೊದಲಾದ ಜನಗಳ ಸಹಾಯವು ದೊರೆಕಿದ್ದಿತು. ಇದಲ್ಲದೆ ಅಲೆಗ್ಸಾಂಡರನು ಗಂಗಾ ನದಿಯ ಬಯಲಿನ ಕಡೆ ತನ್ನ ದಂಡಯಾತ್ರೆಯನ್ನು ಮುಂದುವರಿಸುವ ಆಲೋಚನೆಯಲ್ಲಿದ್ದಾಗ ಅದನ್ನು ಅವನ ಸೈನಿಕರು ವಿರೋಧಿಸಿದುದು ಚಂದ್ರಗುಪ್ತನ ಏಳಿಗೆಗೆ ಅನುಕೂಲವಾದ ಅಂಶವೇ ಆಗಿದ್ದಿತು. ಅಲೆಗ್ಸಾಂಡರನು ಕ್ರಿ.ಪೂ. 323ರಲ್ಲಿ ಕಾಲವಾದನು. ಚಂದ್ರಗುಪ್ತಮೌರ್ಯ ಮತ್ತು ಚಾಣಕ್ಯನು ನಂದರ ಪ್ರಬಲ ಸೈನ್ಯದ ವಿರುದ್ಧ ಹೋರಾಡಲು ಗ್ರೀಕರ ಕೂಲಿಯ ಸೈನಿಕರನ್ನು ನೇಮಿಸಿಕೊಂಡಿದ್ದರೆಂದು ಕೆಲವು ಆಧಾರಗಳು ತಿಳಿಸುತ್ತವೆ. ಹೀಗೆ ಸಿದ್ಧತೆಗಳನ್ನು ಮಾಡಿಕೊಂಡಿದ್ದ ಚಂದ್ರಗುಪ್ತ ಮೌರ್ಯನು ಪಾಟಲೀಪುತ್ರದ ಮೇಲೆ ಆಕ್ರಮಣ ಮಾಡಿ ನಂದರ ರಾಜನಾದ ಧನನಂದನನ್ನು ಸಂಪೂರ್ಣವಾಗಿ ಸೋಲಿಸಿದನು. ಆದರೆ ಈ ಯುದ್ಧದಲ್ಲಿ ನಂದರ ರಾಜನು ಮಡಿದನೋ ಇಲ್ಲವೊ ಎಂಬುದು ತಿಳಿದು ಬಂದಿಲ್ಲ. ಚಂದ್ರಗುಪ್ತ ಮೌರ್ಯನು ಕ್ರಿ.ಪೂ. 324ರಲ್ಲಿ ಸಿಂಹಾಸನವನ್ನೇರಿದನು.

ಚಂದ್ರಗುಪ್ತ ಮೌರ್ಯನು ನಂದರ ಅಧಿಕಾರವನ್ನು ಕೊನೆಗೊಳಿಸಿ ಮಗಧ ರಾಜ್ಯದ ಅಧಿಪತಿಯಾದ ನಂತರ ಸೆಲ್ಯೂಕಸ್ಸನ ಕಡೆ ತನ್ನ ಗಮನವನ್ನು ಹರಿಸಿದನು.

ಸೆಲ್ಯೂಕಸ್ಸನು ಅಲೆಗ್ಸಾಂಡರನ ಮರಣಾ ನಂತರ ಮಧ್ಯಧರಾಸಮುದ್ರದಿಂದ ಸಿಂಧೂನದಿಯವರೆಗಿನ ಪ್ರದೇಶಕ್ಕೆ ಒಡೆಯನಾಗಿದ್ದನು. ಅಲೆಗ್ಸಾಂಡರನ ಮರಣಾ ನಂತರ ಹಿಂದೆ ಚಂದ್ರಗುಪ್ತನು ಗ್ರೀಕರಿಂದ ವಶಪಡಿಸಿಕೊಂಡಿದ್ದ ಸಿಂಧೂನದಿಯ ಪೂರ್ವಭಾಗಕ್ಕಿದ್ದ ಪ್ರದೇಶಗಳನ್ನು ಅವನು ಪುನಃ ವಶಪಡಿಸಿಕೊಳ್ಳಲು ಪ್ರಯತ್ನಿಸಿದಾಗ ಚಂದ್ರಗುಪ್ತಮೌರ್ಯನು ಅವನನ್ನು ಸಂಪೂರ್ಣವಾಗಿ ಸೋಲಿಸಿದನು. ಇದರಿಂದ ಸೆಲ್ಯೂಕಸ್ಸನ ಆಸೆ ಆಕಾಂಕ್ಷೆಗಳು ಭಗ್ನವಾದುದಲ್ಲದೆ ತನ್ನ ಸಾಮ್ರಾಜ್ಯದ ಒಂದು ಭಾಗವನ್ನೂ ಕಳೆದುಕೊಂಡನು. ಯುದ್ಧದಲ್ಲಿ ಸೋತ ಸೆಲ್ಯೂಕಸ್ಸನು ಶಾಂತಿ ಒಪ್ಪಂದ ಮಾಡಿಕೊಂಡನು. ಈ ಒಪ್ಪಂದದ ಪ್ರಕಾರ ಸೆಲ್ಯೂಕಸ್ಸನು ಅರಿಯ (ಹೀರತ್) ಅರ್ಕೋಸಿಯ (ಕಾಂದಹಾರ್) ಗೆಡ್ರೋಸಿಯ (ಬಲೂಚಿಸ್ಥಾನ) ಮತ್ತು ಪರೋನಿಸಪ್ಪ (ಕಾಬೂಲ್) ಪ್ರದೇಶಗಳನ್ನು ಚಂದ್ರಗುಪ್ತನಿಗೆ ಬಿಟ್ಟುಕೊಟ್ಟನು. ಇದಕ್ಕೆ ಪ್ರತಿಯಾಗಿ ಚಂದ್ರಗುಪ್ತನು ಮೈತ್ರಿಯ ಸಂಕೇತವಾಗಿ ಸೆಲ್ಯೂಕಸ್ಸನಿಗೆ 500 ಆನೆಗಳನ್ನು ಕೊಟ್ಟನು. ಇದಲ್ಲದೆ ಸೆಲ್ಯೂಕಸ್ಸನು ಮೌರ್ಯ ಚಕ್ರವರ್ತಿಯೊಂದಿಗೆ ವೈವಾಹಿಕ ಸಂಬಂಧವನ್ನು ಬಯಸಿ ತನ್ನ ಮಗಳನ್ನು ಚಂದ್ರಗುಪ್ತ ಮೌರ್ಯನಿಗೆ ಕೊಟ್ಟು ವಿವಾಹ ಮಾಡಿದನು. ಮೇಲಾಗಿ ಭಾರತ ಮತ್ತು ಸಿರಿಯಾ ರಾಜ್ಯಗಳೊಂದಿಗೆ ಹೆಚ್ಚಿನ ರಾಜಕೀಯ ಸಂಬಂಧಗಳನ್ನು ಏರ್ಪಡಿಸಲು ಮೆಗಾಸ್ತನೀಸ್ ಎಂಬ ತನ್ನ ರಾಯಭಾರಿಯನ್ನು ಚಂದ್ರಗುಪ್ತನ ಆಸ್ಥಾನಕ್ಕೆ ಕಳುಹಿಸಿಕೊಟ್ಟನು. ಮೆಗಾಸ್ಥನೀಸನು ಸುಮಾರು ಆರುವರ್ಷಗಳ ಕಾಲ ರಾಜಧಾನಿ ಪಾಟಲೀಪುತ್ರದಲ್ಲಿದ್ದನು ಅವನು ಭಾರತದಲ್ಲಿ ತಾನು ಕಣ್ಣಾರೆ ನೋಡಿ ಕಿವಿಯಾರೆ ಕೇಳಿದ ಹಲವಾರು ಸಂಗತಿಗಳನ್ನು ತನ್ನ ಕೃತಿ 'ಇಂಡಿಕಾ'ದಲ್ಲಿ ಸ್ವಾರಸ್ಯಕರವಾಗಿ ನಿರೂಪಿಸಿದ್ದಾನೆ.

## ಚಂದ್ರಗುಪ್ತ ಮೌರ್ಯನ ಸಾಮ್ರಾಜ್ಯ

ಚಂದ್ರಗುಪ್ತಮೌರ್ಯನ ಸಾಮ್ರಾಜ್ಯವು ಬಹಳ ವಿಶಾಲವಾಗಿದ್ದಿತೆಂದು ಪ್ಲೂಟಾರ್ಕ್ ತಿಳಿಸುತ್ತಾನೆ. ಇವನ ಕಾಲದಲ್ಲಿ ಮೌರ್ಯ ಸಾಮ್ರಾಜ್ಯವು ದಕ್ಷಿಣದಲ್ಲಿ ಇಂದಿನ ಕರ್ಣಾಟಕ ರಾಜ್ಯದ ಉತ್ತರಭಾಗವನ್ನೊಳಗೊಂಡಿದ್ದಿತ್ತೆಂದು ಶಾಸನಗಳಿಂದ ತಿಳಿದುಬರುತ್ತದೆ. ಅಂತೆಯೆ ಪಶ್ಚಿಮದಲ್ಲಿ ಅವನ ಸಾಮ್ರಾಜ್ಯವು ಸೌರಾಷ್ಟ್ರದವರೆಗೂ ವಿಸ್ತರಿಸಿದ್ದಿತು. ಚಂದ್ರಗುಪ್ತನ ನಂತರ ಸಿಂಹಾಸನವನ್ನೇರಿದ ಅವನ ಮಗ ಬಿಂದುಸಾರನು ಸಾಮ್ರಾಜ್ಯ ವಿಸ್ತರಣೆಗಾಗಿ ಯಾವುದೇ ದಂಡಯಾತ್ರೆಯನ್ನು ಕೈಗೊಂಡಂತೆ ಕಂಡುಬರುವುದಿಲ್ಲವಾದ್ದರಿಂದಲೂ ಮತ್ತು ಅಶೋಕನ ಶಾಸನಗಳು ಕಳಿಂಗದ ಮೇಲಿನ ಅವನ ದಂಡಯಾತ್ರೆಯೊಂದನ್ನು ಬಿಟ್ಟರೆ ಬೇರೆ ಯಾವ ಯುದ್ಧಗಳನ್ನೂ ಪ್ರಸ್ತಾಪಿಸದೆ ಇರುವುದರಿಂದಲೂ ಅಶೋಕನ ಕಾಲದಲ್ಲಿನ ಮೌರ್ಯ ಸಾಮ್ರಾಜ್ಯದ ಬಹುಭಾಗವು ಚಂದ್ರಗುಪ್ತ ಮೌರ್ಯನಿಂದಲೇ ನಿರ್ಮಿತವಾಗಿದ್ದಿತೆಂದು ಅಭಿಪ್ರಾಯಪಡಬಹುದಾಗಿದೆ.

## ಚಂದ್ರಗುಪ್ತ ಮೌರ್ಯನ ವ್ಯಕ್ತಿತ್ವ

ಪ್ರಾಚೀನ ಭಾರತದ ಇತಿಹಾಸದಲ್ಲಿ ಚಂದ್ರಗುಪ್ತ ಮೌರ್ಯನು ಅತ್ಯಂತ ಶ್ರೇಷ್ಠ ಸ್ಥಾನವನ್ನು ಗಳಿಸಿಕೊಂಡಿದ್ದಾನೆ. ಚಂದ್ರಗುಪ್ತಮೌರ್ಯನು ಮಹಾದಿಗ್ವಿಜಯಿಯಾಗಿ ತನ್ನ ಜೀವನದ ಬಹುಪಾಲನ್ನು ಯುದ್ಧಗಳಲ್ಲಿಯೆ ಕಳೆದರೂ ಅವನು ತನ್ನ ಸಾಮ್ರಾಜ್ಯಕ್ಕೆ ದಕ್ಷ ಆಡಳಿತವನ್ನು ರೂಪಿಸಿದ್ದನು. ಮೆಗಾಸ್ತನೀಸನು

ಚಂದ್ರಗುಪ್ತ ಮೌರ್ಯನ ನ್ಯಾಯ ವಿಚಕ್ಷಣೆಯ ಬಗ್ಗೆ ತನ್ನ ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದಾನೆ. ನಂದರ ಅಧಿಕಾರವನ್ನು ನಿರ್ಮೂಲ ಮಾಡಿದುದು. ಗ್ರೀಕರನ್ನು ದೇಶದಿಂದ ಹೊರಗಟ್ಟಿದುದು ಮತ್ತು ಸೆಲ್ಯೂಕಸ್ಸನನ್ನು ಸೋಲಿಸಿದುದು ಅವನ ಮಿಲಿಟರಿ ಪ್ರತಿಭಾ ಸಾಮರ್ಥ್ಯಗಳಿಗೆ ಸಾಕ್ಷಿಯಾಗಿವೆ. ಚಂದ್ರಗುಪ್ತಮೌರ್ಯನು ತನ್ನ ವಿಶಾಲವಾದ ಸಾಮ್ರಾಜ್ಯಕ್ಕೆ ಒಳ್ಳೆಯ ಆಡಳಿತವನ್ನು ರೂಪಿಸಿ ಪ್ರಜೆಗಳ ಮೇಲ್ಮೆಗಾಗಿ ದುಡಿಯುವುದನ್ನೇ ತನ್ನ ಮುಖ್ಯ ಧ್ಯೇಯವನ್ನಾಗಿರಿಸಿ ಕೊಂಡಿದ್ದನು. ಅವನದು ಬಿಡುವಿಲ್ಲದ ದಿನಚರಿಯಾಗಿತ್ತು. ಇಷ್ಟಾದರೂ ಚಂದ್ರಗುಪ್ತ ಮೌರ್ಯನಿಗೆ ಮಾನಸಿಕ ಶಾಂತಿಯೆಂಬುದಿರಲಿಲ್ಲ. ಅವನಿಗೆ ತನ್ನ ಪ್ರಾಣದ ಬಗ್ಗೆ ಒಳಸಂಚುಗಳ ಬಗ್ಗೆ ಭೀತಿ ಸದಾ ಇದ್ದಿತು. ಅವನಿಗೆ ಸಿಂಹಾಸನವು ಹೆಚ್ಚಿನ ಹೊಣೆಗಾರಿಕೆಯ ಮತ್ತು ಜವಾಬ್ದಾರಿಯ ಸ್ಥಾನವಾಗಿತ್ತು. ಪ್ರಜಾಪೀಡಕರಾದ ನಂದವಂಶೀಯರಿಂದಲೂ ಹಾಗೂ ಪರಕೀಯರಾದ ಗ್ರೀಕರಿಂದಲೂ ಜನತೆಯನ್ನು ಮತ್ತು ದೇಶವನ್ನೂ ರಕ್ಷಿಸಲು ಅವನು ಪಟ್ಟ ಶ್ರಮ ಹಾಗೂ ಸೆಲ್ಯೂಕಸ್ ಮೊದಲಾದ ವಿದೇಶಿಯ ರಾಜರುಗಳೊಂದಿಗೆ ರಾಜತಾಂತ್ರಿಕ ಸಂಬಂಧಗಳನ್ನು ಏರ್ಪಡಿಸುವುದರಲ್ಲಿ ಅವನಿಗಿದ್ದ ಉತ್ಸಾಹ ಮೊದಲಾದವುಗಳು ಅವನನ್ನು ಸರ್ವಶ್ರೇಷ್ಠ ದೊರೆಗಳ ಪಂಕ್ತಿಗೆ ಸೇರಲು ಅರ್ಹನನ್ನಾಗಿ ಮಾಡಿವೆ. ಮೇಲಾಗಿ ಪ್ರಾಚೀನ ಭಾರತದಲ್ಲಿ ಪ್ರಪ್ರಥಮ ಬಾರಿಗೆ ವಿಶಾಲ ಸಾಮ್ರಾಜ್ಯವನ್ನು ಸ್ಥಾಪಿಸಿದ ಕೀರ್ತಿಯು ಅವನದಾಗಿದೆ.

ಚಂದ್ರಗುಪ್ತ ಮೌರ್ಯನು ಒಟ್ಟು 24 ವರ್ಷಗಳ ಕಾಲ ರಾಜ್ಯವಾಳಿದನು. ಅವನ ಕೊನೆಯ ದಿನಗಳ ಬಗ್ಗೆ ಹೆಚ್ಚಿನ ವಿಷಯಗಳು ತಿಳಿದುಬಂದಿಲ್ಲ. ಜೈನರ ಸಾಹಿತ್ಯದ ಪ್ರಕಾರ ಚಂದ್ರಗುಪ್ತ ಮೌರ್ಯನು ತನ್ನ ಆಳ್ವಿಕೆಯ ಕೊನೆಯ ಭಾಗದಲ್ಲಿ ಜೈನದೀಕ್ಷೆ ಪಡೆದು ಸಂನ್ಯಾಸಿಯಾಗಿ ಜೈನರ ಗುರು ಭದ್ರಬಾಹುವಿನೊಂದಿಗೆ ದಕ್ಷಿಣಕ್ಕೆ ಬಂದು ಇಂದಿನ ಕರ್ಣಾಟಕ ರಾಜ್ಯದ ಶ್ರವಣಬೆಳಗೊಳದಲ್ಲಿ ಸುಮಾರು ಹನ್ನೆರಡು ವರ್ಷಗಳ ಕಾಲ ಬದುಕಿದ್ದು ಕೊನೆಗೆ ಸಲ್ಲೇಖನ ವ್ರತದಿಂದ ಕೊನೆಯುಸಿರೆಳೆದನೆಂದು ತಿಳಿದು ಬರುತ್ತದೆ. ಅವನು ವ್ರತವನ್ನು ಆಚರಿಸಿದ ಸ್ಥಳವು ಇಂದೂ ಕೂಡ ಚಂದ್ರಗಿರಿ ಎಂಬ ಹೆಸರಿನಿಂದ ಕರೆಯಲ್ಪಡುತ್ತಿದೆ. ಅಲ್ಲದೆ ಚಂದ್ರಗಿರಿ ಬೆಟ್ಟದ ಮೇಲಿರುವ ಬಸದಿಯನ್ನೂ ಅವನೇ ಕಟ್ಟಿಸಿದ್ದನೆಂದು ಹೇಳಲಾಗಿದೆ. ಆದರೆ ಚಂದ್ರಗುಪ್ತಮೌರ್ಯನು ಜೈನ ಧರ್ಮಾವಲಂಭಿಯಾಗಿದ್ದನೆಂಬ ಅಭಿಪ್ರಾಯವನ್ನು ಗ್ರೀಕರ ಆಧಾರಗಳು ಪುರಸ್ಕರಿಸುವುದಿಲ್ಲ.

**ಬಂದುಸಾರ ಕ್ರಿ.ಪೂ. (300-273)**

ಚಂದ್ರಗುಪ್ತ ಮೌರ್ಯನ ಮರಣಾನಂತರ ಅವನ ಮಗನಾದ ಬಿಂದುಸಾರನು ಪಟ್ಟಕ್ಕೆ ಬಂದನು. ಇವನಿಗೆ ಅಮಿತ್ರಘಾಟ (ಶತ್ರುಗಳನ್ನು ಸಂಹಾರ ಮಾಡಿದವನು) ಎಂಬ ಬಿರುದು ಇದ್ದಿತಾದರೂ ಇವನು ಮಾಡಿದ ಯುದ್ಧಗಳ ಬಗ್ಗೆ ಹೆಚ್ಚಿನ ವಿಷಯಗಳೇನೂ ತಿಳಿದುಬಂದಿಲ್ಲ. ಚಾಣಕ್ಯನು ಕೆಲವು ವರ್ಷಗಳ ಕಾಲ ಇವನ ಮಂತ್ರಿಯೂ ಆಗಿ ಮುಂದುವರಿದಿದ್ದನು. ಬಿಂದುಸಾರನು ದಖನ್ ಪ್ರದೇಶವನ್ನು ಗೆದ್ದಿದ್ದನೆಂದು ಕೆಲವು ಇತಿಹಾಸಕಾರರು ಅಭಿಪ್ರಾಯ ವ್ಯಕ್ತಪಡಿಸಿರುವರು. ಆದರೆ ತಾರಾನಾಥ್ ಎಂಬ ಇತಿಹಾಸಕಾರರು ಅವನು ದಖನ್ನಿನಲ್ಲಿ ಸಂಭವಿಸಿದ್ದ ದಂಗೆಯನ್ನು

ಅಡಗಿಸಿದ್ದನೇ ಹೊರತು ಅದನ್ನು ಗೆದ್ದಿರಲಿಲ್ಲವೆಂದು ಹೇಳುತ್ತಾರೆ. ಬಿಂದುಸಾರನ ಆಳ್ವಿಕೆಯ ಕಾಲದಲ್ಲಿ ಸಂಭವಿಸಿದ ಮತ್ತೊಂದು ಪ್ರಮುಖ ಘಟನೆಯೆಂದರೆ ತಕ್ಷಶಿಲೆ ಪ್ರಾಂತ್ಯದ ಪ್ರಜೆಗಳು ದಂಗೆಯೆದ್ದುದಾಗಿತ್ತು. ಈ ದಂಗೆಯು ಅಲ್ಲಿನ ಆಡಳಿತಾಧಿಕಾರಿಗಳ ಕ್ರೂರ ನೀತಿಗಳ ವಿರುದ್ಧವಾಗಿತ್ತು. ಬಿಂದುಸಾರನು ಈ ದಂಗೆಯನ್ನು ಅಡಗಿಸಲು ಉಜ್ಜೈನಿಯಲ್ಲಿ ಪ್ರಾಂತ್ಯಾಧಿಕಾರಿಯಾಗಿದ್ದ ತನ್ನ ಮಗ ಅಶೋಕನನ್ನು ಕಳುಹಿಸಿದ್ದನು. ಅಶೋಕನು ತಕ್ಷಶಿಲೆಯನ್ನು ತಲುಪಿದಾಗ ಅಲ್ಲಿನ ಪ್ರಜೆಗಳು ಅಧಿಕಾರಿಗಳ ವರ್ತನೆಯ ಬಗ್ಗೆ ದೂರುಗಳನ್ನು ಹೇಳಿದರು. ಅಶೋಕನು ಆ ಅಧಿಕಾರಿಗಳ ವಿರುದ್ಧ ಕ್ರಮಗಳನ್ನು ಕೈಗೊಂಡು ಅಲ್ಲಿ ಶಾಂತಿವಾತಾವರಣವನ್ನು ಏರ್ಪಡಿಸಿದನು. ಬಿಂದುಸಾರನ ದಂಡಯಾತ್ರೆಗಳ ಬಗ್ಗೆ ಹೆಚ್ಚಿನ ಮಾಹಿತಿಗಳು ದೊರೆತಿಲ್ಲವಾದ್ದರಿಂದ ಅವನ ವಿಜಯಗಳ ಬಗ್ಗೆ ಏನನ್ನೂ ಸ್ಪಷ್ಟವಾಗಿ ಹೇಳಲು ಸಾಧ್ಯವಿಲ್ಲ. ಆದರೆ ಅವನು ತನ್ನ ತಂದೆಯು ನಿರ್ಮಿಸಿದ್ದ ಸಾಮ್ರಾಜ್ಯದ ಯಾವ ಭಾಗವೂ ಕೈಬಿಟ್ಟು ಹೋಗದಂತೆ ಎಚ್ಚರಿಕೆ ವಹಿಸಿದ್ದನು. ಬಿಂದುಸಾರನ ವಿದೇಶಾಂಗ ನೀತಿಯು ಗ್ರೀಕರೊಂದಿಗೆ ಸ್ನೇಹಸೌಹಾರ್ದತೆಗಳನ್ನು ವೃದ್ಧಿಸುವ ಉದ್ದೇಶದಿಂದ ಕೂಡಿದ್ದಿತು. ಮೆಗಾಸ್ತನೀಸನ ನಂತರ ಗ್ರೀಕರ ರಾಯಭಾರಿಯಾಗಿ ಡೈಮಾಕಸ್ ಎಂಬವನು ಅವನ ಆಸ್ಥಾನಕ್ಕೆ ಬಂದಿದ್ದನು. ಪ್ರಚಲಿತವಿರುವ ಒಂದು ದಂತ ಕಥೆಯ ಪ್ರಕಾರ ಬಿಂದುಸಾರನು ಸಿರಿಯಾದ ದೊರೆ ಸೆಲ್ಯೂಕಸ್ಸನ ಮಗನಾದ ಒಂದನೇ ಆಂಟಿಯೋ ಕಸ್ಸನಿಗೆ ಮಾದಕ ಪಾನೀಯವನ್ನೂ ಮತ್ತು ಅಂಜೂರದ ಹಣ್ಣುಗಳನ್ನೂ ಹಾಗೂ ಒಬ್ಬ ಗ್ರೀಕ್ ತತ್ವಶಾಸ್ತ್ರಜ್ಞನನ್ನು ಕೊಂಡು ಕಳುಹಿಸುವಂತೆ ಪತ್ರ ಬರೆದಿದ್ದನೆಂದೂ ಆಂಟಿಯೋಕಸ್ಸನು ಮೊದಲಿನ ಎರಡು ಪದಾರ್ಥಗಳನ್ನು ಕಳುಹಿಸಿ ಗ್ರೀಕ್ ತತ್ವ ಶಾಸ್ತ್ರಜ್ಞರನ್ನು ಕೊಂಡು ಮಾರಾಟ ಮಾಡಲು ಗ್ರೀಕರ ಕಾನೂನುಗಳು ಅನುಮತಿ ನೀಡುವುದಿಲ್ಲವೆಂದು ತಿಳಿಸುದುದಾಗಿ ಹೇಳಲಾಗಿದೆ. ಬಿಂದುಸಾರನಿಗೆ ಮಾದಕ ಪಾನೀಯಗಳಲ್ಲಿದ್ದ ಆಸಕ್ತಿಯನ್ನು ನೋಡಿದರೆ ಅವನೊಬ್ಬ ಸುಖಲೋಲುಪ್ತ ದೊರೆಯಾಗಿದ್ದನೆಂದು ಊಹಿಸಬಹುದಾಗಿದೆ. ಈಜಿಪ್ಟಿನ ದೊರೆ ಎರಡನೆ ಟಾಲೆಮಿಯು ಬಿಂದುಸಾರನೊಂದಿಗೆ ರಾಜತಾಂತ್ರಿಕ ಸಂಬಂಧಗಳನ್ನು ಏರ್ಪಡಿಸಿ ಡಯೋನೀಷಿಯನ್ ಎಂಬುವನನ್ನು ತನ್ನ ರಾಯಭಾರಿಯನ್ನಾಗಿ ಪಾಟಲೀಪುತ್ರಕ್ಕೆ ಕಳುಹಿಸಿದ್ದನು. ಬಿಂದುಸಾರನು ಕ್ರಿ.ಪೂ. 273ರಲ್ಲಿ ಕಾಲವಾದನು.

**ಅಶೋಕ (ಕ್ರಿ.ಪೂ. 273-236)**

ಬಿಂದುಸಾರನ ಮರಣಾ ನಂತರ ಅವನ ವಿಖ್ಯಾತ ಮಗನಾದ ಅಶೋಕನು ಮೌರ್ಯ ಸಾಮ್ರಾಜ್ಯದ ಚಕ್ರವರ್ತಿಯಾದನು. ಅಶೋಕನ ಸಿಂಹಾಸನಾರೋಹಣದ ಬಗ್ಗೆ ಹಲವಾರು ದಂತ ಕಥೆಗಳು ಹೇಳಲ್ಪಟ್ಟಿವೆ. ದಿವ್ಯಾವದಾನ ಮತ್ತು ಸಿಲೋನಿನ ವೃತ್ತಾಂತಗಳ ಪ್ರಕಾರ ಸಿಂಹಾಸನಕ್ಕಾಗಿ ಸೋದರರಲ್ಲಿ ಕಲಹವು ಏರ್ಪಟ್ಟಿದ್ದಿತೆಂದು ತಿಳಿದುಬರುತ್ತದೆ. ಸಿಲೋನಿನ ದೀಪವಂಶ ಮತ್ತು ಮಹಾವಂಶ ಗ್ರಂಥಗಳು ಅಶೋಕನು ಬೌದ್ಧಮತಾವಲಂಬಿಯಾಗುವುದಕ್ಕೆ ಮುಂಚೆ ಕ್ರೂರಿಯೂ, ರಕ್ತಪಿಪಾಸಿಯೂ ಆಗಿದ್ದನೆಂದೂ ಮತ್ತು ಅವನು ಸಿಂಹಾಸನಕ್ಕಾಗಿ ನಡೆದ ಕಲಹದಲ್ಲಿ ತನ್ನ ತೊಂಬತ್ತೊಂಬತ್ತು ಮಂದಿ ಸೋದರರನ್ನು ಕೊಂದು ರಕ್ತದ ಕಾಲುವೆಯನ್ನೇ ಹರಿಸಿ ಸಿಂಹಾಸನವನ್ನೇರಿದನೆಂದು ಹೇಳುತ್ತವೆ. ಅಶೋಕನ ಈ ಪ್ರಯತ್ನದಲ್ಲಿ ರಾಧಾಗುಪ್ತ

ಎಂಬುವನು ಅವನಿಗೆ ಸಹಾಯ ಮಾಡಿದನೆಂದು ಅವನ ಈ ಸಹಾಯಕ್ಕೆ ಪ್ರತಿಯಾಗಿ ಅಶೋಕನು ಅವನನ್ನು ತನ್ನ ಮುಖ್ಯ ಮಂತ್ರಿಯನ್ನಾಗಿ ನೇಮಿಸಿಕೊಂಡಿದ್ದನೆಂದು ಹೇಳಲಾಗಿದೆ. ಆದರೆ ಅಶೋಕನು ಕ್ರೂರಿಯಾಗಿದ್ದನೆಂಬುದರ ಬಗ್ಗೆ ಯಾಗಲೀ ಅಥವ ತನ್ನ ಸೋದರರ ಬಗ್ಗೆ ನಿರ್ದಯಿಯಾಗಿ ವರ್ತಿಸಿದುದರ ಬಗ್ಗೆಯಾಗಲೀ ಅವನ ಶಾಸನಗಳಲ್ಲಿ ಎಲ್ಲಿಯೂ ಪ್ರಸ್ತಾಪಿಸಿರುವುದಿಲ್ಲ. ಅಶೋಕನು ತನ್ನ ಸೋದರರ ಬಗ್ಗೆ ಪ್ರೀತಿ ವಾತ್ಸಲ್ಯಗಳಿಂದ ನಡೆದುಕೊಂಡಿದ್ದುದಾಗಿ ಶಾಸನಗಳು ತಿಳಿಸುತ್ತವೆ. ಆದ್ದರಿಂದ ಅಶೋಕನನ್ನು ಬೌದ್ಧರ ಕೃತಿಗಳು ಹೇಳುವಂತೆ ಚಂಡಾಶೋಕನೆಂದು ಪರಿಗಣಿಸುವುದು ನಿಜಾಂಶಕ್ಕೆ ದೂರವಾದ ಸಂಗತಿಯೆಂದು ಡಾ.ಆರ್.ಸಿ.ಮಜುಮ್‌ದಾರ್ ಅಭಿಪ್ರಾಯಪಡುತ್ತಾರೆ. ಅಶೋಕನ ಸಿಂಹಾಸನಾರೋಹಣದೊಂದಿಗೆ ಅವನ ಕಿರೀಟಧಾರಣೆಯ ಸಮಾರಂಭವು ನಡೆಯಲಿಲ್ಲ. ಅದು ನಾಲ್ಕು ವರ್ಷಗಳ ನಂತರದಲ್ಲಿ ಏರ್ಪಟ್ಟು ಅಶೋಕನು ಕ್ರಿ.ಪೂ. 269ರಲ್ಲಿ ಪಟ್ಟಾಭಿ ಷಕ್ತನಾದನು.

**ಕಳಿಂಗ ಯುದ್ಧ (ಕ್ರಿ. ಪೂ. 261)**

ಅಶೋಕನು ಚಕ್ರವರ್ತಿಯಾದ ಮೇಲೆ ತನ್ನ ಆಳ್ವಿಕೆಯ ಹದಿಮೂರನೆ ವರ್ಷದಲ್ಲಿ ಕಳಿಂಗ ರಾಜ್ಯದ ಮೇಲೆ ಮಾಡಿದ ಯುದ್ಧವೊಂದನ್ನು ಬಿಟ್ಟರೆ ಅವನು ಬೇರೆ ಯಾವುದೇ ಯುದ್ಧಗಳನ್ನೂ ಮಾಡಿದಂತೆ ಕಂಡುಬರುವುದಿಲ್ಲ ಮತ್ತು ಅದಕ್ಕೆ ಯಾವುದೇ ರೀತಿಯ ಐತಿಹಾಸಿಕ ದಾಖಲೆಗಳೂ ದೊರೆತಿಲ್ಲ. ಹಾಗೆಯೇ ಅವನು ಕಳಿಂಗದ ಮೇಲೆ ಯುದ್ಧವನ್ನು ಸಾರುವುದಕ್ಕೆ ಇದ್ದ ಕಾರಣಗಳಾದರೂ ಏನು ಎಂಬುದು ತಿಳಿದು ಬಂದಿಲ್ಲ. ಅಶೋಕನು ಬಹುಶಃ ತನ್ನ ತಂದೆ ಮತ್ತು ತಾತನಂತೆ ಸಾಮ್ರಾಜ್ಯ ವಿಸ್ತರಣೆಯಲ್ಲಿ ಆಸಕ್ತಿಯುಳ್ಳವನಾಗಿದ್ದು ಆದುವರೆಗೂ ಮೌರ್ಯಸಾಮ್ರಾಜ್ಯಕ್ಕೆ ಸೇರದೆ ಇದ್ದ ಕಳಿಂಗ ರಾಜ್ಯವನ್ನು ಗೆದ್ದು ವಶಪಡಿಸಿಕೊಳ್ಳುಲು ಆ ರಾಜ್ಯದ ವಿರುದ್ಧ ದಂಡೆತ್ತಿ ಹೋಗಿರ ಬಹುದೆಂದು ಹೇಳಲಾಗಿದೆ. ಕಳಿಂಗ ಯುದ್ಧವು ಅತ್ಯಂತ ರಕ್ತಪಾತಯುತವಾದ ಯುದ್ಧವಾಗಿದ್ದು ಲಕ್ಷಾಂತರ ಜನರು ಸಾವು ನೋವು ಅನುಭವಿಸಬೇಕಾಯಿತು. ನಿರಪರಾಧಿಗಳಾದ ಲಕ್ಷಾಂತರ ಜನರನ್ನು ಸಾವು ನೋವುಗಳಿಗೀಡುಮಾಡಿದ ಈ ಯುದ್ಧದ ದೃಶ್ಯದಿಂದ ಅಶೋಕನ ಅಂತಃಕರಣವು ಕರಗಿತು. ಅಶೋಕನು ತಾನುಗಳಿಸಿದ ವಿಜಯದಿಂದ ಸಂತೋಷಪಡುವುದಕ್ಕೆ ಬದಲಾಗಿ ಬಹಳ ವ್ಯಥೆಪಟ್ಟನು. ಕಳಿಂಗ ಯುದ್ಧವು ಅಶೋಕನ ಜೀವನದಲ್ಲಿ ಮೊದಲನೆಯ ಮತ್ತು ಕೊನೆಯ ಯುದ್ಧವಾಯಿತು. ತಾನು ಇನ್ನು ಮುಂದೆ ಕತ್ತಿ ಹಿಡಿದು ಯುದ್ಧ ಮಾಡುವುದಿಲ್ಲವೆಂದು ಶಪಥಮಾಡಿ ಕತ್ತಿಯನ್ನು ಒರೆಯೊಳಗಿರಿಸಿದನು. ತನ್ನ ಉಳಿದ ಜೀವಮಾನವನ್ನು ಪ್ರಜೆಗಳ ಕಲ್ಯಾಣಕ್ಕಾಗಿ ದುಡಿಯಲು ಮೀಸಲಿಟ್ಟು ಅದಕ್ಕಾಗಿ ಕಾರ್ಯತತ್ಪರನಾದನು. ಇದುವರೆವಿಗೂ ಯುದ್ಧವನ್ನು ಸಾರುತ್ತಿದ್ದ ರಣಕಹಳೆಗಳು ಇನ್ನು ಮುಂದೆ ಧರ್ಮವನ್ನು ಸಾರುವ ಕಹಳೆಗಳಾಗಿ ಮಾರ್ಪಟ್ಟವು. ಕಳಿಂಗ ಯುದ್ಧವು ಮಗಧ ರಾಜ್ಯದ ಏಕೆ? ಭಾರತದ ಹಾಗೂ ಇಡೀ ವಿಶ್ವದ ಇತಿಹಾಸದಲ್ಲೇ ಒಂದು ಬಹುಮುಖ್ಯ ಘಟನೆಯಾಗಿ ಮಾರ್ಪಟ್ಟಿತು. ಯುದ್ಧದಲ್ಲಿ ವಿಜಯಗಳಿಸಿಯೂ ಇನ್ನು ಮುಂದೆ ಯುದ್ಧ ಮಾಡುವುದನ್ನೇ ಸಂಪೂರ್ಣವಾಗಿ ವರ್ಜಿಸಿದ ದೊರೆ ಅಶೋಕನನ್ನು ಬಿಟ್ಟರೆ ಇಡೀ ವಿಶ್ವದಲ್ಲೇ ಯಾರೂ ಕಂಡುಬರುವುದಿಲ್ಲ. ಅಶೋಕನು ತನ್ನ ಮಾನಸಿಕ ವೇದನೆಯನ್ನು ತನ್ನ ಹದಿಮೂರನೆ ಶಿಲಾಶಾಸನದಲ್ಲಿ ಹೃದಯವು ಕರಗುವಂತೆ

ತೋಡಿಕೊಂಡಿದ್ದಾನೆ. ಕಳಿಂಗ ಯುದ್ಧವು ಭಾರತದ ಇತಿಹಸಾದಲ್ಲಿ ಶಾಂತಿ, ಸಹಿಷ್ಣುತೆ, ಸಾಮಾಜಿಕ ಪ್ರಗತಿ, ಮತ್ತು ಧರ್ಮ ಪ್ರಸಾರದ ಒಂದು ಹೊಸ ಯುಗವನ್ನೇ ಆರಂಭಿಸಿತು. ಅಶೋಕನು ಶಾಂತಿ, ಅಹಿಂಸೆ ಕರುಣೆ ಮತ್ತು ದಯೆ ಮೊದಲಾದ ಸದ್ಗುಣಗಳಿಂದ ಕೂಡಿದ್ದ ಬೌದ್ಧ ಮತದ ತತ್ವಗಳಿಗೆ ಆಸರ್ಷಿತನಾಗಿ ಬೌದ್ಧ ಮತಾವಲಂಬಿಯಾದನು. ಯುದ್ಧವು ಮುಗಿದ ಕೆಲವು ದಿವಸಗಳಲ್ಲಿಯೆ ಉಪಗುಪ್ತ ಎಂಬವನು ಅಶೋಕನನ್ನು ಬೌದ್ಧ ಮತಕ್ಕೆ ಮತಾಂತರಗೊಳಿಸಿದನೆಂದು ಬೌದ್ಧರ ಆಧಾರಗಳು ತಿಳಿಸುತ್ತವೆ. ಅಶೋಕನು ತನ್ನ ಉಳಿದ ಕಾಲವನ್ನು ತನ್ನ ಪ್ರಜೆಗಳ ಆರ್ಥಿಕ, ಧಾರ್ಮಿಕ ಮತ್ತು ನೈತಿಕ ಒಳಿತಿಗಾಗಿ ದುಡಿಯುವುದಕ್ಕೂ ಮತ್ತು ಬೌದ್ಧಮತದ ಪ್ರಸಾರಕ್ಕೂ ಮುಡಿಪಾಗಿಟ್ಟನು.

**ಅಶೋಕ ಮತ್ತು ಬೌದ್ಧಮತ ಪ್ರಸಾರ**

ಕಳಿಂಗ ಯುದ್ಧದ ನಂತರ ಅಶೋಕನು ಬೌದ್ಧಮತಕ್ಕೆ ಮತಾಂತರಗೊಂಡಿದುದೇ ಅಲ್ಲದೆ ಭಿಕ್ಷುವಾಗಿ ಬೌದ್ಧ ಸಂಘದ ಸದಸ್ಯನೂ ಆದನೆಂದು ಕೆಲವು ಮೂಲಗಳು ತಿಳಿಸುತ್ತವೆ. ಆದರೆ ಈ ಅಭಿಪ್ರಾಯದ ಬಗ್ಗೆ ಸಾಕಷ್ಟು ಭಿನ್ನಾಭಿಪ್ರಾಯಗಳು ವಿಧ್ವಾಂಸರಲ್ಲಿವೆ. ಅಶೋಕನಿಗೆ ಬೌದ್ಧ ಮತದ ತಾತ್ವಿಕ ವಿಷಯಗಳಿಗಿಂತಲೂ ಹೆಚ್ಚಾಗಿ ಅದು ಪ್ರತಿಪಾದಿಸಿದ ನೈತಿಕ ನಿಯಮಗಳು ಹೆಚ್ಚಾಗಿ ಹಿಡಿಸಿದ್ದುವೆಂದೂ ಅವನ ದೃಷ್ಟಿಯಲ್ಲಿ ಬೌದ್ಧ ಮತವು ಇಹಲೋಕದಲ್ಲಿ ಶಾಂತಿ ಸೌಹಾರ್ದತೆಗಳಿಗೂ ಪರಲೋಕದಲ್ಲಿ ಸ್ಥಿರವಾದ ಮೋಕ್ಷಕ್ಕೂ ದಾರಿ ತೋರಿಸಿದ ಧರ್ಮವಾಗಿದ್ದಿತ್ತೆಂದು ಮತ್ತು ಅವನ ದಾರ್ಶನಿಕ ಅಭಿಪ್ರಾಯಗಳು ಪೂರ್ಣವಾಗಿ ಬೌದ್ಧ ಧರ್ಮದವುಗಳೇ ಆಗಿರದ ಬಹಳ ಕಾಲದಿಂದಲೂ ಹಿಂದೂಗಳು ಅನುಸರಿಸಿಕೊಂಡು ಬಂದಿದ್ದ ಹಿಂದೂ ದಾರ್ಶನಿಕ ತತ್ವಗಳೇ ಆಗಿದ್ದುವೆಂದು ಡಾ|| ಎಲ್.ಭಾಷ್ಯಂ ಅಭಿಪ್ರಾಯ ಪಟ್ಟಿರುವರು. ಅಶೋಕನು ಬೌದ್ಧ ಮತ ಪ್ರಸಾರದಲ್ಲಿ ಅತ್ಯಂತ ಹೆಚ್ಚಿನ ಉತ್ಸಾಹವನ್ನು ಹೊಂದಿದ್ದು ಬೌದ್ಧ ಮತದ ಪ್ರಸಾರಕ್ಕಾಗಿ ಅನೇಕ ಕ್ರಮಗಳನ್ನು ಕೈಗೊಂಡನು. ಅವನು ಬೌದ್ಧ ಮತದ ಶ್ರೇಷ್ಠ ತತ್ವಗಳನ್ನು ದೇಶವಾದ್ಯಂತ ಪ್ರಸಾರ ಮಾಡಿದನು ಮತ್ತು ತಾನೇ ಅವುಗಳನ್ನು ತನ್ನ ಜೀವನದಲ್ಲಿ ಅನುಸರಿಸಿ ಜನರಿಗೆ ಮಾರ್ಗದರ್ಶನ ಮಾಡಿದನು. ಬೌದ್ಧ ಮತಕ್ಕೆ ಸಂಬಂಧಿಸಿದ ಪವಿತ್ರ ಸ್ಥಳಗಳಿಗೆಲ್ಲಾ ಭೇಟಿಕೊಟ್ಟು ತನ್ನ ಗೌರವ ಸಲ್ಲಿಸಿದ್ದಲ್ಲದೆ ಆ ಸ್ಥಳಗಳಲ್ಲಿ ಧಾರ್ಮಿಕ ಗೋಷ್ಠಿಗಳನ್ನು, ಏರ್ಪಡಿಸಿ ಜನಸಾಮಾನ್ಯರಿಗೂ ಬೌದ್ಧಮತದ ತತ್ವಗಳ ಪರಿಚಯ ಮಾಡಿಕೊಟ್ಟನು. ಬುದ್ಧನ ಜೀವನಕ್ಕೆ ಸಂಬಂಧಿಸಿದ ಪವಿತ್ರ ಸ್ಥಳಗಳಾದ ಲುಂಬಿನವನ, ಬೌದ್ಧಗಯಾ ಮತ್ತು ಸಾರನಾಥಗಳಿಗೆ ಭೇಟಿಕೊಟ್ಟನು. ಲುಂಬಿನ ವನದಲ್ಲಿ ತನ್ನ ಭೇಟಿಯ ಜ್ಞಾಪಕಾರ್ಥವಾಗಿ ಸ್ತೂಪವೊಂದನ್ನು ನಿರ್ಮಿಸಿದನು. ತಾನು ಅನುಸರಿಸಿದ ಮಾರ್ಗವನ್ನೇ ತನ್ನ ಅಧಿಕಾರಿಗಳೂ ಅನುಸರಿಸುವಂತೆ ಆದೇಶ ನೀಡಿದನು. ಧರ್ಮಪ್ರಸಾರಕ್ಕಾಗಿ ಧರ್ಮಮಹಾಮಾತ್ರರು ಎಂಬ ಪ್ರತ್ಯೇಕ ಅಧಿಕಾರಿಗಳನ್ನು ನೇಮಿಸಿದನು. ಈ ಅಧಿಕಾರಿಗಳು ಅಗಾಗ್ಗೆ ಪ್ರವಾಸ ಕೈಗೊಂಡು ಧರ್ಮದ ಮೇಲ್ವಿಚಾರಣೆಯನ್ನು ನೋಡಿಕೊಳ್ಳುತ್ತಿದ್ದರು. ಬೌದ್ಧಮತವನ್ನು ತನ್ನ ಸಾಮ್ರಾಜ್ಯದ ಅಧಿಕೃತ ಧರ್ಮವನ್ನಾಗಿ ಘೋಷಿಸಿದನು. ಈ ಕಾಲಕ್ಕಾಗಲೇ ಬೌದ್ಧಮತೀಯರಲ್ಲಿ ಧಾರ್ಮಿಕ ಭಿನ್ನಾಭಿಪ್ರಾಯಗಳು ತಲೆದೋರಿ ಒಡಕುಂಟಾಗಿದ್ದಿತು. ಅಶೋಕನು ಈ

ಭಿನ್ನಾಭಿಪ್ರಾಯಗಳನ್ನು ನಿವಾರಿಸಲು ಮೊಗ್ಗಲಿ ಪುತ್ತಟಿಸ್ಸ ಎಂಬವನ ಅಧ್ಯಕ್ಷತೆಯಲ್ಲಿ ಪಾಟಲೀಪುತ್ರದಲ್ಲಿ ಮೂರನೇ ಬೌದ್ಧ ಸಮ್ಮೇಳನವನ್ನು ಏರ್ಪಡಿಸಿದನು. ಬುದ್ಧನ ಉಪದೇಶಗಳನ್ನು ಸರಿಯಾಗಿ ಪಾಲಿಸದಿದ್ದ ಅನೇಕ ಭಿಕ್ಷುಗಳನ್ನು ಸಂಘದಿಂದ ಹೊರಹಾಕಲಾಯಿತು. ಬೌದ್ಧ ಮತ ಪ್ರಸಾರಕ್ಕಾಗಿ ಉನ್ನತ ಮಟ್ಟದಲ್ಲಿ ಕಾರ್ಯಕ್ರಮಗಳನ್ನು ಹಾಕಿಕೊಂಡನು. ದೇಶವಿದೇಶಗಳಲ್ಲಿ ಬೌದ್ಧ ಮತವನ್ನು ಪ್ರಸಾರ ಮಾಡಲು ನಿಷ್ಠಾವಂತ ಧರ್ಮಪ್ರಸಾರಕರನ್ನು ಕಳುಹಿಸಲು ವ್ಯವಸ್ಥೆ ಮಾಡಿದನು. ತನ್ನ ಮಗ ಮಹೇಂದ್ರ ಮತ್ತು ಮಗಳು ಸಂಘಮಿತ್ರೆಯನ್ನು ಬೌದ್ಧಮತ ಪ್ರಸಾರಕ್ಕಾಗಿ ಸಿಲೋನಿಗೆ ಕಳುಹಿಸಿದನು. ಬೌದ್ಧ ಮತ ಪ್ರಸಾರಕರು ಸಿಲೋನಿನಲ್ಲಿ ಅಲ್ಲದೆ, ಬರ್ಮ, ಪಶ್ಚಿಮ ಏಷ್ಯಾ, ಈಜಿಪ್ಟ್ ಮತ್ತು ಪೂರ್ವ ಯೂರೋಪಿನ ರಾಜ್ಯಗಳಿಗೂ ಭೇಟಿಕೊಟ್ಟು ಅಲ್ಲಿನ ಜನರಿಗೆ ಬೌದ್ಧ ಮತದ ಪರಿಚಯ ಕೊಟ್ಟರು. ಧರ್ಮ ವಿಜಯದ ಪ್ರತಿಪಾದಕನಾದ ಅಶೋಕನ ಧರ್ಮವನ್ನು ಸಿರಿಯಾದ ಎರಡನೆ ಅಂಟಿಯೋಕಸ್, ಈಜಿಪ್ಟಿನ ದೊರೆ ಎರಡನೆ ಟಾಲೆಮಿ, ಮ್ಯಾಸಿಡೋನಿಯಾದ ಅಂಟಿಗೋನಾಸ್ ಎಪಿರಸ್ಸಿನ ಅಲೆಗ್ಸಾಂಡರ್ ಮತ್ತು ಸಿರಿನೆಯ ಮಾಗರು ಮೊದಲಾದವರು ಹೃತ್ಪೂರ್ವಕವಾಗಿ ಸ್ವಾಗತಿಸಿದರು. ಅಶೋಕನ ಮತ್ತು ಬೌದ್ಧಮತ ಪ್ರಸಾರಕರ ಪ್ರಯತ್ನದಿಂದಾಗಿ ಬೌದ್ಧಮತವು ವಿದೇಶಗಳಲ್ಲಿ ಪ್ರಸಾರವಾದುದಲ್ಲದೆ ಅಲ್ಲಿ ನೆಲೆಯೂರಿ ನಿಂತಿತ್ತು. ಮೇಲಾಗಿ ತನ್ನ ಸಾಮ್ರಾಜ್ಯದ ವಿವಿಧ ಭಾಗಗಳಲ್ಲಿ ಬೌದ್ಧ ಮತದ ತತ್ವಗಳನ್ನು ಕಲ್ಲು ಕಂಭಗಳ ಮತ್ತು ಬಂಡೆಗಳ ಮೇಲೆ ಕೆತ್ತಿಸಿ ತನ್ನ ಪ್ರಜೆಗಳಿಗೆ ತಿಳಿಯಪಡಿಸಿದನು. ಬೌದ್ಧ ಭಿಕ್ಷುಗಳ ಅನುಕೂಲಕ್ಕಾಗಿ ಸಹಸ್ರಾರು ಸ್ತೂಪಗಳನ್ನೂ ಚೈತ್ಯಗಳನ್ನೂ ಮತ್ತು ವಿಹಾರಗಳನ್ನೂ ನಿರ್ಮಿಸಿದನು. ಹೀಗೆ ಅಸೋಕನು ತನ್ನ ಹಲವಾರು ಕ್ರಮಗಳಿಂದ ಬೌದ್ಧಮತವು ದೇಶವಿದೇಶಗಳಲ್ಲಿ ಹರಡಲು ಕಾರಣನಾದುದಲ್ಲದೆ ಅದಕ್ಕೆ ವಿಶ್ವಮಾನ್ಯತೆಯನ್ನೂ ದೊರೆಕಿಸಿಕೊಟ್ಟು ಅದು ವಿಶ್ವದ ಪ್ರಮುಖ ಧರ್ಮಗಳಲ್ಲೊಂದಾಗುವಂತೆ ಮಾಡಿದನು.

ಅಶೋಕನು ಬೌದ್ಧ ಮತಕ್ಕೆ ವಿಶೇಷ ಪ್ರೋತ್ಸಾಹ ತೋರಿಸಿದರೂ ಇತರ ಧರ್ಮಗಳ ಬಗ್ಗೆ ಅಸಹಿಷ್ಣುವಾಗಿರಲಿಲ್ಲ. ಅಶೋಕನು ಕೇವಲ ಆದರ್ಶವಾದಿಯಾಗಿರದೆ ಕಾರ್ಯತತ್ಪರನೂ ಆಗಿದ್ದನು. ಅವನು ತನ್ನ ಎಲ್ಲ ಕೆಲಸ ಕಾರ್ಯಗಳಲ್ಲೂ ಬೌದ್ಧ ಮತದ ಪ್ರಮುಖ ತತ್ವಗಳಾದ ಶಾಂತಿ ಮತ್ತು ಅಹಿಂಸಾತತ್ವಗಳನ್ನು ಅನುಸರಿಸಿದನು. ನುಡಿದಂತೆ ನಡೆದು ಎರಡನ್ನೂ ಸಮನ್ವಯವಾಗಿ ಆಡಳಿತದಲ್ಲಿ ಅನುಸರಿಸಿ ರಾಜ್ಯವಾಳಿದ ದೊರೆಗಳು ಅಶೋಕನನ್ನು ಬಿಟ್ಟರೆ ಪ್ರಪಂಚದ ಇತಿಹಾಸದಲ್ಲಿ ದೊರೆಯುವುದು ಅತಿವಿರಳ. ಅಶೋಕನು ಧಾರ್ಮಿಕ ವಿಷಯಗಳಲ್ಲಿ ಉದಾರ ಭಾವನೆ ಹೊಂದಿದ್ದನು. ಬ್ರಾಹ್ಮಣರನ್ನಾಗಲೀ, ಶ್ರಮಣರನ್ನಾಗಲೀ ಅವನು ಎಂದೂ ಅಗೌರವದಿಂದ ಕಾಣಲಿಲ್ಲ. ಇತರ ಧರ್ಮಗಳ ಅನುಯಾಯಿಗಳ ಬಗ್ಗೆ ಅವನು ಅಪಾರ ಗೌರವ ಹೊಂದಿದ್ದನು. ಜೈನರ ನಿಗ್ರಂಥರಿಗೂ ಆಜೀವಕರಿಗೂ ವಸತಿ ಸೌಕರ್ಯಗಳನ್ನು ಕಲ್ಪಿಸಿಕೊಟ್ಟಿದ್ದನು. ಒಟ್ಟಿನಲ್ಲಿ ಹೇಳುವುದಾದರೆ ಅಶೋಕನ ಧರ್ಮವು ಸದ್ಭಾವನೆ ಮತ್ತು ಸಹಿಷ್ಣುತೆಯಿಂದ ಕೂಡಿದ್ದ ನಿಜವಾದ ಮಾನವಧರ್ಮವಾಗಿದ್ದಿತು.

**ಅಶೋಕನ ಆಡಳಿತ**

ಅಶೋಕನ ರಾಜ್ಯಾಡಳಿತ ನೀತಿಯು ಬಹಳ ಉನ್ನತ ಮಟ್ಟದ ಧ್ಯೇಯೋದ್ದೇಶಗಳಿಂದ ಕೂಡಿದ್ದಿತು. ಅವನು ತನ್ನ ಪ್ರಜೆಗಳೆಲ್ಲರನ್ನೂ ತನ್ನ ಮಕ್ಕಳ ಸಮಾನವೆಂದು ಭಾವಿಸಿ ಅವರ ಬೌತಿಕ ನೈತಿಕ ಮೇಲ್ಮೆಗಾಗಿ ದುಡಿಯುವುದು ತನ್ನ ಪ್ರಥಮ ಕರ್ತವ್ಯವೆಂದು ತಿಳಿದಿದ್ದನು. ಅವನು ತನ್ನ ಪ್ರಜೆಗಳಿಗೆ ಸುಖಸಂತೋಷಗಳನ್ನು ಒದಗಿಸಿಕೊಡಲು ಸತತವಾಗಿ ಶ್ರಮಿಸಿದನು. ಅಶೋಕನು ಬೌದ್ಧ ಮತಾವಲಂಬಿಯಾದರೂ ರಾಜನಾಗಿ ತನ್ನ ಕರ್ತವ್ಯ ನಿರ್ವಹಣೆಯಲ್ಲಿ ಅದರ ತತ್ವಗಳು ಅಡ್ಡಬಂದಲ್ಲಿ ಅವುಗಳನ್ನು ಮಾರ್ಪಡಿಸಿಕೊಂಡು ಕಾರ್ಯೋನ್ಮುಖನಾಗುತ್ತಿದ್ದನು. ತನ್ನ ಪ್ರಜೆಗಳಿಗೇನಾದರೂ ಕಿರುಕುಳವುಂಟಾದಲ್ಲಿ ಅವರಿಗೆ ರಕ್ಷಣೆ ಕೊಡುವುದು ತನ್ನ ಕರ್ತವ್ಯವೆಂದು ತಿಳಿದಿದ್ದನು. ಅವನು ಆಡಳಿತದಲ್ಲಿ ಆಚರಣೆಗೆ ತಂದ ಅಹಿಂಸಾ ನೀತಿಯಿಂದ ಅವನನ್ನು ಒಬ್ಬ ನಿರಾಶವಾದಿಯೆಂದು ಭಾವಿಸುವುದು ಸರಿಯಲ್ಲ. ಅವನು ತನ್ನ ಪ್ರಜೆಗಳ ಮೇಲೆ ಆಕ್ರಮಣ ಮಾಡಿದ ಗುಡ್ಡಗಾಡಿನ ಜನಗಳ ವಿರುದ್ಧ ಕ್ರೂರ ಕ್ರಮಗಳನ್ನು ಅನುಸರಿಸಲು ಹಿಂಜರಿಯಲಿಲ್ಲ. ಸಾಮ್ರಾಜ್ಯದ ಶಾಂತಿಗೆ ಭಂಗವುಂಟುಮಾಡಿದವರ ವಿರುದ್ಧ ಉಗ್ರ ಕ್ರಮಗಳನ್ನು ಕೈಗೊಳ್ಳುವುದನ್ನು ಅವನು ಕೈಬಿಟ್ಟಿರಲಿಲ್ಲ. ಆದ್ದರಿಂದ ಅಶೋಕನು ಆಡಳಿತ ವಿಷಯದಲ್ಲಿ ನೈಜವಾದ ನೀತಿಯನ್ನು ಅನುಸರಿಸಿದನು. ಕಳಿಂಗ ಯುದ್ಧದಲ್ಲಿ ಸಂಭವಿಸಿದ ಸಾವುನೋವುಗಳಿಂದ ಅವನು ಮಾನಸಿಕವಾಗಿ ಬಹಳ ನೊಂದುಕೊಂಡರೂ ಕಳಿಂಗ ರಾಜ್ಯವನ್ನು ಅದರ ಹಿಂದಿನ ರಾಜರುಗಳಿಗೆ ವಹಿಸಿಕೊಂಡಲಿಲ್ಲ. ಅದಕ್ಕೆ ಬದಲಾಗಿ ಕಳಿಂಗ ರಾಜ್ಯವನ್ನು ಮೌರ್ಯ ಸಾಮ್ರಾಜ್ಯಕ್ಕೆ ಸೇರಿಸಿಕೊಂಡನು ಮತ್ತು ತೋಸಲಿಯನ್ನು ಕೇಂದ್ರವನ್ನಾಗಿ ಉಳ್ಳ ಆ ಭಾಗಕ್ಕೆ ರಾಜಕುಮಾರನೊಬ್ಬನನ್ನು ವೈಸ್‌ರಾಯ್ ಆಗಿ ನೇಮಿಸಿದನು. ನ್ಯಾಯಾಡಳಿತದ ವಿಷಯದಲ್ಲಿ ಅಹಿಂಸಾನೀತಿಯು ಅಶೋಕನಿಗೆ ಅಡ್ಡ ಬರಲಿಲ್ಲ ಮತ್ತು ಅವನು ಮರಣದಂಡನೆ ಶಿಕ್ಷೆಯನ್ನು ರದ್ದುಗೊಳಿಸಲಿಲ್ಲ. ಆದ್ದರಿಂದ ಅಶೋಕನು ಆಡಳಿತದಲ್ಲಿ ಆದರ್ಶ ಮತ್ತು ನೈಜತೆಗಳೆರಡರಿಂದಲೂ ಕೂಡಿದ ಸಮನ್ವಯ ನೀತಿಯನ್ನು ಅನುಸರಿಸಿದನು.

ಅಶೋಕನು ಸರ್ಕಾರದ ಆಡಳಿತ ನಿರ್ವಹಣೆಯಲ್ಲಿ ತನ್ನ ತಾತ ಮತ್ತು ತಂದೆಯು ಅನುಸರಿದ್ದ ನೀತಿಯನ್ನೇ ಮುಂದುವರಿಸಿದರೂ ಕಾಲಕ್ಕನುಗುಣವಾಗಿ ಅನೇಕ ಬದಲಾವಣೆಗಳನ್ನು ಮಾಡಿ ಆಡಳಿತ ಯಂತ್ರವನ್ನು ರೂಪಿಸಿದ್ದನು. ಆಡಳಿತದ ವ್ಯವಸ್ಥೆಯಲ್ಲಿ ಮಹಾಮಾತ್ರರು, ಪ್ರಾದೇಶಿಕರು, ರಾಜುಕರು ಮತ್ತು ಯುತರು ಎಂಬ ನಾಲ್ಕು ದರ್ಜೆಯ ಅಧಿಕಾರಿಗಳಿದ್ದರು. ಸರ್ಕಾರದ ಪ್ರಮುಖ ಇಲಾಖೆಗಳ ಉಸ್ತುವಾರಿಯನ್ನು ಉನ್ನತ ಅಧಿಕಾರಿಗಳಾಗಿದ್ದ ಮಹಾಮಾತ್ರರು ನೋಡಿಕೊಳ್ಳುತ್ತಿದ್ದರು. ಪ್ರಾದೇಶಿಕರು ಪ್ರಾಂತ್ಯಗಳಲ್ಲಿನ ಕಂದಾಯ ವಸೂಲಿ ಮತ್ತು ಪೋಲೀಸ್ ಕರ್ತವ್ಯಗಳನ್ನು ನಿರ್ವಹಿಸುತ್ತಿದ್ದರು. ರಾಜುಕರು ಜಿಲ್ಲಾ ನ್ಯಾಯಾಧೀಶರುಗಳು ಮತ್ತು ಸರ್ವ ಅಧಿಕಾರಿಗಳೂ ಆಗಿದ್ದರು. ಯುತರು ಅಧೀನ ಅಧಿಕಾರಿಗಳು ಇಲ್ಲವೆ ಕಾರಕೂನರು ಆಗಿದ್ದರು. ಇವರುಗಳಲ್ಲದೆ ಚಕ್ರವರ್ತಿಗೆ ಸಾಮ್ರಾಜ್ಯದಲ್ಲಿನ ವಿದ್ಯಮಾನಗಳ ಬಗ್ಗೆ ವರದಿ ಸಲ್ಲಿಸಲು ಪ್ರತಿಯಾಗಿ ಗೂಢಚಾರರಿದ್ದರು. ಪ್ರಜಾಹಿತಚಿಂತಕನಾಗಿದ್ದ ಅಶೋಕನು ಪ್ರಜೆಗಳ ಕಲ್ಯಾಣಕ್ಕಾಗಿ ಅನೇಕ ಜನೋಪಯುಕ್ತ ಕಾರ್ಯಗಳನ್ನು

ಮಾಡಿದನು. ಸಾಮ್ರಾಜ್ಯದ ವಿವಿಧ ಭಾಗಗಳಿಗೆ ಸಂಪರ್ಕವೇರ್ಪಡಿಸಲು ಹೆದ್ದಾರಿಗಳನ್ನು ನಿರ್ಮಿಸಿದನು. ಪ್ರಯಾಣಿಕರ ಅನುಕೂಲಕ್ಕಾಗಿ ರಸ್ತೆಗಳ ಇಕ್ಕೆಲಗಳಲ್ಲೂ ನೆರಳಿಗಾಗಿ ಸಾಲುಮರಗಳನ್ನು ನೆಡಿಸಿದನು. ನೀರಿನ ಸೌಕರ್ಯಕ್ಕಾಗಿ ಅಲ್ಲಲ್ಲಿ ಬಾವಿಗಳನ್ನು ತೋಡಿಸಿದನು. ಪ್ರಯಾಣಿಕರ ವಿಶ್ರಾಂತಿಗಾಗಿ ವಿಶ್ರಾಂತಿ ಗೃಹಗಳನ್ನು ನಿರ್ಮಿಸಿದ್ದನು. ಪ್ರಜೆಗಳ ಆರೋಗ್ಯ ರಕ್ಷಣೆಗಾಗಿ ಆಸ್ಪತ್ರೆಗಳನ್ನೇ ಅಲ್ಲದೆ ಪ್ರಾಣಿಗಳಿಗೂ ಚಿಕಿತ್ಸಾಲಯಗಳನ್ನು ನಿರ್ಮಿಸಿದನು. ಈ ರೀತಿಯ ಹಲವಾರು ಜನೋಪಯುಕ್ತ ಕಾರ್ಯಗಳಿಂದ ಅಶೋಕನು ಪ್ರಾಚೀನ ಕಾಲದಲ್ಲಿಯೆ ಸುಖೀ ರಾಜ್ಯ ಸ್ಥಾಪನೆಯ ಕಲ್ಪನೆಯನ್ನು ಹೊಂದಿದ್ದು ಮುಂದಿನ ರಾಜರುಗಳಿಗೆ ಮಾರ್ಗದರ್ಶನ ಹಾಕಿಕೊಟ್ಟನು.

**ಅಶೋಕನ ಶಾಸನಗಳು**

ಅಶೋಕನು ತನ್ನ ಸಾಧನೆಗಳನ್ನು ಶಾಸನಗಳ ರೂಪದಲ್ಲಿ ಬಂಡೆಗಳು ಕಲ್ಲು ಕಂಬಗಳು ಹಾಗೂ ಸ್ತೂಪಗಳ ಮೇಲೆ ಕೆತ್ತಿಸುದದರ ಮೂಲಕ ಮುಂದಿನ ಪೀಳಿಗೆಗೆ ಬಿಟ್ಟು ಹೋಗಿದ್ದಾನೆ. ಈ ಶಾಸನಗಳೆಲ್ಲವೂ ಖರೋಸ್ಟಿ ಮತ್ತು ಬ್ರಾಹ್ಮಿ ಲಿಪಿಯಲ್ಲಿ ಕೆತ್ತಲ್ಪಟ್ಟವೆ. ಇವುಗಳನ್ನು ಮೊಟ್ಟಮೊದಲ ಬಾರಿಗೆ ಪಾಶ್ಚಾತ್ಯ ವಿದ್ವಾಂಸರಾದ ಜೇಮ್ಸ್ ಪ್ರಿನ್ಸೆಫ್ ಎಂಬವರು 1837 ಯಶಸ್ವಿಯಾಗಿ ಓದಿ ಅರ್ಥೈಸಿ ಪ್ರಕಟಿಸಿದರು. ಅಶೋಕನ ಶಾಸನಗಳನ್ನು ಮುಖ್ಯವಾಗಿ ಮೂರು ಭಾಗವಾಗಿ ವಿಂಗಡಿಸಲಾಗಿದೆ. 1. ಹದಿನಾಲ್ಕು ಶಿಲಾಶಾಸನಗಳು 2. ಮೂರು ಉಪ ಶಿಲಾಶಾಸನಗಳು 3. ಏಳು ಸ್ಥಂಬ ಶಾಸನಗಳು. ಅಶೋಕನು ತನ್ನ ಸಾಧನೆಗಳನ್ನು ಕಲ್ಲಿನ ಮೇಲೆ ಕೆತ್ತಿಸುವ ಪದ್ಧತಿಯನ್ನು ಪರ್ಶಿಯದ ಚಕ್ರವರ್ತಿಗಳಿಂದ ಅನುಕರಣೆ ಮಾಡಿದಂತೆ ಕಂಡುಬರುತ್ತದೆ.

ಅಶೋಕನ ಶಿಲಾಶಾಸನಗಳು ಬರವಣಿಗೆಯ ದೃಷ್ಟಿಯಿಂದಲೇ ಅಲ್ಲದೆ ಅವನ ಇತಿಹಾಸವನ್ನು ತಿಳಿಯಲು ಇತಿಹಾಸಕಾರರಿಗೆ ಬಹಳ ಉಪಯುಕ್ತವಾಗಿವೆ. ಅವನ ಶಾಸನಗಳು ಭಾರತದ ವಿವಿಧ ಭಾಗಗಳಲ್ಲಿ ದೊರೆತಿರುವುದರಿಂದ ಅವನ ಸಾಮ್ರಾಜ್ಯದ ಗಡಿಗಳನ್ನು ಗುರುತಿಸುವುದಕ್ಕೆ ಅಲ್ಲದೆ ಅವನ ಶಾಸನಗಳಿಂದ ರಾಜತ್ವದ ಬಗ್ಗೆ ಅವನು ಇಟ್ಟು ಕೊಂಡಿದ್ದ ಉನ್ನತ ಆದರ್ಶ ಮತ್ತು ಕಳಿಂಗ ಯುದ್ಧದ ವರ್ಣನೆ ಮತ್ತು ಆ ಯುದ್ಧದ ನಂತರ ಅವನ ಹೃದಯ ಪರಿವರ್ತನೆ, ಅವನ ಧರ್ಮ ಮತ್ತು ಬೌದ್ಧಮತ ಪ್ರಸಾರಕ್ಕಾಗಿ ಅವನು ಕೈಗೊಂಡ ಕ್ರಮಗಳು, ಅವನ ಧಾರ್ಮಿಕ ಸಹಿಷ್ಣುತಾ ನೀತಿ, ಪ್ರಾಣಗಳ ವಧೆಯ ನಿಷೇಧ ಹಾಗೂ ಅವುಗಳ ಬಗ್ಗೆ ಅನುಕಂಪ ಮೊದಲಾದುವುಗಳ ಬಗ್ಗೆ ಅತ್ಯುಪ ಯುಕ್ತವಾದ ಮಾಹಿತಿಗಳು ದೊರೆಯುತ್ತವೆ. ಒಟ್ಟಾರೆ ಹೇಳುವುದಾದರೆ ಅಶೋಕನ ಪೂರ್ಣ ಇತಿಹಾಸವೇ ಅವನ ಶಾಸನಗಳಲ್ಲಿ ಅಡಕವಾಗಿವೆ.

**ಅಶೋಕನ ಸಾಮ್ರಾಜ್ಯ**

ಅಶೋಕನ ಶಾಸನಗಳು ಮೌರ್ಯರ ಸಾಮ್ರಾಜ್ಯದ ಎಲ್ಲೆಗಳನ್ನು ಗುರುತಿಸಲು ಅನುಕೂಲವಾಗಿವೆ. ದಕ್ಷಿಣ ಭಾರತದ ಸ್ವಲ್ಪ ಭಾಗವನ್ನು ಬಿಟ್ಟರೆ ಹೆಚ್ಚು ಕಡಿಮೆ ಇಡೀ ಭರತಖಂಡವು ಮೌರ್ಯರ ಆಳ್ವಿಕೆಗೆ ಒಳಪಟ್ಟಿದ್ದಿತು. ಪ್ರಾಚೀನ ಕಾಲದಲ್ಲಿ ಇಷ್ಟು ವಿಶಾಲವಾದ ಸಾಮ್ರಾಜ್ಯವನ್ನು ಸ್ಥಾಪಿಸಿ ಅದಕ್ಕೆ ಅತ್ಯುತ್ತಮ ರೀತಿಯ

ಆಡಳಿತವನ್ನು ರೂಪಿಸಿ ಪ್ರಜಾನುರಾಗಿಗಳಾಗಿ ರಾಜ್ಯವಾಳಿದುದು ಮೌರ್ಯ ಚಕ್ರವರ್ತಿಗಳ ಬಹುದೊಡ್ಡ ಸಾಧನೆಯಾಗಿರುತ್ತದೆ. ಅಶೋಕ ಚಕ್ರವರ್ತಿಯ ಕಾಲದಲ್ಲಿ ಅದು ತನ್ನ ಪರಾಕಾಷ್ಠತೆಯನ್ನು ಮುಟ್ಟಿತು. ಪಶ್ಚಿಮದಲ್ಲಿ ಪೇಷಾವರ್‌ನಿಂದ ಹಿಡಿದು ಪೂರ್ವದಲ್ಲಿ ಬಂಗಾಳದವರೆಗೂ ಉತ್ತರದಲ್ಲಿ ಕಾಶ್ಮೀರದಿಂದ ದಕ್ಷಿಣದಲ್ಲಿ ಮೈಸೂರಿನವರೆಗೂ ಒಂದೇ ರಾಜಾಜ್ಞೆಯು ಅನ್ವಯಿಸಿದ್ದಿತು. ಪ್ರಾಚೀನ ಭಾರತದ ಇತಿಹಾಸದಲ್ಲಿ ಇಂತಹ ಒಂದು ಘಟನೆಯು ಗುಪ್ತರ ಕಾಲವನ್ನು ಬಿಟ್ಟರೆ ಮತ್ತೆಲ್ಲಿಯೂ ಸಂಭವಿಸಿದಂತೆ ಕಂಡುಬರುವುದಿಲ್ಲ. ಅಶೋಕನು ಏರ್ಪಡಿಸಿದ್ದ ರಾಜಕೀಯ ಮತ್ತು ಸಾಂಸ್ಕೃತಿಕ ಏಕತೆಯನ್ನು ಇಂದಿನ ಸ್ವತಂತ್ರ ಭಾರತದ ಸರ್ಕಾರವು ಪುನಃ ಸ್ಥಾಪಿಸಲು ಸತತವಾಗಿ ಪ್ರಯತ್ನಿಸುತ್ತಿದ್ದು ಅವನ ಧರ್ಮಚಕ್ರವನ್ನು ರಾಷ್ಟ್ರ ಚಿನ್ಹೆಯನ್ನಾಗಿ ಅರಿಸಿಕೊಂಡಿರುವುದು ಪ್ರಶಂಸನೀಯ ಸಂಗತಿಯಾಗಿರುತ್ತದೆ.

**ಅಶೋಕನ ವ್ಯಕ್ತಿತ್ವ**

ಅಶೋಕನ ಬಹುಮುಖ ಸಾಧನೆಗಳಿಂದ ಭಾರತೀಯರೆಲ್ಲರೂ ಹೆಮ್ಮೆಪಟ್ಟು ಕೊಳ್ಳಬೇಕಾಗಿದೆ. ಅಶೋಕನಿಗಿಂತಲೂ ಹೆಚ್ಚು ಪ್ರಬಲರಾದ ದೊರೆಗಳು ವಿಶ್ವದ ಇತಿಹಾಸದಲ್ಲಿ ಕಂಡುಬರಬಹುದು. ಆದರೆ ತನ್ನ ಅಧಿಕಾರದ ಉತ್ತುಂಗ ಶಿಖರದಲ್ಲಿದ್ದಾಗ ರಾಜ್ಯ ವಿಸ್ತರಣೆಯ ದಾಹವನ್ನು ಪೂರ್ಣವಾಗಿ ಕೈಬಿಟ್ಟು, ಪ್ರಜಾಕ್ಷೇಮಕ್ಕಾಗಿ ತನ್ನ ಸರ್ವಸ್ವವನ್ನೂ ಮುಡುಪಾಗಿಟ್ಟ ಚಕ್ರವರ್ತಿ ಅಶೋಕನನ್ನು ಬಿಟ್ಟರೆ ಯಾರೂ ಕಂಡುಬರುವುದಿಲ್ಲ. ಕಳಿಂಗ ಯುದ್ಧದ ಮೂಲಕ ಅಲ್ಲಿನ ಪ್ರಜೆಗಳು ಅನುಭವಿಸಿದ ಸಾವು ನೋವುಗಳಿಂದ ಪಶ್ಚಾತ್ತಾಪಗೊಂಡು ತಾನು ಮಾಡಿದ ಅಪರಾಧಕ್ಕಾಗಿ ಅವರ ಕ್ಷಮೆಯನ್ನು ಕೇಳಿದ ಅಶೋಕ ಚಕ್ರವರ್ತಿಯ ಶ್ರೇಷ್ಠ ಗುಣಕ್ಕೆ ವಿಶ್ವದ ಯಾವ ದೊರೆಯೂ ಸರಿಸಮನಾಗಿ ನಿಲ್ಲಲಾರನು. ಅಶೋಕನು ತನ್ನ ಅಧಿಕಾರದಿಂದ ಮದೋನ್ಮತ್ತನಾಗಿ ಮಹಾಗರ್ವಿಯಾಗಿ ನಡೆದುಕೊಳ್ಳಲು ಅವಕಾಶವಿದ್ದರೂ ಅವನು ಅದಕ್ಕೆ ಬದಲಾಗಿ ಮಹಾವಿನಮ್ರನೂ ಮತ್ತು ಶಾಂತಿಪ್ರಿಯನೂ ಆಗಿ ಶಸ್ತ್ರಾಸ್ತ್ರಗಳ ಮೂಲಕ ಗಳಿಸಬಹುದಾದ ವಿಜಯಗಳನ್ನು ಸಂಪೂರ್ಣವಾಗಿ ಕೈಬಿಟ್ಟು ಧಾರ್ಮಿಕ ವಿಜಯವನ್ನು ಕೈಗೊಂಡನು. ''ಅಶೋಕನ ಶಿಲಾಶಾಸನಗಳು ಅವುಗಳಲ್ಲಿನ ಉನ್ನತ ನುಡಿಗಳ ಮೂಲಕ ಅಶೋಕನು ಕೇವಲ ಒಬ್ಬ ಚಕ್ರವರ್ತಿಯಾಗಿದ್ದರೂ ಅವನು ಚಕ್ರವರ್ತಿಗಿಂತಲೂ ಮೇಲಾಗಿದ್ದನೆಂದು (ರಾಜರ್ಷಿ) ನನಗೆ ಸಾರಿ ಹೇಳುತ್ತವೆ ಎಂಬುದಾಗಿ ದಿವಂಗತ ಪಂಡಿತ ಜವಹರಲಾಲ್ ನೆಹರೂರವರು ಅಭಿಪ್ರಾಯ ಪಟ್ಟಿರುವರು. ಬೌದ್ಧಮತದ ತತ್ವಗಳಾದ ಪ್ರೀತಿ ಮತ್ತು ಅನುಕಂಪಗಳಿಂದ ಆಕರ್ಷಿತನಾದ ಅಶೋಕನು ರಾಜರ್ಷಿಯಾಗಿ ಬೌದ್ಧಮತದ ತತ್ವಗಳನ್ನು ರಾಜ್ಯಾಡಳಿತದಲ್ಲಿ ಆಚರಣೆಗೆ ತಂದು ತನ್ನ ಪ್ರಜೆಗಳೆಲ್ಲರನ್ನೂ ಜಾತಿಮತಗಳ ಬೇಧವಿಲ್ಲದೆ ಸುಖವಾಗಿರಿಸಲು ಪ್ರಯತ್ನಪಟ್ಟ ಮಹಾನ್ ವ್ಯಕ್ತಿಯಾಗಿದ್ದಾನೆ. ''ಅಶೋಕನು ಇಡೀ ಇತಿಹಾಸದಲ್ಲೇ ಒಬ್ಬ ಸರ್ವ ಶ್ರೇಷ್ಠ ದೊರೆಯಾಗಿದ್ದಾನೆ. ತನ್ನ ವಿಶಾಲವಾದ ಸಾಮ್ರಾಜ್ಯದ ದಿನ ನಿತ್ಯದ ಆಡಳಿತದಲ್ಲಿ ಉನ್ನತ ಮಟ್ಟದ ಧಾರ್ಮಿಕ ಮತ್ತು ನೈತಿಕ ತತ್ವಗಳನ್ನು ಕಾರ್ಯರೂಪಕ್ಕೆ ತಂದು ರಾಜ್ಯವಾಳಿದುದರಲ್ಲಿ ಅವನ ಶ್ರೇಷ್ಠತೆಯು ಕಂಡುಬರುವುದೆಂದು ಡಾ|| ಕೆ.ಎ. ನೀಲಕಂಠ ಶಾಸ್ತ್ರಿಗಳು ಅಭಿಪ್ರಾಯ ಪಡುತ್ತಾರೆ.'' ಅಶೋಕನ ಧ್ಯೇಯಾದರ್ಶಗಳು ಲೌಕಿಕ ಜಗತ್ತಿನೊಂದಿಗೆ

ಯಾವುದೇ ರೀತಿಯ ಸಂಬಂಧಗಳನ್ನು ಹೊಂದಿರದ ಒಬ್ಬ ಸಾಮಾನ್ಯ ಸಂನ್ಯಾಸಿಯ ಧ್ಯೇಯಾದರ್ಶಗಳಂತಿದ್ದುವೆಂದು ಭಾವಿಸುವುದು ಸರಿಯಲ್ಲ. ಅಶೋಕನು ದೃಢಸಿರ್ಧಾರವುಳ್ಳವನೂ ಸದ್ಗುಣಗಳ ಪ್ರತಿಪಾದಕನೂ ಆದ ಕ್ರಿಯಾಶೀಲ ದೊರೆಯಾಗಿದ್ದನು. ಭಾರತೀಯ ಇತಿಹಾಸಕಾರರೇ ಅಲ್ಲದೆ ವಿದೇಶೀಯ ಇತಿಹಾಸಕಾರರೂ ಅಶೋಕನ ಶ್ರೇಷ್ಠತೆಯನ್ನು ಕುರಿತು ಪ್ರಶಂಸನೀಯ ಮಾತುಗಳನ್ನಾಡಿದ್ದಾರೆ. ಆಂಗ್ಲ ಇತಿಹಾಸಕಾರನಾದ ಎಚ್.ಜಿ. ವೆಲ್ಸ್ ಇತಿಹಾಸದ ಬಾಂದಳದಲ್ಲಿ ಎಂದೋ ಮಿನುಗಿ ಮಾಯವಾಗಿರುವ ಸಹಸ್ರಾರು ರಾಜಮಹಾರಾಜರುಗಳ ಹೆಸರುಗಳ ನಡುವೆ ಅಶೋಕ ಚಕ್ರವರ್ತಿಯ ಹೆಸರು ಇಂದಿಗೂ ಧ್ರುವತಾರೆಯಂತೆ ಪ್ರಜ್ವಲಿಸುತ್ತಿದೆ. ವೇಲ್ಸ್‌ರವರು ಇನ್ನೂ ಮುಂದುವರಿದು ಓಲ್ಗಾದಿಂದ ಹಿಡಿದು ಜಪಾನಿನವರೆಗೂ ಇಂದಿಗೂ ಜನರು ಅವನ ಹೆಸರನ್ನು ಕಾನ್‌ಸ್ಟಾಂಟೈನ್ ಇಲ್ಲದೆ ಛಾರ್ಲಮೆಗೆನ್ ಚಕ್ರವರ್ತಿಗಳ ಹೆಸರುಗಳಿಗಿಂತಲೂ ಹೆಚ್ಚಾಗಿ ಗೌರವ ಆದರಗಳಿಂದ ಸ್ಮರಿಸಿಕೊಳ್ಳುತ್ತಾರೆ.''

ಅಶೋಕನನ್ನು ರಾಜನನ್ನಾಗಿ ನಿಂದಿಸಿದ ಇತಿಹಾಸಕಾರರೂ ಇಲ್ಲದಿಲ್ಲ. ಅಶೋಕನ ಧರ್ಮ ವಿಜಯದ ಆದರ್ಶಗಳು ಕಾಲಾನುಕ್ರಮದಲ್ಲಿ ಮೌರ್ಯ ಸಾಮ್ರಾಜ್ಯದ ಭದ್ರತೆಗೆ ಹಿತದೃಷ್ಟಿಗೆ ಧಕ್ಕೆಯುಂಟುಮಾಡಿದುವೆಂದು ಅಭಿಪ್ರಾಯ ಪಟ್ಟಿರುವರು. ಅಶೋಕನ ಧ್ಯೇಯಾದರ್ಶಗಳನ್ನು ಎಷ್ಟೇ ಮೆಚ್ಚಿಕೊಂಡರೂ ಹಿಂಸಾ ಪ್ರವೃತ್ತಿಗಳಿಂದ ಕೂಡಿದ ಜಗತ್ತಿನಲ್ಲಿ ಅತಿ ಹೆಚ್ಚಿನ ಪ್ರಮಾಣದಲ್ಲಿ ಶಾಂತಿ ಪ್ರತಿಪಾದನೆಯನ್ನು ಒಂದು ವಿಶಾಲ ಸಾಮ್ರಾಜ್ಯಕ್ಕೆ ಒಡೆಯನಾಗಿದ್ದ ಅಶೋಕನು ತನ್ನ ಆಡಳಿತದ ಮುಖ್ಯ ನೀತಿಯನ್ನಾಗಿ ಅನುಸರಿಸಿದುದು ಸಾಮ್ರಾಜ್ಯದ ಹಿತದೃಷ್ಟಿಯಿಂದ ಅಷ್ಟು ಹಿತವಾದುದಲ್ಲವೆಂಬ ಅಭಿಪ್ರಾಯವನ್ನೂ ಯಾರೂ ತಳ್ಳಿಹಾಕುವಂತಿಲ್ಲ. ಅಶೋಕನು ಅಹಿಂಸಾ ತತ್ವವನ್ನು ಒತ್ತಿ ಹೇಳುವುದರ ಮೂಲಕ ತನ್ನ ಹಿಂದಿನವರ ಸೈನಿಕ ಸಂಪ್ರದಾಯಗಳನ್ನು ಕೈಬಿಟ್ಟನು. ಅಶೋಕ ಚಕ್ರವರ್ತಿಯ ಆಕರ್ಷಕ ವ್ಯಕ್ತಿತ್ವದಿಂದಾಗಿ ಅವನು ಬದುಕಿರುವವರೆಗೂ ಸಾಮ್ರಾಜ್ಯದಲ್ಲಿ ವಿಚ್ಛಿದ್ರಕಾರಕ ಶಕ್ತಿಗಳು ತಲೆಯೆತ್ತಿರಲಿಲ್ಲ. ಆದರೆ ಅವನು ಕಾಲವಾದ ಕೆಲವು ವರ್ಷಗಳಲ್ಲಿಯೆ ಈ ವಿಚ್ಛಿದ್ರಕಾರಕ ಶಕ್ತಿಗಳು ಬಲಗೊಂಡು ಮೌರ್ಯ ಸಾಮ್ರಾಜ್ಯದ ಬುಡವನ್ನೇ ಅಲುಗಾಡಿಸಿದವು. ಅಶೋಕನು ಬೌದ್ಧಮತಕ್ಕೆ ನೀಡಿದ ಅತಿ ಹೆಚ್ಚಿನ ಪ್ರೋತ್ಸಾಹವೂ ಕೂಡ ಮೌರ್ಯ ಸಾಮ್ರಾಜ್ಯದ ಪತನಕ್ಕೆ ಕಾರಣವಾಯಿತು ಎಂಬ ನಿಂದನೆಯ ಮತ್ತೊಂದು ಅಭಿಪ್ರಾಯವೂ ಇದೆ. ಆದರೆ ಅಶೋಕನ ಬಗ್ಗೆ ನಿಂದನೆಯ ಅಭಿಪ್ರಾಯಗಳನ್ನು ವ್ಯಕ್ತಪಡಿಸುವ ಮೊದಲು ಅವನ ಉನ್ನತ ಧ್ಯೇಯಾದರ್ಶಗಳನ್ನು ಅರಿತುಕೊಂಡು ಅದರಂತೆ ನಡೆಯಲು ಜನರು ನೈತಿಕವಾಗಿ ಅಷ್ಟೊಂದು ಮುಂದುವರಿದಿರಲಿಲ್ಲವೆಂಬುದನ್ನೂ ಮತ್ತು ಅಶೋಕನು ತನ್ನ ಕಾಲಕ್ಕಿಂತಲೂ ಮುಂದಿದ್ದನೆಂಬ ಅಭಿಪ್ರಾಯವನ್ನು ಯಾರೂ ಗಮನಿಸದೆ ಇರುವಂತಿಲ್ಲ.

**ಅಶೋಕನ ಉತ್ತರಾಧಿಕಾರಿಗಳು**

ಅಶೋಕನ ಆಳ್ವಿಕೆಯು ಕ್ರಿ.ಪೂ. 236ರಲ್ಲಿ ಕೊನೆಗೊಂಡಿತು. ಅವನಿಗೆ ಅನೇಕ ಜನ ಮಕ್ಕಳೂ ಮತ್ತು ಮೊಮ್ಮಕ್ಕಳೂ ಇದ್ದರೆಂದು ವಿವಿಧ ಮೂಲಾಧಾರಗಳು ತಿಳಿಸುತ್ತವೆ. ಅಶೋಕನ ಮರಣಾ ನಂತರ ಅವನ ಮಗನಾದ ಕುನಾಲ ಎಂಬವನು

ಎಂಟು ವರ್ಷಗಳ ಕಾಲ ರಾಜ್ಯವಾಳಿದನೆಂದು ವಾಯು ಪುರಾಣವು ತಿಳಿಸುತ್ತದೆ. ಕುನಾಲನೇ ಅಲ್ಲದೆ ಅಶೋಕನಿಗೆ ಮಹೇಂದ್ರ ಮತ್ತು ಜಲೌಕ ಎಂಬ ಇನ್ನಿಬ್ಬರು ಮಕ್ಕಳಿದ್ದರೆಂದು ಸಾಹಿತ್ಯ ಸಂಪ್ರದಾಯವೊಂದು ತಿಳಿಸುತ್ತದೆ. ಕುನಾಲನಿಗೆ ಪಾಲಿತ ಎಂಬ ಮಗನಿದ್ದನೆಂದೂ ಮತ್ತು ಕೆಲವು ಕಾಲ ಅವನು ಉತ್ತರಾಧಿಕಾರಿಯಾಗಿದ್ದನೆಂದು ಅವನ ತರುವಾಯ ಇನ್ನಿಬ್ಬರು ರಾಜ್ಯವಾಳಿದರೆಂದು ಕೆಲವು ಮೂಲಗಳು ತಿಳಿಸುತ್ತವೆ. ಮತ್ಸ್ಯಪುರಾಣ ಮತ್ತು ವಾಯು ಪುರಾಣಗಳೆರಡೂ ಅಶೋಕನಿಗೆ ದಶರಥ ಎಂಬ ಮೊಮ್ಮಗ ನಿದ್ದನೆಂದು ಅವನು 'ದೇವನಾಂ ಪ್ರಿಯ' ಎಂಬ ಹೆಸರಿನಿಂದ ಕೆಲವು ವರ್ಷಗಳು ರಾಜ್ಯ ವಾಳಿದನೆಂದು ತಿಳಿಸುತ್ತವೆ. ಸಾಂಪ್ರತಿ ಎಂಬ ಮತ್ತೊಬ್ಬ ಮೊಮ್ಮಗನ ಹೆಸರೂ ಸೂಚಿತವಾಗಿದ್ದು ಅವನೂ ಕೂಡ ಕೆಲವು ವರ್ಷಗಳು ರಾಜ್ಯವಾಳಿದುದಾಗಿ ಜೈನರ ಕೃತಿಗಳು ತಿಳಿಸುತ್ತವೆ. ಸಾಂಪ್ರತಿಯು ಜೈನಮತಕ್ಕೆ ಪ್ರೋತ್ಸಾಹ ನೀಡಿದ್ದನೆಂದು ಹೇಳಲಾಗಿದೆ. ಬೃಹದ್ರಥ ಎಂಬವನು ಮೌರ್ಯ ಸಂತತಿಯ ಕೊನೆಯ ದೊರೆ ಪುಷ್ಯಮಿತ್ರ ಸುಂಗ ಎಂಬ ಇವನ ದಂಡನಾಯಕನು ಇವನನ್ನು ಕ್ರಿ.ಪೂ. 187ರಲ್ಲಿ ಕೊಂದು ಮೌರ್ಯ ಸಂತತಿಯವರ ಆಳ್ವಿಕೆಯನ್ನು ಕೊನೆಗಾಣಿಸಿದನು. ಇದರೊಂದಿಗೆ ಸುಮಾರು 137 ವರ್ಷಗಳ ಕಾಲ ವೈಭವದಿಂದ ರಾಜ್ಯವಾಳಿದ ಮೌರ್ಯಚಕ್ರವರ್ತಿಗಳ ಆಳ್ವಿಕೆಯು ಕೊನೆಗಂಡಿತು.

**ಮೌರ್ಯ ಸಂತತಿಯ ಅವನತಿಗೆ ಕಾರಣಗಳು**

ಅಶೋಕನ ಮರಣಾ ನಂತರ ಮೌರ್ಯ ಸಾಮ್ರಾಜ್ಯದ ಅವನತಿಯು ಆರಂಭವಾಗಿ ಅದು ಮುಂದಿನ ಐವತ್ತು ವರ್ಷಗಳಲ್ಲಿ ಕೊನೆಗೊಂಡಿತು. ಮೌರ್ಯಸಂತತಿಯ ಅವನತಿಗೆ ಅನೇಕ ಅಂಶಗಳು ಕಾರಣವಾಗಿದ್ದವು. 'ಅಶೋಕನ ನಂತರ ಸಿಂಹಾಸನಕ್ಕೆ ಬಂದ ರಾಜರುಗಳು ಅತ್ಯಂತ ದುರ್ಬಲರಾಗಿದ್ದರು. ಇದರಿಂದಾಗಿ ವಿಶಾಲ ಸಾಮ್ರಾಜ್ಯದ ಮೇಲೆ ತಮ್ಮ ಹತೋಟಿಯನ್ನಿಟ್ಟುಕೊಳ್ಳಲು ಅವರಿಂದ ಸಾಧ್ಯವಾಗದೆ ಹೋಯಿತು. 2. ಸಾಮ್ರಾಜ್ಯದ ರಾಜಧಾನಿಗೆ ದೂರವಿದ್ದ ಪ್ರದೇಶಗಳಲ್ಲಿ ಆಡಳಿತಾಧಿಕಾರಿಗಳ ಪ್ರಜಾಪೀಡಕ ಆಡಳಿತ ಕ್ರಮಗಳಿಂದ ಜನರ ಪ್ರೀತ್ಯಾದರಗಳು ತಪ್ಪಿಹೋಗಿ ಸಾಮ್ರಾಜ್ಯವು ಅವನತಿ ಹೊಂದಲು ಕಾರಣವಾಯಿತು. 3. ಅಶೋಕನ ಧಾರ್ಮಿಕ ನೀತಿಯು ಸಾಮ್ರಾಜ್ಯದ ಅವನತಿಗೆ ಕಾರಣವಾಯಿತೆಂದು ಕೆಲವು ಇತಿಹಾಸಕಾರರು ಅಭಿಪ್ರಾಯ ಪಡುತ್ತಾರೆ. ಅಶೋಕನು ಬೌದ್ಧಮತಕ್ಕೆ ತೋರಿಸಿದ ಉದಾರ ಪ್ರೋತ್ಸಾಹದಿಂದ ಬ್ರಾಹ್ಮಣರು ಅಸಂತುಷ್ಟರಾಗಿ ಪುಷ್ಯಮಿತ್ರಸುಂಗನ ನೇತೃತ್ವದಲ್ಲಿ ದಂಗೆಯೆದ್ದು ಮೌರ್ಯ ಸಂತತಿಯನ್ನು ಕೊನೆಗಾಣಿಸಿದರೆಂದು ಹೇಳಲಾಗಿದೆ. ಆದರೆ ಈ ವಾದವನ್ನು ಪುಷ್ಟೀಕರಿಸಲು ಸಮರ್ಥನೀಯವಾದ ಆಧಾರಗಳು ದೊರೆತಿಲ್ಲ. ಏಕೆಂದರೆ ಅಶೋಕನು ಬ್ರಾಹ್ಮಣರ ಬಗ್ಗೆ ಕ್ರೂರವಾಗಿ ನಡೆದುಕೊಂಡಿದುದರ ಬಗ್ಗೆಯಾಗಲೀ ಇಲ್ಲವೆ ಪುಶ್ಯಮಿತ್ರಸುಂಗನು ಅತೃಪ್ತ ಜನಗಳ ಅಸಮಧಾನವನ್ನೇ ಎತ್ತಿ ಹಿಡಿದು ಅವರ ನಾಯಕನಾಗಿ ಮೌರ್ಯ ಸಂತತಿಯನ್ನು ಕೊನೆಗಾಣಿಸಿದನೆಂದು ಹೇಳುವುದು ನಿಜಾಂಶಕ್ಕೆ ದೂರವಾದ ಸಂಗತಿಯಾಗಿ ಕಂಡುಬರುತ್ತದೆ. ದಂಡನಾಯಕನಾಗಿದ್ದ ಪುಶ್ಯಮಿತ್ರ ಸುಂಗನು ರಾಜನ ದುರ್ಬಲತೆಯ ಅನುಕೂಲವನ್ನೂ ಮತ್ತು ತನ್ನ ಸೈನಿಕರು ತನ್ನಲ್ಲಿಟ್ಟಿದ್ದ ನಿಷ್ಠೆಯ ಅನುಕೂಲವನ್ನೂ ಪಡೆದುಕೊಂಡು ರಾಜನನ್ನು ಕೊನೆಗಾಣಿಸಿರಬಹುದು. 4. ಅಶೋಕನು

ಅಹಿಂಸಾತತ್ವವನ್ನು ಸಾಮ್ರಾಜ್ಯದ ಅಧಿಕೃತ ನೀತಿಯನ್ನಾಗಿ ಮಾಡಿದುದರಿಂದ ಸೈನಿಕರು ನಿಶ್ಯಕ್ತರಾಗಿ ಮಾರ್ಪಟ್ಟಿದುದು ಮತ್ತೊಂದು ಕಾರಣವಾಗಿರಬಹುದೆಂದು ಅಭಿಪ್ರಾಯಪಡಲಾಗಿದೆ. ಕೊನೆಯದಾಗಿ ಮೌರ್ಯ ಸಂತತಿಯವರ ಆಳ್ವಿಕೆಯ ಕೊನೆಯ ಭಾಗದಲ್ಲಿ ಭಾರತದ ಮೇಲೆ ಮತ್ತೊಮ್ಮೆ ಯವನರ ಧಾಳಿಯ ಭೀತಿಯು ಕಂಡುಬಂದಿತು. ದುರ್ಬಲ ರಾಜನಾಗಿದ್ದ ಬೃಹದ್ರತ ಮೌರ್ಯನು ರಾಜ್ಯವನ್ನು ಉಳಿಸಿಕೊಳ್ಳಲು ಅಸಮರ್ಥನೆಂಬುದನ್ನೂ ಮತ್ತು ದೇಶವು ಮತ್ತೊಮ್ಮೆ ಪರಕೀಯರ ಆಳ್ವಿಕೆಗೊಳಗಾಗುವುದನ್ನು ಇಚ್ಛಿಸದ ಪುಶ್ಯಮಿತ್ರಸುಂಗನು ಬಹುಶಃ ಮೌರ್ಯ ಸಂತತಿಯವರ ಅಧಿಕಾರವನ್ನು ಕೊನೆಗಾಣಿಸಲು ಪ್ರಯತ್ನಿಸಿರಬಹುದೆಂದು ಊಹಿಸಲೂ ಸಾಧ್ಯವಿದೆ.

## ಮೌರ್ಯರ ರಾಜ್ಯಾಡಳಿತ ವ್ಯವಸ್ಥೆ

ಮೌರ್ಯ ಚಕ್ರವರ್ತಿಗಳ ಆಡಳಿತ ವ್ಯವಸ್ಥೆಯನ್ನು ತಿಳಿಯಲು ಕೌಟಿಲ್ಯನ ಅರ್ಥ ಶಾಸ್ತ್ರವೂ ಮೆಗಾಸ್ತನೀಸನ 'ಇಂಡಿಕ' ಹಾಗೂ ಗ್ರೀಕ್ ವಿದ್ವಾಂಸರ ಕೃತಿಗಳೂ ಮತ್ತು ಅಶೋಕನ ಶಾಸನಗಳು ಮುಖ್ಯ ಆಧಾರಗಳಾಗಿವೆ. ಮೌರ್ಯ ಚಕ್ರವರ್ತಿಗಳು ವಿಶಾಲ ಸಾಮ್ರಾಜ್ಯ ಸ್ಥಾಪಕರಾಗಿದ್ದುದಲ್ಲದೆ ದಕ್ಷ ಆಡಳಿತಗಾರರೂ ಆಗಿದ್ದು ಪ್ರಗತಿಪರ ಆಡಳಿತವನ್ನು ರೂಪಿಸಿದ್ದರು. ಪ್ರಾಚೀನ ಭಾರತದ ಇತಿಹಾಸದಲ್ಲಿ ಕಂಡುಬರುವ ಸಾಮ್ರಾಜ್ಯ ನಿರ್ಮಾಪಕರಲ್ಲಿ ಪ್ರಬಲವಾದ ಕೇಂದ್ರಾಡಳಿತದ ಜೊತೆಗೆ ಆಡಳಿತ ವಿಕೇಂದ್ರೀಕರಣವನ್ನೂ ಸಮನ್ವಯಗೊಳಿಸಿ ದಕ್ಷತೆಯಿಂದ ರಾಜ್ಯವಾಳಿದ ಚಕ್ರವರ್ತಿಗಳಲ್ಲಿ ಮೌರ್ಯ ಚಕ್ರವರ್ತಿಗಳು ಮೊದಲಿಗರಾಗಿದ್ದಾರೆ. ಮೌರ್ಯ ಚಕ್ರವರ್ತಿಗಳು ಪ್ರಾಚೀನ ಕಾಲದಲ್ಲಿನ ಇತರ ಸಾಮ್ರಾಜ್ಯಗಳಲ್ಲಿನ ಚಕ್ರವರ್ತಿಗಳಂತೆ ನಿರಂಕುಶ ಪ್ರಭುಗಳಾಗಿರಲಿಲ್ಲ. ಅಂದಿನ ಕಾಲದಲ್ಲಿ ರಾಜನ ಅಭಿಪ್ರಾಯವೇ ಸಾಮ್ರಾಜ್ಯದ ಕಾನೂನು ಎಂಬುದು ವ್ಯಾವಹಾರಿಕ ನಿಯಮವಾಗಿದ್ದರೂ ಸಾಮ್ರಾಜ್ಯದಲ್ಲಿನ ಸಾಂಪ್ರದಾಯಿಕ ನಿಯಮಗಳು, ಸಾಮಾಜಿಕ ಮತ್ತು ಧಾರ್ಮಿಕ ಕಟ್ಟಲೆಗಳು ಮೊದಲಾದವುಗಳು ರಾಜನ ನಿರಂಕುಶಾಧಿಕಾರವನ್ನು ತಡೆಹಿಡಿದು ಅವನನ್ನು ಒಬ್ಬ ಸಂವಿಧಾನಾತ್ಮಕ ದೊರೆಯನ್ನಾಗಿ ಮಾಡಿದ್ದವು. ಮೌರ್ಯ ಚಕ್ರವರ್ತಿಗಳು ತಾವು ಈ ಭೂಮಿಯ ಮೇಲೆ ದೇವರ ಪ್ರತಿನಿಧಿಗಳೆಂದಾಗಲೀ ಮತ್ತು ತಮ್ಮ ಅಧಿಕಾರವು ದೈವದತ್ತವಾದುದೆಂಬ ಸಿದ್ಧಾಂತದಲ್ಲಾಗಲೀ ನಂಬಿಕೆಯನ್ನಿಟ್ಟಿರಲಿಲ್ಲ. ಆದರೆ ರಾಜನು ದೈವಾಂಶ ಸಂಭೂತನೆಂಬ ಕಲ್ಪನೆಯು ಅವರಲ್ಲಿದ್ದಿತು. ಪ್ರಾಚೀನ ಭಾರತದ ಋಷಿಪುಂಗವರೂ ರಾಜನೀತಿ ವಿಶಾರದರೂ ಮತ್ತು ದಾರ್ಶನಿಕರೂ ಪ್ರತಿಪಾದಿಸಿದ್ದ ರಾಜಧರ್ಮವನ್ನು ಮೌರ್ಯ ಚಕ್ರವರ್ತಿಗಳು ಅನುಸರಿಸಿದ್ದರು. ''ರಾಜನ ಅಭ್ಯುದಯವು ಪ್ರಜೆಗಳ ಅಭ್ಯುದಯವನ್ನವಲಂಭಿಸಿರುತ್ತದೆ ಮತ್ತು ಅವನು ಪಿತೃವಿನೋಪಾದಿಯಲ್ಲಿ ತನ್ನ ಪ್ರಜೆಗಳನ್ನು ನೋಡಿಕೊಳ್ಳಬೇಕೆಂಬ ಕೌಟಿಲ್ಯನ ಅರ್ಥಶಾಸ್ತ್ರದ ಉಕ್ತಿಯನ್ನು ಕಟ್ಟುನಿಟ್ಟಾಗಿ ಪಾಲಿಸಿದರು.'' ಅಶೋಕ ಚಕ್ರವರ್ತಿಯು ತನ್ನ ಪ್ರಜೆಗಳನ್ನು ತನ್ನ ಮಕ್ಕಳಂತೆ ನೋಡಿಕೊಂಡಿದ್ದುದಲ್ಲದೆ, ತಾಯಿಯಾದವಳು ತನ್ನ ಮಗುವಿನ ಆರೈಕೆಯನ್ನು ನುರಿತ ದಾದಿಗೆ ಒಪ್ಪಿಸುವಂತೆ ಅಶೋಕನು ತನ್ನ ಪ್ರಜೆಗಳ ಕ್ಷೇಮ ಪಾಲನೆಯನ್ನು ತನ್ನ ಅಧಿಕಾರಿಗಳಿಗೆ ವಹಿಸಿದ್ದನು.

**ಆಡಳಿತ ವಿಭಾಗಗಳು**

ಮೌರ್ಯ ಸಾಮ್ರಾಜ್ಯದ ಮಹಾಶಿಲ್ಪಿಯಾಗಿದ್ದ ಚಂದ್ರಗುಪ್ತ ಮೌರ್ಯನು ಆಡಳಿತದ ಅನುಕೂಲಕ್ಕಾಗಿ ಸಾಮ್ರಾಜ್ಯವನ್ನು ಅನೇಕ ಪ್ರಾಂತ್ಯಗಳನ್ನಾಗಿ ವಿಂಗಡಿಸಿದ್ದನು. ಪ್ರತಿಯೊಂದು ಭಾಗಕ್ಕೂ ಒಬ್ಬೊಬ್ಬ ವೈಸ್‌ರಾಯ್ ಅಥವ ಪ್ರಾಂತ್ಯಾಧಿಕಾರಿಯನ್ನು ಆಡಳಿತದ ಮೇಲ್ವಿಚಾರಣೆಗಾಗಿ ನೇಮಿಸಿದ್ದನು. ಪ್ರತಿಯೊಂದು ಪ್ರಾಂತ್ಯವು ಆಹರ, ವಿಷಯ, ಪ್ರದೇಶ ಎಂಬ ವಿಭಾಗಗಳಾಗಿ ವಿಭಾಗಿಸಲ್ಪಟ್ಟಿದ್ದಿತು. ಮಗದ, ಕೋಸಲ ಮತ್ತು ಪೂರ್ವ ಪ್ರದೇಶಗಳು ಕೇಂದ್ರ ಸರ್ಕಾರದ ಮೇಲ್ವಿಚಾರಣೆಗೆ ಒಳಪಟ್ಟಿದ್ದವು. ಈ ಭಾಗಕ್ಕೆ ಪಾಟಲೀಪುತ್ರವು ರಾಜಧಾನಿಯಾಗಿತ್ತು. ವಾಯುವ್ಯಭಾಗಕ್ಕೆ ತಕ್ಷಶಿಲೆಯೂ, ಮಧ್ಯಭಾಗಕ್ಕೆ ಉಜ್ಜೆನಿಯೂ, ಕಳಿಂಗ ಪ್ರದೇಶಕ್ಕೆ ತೋಸಲಿಯೂ ರಾಜಧಾನಿಗಳಾಗಿದ್ದು ರಾಜನ ರಕ್ತಸಂಬಂಧಿಗಳು ಇಲ್ಲವೆ ನಿಷ್ಠಾವಂತ ಅಧಿಕಾರಿಗಳು ಇವುಗಳ ವೈಸ್‌ರಾಯ್‌ಗಳಾಗಿದ್ದರು. ಚಂದ್ರಗುಪ್ತಮೌರ್ಯನ ಕಾಲದಲ್ಲಿದ್ದ ಪ್ರಾಂತ್ಯಗಳ ಸಂಖ್ಯೆಯು ಸ್ಪಷ್ಟವಾಗಿ ತಿಳಿದುಬಂದಿಲ್ಲ. ಆದರೆ ಅಶೋಕನ ಕಾಲದಲ್ಲಿ ಐದು ಪ್ರಾಂತ್ಯಗಳಿದ್ದುದಾಗಿ ಕಂಡುಬರುತ್ತದೆ. ಅವುಗಳೆಂದರೆ 1. ಪ್ರಾಚ್ಯ ಮತ್ತು ಮಧ್ಯದೇಶ. ಈ ಪ್ರದೇಶವು ರಾಜಧಾನಿಯಾದ ಪಾಟಲೀಪುತ್ರದಿಂದ ಚಕ್ರವರ್ತಿಯ ನೇರ ಆಡಳಿತಕ್ಕೊಳಪಟ್ಟಿದ್ದಿತು. 2. ಕಳಿಂಗ ಪ್ರದೇಶಕ್ಕೆ ತೋಸಲಿಯು ರಾಜಧಾನಿಯಾಗಿತ್ತು. 3. ದಕ್ಷಿಣ ಪಥಕ್ಕೆ ಸುವರ್ಣಗಿರಿಯೂ 4. ಅವಂತಿ ಪ್ರದೇಶಕ್ಕೆ ಉಜ್ಜೈನಿಯೂ 5. ಉತ್ತರ ಪಥಕ್ಕೆ ತಕ್ಷಶಿಲೆಯೂ ರಾಜಧಾನಿಗಳಾಗಿದ್ದವು. ಗ್ರಾಮಾಡಳಿತವನ್ನು ನೋಡಿಕೊಳ್ಳಲು ಗ್ರಾಮಿಕ ಎಂಬ ಅಧಿಕಾರಿಯಿದ್ದನು. ಆದರೆ ಈ ಅಧಿಕಾರಿಗಳು ಸರ್ಕಾರದಿಂದ ಸಂಬಳ ಪಡೆಯುತ್ತಿದ್ದರೆ ಇಲ್ಲವೆ ಎಂಬುದು ಸ್ಪಷ್ಟವಾಗಿ ತಿಳಿದು ಬಂದಿಲ್ಲ. ಸರ್ಕಾರದಿಂದ ಸಂಬಳ ಪಡೆಯುತ್ತಿದ್ದ ಅಧಿಕಾರಿಗಳ ಪಟ್ಟಿಯಲ್ಲಿ ಇವರ ಪ್ರಸ್ತಾಪವು ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಕಂಡುಬರುವುದಿಲ್ಲ. ಗ್ರಾಮಿಕನಿಗಿಂತ ಮೇಲಿನ ಅಧಿಕಾರಿಯನ್ನು 'ಗೋಪ' ಎಂದು ಕರೆಲಯಾಗಿತ್ತು. ಈತನ ಅಧಿಕಾರವು ಐದರಿಂದ ಹತ್ತು ಹಳ್ಳಿಗಳವರೆಗಿನ ಮೇಲ್ವಿಚಾರಣೆಗೊಳಪಟ್ಟಿದ್ದಿತು. ಇವನ ಮೇಲಿನ ಅಧಿಕಾರಿಗೆ 'ಸ್ಥಾನಿಕ'ನೆಂದು ಕರೆಯುತ್ತಿದ್ದರು. ಇವನು ಒಂದು ಜನಪದ ಅಥವ ಜಿಲ್ಲೆಯ 1/4 ಭಾಗದ ಮೇಲಿನ ಉಸ್ತುವಾರಿಯನ್ನು ನೋಡಿಕೊಳ್ಳುತ್ತಿದ್ದನು. ಇವರೆಲ್ಲರ ಮೇಲ್ವಿಚಾರಣೆಗಾಗಿ ಸುವರ್ಣತ್ರಿ ಎಂಬ ಅಧಿಕಾರಿಯೂ ಆವನ ಸಹಾಯಕ್ಕಾಗಿ ಪ್ರಾದೇಶಿಕರು ಎಂಬ ಅಧಿಕಾರಿಗಳೂ ಇದ್ದರು. ಮೌರ್ಯ ಚಕ್ರವರ್ತಿಗಳು ಸ್ಥಳೀಯಾಡಳಿತಕ್ಕೂ ಅವಕಾಶ ಕಲ್ಪಿಸಿಕೊಟ್ಟಿದ್ದು ಅನೇಕ ಬಣಗಳು ಸ್ವಯಂ ಆಡಳಿತ ವ್ಯವಸ್ಥೆಯನ್ನು ಹೊಂದಿದ್ದುದಾಗಿ ಕಂಡುಬರುತ್ತದೆ.

ಚಕ್ರವರ್ತಿಯು ಸಾಮ್ರಾಜ್ಯದ ಅತ್ಯುನ್ನತ ಅಧಿಕಾರಿಯಾಗಿದ್ದನು. ಅವನ ಅಧಿಕಾರವು ಪ್ರಾಂತ್ಯಾಧಿಕಾರಿಗಳ ಹಾಗೂ ಮತ್ತಿತರ ಅಧಿಕಾರಿಗಳ ಮೂಲಕ ಸಾಮ್ರಾಜ್ಯದಾದ್ಯಂತ ವ್ಯಾಪಿಸಿದ್ದಿತು. ರಾಜನು ಆಡಳಿತದಲ್ಲಿ ಉನ್ನತ ಆದರ್ಶಗಳನ್ನು ಅನುಸರಿಸಬೇಕಿತ್ತು. ಪ್ರಜಾಪೀಡನೆಗಾಗಿ ಅಧಿಕಾರವನ್ನು ದುರುಪಯೋಗಪಡಿಸಿಕೊಳ್ಳುವಂತಿರಲಿಲ್ಲ. ಅವನು ಜನತೆಯ ಸಂಪ್ರದಾಯ, ಕಾನೂನು ಕಟ್ಟಲೆಗಳನ್ನು ಗಮನದಲ್ಲಿಟ್ಟುಕೊಂಡು ಆಡಳಿತ ನಡೆಸಬೇಕಿತ್ತು. ಪ್ರಜೆಗಳ ಮತ್ತು ಅವರ ಆಸ್ತಿ ಪಾಸ್ತಿಗಳ ರಕ್ಷಣೆ, ನ್ಯಾಯಾಡಳಿತ, ಕ್ಷಾಮಡಾಮರಗಳಿಗೆ ಮತ್ತು

ಪ್ರವಾಹಗಳಿಗೊಳಗಾದವರಿಗೆ ಪರಿಹಾರ ವನ್ನೊದಗಿಸುವುದು ವ್ಯಾಪಾರ ವಾಣಿಜ್ಯಗಳಿಗೆ ಉತ್ತೇಜನ ನೀಡುವುದು. ಸಾಹಿತ್ಯ, ಕಲೆ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ ನೀಡುವುದು, ಧಾರ್ಮಿಕ ರಕ್ಷಣೆ ನೀಡುವುದು ಸಾಮ್ರಾಜ್ಯಕ್ಕೆ ಅನುಕೂಲಕರವಾದ ವಿದೇಶಾಂಗ ನೀತಿಯನ್ನು ಅನುಸರಿಸುವುದೇ ಮೊದಲಾದ ಕೆಲಸಗಳ ಜವಾಬ್ದಾರಿಯು ಅವನಿಗೆ ಸೇರಿದ್ದಿತು. ರಾಜಕುಮಾರರಿಗೆ ಉನ್ನತ ಮಟ್ಟದ ಶಿಕ್ಷಣವನ್ನು ಕೊಡಲಾಗುತ್ತಿತ್ತು. ರಾಜನಾಗುವವನನ್ನು ದೈಹಿಕ ಮತ್ತು ಮಾನಸಿಕ ಶಿಸ್ತಿಗೊಳಪಡಿಸಲು ಶಿಕ್ಷಣವು ಅತ್ಯವಶ್ಯಕವೆಂದು ಕೌಟಿಲ್ಯನ ಅರ್ಥಶಾಸ್ತ್ರವು ತಿಳಿಸುತ್ತದೆ.

**ಮಂತ್ರಿಮಂಡಲ**

ಪ್ರಜಾನುರಾಗಿಗಳಾಗಿದ್ದ ಮೌರ್ಯ ಚಕ್ರವರ್ತಿಗಳು ಬಿಡುವಿಲ್ಲದ ದಿನಚರಿಯನ್ನು ಹೊಂದಿದ್ದರು. ಚಕ್ರವರ್ತಿಯು ತನಗೆ ಆಡಳಿತದಲ್ಲಿ ಸಲಹೆಗಳನ್ನು ನೀಡಲು ಅನೇಕ ಮಂತ್ರಿಗಳನ್ನು ದಕ್ಷತೆಯ ಆಧಾರದ ಮೇಲೆ ನೇಮಿಸಿಕೊಂಡಿದ್ದನು. ಇವರುಗಳನ್ನು ಸಚಿವರು ಅಥವ ಅಮಾತ್ಯರು ಎಂದು ಕರೆಯುತ್ತಿದ್ದರು. ಸಚಿವರ ಅಧಿಕಾರ ಮತ್ತು ಪ್ರತಿಷ್ಠೆಗಳಿಗೆ ಕೆಲವು ವೇಳೆ ರಾಜನ ಕುಟುಂಬದವರೂ ಹೆದರುತ್ತಿದ್ದರು. ಮಂತ್ರಿಗಳೇ ಅಲ್ಲದೆ ಮಂತ್ರಿ ಪರಿಷತ್ತು ಎಂಬ ಮತ್ತೊಂದು ಸಭೆಯನ್ನು ತನಗೆ ಆಡಳಿತದಲ್ಲಿ ಸಲಹೆ ನೀಡಲು ಚಂದ್ರಗುಪ್ತನು ನೇಮಿಸಿಕೊಂಡಿದ್ದನು. ಆದರೆ ಇವರ ಸ್ಥಾನಮಾನಗಳು ಮಂತ್ರಿಗಳ ಸ್ಥಾನಮಾನಗಳಿಗೆ ಕಡಿಮೆಯಿದ್ದವು. ಸಾಮಾನ್ಯ ವಿಷಯಗಳ ಬಗ್ಗೆ ಇವರ ಸಲಹೆಗಳನ್ನು ಕೇಳಲಾಗುತ್ತಿತ್ತು. ಇವರುಗಳನ್ನು ಬಿಟ್ಟರೆ 'ಅಮಾತ್ಯರು' ಎಂಬ ಮತ್ತೊಂದು ದರ್ಜೆಯ ಅಧಿಕಾರಿಗಳಿದ್ದರು. ಇವರು ಆಡಳಿತದ ಮತ್ತು ನ್ಯಾಯಾಂಗ ಇಲಾಖೆಗಳಲ್ಲಿ ಉನ್ನತಾಧಿಕಾರಿಗಳಾಗಿದ್ದರು.

**ನ್ಯಾಯಾಡಳಿತ**

ನ್ಯಾಯತೀರ್ಮಾನದಲ್ಲಿ ರಾಜನು ಅಂತಿಮ ತೀರ್ಪುಗಾರನಾಗಿದ್ದನು. ಮಹಾಮಾತ್ಯರು ಮತ್ತು ರಾಜುಕರು ಅಧ್ಯಕ್ಷತೆ ವಹಿಸುತ್ತಿದ್ದ ವಿಶೇಷ ನ್ಯಾಯಾಲಯಗಳೂ ಇದ್ದವು. ಗ್ರಾಮಾಂತರ ಪ್ರದೇಶಗಳಲ್ಲಿ ಸಣ್ಣ ಪುಟ್ಟ ಜಗಳಗಳನ್ನು ಗ್ರಾಮಾಧಿಕಾರಿ ಮತ್ತು ಗ್ರಾಮದ ಹಿರಿಯರಿಂದ ಕೂಡಿದ ಪಂಚಾಯಿತಿ ಸಭೆಯು ತೀರ್ಮಾನಿಸುತ್ತಿತ್ತು. ನ್ಯಾಯಾಲಯಗಳನ್ನು ಎರಡು ವರ್ಗಗಳಾಗಿ ವಿಂಗಡಿಸಲಾಗಿತ್ತು. ಧರ್ಮಸ್ಥಾನೀಯ ನ್ಯಾಯಾಲಯಗಳು ಸಿವಿಲ್ ವ್ಯಾಜ್ಯಗಳನ್ನು ಅಂದರೆ ಪಿತ್ರಾರ್ಜಿತ ಸ್ವತ್ತು, ಸಾಲಕ್ಕೆ ಸಂಬಂಧಪಟ್ಟ ವಿಷಯಗಳು ವಿವಾಹಕ್ಕೆ ಸಂಬಂಧಿಸಿದ ವ್ಯಾಜ್ಯಗಳು ಗುತ್ತಿಗೆ ಒಪ್ಪಂದಗಳು ಮೊದಲಾದವುಗಳ ಬಗ್ಗೆ ವಿಚಾರಣೆ ನಡೆಸುತ್ತಿದ್ದವು. ಕಂಟಕ ಶೋಧನ ನ್ಯಾಯಾಲಯಗಳು ಕಳ್ಳತನ, ಕೊಲೆ, ದರೋಡೆ ವ್ಯಭಿಚಾರ ಮೊದಲಾದ ಕ್ರಿಮಿನಲ್ ಅಪರಾಧಗಳ ಬಗ್ಗೆ ವಿಚಾರಣೆ ನಡೆಸುತ್ತಿದ್ದವು. ಅಪರಾಧಗಳನ್ನು ಪತ್ತೆಹಚ್ಚಲು ಗೂಢಾಚಾರರ ದೊಡ್ಡ ಸಿಬ್ಬಂದಿ ವರ್ಗವಿದ್ದಿತು. ಕ್ರಿಮಿನಲ್ ಕಾನೂನುಗಳು ಬಹಳ ಕಠಿಣವಾಗಿದ್ದವು. ಅಪರಾಧಗಳನ್ನು ಪತ್ತೆಹಚ್ಚಲು ಅಪರಾಧಿಗಳನ್ನು ನಾನಾ ರೀತಿಯ ಪರೀಕ್ಷೆಗಳಿಗೆ ಒಳಪಡಿಸಲಾಗುತ್ತಿತ್ತು. ದಂಡವಿಧಿಸುವುದು, ಜೀವಾವಧಿ ಶಿಕ್ಷೆ, ಅಂಗಚ್ಛೇದನ, ಮರಣದಂಡನೆ ಮೊದಲಾದ ಶಿಕ್ಷೆಗಳನ್ನು ವಿಧಿಸಲಾಗುತ್ತಿತ್ತು. ಸಾಮ್ರಾಜ್ಯದ ದೂರದ ಪ್ರಾಂತ್ಯಗಳಲ್ಲಿ

ನ್ಯಾಯತೀರ್ಮಾನದಲ್ಲಿ ಭ್ರಷ್ಟಾಚಾರವು ಕಂಡುಬರುತ್ತಿದ್ದಿತೆಂದೂ ಅಶೋಕನು ಅಂತಹ ಅಧಿಕಾರಿಗಳನ್ನು ಶಿಕ್ಷಿಸಲು ಸರ್ಕ್ಯೂಟ್ ನ್ಯಾಯಾಧಿಕಾರಿಗಳನ್ನು ನೇಮಿಸಿದ್ದನೆಂದು ಅವನ ಶಾಸನಗಳು ತಿಳಿಸುತ್ತವೆ.

**ಗುಪ್ತಪಡೆ**

ಗೂಢಾಚಾರ ವ್ಯವಸ್ಥೆಯು ಮೌರ್ಯರ ಆಡಳಿತದ ಮತ್ತೊಂದು ವಿಶೇಷ ಲಕ್ಷಣವಾಗಿತ್ತು. ಗ್ರೀಕ್ ಬರಹಗಾರರಾದ ಏರಿಯನ್ ಮತ್ತು ಸ್ಟ್ರಾಬೋ ಮೊದಲಾದವರು ಗುಪ್ತಚಾರರ ಬಗ್ಗೆ ಪ್ರಸ್ತಾಪಿಸಿದ್ದಾರೆ. ಗುಪ್ತಚಾರರನ್ನು ರಾಜನೇ ಅಲ್ಲದೆ ಉನ್ನತ ಅಧಿಕಾರಿಗಳೂ ನೇಮಿಸಿಕೊಂಡಿರುತ್ತಿದ್ದರು. ಇವರು ವೇಷ ಮರೆಸಿಕೊಂಡು ಸಾಮ್ರಾಜ್ಯದಲ್ಲೆಲ್ಲಾ ಸಂಚರಿಸಿ ರಾಜ್ಯದಲ್ಲಿನ ಅಧಿಕಾರಿಗಳ ಹಾಗೂ ಮತ್ತಿತರ ವಿದ್ಯಮಾನಗಳನ್ನು ತಿಳಿದು ರಾಜನಿಗೆ ಮುಟ್ಟಿಸುತ್ತಿದ್ದರು. ಅಂತೆಯೆ ಶತ್ರು ರಾಜ್ಯಗಳಲ್ಲಿನ ವಿದ್ಯಮಾನಗಳನ್ನು ತಿಳಿದು ರಾಜನಿಗೆ ತಿಳಿಸುವುದು ಅವರ ಮತ್ತೊಂದು ಮುಖ್ಯ ಕರ್ತವ್ಯವಾಗಿತ್ತು. ಸ್ತ್ರೀಯರನ್ನೂ ಕೂಡ ಈ ಕೆಲಸಕ್ಕೆ ನೇಮಿಸಿಕೊಂಡಿದ್ದುದಾಗಿ ಕಂಡುಬರುತ್ತದೆ.

**ಸೈನ್ಯಾಡಳಿತ**

ಮೌರ್ಯ ಚಕ್ರವರ್ತಿಗಳು ಬಹುದೊಡ್ಡ ಸೈನ್ಯವನ್ನಿಟ್ಟುಕೊಂಡಿದ್ದವರು. ರಾಜನು ಸೈನ್ಯದ ಮುಖ್ಯ ದಂಡನಾಯಕನೂ ಆಗಿದ್ದನು. ಪ್ರಮುಖ ದಂಡಯಾತ್ರೆಗಳಲ್ಲಿ ರಾಜನೇ ಸೈನ್ಯದ ನಾಯಕತ್ವವನ್ನು ವಹಿಸಿ ಸೈನಿಕ ಕಾರ್ಯಾಚರಣೆಗಳನ್ನು ನಿರ್ದೇಶಿಸುತ್ತಿದ್ದನು. ಚಂದ್ರಗುಪ್ತಮೌರ್ಯನ ಸೈನ್ಯವು ಆರು ಲಕ್ಷ ಪದಾತಿ ದಳದಿಂದಲೂ ಮೂವತ್ತು ಸಾವಿರ ಅಶ್ವಪಡೆ ಮತ್ತು ಒಂಬತ್ತು ಸಾವಿರ ಗಜಸೈನ್ಯದಿಂದಲೂ ಕೂಡಿದ್ದಿತು. ಇವುಗಳಲ್ಲದೆ ಚಂದ್ರಗುಪ್ತಮೌರ್ಯನು ನೌಕಾಪಡೆಯನ್ನೂ ಹೊಂದಿದ್ದನು. ಸೈನಿಕರು ತಮ್ಮ ಸೇವೆಗೆ ಸಂಬಳ ಪಡೆಯುತ್ತಿದ್ದರು ಮತ್ತು ಅವರ ಜೀವನವು ತೃಪ್ತಿಕರವಾಗಿತ್ತು. ಸೈನಿಕರು ಉತ್ತಮವಾದ ಶಸ್ತ್ರಾಸ್ತ್ರಗಳನ್ನು ಹೊಂದಿದ್ದು ಸೈನ್ಯವು ಬಹಳ ದಕ್ಷವಾಗಿತ್ತು. ಸೈನ್ಯದ ಮೇಲ್ವಿಚಾರಣೆಯನ್ನು ನೋಡಿಕೊಳ್ಳಲು ಪ್ರತ್ಯೇಕ ಆಡಳಿತ ವಿಭಾಗವಿದ್ದಿತು. ಈ ವಿಭಾಗದಲ್ಲಿ ಮೂವತ್ತು ಜನ ನುರಿತ ಅಧಿಕಾರಿಗಳಿದ್ದರು. ಇವರನ್ನು ಆರು ವಿಭಾಗಗಳಾಗಿ ವಿಂಗಡಿಸಿ ಪ್ರತಿಯೊಂದು ವಿಭಾಗಕ್ಕೂ ಪ್ರತ್ಯೇಕವಾದ ಕೆಲಸಗಳನ್ನು ವಹಿಸಲಾಗಿತ್ತು. ಮೊದಲನೆಯ ವಿಭಾಗವು ಭೂ ಸೈನ್ಯದ ಮೇಲ್ವಿಚಾರಣೆಯನ್ನೂ ಉಳಿದ ವಿಭಾಗಗಳು ಕ್ರಮವಾಗಿ ನೌಕಾಪಡೆ, ಅಶ್ವದಳ, ರಥಗಳು, ಗಜಸೈನ್ಯ, ಸಾಮಾನು ಸರಂಜಾಮುಗಳನ್ನು ಒದಗಿಸುವ ಜವಾಬ್ದಾರಿಯನ್ನು ಹೊತ್ತಿದ್ದವು. ಸೈನ್ಯದಲ್ಲಿ ಸಾಮಾನ್ಯವಾಗಿ ಕ್ಷತ್ರಿಯ ಕುಲದವರೇ ಹೆಚ್ಚಾಗಿದ್ದರು. ಒಟ್ಟಿನಲ್ಲಿ ಹೇಳುವುದಾದರೆ ಚಂದ್ರಗುಪ್ತಮೌರ್ಯನ ಸೈನ್ಯವು ದಕ್ಷತೆ ಮತ್ತು ಶಿಸ್ತಿನಿಂದ ಕೂಡಿದ್ದ ಅಜೇಯ ಸೈನ್ಯವಾಗಿದ್ದು ಸೆಲ್ಯೂಕಸ್ಸನ ಧಾಳಿಯನ್ನು ಎದುರಿಸಿ ತನ್ನ ಗೌರವ ಪ್ರತಿಷ್ಠೆಗಳನ್ನೂ ಮತ್ತು ಕೀರ್ತಿಯನ್ನೂ ಹೆಚ್ಚಿಸಿ ಕೊಂಡಿತ್ತು.

**ವರಮಾನ ಮತ್ತು ತೆರಿಗೆಗಳು**

ವ್ಯಾಪಕವಾದ ಆಡಳಿತ ವ್ಯವಸ್ಥೆ, ನೌಕರ ವರ್ಗ, ಮತ್ತು ಸೈನ್ಯದ ಖರ್ಚು

ವೆಚ್ಚಗಳು ಹಾಗೂ ಸಾರ್ವಜನಿಕ ಸೌಲಭ್ಯಗಳು ಸರ್ಕಾರದ ಖರ್ಚಿನ ಪ್ರಮುಖ ಬಾಬತ್ತುಗಳಾಗಿದ್ದವು. ಸರ್ಕಾರವು ಖರ್ಚು ಮತ್ತು ವೆಚ್ಚಗಳನ್ನು ಸರಿದೂಗಿಸಲು ಅನೇಕ ರೀತಿಯ ತೆರಿಗೆಗಳನ್ನು ವಿಧಿಸಿ ವಸೂಲಿ ಮಾಡುತ್ತಿತ್ತು. ಭೂಕಂದಾಯವು ಸರ್ಕಾರದ ಮುಖ್ಯ ವರಮಾನವಾಗಿತ್ತು. ರೈತರು ತಾವು ಬೆಳೆದ ಫಸಲಿನಲ್ಲಿ ಷಡ್ಭಾಗವನ್ನು ಕಂದಾಯರೂಪದಲ್ಲಿ ಸರ್ಕಾರಕ್ಕೆ ಕೊಡಬೇಕಾಗಿತ್ತು. ವ್ಯಾಪಾರ ವಾಣಿಜ್ಯ, ವಿದೇಶಿ ವಸ್ತುಗಳ ಮೇಲೆ ಸುಂಕ ಮಾರುಕಟ್ಟೆ ತೆರಿಗೆ, ರಹದಾರಿ ತೆರಿಗೆ ರಸ್ತೆಗಳ ಮೇಲಿನ ತೆರಿಗೆ, ವೃತ್ತಿ ಸಂಘಗಳ ಮೇಲೆ ತೆರಿಗೆ, ಮಾದಕಪಾನೀಯಗಳ ಮೇಲಿನ ತೆರಿಗೆ, ಮೊದಲಾದುವುಗಳು ಸರ್ಕಾರದ ಇತರ ಮುಖ್ಯ ವರಮಾನಗಳಾಗಿದ್ದವು. ತೆರಿಗೆಗಳನ್ನು ವಸೂಲಿ ಮಾಡುವ ಅಧಿಕಾರಿಗಳಿಂದ ಪ್ರಜೆಗಳಿಗೆ ಕಿರುಕುಳವುಂಟಾಗದಂತೆ ನೋಡಿಕೊಳ್ಳಲು ಸರ್ಕಾರವು ಎಚ್ಚರಿಕೆ ವಹಿಸಿದ್ದಿತು. ಸರ್ಕಾರವು ಪ್ರಜಾಕಲ್ಯಾಣಕ್ಕಾಗಿ ಹಣವನ್ನು ಧಾರಾಳವಾಗಿ ಖರ್ಚು ಮಾಡುತ್ತಿತ್ತು. ಕೈಗಾರಿಕೆಗಳ ಸ್ಥಾಪನೆ ಮತ್ತು ವಸ್ತುಗಳ ಉತ್ಪಾದನೆ, ಗಣಿ ಉದ್ಯಮ, ನೀರಾವರಿ ಕಾರ್ಯಗಳು, ಕೆರೆ ಕಟ್ಟೆ ಮತ್ತು ಅಣೆಕಟ್ಟು ಹಾಗೂ ಕಾಲುವೆಗಳ ನಿರ್ಮಾಣ, ಹೆದ್ದಾರಿಗಳನ್ನು ನಿರ್ಮಿಸುವುದು ಅರಣ್ಯಗಳ ಸಂರಕ್ಷಣೆ ಸಾಲುಮರಗಳನ್ನು ನೆಡಿಸುವುದು ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ, ಆಸ್ಪತ್ರೆಗಳ ನಿರ್ಮಾಣ ಕ್ಷಾಮಡಾಮರಗಳಿಂದ ನಿರ್ಗತಿಕರಾದವರಿಗೆ ಸಹಾಯ ಮಾಡುವುದು ದೇಶದ ರಕ್ಷಣೆ ಮೊದಲಾದುವುಗಳು ಸರ್ಕಾರದ ಮುಖ್ಯ ಖರ್ಚುಗಳಾಗಿದ್ದವು. ಸೌರಾಷ್ಟ್ರದ ಜುನ್ನಾಗಢ್ ಸಮೀಪದ ಮೌಂಟ್‌ಗಿರ್ನಾರ್‌ನಲ್ಲಿರುವ ಮಹಾಕ್ಷತ್ರಪ ರುದ್ರದಾಮನ್‌ನ ಶಾಸನದಿಂದ ಚಂದ್ರಗುಪ್ತ ಮೌರ್ಯನು ಗಿರ್ನಾರ್‌ಗೆ ಸಮೀಪದಲ್ಲಿ ಸುದರ್ಶನ ಸರೋವರವನ್ನು ನೀರಾವರಿ ಸೌಕರ್ಯಕ್ಕಾಗಿ ನಿರ್ಮಿಸಿದ್ದನೆಂದು ತಿಳಿದುಬರುತ್ತದೆ.

### ನಗರಾಡಳಿತ

ಮೌರ್ಯರ ಕಾಲದ ನಗರಾಡಳಿತ ವ್ಯವಸ್ಥೆಯು ಸಹ ಶ್ಲಾಘನೀಯ ಅಂಶಗಳಿಂದ ಕೂಡಿದೆ. ಈ ಕಾಲದಲ್ಲಿ ನಗರಗಳು ಹೆಚ್ಚಿನ ಸಂಖ್ಯೆಯಲ್ಲಿದ್ದವು. ಅವುಗಳ ಮೇಲ್ವಿಚಾರಣೆಗೆ ನಗರಾಡಳಿತಾಧಿಕಾರಿಗಳೆಂಬ (ನಗರಕರು) ಪ್ರತ್ಯೇಕ ಅಧಿಕಾರಿಗಳಾಗಿದ್ದರು. ರಾಜಧಾನಿಯಾಗಿದ್ದ ಪಾಟಲೀಪುತ್ರಕ್ಕೆ ಪ್ರತ್ಯೇಕ ಆಡಳಿತ ವ್ಯವಸ್ಥೆಯಿದ್ದುದಾಗಿ ಮೆಗಾಸ್ತನೀಸನ ಬರವಣಿಗೆಯಿಂದ ತಿಳಿದುಬರುತ್ತದೆ. ಈ ನಗರದ ಆಡಳಿತ ನಿರ್ವಹಣೆಗಾಗಿ ಮೂವತ್ತು ಜನ ಸದಸ್ಯರಿಂದ ಕೂಡಿದ ಒಂದು ದೊಡ್ಡ ನಗರಸಭೆಯಿದ್ದಿತು. ಈ ಸದಸ್ಯರನ್ನು ಆರು ಸಮಿತಿಗಳನ್ನಾಗಿ ವಿಂಗಡಿಸಿ ಪ್ರತಿಯೊಂದು ಸಮಿತಿಗೂ ಪ್ರತ್ಯೇಕ ಕೆಲಸಗಳನ್ನು ವಹಿಸಲಾಗಿತ್ತು. ಮೊದಲನೆಯ ಸಮಿತಿಯು ಕೈಗಾರಿಕೋದ್ಯಮವನ್ನೂ, ಎರಡನೆಯ ಸಮಿತಿಯು ರಾಜತಾಂತ್ರಿಕ ಇಲ್ಲವೆ ವ್ಯಾಪಾರೋದ್ದೇಶಗಳಿಗಾಗಿ ವಿದೇಶಗಳಿಂದ ಬರುತ್ತಿದ್ದ ವಿದೇಶೀಯರ ಊಟ, ವಸತಿಗಳ ಯೋಗಕ್ಷೇಮವನ್ನು ಮತ್ತು ಅವರ ಚಲನವಲನಗಳ ಮೇಲ್ವಿಚಾರಣೆಯನ್ನು ನೋಡಿಕೊಳ್ಳುತ್ತಿತ್ತು. ಜನನ ಮರಣಗಳ ಲೆಕ್ಕವನ್ನಿಡುವುದು ಮೂರನೆಯ ಸಮಿತಿಯ ಕರ್ತವ್ಯವಾಗಿತ್ತು. ನಾಲ್ಕನೆ ಸಮಿತಿಯು ವ್ಯಾಪಾರ ಪದಾರ್ಥಗಳ ವಹಿವಾಟಿನ ಮೇಲ್ವಿಚಾರಣೆಯನ್ನು ನೋಡಿಕೊಳ್ಳುತ್ತಿತ್ತು. ವರ್ತಕರು ಅಳತೆ ಮತ್ತು ತೂಕಗಳಲ್ಲಿ ಮೋಸಮಾಡದಂತೆ ಮತ್ತು ತೆರಿಗೆಗಳನ್ನು ತಪ್ಪಿಸಿ ಕೊಳ್ಳದಂತೆ ನೋಡಿಕೊಳ್ಳುವುದು

ಇದರ ಕೆಲಸವಾಗಿತ್ತು. ಐದನೆ ಸಮಿತಿಯು ವಸ್ತುಗಳ ಉತ್ಪಾದನೆ ಮತ್ತು ವಿಕ್ರಯಗಳ ಮೇಲೆ ಉಸ್ತುವಾರಿ ಹೊಂದಿದ್ದಿತು. ಮಾರಾಟದ ವಸ್ತುಗಳ ಮೇಲೆ ತೆರಿಗೆಯನ್ನು ವಿಧಿಸುವುದು ಮತ್ತು ಆ ತೆರಿಗೆಗಳನ್ನು ವಸೂಲಿಮಾಡುವುದು ಆರನೆಯ ಸಮಿತಿಯ ಕೆಲಸವಾಗಿತ್ತು. ಗಂಗಾ ಮತ್ತು ಶೋಣಾ ನದಿಗಳ ಸಂಗಮ ಸ್ಥಾನದಲ್ಲಿದ್ದ ರಾಜಧಾನಿ ಪಾಟಲೀಪುತ್ರವು ಸಂಸ್ಕೃತಿಯ ಕೇಂದ್ರವೂ ಆಗಿದ್ದಿತು. ಈ ನಗರವು ಒಂಬತ್ತೂವರೆ ಮೈಲಿ ಉದ್ದವೂ ಒಂದೂವರೆ ಮೈಲಿ ವಿಸ್ತಾರವುಳ್ಳದ್ದೂ ಆಗಿದ್ದಿತು. ನಗರದ ಸುತ್ತಲೂ ರಕ್ಷಣೆಗಾಗಿ ಕೋಟೆಯನ್ನೂ ಮತ್ತು ಸುಮಾರು ಇನ್ನೂರು ಗಜ ಅಗಲದ ನೀರುತುಂಬಿದ ಕಂದಕವನ್ನು ನಿರ್ಮಿಸಲಾಗಿತ್ತು. ಕೋಟೆಯಲ್ಲಿ ಅರವತ್ತನಾಲ್ಕು ಮಹಾದ್ವಾರಗಳು ಇದ್ದವು. ಕೋಟೆಯ ಮೇಲೆ ಐದುನೂರ ಎಪ್ಪತ್ತು ಪಹರೆಯ ಗೋಪುರಗಳಿದ್ದುವೆಂದು ಹೇಳಲಾಗಿದೆ. ರಾಜನ ಅರಮನೆಯು ನಗರದ ಅತ್ಯಂತ ಶೋಭಾಯಮಾನವಾಗಿದ್ದ ಭವನವಾಗಿತ್ತು. ಅರಮನೆಯು ಬಹಳ ಮಟ್ಟಿಗೆ ಮರದಿಂದ ನಿರ್ಮಿತವಾಗಿದ್ದು ಅದರಲ್ಲಿನ ಕಂಭಗಳಿಗೆ ಚಿನ್ನದ ತಗಡುಗಳನ್ನು ಅಳವಡಿಸಲಾಗಿತ್ತು. ಅರಮನೆಯ ಸುತ್ತಲೂ ಉದ್ಯಾನವನಗಳು, ಕಾರಂಜಿಗಳು ಹಾಗೂ ಕೃತಕ ಸರೋವರಗಳು ನಿರ್ಮಿತವಾಗಿದ್ದವು. ಅಂದಿನ ಕಾಲದಲ್ಲಿ ಪಾಟಲೀಪುತ್ರವು ಫಲಪುಷ್ಪಗಳ, ಸಂಸ್ಕೃತಿ ಕಲೆಗಳ ಮತ್ತು ವಿದ್ಯೆಯ ನಗರವಾಗಿತ್ತೆಂದು ಸೋಮೇಂದ್ರ ಕವಿಯ ಕಥಾಸರಿತ್ಸಾಗರದಲ್ಲಿ ಉಲ್ಲೇಖಿಸಲಾಗಿದೆ. ಸುಪ್ರಸಿದ್ದ ಭಾಷ್ಯಕಾರನಾಗಿದ್ದ ಪತಂಜಲಿಯು ರಾಜಧಾನಿ ಪಾಟಲೀಪುತ್ರದ ಗೋಪುರಗಳ ಮತ್ತು ಅರಮನೆಯ ವೈಭವವನ್ನು ಪ್ರಸ್ತಾಪಿಸಿರುವನು. ಈ ಅರಮನೆಯು ಯೂರೋಪಿಯನ್ನರ ಸಾಹಿತ್ಯದಲ್ಲಿ ಪ್ರಸಿದ್ಧವಾಗಿ ಪ್ರಸ್ತಾಪಿಸಲ್ಪಟ್ಟಿರುವ ವರ್ಸೈಲ್ಸ್ ಅಥವ ವಿಂಡ್ಸಾರ್ ಅರಮನೆಗಳಷ್ಟೇ ಭಾರತೀಯ ಸಾಹಿತ್ಯ ಕೃತಿಗಳಲ್ಲಿ ಪ್ರಸ್ತಾಪಿಸಲ್ಪಟ್ಟಿದೆಯೆಂದು ಇತಿಹಾಸಕಾರ ದಿವಂಗತ ಸರ್ದಾರ್ ಕೆ.ಎಮ್. ಫಣಿಕ್ಕರ್ ಅಭಿಪ್ರಾಯಪಟ್ಟಿರುವರು.

**ಸಾಮಾಜಿಕ ಸ್ಥಿತಿ**

ಮೌರ್ಯರ ಕಾಲದ ಸಾಮಾಜಿಕ ಸ್ಥಿತಿಗತಿಗಳ ಬಗ್ಗೆ ಮೆಗಾಸ್ತನೀಸನ ಬರವಣಿಗೆಯಿಂದ ಹಲವಾರು ಅಂಶಗಳು ತಿಳಿದುಬರುತ್ತವೆ. ದೇಶವು ಸಂಪತ್ಸಮೃದ್ಧಿಗಳಿಂದ ಕೂಡಿದ್ದು ಸಾಮಾಜಿಕ ಶಾಂತಿಯು ನೆಲೆಸಿದ್ದಿತು. ಹಿಂದಿನ ಶತಮಾನಗಳಲ್ಲಿ ಅಸ್ತಿತ್ವಕ್ಕೆ ಬಂದಿದ್ದ ವರ್ಣಾಶ್ರಮ ವ್ಯವಸ್ಥೆಯು ಈ ಕಾಲದಲ್ಲಿ ಒಂದು ನಿರ್ಧಿಷ್ಟ ರೂಪವನ್ನು ಪಡೆಯಿತು. ಸಮಾಜದಲ್ಲಿನ ಬಹುತೇಕ ಜನಗಳು ಜಾತಿಯ ಸಂಪ್ರದಾಯಗಳನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಿದ್ದು ರಾಜರುಗಳೂ ಕೂಡ ಸಾಮಾಜಿಕ ಸಂಪ್ರದಾಯಗಳನ್ನು ಮತ್ತು ಪದ್ಧತಿಗಳನ್ನು ಗೌರವಿಸುತ್ತಿದ್ದರು. ಸಾಮಾನ್ಯವಾಗಿ ವಿವಾಹಗಳು ಸ್ವಜಾತೀಯವರಲ್ಲಿ ನಡೆಯುತ್ತಿದ್ದವು. ಆದರೆ ಕ್ಷತ್ರಿಯರು ಮಾತ್ರ ಇದರಿಂದ ಹೊರತಾಗಿದ್ದರು. ಹಿಂದಿನಂತೆಯೆ ಈ ಕಾಲದಲ್ಲೂ ಅವಿಭಕ್ತ ಕುಟುಂಬ ಪದ್ಧತಿಯು ಜನಪ್ರಿಯ ಸಾಮಾಜಿಕ ವ್ಯವಸ್ಥೆಯಾಗಿತ್ತು. ಕುಟುಂಬದ ಒಳ್ಳೆಯ ಸಂಪ್ರದಾಯಗಳು, ಸಾಮಾಜಿಕ ಪದ್ಧತಿಗಳು ಹಾಗೂ ಸರ್ಕಾರದ ನಿಯಮಗಳು ಜನರ ಮೇಲೆ ಪ್ರಭಾವ ಬೀರಿದ್ದು ಸಮಾಜದಲ್ಲಿ ಅನ್ಯೋನ್ಯತೆಯು ಕಂಡುಬರುತ್ತಿತ್ತು. ಮೆಗಾಸ್ತನೀಸನು ಭಾರತೀಯರ ನಡೆನುಡಿಗಳ ಬಗ್ಗೆಯೂ ಮತ್ತು ಅವರ ಆಚಾರ ಪದ್ಧತಿಗಳ ಬಗ್ಗೆಯೂ ತನ್ನ ಮೆಚ್ಚಿಕೆಯನ್ನು ವ್ಯಕ್ತಪಡಿಸಿರುವನು. ಗ್ರೀಕ್ ಮತ್ತು

ಲ್ಯಾಟಿನ್ ಬರಹಗಾರರ ಪ್ರಕಾರ ಭಾರತೀಯರು ಸರಳ ಜೀವಿಗಳೂ, ಉದಾರಿಗಳೂ ಪ್ರಾಮಾಣಿಕರೂ ಧೈರ್ಯಶಾಲಿಗಳೂ ಆಹಾರ ಪಾನೀಯಗಳ ಸೇವನೆಯಲ್ಲಿ ಮಿತಿಯುಳ್ಳವರೂ ಮತ್ತು ಸೌಮ್ಯ ಸ್ವಭಾವದವರೂ ಆಗಿದ್ದರೆಂದು ತಿಳಿದುಬರುತ್ತದೆ. ಅವರು ಇನ್ನೂ ಮುಂದುವರಿದು ಇಲ್ಲಿನ ಜನರು ಸುಳ್ಳು ಹೇಳುವುದಿಲ್ಲ. ಕಳ್ಳತನ ಮಾಡುವುದಿಲ್ಲ ಮತ್ತು ಅವರು ಮನೆಗಳಿಗೆ ಬೀಗಗಳನ್ನು ಹಾಕುತ್ತಿರಲಿಲ್ಲವೆಂದು ಹೇಳುತ್ತಾರೆ. ಆದರೆ ಅವರ ಈ ಅಭಿಪ್ರಾಯಗಳಲ್ಲಿ ಸ್ವಲ್ಪಮಟ್ಟಿಗೆ ಉತ್ಪ್ರೇಕ್ಷೆಯಿರುವುದು ಕಂಡುಬರುವುದಾದರೂ, ಜನರು ತೃಪ್ತಿಕರ ಬಾಳ್ವೆ ಮಾಡುತ್ತಿದ್ದರೆಂದು ಕಂಡುಬರುತ್ತದೆ.

ಮೆಗಾಸ್ತನೀಸನು ಭಾರತೀಯರನ್ನು ಏಳು ವರ್ಗಗಳನ್ನಾಗಿ ವಿಂಗಡಿಸಿರುವನು. ಇವರಲ್ಲಿ ದಾರ್ಶನಿಕರು ಅಥವ ತತ್ವಜ್ಞಾನಿಗಳು ಹಾಗೂ ಸಾಧುಸಂತರು ಮೊದಲನೆಯ ವರ್ಗಕ್ಕೆ ಸೇರಿದವರಾಗಿದ್ದು ಅವರು ತಮ್ಮ ವಿದ್ಯಾಬುದ್ಧಿಗಳಿಂದ ಸಮಾಜದಲ್ಲಿ ಹೆಚ್ಚಿನ ಗೌರವ ಪಡೆದಿದ್ದರು. ಎರಡನೆಯ ವರ್ಗವು ಬಹುಸಂಖ್ಯಾತರಾದ ರೈತರ ಅಥವ ಒಕ್ಕಲಿಗರ ವರ್ಗವಾಗಿತ್ತು. ಪಶುಪಾಲಕರು ಮತ್ತು ಬೇಟೆಗಾರರು ಮೂರನೆಯ ವರ್ಗಕ್ಕೆ ಸೇರಿದ್ದರು. ವರ್ತಕರು ಮತ್ತು ಕುಶಲ ಕರ್ಮಿಗಳು ನಾಲ್ಕನೆ ವರ್ಗಕ್ಕೆ ಸೇರಿದ್ದರು. ರಾಜ್ಯದ ರಕ್ಷಣೆಯ ಆಧಾರಸ್ಥಂಭಗಳಾಗಿದ್ದ ಸೈನಿಕರು ಐದನೆ ವರ್ಗಕ್ಕೆ ಸೇರಿದ್ದರು. ಸರ್ಕಾರದ ಅಧಿಕಾರಿಗಳು ಮತ್ತು ಸದಸ್ಯರುಗಳು ಆರು ಮತ್ತು ಏಳನೆ ವರ್ಗಕ್ಕೆ ಸೇರಿದವರಾಗಿದ್ದರು. ಮೆಗಾಸ್ತನೀಸನು ಜನರ ಅಭಿರುಚಿ ಮತ್ತು ವಾಡಿಕೆಗಳ ಬಗ್ಗೆ ತನ್ನ ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದಾನೆ.

ವೇದಗಳ ಕಾಲದ ಸ್ತ್ರೀಯರ ಸ್ಥಾನಮಾನಗಳಿಗೆ ಈ ಕಾಲದ ಸ್ತ್ರೀಯರ ಸ್ಥಾನಮಾನಗಳನ್ನು ಹೋಲಿಸಿದಾಗ ಅವರ ಸ್ಥಾನಮಾನಗಳು ಇಳಿಮುಖವಾಗಿದ್ದುದಾಗಿ ಕಂಡುಬರುತ್ತದೆ. ಕೆಲವು ಸ್ತ್ರೀಯರು ದರ್ಶನ ಶಾಸ್ತ್ರಗಳನ್ನು ಕಲಿತು ಬ್ರಹ್ಮಚರ್ಯ ಜೀವನವನ್ನು ನಡೆಸುತ್ತಿದ್ದರೂ ವಿವಾಹಿತ ಸ್ತ್ರೀಯರು ಇದರಿಂದ ದೂರವಿಡಲ್ಪಟ್ಟಿದ್ದರು. ರಾಜರುಗಳು ಮತ್ತು ಶ್ರೀಮಂತರಲ್ಲಿ ಬಹುಪತ್ನಿತ್ವ ಪದ್ಧತಿಯು ಆಚರಣೆಯಲ್ಲಿತ್ತು. ಆದರೆ ಜನಸಾಮಾನ್ಯರಲ್ಲಿ ಏಕಪತ್ನಿತ್ವವು ಹೆಚ್ಚು ಆಚರಣೆಯಲ್ಲಿದ್ದ ಪದ್ಧತಿಯಾಗಿತ್ತು. ಧಾರ್ಮಿಕ ಕಾರ್ಯಗಳನ್ನು ಸತಿಪತಿಗಳು ಶ್ರದ್ಧೆಯಿಂದ ಮಾಡುತ್ತಿದ್ದರು. ಮೌರ್ಯರ ಆಸ್ಥಾನದಲ್ಲಿ ನೌಕರ ಸ್ತ್ರೀಯರೂ ಇದ್ದರೆಂದೂ ಮತ್ತು ಚಂದ್ರಗುಪ್ತಮೌರ್ಯನು ತನ್ನ ಮೈಗಾವಲಿಗಾಗಿ ಸ್ತ್ರೀಯರ ಪಡೆಯೊಂದನ್ನು ನೇಮಿಸಿಕೊಂಡಿದ್ದನೆಂದು ರಾಜನು ಬೇಟೆಗೆ ಹೊರಟಾಗ ಸ್ತ್ರೀಬೇಟೆಗಾರರು ಅವನ ಜೊತೆಯಲ್ಲಿ ಹೋಗುತ್ತಿದ್ದರೆಂದು ಮೆಗಾಸ್ತನೀಸನು ತಿಳಿಸುತ್ತಾನೆ.

ಗುಲಾಮಿ ಪದ್ಧತಿಯು ರೂಢಿಯಲ್ಲಿತ್ತು. ಸಾಮಾನ್ಯವಾಗಿ ಗುಲಾಮರು ಕೀಳುಜಾತಿಗೆ ಸೇರಿದವರಾಗಿದ್ದರು. ಯುದ್ಧದಲ್ಲಿ ಸೆರೆಸಿಕ್ಕಿದವರು, ಆರ್ಥಿಕ ಸಂಕಷ್ಟಕ್ಕೊಳಗಾದವರು ಜಾತಿಮತಗಳ ಬೇಧವಿಲ್ಲದೆ ಗುಲಾಮರಾಗಿ ತಮ್ಮನ್ನು ತಾವೇ ಮಾರಿಕೊಳ್ಳುತ್ತಿದ್ದರು. ಮೆಗಾಸ್ತನೀಸನು ಭಾರತದಲ್ಲಿ ಗುಲಾಮಪದ್ಧತಿಯು ಇರಲಿಲ್ಲವೆಂದು ಹೇಳುತ್ತಾನೆ. ಅವರನ್ನು ಪ್ರಾಚೀನ ಗ್ರೀಸ್ ಮತ್ತು ರೋಂ ದೇಶಗಳಲ್ಲಿದ್ದ ಗುಲಾಮರ ಸ್ಥಿತಿಗತಿಗಳಿಗೆ ಹೋಲಿಸಿದಾಗ ಇಲ್ಲನವರ ಸ್ಥಿತಿಯು ಉತ್ತಮವಾಗಿದ್ದುದರಿಂದ ಈ ರೀತಿ ಅಭಿಪ್ರಾಯಪಟ್ಟಿರಬಹುದೆಂದು ಹೇಳಲಾಗಿದೆ.

ಪ್ರಾಚೀನ ಕಾನೂನು ಗ್ರಂಥಗಳ ಪ್ರಕಾರ ಗುಲಾಮನ ಆಸ್ತಿಪಾಸ್ತಿಗಳು ಒಡೆಯನಿಗೆ ಸೇರಿದ್ದವು. ಗುಲಾಮನನ್ನು ಕೊಂಡುಕೊಳ್ಳುವ ಮತ್ತು ಮಾರುವ ಅಧಿಕಾರವು ಒಡೆಯನಿಗಿತ್ತು ಆದರೆ ಒಡೆಯನಿಗೆ ಗುಲಾಮನ ಜೀವದ ಮೇಲೆ ಹಕ್ಕಿರಲಿಲ್ಲ ಮತ್ತು ಮುದಿವಯಸ್ಸಿನಲ್ಲಿ ಅವನನ್ನು ಕೈಬಿಡುವಂತಿರಲಿಲ್ಲವೆಂದು ಎ.ಎಲ್. ಭಾಷಂ ಹೇಳುತ್ತಾರೆ.

ಜನರು ವಿನೋದ ಕೃತ್ಯಗಳಲ್ಲಿ ಆಸಕ್ತಿಯುಳ್ಳವರಾಗಿದ್ದರು. ಹಬ್ಬ ಹರಿದಿನಗಳು ಮತ್ತು ಜಾತ್ರೆಗಳು ಆಗಾಗ್ಗೆ ಏರ್ಪಡುತ್ತಿದ್ದವು. ರಾಜರುಗಳೂ ಕೂಡ ಅನೇಕ ರೀತಿಯ ಉತ್ಸವ ಸಮಾರಂಭಗಳನ್ನೂ ವಿನೋದ ಕೃತ್ಯಗಳನ್ನೂ ಪ್ರೋತ್ಸಾಹಿಸುತ್ತಿದ್ದರು. ಮಲ್ಲಯುದ್ಧ, ಗೂಳಿಕಾಳಗ ಮುಂತಾದವುಗಳನ್ನು ಏರ್ಪಡಿಸುತ್ತಿದ್ದರು. ಆದರೆ ಅಶೋಕನು ರಕ್ತಪಾತಯುತವಾದ ಕೆಲವು ವಿನೋದ ಕೃತ್ಯಗಳನ್ನು ರದ್ದುಗೊಳಿಸಿದನು. ರಾಜರುಗಳು ಮತ್ತು ಧನಿಕರು ಮನರಂಜನೆಯ ಕಾರ್ಯಕ್ರಮಗಳಾದ, ಸಂಗೀತ, ನೃತ್ಯ, ದೊಂಬರಾಟ, ನಾಟಕ ಪ್ರದರ್ಶನ ಮೊದಲಾದುವುಗಳನ್ನು ಪ್ರೋತ್ಸಾಹಿಸಿದ್ದರು. ಕುಡಿತ ಮತ್ತು ಜೂಜುಗಳು ವಿನೋದಗಳಾಗಿದ್ದವು. ಆದರೆ ಅವುಗಳ ಮೇಲೆ ಸರ್ಕಾರ ತೆರಿಗೆಗಳನ್ನು ವಿಧಿಸಿ ವಸೂಲಿ ಮಾಡುತ್ತಿತ್ತು. ಬೇಟೆಯು ಮತ್ತೊಂದು ವಿನೋದ ಕೃತ್ಯವಾಗಿತ್ತು.

**ಆರ್ಥಿಕ ಸ್ಥಿತಿ**

ದೇಶವು ಆರ್ಥಿಕವಾಗಿ ಸುಭಿಕ್ಷವಾಗಿದ್ದಿತೆಂದು ಸಮಕಾಲೀನ ಸಾಹಿತ್ಯಾಧಾರಗಳಿಂದ ತಿಳಿದುಬರುತ್ತದೆ. ವ್ಯವಸಾಯ ಮತ್ತು ಪಶುಪಾಲನೆಯು ಬಹುಸಂಖ್ಯಾತ ಜನರ ಮುಖ್ಯ ಕಸುಬಾಗಿದ್ದಿತು. ಸರ್ಕಾರವು ರೈತರಿಗೆ ಅನೇಕ ರೀತಿಯ ಅನುಕೂಲಗಳನ್ನು ಕಲ್ಪಿಸಿಕೊಟ್ಟಿದ್ದಿತು. ಜನರ ಆರ್ಥಿಕಾಭಿವೃದ್ಧಿಗೆ ರಾಜನು ಕೈಗೊಳ್ಳಬೇಕಾಗಿದ್ದ ಅನೇಕ ಕ್ರಮಗಳನ್ನು ಕೌಟಿಲ್ಯನ ಅರ್ಥಶಾಸ್ತ್ರವು ಉಲ್ಲೇಖಿಸುತ್ತದೆ. ಸರ್ಕಾರವು ರೈತರಿಗೆ ನೀರಾವರಿ ಸೌಕರ್ಯಗಳನ್ನು ಒದಗಿಸಿಕೊಡಲು ಧಾರಾಳವಾಗಿ ಹಣವನ್ನು ಖರ್ಚು ಮಾಡುತ್ತಿತ್ತು. ಕ್ಷಾಮ, ಪ್ರವಾಹ ಮತ್ತು ರೋಗರುಜಿನಗಳಿಂದ ಮತ್ತು ಕ್ರಿಮಿಕೀಟಗಳಿಂದ ಫಸಲಿಗೆ ಹಾನಿಯುಟಾದಾಗ ಸರ್ಕಾರವು ರೈತರಿಗೆ ಸಹಾಯ ಮಾಡುತ್ತಿತ್ತು. ಮೌರ್ಯ ಚಕ್ರವರ್ತಿಗಳು ಕೈಗಾರಿಕೆಗಳಿಗೂ ಉತ್ತೇಜನ ನೀಡಿದ್ದರು. ಮೆಗಾಸ್ತನೀಸನು ವಸ್ತುಗಳ ತಯಾರಿಕೆಯಲ್ಲಿ ಭಾರತೀಯ ಕೆಲಸಗಾರರ ಪ್ರತಿಭಾ ಶಕ್ತಿಯನ್ನು ಶ್ಲಾಘಿಸಿದ್ದಾನೆ. ಬಟ್ಟೆ ತಯಾರಿಕೆಯು ಒಂದು ಪ್ರಮುಖ ಉದ್ಯಮವಾಗಿತ್ತು. ಬನಾರಸ್ಸಿನ ರೇಷ್ಮೆ ಬಟ್ಟೆಗಳು ವಂಗ, ವತ್ಸ ಮತ್ತು ಮೈಸೂರು ಮೊದಲಾದ ಭಾಗಗಳಲ್ಲಿನ ಹತ್ತಿಬಟ್ಟೆಗಳು ಗುಣಮಟ್ಟದಲ್ಲಿ ಪ್ರಸಿದ್ಧಿಯಾಗಿದ್ದವು. ಇವುಗಳಲ್ಲದೆ ಭಾರತೀಯರು ಉತ್ತಮ ದರ್ಜೆಯ ಮಸ್ಲಿನ್ ಬಟ್ಟೆ, ಉಣ್ಣೆಯ ರಗ್ಗುಗಳು ಮತ್ತು ಜರತಾರಿ ಬಟ್ಟೆಗಳನ್ನು ಉತ್ಪಾದಿಸುತ್ತಿದ್ದರು. ನೂಲುವುದು ಮತ್ತು ನೇಯುವುದನ್ನು ಕೆಲವರು ತಮ್ಮ ಮುಖ್ಯ ವೃತ್ತಿಯನ್ನಾಗಿ ಮಾಡಿಕೊಂಡಿದ್ದರು. ಕರಕುಶಲ ಕರ್ಮಿಗಳು ಮತ್ತು ಕೆಲಸಗಾರರು ಶ್ರೇಣಿ ಅಥವ ವೃತ್ತಿ ಸಂಘಗಳನ್ನು ಸ್ಥಾಪಿಸಿಕೊಂಡಿದ್ದರು. ಗೃಹೋಪಕರಣಗಳ ತಯಾರಿಕೆ, ದಂತದ ಕೆಲಸ ಮಾಡುವುದು. ಬಣ್ಣ ಹಾಕುವುದು, ದೋಣಿಗಳನ್ನು ಮತ್ತು ಹಡಗುಗಳನ್ನು ನಿರ್ಮಿಸುವುದು, ಗಣಿ ಉದ್ಯಮ ತಾಮ್ರ

ಹಿತ್ತಾಳೆ ಮೊದಲಾದ ಲೋಹಗಳಿಂದ ಪಾತ್ರೆ ಮೊದಲಾದವುಗಳನ್ನು ತಯಾರಿಸುವುದು. ಆಭರಣಗಳ ತಯಾರಿಕೆ ಗಾಡಿಗಳ ಮತ್ತು ರಥಗಳ ನಿರ್ಮಾಣ, ಔಷಧಿಗಳ ತಯಾರಿಕೆ ಸುಗಂಧ ದ್ರವ್ಯಗಳನ್ನು ತಯಾರಿಸುವುದು ಮೊದಲಾದವುಗಳು ಜನರ ಇತರ ಕೈಗಾರಿಕೆಗಳಾಗಿದ್ದವು.

**ವ್ಯಾಪಾರ ವಾಣಿಜ್ಯ**

ಮೌರ್ಯ ಚಕ್ರವರ್ತಿಗಳು ವ್ಯಾಪಾರಕ್ಕೂ ಹೆಚ್ಚಿನ ಪ್ರೋತ್ಸಾಹ ಕೊಟ್ಟಿದ್ದರು. ವ್ಯಾಪಾರವು ಆಂತರಿಕವಾಗಿಯೆ ಅಲ್ಲದೆ ವಿದೇಶಗಳೊಂದಿಗೂ ಬಿರುಸಾಗಿ ನಡೆಯುತ್ತಿತ್ತು. ಗ್ರೀಕರ ಸಂಪರ್ಕದಿಂದಾಗಿ ಪಾಶ್ಚಾತ್ಯ ಜಗತ್ತಿನೊಂದಿಗೆ ಭಾರತವು ಹೆಚ್ಚಿನ ವ್ಯಾಪಾರ ಸಂಪರ್ಕವನ್ನು ಬೆಳೆಸಿಕೊಳ್ಳುವಂತಾಯಿತು. ಪಾಶ್ಚಾತ್ಯ ರಾಷ್ಟ್ರಗಳಿಂದ ಅಪಾರ ಐಶ್ವರ್ಯವು ಭಾರತಕ್ಕೆ ಹರಿದು ಬಂದಿತು. ರಗ್ಗುಗಳು ಚರ್ಮದ ಪದಾರ್ಥಗಳು, ಬೆಳ್ಳಿ ಬಂಗಾರ, ವಜ್ರ ಮುತ್ತುರತ್ನಗಳು, ಮಸ್ಲಿನ್ ಬಟ್ಟೆ, ಹವಳಗಳು, ನೀಲಿ ಮತ್ತು ಸಾಂಬಾರ ಪದಾರ್ಥಗಳು ಮೊದಲಾದವುಗಳಿಗೆ ಹೊರದೇಶಗಳಲ್ಲಿ ಹೆಚ್ಚಿನ ಬೇಡಿಕೆಯಿದ್ದಿತು. ನದಿಗಳ ಮತ್ತು ರಸ್ತೆಗಳ ಮೂಲಕ ವ್ಯಾಪಾರದ ವಸ್ತುಗಳನ್ನು ಸಾಗಿಸಲು ವ್ಯವಸ್ಥೆ ಮಾಡಲಾಗಿತ್ತು. ಸರ್ಕಾರವು ವ್ಯಾಪಾರದ ಅನುಕೂಲಕ್ಕಾಗಿ ದೊಡ್ಡ ದೊಡ್ಡ ಹೆದ್ದಾರಿಗಳನ್ನು ನಿರ್ಮಿಸಿದ್ದಲ್ಲದೆ ವರ್ತಕರಿಗೆ ದರೋಡೆ ಮುಂತಾದವುಗಳ ವಿರುದ್ಧ ರಕ್ಷಣಾ ಏರ್ಪಾಟುಗಳನ್ನೂ ಮಾಡಿದ್ದಿತು. ಪದಾರ್ಥಗಳ ಸಾಗಾಣಿಕೆಯಲ್ಲಿ ಹಡಗುಗಳು, ದೋಣಿಗಳು, ರಥಗಳು, ಗಾಡಿಗಳು, ಆನೆ, ಒಂಟೆ ಮತ್ತು ಹೇಸರಗತ್ತೆಗಳನ್ನು ಉಪಯೋಗಿಸುತ್ತಿದ್ದರು. ಸರ್ಕಾರವು ವ್ಯಾಪಾರ ವಾಣಿಜ್ಯಗಳ ಮೇಲೆ ಹತೋಟಿಯನ್ನು ಹೊಂದಿರಲು ಪ್ರತ್ಯೇಕ ಇಲಾಖೆಯನ್ನು ಸ್ಥಾಪಿಸಿದ್ದಿತು. ವರ್ತಕರು ಉಪಯೋಗಿಸುತ್ತಿದ್ದ ಅಳತೆ ಮತ್ತು ತೂಕದ ಮಾನಗಳನ್ನು ಸರ್ಕಾರವು ಆಗಾಗ್ಗೆ ಪರಿಶೀಲಿಸುತ್ತಿತ್ತು. ಪಾಟಲೀಪುತ್ರ, ಕೌಸಾಂಬಿ ಉಜ್ಜಯಿನಿ ಬೆನಾರಿಸ್ ಮತ್ತು ತಕ್ಷಶಿಲೆ ಮೊದಲಾದ ನಗರಗಳು ಪ್ರಮುಖ ವ್ಯಾಪಾರ ಕೇಂದ್ರಗಳಾಗಿದ್ದವು. ವ್ಯಾಪಾರದಲ್ಲಿ ನಾಣ್ಯಗಳು ಬಳಸುತ್ತಿದ್ದರು. ಭಾರತೀಯ ವಸ್ತುಗಳನ್ನು ರೋಮಿನ ವರ್ತಕರು ಚಿನ್ನದ ನಾಣ್ಯಗಳನ್ನು ಕೊಟ್ಟುಕೊಳ್ಳುತ್ತಿದ್ದರೆಂದೂ ಮತ್ತು ಇದರಿಂದ ಭಾರತಕ್ಕೆ ರೋಂ ದೇಶದಿಂದ ಅಪಾರ ಐಶ್ವರ್ಯವು ಹರಿದುಬರುತ್ತಿದ್ದಿತೆಂದು ರೋಮನ್ ಇತಿಹಾಸಕಾರ ಪ್ಲಿನಿ ಹೇಳುತ್ತಾನೆ.

**ಧಾರ್ಮಿಕ ಸ್ಥಿತಿ**

ವೈದಿಕ ಧರ್ಮವು ಬಹುಸಂಖ್ಯಾತ ಜನರ ಧರ್ಮವಾಗಿತ್ತು. ಅದು ಬಹಳ ಪ್ರಾಚೀನ ಧರ್ಮವಾಗಿದ್ದು ಆಳವಾಗಿ ಬೇರೂರಿದ್ದಿತು. ಇಂದ್ರ ವರುಣ ದೇವರುಗಳ ಪೂಜೆಯ ಜೊತೆಗೆ ಜನರು ಕೆಲವು ಹೊಸ ದೇವರುಗಳನ್ನು ಪೂಜಿಸತೊಡಗಿದರು. ವಿಗ್ರಹಾರಾಧನೆಯು ರೂಢಿಯಲ್ಲಿತ್ತು. ಶಿವ, ಸ್ಕಂಧ ಮೊದಲಾದ ದೇವರುಗಳ ವಿಗ್ರಹಗಳನ್ನು ಕೆತ್ತಿ ಮಾರಾಟ ಮಾಡಲಾಗುತ್ತಿತ್ತು. ಶಿವ, ಸ್ಕಂಧ ಮೊದಲಾದ ದೇವರುಗಳಿಗೆ ನಿರ್ಮಿಸಲಾಗಿದ್ದ ದೇವಾಲಯಗಳಲ್ಲಿ ಕುಬೇರ, ಆಶ್ವಿನಿ ದೇವತೆಗಳು, ಲಕ್ಷ್ಮಿ ಮತ್ತಿತರ ದೇವತೆಗಳ ವಿಗ್ರಹಗಳನ್ನೂ ಇಟ್ಟು ಪೂಜಿಸುತ್ತಿದ್ದರು. ಪುಣ್ಯ ಕ್ಷೇತ್ರಗಳಿಗೆ ಭೇಟಿಕೊಡುವುದು ಹಿಂದೂಗಳ ಧರ್ಮದ ಒಂದು ನಿಯಮವೇ ಆಗಿದ್ದರಿಂದ ಜನರು

ಪವಿತ್ರ ಸ್ಥಳಗಳಿಗೆ ಯಾತ್ರೆ ಹೋಗುತ್ತಿದ್ದರು. ನದಿಗಳು, ನಾಗಪೂಜೆ, ವೃಕ್ಷಪೂಜೆ, ಪರ್ವತಗಳನ್ನು ಪೂಜಿಸುತ್ತಿದ್ದರು. ಮಾಯಮಂತ್ರ, ಶಕುನ ಭವಿಷ್ಯ ಹಾಗೂ ಕನಸುಗಳಲ್ಲಿ ಜನರು ನಂಬಿಕೆಯಿಟ್ಟಿದ್ದರು. ಯಜ್ಞಯಾಗಾದಿಗಳನ್ನು ಮತ್ತು ಧಾರ್ಮಿಕ ವ್ರತಾಚರಣೆಗಳನ್ನು ಮಾಡುತ್ತಿದ್ದರು, ಆದರೆ ಕ್ರಿ.ಪೂ. ಆರನೇ ಶತಮಾನದಲ್ಲಿ ಏಳಿಗೆ ಹೊಂದಿದ ಜೈನಮತ ಮತ್ತು ಬೌದ್ಧಮತಗಳ ಪ್ರಭಾವಕ್ಕೊಳಗಾದ ಬ್ರಾಹ್ಮಣ ಧರ್ಮವು ತನ್ನಲ್ಲಿ ಕೆಲವು ಸುಧಾರಣೆಗಳನ್ನು ಮಾಡಿಕೊಳ್ಳಲು ಬಯಸಿತು. ಇಂತಹ ಬದಲಾದ ಪರಿಸ್ಥಿತಿಗೆ ತಕ್ಕಂತೆ ಹೊಂದಿಕೊಂಡು ವೈದಿಕ ಧರ್ಮವು ಅವನತಿ ಹೊಂದದಂತೆ ಕಾಪಾಡಿಕೊಂಡಿತು. ವಿಷ್ಣು ಮತ್ತು ಶಿವನ ಆರಾಧಕರು ಪ್ರತಿಪಾದಿಸಿದ ಹೊಸ ಮೌಲ್ಯಗಳು ಅನೇಕ ಜನರನ್ನು ಹೊಸ ಮತಗಳ ಕಡೆಗೆ ಒಲಿಯದಂತೆ ತಡೆಹಿಡಿದವು. ವೈಷ್ಣವ ಮತ್ತು ಶೈವ ಪಂಥಗಳು ಜನರ ಮನಸ್ಸಿನ ಮೇಲೆ ಹೆಚ್ಚು ಪ್ರಭಾವ ಬೀರಿದವು. ಧಾರ್ಮಿಕ ಕ್ಷೇತ್ರದಲ್ಲಿ ದಂಗೆಯನ್ನೆಬ್ಬಿಸಿದ್ದ ಜೈನಮತ ಮತ್ತು ಬೌದ್ಧಮತಗಳು ಸಹ ಪ್ರಭಾವಪೂರಿತವಾಗಿದ್ದ ವೈಷ್ಣವ ಮತ್ತು ಶೈವ ಧರ್ಮಗಳ ಪ್ರಭಾವಕ್ಕೊ ಒಳಗಾದವು. ಜೈನಮತವು ಔಧ್, ಬಿಹಾರ ಮತ್ತು ಒರಿಸ್ಸ ಪ್ರದೇಶಗಳಲ್ಲಿ ಜನಪ್ರಿಯವಾಗಿತ್ತು. ಜೈನರ ಸಂಪ್ರದಾಯದ ಪ್ರಕಾರ ಚಂದ್ರಗುಪ್ತ ಮೌರ್ಯನು ತನ್ನ ಆಳ್ವಿಕೆಯ ಕೊನೆಯ ಭಾಗದಲ್ಲಿ ಸಂನ್ಯಾಸಿಯಾಗಿ ದಕ್ಷಿಣದ ಶ್ರವಣಬೆಳಗೊಳಕ್ಕೆ ಬಂದು ಇಲ್ಲಿಯೆ ಕಾಲವಾದನೆಂದು ತಿಳಿದುಬರುತ್ತದೆ. ಮೌರ್ಯರ ಮತ್ತೊಬ್ಬ ದೊರೆ ಸಾಂಪ್ರತಿಯು ಜೈನನಾಗಿದ್ದನು. ಮೌರ್ಯ ದೊರೆಗಳು ಧಾರ್ಮಿಕ ವಿಷಯಗಳಲ್ಲಿ ಸಹಿಷ್ಣುಗಳಾಗಿದ್ದು ಎಲ್ಲ ಮತದವರಿಗೂ ಮತ್ತು ಪಂಥದವರಿಗೂ ಪ್ರೋತ್ಸಾಹ ನೀಡಿದ್ದರು. ಜೈನರ ಅಜೀವಕ ಪಂಥದವರು ಬಿಂದುಸಾರ ಅಶೋಕ ಮತ್ತು ದಶರಥನಿಂದ ಸಹಾಯ ಪಡೆದಿದ್ದರು. ಬೌದ್ಧಮತವು ಅಶೋಕನು ನೀಡಿದ ವಿಶೇಷ ಪ್ರೋತ್ಸಾಹದಿಂದಾಗಿ ವಿಶ್ವಮಾನ್ಯತೆಗಳಿಸಿಕೊಂಡಿದ್ದಿತು.

**ಕಲೆ ಮತ್ತು ಸಾಹಿತ್ಯ**

ಮೌರ್ಯ ಸಾಮ್ರಾಜ್ಯದ ಏಳಿಗೆಯೊಂದಿಗೆ ಭಾರತೀಯ ಶಿಲ್ಪಕಲೆ ಮತ್ತು ವಾಸ್ತುಶಿಲ್ಪದ ಇತಿಹಾಸದಲ್ಲಿ ನೂತನ ಅಧ್ಯಾಯವೊಂದು ಆರಂಭವಾಯಿತು. ಮೌರ್ಯರ ಕಾಲಕ್ಕೆ ಹಿಂದಿನ ವಾಸ್ತುಶಿಲ್ಪ ಮತ್ತು ಶಿಲ್ಪಕಲಾಕೃತಿ ಬಗ್ಗೆ ಹೆಚ್ಚಿನ ಮಾಹಿತಿಗಳು ದೊರೆತಿರುವುದಿಲ್ಲ. ಸಿಂಧೂಕಣಿವೆಯ ಸಂಸ್ಕೃತಿಯು ಅವನತಿ ಹೊಂದಿದ ಕಾಲದಿಂದ ಮೌರ್ಯ ಸಾಮ್ರಾಜ್ಯದ ಸ್ಥಾಪನೆಯವರೆಗಿನ ನಡುವಿನ ಶತಮಾನಗಳಲ್ಲಿ ಭಾರತೀಯ ಕಲೆಯ ವಿಷಯವಾಗಿ ಹೆಚ್ಚಿನ ವಿಷಯಗಳು ತಿಳಿದುಬಂದಿಲ್ಲ. ಈ ಕಾಲದ ಪುರಾಣ ಇತಿಹಾಸ ಕೃತಿಗಳಲ್ಲಿ ಹಾಗೂ ಇತರ ಸಾಹಿತ್ಯ ಕೃತಿಗಳಲ್ಲಿ ಸುಂದರವಾದ ಅರಮನೆಗಳ ಹಾಗೂ ಮತ್ತಿತರ ಕಟ್ಟಡಗಳ ಉಲ್ಲೇಖಗಳು ಕಂಡುಬಂದರೂ ಅವುಗಳ ಭಗ್ನಾವಶೇಷಗಳು ಸಂಶೋಧಕರಿಗೆ ದೊರೆತಿರುವುದಿಲ್ಲ. ಆದಾಗ್ಯೂ ಮೌರ್ಯರ ಕಾಲಕ್ಕಿಂತ ಹಿಂದೆ ಭಾರತದಲ್ಲಿ ಕಲೆಯು ಬೆಳೆದು ವಿಕಾಸವಾಗಿರಲಿಲ್ಲವೆಂದು ಭಾವಿಸಲಾಗದು. ಬಹುಶಃ ಆ ಕಾಲದಲ್ಲಿ ಕಟ್ಟಡಗಳ ನಿರ್ಮಾಣಕ್ಕೆ ಇಟ್ಟಿಗೆ ಮತ್ತು ಮರವನ್ನು ಹೆಚ್ಚಾಗಿ ಉಪಯೋಗಿಸುತ್ತಿದ್ದುದರಿಂದ ಅವುಗಳು ನಾಶವಾಗಿ ಕಾಲಗರ್ಭದಲ್ಲಿ ಅಡಗಿಹೋಗಿರಬಹುದೆಂದು ಅಭಿಪ್ರಾಯ ಪಡಬಹುದು. ಮೌರ್ಯಚಕ್ರವರ್ತಿಗಳು ಕಲಾಪ್ರೇಮಿಗಳಾಗಿದ್ದು, ಕಲಾಕಾರರಿಗೆ,

ಎಂಜಿನಿಯರುಗಳಿಗೆ ಮತ್ತು ವಾಸ್ತುಶಿಲ್ಪಕಾರರಿಗೆ ಹೆಚ್ಚಿನ ಪ್ರೋತ್ಸಾಹ ನೀಡಿದ್ದರು. ಮರದಿಂದ ನಿರ್ಮಿಸಲಾಗಿದ್ದ ಚಂದ್ರಗುಪ್ತನ ಭವ್ಯವಾದ ಅರಮನೆಯನ್ನು ಮೆಗಾಸ್ತನೀಸನು ಪ್ರಸ್ತಾಪಿಸಿದ್ದಾನೆ. ಅಂತೆಯೆ ಕ್ರಿ.ಶ. 5ನೇ ಶತಮಾನದಲ್ಲಿ ಭಾರತಕ್ಕೆ ಭೇಟಿ ಕೊಟ್ಟಿದ್ದ ಚೀನಿಯಾತ್ರಿಕ ಫಾಹಿಯಾನನು ಮೌರ್ಯಕಾಲದ ಅರಮನೆಗಳ ಬಗ್ಗೆ ಪ್ರಸ್ತಾಪಿಸಿರುವನು. ಅಶೋಕ ಚಕ್ರವರ್ತಿಯ ಕಾಲದಲ್ಲಿ ಮೌರ್ಯರ ಕಲೆಯು ಪರಾಕಾಷ್ಟತೆಯನ್ನು ಮುಟ್ಟಿತು. ಸ್ಮಾರಕಗಳ ನಿರ್ಮಾಣದಲ್ಲಿ ಶಿಲೆಯನ್ನು ಉಪಯೋಗಿಸುವುದನ್ನು ಅಶೋಕನು ಮೊದಲ ಬಾರಿಗೆ ಜಾರಿಗೆ ತಂದನು. ಅಶೋಕನ ಕಾಲದಲ್ಲಿ ನಿರ್ಮಿತವಾದ ಕಲಾಕೃತಿಗಳಲ್ಲಿ ಕೆಲವು ಮಾತ್ರ ಉಳಿದುಬಂದಿವೆ.

ಅಶೋಕನ ಕಾಲದಲ್ಲಿ ಕಟ್ಟಲಾದ ಸ್ಮಾರಕಗಳನ್ನು ಮುಖ್ಯವಾಗಿ ಸ್ತೂಪಗಳು, ಗುಹಾಲಯಗಳು, ಸ್ಥಂಭಗಳು ಮತ್ತು ಅರಮನೆಗಳು ಎಂಬುದಾಗಿ ನಾಲ್ಕು ವರ್ಗಗಳನ್ನಾಗಿ ವಿಂಗಡಿಸಲಾಗಿದೆ. ಇವುಗಳಲ್ಲಿ ಮೊದಲನೆಯದಾದ ಸ್ತೂಪಗಳು ಕಲ್ಲು ಮತ್ತು ಇಟ್ಟಿಗೆಗಳಿಂದ ವೃತ್ತಾಕಾರವಾಗಿ ಗುಮ್ಮಟದ ರೀತಿಯಲ್ಲಿ ನಿರ್ಮಿತವಾಗಿರುವ ಭವ್ಯಮಂದಿರಗಳಾಗಿವೆ. ಇವುಗಳು ಮಹಾವೀರ, ಬುದ್ಧ ಮತ್ತು ಬೋಧಿಸತ್ವರ ಪವಿತ್ರ ಜೀವನಕ್ಕೆ ಸಂಬಂಧಪಟ್ಟ ಕಟ್ಟಗಳಾಗಿದ್ದು ಅವುಗಳ ತಳಭಾಗದಲ್ಲಿ ಅವರ ಅವಶೇಷಗಳನ್ನು ಇಡಲಾಗಿದೆ. ಅಶೋಕನು ತನ್ನ ಸಾಮ್ರಾಜ್ಯದ ವಿವಿಧ ಭಾಗಗಳಲ್ಲಿ 84000 ಸ್ತೂಪಗಳನ್ನು ನಿರ್ಮಿಸಿದ್ದನೆಂಬುದಾಗಿ ಪ್ರತೀತಿಯಿದೆ. ಅಶೋಕನ ಕಾಲದಲ್ಲಿ ಕಟ್ಟಲಾಗಿರುವ ಸ್ತೂಪಗಳಲ್ಲಿ ಸಾಂಚಿಸ್ತೂಪವು ಹೆಚ್ಚು ಪ್ರಸಿದ್ಧಿಯಾದುದು. ಇದು ಮಧ್ಯಪ್ರದೇಶದ ಭೂಪಾಲ ನಗರಕ್ಕೆ ಸಮೀಪದಲ್ಲಿದೆ. ಇದು ಮೂಲತಃ ಇಟ್ಟಿಗೆಗಳಿಂದ ಕಟ್ಟಲ್ಪಟ್ಟಿದ್ದು ಅನಂತರ ಅದಕ್ಕೆ ಕಟಕಟ್ಟಿಯನ್ನು ಮತ್ತು ಮಹಾದ್ವಾರಗಳನ್ನು ನಿರ್ಮಿಸಿ ವಿಸ್ತರಿಸಲಾಗಿದೆ.

**ಗುಹಾಲಯಗಳು**

ಜೈನ ಮತ್ತು ಬೌದ್ಧಭಿಕ್ಷುಗಳ ವಸತಿಗಾಗಿ ಗುಹಾಲಯಗಳನ್ನು ನಿರ್ಮಿಸುವ ಕೆಲಸವು ಅಶೋಕ ಚಕ್ರವರ್ತಿಯ ಕಾಲದಲ್ಲಿ ಆರಂಭವಾಯಿತು. ಇಂತಹ ಗುಹೆಗಳನ್ನು ಅಶೋಕನೇ ಅಲ್ಲದೆ ಅವನ ಮೊಮ್ಮಗನಾದ ದಶರಥನೂ ನಿರ್ಮಿಸಿದ್ದನು. ಬೌದ್ಧ ಗಯೆಗೆ ಸಮೀಪದಲ್ಲಿ ಪ್ರಶಾಂತವಾದ ಬಾರಾಬರ್ ಬೆಟ್ಟಗಳಲ್ಲಿ ಅಶೋಕನು ಶಿಲಾಬಂಡೆಗಳಲ್ಲಿ ಕೊರೆಯಿಸಿರುವ ಗುಹಾಲಯಗಳು ಮೌರ್ಯರ ಕಾಲದ ಶಿಲ್ಪಕಲಾಕಾರರ ಕಲಾಕೌಶಲಕ್ಕೆ ಅತ್ಯುತ್ತಮ ನಿದರ್ಶನಗಳಾಗಿವೆ.

**ಸ್ತಂಭಗಳು**

ಮೌರ್ಯರ ಕಾಲದ ಶಿಲ್ಪಕಲಾಕಾರರ ರಚನಾತ್ಮಕ ಕೆಲಸವೆಂದರೆ ಏಕಶಿಲೆಯಲ್ಲಿ ಸ್ತಂಭಗಳನ್ನು ಕಡೆದು ನಿಲ್ಲಿಸಿರುವುದು ಏಕಶಿಲಾಸ್ತಂಭಗಳ ನಿರ್ಮಾಣ ಕಾರ್ಯವನ್ನು ಆರಂಭಿಸಿದವನೂ ಅಸೋಕನೇ. ಆದರೆ ಇವುಗಳ ಸಂಖ್ಯೆಯು ನಿರ್ಧಿಷ್ಟವಾಗಿ ತಿಳಿದುಬಂದಿಲ್ಲ. ಅಶೋಕನು ತನ್ನ ಧರ್ಮ ಪ್ರಸಾರಕ್ಕಾಗಿ ಶಿಲಾಸ್ತಂಭಗಳ ಮೇಲೆ ತನ್ನ ಆದೇಶಗಳನ್ನು ಕೆತ್ತಿಸಿ ತನ್ನ ಸಾಮ್ರಾಜ್ಯದಾದ್ಯಂತ ಸ್ಥಾಪಿಸಿದ್ದನು. ಇವುಗಳಲ್ಲಿ ಅಲಹಾಬಾದ್ ಲೌರಿಯ ಮತ್ತು ನಂದನ್‌ಘರ್‌ಗಳಲ್ಲಿ ಸ್ಥಾಪಿಸಲಾಗಿರುವ ಸ್ತಂಭಗಳು

ಹೆಚ್ಚು ಪ್ರಸಿದ್ಧಿಪಡೆದಿವೆ. ಈ ಶಿಲಾಸ್ತಂಭಗಳ ಮೇಲ್ಭಾಗವನ್ನು ಅಲಂಕರಿಸಿರುವ ಬೋದಿಗೆಗಳು ಏಕಶಿಲೆಯಿಂದ ನಿರ್ಮಿತವಾಗಿದ್ದು ಶಿಲ್ಪಕಲೆಯಿಂದ ಕೂಡಿವೆ. ಸಾರನಾಥದಲ್ಲಿರುವ ಸ್ತಂಭದ ಮೇಲಿರುವ ಬೋದಿಗೆಯು ಹೆಚ್ಚು ಆಕರ್ಷಣೀಯವಾಗಿದೆ. ಒಂದರ ಹಿಂಭಾಗವನ್ನು ಮತ್ತೊಂದು ಒರಗಿಕೊಂಡು ನಿಂತಿರುವ ನಾಲ್ಕು ಸಿಂಹಗಳ ಚಿತ್ರವು ಮತ್ತು ಅವುಗಳ ಪೀಠಭಾಗದ ಚೌಕಟ್ಟಿನ ಮೇಲೆ ನಟ್ಟನಡುವೆ ಕೆತ್ತಲಾಗಿರುವ ಧರ್ಮ ಚಕ್ರವೂ ಮತ್ತು ಅದರ ಅಕ್ಕಪಕ್ಕಗಳಲ್ಲಿ ಕೆತ್ತಲಾಗಿರುವ ಪ್ರಾಣಿಗಳ ಚಿತ್ರಗಳು ಉನ್ನತಮಟ್ಟದ ಕಲಾಕೌಶಲವನ್ನು ಪ್ರದರ್ಶಿಸುತ್ತವೆ. ಕಲಾವಿಮರ್ಶಕರಾದ ವಿನ್ಸೆಂಟ್ ಸ್ಮಿತ್‌ರು ಮೌರ್ಯರ ಕಾಲದ ವಾಸ್ತುಶಿಲ್ಪ ಕಲೆಯನ್ನು ಶ್ಲಾಘಿಸಿರುವುದಲ್ಲದೆ ಸಾರನಾಥದಲ್ಲಿನ ಸ್ತಂಭದ ಮೇಲಿನ ಬೋದಿಗೆಯಲ್ಲಿ ಕೆತ್ತಲಾಗಿರುವ ಪ್ರಾಣಿಗಳ ಚಿತ್ರಗಳ ಕಲಾಕೌಶಲಕಾರರ ಸೌಂದರ್ಯಾಭಿರುಚಿಯನ್ನು ಪ್ರಶಂಸಿಸಿ ಇದಕ್ಕೆ ಸರಿಸಮಾನವಾದ ಕೆಲಸವು ಈ ಕ್ಷೇತ್ರದಲ್ಲಿ ಬೇರೆ ಯಾವ ದೇಶದಲ್ಲೂ ಕಂಡುಬರುವುದಿಲ್ಲವೆಂದು ಅಭಿಪ್ರಾಯಪಟ್ಟಿದ್ದಾರೆ. 1905ರಲ್ಲಿ ಪತ್ತೆಹಚ್ಚಲ್ಪಟ್ಟ ಸಾರನಾಥ ಸ್ತಂಭವು ಅಶೋಕನ ಕಾಲದ ಶಿಲ್ಪಕಲಾಕಾರರ ಅತ್ಯುನ್ನತ ಕೃತಿಯಾಗಿದ್ದು ಸೌಂದರ್ಯದಲ್ಲಿ ಎಣೆಯಿಲ್ಲದಾಗಿದೆ. ಸ್ತಂಭದ ಬೋದಿಗೆಯ ಮೇಲೆ ಕೆತ್ತಲ್ಪಟ್ಟಿರುವ ಪ್ರಾಣಿಗಳ ಚಿತ್ರಗಳು ಸಜೀವವಾಗಿವೆಯೋ ಎಂಬಂತೆ ಕೆತ್ತಲ್ಪಟ್ಟಿವೆ. ಅಶೋಕ ಚಕ್ರವರ್ತಿಯ ಹೆಸರನ್ನು ಅಮರಗೊಳಿಸಿರುವ ಸಾರನಾಥ ಸ್ತಂಭವು ಬುದ್ಧನ ಧರ್ಮಚಕ್ರ ಪ್ರವರ್ತನದ ಪ್ರಥಮ ಸಂದೇಶದ ಚಿರಸ್ಮರಣೆಗಾಗಿ ನಿರ್ಮಿಸಲ್ಪಟ್ಟಿದುದಾಗಿದೆ. ಕೆಲವು ಇತಿಹಾಸಕಾರರು ಮೌರ್ಯರ ಕಲೆಯಲ್ಲಿ ಪರ್ಶಿಯನ್ನರ ಕಲೆಯ ಪ್ರಭಾವವಿರುವುದಾಗಿ ಅಭಿಪ್ರಾಯಪಟ್ಟಿರುತ್ತಾರೆ.

**ಅರಮನೆಗಳು ಮತ್ತಿತರ ಕಟ್ಟಡಗಳು**

ಮೌರ್ಯ ಚಕ್ರವರ್ತಿಗಳು ರಾಜಧಾನಿ ಪಾಟಲಿಪುತ್ರದಲ್ಲಿ ಭವ್ಯವೂ ಮತ್ತು ಸುಂದರವೂ ಆದ ಅರಮನೆಗಳನ್ನು ಕಟ್ಟಿಸಿದ್ದರು. ಮೆಗಾಸ್ತನೀಸ್ ಮತ್ತಿತರ ಗ್ರೀಕ್ ಬರಹಗಾರರು ಚಂದ್ರಗುಪ್ತಮೌರ್ಯನ ಅರಮನೆಯು ಅತ್ಯಂತ ಶೋಭಾಯಮಾನವಾಗಿದ್ದು ಪರ್ಶಿ ಪೋಲೀಸ್‌ನಲ್ಲಿದ್ದ ಅರಮನೆಯನ್ನು ಮೀರಿಸುತ್ತಿದ್ದಿತೆಂದು ಅಭಿಪ್ರಾಯಪಟ್ಟಿದ್ದಾರೆ. ಅಶೋಕ ಚಕ್ರವರ್ತಿಯು ಸಹ ಪಾಟಲೀಪುತ್ರದಲ್ಲಿ ಅರಮನೆಯನ್ನು ನಿರ್ಮಿಸಿದ್ದನೆಂದು ಮತ್ತು ಅದು ಎಣೆಯಿಲ್ಲದ ಸೌಂದರ್ಯದಿಂದ ಕೂಡಿದ್ದಿತೆಂದು ಮತ್ತು ಅದು ದೇವತೆಗಳ ನಿರ್ಮಾಣವೇ ಹೊರತು ಮಾನವ ನಿರ್ಮಿತವಲ್ಲವೆಂದು ಕ್ರಿ.ಶ. ಐದನೇ ಶತಮಾನದಲ್ಲಿ ಗುಪ್ತರ ಆಸ್ಥಾನಕ್ಕೆ ಭೇಟಿನೀಡಿದ್ದ ಚೀನಿಯಾತ್ರಿಕ ಫಾಹಿಯಾನನು ಪ್ರಶಂಸಿದ್ದಾನೆ. ಆದರೆ ಈ ಅರಮನೆಗಳು ಮರ ಮತ್ತು ಇಟ್ಟಿಗೆಗಳಿಂದ ನಿರ್ಮಾಣವಾಗಿದ್ದುದರಿಂದ ಕಾಲಾನುಕ್ರಮದಲ್ಲಿ ಹಾಳಾಗಿ ಹೋಗಿ ಭೂಗರ್ಭದಲ್ಲಿ ಅಡಗಿಹೋಗಿವೆ. ಇತ್ತೀಚೆಗೆ ಪ್ರಾಕ್ತನ ಶಾಸ್ತ್ರ ಇಲಾಖೆಯವರು ತಮ್ಮ ಸಂಶೋಧನೆಗಳಿಂದ ಮೌರ್ಯರ ಕಾಲದ ಅನೇಕ ಕಟ್ಟಡಗಳನ್ನು ಬೆಳಕಿಗೆ ತಂದಿದ್ದಾರೆ.

**ಸಾಹಿತ್ಯ**

ಮೌರ್ಯರ ಕಾಲದಲ್ಲಿ ರಚಿತವಾದ ಸಾಹಿತ್ಯಕೃತಿಗಳು ಇತಿಹಾಸಕಾರರಿಗೆ

ಹೆಚ್ಚಿನ ಸಂಖ್ಯೆಯಲ್ಲಿ ಲಬ್ಧವಾಗಿಲ್ಲ, ಸಂಸ್ಕೃತ ವಿದ್ವಾಂಸರು ಸಂಸ್ಕೃತ ಭಾಷೆಯಲ್ಲಿ ಧಾರ್ಮಿಕ ಮತ್ತು ಲೌಕಿಕ ಸಾಹಿತ್ಯವನ್ನೂ ಬೌದ್ಧ ಮತ್ತು ಜೈನ ವಿದ್ವಾಂಸರು ಕ್ರಮವಾಗಿ ಪಾಳೀ ಮತ್ತು ಅರ್ಧಮಾಗದಿ ಭಾಷೆಗಳಲ್ಲಿ ಧಾರ್ಮಿಕ ಸಾಹಿತ್ಯವನ್ನೂ ರಚಿಸಿದರು. ಕೌಟಿಲ್ಯನ ಅರ್ಥಶಾಸ್ತ್ರ, ಭದ್ರಬಾಹುವಿನ ಕಲ್ಪಸೂತ್ರ, ಬೌದ್ಧರ ಕಥಾವಸ್ತು ಈ ಕಾಲದಲ್ಲಿ ರಚಿತವಾದ ಗ್ರಂಥಗಳಲ್ಲಿ ಮುಖ್ಯವಾದವುಗಳು. ವ್ಯಾಕರಣಕಾರ ಕಾತ್ಯಾಯನನು ಪಾಣಿನಿಯ ಸೂತ್ರಗಳಿಗೆ ವ್ಯಾಖ್ಯಾನಗಳನ್ನು ಬಹುಶಃ ಇದೇ ಕಾಲದಲ್ಲಿ ಬರೆದಿರಬಹುದೆಂದು ಕೆಲವು ವಿದ್ವಾಂಸರು ಅಭಿಪ್ರಾಯಪಟ್ಟಿರುವರು.

**ವಿದ್ಯಾಭ್ಯಾಸ**

ಮೌರ್ಯ ಚಕ್ರವರ್ತಿಗಳು ವಿದ್ಯಾಭ್ಯಾಸಕ್ಕೂ ಹೆಚ್ಚಿನ ಪ್ರೋತ್ಸಾಹ ನೀಡಿದ್ದರು. ದೇಶದ ವಿವಿಧ ಭಾಗಗಳಲ್ಲಿ ಅಶೋಕನ ಶಾಸನಗಳು ಕಂಡುಬರುವುದರಿಂದ ಜನರಿಗೆ ಓದುವುದು ಮತ್ತು ಬರೆಯುವುದು ಗೊತ್ತಿದ್ದಿತೆಂದು ಊಹಿಸಬಹುದಾಗಿದೆ. ಈ ಶಾಸನಗಳೆಲ್ಲವೂ ಬಹಳಮಟ್ಟಿಗೆ ಬ್ರಾಹ್ಮಿ ಲಿಪಿಯಲ್ಲಿವೆ. ವಿದ್ಯಾಭ್ಯಾಸಕ್ಕಾಗಿ ಅನೇಕ ಶಾಲೆಗಳಿದ್ದವು. ಬೌದ್ಧ ವಿಹಾರಗಳು, ಜೈನರ ಸಂನ್ಯಾಸಾಶ್ರಮಗಳು ಬ್ರಾಹ್ಮಣರ ಗುರುಕುಲಗಳು ಮತ್ತು ಆಶ್ರಮಗಳಲ್ಲಿ ವಿದ್ಯೆಯನ್ನು ಕಲಿಸಲಾಗುತ್ತಿತ್ತು. ವಿದ್ಯಾಮಟ್ಟವನ್ನು ಕಾಪಾಡಿಕೊಳ್ಳಲು ಕ್ರಮಗಳನ್ನು ಕೈಗೊಳ್ಳಲಾಗಿತ್ತು. ತಕ್ಷಶಿಲೆಯು ಉನ್ನತ ವಿದ್ಯಾಭ್ಯಾಸದ ಕೇಂದ್ರವಾಗಿ ಈ ಕಾಲದಲ್ಲೂ ಮುಂದುವರಿದಿದ್ದು ವಿವಿಧ ಭಾಗಗಳಿಂದ ವಿದ್ಯಾರ್ಥಿಗಳು ಅಲ್ಲಿಗೆ ವಿದ್ಯಾರ್ಜನೆಗಾಗಿ ಬರುತ್ತಿದ್ದರು.

**ಉಪಸಂಹಾರ**

ಪ್ರಾಚೀನ ಭಾರತದ ಇತಿಹಾಸದಲ್ಲಿ ಮೌರ್ಯರ ಕಾಲವು ವೈಭವದ ಕಾಲವಾಗಿತ್ತು. ಮುಂದಿನ ಕೆಲವೇ ಶತಮಾನಗಳಲ್ಲಿ ಕಂಡುಬಂದ ಪುನರುಜ್ಜೀವಕ್ಕೆ ಸಿದ್ಧತೆಯು ಈ ಕಾಲದಿಂದಲೇ ಆರಂಭವಾಗಿ ಮುಂದೆ ವಿವಿಧ ಕ್ಷೇತ್ರಗಳಲ್ಲಿ ಜರುಗಿದ ಮಹತ್ಸಾಧನೆಗಳಿಗೆ ಮೌರ್ಯ ಸಾಮ್ರಾಜ್ಯವು ಅಡಿಪಾಯ ಹಾಕಿತು. ರಾಜಕೀಯ ಕ್ಷೇತ್ರದಲ್ಲಿ ಸುವ್ಯವಸ್ಥಿತವಾದ ಆಡಳಿತ ಪದ್ಧತಿಗೆ ಭದ್ರವಾದ ಬುನಾದಿಯು ಈ ಕಾಲದಲ್ಲಿ ಹಾಕಲ್ಪಟ್ಟು ಭಾರತವು ರಾಜಕೀಯ ಏಕತೆಯನ್ನು ಕಂಡಿತು. ಭಾರತ ಮತ್ತು ಹೊರದೇಶಗಳೊಂದಿಗೆ ವ್ಯಾಪಾರ ವಾಣಿಜ್ಯ ಮತ್ತು ಸಾಂಸ್ಕೃತಿಕ ಸಂಪರ್ಕಗಳೇರ್ಪಟ್ಟವು. ಆರ್ಥಿಕ ಕ್ಷೇತ್ರದಲ್ಲಿ ವ್ಯವಸಾಯಾಭಿವೃದ್ಧಿಯೂ ಮತ್ತು ಕೈಗಾರಿಕೆಗಳ ಬೆಳವಣಿಗೆಯು ಕಂಡುಬಂದಿತು. ಧಾರ್ಮಿಕ ಕ್ಷೇತ್ರದಲ್ಲಿ ಸಹಿಷ್ಣುತೆಯ ಮನೋಭಾವವು ನೆಲೆಗೊಂಡಿತು. ಬೌದ್ಧಧರ್ಮ ವಿಶ್ವಧರ್ಮವಾಗಿ ಮಾರ್ಪಟ್ಟಿತು. ಜೈನಮತವು ಭಾರತದ ಕೆಲವು ಭಾಗಗಳಲ್ಲಿ ವರ್ಧಿಸುತ್ತಿತ್ತು. ಬ್ರಾಹ್ಮಣ ಧರ್ಮವು ಹೊಸ ಮೌಲ್ಯಗಳನ್ನು ಮತ್ತು ಅರ್ಥಗಳನ್ನು ಸೃಷ್ಟಿಸುತ್ತಿತ್ತು. ಕಲೆ ಮತ್ತು ವಾಸ್ತುಶಿಲ್ಪ ಕ್ಷೇತ್ರಗಳಲ್ಲಿ ಅಶೋಕನ ಕಾಲದ ಭಾರತವು ಏಕ ಶಿಲಾಸ್ತಂಭಗಳು, ಗುಹಾಲಯಗಳು ಮತ್ತು ಸ್ತೂಪಗಳು ಮತ್ತಿತರ ಶಿಲ್ಪಕಲಾ ಕೃತಿಗಳಿಗೆ ಖ್ಯಾತವೆತ್ತಿತ್ತು. ಸಾಮಾಜಿಕ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಜನರು ಪ್ರಾಮಾಣಿಕತೆ ಘನತೆ ಗಾಂಭೀರ್ಯ ಮತ್ತು ಶಾಂತಚಿತ್ತಗಳನ್ನು ವ್ಯಕ್ತಪಡಿಸಿದರು. ಬಹುಶಃ ಅಶೋಕನ ಧರ್ಮವು ಜನತೆಯ ಮೇಲೆ ಹೆಚ್ಚಿನ ಪ್ರಭಾವವನ್ನು ಬೀರಿರಬಹುದು.

## ಅಧ್ಯಾಯ-9

# ಕ್ರಿ.ಪೂ. ೨೦೦ರಿಂದ ಕ್ರಿ.ಶ. ೩೦೦ರವರೆಗಿನ ರಾಜಕೀಯ ಸ್ಥಿತಿ

ಅಶೋಕ ಚಕ್ರವರ್ತಿಯ ಮರಣಾನಂತರ ಮೌರ್ಯ ಸಾಮ್ರಾಜ್ಯದ ಅವನತಿಯು ಆರಂಭವಾಗಿ ಕ್ರಿ.ಪೂ. ಎರಡನೇ ಶತಮಾನದ ಪೂರ್ವಾರ್ಧದಲ್ಲಿ ಕಣ್ಮರೆಯಾಯಿತು. ಹಿಂದಿನ ಶತಮಾನಗಳಲ್ಲಿ ಮೌರ್ಯ ಚಕ್ರವರ್ತಿಗಳು ರೂಪಿಸಿದ್ದ ಭಾರತದ ರಾಜಕೀಯ ಏಕತೆಯು ಅಂತ್ಯಗೊಂಡು ಆದರ ಸ್ಥಾನದಲ್ಲಿ ಅನೇಕ ಸ್ವತಂತ್ರ ರಾಜ್ಯಗಳು ಉತ್ತರ ಮತ್ತು ವಾಯುವ್ಯಭಾಗದಲ್ಲೇ ಅಲ್ಲದೆ ದಕ್ಷಿಣ ಭಾರತದಲ್ಲೂ ಅಸ್ತಿತ್ವಕ್ಕೆ ಬಂದವು. ಇವುಗಳಲ್ಲಿ ಮಗಧ ರಾಜ್ಯದ ಶುಂಗರು, ವಾಯುವ್ಯ ಭಾರತದಲ್ಲಿ ಇಂಡೋಗ್ರೀಕರು, ದಕ್ಷಿಣದಲ್ಲಿ ಶಾತವಾಹನರು, ಕಳಿಂಗದಲ್ಲಿ ಚೇದಿ ಮನೆತನದವರು ಮುಖ್ಯರಾದವರು.

### ಶುಂಗ ಸಂತತಿ (ಕ್ರಿ.ಪೂ. 187ರಿಂದ 75 ರವರೆಗೆ)

ಪುಷ್ಯಮಿತ್ರ ಶುಂಗನು ಶುಂಗ ಸಂತತಿಯ ಸ್ಥಾಪಕ. ಇವನು ಭಾರದ್ವಾಜ ಗೋತ್ರಕ್ಕೆ ಸೇರಿದ ಬ್ರಾಹ್ಮಣ. ಶುಂಗ ಸಂತತಿಯವರು ಹನ್ನೆರಡು ದಶಕಗಳ ಕಾಲ ರಾಜ್ಯವಾಳಿದರು. ಇವರ ಆಳ್ವಿಕೆಯು ಮೌರ್ಯರ ನಂತರದ ಭಾರತದ ಇತಿಹಾಸದಲ್ಲಿ ಕೆಲವು ಕಾರಣಗಳಿಂದ ಪ್ರಾಮುಖ್ಯತೆಯನ್ನು ಪಡೆದಿದೆ. ಯವನರ ಧಾಳಿಗಳನ್ನು ತಡೆಗಟ್ಟಿದುದು ವೈದಿಕ ಧರ್ಮವನ್ನು ಪುನರುಜ್ಜೀವನಗೊಳಿಸಿದುದು ಮತ್ತು ಕಲೆಗೆ ಪ್ರೋತ್ಸಾಹ ನೀಡಿದುದು ಇವರ ಮುಖ್ಯ ಸಾಧನಗಳಾಗಿವೆ. ಮಧ್ಯ ಭಾರತದಲ್ಲಿನ ವಿದಿಸವು ಶುಂಗ ಸಂತತಿಯ ಕೊನೆಯ ರಾಜರುಗಳ ರಾಜಧಾನಿಯಾಗಿದ್ದು ಈ ಕಾಲದ ಕಲೆಯ ಕೇಂದ್ರವಾಗಿತ್ತು. ಅಶೋಕನ ಸಾಂಚಿ ಸ್ತೂಪದ ಸುತ್ತಲಿನ ಮಹಾದ್ವಾರಗಳಲ್ಲಿನ ಕಟಾಂಜನಗಳು ಈ ಕಾಲದಲ್ಲಿ ನಿರ್ಮಿತವಾದವು. ಅಂತೆಯೆ ಬರ್‌ಹತ್ ಸ್ತೂಪವೂ ಈ ಕಾಲದಲ್ಲಿ ನಿರ್ಮಾಣ ಗೊಂಡಿತು. ಶುಂಗ ಸಂತತಿಯವರು ವಾಯುವ್ಯ ಭಾರತದಲ್ಲಿನ ಇಂಡೋಗ್ರೀಕರೊಂದಿಗೆ ಸ್ನೇಹ ಸಂಬಂಧಗಳನ್ನು ಏರ್ಪಡಿಸಿಕೊಂಡಿದ್ದರು.

ಪುಶ್ಯಮಿತ್ರ ಶುಂಗನು ಮೌರ್ಯರ ಸೈನ್ಯದ ಮಹಾ ದಂಡನಾಯಕನಾಗಿದ್ದನು. ಇವನು ಕ್ರಿ.ಪೂ. 187ರಲ್ಲಿ ಮೌರ್ಯ ಸಂತತಿಯ ಕೊನೆಯ ಅರಸನಾದ ಬೃಹದ್ರತನನ್ನು ಕೊಂದು ಇಲ್ಲವೆ ಸೋಲಿಸಿ ಮಗಧ ರಾಜ್ಯದ ಸಿಂಹಾಸನವನ್ನು

ವಶಪಡಿಸಿಕೊಂಡನು. ಆದರೆ ಪುಶ್ಯಮಿತ್ರ ಶುಂಗನಿಗೆ ಇಡೀ ಮೌರ್ಯ ಸಾಮ್ರಾಜ್ಯದ ಮೇಲೆ ಹತೋಟಿಯನ್ನಿಟ್ಟುಕೊಳ್ಳಲು ಸಾಧ್ಯವಾಗಲಿಲ್ಲ. ದಕ್ಷಿಣದಲ್ಲಿ ಶಾತವಾಹನರೂ, ಒರಿಸ್ಸ ಪ್ರದೇಶದಲ್ಲಿ ಕಳಿಂಗರೂ ಸ್ವತಂತ್ರರಾದರು. ಇದರಿಂದಾಗಿ ಅವನ ಅಧಿಕಾರವು ಮಗಧರಾಜ್ಯದ ಕೇಂದ್ರ ಪ್ರದೇಶಕ್ಕೆ ಸೀಮಿತಗೊಂಡಿದ್ದಿತೆಂಬುದಾಗಿ ಕಂಡುಬರುತ್ತದೆ. ಪಾಟಲೀಪುತ್ರವು ಇವನ ರಾಜಧಾನಿಯಾಗಿ ಮುಂದುವರಿಯಿತು. ಪುಶ್ಯಮಿತ್ರನ ಸಾಮ್ರಾಜ್ಯವು ದಕ್ಷಿಣದಲ್ಲಿ ನರ್ಮದಾ ನದಿಯವರೆಗೂ ಹಾಗೂ ಪಂಜಾಬಿನ ಜಲಂಧರ ಮತ್ತು ಸಕಲಗಳನ್ನು ಒಳಗೊಂಡಿದ್ದಿತೆಂದು ಕೆಲವರು ಅಭಿಪ್ರಾಯ ಪಡುತ್ತಾರೆ. ಪುಷ್ಯಮಿತ್ರನು ತನ್ನ ಆಳ್ವಿಕೆಯ ಕಾಲದಲ್ಲಿ ಅನೇಕ ದಂಗೆಗಳನ್ನು ಅಡಗಿಸಬೇಕಾಯಿತು. ಅವುಗಳಲ್ಲಿ ಮೊದಲನೆಯದು ವಿದಿಸ ಅಥವ ವಿದರ್ಭದ ಯಜ್ಞಸೇನನ ದಂಗೆಯು ಮುಖ್ಯವಾಗಿದ್ದಿತು. ಯಜ್ಞಸೇನನು ಪುಶ್ಯಮಿತ್ರನ ಅಧಿಕಾರವನ್ನು ವಿರೋಧಿಸಿ ದಂಗೆಯೆದ್ದನು. ಈ ದಂಗೆಯನ್ನು ಪುಶ್ಯಮಿತ್ರನು ತನ್ನ ಮಗ ಅಗ್ನಿಮಿತ್ರನ ಸಹಾಯದಿಂದ ಅಡಗಿಸಿ ವಿದರ್ಭ ರಾಜ್ಯವನ್ನು ತನ್ನ ಸಾಮ್ರಾಜ್ಯಕ್ಕೆ ಒಳಪಡಿಸಿಕೊಂಡಿದ್ದುದಾಗಿ ಕಾಳಿದಾಸನ ಮಾಳವಿಕಾಗ್ನಿಮಿತ್ರ ನಾಟಕದಿಂದ ತಿಳಿದುಬರುತ್ತದೆ. ಪುಶ್ಯಮಿತ್ರನ ಮತ್ತೊಂದು ಬಹುಮುಖ್ಯ ಸಾಧನೆಯೆಂದರೆ ಯವನರನ್ನು ಹಿಮ್ಮೆಟ್ಟಿಸಿದುದು. ಭಾರತದ ಮೇಲೆ ಧಾಳಿ ಮಾಡಿದ ಯವನರ ದಂಡನಾಯಕರುಗಳಾದ ಡೆಮಿಟ್ರಿಯಸ್, ಮಿನಾಂಡರ್ ಯೂಕ್ರಟೈಡಸ್‌ರನ್ನು ಸಿಂಧೂನದಿಯ ದಂಡೆಯ ಮೇಲೆ ವಾಸುಮಿತ್ರನು ಸೋಲಿಸಿ ಹಿಮ್ಮೆಟ್ಟಿಸಿದನು. ಯವನರ ಮೇಲಿನ ವಿಜಯದ ಸಂಕೇತವಾಗಿ ಪುಶ್ಯಮಿತ್ರಶುಂಗನು ಎರಡು ಅಶ್ವಮೇಧಯಾಗಗಳನ್ನು ಮಾಡಿದನು. ಪುಶ್ಯಮಿತ್ರನ ಅಧಿಕಾರವನ್ನು ವಿರೋಧಿಸಿದವರಲ್ಲಿ ಕಳಿಂಗದ ಖಾರವೇಲನು ಒಬ್ಬನಾಗಿದ್ದನು. ಖಾರವೇಲನು ಒಬ್ಬ ಪರಾಕ್ರಮಶಾಲಿ ದೊರೆಯಾಗಿದ್ದು ಮಗಧ ರಾಜ್ಯವನ್ನು ಮತ್ತು ಮಗದಾಧಿಪತಿಗಳ ಗರ್ವವನ್ನು ಮುರಿದನೆಂದು ಅವನ ಹತಿಗುಂಪ ಶಾಸನವು ತಿಳಿಸುತ್ತದೆ.

ಪುಶ್ಯಮಿತ್ರಶುಂಗನು ಸುಮಾರು ಮೂವತ್ತಾರು ವರ್ಷಗಳ ಕಾಲ ಕ್ರಿ.ಪೂ. 186-151 ರಾಜ್ಯವಾಳಿದನು ಇವನ ಆಳ್ವಿಕೆಯು ಧಾರ್ಮಿಕ ದೃಷ್ಟಿಯಿಂದಲೂ ಮುಖ್ಯವಾಗಿದೆ. ಪುಶ್ಯಮಿತ್ರಶುಂಗನು ಅಶ್ವಮೇಧ ಯಾಗಗಳನ್ನು ಮಾಡುವುದರ ಮೂಲಕ ವೈದಿಕ ಧರ್ಮವನ್ನು ಪುನರುಜ್ಜೀವನಗೊಳಿಸಿದನು. ಬ್ರಾಹ್ಮಣ ಧರ್ಮೀಯನಾಗಿದ್ದ ಪುಶ್ಯಮಿತ್ರಶುಂಗನು ಬೌದ್ಧಮತೀಯರ ಬಗ್ಗೆ ಕ್ರೂರವಾಗಿ ನಡೆದುಕೊಂಡನೆಂದು ಕೆಲವರು ಆಪಾದಿಸಿರುತ್ತಾರೆ. ಆದರೆ ಈ ಅಭಿಪ್ರಾಯವನ್ನು ಎಲ್ಲ ಇತಿಹಾಸಕಾರರೂ ಒಪ್ಪುವುದಿಲ್ಲ.

ಪುಶ್ಯಮಿತ್ರನು ಕಾಲವಾದ ಮೇಲೆ ಅವನ ಮಗನಾದ ಅಗ್ನಿಮಿತ್ರನು ಪಟ್ಟಕ್ಕೆ ಬಂದನು. ಕಾಳಿದಾಸನ ಮಾಳವಿಕಾಗ್ನಿಮಿತ್ರ ನಾಟಕದ ನಾಯಕನಾದ ಇವನು ಸಿಂಹಾಸನಕ್ಕೆ ಬರುವ ಮೊದಲು ವಿದಿಸ ಪ್ರಾಂತ್ಯಕ್ಕೆ ವೈಸ್‌ರಾಯ್ ಆಗಿದ್ದನು. ಆದರೆ ಇವನ ಬಗ್ಗೆಯಾಗಲೀ ಮತ್ತು ಇವನ ತರುವಾಯ ಆಳಿದ ಈ ಸಂತತಿಯ ಇತರ ರಾಜರುಗಳ ಬಗ್ಗೆಯಾಗಲಿ ಹೆಚ್ಚಿನ ಐತಿಹಾಸಿಕ ಸಂಗತಿಗಳು ದೊರೆತಿರುವುದಿಲ್ಲ. ಅಗ್ನಿಮಿತ್ರನ ನಂತರ ಶುಂಗರ ಅಧಿಕಾರವು ಅವನತಿ ಹೊಂದಿತು. ವಾಸುಮಿತ್ರನು ಈ ಸಂತತಿಯ ನಾಲ್ಕನೆಯ ದೊರೆ. ಇವನು ಗ್ರೀಕರ ವಿರುದ್ಧ ಹೋರಾಡಿ ಅವರ

ಧಾಳಿಯನ್ನು ಹಿಮ್ಮೆಟ್ಟಿಸಿದನು. ದೇವಭೂತಿ ಎಂಬುವನು ಈ ಸಂತತಿಯ ಕೊನೆಯ ದೊರೆ ಮತ್ತು ಇವನು ಈ ಸಂತತಿಯಲ್ಲಿ ಹತ್ತನೆಯ ದೊರೆ. ವಾಸುದೇವ ಕಣ್ವ ಎಂಬ ಇವನ ಮಂತ್ರಿಯು ಇವನನ್ನು ಕ್ರಿ.ಪೂ. 60ರ ಸುಮಾರಿನಲ್ಲಿ ಕೊಂದು ಶುಂಗ ಸಂತತಿಯವರ ಅಧಿಕಾರವನ್ನು ಕೊನೆಗಾಣಿಸಿ ಕಣ್ವ ಸಂತತಿಯವರ ಆಳ್ವಿಕೆಯನ್ನು ಆರಂಭಿಸಿದನು.

**ಕಣ್ವ ಸಂತತಿ**

ಕಣ್ವಸಂತತಿಯಲ್ಲಿ ಒಟ್ಟು ನಾಲ್ಕು ಜನ ರಾಜ್ಯವಾಳಿದುದಾಗಿ ಕಂಡುಬರುತ್ತದೆ. ಇವರು ಸುಮಾರು ನಲವತ್ತೈದು ವರ್ಷಗಳ ಕಾಲ ರಾಜ್ಯವಾಳಿದರು. ಕ್ರಿ.ಪೂ. 30ರಲ್ಲಿ ಕಣ್ವ ಸಂತತಿಯವರ ಅಧಿಕಾರವನ್ನು ಶಾತವಾಹನರು ಕೊನೆಗಾಣಿಸಿದರೆಂದು ಕೆಲವು ಇತಿಹಾಸಕಾರರು ಅಭಿಪ್ರಾಯ ಪಟ್ಟಿರುವರು. ಶುಂಗ ಮತ್ತು ಕಣ್ವ ಸಂತತಿಯವರ ಆಳ್ವಿಕೆಯು ಕೊನೆಗಂಡ ಮೇಲೆ ಗುಪ್ತರು ಅಧಿಕಾರಕ್ಕೆ ಬರುವವರೆಗೂ ಮಗಧ ರಾಜ್ಯದ ಇತಿಹಾಸವು ಹೆಚ್ಚು ಅಸ್ಪಷ್ಟತೆಯಿಂದ ಕೂಡಿದೆ.

**ಇಂಡೋ-ಗ್ರೀಕರು**

ಸೆಲ್ಯೂಕಸ್ಸನ ಮರಣಾನಂತರ ಸಿರಿಯಾ ಸಾಮ್ರಾಜ್ಯದ ಬ್ಯಾಕ್ಟ್ರಿಯ ಮತ್ತು ಪಾರ್ಥಿಯ ಪ್ರದೇಶಗಳಲ್ಲಿ ಆಳುತ್ತಿದ್ದ ಸತ್ರಪರು ಸ್ವತಂತ್ರರಾಗಿ ತಮ್ಮ ಆಳ್ವಿಕೆಯನ್ನು ಆರಂಭಿಸಿದರು. ಬ್ಯಾಕ್ಟ್ರಿಯದ ಗ್ರೀಕ್‌ದೊರೆ ಡೆಮಿಟ್ರಿಯಸ್ಸನು ಮೌರ್ಯ ಸಾಮ್ರಾಜ್ಯದ ಅವನತಿಯ ಅನುಕೂಲವನ್ನು ಪಡೆದುಕೊಂಡು ಮಗಧ ಸಾಮ್ರಾಜ್ಯದ ವಾಯುವ್ಯ ಪ್ರದೇಶಗಳನ್ನು ವಶಪಡಿಸಿಕೊಂಡನು. ಡೆಮಿಟ್ರಿಯಸ್ಸನ ರಾಜ್ಯವು ಆಫ್ಘಾನಿಸ್ಥಾನ, ಪಂಜಾಬ್ ಮತ್ತು ಸಿಂಧ್ ಪ್ರದೇಶಗಳನ್ನೊಳಗೊಂಡಿತ್ತು. ಡೆಮಿಟ್ರಿಯಸ್ಸನು ಭಾರತದಲ್ಲಿ ತನ್ನ ರಾಜ್ಯವನ್ನು ವಿಸ್ತರಿಸುವ ಕಾರ್ಯದಲ್ಲಿ ತೊಡಗಿದ್ದಾಗ ಯೂಕ್ರಟೈಡೆಸ್ ಎಂಬುವನು ಬ್ಯಾಕ್ಟ್ರಿಯದಲ್ಲಿ ಸಿಂಹಾಸವನ್ನು ವಶಪಡಿಸಿಕೊಂಡನು. ಆದರೆ ಅವನು ತನ್ನ ಮಗನಿಂದ ಕೊಲೆ ಮಾಡಲ್ಪಟ್ಟನೆಂದು ಹೇಳಲಾಗಿದೆ. ಇದರಿಂದ ಗ್ರೀಕರಲ್ಲಿ ಒಡಕುಂಟಾಗಿದ್ದು ಪುಶ್ಯಮಿತ್ರ ಶುಂಗನು ಗ್ರೀಕರ ಈ ಅನೈಕ್ಯತೆಯ ಅನುಕೂಲವನ್ನು ಪಡೆದುಕೊಂಡು ಅವರ ವಿರುದ್ಧ ದಂಡೆತ್ತಿ ಹೋಗಿ ಅವರನ್ನು ಸಿಂಧೂನದಿಯ ದಂಡೆಯಮೇಲೆ ಸೋಲಿಸಿ ಹಿಮ್ಮೆಟ್ಟಿಸಿದನು. ಡೆಮಿಟ್ರಿಯಸ್ಸನ ಅಂತ್ಯದ ಬಗ್ಗೆ ಹೆಚ್ಚಿನ ವಿವರಗಳು ದೊರೆತಿಲ್ಲ. ಡೆಮಿಟ್ರಿಯಸ್ಸನು ಬ್ಯಾಕ್ಟ್ರಿಯಕ್ಕೆ ಹಿಂದಿರುಗಿ ಯೂಕ್ರಟೈಡಸ್‌ನನ್ನು ಎದುರಿಸಿ ಪರಾಜಿತ ನಾದನೆಂದು ಹಾಗೂ ಯುದ್ಧದಲ್ಲಿ ಅವನು ಮರಣ ಹೊಂದಿದನೆಂದು ಹೇಳಲಾಗಿದೆ.

ಡೆಮಿಟ್ರಿಯಸ್ಸನನಂತರ ಬ್ಯಾಕ್ಟ್ರಿಯವನ್ನು ಆಳಿದ ಗ್ರೀಕ್ ರಾಜರುಗಳಲ್ಲಿ ಮಿನಾಂಡರ್ ಹೆಚ್ಚು ಪ್ರಸಿದ್ಧನಾದನು. ಇವನು ಕ್ರಿ.ಪೂ. ಎರಡನೆ ಶತಮಾನದ ಉತ್ತರಾರ್ಧದಲ್ಲಿ ಆಳುತ್ತಿದ್ದನು. ಸಕಲ (ಇಂದಿನ ಸಿಯಾಲ್ ಕೋಟ್) ಇವನ ರಾಜಧಾನಿಯಾಗಿತ್ತು. ಮಿನಾಂಡರನು ಬೀಯಾಸ್ ನದಿಯನ್ನು ದಾಟಿ ಉತ್ತರಭಾರತದ ಮೇಲೆ ದಂಡಯಾತ್ರೆಗಳನ್ನು ಮಾಡಿದುದಾಗಿ ಕೆಲವು ಆಧಾರಗಳು ತಿಳಿಸುತ್ತವೆ. ಮಿನಾಂಡರನು ತನ್ನ ಮಿಲಿಟರಿ ದಂಡಯಾತ್ರೆಗಳಿಗಿಂತಲೂ ಹೆಚ್ಚಾಗಿ ತನ್ನ ವಿದ್ವತ್ತು

ಮತ್ತು ಬೌದ್ಧಮತಕ್ಕೆ ನೀಡಿದ ಪ್ರೋತ್ಸಾಹದಿಂದಾಗಿ ಭಾರತದ ಚರಿತ್ರೆಯಲ್ಲಿ ಹೆಚ್ಚು ಹೆಸರುವಾಸಿಯಾಗಿದ್ದಾನೆ. ಪಾಳೀಭಾಷೆಯಲ್ಲಿ ಬರೆಯಲಾಗಿರುವ 'ಮಿಲಿಂದಪನ್ಹ' ಎಂಬ ಬೌದ್ಧಧರ್ಮ ಕೃತಿಯಲ್ಲಿ ಇವನ ಬಗ್ಗೆ ಹೆಚ್ಚಿನ ವಿವರಗಳು ದೊರೆಯುತ್ತವೆ. ಈ ಗ್ರಂಥದ ಪ್ರಕಾರ ಮಿನಾಂಡರನು ಬೌದ್ಧಮತದ ತತ್ವಗಳಿಗೆ ಮಾರುಹೋಗಿ ಆ ಧರ್ಮದ ಬಗ್ಗೆ ಹೆಚ್ಚು ಹೆಚ್ಚು ತಿಳಿಯಲು ಆಸಕ್ತನಾಗಿದ್ದುದಾಗಿಯೂ, ಮತ್ತು ಆ ಬಗ್ಗೆ ಅವನು ಅನೇಕ ಸಾಧುಸಂತರೊಂದಿಗೆ ಚರ್ಚೆ ನಡೆಸಿ ಅವರ ಉತ್ತರಗಳಿಂದ ನಿರಾಶೆಗೊಂಡಿದ್ದನೆಂದು ಕೊನೆಗೆ ನಾಗಸೇನ ಎಂಬ ಬೌದ್ಧ ಭಿಕ್ಷುವು ಅವನಿಗೆ ಬೌದ್ಧಮತದ ತತ್ವಗಳನ್ನು ಸರಿಯಾಗಿ ಅರ್ಥೈಸಿ ಅವನ ಮನ ತಣಿಸಿದನೆಂದು ತರುವಾಯ ಮಿನಾಂಡರನು ಬೌದ್ಧಮತಾವಲಂಬಿಯಾಗಿ ಆ ಮತಕ್ಕೆ ಪ್ರೋತ್ಸಾಹ ನೀಡಿದುದಾಗಿ ತಿಳಿದುಬರುತ್ತದೆ. 'ಮಿಲಿಂದಪನ್ಹ' ಕೃತಿಯು ಬೌದ್ಧಮತದ ಬಗ್ಗೆ ಮಿನಾಂಡರನು ಹೊಂದಿದ್ದ ಆಸಕ್ತಿಯ ಬಗೆಗೆ ಅಲ್ಲದೆ ಅವನ ರಾಜ್ಯದ ಶ್ರೀಮಂತಿಕೆಯ ಬಗೆಗೂ ಬೆಳಕು ಚೆಲ್ಲುತ್ತದೆ. ಅವನ ರಾಜಧಾನಿಯಾಗಿದ್ದ ಸಕಲ ರಕ್ಷಣಾಗೋಡೆಗಳಿಂದ ಸುರಕ್ಷಿತವಾಗಿತ್ತು. ಅದು ಸುಂದರವಾದ ಕಟ್ಟಡಗಳಿಂದಲೂ, ರಾಜಬೀದಿಗಳಿಂದಲೂ, ಉದ್ಯಾವನಗಳಿಂದಲೂ ಶೋಭಾಯಮಾನವಾಗಿತ್ತು. ಸದಾ ಜನಸಂದಣಿಯಿಂದ ಕೂಡಿದ ಮಾರುಕಟ್ಟೆಗಳು ಅಲ್ಲಿದ್ದವು. ಇಲ್ಲಿನ ವರ್ತಕರು ಅತ್ಯಂತ ಶ್ರೀಮಂತರಾಗಿದ್ದರು. ಮೇಲಾಗಿ ಈ ಪಟ್ಟಣವು ವಿದ್ಯಾಕೇಂದ್ರವೂ ಆಗಿದ್ದು ಘನವಿದ್ವಾಂಸರ ನೆಲೆವೀಡೂ ಆಗಿದ್ದಿತೆಂದು ಹೇಳಲಾಗಿದೆ.

ಮಿನಾಂಡರನ ಮರಣಾನಂತರ ಆಳಿದ ಇಂಡೋ-ಗ್ರೀಕ್ ರಾಜರುಗಳಲ್ಲಿ ಆಂಟಿಯಾಲ್ ಕಿಡಾಸ್ ಒಬ್ಬ ಪ್ರಸಿದ್ಧ ದೊರೆಯಾಗಿದ್ದಾನೆ. ತಕ್ಷಶಿಲೆಯು ಇವನ ಕಾಲದಲ್ಲಿ ಆಡಳಿತ ಕೇಂದ್ರವಾಗಿತ್ತು. ಬೆಸ್‌ನಗರದಲ್ಲಿ ದೊರೆತಿರುವ ಶಿಲಾಶಾಸನದಲ್ಲಿ ಇವನ ಹೆಸರು ನಮೂದಿತವಾಗಿದೆ. ಆಂಟಿಯಾಲ್ ಕಿಡಾಸ್‌ನು ವಿದಿಸದ ಶುಂಗರ ದೊರೆ ಭಗಭದ್ರನ ಆಸ್ಥಾನಕ್ಕೆ ಹೆಲಿಯೋಡೋರಸ್ ಎಂಬವನನ್ನು ರಾಯಭಾರಿಯನ್ನಾಗಿ ಕಳುಹಿಸಿದ್ದನು. ಹೆಲಿಯೊಡೋರಸ್ಸನು ವೈಷ್ಣವ ಧರ್ಮಾವಲಂಬಿಯಾಗಿ ವಿಷ್ಣು ಅಥವ ವಾಸುದೇವನ ಗೌರವಾರ್ಥವಾಗಿ ಬೆಸ್‌ನಗರದಲ್ಲಿ ಗರುಡ-ಸ್ಥಂಭವೊಂದನ್ನು ನಿರ್ಮಿಸಿದನು. ಇದರಿಂದ ಇಂಡೋ-ಗ್ರೀಕರ ರಾಜರುಗಳು ಮತ್ತು ಅವರ ಆಸ್ಥಾನಿಕರು ಭಾರತೀಯ ಧರ್ಮಗಳಾದ ಬೌದ್ಧ ಮತ್ತು ಭಾಗವತ ಧರ್ಮಗಳಿಂದ ಪ್ರಭಾವಿತರಾಗಿ ಆ ಧರ್ಮಗಳ ಅನುಯಾಯಿಗಳಾಗಿ ಭಾರತೀಯರಲ್ಲಿ ಬೆರೆತು ಹೋದರು. ಕ್ರಿ.ಪೂ. 130ರ ವೇಳೆಗೆ ಇಂಡೋಗ್ರೀಕರು ದುರ್ಬಲರಾಗಿ, ಪರಕೀಯರಾದ ಶಕರು ವಾಯುವ್ಯ ಪ್ರದೇಶದ ಮೇಲೆ ಆಕ್ರಮಣ ಮಾಡಿ ಅವರ ಅಧಿಕಾರವನ್ನು ಕೊನೆಗಾಣಿಸಿದರು.

**ಪಾರ್ಥಿಯನ್ನರು**

ಇಂಡೋ-ಗ್ರೀಕರಂತೆ ಭಾರತದ ಮೇಲೆ ಧಾಳಿಮಾಡಿದ ವಿದೇಶೀಯರಲ್ಲಿ ಪಾರ್ಥಿಯನ್ನರು (ಪಹ್ಲವರು) ಪ್ರಸಿದ್ಧರಾಗಿದ್ದಾರೆ. ಕ್ರಿ.ಪೂ. ಮೂರನೇಶತಮಾನದಲ್ಲಿ ಪಾರ್ಥಿಯನ್ನರು ಸಿರಿಯಾದ ಸೆಲ್ಯೂಸಿಡ್ ದೊರೆಯ ವಿರುದ್ಧ ದಂಗೆಯೆದ್ದು ಸ್ವತಂತ್ರ ರಾಜ್ಯವನ್ನು ಸ್ಥಾಪಿಸಿಕೊಂಡರು ಇವರ ದೊರೆಯಾದ ಒಂದನೇ ಮಿತ್ರಡೇಟಸ್ಸನು ಸಿಂಧೂ ನದಿಯವರೆಗೆ ದಂಡಯಾತ್ರೆ ಮಾಡಿದ್ದನು. ತರುವಾಯದಲ್ಲಿ ಮೌವೆಸ್

(Moues) ಎಂಬವನು ಪಶ್ಚಿಮ ಪಂಜಾಬಿನಲ್ಲಿ ಸ್ವತಂತ್ರ ರಾಜ್ಯವೊಂದನ್ನು ಸ್ಥಾಪಿಸಿದನು. ಕಾಂದಹಾರ್ ಪ್ರದೇಶದಲ್ಲಿ ಪಾರ್ಥಿಯನ್ನರ ರಾಜರುಗಳಾದ ಓನೋನೆಸ್ ಮತ್ತು ಅಜೆಸ್ ಎಂಬವರು ರಾಜ್ಯವಾಳಿದರು. ಪಾರ್ಥಿಯನ್ನರ ರಾಜರುಗಳಲ್ಲಿ ಗೊಂಡೋ ಫೆರ್ನಿಸ್ ಎಂಬವನು ಹೆಚ್ಚು ಹೆಸರುವಾಸಿಯಾದವನು. ಇವನು ಕ್ರಿ.ಶ. ಒಂದನೇ ಶತಮಾನದಲ್ಲಿ ಆಳುತ್ತಿದ್ದು ಕ್ರೈಸ್ತಪಾದ್ರಿ ಸೈಂಟ್ ಥಾಮಸ್‌ನನ್ನು ಸ್ವಾಗತಿಸಿ ತನ್ನ ಕುಟುಂಬದವರೊಂದಿಗೆ ಕ್ರೈಸ್ತ ಮತಾವಲಂಬಿಯಾದನೆಂದು ಕ್ರೈಸ್ತರ ಪ್ರತೀತಿಯಿದೆ.

**ಶಕರು (ಸ್ಕಿಥಿಯನ್ನರು)**

ಭಾರತದ ವಾಯುವ್ಯ ಪ್ರದೇಶಗಳಲ್ಲಿ ಇಂಡೋ-ಗ್ರೀಕರ ಆಳ್ವಿಕೆಯನ್ನು ಕೊನೆಗಾಣಿಸಿದ ಶಕರು ಮೊದಲಿಗೆ ಜಕ್ಸಾರ್ಟೀಸ್ ನದಿಯ ದಂಡೆಯಲ್ಲಿ ವಾಸಿಸುತ್ತಿದ್ದರು. ಕಾಲಾನು ಕ್ರಮದಲ್ಲಿ ಅವರನ್ನು ಯೂಚಿ ಬುಡಕಟ್ಟಿಗೆ ಸೇರಿದ ಜನರು ಅಲ್ಲಿಂದ ಹೊರಗಟ್ಟಿದರು. ತರುವಾಯ ಶಕರು ಬ್ಯಾಕ್ಟ್ರಿಯಾವನ್ನು ಮುತ್ತಿ ಅಲ್ಲಿ ಗ್ರೀಕರ ಅಧಿಕಾರವನ್ನು ಕೊನೆಗಾಣಿಸಿದರು. ಮುಂದಿನ ವರ್ಷಗಳಲ್ಲಿ ಅವರು ಅನೇಕ ಗುಂಪುಗಳಾಗಿ ಭಾರತದ ಮೇಲೆ ಆಕ್ರಮಣ ಮಾಡಿ ತಕ್ಷಶಿಲ, ಮಾಳವ, ಕಾಥೇವಾರ್ ಮತ್ತು ಮಥುರಗಳಲ್ಲಿ ತಮ್ಮ ರಾಜ್ಯಗಳನ್ನು ಸ್ಥಾಪಿಸಿಕೊಂಡರು. ತಕ್ಷಶಿಲ ಮತ್ತು ಮಥುರಗಳಲ್ಲಿ ಆಳುತ್ತಿದ್ದವರು ಉತ್ತರ ಸತ್ರಪರೆಂದೂ ಮಾಳವ ಮತ್ತು ಕಾಥೇವಾರ್‌ಗಳಲ್ಲಿ ಆಳುತ್ತಿದ್ದವರು ಪಶ್ಚಿಮ ಸತ್ರಪರೆಂದು ಕರೆಯಲ್ಪಟ್ಟರು.

ಭೂಮಕ ಎಂಬವನು ಪಶ್ಚಿಮ ಸತ್ರಪರಲ್ಲಿ ಮೊದಲನೆ ದೊರೆ. ಇವನ ರಾಜ್ಯವು ಮಾಳ್ವ, ಗುಜರಾತ್, ಕಾಥೇವಾರ್ ಮತ್ತು ರಜಪುಟಾಣ ಹಾಗೂ ಸಿಂಧ್ ಭಾಗಗಳನ್ನು ಒಳಗೊಂಡಿತ್ತು. ಭೂಮಕನ ನಂತರ ನಹಪಾಣ ಎಂಬವನು ಸತ್ರಪನಾದನು. ಇವನು ರಾಜನೆಂದು ಘೋಷಿಸಿಕೊಂಡು ತನ್ನ ಹೆಸರಿನಲ್ಲಿ ನಾಣ್ಯಗಳನ್ನು ಅಚ್ಚು ಹಾಕಿಸಿದನು. ಇವನ ನಾಣ್ಯಗಳು ಮತ್ತು ಶಾಸನಗಳಿಂದ ಇವನೊಬ್ಬ ಸ್ವತಂತ್ರ ರಾಜನಾಗಿದ್ದನೆಂದು ಮತ್ತು ಇವನ ರಾಜ್ಯವು ಉತ್ತರದಲ್ಲಿ ಅಜ್ಮೀರದಿಂದ ದಕ್ಷಿಣದಲ್ಲಿ ಮಹಾರಾಷ್ಟ್ರದ ನಾಸಿಕ್ ಮತ್ತು ಪೂನಾದವರೆಗೆ ವಿಸ್ತರಿಸಿದ್ದಿತೆಂಬುದಾಗಿ ತಿಳಿದು ಬರುತ್ತದೆ. ನಹಪಾಣನು ಶಾತವಾಹನರ ದೊರೆ ಗೌತಮೀಪುತ್ರ ಶಾತಕರ್ಣಿಯಿಂದ ತೀವ್ರವಾದ ಸೋಲನ್ನು ಹೊಂದಿದನು.

ಚಸ್ತಾನ ಎಂಬವನು ಶಕಸತ್ರಪರ ಮತ್ತೊಬ್ಬ ಪ್ರಸಿದ್ಧ ದೊರೆ. ಇವನು ಕಾರ್ದಮಕ ಎಂಬ ಮತ್ತೊಂದು ಹೊಸ ಸಂತತಿಯನ್ನು ಸ್ಥಾಪಿಸಿದನು. ಚಸ್ತಾನನು ಹಿಂದೆ ನಹಪಾಣನು ಶಾತವಾಹನರಿಗೆ ಕಳೆದುಕೊಂಡಿದ್ದ ಪ್ರದೇಶಗಳನ್ನು ಪುನಃ ವಶಪಡಿಸಿ ಕೊಳ್ಳುವುದರಲ್ಲಿ ಯಶಸ್ವಿಯಾದನು. ಇದರಿಂದ ಶಾತವಾಹನರಿಗೂ ಕ್ಷತ್ರಪರಿಗೂ ಯುದ್ಧಗಳು ಆರಂಭವಾದವು. ಈ ಯುದ್ಧಗಳು ಚಸ್ತಾನನ ಮೊಮ್ಮಗ ಮಹಾಕ್ಷತ್ರಪ ರುದ್ರದಾಮನ್ ಕಾಲದಲ್ಲೂ ಮುಂದುವರಿದು ಕೊನೆಗೆ ವೈವಾಹಿಕ ಸಂಬಂಧಗಳಲ್ಲಿ ಮುಕ್ತಾಯ ಗೊಂಡವು. ರುದ್ರದಾಮನ್ ತನ್ನ ಮಗಳನ್ನು ಶಾತವಾಹನರ ದೊರೆ ವಸಿಷ್ಠಿಪುತ್ರ ಶಾತಕರ್ಣಿಗೆ ಕೊಟ್ಟು ವಿವಾಹ ಮಾಡಿದನು. ಆದಾಗ್ಯೂ ಶಾತವಾಹನರು ಹೋರಾಡುತ್ತ ಲಿದ್ದುದಾಗಿಯೂ ಮತ್ತು ರುದ್ರದಾಮನು ಶಾತವಾಹನರನ್ನು ಪುಲಮಾಯಿಯ ಕಾಲದಲ್ಲಿ ಎರಡು ಬಾರಿ ಸೋಲಿಸಿದುದಾಗಿ ಕಂಡುಬರುತ್ತದೆ.

ಪಶ್ಚಿಮ ಶಕ ಸತ್ರಪರಲ್ಲಿ ರುದ್ರದಾಮನ್ ಅತ್ಯಂತ ಹೆಸರುವಾಸಿಯಾದವನು. ಇವನು ಸುಮಾರು ಕ್ರಿ.ಶ. 130ರಿಂದ 150ರವರೆಗೆ ರಾಜ್ಯವಾಳಿದನು. ಉಜ್ಜೈನಿಯು ಇವನ ರಾಜಧಾನಿಯಾಗಿತ್ತು. ರುದ್ರದಾಮನ್ ಮಹಾ ಪರಾಕ್ರಮಶಾಲಿಯಾಗಿದ್ದು ಗುಜರಾತ್, ಕಾಥೆವಾರ್, ಮಾಳ್ವ, ಉತ್ತರ ಕೊಂಕಣ ಮತ್ತು ನರ್ಮದ ನದಿಯ ಭಾಗವನ್ನು ತನ್ನ ಅಧಿಕಾರದ ವ್ಯಾಪ್ತಿಗೆ ಒಳಪಡಿಸಿಕೊಂಡಿದ್ದನು. ರುದ್ರದಾಮನ್ ಕೇವಲ ದಿಗ್ವಿಜಯಿಯಾಗಿರದೆ ದಕ್ಷ ಆಡಳಿತಗಾರನೂ ಮತ್ತು ವಿದ್ಯಾಭಿಮಾನಿಯೂ ಆಗಿದ್ದನು. ಅಲ್ಲದೆ ಅವನು ಸಂಸ್ಕೃತದಲ್ಲಿ ಘನವಿದ್ವಾಂಸನಾಗಿದ್ದು ರಾಜನೀತಿ ಶಾಸ್ತ್ರ, ವ್ಯಾಕರಣ, ತರ್ಕಶಾಸ್ತ್ರ, ಸಂಗೀತ ಶಾಸ್ತ್ರದಲ್ಲಿ ಹೆಚ್ಚು ಪಾಂಡಿತ್ಯಗಳಿಸಿದ್ದನು. ಇವನ ಕಾಲದಲ್ಲಿ ಉಜ್ಜೈನಿಯು ಒಂದು ಪ್ರಸಿದ್ಧ ವಿದ್ಯಾಕೇಂದ್ರವಾಗಿ ಭಾರತದಾದ್ಯಂತ ಖ್ಯಾತಿಗಳಿಸಿತ್ತು. ರುದ್ರದಾಮನ್ ಸಂಸ್ಕೃತದಲ್ಲಿ ಕೆತ್ತಿಸಿರುವ ಗಿರ್ನಾರ್ ಶಿಲಾಶಾಸನವು ಮಹತ್ವ ಪೂರ್ಣ ಐತಿಹಾಸಕ ದಾಖಲೆಯಾಗಿದ್ದು ಅವನ ಆಳ್ವಿಕೆಯ ಪ್ರಮುಖ ಘಟನೆಗಳ ಮೇಲೆ ಬೆಳಕನ್ನು ಚೆಲ್ಲುತ್ತದೆ. ರುದ್ರದಾಮನ್ ಸ್ವಯಂವರದ ಮೂಲಕ ಅನೇಕ ರಾಜಕುಮಾರಿಯರನ್ನು ಪಾಣೀ ಗ್ರಹಣ ಮಾಡಿಕೊಂಡಿದ್ದನೆಂದು ಈ ಶಾಸನದಿಂದ ತಿಳಿದುಬರುತ್ತದೆ.

ರುದ್ರದಾಮನ್ ಪ್ರಜಾಹಿತಚಿಂತಕನೂ ಆಗಿದ್ದನು. ಮೌರ್ಯರ ಕಾಲದಲ್ಲಿ ನಿರ್ಮಾಣಗೊಂಡಿದ್ದ ಸುದರ್ಶನ ಜಲಾಶಯವು ಈ ಕಾಲದಲ್ಲಿ ಶಿಥಿಲಗೊಂಡಿದ್ದುದಾಗಿಯೂ ಮತ್ತು ಅದನ್ನು ರುದ್ರದಾಮನ್ ದುರಸ್ತುಗೊಳಿಸಿ ಪ್ರಜೆಗಳಿಗೆ ನೀರಾವರಿ ಸೌಲಭ್ಯವನ್ನು ಕಲ್ಪಿಸಿಕೊಟ್ಟಿದ್ದುದಾಗಿ ತಿಳಿದುಬರುತ್ತದೆ. ರುದ್ರದಾಮನ್ ಕ್ರಿ.ಶ. 150ರಲ್ಲಿ ಕಾಲವಾದನು. ಇವನ ತರುವಾಯ ಶಕ ಸತ್ರಪರ ರಾಜ್ಯವು ಒಡೆದುಹೋಯಿತು. ಆದಾಗ್ಯೂ ಈ ಬುಡಕಟ್ಟಿಗೆ ಸೇರಿದವರು ಗುಪ್ತರು ಅಧಿಕಾರಕ್ಕೆ ಬಂದು ಅವರ ಅಧಿಕಾರವನ್ನು ಕೊನೆಗಾಣಿಸುವವರೆಗೂ ಉಜ್ಜೈನಿಯಲ್ಲಿ ಆಳುತ್ತಿದ್ದರು. ಶಕರ ರಾಜನೊಬ್ಬನು ಕ್ರಿ.ಶ. ಶಕೆ 78 ಅನ್ನು ಸ್ಥಾಪಿಸಿದನೆಂದು ಕೆಲವು ಇತಿಹಾಸಕಾರರು ಅಭಿಪ್ರಾಯಪಟ್ಟಿರುವರು. ಆದರೆ ಈ ಅಭಿಪ್ರಾಯವನ್ನು ಎಲ್ಲರೂ ಒಪ್ಪುವುದಿಲ್ಲ.

**ಕುಶಾನರು**

ಪ್ರಾಚೀನ ಭಾರತವನ್ನಾಳಿದ ವಿದೇಶಿಯರಲ್ಲಿ ಕುಶಾನರು ಹೆಚ್ಚು ಪ್ರಸಿದ್ಧರಾದವರು. ಇವರು ಯೂಚಿ ಬುಡಕಟ್ಟಿಗೆ ಸೇರಿದವರು. ಮೊದಲಿಗೆ ಇವರು ಚೀನಾದ ವಾಯುವ್ಯ ಭಾಗದಲ್ಲಿ ವಾಸಿಸುತ್ತಿದ್ದರು. ಕ್ರಿ.ಪೂ. ಎರಡನೆ ಶತಮಾನದ ಉತ್ತರಾರ್ಧದಲ್ಲಿ ಇವರನ್ನು ಹೂಣರು ಅಲ್ಲಿಂದ ಹೊಡೆದಟ್ಟಿದರು. ಅನಂತರ ಕುಶಾನರು ಬ್ಯಾಕ್ಟ್ರಿಯದ ಕಡೆ ಮುಂದುವರಿದು ಬ್ಯಾಕ್ಟ್ರಿಯಾವನ್ನು ಆಕ್ರಮಿಸಿಕೊಂಡರು. ಕೆಲವು ಕಾಲದ ಮೇಲೆ ಕುಶಾನರು ತಮ್ಮ ಅಲೆದಾಡುವ ಸ್ವಭಾವವನ್ನು ಬಿಟ್ಟು ಐದು ಸಣ್ಣ ರಾಜ್ಯಗಳನ್ನು ಸ್ಥಾಪಿಸಿಕೊಂಡರು. ಈ ಐದು ರಾಜ್ಯಗಳನ್ನು ಮುಂದೆ ಕುಶಾನರ ಬುಡಕಟ್ಟುಗಳಲ್ಲಿ ಪ್ರಬಲನಾಗಿದ್ದ ಒಂದನೇ ಕ್ಯಾಡ್ ಫಿಸಸ್‌ನು ಒಟ್ಟುಗೂಡಿಸಿ ಕುಶಾನರ ರಾಜ್ಯ ಸ್ಥಾಪನೆಗೆ ಭದ್ರವಾದ ಬುನಾದಿ ಹಾಕಿದನು. ಒಂದನೇ ಕ್ಯಾಡ್ ಫಿಸಸ್‌ನು ಕ್ರಿ.ಶ. 15ರಿಂದ 65ರವರೆಗೆ ರಾಜ್ಯವಾಳಿದನು. ಇವನು ಭಾರತದ ವಾಯುವ್ಯ ಪ್ರದೇಶದಲ್ಲಿ ಆಳುತ್ತಿದ್ದ ಪಾರ್ಥಿಯನ್ನರು ಮತ್ತು ಶಕರನ್ನು ಗೆದ್ದು

ಅವರ ಪ್ರದೇಶದ ಮೇಲೆ ತನ್ನ ಅಧಿಕಾರವನ್ನು ಸ್ಥಾಪಿಸಿದನು. ಇವನ ಕಾಲದಲ್ಲಿ ಕಾಬೂಲ್ ಮತ್ತು ಭಾರತದ ಇತರ ಗಡಿ ಪ್ರದೇಶಗಳು ಕುಶಾನರ ಆಳ್ವಿಕೆಗೆ ಒಳಪಟ್ಟಿದ್ದವು. ಒಂದನೇ ಕ್ಯಾಡ್‌ಫಿಸಸ್‌ನು ರೋಮನ್ ಮಾದರಿಯಲ್ಲಿ ಚಿನ್ನ ಮತ್ತು ತಾಮ್ರದ ನಾಣ್ಯಗಳನ್ನು ಅಚ್ಚುಹಾಕಿಸಿ ಭಾರತದಲ್ಲಿ ಜಾರಿಗೆ ತಂದನು. ಇವನಿಗೆ, ಮಹಾರಾಜ, ರಾಜಾಧಿರಾಜ ಮತ್ತು 'ಸತ್ಯ ಧರ್ಮ ಸ್ಥಿತಸ್ಯ' ಎಂಬ ಬಿರುದುಗಳಿದ್ದವು. ಇವನ ತರುವಾಯ ಇವನ ಮಗನಾದ ವೀಮಾಕ್ಯಾಡ್‌ಫಿಸಸ್‌ನು ಅಧಿಕಾರಕ್ಕೆ ಬಂದನು.

ಕುಶಾನರಲ್ಲಿ ಎರಡನೆ ದೊರೆಯಾದ ವೀಮಾಕ್ಯಾಡ್‌ಫಿಸಸ್‌ನು ಕುಶಾನರ ಅಧಿಕಾರವನ್ನು ಭಾರತದಲ್ಲಿ ಬೆನಾರಸ್ಸಿನವರೆಗೂ ವಿಸ್ತರಿಸಿದನು ಮತ್ತು ಆ ಭಾಗಕ್ಕೆ ತನ್ನ ಪ್ರತಿನಿಧಿಯೊಬ್ಬನನ್ನು ನೇಮಿಸಿದ್ದನು. ರೋಮಿನೊಂದಿಗೆ ಇವನ ಕಾಲದಲ್ಲಿ ರಾಜಕೀಯ ಮತ್ತು ವ್ಯಾಪಾರ ಸಂಬಂಧಗಳು ವೃದ್ಧಿಗೊಂಡವು. ವೀಮಾಕ್ಯಾಡ್‌ಫಿಸಸ್‌ನು ಶೈವಧರ್ಮೀಯನಾಗಿದ್ದು ಮಹೇಶ್ವರ ಎಂಬ ಬಿರುದನ್ನು ಧರಿಸಿದ್ದನು. ಇವನ ನಾಣ್ಯಗಳ ಮೇಲೆ ಶಿವನ ಮತ್ತು ನಂದಿಯ ಚಿತ್ರಗಳು ಕಂಡುಬರುತ್ತವೆ. ಎರನಡೆ ಕ್ಯಾಡ್‌ಫಿಸಸ್ ಕ್ರಿ.ಶ. 78ರಲ್ಲಿ ಕಾಲವಾದನು. ಇವನ ತರುವಾಯ ಕಾನಿಷ್ಕನು ಸಿಂಹಾಸನಕ್ಕೆ ಬಂದನು.

**ಕಾನಿಷ್ಕ**

ಕಾನಿಷ್ಕನು ಕುಶಾನರ ದೊರೆಗಳಲ್ಲೇ ಅಲ್ಲದೆ ಪ್ರಾಚೀನ ಭಾರತವನ್ನಾಳಿದ ದೊರೆಗಳಲ್ಲೂ ಒಬ್ಬ ಪ್ರಸಿದ್ಧ ದೊರೆಯಾಗಿದ್ದಾನೆ. ಇವನು ಕ್ರಿ.ಶ. 78ರಿಂದ 125ರವರೆಗೆ ರಾಜ್ಯವಾಳಿದನು. ಕಾನಿಷ್ಕನು ಮಹಾದಿಗ್ವಿಜಯಿಯೂ ದಕ್ಷ ಆಡಳಿತಗಾರನೂ ಮತ್ತು ಬೌದ್ಧಮತದ ಪ್ರೋತ್ಸಾಹಕನೂ ಹಾಗೂ ಸಾಹಿತ್ಯ ಮತ್ತು ಕಲೆಗಳ ಪ್ರೋತ್ಸಾಹಕನೂ ಆಗಿ ಕೀರ್ತಿಗಳಿಸಿಕೊಂಡಿದ್ದಾನೆ. ಇವನ ಕಾಲದಲ್ಲಿ ಕುಶಾನರ ಅಧಿಕಾರವು ಭಾರತದಲ್ಲಿ ಅತ್ಯುನ್ನತಿಯನ್ನು ಮುಟ್ಟಿತು. ಕಾನಿಷ್ಕನು ಭಾರತದಲ್ಲಿ ಎರಡನೆ ಬಾರಿಗೆ ರಾಜಕೀಯ ಏಕತೆಯನ್ನೇರ್ಪಡಿಸಿದನು. ಕಾನಿಷ್ಕನ ಸಾಮ್ರಾಜ್ಯವು ಪಶ್ಚಿಮದಲ್ಲಿ ಕೊರಾಸನ್‌ನಿಂದ ಹಿಡಿದು ಪೂರ್ವದಲ್ಲಿ ಬಿಹಾರದವರೆಗೂ ಉತ್ತರದಲ್ಲಿ ಕೋಟಾನ್‌ನಿಂದ ದಕ್ಷಿಣದಲ್ಲಿ ಕೊಂಕಣದವರೆಗೂ ವಿಸ್ತರಿಸಿದ್ದಿತು. ಉತ್ತರಪ್ರದೇಶ, ಮಧ್ಯಭಾರತ ಮತ್ತು ಕಾಬೂಲ್ ಪ್ರದೇಶಗಳಲ್ಲಿ ಕಾನಿಷ್ಕನ ಅನೇಕ ಶಾಸನಗಳು ದೊರೆಕಿವೆ. ಸಾಮ್ರಾಜ್ಯ ಕಾಂಕ್ಷಿಯಾಗಿದ್ದ ಕಾನಿಷ್ಕನು ಚೀನಿ ಸಾಮ್ರಾಜ್ಯದ ಕ್ಯಾಷ್‌ಘರ್, ಯಾರ್ಕಂಡ್ ಮತ್ತು ಕೋಟಾನ್‌ಗಳನ್ನು ಗೆದ್ದು ತನ್ನ ಸಾಮ್ರಾಜ್ಯಕ್ಕೆ ಸೇರಿಸಿಕೊಂಡಿದ್ದನು. ಕಾನಿಷ್ಕನು ಚೀನಿಯರ ವಿರುದ್ಧ ಗಳಿಸಿದ ವಿಜಯದ ನಂತರ 'ದೇವಪುತ್ರ' ಎಂಬ ಬಿರುದನ್ನು ಧರಿಸಿದನು. ಕಾನಿಷ್ಕನು ಪಾಟಲೀಪುತ್ರದ ಹಾಗೂ ಸಕೇಟದ ರಾಜರುಗಳೊಂದಿಗೆ ಹೋರಾಟ ನಡೆಸಿದುದಾಗಿ ತಿಳಿದುಬರುತ್ತದೆ. ಕಾಶ್ಮೀರವು ಕಾನಿಷ್ಕನ ಸಾಮ್ರಾಜ್ಯದ ಒಂದು ಭಾಗವಾಗಿತ್ತೆಂದು 'ರಾಜತರಂಗಿಣಿ' ಕರ್ತೃವಾದ ಕಲ್ಹಣನು ತಿಳಿಸುತ್ತಾನೆ. ಪುರುಷಪುರ ಅಥವ ಇಂದಿನ ಪಾಕೀಸ್ತಾನದ ಪೇಷಾವರ್ ಇವನ ರಾಜಧಾನಿಯಾಗಿತ್ತು.

ಕಾನಿಷ್ಕನು ಒಬ್ಬ ಪ್ರಗತಿಪರ ದೊರೆಯಾಗಿದ್ದು ವಿದ್ವಾಂಸರಿಗೆ ಉದಾರ ಪ್ರೋತ್ಸಾಹ ನೀಡಿದ್ದನು. ಸಾಹಿತ್ಯಾಭಿಮಾನಿಯಾಗಿದ್ದ ಕಾನಿಷ್ಕನು ಬೌದ್ಧ ದಾರ್ಶನಿಕರಾದ ಅಶ್ವಘೋಷ, ಪಾರ್ಶ್ವ ಮತ್ತು ವಸುಮಿತ್ರ ಮೊದಲಾದ ಬೌದ್ಧ ವಿದ್ವಾಂಸರಿಗೆ

ಉದಾರ ಪ್ರೋತ್ಸಾಹ ನೀಡಿದ್ದನು. ಅಶ್ವಘೋಷನು ಪ್ರಖ್ಯಾತ ಕವಿಯೂ ದಾರ್ಶನಿಕನೂ ಮತ್ತು ನಾಟಕ ರಚನೆಕಾರನೂ ಆಗಿದ್ದಿನು. ಸಂಸ್ಕೃತದಲ್ಲಿ ರಚಿಸಲ್ಪಟ್ಟಿರುವ 'ಬುದ್ಧ ಚರಿತ' ಎಂಬ ಮಹಾಕಾವ್ಯವು ಇವನ ಮೇರು ಕೃತಿ. ಇವನ ಶೈಲಿಯಿಂದ ಕಾಳೀದಾಸ ಮತ್ತು ಭಾಸಕವಿಯು ಪ್ರಭಾವಿತರಾಗಿರುವುದಾಗಿ ಕೆಲವು ವಿದ್ವಾಂಸರು ಅಭಿಪ್ರಾಯ ಪಡುವರು. 'ಸೌಂದರಾನಂದ ಕಾವ್ಯ' 'ವಜ್ರಸೂಚಿ' 'ಸೂತ್ರಾಲಂಕಾರ ಮತ್ತು 'ಸಾರಿಪುತ್ರ ಪ್ರಕರಣ' ಇವನ ಇತರ ಪ್ರಸಿದ್ಧ ಕೃತಿಗಳು. ಚರಕನು ವೈದ್ಯಕೀಯ ಶಾಸ್ತ್ರವನ್ನು ಕುರಿತು 'ಚರಕಸಂಹಿತೆ' ಎಂಬ ಶ್ರೇಷ್ಠ ಕೃತಿಯನ್ನು ರಚಿಸಿದನು. ವಸುಮಿತ್ರನು 'ಮಹಾವಿಭಾಷ'ವನ್ನೂ, ನಾಗಾರ್ಜುನನು 'ಪ್ರಜ್ಞಾಪರಿಮಿತ ಸೂತ್ರಶಾಸ್ತ್ರ' ಎಂಬ ಕೃತಿಗಳನ್ನು ರಚಿಸಿದರು. ಇವುಗಳಲ್ಲದೆ 'ಸಧರ್ಮ ಪುಂಡರಿಕ' ಮತ್ತು 'ಲಲಿತ ವಿಸ್ತಾರ' ಎಂಬ ಕೃತಿಗಳು ಈ ಕಾಲದಲ್ಲಿ ರಚಿತವಾದವು. ಇವರೆಲ್ಲರ ಕೃತಿಗಳು ಕುಶಾನರ ಕಾಲದ ಧಾರ್ಮಿಕ, ದಾರ್ಶನಿಕ, ಸಾಹಿತ್ಯ ಹಾಗೂ ವೈಜ್ಞಾನಿಕ ಕ್ಷೇತ್ರಕ್ಕೆ ಸಂಬಂಧಿಸಿದ ಸಾಧನೆಗಳನ್ನೇ ಅಲ್ಲದೆ ಕುಶಾನರ ಕಾಲದ ಸಾಂಸ್ಕೃತಿಕ ಪ್ರಗತಿಯನ್ನೂ ಪ್ರತಿಬಿಂಬಿಸುತ್ತವೆ.

ಕಾನಿಷ್ಕನು ಪ್ರಾಚೀನ ಭಾರತದ ಇತಿಹಾಸದಲ್ಲಿ ತನ್ನ ಮಿಲಿಟರಿ ಸಾಧನೆಗಳಿಗಿಂತಲೂ ಹೆಚ್ಚಾಗಿ ತಾನು ಬೌದ್ಧ ಧರ್ಮಾವಲಂಬಿಯಾಗಿ ಬೌದ್ಧ ಮತಕ್ಕೆ ಹೆಚ್ಚಿನ ಪ್ರೋತ್ಸಾಹ ತೋರಿಸಿದುದರಿಂದ ಪ್ರಸಿದ್ಧಿಯಾಗಿದ್ದಾನೆ. ಬೌದ್ಧರ ದಾಖಲೆಗಳು ಅವನನ್ನು 'ಎರಡನೆ ಅಶೋಕ'ನೆಂದು ಪರಿಗಣಿಸಿವೆ. ಬೌದ್ಧಧರ್ಮದಲ್ಲಿ ಆಸಕ್ತಿಯನ್ನು ಹೊಂದಿದ್ದ ಕಾನಿಷ್ಕನು ಬೌದ್ಧಧರ್ಮದ ತತ್ವಗಳನ್ನು ತನಗೆ ಬೊಧಿಸುವಂತೆ ಒಬ್ಬ ಬೌದ್ಧ ಸಂನ್ಯಾಸಿಯನ್ನು ಕೇಳಿದುದಾಗಿಯೂ, ಆದರೆ ಅವನ ಬೋಧನೆಗಳಿಂದ ಅವನಿಗೆ ಸಮಾಧಾನಕರವಾದ ವಿವರಗಳು ದೊರೆಯಲಿಲ್ಲವೆಂದು ಕೊನೆಗೆ ಪಾರ್ಶ್ವನೆಂಬ ಬೌದ್ಧದಾರ್ಶನಿಕನ ಸಲಹೆಯ ಮೇರೆಗೆ ಬೌದ್ಧ ಸಮ್ಮೇಳನವೊಂದನ್ನು ಸಮಾವೇಶಗೊಳಿಸಿದನೆಂದು ಕ್ರಿ.ಶ. ಎಂಟನೆ ಶತಮಾನದಲ್ಲಿ ಭಾರತಕ್ಕೆ ಭೇಟಿ ಕೊಟ್ಟಿದ್ದ ಹ್ಯೂಯನ್ - ತ್ಸಾಂಗನು ಹೇಳುತ್ತಾನೆ. ಕಾನಿಷ್ಕನು ಕಾಶ್ಮೀರದ ಕುಂಡಲವನ ವಿಹಾರದಲ್ಲಿ ನಾಲ್ಕನೆ ಬೌದ್ಧ ಸಮ್ಮೇಳನವನ್ನು ಕ್ರಿ.ಶ. 102ರಲ್ಲಿ ಸಮಾವೇಶಗೊಳಿಸಿದನು. ಈ ಸಮ್ಮೇಳನದ ಅಧ್ಯಕ್ಷತೆಯನ್ನು ವಸುಮಿತ್ರನೂ ಉಪಾಧ್ಯಕ್ಷತೆಯನ್ನು ಅಶ್ವಘೋಷನೂ ವಹಿಸಿದ್ದರು. ಅಲ್ಲದೆ ಈ ಸಮ್ಮೇಳನದಲ್ಲಿ ಸುಪ್ರಸಿದ್ಧ ಬೌದ್ಧ ವಿದ್ವಾಂಸರಾದ ಮಥುರ, ನಾಗಾರ್ಜುನ, ಪಾರ್ಶ್ವ ಮತ್ತು ಸಂಘರ್ಷಕ ಮೊದಲಾದವರು ಭಾಗವಹಿಸಿದ್ದರು. ಸುಮಾರು ಐದುನೂರು ಬೌದ್ಧ ಸಂನ್ಯಾಸಿಗಳು ಈ ಸಮ್ಮೇಳನದ ಕಾರ್ಯ ಕಲಾಪಗಳಲ್ಲಿ ಭಾಗವಹಿಸಿದ್ದರು. ಈ ಕಾಲಕ್ಕಾಗಲೇ ಬೌದ್ಧ ಮತವು ಒಡೆದು ಹೀನಾಯಾನ ಮತ್ತು ಮಹಾಯಾನ ಎಂಬ ಎರಡು ಪಂಥಗಳು ಅಸ್ತಿತ್ವಕ್ಕೆ ಬಂದಿದ್ದವು. ಈ ಸಮ್ಮೇಳನವು ಮಹಾಯಾನ ಪಂಥಕ್ಕೆ ಸಂಬಂಧಿಸಿದ ಬೌದ್ಧ ಸಾಹಿತ್ಯವನ್ನು ಪರಿಷ್ಕರಿಸಿ ಬೌದ್ಧ ಧರ್ಮದ ದಾರ್ಶನಿಕ ತತ್ವಗಳ ವಿಶ್ವಕೋಶವಾದ 'ಮಹಾ ವಿಭಾಸ'ವನ್ನು ಸಂಸ್ಕೃತ ಭಾಷೆಯಲ್ಲಿ ಪ್ರಕಟಿಸಿತು. ಹೀನಾಯಾನ ಪಂಥವು ಸಂಪ್ರದಾಯ ಶರಣವಾಗಿದ್ದ ಬೌದ್ಧಮತದ ಮೂಲತತ್ವಗಳನ್ನು ಚಾಚೂ ತಪ್ಪದೆ ಪಾಲಿಸುತ್ತ ಮುಂದುವರಿಯಿತು. ಮಹಾಯಾನ ಪಂಥವು ಹಿಂದೂ ಧರ್ಮದ ಸಂಪರ್ಕದಿಂದ ಹಲವಾರು ಹೊಸ ತತ್ವಗಳನ್ನು ಮತ್ತು ಸಂಪ್ರದಾಯಗಳನ್ನು

ಅನುಷ್ಠಾನಕ್ಕೆ ತಂದಿತು. ಬುದ್ಧನನ್ನು ಮತ್ತು ಬೋಧಿಸತ್ವರನ್ನು ದೈವತ್ವಕ್ಕೇರಿಸಿ ಮೂರ್ತಿ ಪೂಜೆಯನ್ನು ಜಾರಿಗೆ ತಂದಿತು. ಹಲವಾರು ರೀತಿಯ ಪೂಜೆ ಪುರಸ್ಕಾರಗಳು ಆಚಾರ ನಿಯಮಗಳು ಬಳಕೆಗೆ ಬಂದವು. ಮಹಾಯಾನ ಪಂಥವು ಹೀನಾಯನ ಪಂಥಕ್ಕಿಂತ ಹೆಚ್ಚು ಜನಪ್ರಿಯವಾಗಿ ಹೊರದೇಶಗಳಲ್ಲೂ ಹರಡಿತು. ಕಾನಿಷ್ಕನು ಕಾಶ್ಮೀರ ಪ್ರದೇಶವನ್ನು ಬೌದ್ಧ ಸಂಘಕ್ಕೆ ದತ್ತಿಯಾಗಿ ಕೊಟ್ಟಿದ್ದನೆಂದು ಹೇಳಲಾಗಿದೆ.

ಕಾನಿಷ್ಕನು ಬೌದ್ಧಮತದ ಪ್ರಸಾರ ಕಾರ್ಯದಲ್ಲೂ ಬಹುಮುಖ್ಯ ಪಾತ್ರವಹಿಸಿದ್ದನು. ಅವನ ಶಾಸನಗಳು ಮತ್ತು ನಾಣ್ಯಗಳು ಅವನು ಬೌದ್ಧಮತಕ್ಕೆ ನೀಡಿದ್ದ ಪ್ರೋತ್ಸಾಹವನ್ನು ಕುರಿತು ಸಮರ್ಥಿಸುತ್ತವೆ. ಅಶೋಕನಂತೆ ಕಾನಿಷ್ಕನು ಯಾರ್ಕಂಡ್ ಕ್ಯಾಷ್‌ಘರ್ ಮತ್ತು ಕೋಟಾನ್‌ಗಳ ಮೇಲಿನ ಸೈನಿಕ ಕಾರ್ಯಾಚರಣೆಗಳ ಕಾಲದಲ್ಲಿ ಸಂಭವಿಸಿದ ರಕ್ತಪಾತದಿಂದ ಮನನೊಂದು ಬುದ್ಧನ ಬೋಧನೆಗಳಲ್ಲಿ ಮಾನಸಿಕ ಶಾಂತಿಯನ್ನು ಕಂಡುಕೊಂಡನೆಂದು ಮತ್ತು ಈ ಕಾರಣದಿಂದ ಅವನು ನಾಲ್ಕನೇ ಬೌದ್ಧ ಸಮ್ಮೇಳನವನ್ನು ಸಮಾವೇಶಗೊಳಿಸಿದನೆಂದು ಅಭಿಪ್ರಾಯ ಪಡಲಾಗಿದೆ. ಕಾನಿಷ್ಕನು ಬೌದ್ಧಮತಕ್ಕೆ ಪ್ರೋತ್ಸಾಹ ನೀಡಿದ್ದರೂ ಪರಮತ ದ್ವೇಷಿಯಾಗಿರಲಿಲ್ಲ. ಅವನು ಇತರ ಮತಗಳಿಗೂ ಸಹಿಷ್ಣುತೆ ತೋರಿಸಿದ್ದನು. ಅವನ ನಾಣ್ಯಗಳ ಮೇಲೆ ಹಿಂದು, ಬೌದ್ಧ ಪರ್ಶಿಯನ್ ಮತ್ತು ಗ್ರೀಕ್ ಧರ್ಮದ ದೇವರುಗಳ ಚಿತ್ರಗಳು ಕಂಡುಬರುತ್ತವೆ. ಅವನ ಸಾಮ್ರಾಜ್ಯದಲ್ಲಿನ ಪ್ರಜೆಗಳು ವಿವಿಧ ಧರ್ಮಗಳಿಗೆ ಸೇರಿದ್ದರು. ಗ್ರೀಕರು, ಸುಮೇರಿಯನ್ನರು ಜೊರಾಸ್ಟ್ರಿಯನ್ನರು ಎಲಮೈಟರು ಮತ್ತು ಹಿಂದುಗಳೇ ಮೊದಲಾದವರ ದೇವರುಗಳನ್ನು ಗೌರವದಿಂದ ಕಾಣುತ್ತಿದ್ದನು.

ಕಾನಿಷ್ಕನು ವಾಸ್ತುಶಿಲ್ಪ, ಶಿಲ್ಪಕಲೆಯ ಪೋಷಕನೂ ಆಗಿದ್ದನು. ಅಜಿಸಿಲಾಸ್ ಎಂಬ ಗ್ರೀಕ್ ಶಿಲ್ಪಿಯು ಇವನ ಉದಾರಾಶ್ರಯ ಪಡೆದಿದ್ದನು. ಅನೇಕ ಸ್ತೂಪಗಳನ್ನೂ, ವಿಹಾರಗಳನ್ನು ಕಟ್ಟಿಸಿದನು. ಇಂಡೋ ಗ್ರೀಕರ ಕಾಲದಲ್ಲಿ ಆರಂಭವಾಗಿದ್ದ ಗಾಂಧಾರ ಕಲೆಯು ಇವನ ಕಾಲದಲ್ಲಿ ಪರಾಕಾಷ್ಠತೆಯನ್ನು ಮುಟ್ಟಿತು. ತಕ್ಷಶಿಲೆ ಪೇಷಾವರ್‌ಗಳು ಗಾಂಧಾರ ಕಲೆಯ ಮುಖ್ಯ ಕೇಂದ್ರಗಳಾಗಿದ್ದವು. ಬುದ್ಧನ ಬೃಹತ್ ವಿಗ್ರಹಗಳ ನಿರ್ಮಾಣ ಕಾರ್ಯವು ಆರಂಭವಾಯಿತು. ಕಾನಿಷ್ಕನು ಪೇಷಾವರ್‌ನಲ್ಲಿ ನಿರ್ಮಿಸಿದ್ದ ಸುಪ್ರಸಿದ್ದ ಚೈತ್ಯವು ಅಂದಿನ ಜಗತ್ತಿನ ಆಶ್ಚರ್ಯಕರ ನಿರ್ಮಾಣಗಳಲ್ಲೊಂದಾಗಿತ್ತು. ಶಿಲ್ಪಕಲೆಗೆ ಸಂಬಂಧಿಸಿದಂತೆ ಕಾನಿಷ್ಕನ ಪ್ರತಿಮೆಯೊಂದು ಮಥುರದಲ್ಲಿ ದೊರೆತಿದೆ. ಕಾನಿಷ್ಕನು ತನ್ನ ಹೆಸರಿನಲ್ಲಿ ಕಾಶ್ಮೀರದಲ್ಲಿ 'ಕಾನಿಷ್ಕಪುರ' ಎಂಬ ಹೊಸ ಪಟ್ಟಣವನ್ನು ನಿರ್ಮಿಸಿದ್ದನು. 'ಕಾಶ್ಮೀರದಲ್ಲಿರುವ ಈಗಿನ ಕಾನಿಷ್ ಪುರವೇ ಅದಾಗಿರಬಹುದೆಂದು ಇತಿಹಾಸಕಾರರು ಅಭಿಪ್ರಾಯ ಪಡುವರು. ಕಾನಿಷ್ಕನು ಕ್ರಿ.ಶ. 78ರಲ್ಲಿ ಶಕ ವರ್ಷವನ್ನು ಜಾರಿಗೆ ತಂದನು.

ಕಾನಿಷ್ಕನ ಮರಣಾನಂತರ ವಸಿಷ್ಕ ಮತ್ತು ಹುವಿಷ್ಕ ಎಂಬವರು ಕೆಲವು ವರ್ಷಗಳ ಕಾಲ ರಾಜ್ಯವಾಳಿದರು. ಅನಂತರ ವಾಸುದೇವ ಎಂಬವನು ರಾಜ್ಯವಾಳಿದನು. ಇವನು ಕುಶಾನರ ಕೊನೆಯ ರಾಜರುಗಳಲ್ಲಿ ಪ್ರಸಿದ್ಧನಾದವನು. ವಾಸುದೇವನು ಕ್ರಿ.ಶ. 145ರಿಂದ 176ರವರೆಗೆ ರಾಜ್ಯವಾಳಿದುದಾಗಿ ಕಂಡುಬರುತ್ತದೆ. ಈ ವೇಳೆಗಾಗಲೇ ಕುಶಾನರ ರಾಜ್ಯವು ಮಥುರ ಪ್ರದೇಶಕ್ಕೆ ಸೀಮಿತವಾಗಿತ್ತು. ಮಥುರ

ಮತ್ತು ಆದರ ಸುತ್ತಮುತ್ತಲಿನ ಪ್ರದೇಶದಲ್ಲಿ ವಾಸುದೇವನ ನಾಣ್ಯಗಳು ಮತ್ತು ಶಾಸನಗಳು ದೊರೆಕಿವೆ. ವಾಸುದೇವನು ಶಿವನ ಮತ್ತು ವಿಷ್ಣುವಿನ ಆರಾಧಕನಾಗಿದ್ದನು. ವಾಸುದೇವನ ನಂತರ ಕುಶಾನರ ಅಧಿಕಾರವು ತ್ವರಿತವಾಗಿ ಅವನತಿ ಹೊಂದಿ ಕಣ್ಮರೆಯಾಯಿತು. ಆದಾಗ್ಯೂ ಈ ಸಂತತಿಗೆ ಸೇರಿದವರು ಬಹಳ ಕಾಲದವರೆಗೆ ಕಾಬೂಲ್ ಮತ್ತು ಪಂಜಾಬಿನ ಸ್ವಲ್ಪಭಾಗದ ಮೇಲೆ ಅಧಿಕಾರ ಹೊಂದಿದ್ದರು.

ಕುಶಾನರ ಕಾಲವು ಭಾರತದ ರಾಜಕೀಯ ಆರ್ಥಿಕ ಮತ್ತು ಸಾಂಸ್ಕೃತಿಕ ಇತಿಹಾಸದಲ್ಲಿ ಪ್ರಮುಖ ಸ್ಥಾನವನ್ನು ಪಡೆದುಕೊಂಡಿದೆ. ಕುಶಾನರ ಅಧಿಕಾರದ ಪ್ರಭಾವವು ರೋಮನ್ನರ ಜಗತ್ತಿನ ಗಡಿಗಳನ್ನು ಮುಟ್ಟಿದ್ದಿತು. ಇದರ ಪರಿಣಾಮವಾಗಿ ರೋಮನ್ ಸಾಮ್ರಾಜ್ಯದೊಂದಿಗೆ ವ್ಯಾಪಾರ ಮತ್ತು ವಾಣಿಜ್ಯ ಸಂಪರ್ಕಗಳು ಹೆಚ್ಚಿ ರೋಮನ್ ಸಾಮ್ರಾಜ್ಯದಿಂದ ಅಪಾರ ಚಿನ್ನವು ಭಾರತಕ್ಕೆ ಬಂದಿತು. ಎರಡನೆಯದಾಗಿ ಕುಶಾನರ ಸಾಮ್ರಾಜ್ಯವು ನಾಲ್ಕು ಪ್ರತ್ಯೇಕ ಸಂಸ್ಕೃತಿಗಳ ಮತ್ತು ಸಂಪ್ರದಾಯಗಳ ಅಂದರೆ ಭಾರತೀಯರ ಪರ್ಶಿಯನ್ನರ, ರೋಮನ್ನರ ಮತ್ತು ಚೀನಿಯರ ಸಮಾಗಮ ಕೇಂದ್ರವಾಗಿತ್ತು. ಕುಶಾನರ ದೊರೆಗಳು ಬೌದ್ಧಮತಕ್ಕೆ ಕೊಟ್ಟ ಪ್ರೋತ್ಸಾಹದಿಂದಾಗಿ ಬೌದ್ಧಮತವು ಮಧ್ಯಏಷ್ಯಾ ಮತ್ತು ಚೀನಾಗಳಲ್ಲಿ ಹರಡಿ ಅಲ್ಲಿ ಬಲವಾಗಿ ಬೇರೂರಿತು. ಮೂರನೆಯದಾಗಿ ಕುಶಾನರು ವಾಸ್ತುಶಿಲ್ಪ ಮತ್ತು ಶಿಲ್ಪಕಲೆಗೆ ತೋರಿಸಿದ ಪ್ರೊತ್ಸಾಹದಿಂದಾಗಿ ಭಾರತದಲ್ಲಿ ಪ್ರೇಕ್ಷಣೀಯವಾದ ಸ್ಮಾರಕಗಳು ಮತ್ತು ವಿಗ್ರಹಗಳು ನಿರ್ಮಾಣಗೊಂಡವು. ಸಾಹಿತ್ಯ, ಕಲೆ ಮತ್ತು ವಿಜ್ಞಾನಗಳು ಅಭಿವೃದ್ಧಿ ಹೊಂದಿದವು. ಮೇಲಾಗಿ ಭಾರತವು ವಿದೇಶಿಯರಿಂದ ಹಲವಾರು ಹೊಸ ಹೊಸ ಅಭಿಪ್ರಾಯಗಳನ್ನು ತನ್ನ ಸಂಸ್ಕೃತಿಯಲ್ಲಿ ಅಳವಡಿಸಿಕೊಳ್ಳಲು ಸಾಧ್ಯವಾಯಿತು.

ಒಟ್ಟಾರೆ ಹೇಳುವುದಾದರೆ ಕುಶಾನರ ಸುಮಾರು ಒಂದೂವರೆ ಶತಮಾನದ ಕಾಲದ ಆಳ್ವಿಕೆಯ ಅವಧಿಯಲ್ಲಿ ರಾಜಕೀಯ, ಆರ್ಥಿಕ, ಸಾಮಾಜಿಕ, ಧಾರ್ಮಿಕ, ದಾರ್ಶನಿಕ, ವಿಜ್ಞಾನ ಹಾಗೂ ಕಲೆ ಮತ್ತಿತರ ಕ್ಷೇತ್ರಗಳಲ್ಲಿ ಮಹತ್ವಪೂರ್ಣ ಸಾಧನೆಗಳು ಜರುಗಿದವು. ಕುಶಾನರು ತಮ್ಮ ಅಧಿಕಾರವನ್ನು ಸ್ಥಾಪಿಸುವ ಮುನ್ನ ಭಾರತದಲ್ಲಿ ಮೌರ್ಯರ ನಂತರ ಏರ್ಪಟ್ಟಿದ್ದ ರಾಜಕೀಯ ಅನೈಕ್ಯತೆಯನ್ನು ಕೊನೆಗಾಣಿಸಿ ಉತ್ತರ ಭಾರತದಲ್ಲಿ ಮತ್ತೊಮ್ಮೆ ರಾಜಕೀಯ ಏಕತೆಯನ್ನೇರ್ಪಡಿಸಿ, ವ್ಯವಸ್ಥಿತ ಸಾಮ್ರಾಜ್ಯವನ್ನು ನಿರ್ಮಿಸಿ ಮುಂಬರುವ ರಾಜರುಗಳಿಗೆ ಮಾರ್ಗದರ್ಶನ ಮಾಡಿದುದು ಗಮನಾರ್ಹ ಸಂಗತಿಯಾಗಿದೆ.

### ಸಾಮಾಜಿಕ, ಆರ್ಥಿಕ ಮತ್ತು ಧಾರ್ಮಿಕ ಸ್ಥಿತಿಗಳು

ಈ ಅವಧಿಯಲ್ಲಿ ಭಾರತದಲ್ಲಿ ರಾಜಕೀಯ ಅನೈಕ್ಯತೆಯು ಕಂಡುಬರುತ್ತಿದ್ದು ಯಾವ ಪ್ರಬಲ ಸಾಮ್ರಾಜ್ಯವೂ ಇರಲಿಲ್ಲ. ಮೌರ್ಯರ ಅಧಿಕಾರವು ಅವನತಿ ಹೊಂದಿದ ಮೇಲೆ ಅದರ ಸ್ಥಾನದಲ್ಲಿ ಅನೇಕ ಸಣ್ಣ ಪುಟ್ಟ ರಾಜ್ಯಗಳು ಅಸ್ತಿತ್ವಕ್ಕೆ ಬಂದವು. ಮೌರ್ಯರ ನಂತರ ಶುಂಗರು, ಕಣ್ವರು, ಆಂಧ್ರರು, ಚೇದಿಗಳು ಮತ್ತು ವಿದೇಶಿಯರಾದ ಇಂಡೋ-ಗ್ರೀಕರು, ಪಾರ್ಥಿಯನ್ನರು, ಶಕರು ಮತ್ತು ಕುಶಾನರು ರಾಜಕೀಯ ವೇದಿಕೆಯ ಮೇಲೆ ಕಾಣಿಸಿಕೊಂಡರು. ಇವರಲ್ಲಿ ಕುಶಾನರು ಮತ್ತು ಆಂಧ್ರರು ಪ್ರಬಲರಾಗಿ ವಿಶಾಲ ಸಾಮ್ರಾಜ್ಯಗಳನ್ನು ನಿರ್ಮಿಸಿದರು. ಆದರೆ ಈ

ಸಾಮ್ರಾಜ್ಯಗಳು ಭಾರತದ ಎಲ್ಲ ಭಾಗಗಳನ್ನೂ ಒಳಗೊಂಡಿರಲಿಲ್ಲ. ಹಿಂದಿನಂತೆಯೆ ಈ ಕಾಲದಲ್ಲೂ ಸಣ್ಣಪುಟ್ಟ ರಾಜ್ಯಗಳ ಜೊತೆಗೆ ಗಣರಾಜ್ಯಗಳೂ ಅಸ್ತಿತ್ವದಲ್ಲಿದ್ದು ಮುಂದುವರಿದಿದ್ದವು. ಎರಡನೆಯದಾಗಿ ರಾಜಕೀಯ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಭಾರತದಲ್ಲಿ ರಾಜ್ಯವಾಳಿದ ವಿದೇಶೀಯರು ತಮ್ಮ ಆಡಳಿತದಲ್ಲಿ ಹಲವಾರು ವಿಧಾನಗಳನ್ನು ಜಾರಿಗೆ ತಂದರು. ಶಕರು ಪರ್ಶಿಯನ್ನರ ಆಡಳಿತ ಕ್ರಮವನ್ನು ಮುಂದುವರಿಸಿದರು. ಅವರು ರಾಜ್ಯವನ್ನು 'ಸತ್ರಪಿ'ಗಳನ್ನಾಗಿ ವಿಂಗಡಿಸಿ ಅವುಗಳ ಮೇಲ್ವಿಚಾರಣೆಗೆ 'ಸತ್ರಪ'ರೆಂಬ ಅಧಿಕಾರಿಗಳನ್ನು ನೇಮಿಸಿದ್ದರು. ಅಲ್ಲದೆ ಪರ್ಶಿಯದ ಅನೇಕ ಮಿಲಿಟರಿ ಗೌವರ್ನರ್‌ಗಳನ್ನು ತಮ್ಮ ಸೇವೆಯಲ್ಲಿ ನೇಮಿಸಿಕೊಂಡಿದ್ದರು. ಮೂರನೆಯದಾಗಿ ಮೂಲತಃ ಗ್ರೀಕ್ ಮತ್ತು ರೋಮನ್ನರ ರಾಜಕೀಯ ಪದ್ಧತಿಯಾಗಿದ್ದ ಜಂಟಿ ಸರ್ಕಾರ ಅಥವ ದ್ವೈರಾಜ್ಯ ಪದ್ಧತಿಯನ್ನು ಭಾರತದಲ್ಲಿ ಜಾರಿಗೆ ತಂದರು. ದ್ವಿಸರ್ಕಾರ ಪದ್ಧತಿಯು ಇಂಡೋ-ಗ್ರೀಕರು ಮತ್ತು ಪಾರ್ಥಿಯನ್ನರಲ್ಲಿ ಅನುಸರಣೆಯಲ್ಲಿತ್ತು. ನಾಲ್ಕನೆಯದಾಗಿ, ರಾಜರುಗಳು ಆಡಳಿತದಲ್ಲಿ ರಾಜಕೀಯ ಸತ್ಸಂಪ್ರದಾಯಗಳನ್ನು ಎತ್ತಿ ಹಿಡಿದು ಧರ್ಮಭೀರುಗಳಾಗಿ ಆಡಳಿತ ನಡೆಸಿದರು. ಅವರು ರಾಜ್ಯದ ರಕ್ಷಣೆಗಾಗಿ ಅಪಾರ ಸೈನ್ಯವನ್ನಿಟ್ಟುಕೊಂಡಿದ್ದರೂ ಪ್ರಜಾಹಿತ ಚಿಂತಕರಾಗಿದ್ದರು. ಕಳಿಂಗದ ಖಾರವೇಲ ಹಾಗೂ ಶಕಸತ್ರಪ ರುದ್ರದಾಮನ್ ಪ್ರಗತಿಪರ ರಾಜರುಗಳಾಗಿದ್ದು ರಾಜ್ಯಾಡಳಿತದಲ್ಲಿ ಒಳ್ಳೆಯ ಸಂಪ್ರದಾಯಗಳನ್ನೂ ರೂಪಿಸಿದ್ದರು. ಅವರು ತಮ್ಮ ರಾಜ್ಯಗಳಲ್ಲಿ ಅನೇಕ ರೀತಿಯ ಜನೋಪಯುಕ್ತ ಕಾರ್ಯಗಳನ್ನು ಕೈಗೊಂಡಿದ್ದು ತಮ್ಮ ಪ್ರಜೆಗಳ ಪ್ರೀತಿಗೆ ಪಾತ್ರರಾಗಿದ್ದರು. ಸ್ವಯಂ ಅಧಿಕಾರವನ್ನು ಹೊಂದಿದ್ದ ಕೆಲವು ಸಂಸ್ಥೆಗಳು ನಗರ ಹಾಗೂ ಗ್ರಾಮಾಂತರ ಪ್ರದೇಶಗಳಲ್ಲಿ ಈ ಕಾಲದಲ್ಲೂ ಮುಂದುವರಿದಿದ್ದವು.

ಸಾಮಾಜಿಕವಾಗಿ, ಭಾರತೀಯ ಸಮಾಜದ ಮೇಲೂ ವಿದೇಶಿಯರು ತಮ್ಮ ಪ್ರಭಾವವನ್ನು ಬೀರಿದರು. ಅವರು ಭಾರತೀಯರೊಂದಿಗೆ ಏರ್ಪಡಿಸಿಕೊಂಡ ಸಂಪರ್ಕದಿಂದಾಗಿ ಹಿಂದೂಗಳ ಸಾಮಾಜಿಕ ವ್ಯವಸ್ಥೆಯ ಮೇಲೆ ಪ್ರಭಾವವು ಕಂಡು ಬಂದಿತು. ವಿದೇಶಿಯರು ಭಾರತದಲ್ಲಿ ಪ್ರತ್ಯೇಕ ಜನಾಂಗವಾಗಿ ಉಳಿಯಲಿಲ್ಲ. ಅವರು ಭಾರತೀಯ ಸಮಾಜದಲ್ಲಿ ಬೆರೆತು ಭಾರತೀಯ ಸಂಸ್ಕೃತಿಯನ್ನು ವಿಕಾಸಗೊಳಿಸಿದರು. ವಿದೇಶಿಯರು ಕೆತ್ತಿಸಿದ ಶಾಸನಗಳು ಮತ್ತು ಜಾರಿಗೆ ತಂದ ನಾಣ್ಯಗಳು ಈ ಕಾಲದ ಆರ್ಥಿಕ ಸ್ಥಿತಿಗತಿಗಳ ಮೇಲೆ ಸಾಕಷ್ಟು ಬೆಳಕನ್ನು ಚೆಲ್ಲುತ್ತವೆ. ಗ್ರಾಮಾಂತರ ಪ್ರದೇಶಗಳಲ್ಲಿ ಹಿಂದಿನಂತೆಯೆ ವ್ಯವಸಾಯವು ಜನರ ಪ್ರಧಾನ ಕಸುಬಾಗಿ ಮುಂದುವರಿಯಿತು. ದೇಶದ ವಿವಿಧ ಭಾಗಗಳಲ್ಲಿ ಅನೇಕ ರೀತಿಯ ಕೈಗಾರಿಕೆಗಳಿದ್ದವು. ರಾಜರುಗಳು ವ್ಯವಸಾಯ ಮತ್ತು ಕೈಗಾರಿಕೆಗಳಿಗೆ ಪ್ರೋತ್ಸಾಹ ನೀಡಿದ್ದರು. ವಿದೇಶಗಳೊಂದಿಗೆ ವ್ಯಾಪಾರವು ಲಾಭದಾಯಕವಾಗಿ ನಡೆಯುತ್ತಿತ್ತು. ಆಫ್ರಿಕ, ಅರೇಬಿಯ ಮತ್ತು ರೋಮ್ ದೇಶಗಳೊಂದಿಗೆ ಬಿರುಸಾದ ವ್ಯಾಪಾರವು ನಡೆಯುತ್ತಿತ್ತು. ವಿದೇಶಗಳೊಂದಿಗೆ ನಡೆಯುತ್ತಿದ್ದ ಲಾಭದಾಯಕ ವ್ಯಾಪಾರದಿಂದ ವರ್ತಕರು ಶ್ರೀಮಂತರೂ ಮತ್ತು ಪ್ರಭಾವಶಾಲಿಗಳೂ ಆಗಿ ಮಾರ್ಪಟ್ಟರು.

ಧಾರ್ಮಿಕ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಮೌರ್ಯರ ಕಾಲದಲ್ಲಿ ತನ್ನ ಪ್ರಾಮುಖ್ಯತೆಯನ್ನು ಕಳೆದುಕೊಂಡಿದ್ದ ವೈದಿಕ ಧರ್ಮವು ಈ ಕಾಲದಲ್ಲಿ

ಪುನರುಜ್ಜೀವನಗೊಂಡಿತು. ಅಶ್ವಮೇಧ ಮತ್ತು ವಾಜಪೇಯ ಮೊದಲಾದ ಯಜ್ಞಯಾಗಾದಿಗಳ ಆಚರಣೆಯು ಪುನಃ ಜಾರಿಗೆ ಬಂದಿತು. ಯಜ್ಞಯಾಗಾದಿಗಳ ಸಮಯದಲ್ಲಿ ಪ್ರಾಣಿಗಳನ್ನು ಬಲಿಕೊಡುವ ಪದ್ಧತಿಯನ್ನು ಶುಂಗ ಮತ್ತೆ ಶಾತವಾಹನರು ಪುನಃ ಜಾರಿಗೆ ತಂದರು. ಅಲ್ಲದೆ ವೈದಿಕ ಧರ್ಮವು ಬದಲಾದ ಪರಿಸ್ಥಿತಿಗನುಸಾರವಾಗಿ ತನ್ನ ದೃಷ್ಟಿಕೋನವನ್ನು, ಬದಲಾಯಿಸಿಕೊಂಡು ಪುಷ್ಯಮಿತ್ರ ಶುಂಗ ಮತ್ತು ಶ್ರೀ ಶಾತಕರ್ಣಿ ಮೊದಲಾದ ರಾಜರುಗಳ ಪ್ರೋತ್ಸಾಹವನ್ನು ಪಡೆದುಕೊಂಡಿತು. ಪುಷ್ಯಮಿತ್ರನು ಅಶ್ವಮೇಧಯಾಗವನ್ನೂ ಶಾತಕರ್ಣಿಯು ವೈದಿಕ ಯಜ್ಞಗಳನ್ನೂ ನೆರವೇರಿಸಿದರು. ಈ ಕಾಲದಲ್ಲಿ ಆರಂಭವಾದ ವೈದಿಕ ಧರ್ಮದ ಪುನರುಜ್ಜೀವನ ಚಳುವಳಿಯು ಮುಂದೆ ಗುಪ್ತರ ಕಾಲದಲ್ಲಿ ಪರಾಕಾಷ್ಟತೆಯನ್ನು ಮುಟ್ಟಿತು.

ಬ್ರಾಹ್ಮಣಧರ್ಮದ ಪರವಾಗಿ ಆರಂಭವಾದ ಈ ಪ್ರತಿಕ್ರಿಯೆಯ ಜೊತೆಗೆ ಆಸ್ತಿಕವಾದ ಚಳುವಳಿಗಳೂ ಆರಂಭವಾದವು. ಈ ಚಳುವಳಿಗಳಿಗೆ ಭಕ್ತಿಮಾರ್ಗವು ಮುಖ್ಯ ಆಧಾರವಾಗಿದ್ದಿತು. ಇವುಗಳಲ್ಲಿ ಭಾಗವತ ಚಳುವಳಿಯು ಮುಖ್ಯವಾಗಿದ್ದು ಮುಂದೆ ಇದರ ಪ್ರತಿಪಾದಕರು ವೈಷ್ಣವರು ಮತ್ತು ಶೈವರು ಎಂದು ಕರೆಯಲ್ಪಟ್ಟರು. ವೈಷ್ಣವರು ಮತ್ತು ಶೈವ ಪಂಥೀಯರು ವಿಷ್ಣು ಮತ್ತು ಶಿವನಲ್ಲಿ ಅಪಾರ ಭಕ್ತಿ ನಿಷ್ಠೆಯನ್ನು ಬೆಳಸಿಕೊಳ್ಳುವಂತೆ ಜನರಿಗೆ ಕರೆಕೊಟ್ಟರು. ಆದ್ದರಿಂದ ಈ ಚಳುವಳಿಗಳು ವೈದಿಕ ಧರ್ಮವನ್ನು ವಿರೋಧಿಸಿದ ಬೌದ್ಧಮತದಂತೆ ನಾಸ್ತಿಕ ವಾದದಿಂದ ಕೂಡಿದ ಚಳುವಳಿಗಳಾಗಿರಲಿಲ್ಲ. ವಿದೇಶೀಯರುಕೂಡ ಈ ಚಳುವಳಿಗಳಿಂದ ಆಕರ್ಷಿತರಾಗಿ ವೈಷ್ಣವ ಅಥವ ಶೈವ ಮತಾವಲಂಬಿಗಳಾದರು. ಕುಶಾನರ ದೊರೆ ಎರಡನೆ ಕ್ಯಾಡ್‌ಫಿಸಸ್‌ನು ತನ್ನನ್ನು ಮಹೇಶ್ವರನೆಂದು ಕರೆದುಕೊಂಡಿರುವುದು ಅವನ ನಾಣ್ಯಗಳಿಂದ ತಿಳಿದು ಬರುತ್ತದೆ. ಅಂತೆಯೆ ಹೆಲಿಯೋಡೋರಸ್‌ನು ವಿಷ್ಣು ಅಥವ ವಾಸುದೇವನ ಗೌರವಾರ್ಥವಾಗಿ ಬೆಸ್‌ನಗರದಲ್ಲಿ ಗರುಡ ಸ್ಥಂಭವನ್ನು ನಿರ್ಮಿಸಿದನು. ಭಕ್ತಿಮಾರ್ಗವು ಹೆಚ್ಚು ಜನ ಪ್ರಿಯವಾಗಿ ಅಪಾರ ಸಂಖ್ಯೆಯಲ್ಲಿ ಜನರನ್ನು ತನ್ನ ಕಡೆ ಆಕರ್ಷಿಸಿ ಹಿಂದೂಧರ್ಮವು ಒಂದು ಪ್ರಬಲ ಧರ್ಮವಾಗಿ ಮಾರ್ಪಡುವಂತೆ ಮಾಡಿತು.

ಬೌದ್ಧಧರ್ಮಕ್ಕೆ ಸಂಬಂಧಿಸಿದಂತೆ ಈ ಕಾಲದಲ್ಲಿ ತೀವ್ರ ಚಟುವಟಿಕೆಗಳು ಕಂಡುಬಂದವು. ವಿದೇಶೀಯರಲ್ಲಿ ಕೆಲವರು ಬೌದ್ಧಮತದ ತತ್ವಗಳಿಂದ ಆಕರ್ಷಿತರಾಗಿ ಬೌದ್ಧ ಮತಾವಲಂಬಿಗಳಾದರು. ಯವನರ ದೊರೆ ಮಿನಾಂಡರನು ಬೌದ್ಧ ಮತಾವಲಂಬಿಯಾದನು. ಕುಶಾನರ ದೊರೆ ಕಾನಿಷ್ಕನು ಬೌದ್ಧ ಮತಾವಲಂಬಿಯಾದುದಲ್ಲದೆ ಅದರ ಪೋಷಕನೂ ಮತ್ತು ಪ್ರತಿಪಾದಕನೂ ಆಗಿದ್ದನು. ಆದರೆ ಈ ಕಾಲದಲ್ಲಿ ಬೌದ್ಧಮತದಲ್ಲಿ ಒಡಕುಂಟಾಗಿ ಹೀನಯಾನ ಮತ್ತು ಮಹಾಯನ ಎಂಬ ಎರಡು ಪ್ರಮುಖ ಪಂಥಗಳು ಅಸ್ತಿತ್ವಕ್ಕೆ ಬಂದವು. ಕಾನಿಷ್ಕನು ನಾಲ್ಕನೇ ಬೌದ್ಧ ಸಮ್ಮೇಳನವನ್ನು ಸಮಾವೇಶಗೊಳಿಸಿದನು. ಕುಶಾನರೇ ಅಲ್ಲದೆ ಪಶ್ಚಿಮ ಸತ್ರಪರು ಇಕ್ಷಾಕುಗಳು ಮತ್ತು ಶಾತವಾಹನರು ಕೂಡ ಬೌದ್ಧಮತಕ್ಕೆ ಪ್ರೋತ್ಸಾಹ ನೀಡಿದ್ದರು. ಪಶ್ಚಿಮ ಮತ್ತು ಮಧ್ಯ ಏಷ್ಯಾದೊಂದಿಗೆ ಸಂಪರ್ಕವನ್ನು ಹೊಂದಿದ್ದ ಯವನರು, ಪಾರ್ಥಿಯನ್ನರು, ಶಕರು ಮತ್ತು ಕುಶಾನರು ಬುದ್ಧನ ಸಂದೇಶವನ್ನು ವಿದೇಶಗಳಲ್ಲಿ ಹರಡಿದರು. ಇದರಿಂದಾಗಿ ಬೌದ್ಧಮತವು

ಹೊರದೇಶಗಳಲ್ಲಿ ಹರಡಿ ಅಲ್ಲಿ ಜನಪ್ರಿಯವಾಯಿತು. ಆದರೆ ಈ ಕಾರ್ಯದಲ್ಲಿ ಬೌದ್ಧಮತದ ಮಹಾಯಾನ ಪಂಥದವರು ಪ್ರಮುಖ ಪಾತ್ರವಹಿಸಿದ್ದರು. ಬುದ್ಧನನ್ನು ಸಾಂಕೇತಿಕ ರೂಪದಲ್ಲಿ ಪೂಜಿಸುವ ಪದ್ಧತಿಗೆ ಬದಲಾಗಿ ಅವನನ್ನು ವಿಗ್ರಹ ರೂಪದಲ್ಲಿ ಪೂಜಿಸುವ ಪದ್ಧತಿಯು ಜಾರಿಗೆ ಬಂದಿತು. ಬೌದ್ಧರ ಶಿಲ್ಪಕಲೆಯಲ್ಲಿ ಬುದ್ಧನ ಜೀವನಕ್ಕೆ ಸಂಬಂಧಪಟ್ಟ ಹಲವಾರು ವಿಗ್ರಹಗಳು ನಿರ್ಮಾಣಗೊಂಡು ಶಿಲ್ಪಕಲೆಯಲ್ಲಿ ಹೆಚ್ಚಿನ ಪ್ರಗತಿಯು ಕಂಡುಬಂದಿತು. ವಿಗ್ರಹಾರಾಧನೆಯಿಂದ ಬೌದ್ಧಮತವೂ ಕೂಡ ಹೆಚ್ಚಿನ ಸಂಖ್ಯೆಯಲ್ಲಿ ಜನರನ್ನು ತನ್ನ ಕಡೆ ಆಕರ್ಷಿಸಿತು.

ಮೌರ್ಯರ ಪತನಾನಂತರ ಭಾರತದಲ್ಲಿ ರಾಜಕೀಯ ಕ್ಷೇತ್ರದಲ್ಲಿ ಅನೈಕ್ಯತೆಯು ಕಂಡುಬಂದರೂ ವಾಸ್ತುಶಿಲ್ಪ, ಶಿಲ್ಪಕಲೆ ಮತ್ತು ಸಾಹಿತ್ಯ ಕ್ಷೇತ್ರಗಳಲ್ಲಿ ಮಹತ್ವ ಪೂರ್ಣ ಪ್ರಗತಿಯು ಕಂಡುಬಂದಿತು. ಈ ಕಾಲದಲ್ಲಿ ರಾಜ್ಯವಾಳಿದ ಪ್ರತಿಯೊಂದು ಸಂತತಿಗಳ ಕಾಲದಲ್ಲೂ ಶಿಲ್ಪಕಲೆಯು ಬೆಳವಣಿಗೆ ಹೊಂದಿತು. ಮೌರ್ಯರ ಕಾಲದಲ್ಲಿಯೆ ಪ್ರಗತಿ ಹೊಂದಿದ್ದ ಕಲೆಯು ಮುಂದಿನ ಶತಮಾನಗಳಲ್ಲಿ ಮತ್ತಷ್ಟು ವಿಕಸಿತಗೊಂಡಿತು. ಕಾಲವು ಉರುಳಿದಂತೆ ಕಲಾಕಾರರು ಹೊಸ ಹೊಸ ವಿಧಾನಗಳಿಂದ ಮತ್ತು ಅಭಿಪ್ರಾಯಗಳಿಂದ ಪ್ರಭಾವಿತರಾಗಿ ಕಲಾಕ್ಷೇತ್ರದಲ್ಲಿ ಒಂದು ಮಹತ್ವಪೂರ್ಣ ಸಾಧನೆಯ ಕಡೆಗೆ ಸಾಗಿದ್ದರು ಅಂತಹ ಸಾಧನೆಯು ಮುಂದೆ ಗುಪ್ತರ ಕಾಲದಲ್ಲಿ ಕಂಡುಬಂದಿತು.

ಪ್ರಾಚೀನ ಭಾರತದಲ್ಲಿ ಕಲೆಯು ಇತರ ದೇಶಗಳಲ್ಲಿನ ಕಲೆಯಂತೆ ಧರ್ಮಕ್ಕೆ ಹೊಂದಿಕೊಂಡಿತ್ತು. ಬೌದ್ಧಮತವು ಅದರ ಪ್ರಚಾರಕರಾದ ಬೌದ್ಧ ಸಂನ್ಯಾಸಿಗಳ ವಸತಿ ಸೌಕರ್ಯಕ್ಕಾಗಿ ಚೈತ್ಯಗಳು, ವಿಹಾರಗಳು ಮತ್ತು ಗುಹಾಲಯಗಳ ನಿರ್ಮಾಣಕ್ಕೆ ಕಾರಣವಾಯಿತು. ಈ ಕಾಲದಲ್ಲಿ ನಿರ್ಮಿಸಲಾದ ವಿಹಾರಗಳು ಹಿಂದಿನ ಶತಮಾನಗಳಲ್ಲಿ ನಿರ್ಮಿಸಿಲಾಗಿದ್ದ ವಿಹಾರಗಳಿಗಿಂತಲೂ ಸುಂದರವಾಗಿದ್ದವು. ಉದಯಗಿರಿ (ಒರಿಸ್ಸ) ನಾಸಿಕ್, ಅಜಂತ ಎಲ್ಲೋರ ಮತ್ತು ಕಾರ್ಲೆ ಮೊದಲಾದ ಕಡೆಗಳಲ್ಲಿ ಕೊರೆಯಲಾದ ಗುಹೆಗಳು ಅವುಗಳ ನಿರ್ಮಾಣ ವಿಧಾನದಲ್ಲಿ ಹೆಚ್ಚಿನ ಬದಲಾವಣೆಯಿಂದ ಕೂಡಿದ್ದವು. ಅಲ್ಲದೆ ಈ ಗುಹೆಗಳಲ್ಲಿನ ಕಲಾ ಕೌಶಲವು ಆಕರ್ಷಕವಾಗಿದ್ದಿತು.

ಈ ಕಾಲದಲ್ಲಿನ ಕಲಾಕಾರರ ಪ್ರತಿಭಾ ಸಾಮರ್ಥ್ಯಗಳು ಸ್ತೂಪಗಳ ಮತ್ತು ಅವುಗಳ ಸುತ್ತಲೂ ನಿರ್ಮಿಸಲಾದ ಕಟಕಟೆಗಳ ನಿರ್ಮಾಣದಲ್ಲಿ ಕಂಡುಬಂದಿತು. ಅಮರಾವತಿ, ಬರ್‌ಹತ್, ಬೌದ್ಧಗಯೆ ಮತ್ತು ಸಾಂಚಿ ಮೊದಲಾದ ಸ್ಥಳಗಳಲ್ಲಿ ನಿರ್ಮಿಸಲಾಗಿರುವ ಸ್ತೂಪಗಳು ಮತ್ತು ಅವುಗಳಲ್ಲಿನ ಮಹಾದ್ವಾರಗಳು ಸೂಕ್ಷ್ಮವಾದ ಕೆತ್ತನೆ ಕೆಲಸಗಳಿಂದ ಕೂಡಿವೆ. ಇವುಗಳ ಗೋಡೆಗಳ ಮೇಲೆ ಬೌದ್ಧರ ಜಾತಕ ಕಥೆಗಳನ್ನೂ ಮತ್ತು ಬುದ್ಧನ ಜೀವನಕ್ಕೆ ಸಂಬಂಧಿಸಿದ ಘಟನಾವಳಿಗಳನ್ನು ಅಲಂಕಾರಿಕವಾಗಿ ಕೆತ್ತಲಾಗಿದೆ. ಈ ಕಾಲದಲ್ಲಿ ಅತ್ಯಂತ ಸುಂದರವಾದ ವಿಗ್ರಹಗಳ ನಿರ್ಮಾಣವೂ ಕಂಡುಬಂದಿತು. ಜನರ ಧಾರ್ಮಿಕ ನಂಬಿಕೆಗಳು ಕಲೆಯಲ್ಲಿ ವ್ಯಕ್ತಗೊಂಡವು. ದೇವಾನುದೇವತೆಗಳ, ಯಕ್ಷಯಕ್ಷಿಣಿಯರ ಮತ್ತು ಬೋಧಿಸತ್ವರ ವಿಗ್ರಹಗಳು ಹೆಚ್ಚಿನ ಸಂಖ್ಯೆಯಲ್ಲಿ ನಿರ್ಮಾಣಗೊಂಡವು.

ಕಲಾಕ್ಷೇತ್ರಕ್ಕೆ ಸಂಬಂಧಿಸಿದಂತೆ ಈ ಕಾಲದಲ್ಲಿ ಅನೇಕ ಶೈಲಿಯ ಕಲಾಸಂಸ್ಥೆಗಳು ಅಸ್ತಿತ್ವಕ್ಕೆ ಬಂದವು. ಅವುಗಳಲ್ಲಿ ಗಾಂಧಾರ, ಅಮರಾವತಿ, ಮಥುರ ಮತ್ತು ಸಾರನಾಥದಲ್ಲಿನ ಕಲಾಶಾಲೆಗಳು ಹೆಚ್ಚು ಹೆಸರುವಾಸಿಯಾದವು. ಈ ಸಂಸ್ಥೆಗಳು ಶೈಲಿ ಮತ್ತು ವಿಧಾನಗಳಲ್ಲಿ ತಮ್ಮದೇ ಆದ ವೈಶಿಷ್ಟ್ಯಗಳನ್ನು ಹೊಂದಿದ್ದವು. ಮಥುರ ಶಿಲೆಯು ಕಟಕಟೆಯ ಗೋಡೆಯ ಮೇಲೆ ಸೂಕ್ಷ್ಮವಾದ ಕೆತ್ತನೆ ಕೆಲಸಗಳಿಗೂ ಮತ್ತು ವಿಗ್ರಹ ನಿರ್ಮಾಣಕ್ಕೂ ಪ್ರಸಿದ್ಧಿಯಾಗಿತ್ತು. ಇಲ್ಲಿ ಕೆತ್ತಲಾಗುತ್ತಿದ್ದ ವಿಗ್ರಹಗಳನ್ನು ತಕ್ಷಶಿಲೆ ಮತ್ತು ಮಧ್ಯ ಏಷ್ಯಾಗಳಿಗೆ ಕಳುಹಿಸಲಾಗುತಿತ್ತು. ಬುದ್ಧನನ್ನು ಧರ್ಮಚಕ್ರದ ಇಲ್ಲವೆ ಬೇರೆ ರೀತಿಯ ಸಂಕೇತದ ಮೂಲಕ ವ್ಯಕ್ತಪಡಿಸುತ್ತಿದ್ದ ಬರ್‌ಹತ್ ಕಲಾಶಾಲೆಯ ಕಲೆಗೆ ಬದಲಾಗಿ ಮಥುರ ಶಾಲೆಯು ಮಾನವ ರೂಪದಲ್ಲಿ ವ್ಯಕ್ತಪಡಿಸಿತು. ಇಲ್ಲಿನ ಕೆಲವು ವಿಗ್ರಹಗಳು ಸೂಚಿಸುವಂತೆ ಬಹುಶಃ ಇಲ್ಲಿನ ಕಲಾಕಾರರು ವಿಗ್ರಹಗಳ ನಿರ್ಮಾಣದಲ್ಲಿ ರೋಮನ್ನರಿಂದ ಪ್ರಭಾವಿತರಾಗಿರುವಂತೆ ಕಂಡು ಬರುತ್ತದೆ. 2. ಗಾಂಧಾರ ಕಲಾಶಾಲೆ, ತಕ್ಷಶಿಲೆ, ಪೇಷಾವರ್ ಮತ್ತು ಅದರ ಸುತ್ತಮುತ್ತಲಿನ ಪ್ರದೇಶಗಳಿಗೆ ಸೀಮಿತವಾಗಿದ್ದ ಗಾಂಧಾರ ಶಿಲ್ಪಕಲೆಯು ವಿದೇಶೀಯರಾದ ಗ್ರೀಕ್ ರೋಮನ್ ಮತ್ತು ಪರ್ಶಿಯನ್ನರ ಕಲೆಯ ಪ್ರಭಾವಕ್ಕೊಳಗಾಗಿದ್ದಿತು. ಇದನ್ನು ಗ್ರೀಕೋ-ಬುದ್ದಿಸ್ಟ್ ಶೈಲಿಯೆಂದೂ ಕರೆಯುತ್ತಾರೆ. ಗಾಂಧಾರ ಶಿಲ್ಪಕಲೆಯು ವಾಯುವ್ಯ ಭಾರತದಲ್ಲಿ ಇಂಡೋಗ್ರೀಕರ ಅಧಿಕಾರವು ಕೊನೆಗೊಳ್ಳುವವರೆಗೂ ಪ್ರಸಿದ್ಧಿಗೆ ಬಂದಿರಲಿಲ್ಲ. ತರುವಾಯದಲ್ಲಿ ಅದು ಶಕರು ಮತ್ತು ಕುಶಾನರಿಂದ ಪ್ರೋತ್ಸಾಹ ಪಡೆದು ಖ್ಯಾತಿಗಳಿಸಿತು. ಗಾಂಧಾರ ಶಿಲ್ಪಕಲೆಯಲ್ಲಿ ಭಾರತೀಯ ಮತ್ತು ಗ್ರೀಕರ ಕಲಾಶೈಲಿಗಳೆರಡರ ಸಂಮಿಳನವು ಕಂಡುಬರುತ್ತದೆ. ಗಾಂಧಾರದ ಶಿಲ್ಪಗಳು ತಮ್ಮ ಕೆಲಸದಲ್ಲಿ ಗ್ರೀಕರ ವಿಧಾನ ಮತ್ತು ಮಾದರಿಗಳನ್ನು ಅನುಸರಿಸಿದರು. ಅವರ ಕಲಾಕೃತಿಗಳ ವಸ್ತುವು ಮುಖ್ಯವಾಗಿ ಭಾರತೀಯವಾಗಿದ್ದಿತು. ಗಾಂಧಾರ ಕಲೆಯು ಮಹಾಯಾನ ಬೌದ್ಧಮತಕ್ಕೆ ಒಂದು ರೂಪವನ್ನು ಕೊಟ್ಟು ಬುದ್ಧ ಮತ್ತು ಬೋಧಿಸತ್ವರ ವಿಗ್ರಹಗಳನ್ನು ನಿರ್ಮಿಸಿತು. ಗ್ರೀಕ್ ಮತ್ತು ರೋಮನ್ನರ ವಿಗ್ರಹಗಳು ಇಲ್ಲಿನ ಶಿಲ್ಪಿಗಳಿಗೆ ಮಾದರಿಯಾಗಿದ್ದವು. ಇಲ್ಲಿನ ವಿಗ್ರಹಗಳಲ್ಲಿ ನೈಜಕತೆಯಿಂದ ಕೂಡಿರುವ ಮಾನವ ಸ್ವರೂಪವು ಸುಸ್ಪಷ್ಟವಾಗಿ ಮೂಡಿಬಂದಿದೆ. ಬುದ್ಧನ ಉಡಿಗೆ ತೊಡಿಗೆಗಳು ಮತ್ತು ಅವುಗಳ ಮಡಿಕೆಗಳು ಯತಾವತ್ತಾಗಿ ಕೆತ್ತಲ್ಪಟ್ಟಿವೆ. ಒಟ್ಟಿನಲ್ಲಿ ಹೇಳುವುದಾದರೆ ಭಾರತೀಯ ಧರ್ಮ ಮತ್ತು ಆದರ್ಶಗಳು ಪಾಶ್ಚಾತ್ಯ ವಿಧಾನಗಳಲ್ಲಿ ಮೂಡಿಬಂದಿರುವುದು ಗಾಂಧಾರ ಶಿಲ್ಪಕಲೆಯ ವೈಶಿಷ್ಟ್ಯವಾಗಿದೆ.

ಸಾಹಿತ್ಯ ಕ್ಷೇತ್ರದಲ್ಲಿ ಸಂಸ್ಕೃತ ಭಾಷೆಯು ಈ ಕಾಲದಲ್ಲಿ ವಿದ್ವಾಂಸರ ಭಾಷೆಯಾಗಿ ಮಾರ್ಪಟ್ಟು ಅತ್ಯುತ್ತಮ ಕೃತಿಗಳು ರಚಿಸಲ್ಪಟ್ಟವು. ಮಹಾ ವಿದ್ವಾಂಸನಾದ ಪಾಣಿನಿಯು ತನ್ನ ಸುಪ್ರಸಿದ್ಧ ಕೃತಿಯಾದ 'ವ್ಯಾಕರಣ ಗ್ರಂಥ'ವನ್ನು ಬರೆಯುವುದರ ಮೂಲಕ ಸಂಸ್ಕೃತ ಭಾ;ಗೆ ಒಂದು ಗುಣಮಟ್ಟವನ್ನು ತಂದುಕೊಟ್ಟನು. ಈ ರೀತಿಯ ಗುಣಮಟ್ಟವನ್ನು ಪಡೆದುಕೊಂಡ ಸಂಸ್ಕೃತ ಭಾಷೆಯು ಸ್ವೇಚ್ಚಾನುಸಾರವಾಗಿ ಬೆಳೆಯಲು ಅವಕಾಶವಾಗಲಿಲ್ಲ. ಕಾಲಾನುಕ್ರಮದಲ್ಲಿ ಅದು ಹೆಚ್ಚು ಹೆಚ್ಚಾಗಿ ಜನರ ವ್ಯಾವಹಾರಿಕ ಭಾಷೆಯಾಗುವುದರ ಬದಲು ವಿದ್ವಾಂಸರ ಭಾಷೆಯಾಗಿ ಮಾರ್ಪಟ್ಟು ಹಲವಾರು ಶ್ರೇಷ್ಠ ಕೃತಿಗಳ ರಚನೆಗೆ ಕಾರಣವಾಯಿತು. ಈ ಕಾಲದಲ್ಲಿ ರಚಿತವಾದ ಸುಪ್ರಸಿದ್ಧ

ಕೃತಿಗಳಲ್ಲಿ ಪಾಣಿನಿಯ ಸೂತ್ರಗಳ ವ್ಯಾಖ್ಯಾನವಾದ ಪತಂಜಲಿಯ 'ಮಹಾಭಾಷ್ಯ' 'ಮನುಧರ್ಮಶಾಸ್ತ್ರ' 'ವಿಷ್ಣುಸ್ಮೃತಿ' 'ಯಜ್ಞವಲ್ಕ್ಯಸ್ಮೃತಿ' 'ನಾರದಸ್ಮೃತಿ' ಮತ್ತು ಬೃಹಸ್ಪತಿಸ್ಮೃತಿ' ಪರಾಶರ ಸ್ಮೃತಿಗಳು ಮುಖ್ಯವಾದವುಗಳು. ಆದರೆ ಇವುಗಳ ರಚನೆಯ ಕಾಲವು ತೊಡಕಿನಿಂದ ಕೂಡಿದೆ. ಕಾನಿಷ್ಕನ ವೈದ್ಯನಾಗಿದ್ದ ಚರಕನು 'ಚರಕ ಸಂಹಿತೆ' ಎಂಬ ವೈದ್ಯಶಾಸ್ತ್ರ ಗ್ರಂಥವನ್ನು ರಚಿಸಿದನು. ಈ ಕಾಲದ ಮತ್ತೊಬ್ಬ ಪ್ರಸಿದ್ಧ ವೈದ್ಯಶಾಸ್ತ್ರಜ್ಞನಾಗಿದ್ದ ಸುಶ್ರುತನು ವೈದ್ಯಕೀಯದ ಬಗ್ಗೆ ಗ್ರಂಥವನ್ನು ರಚಿಸಿದುದಾಗಿ ಹೇಳಲಾಗಿದೆ. ಕಾನಿಷ್ಕನ ಆಸ್ಥಾನವನ್ನಲಂಕರಿಸಿದ್ದ ಅಶ್ವಘೋಷನು ಸಂಸ್ಕೃತದಲ್ಲಿ ಮಹಾಕಾವ್ಯವಾದ 'ಬುದ್ಧ ಚರಿತ'ವನ್ನು ರಚಿಸಿದನು. ಇದೇ ಕಾಲಕ್ಕೆ ಸೇರಿದವನೆಂದು ಅಭಿಪ್ರಾಯ ಪಡಲಾಗಿರುವ ಭಾಸಕವಿಯು ಸಂಸ್ಕೃತದಲ್ಲಿ ಒಟ್ಟು ಹದಿಮೂರು ನಾಟಕಗಳನ್ನು ರಚಿಸಿ ಖ್ಯಾತಿವೆತ್ತಿದ್ದಾನೆ. 'ಸ್ವಪ್ನವಾಸವದತ್ತ,' 'ಪ್ರತಿಜ್ಞ್ಯ', 'ಅವಿಮಾರಕ', 'ಚಾರುದತ್ತ', 'ಬಾಲಚರಿತೆ', 'ದೂತಘಟೋತ್ಕಚ', 'ದೂತವಾಕ್ಯ', ಕರ್ಣಭಾರ', 'ಮಧ್ಯಮವ್ಯಾಯೋಗ', 'ಪಂಚರಾತ', 'ಊರುಭಂಗ', 'ಪ್ರತಿಮಾ' ಮತ್ತು 'ಅಭಿಷೇಕ' ಇವನ ಕೃತಿಗಳಾಗಿವೆ. ಇವುಗಳನ್ನು ತಿರುವನಂತಪುರದ ಪಂಡಿತ್ ಗಣಪತಿ ಶಾಸ್ತ್ರಿಯವರು 1909ರಲ್ಲಿ ಪತ್ತೆಹಚ್ಚಿ ಪ್ರಕಟಿಸಿದರು. ನಾಟಕ ಕಲೆಯ ಬಗ್ಗೆ ಭರತನು, 'ನಾಟ್ಯಶಾಸ್ತ್ರ' ಎಂಬ ಶಾಸ್ತ್ರೋಕ್ತ ಕೃತಿಯನ್ನು ಸಂಸ್ಕೃತದಲ್ಲಿ ಬರೆದನು. ಅಂತೆಯೆ ಪ್ರಣಯ ಸಂಬಂಧವಾದ 'ಕಾಮಸೂತ್ರ' ಎಂಬ ಅಧಿಕೃತ ಗ್ರಂಥವನ್ನು ಬರೆದ ವಾತ್ಸಾಯನನು ಇದೇ ಕಾಲಕ್ಕೆ ಸೇರಿದವನು.

ಈ ಮೇಲಿನ ಅಂಶಗಳಿಂದ ಮೌರ್ಯರ ನಂತರದಿಂದ ಗುಪ್ತರ ಏಳಿಗೆಯವರೆಗಿನ ಕಾಲದ ಭಾರತದ ಇತಿಹಾಸವು ಮಸುಕಿನಿಂದ ಕೂಡಿದ್ದಿತೆಂದು ಹೇಳುವುದು ಸರಿಯಲ್ಲ. ರಾಜಕೀಯ ಏಕತೆಯು ಈ ಕಾಲದಲ್ಲಿ ಕಂಡುಬರದಿದ್ದರೂ ಭಾರತೀಯ ಸಂಸ್ಕೃತಿಯ ವಿಕಾಸವು ಅನೂಚಾನವಾಗಿ ಮುಂದುವರಿದುಕೊಂಡು ಬಂದಿತು. ಸಾಮಾಜಿಕ ಜೀವನವು ಸ್ಥಗಿತಗೊಂಡಿರಲಿಲ್ಲ. ಮೇಲಾಗಿ ಮುಂದಿನ ಶತಮಾನಗಳಲ್ಲಿ ಕಂಡುಬಂದ ಮಹತ್ವಪೂರ್ಣ ಸಾಂಸ್ಕೃತಿಕ ಸಾಧನೆಗಳಿಗೆ ಈ ಕಾಲದಲ್ಲಿ ಸಿದ್ಧತೆಗಳು ನಡೆಯುತ್ತಿದ್ದು ವೆಂಬುದನ್ನು ಯಾರೂ ಗಮನಿಸದೆ ಇರುವಂತಿಲ್ಲ.

## ಸಂಘಮ್ ಯುಗ

ದಕ್ಷಿಣಭಾರತದ ದಖನ್ ಪ್ರಸ್ಥಭೂಮಿಯಲ್ಲಿ ಶಾತವಾಹನರು ರಾಜ್ಯವಾಳುತ್ತಿದ್ದಾಗ ಅತಿದೂರದ ದಕ್ಷಿಣದಲ್ಲಿ (Far South) ಚೇರ, ಚೋಳ ಮತ್ತು ಪಾಂಡ್ಯರು ಎಂಬ ತಮಿಳು ರಾಜಸಂತತಿಗಳು ರಾಜ್ಯವಾಳುತ್ತಿದ್ದವು. ತಮಿಳರ ಇತಿಹಾಸವು ಅತಿ ಪುರಾತನವಾದದ್ದು. ಈ ರಾಜ್ಯಗಳ ಅತಿಹಿಂದಿನ ಪ್ರಸ್ತಾಪವು ಅಶೋಕ ಚಕ್ರವರ್ತಿಯ ಶಿಲಾಶಾಸನಗಳಲ್ಲಿ ಕಂಡುಬರುತ್ತದೆ. ಈ ರಾಜ್ಯಗಳು ಮೌರ್ಯರ ಸಾಮ್ರಾಜ್ಯದ ದಕ್ಷಿಣದ ನೆರೆಯಲ್ಲಿ ಸ್ವತಂತ್ರ ರಾಜ್ಯಗಳಾಗಿದ್ದುವೆಂದು ಶಿಲಾಶಾಸನಗಳಿಂದ ತಿಳಿದುಬರುತ್ತದೆ.

ಈ ತಮಿಳು ರಾಜ್ಯಗಳಿಗೆ ಅಥವ 'ತಮಿಳಹಂ' ಎಂದು ಕರೆಯಲ್ಪಡುತ್ತಿದ್ದ ಈ ರಾಜ್ಯಗಳಿಗೆ ಉತ್ತರದಲ್ಲಿ ತಿರುಪತಿ ಬೆಟ್ಟಗಳೂ ಪೂರ್ವ ಮತ್ತು ಪಶ್ಚಿಮಕ್ಕೆ ಸಮುದ್ರವೂ ಎಲ್ಲೆಗಳಾಗಿದ್ದವು. ಈ ಪ್ರದೇಶವು ಆಧುನಿಕ ಕೇರಳವನ್ನೂ ಮತ್ತು ಹಿಂದಿನ ಮೈಸೂರು ರಾಜ್ಯದ ದಕ್ಷಿಣಭಾಗವನ್ನೂ ಒಳಗೊಂಡಿತ್ತು. ಪುಲಿಕಾಟ್‌ಸಿಂದ ಮಧುರೆಯವರೆಗೆ

ಪೂರ್ವತೀರದ ಗಡಿಗೆ ಅಂಟಿಕೊಂಡಿದ್ದ ಭೂಪ್ರದೇಶವನ್ನು ಚೋಳರೂ, ಮಧುರೆ, ತಿರುನೆಲ್ವೇಲಿ ಮತ್ತು ನಂಜಿ ನಾಡಿನ ಒಂದು ಭಾಗವನ್ನು ಪಾಂಡ್ಯರೂ, ಗೋಕರ್ಣದಿಂದ ಕನ್ಯಾಕುಮಾರಿಯವರೆಗಿದ್ದ ಪಶ್ಚಿಮ ತೀರ ಪ್ರದೇಶವನ್ನು ಚೇರರೂ ಆಳುತ್ತಿದ್ದರು.

ತಮಿಳರ ಪ್ರಾಚೀನ ಇತಿಹಾಸವನ್ನು ತಿಳಿದುಕೊಳ್ಳಲು ಸಂಘಮ್‌ದ ಶ್ರೇಷ್ಠ ಸಾಹಿತ್ಯ ಕೃತಿಗಳು ಮುಖ್ಯ ಆಧಾರಗಳಾಗಿವೆ. ಸಂಘಮ್ ಎಂದರೆ ಸುಪ್ರಸಿದ್ಧ ಸಾಹಿತ್ಯ ಪರಿಷತ್ತೆಂದೂ ಅಥವ ಸಾಹಿತ್ಯಸಂಘವೆಂದು ಅರ್ಥೈಸಲಾಗಿದೆ. ರಾಜಾ ಶ್ರಯ ಪಡೆದಿದ್ದ ಅನೇಕ ಪ್ರಸಿದ್ಧ ವಿದ್ವನ್ಮಣಿಗಳು ಗ್ರಂಥಗಳನ್ನು ರಚಿಸಲು ಸಾಹಿತ್ಯಸಂಘವನ್ನು ರಚಿಸಿಕೊಂಡಿದ್ದರು. ಆದ್ದರಿಂದ ಅದೊಂದು ವಿದ್ವನ್ಮಣಿಗಳ ಸಂಘವಾಗಿದ್ದು ಸಂಘಮ್ ಎಂಬ ಸಾಹಿತ್ಯ ಸಂಸ್ಥೆಯು ಅಸ್ತಿತ್ವಕ್ಕೆ ಬಂದಿತು. ಮಧುರೆಯು ಈ ಸಾಹಿತ್ಯ ಪರಿಷತ್ತಿನ ಕೇಂದ್ರವಾಗಿತ್ತು.

ಇರೈಯಿನಾರ್ ಅಹಪೊರುಳ್ ಎಂಬ ತಮಿಳು ಕಾವ್ಯದ ವ್ಯಾಕರಣದ ಪ್ರಕಾರ ಒಂದರ ಹಿದೊಂದು ಮೂರು ಸಂಘಮ್‌ಗಳು ಇದ್ದುವೆಂದು ತಿಳಿದುಬರುತ್ತದೆ. ಈ ಸಂಘಮ್ ಒಂಬತ್ತು ಸಾವಿರದ ಒಂಬೈನೂರು ತೊಂಬತ್ತು ವರ್ಷಗಳು ನಡೆದು ಬಂದುವೆಂದೂ ಮತ್ತು ೮೫೯೮ ಕವಿಗಳಿಗೆ ಅವು ಆಶ್ರಯವಾಗಿದ್ದುವೆಂದು ಅಭಿಪ್ರಾಯಪಡಲಾಗಿದೆ. ಆದರೆ ಮೊದಲೆರಡು ಸಂಘಮ್‌ಗಳ ಸಂಪೂರ್ಣ ಇತಿಹಾಸವು ಅಸ್ಪಷ್ಟವಾಗಿದೆ. ಮೂರನೆಯ ಸಂಘಮ್ ಬಗ್ಗೆ ಅನೇಕ ಮಾಹಿತಿಗಳು ದೊರೆತಿವೆ.

ಸಂಘಮ್‌ಯುಗದ ಕಾಲದ ಬಗ್ಗೆ ವಿದ್ವಾಂಸರಲ್ಲಿ ಒಮ್ಮತ ಅಭಿಪ್ರಾಯವಿಲ್ಲದಿರುವುದರಿಂದ ಕಾಲಗಣನೆಯನ್ನು ನಿರ್ಧರಿಸುವುದು ಕಷ್ಟದ ಸಂಗತಿಯಾಗಿದೆ. ಆದರೂ ಮೂರನೆ ಸಂಘಮ್‌ನ ಕಾಲವು ಕ್ರಿ.ಪೂ. ೫೦೦ ರಿಂದ ಕ್ರಿ.ಶ. ೫೦೦ ರವರೆಗೆ ಇದ್ದಿರಬಹುದೆಂದು ವಿದ್ವಾಂಸರು ಅಭಿಪ್ರಾಯಪಟ್ಟಿರುತ್ತಾರೆ.

ಸಂಘಮ್ ಯುಗಧ ತಮಿಳರ ಇತಿಹಾಸವನ್ನು ತಿಳಿದುಕೊಳ್ಳಲು ಅನೇಕ ದೇಶೀಯ ಮತ್ತು ವಿದೇಶೀಯ ಸಾಹಿತ್ಯಾಧಾರಗಳು ದೊರೆತಿವೆ. ಅವುಗಳಲ್ಲಿ ಎರಡನೆಯ ಸಂಘಮ್ ಕಾಲಕ್ಕೆ ಸೇರಿದ ತೊಲ್ಕಪ್ಪಿಯಮ್, ಮೂರನೆಯ ಸಂಘಮ್ ಕಾಲಕ್ಕೆ ಸೇರಿದ ಎಟ್ಟುತೊಹೈ, ಪತ್ತುಪಾಟ್ಟು, ಪದಿನೇನ್ ಕೀಳ್ ಕಣಕ್ಕು ಹಾಗೂ ಶಿಲಪ್ಪಾಧಿಕಾರಮ್ ಮತ್ತು ಮಣಿಮೇಖಲೈ ಕೃತಿಗಳು ಮುಖ್ಯವಾದವುಗಳಾಗಿವೆ. ಇವುಗಳಲ್ಲದೆ ಕ್ರಿ.ಶ. ಏಳನೇ ಶತಮಾನದಲ್ಲಿ ಸಂಗೀತಗಾರರು ತಮಿಳು ಸಂಘವನ್ನು ಕುರಿತು ಮಾಡಿರುವ ಸೂಚನೆಗಳು, ಪುರಾತನ ಗ್ರೀಕ್ ಬರಹಕಾರರ ವಿವರಣೆಗಳು, ದಕ್ಷಿಣ ಭಾರತದಲ್ಲಿ ದೊರೆತಿರುವ ರೋಮನ್ನರ ನಾಣ್ಯಗಳು, ಕ್ರಿ.ಶಕೆಯ ಆರಂಭದ ಮೊದಲೆರಡು ಶತಮಾನಗಳಲ್ಲಿ ರಚಿತವಾಗಿರುವ ಪುರನಾನೂರು, ಪದಿರ್ರುಪತ್ತು, ಪತ್ತುಪಾಟ್ಟು ಕೃತಿಗಳು ಐತಿಹಾಸಿಕವಾದ ಉಪಯುಕ್ತ ಮಾಹಿತಿಗಳನ್ನು ನೀಡುತ್ತವೆ. ಇವುಗಳೇ ಅಲ್ಲದೆ ಕ್ರಿ.ಪೂ.ನಾಲ್ಕನೇ ಶತಮಾನಕ್ಕೆ ಸೇರಿದ ಸಂಸ್ಕೃತ ಭಾಷಾ ವ್ಯಾಕರಣದಿಂದಲೂ, ಅಶೋಕನ ಶಿಲಾಶಾಸನಗಳಿಂದಲೂ, ಚಂದ್ರಗುಪ್ತ ಮೌರ್ಯನ ಆಸ್ಥಾನಕ್ಕೆ ಗ್ರೀಸ್ ದೇಶದಿಂದ ರಾಯಭಾರಿಯಾಗಿ ಬಂದಿದ್ದ ಮೆಗಾಸ್ತನೀಸನ ಬರವಣಿಗೆಯಿಂದಲೂ ಹಾಗೂ ಕ್ರಿ.ಶ. ಒಂದನೇ ಶತಮಾನದ ಗ್ರೀಕ್ ಮತ್ತು ರೋಮನ್ ಭೂಗೋಳಶಾಸ್ತ್ರಜ್ಞರ ಬರವಣಿಗೆಗಳಲ್ಲೂ ಈ ತಮಿಳು ರಾಜ್ಯಗಳ

ಪ್ರಸ್ತಾಪವಿರುವುದರಿಂದ ಈ ಮೂರು ರಾಜ್ಯಗಳು ಬಹಳ ಪ್ರಾಚೀನವಾದವುಗಳೆಂದು ತಿಳಿದು ಬರುತ್ತದೆ.

**ಚೋಳರು**

ಚೋಳರ ಸಂತತಿಯು ಬಹಳ ಪುರಾತನವಾದುದು. ಇವರ ರಾಜ್ಯವನ್ನು ಚೋಳ ಮಂಡಲ ಎಂಬ ಹೆಸರಿನಿಂದ ಕರೆಯಲಾಗಿತ್ತು. ಪೂರ್ವತೀರದ ಎಲ್ಲೆಗೆ ಅಂಟಿಕೊಂಡಿದ್ದ ಪುಲಿಕಾಟ್‌ನಿಂದ ಮಧುರೈ ವರೆಗಿನ ಭೂಪ್ರದೇಶವು ಚೋಳರಸರಿಗೆ ಸೇರಿತ್ತು. ಸಂಘಮ್ ಯುಗಕ್ಕೆ ಸೇರಿದ್ದ ಚೋಳರ ರಾಜರುಗಳಲ್ಲಿ ಕರಿಕಾಲ ಚೋಳನೆಂಬವನು ನಿಸ್ಸಂದೇಹವಾಗಿಯೂ ಪ್ರಸಿದ್ಧನಾದ ರಾಜನಾಗಿದ್ದನು. ಉರೈಯೂರ್ ಎಂಬುದು ಇವರ ರಾಜಧಾನಿಯಾಗಿತ್ತು. ಕರಿಕಾಲ ಚೋಳನು ಮಹಾದಿಗ್ವಿಜಯಿಯಾಗಿದ್ದು ಪಾಂಡ್ಯರು ಮತ್ತು ಚೇರರ ಮೇಲೆ ಅನೇಕ ವಿಜಯಗಳನ್ನು ಗಳಿಸಿದ್ದನು. ಅಲ್ಲದೆ ವಹೈಪ್ಪರಂಡಲೈ ಎಂಬಲ್ಲಿ ಒಂಬತ್ತು ಅರಸರ ಒಕ್ಕೂಟದ ಸೈನ್ಯದ ಮೇಲೂ ವಿಜಯವನ್ನು ಗಳಿಸಿದ್ದುದಾಗಿ ಪುರನಾನೂರು ಕೃತಿಯಿಂದ ತಿಳಿದುಬರುತ್ತದೆ.

ಕರಿಕಾಲ ಚೋಳನು ಪ್ರಜಾನುರಾಗಿಯಾದ ರಾಜನಾಗಿದ್ದನು. ಇವನು ನೀರಾವರಿ ವ್ಯವಸಾಯಕ್ಕೆ ಪ್ರೋತ್ಸಾಹನೀಡುವ ಸಲುವಾಗಿ ಅನೇಕ ಕೆರೆಕಟ್ಟೆಗಳನ್ನು ಮತ್ತು ಕಾಲುವೆಗಳನ್ನು ನಿರ್ಮಿಸಿದ್ದನು ವ್ಯಾಪಾರಾಭಿವೃದ್ಧಿಗೂ ಪ್ರೋತ್ಸಾಹ ನೀಡಿದ್ದನು. ಕಾವೇರಿಪಟ್ಟಣ ಎಂಬುದು ವ್ಯಾಪಾರದ ಪ್ರಮುಖ ಕೇಂದ್ರವಾಗಿತ್ತು. ಕರಿಕಾಲ ಚೋಳನು ಶಿವನ ಆರಾಧಕನಾಗಿದ್ದನು. ಕರಿಕಾಲನು ಮರಣವಾದ ಮೇಲೆ ಚೋಳರ ಶಕ್ತಿಯು ಕುಗ್ಗಿ ಪಾಂಡ್ಯರು ಮತ್ತು ಚೇರರು ಪ್ರಬಲರಾದರು.

**ಪಾಂಡ್ಯರು**

ಸಂಘಮ್ ಯುಗಕ್ಕೆ ಸೇರಿದ ಮತ್ತೊಂದು ರಾಜ ಸಂತತಿಯೆಂದರೆ ಪಾಂಡ್ಯರು. ಸಂಘಮ್ ಕವನಗಳಲ್ಲಿ ಇಪ್ಪತ್ತಕ್ಕಿಂತಲೂ ಹೆಚ್ಚು ಪಾಂಡ್ಯರ ರಾಜರುಗಳ ಪ್ರಸ್ತಾಪಗಳಿವೆ. ಮಧುರೈ, ತಿರುನೆಲ್ವೇಲಿ ಮತ್ತು ನಂಜಿನಾಡಿನ ಒಂದು ಭಾಗವು ಪಾಂಡ್ಯರ ಅರಸರ ಆಳ್ವಿಕೆಗೆ ಒಳಪಟ್ಟಿದ್ದವು. ಮಧುರೈ ಇವರ ರಾಜಧಾನಿಯಾಗಿತ್ತು. ಪಾಂಡ್ಯರಲ್ಲಿ ನೆಡುಂಜೇಲಿಯನ್ ಎಂಬವನು ಪ್ರಖ್ಯಾತ ರಾಜನಾಗಿದ್ದನು. ಇವನು ಸಮಕಾಲೀನ ಚೇರ ಮತ್ತು ಚೋಳ ಅರಸರ ಒಕ್ಕೂಟದ ಸೈನ್ಯದ ವಿರುದ್ಧ ಹೋರಾಡಿ ವಿಜಯಗಳಿಸಿದ್ದನ್ನಲ್ಲದೆ ಇನ್ನೂ ಐವರು ಕಿರಿಯ ನಾಯಕರ ಮೇಲೂ ತಲಾಯಲಂಗನಮ್ ಎಂಬಲ್ಲಿ ಹೋರಾಡಿ ವಿಜಯಮಾಲೆಧರಿಸಿದ್ದನು. ಇವನ ವಿಜಯಗಳನ್ನು ಕುರಿತ ಸ್ತೋತ್ರಗಳು ಪುರನಾನೂರು, ಅಹನಾನೂರು, ಕುರುಂತೊಗೈ ಮತ್ತು ನರ್ರಿನೈ ಎಂಬ ಕಾವ್ಯ ಕೃತಿಗಳಲ್ಲಿ ಕಂಡು ಬರುತ್ತವೆ. ನೆಡುಂಜೇಲಿಯನ್ ರಣ ಪರಾಕ್ರಮಿಯಾಗಿದ್ದುದಲ್ಲದೆ ಕವಿಗಳ ಆಶ್ರಯದಾತನೂ ಆಗಿದ್ದನು. ಹಿಂದೂ ಮತಾವಲಂಭಿಯಾಗಿದ್ದ ಇವನು ಯಜ್ಞಯಾಗಿದಿಗಳನ್ನು ಬಹು ಭಕ್ತಿಯಿಂದ ಮತ್ತು ಶ್ರದ್ಧೆಯಿಂದ ಆಚರಿಸುತ್ತಿದ್ದನು.

ನೆಡುಂಜೇಲಿಯನ್ ನಂತರ ಆಳಿದ ರಾಜರುಗಳಲ್ಲಿ ಉಗ್ರಪೆರುವಲೂಟಿ ಮತ್ತು ಭೂತ ಪಾಂಡ್ಯನ್ ಎಂಬವರು ಮುಖ್ಯರಾದವರು. ಉಗ್ರಪೆರುವಲೂಟಿಯು ಕನ್ನಪ್ಪನ್ ಎಂಬ ಮುಖಂಡನನ್ನು ಸದೆಬಡಿದನು. ಇವನು ಕಾವ್ಯ ರಚನಾ ಕಾರನೂ ಆಗಿದ್ದನು.

ಪಾಂಡ್ಯರ ಮತ್ತೊಬ್ಬ ಅರಸನೆಂದರೆ ಭೂತ ಪಾಂಡ್ಯನ್. ಇವನು ಬಲ್ಲೈಯಾರ್ ಎಂಬವನನ್ನು ಸೆರೆಹಿಡಿದು ಅವನ ಗರ್ವವನ್ನು ಮುರಿದನು. ಇವನೂ ಕೂಡ ವೀರ ಯೋಧನಾಗಿದ್ದುದಲ್ಲದೆ ಉದಾರಿಯೂ ಆಗಿದ್ದು ಪ್ರಜಾನುರಾಗಿಯಾಗಿದ್ದನು. ಪಾಂಡ್ಯರ ಅರಸರು ಸಾಹಿತ್ಯಾಭಿಮಾನಿಗಳಾಗಿದ್ದು ಕವಿಗಳಿಗೆ ಆಶ್ರಯ ನೀಡಿದ್ದರು. ರೋಮನ್ ಸಾಮ್ರಾಜ್ಯದೊಂದಿಗೆ ವ್ಯಾಪಾರ ಸಂಪರ್ಕವನ್ನು ಬೆಳೆಸಿದ್ದರು.

**ಚೇರರು**

ಚೋಳರು ಮತ್ತು ಪಾಂಡ್ಯರ ಸಮಕಾಲೀನರಾಗಿದ್ದ ಚೇರರು ಗೋಕರ್ಣದಿಂದ ಕನ್ಯಾಕುಮಾರಿಯ ಪಶ್ಚಿಮತೀರ ಪ್ರದೇಶದಲ್ಲಿ ಆಳುತ್ತಿದ್ದರು. ಪುರನಾನೂರು ಮತ್ತು ಪದಿರ್ರು ಪತ್ತು ಗ್ರಂಥಗಳು ಚೇರ ವಂಶದ ರಾಜರುಗಳ ವಿಷಯಗಳನ್ನೊಳಗೊಂಡಿವೆ. ಚೇರ ವಂಶದಲ್ಲಿ ಎರಡು ಶಾಖೆಗಳಿದ್ದು ಅವುಗಳಲ್ಲಿ ಒಂದಕ್ಕೆ ವಂಜಿ (ಇಂದಿನ ಕನ್ನಾನೂರು)ಯೂ ಮತ್ತೊಂದು ಶಾಖೆಗೆ ತಿರುಚರಪಲ್ಲಿ ಜಿಲ್ಲೆಯ ಕರುವಾವೂರು ರಾಜಧಾನಿಗಳಾಗಿದ್ದವು. ಪದಿರ್ರು ಪತ್ತು ಕೃತಿಯಲ್ಲಿ ವಿವರಿಸಲ್ಪಟ್ಟಿರುವ ಎಂಟು ರಾಜರಲ್ಲಿ ಸೆಂಗುಟ್ಟವನ್ ಚೇರನ್ ಎಂಬವನು ಪ್ರಸಿದ್ಧನಾದ ರಾಜನಾಗಿದ್ದನೆಂದು ಹೇಳಲಾಗಿದೆ. ಇವನು ಮಹಾಪರಾಕ್ರಮಿಯಾಗಿದ್ದು ಹಿಮಾಲಯದವರೆಗೂ ದಂಡೆತ್ತಿ ಹೋಗಿದ್ದನೆಂದು ಹೇಳಲಾಗಿದೆ. ಇದಲ್ಲದೆ ಇವನು ವೇಲರ್ ಮುಖಂಡನಾಗಿದ್ದ ನನ್ನನ್ ಎಂಬವನನ್ನು ಸೋಲಿಸಿದ್ದುದಾಗಿಯೂ ಮತ್ತು ನೆರಿವಾಯಿಲ್ ಎಂಬಲ್ಲಿ ಚೋಳರ ಒಕ್ಕೂಟವನ್ನು ಸದೆಬಡಿದಿದ್ದುದಾಗಿಯೂ ಮತ್ತು ಕೊಂಗರ ಮೇಲೆ ಗಳಿಸಿದ್ದ ವಿಜಯಗಳ ವರ್ಣನೆಗಳು ಶಿಲಪ್ಪಾದಿಕಾರಮ್‌ನಲ್ಲಿ ವಿವರಿಸಲ್ಪಟ್ಟಿವೆ. ಸೆಂಗುಟ್ಟವನ್ ಚೇರನ್ ಆಸ್ತಿಕ ಹಿಂದುವಾಗಿದ್ದು ಶಿವನನ್ನೂ ಮತ್ತು ವಿಷ್ಣುವನ್ನೂ ಪೂಜಿಸುತ್ತಿದ್ದನು.

ಸಂಘಮ್ ಸಾಹಿತ್ಯ ಕೃತಿಗಳಲ್ಲಿ ಈ ಮೇಲಿನ ಮೂರು ರಾಜವಂಶಗಳ ಹೆಸರುಗಳೇ ಅಲ್ಲದೆ ತಮಿಳು ನಾಡಿನ ಇತರ ಭಾಗಗಳಲ್ಲಿ ಆಳ್ವಿಕೆ ಮಾಡುತ್ತಿದ್ದ ಹಲವಾರು ಸಣ್ಣಪುಟ್ಟ ನಾಯಕರ ಹೆಸರುಗಳೂ ಕಂಡುಬರುತ್ತವೆ. ಇವರುಗಳಲ್ಲಿ ಐಲಿಂದಿರನ್ ಮತ್ತು ಪರಿ ಎಂಬವರು ಪ್ರಖ್ಯಾತರಾದವರು. ಇವರು ಶೌರ್ಯ ಸಾಹಸಗಳಿಗೆ ಹೆಸರಾಗಿದ್ದರಲ್ಲದೆ ಕವಿಗಳಿಗೂ, ಸಾಹಿತಿಗಳಿಗೂ ಆಶ್ರಯದಾತರಾಗಿ ಹೆಸರು ಗಳಿಸಿದ್ದರು. ಇವರುಗಳಲ್ಲದೆ ಇನ್ನೂ ಏಳು ನಾಯಕರಿದ್ದುದಾಗಿ ತಿಳಿದುಬರುತ್ತದೆ. ಆದರೆ ಮುಖ್ಯ ರಾಜವಂಶಗಳೊಂದಿಗೆ ಇವರು ಯಾವ ರೀತಿಯ ಸಂಬಂಧಗಳನ್ನು ಹೊಂದಿದ್ದರೆಂಬುದು ಸ್ಪಷ್ಟವಾಗಿ ತಿಳಿದುಬಂದಿಲ್ಲ.

**ಆದರ್ಶ ನೀತಿಗಳಿಂದ ಕೂಡಿದ ರಾಜತ್ವ**

ಈ ಕಾಲದ ರಾಜತ್ವದ ಧ್ಯೇಯಾದರ್ಶಗಳ ಬಗ್ಗೆ ಸಂಘಮ್ ಸಾಹಿತ್ಯವು ಬೆಳಕನ್ನು ಚೆಲ್ಲುತ್ತದೆ. ರಾಜರುಗಳು ಯುದ್ಧಾಸಕ್ತರಾಗಿದ್ದು ಆಗಿಂದಾಗ್ಗೆ ಯುದ್ಧಗಳು ನಡೆಯುತ್ತಿದ್ದವು. ಯುದ್ಧದಲ್ಲಿ ಶೌರ್ಯ ಸಾಹಸಗಳನ್ನು ಪ್ರದರ್ಶಿಸುವುದು ಒಂದು ಮಹತ್ತರವಾದ ಸಾಧನೆಯೆಂದು ಭಾವಿಸಲಾಗಿತ್ತು. ಯುದ್ಧದಲ್ಲಿ ಜಯಶೀಲನಾದ ರಾಜನು ಸೋತ ರಾಜರ ಕಿರೀಟಗಳನ್ನು ಒಟ್ಟಿಗೆ ತನ್ನ ತಲೆಯ ಮೇಲೆ ಧರಿಸಿ ತನ್ನ ವಿಜಯವನ್ನು ಜಗತ್ತಿಗೆ ಸಾರುತ್ತಿದ್ದನು. ಯುದ್ಧದಲ್ಲಿ ಕೊನೆಯ ತನಕ ಹೋರಾಡಿ ಸಾಯುವುದು ರಾಜನಾದವನಿಗೆ ಒಂದು ಶ್ಲಾಘನೀಯ ಗುಣವಾಗಿತ್ತು.

ರಾಜರುಗಳು ತಮ್ಮ ಕರ್ತವ್ಯಗಳೇನೆಂಬುದನ್ನು ಚೆನ್ನಾಗಿ ತಿಳಿದುಕೊಂಡಿದ್ದರು. ನಿಷ್ಪಾಕ್ಷಿಕವಾಗಿ ನ್ಯಾಯ ನಿರ್ವಹಣೆ, ದುಷ್ಟ ನಿಗ್ರಹ ಶಿಷ್ಟಪರಿಪಾಲನೆ, ಪ್ರಜೆಗಳ ಆರ್ಥಿಕ ಪರಿಸ್ಥಿತಿಯನ್ನು ಉತ್ತಮಗೊಳಿಸುವುದು, ಧರ್ಮವನ್ನು ರಕ್ಷಿಸುವುದು, ಯಜ್ಞಯಾಗಾದಿಗಳನ್ನು ಆಚರಿಸುವುದು, ನೈತಿಕತೆಯನ್ನು ಕಾಪಾಡುವುದು, ಸಾಮಾಜಿಕ ಶಾಂತಿಯನ್ನು ಕಾಪಾಡುವುದು, ವಿದ್ಯೆಗೆ ಪ್ರೋತ್ಸಾಹ ನೀಡುವುದು, ಮೊದಲಾದವುಗಳು ರಾಜರುಗಳ ನ್ಯಾಯ ಬದ್ಧ ಕರ್ತವ್ಯಗಳಾಗಿದ್ದವು. ಒಟ್ಟಾರೆ ಹೇಳುವುದಾದರೆ ರಾಜನಾದವನು ಎಲ್ಲ ರೀತಿಯಲ್ಲೂ ಪ್ರಜೆಗಳಿಗೆ ಆದರ್ಶನಾಗಿರಬೇಕೆಂಬುದು ರಾಜರ ಆದರ್ಶವಾಗಿತ್ತು. ಆದರ್ಶ ರಾಜನ ಕರ್ತವ್ಯಗಳನ್ನು ಕುರಿತ ವಿವರಣೆಗಳು 'ಕುರಳ್' ಗ್ರಂಥದಲ್ಲಿವೆ.

ರಾಜತ್ವವು ವಂಶ ಪಾರಂಪರ್ಯವಾಗಿತ್ತು. ಆದರೂ ಒಮ್ಮೊಮ್ಮೆ ಸಿಂಹಾಸನಕ್ಕಾಗಿ ಕಲಹಗಳು ನಡೆಯುತ್ತಿದ್ದವು. ರಾಜನು ನಿರಂಕುಶನಾಗಿ ಆಳುವುದಕ್ಕೆ ಅವಕಾಶವಿರಲಿಲ್ಲ. ರಾಜನ ನಿರಂಕುಶಾಧಿಕಾರವನ್ನು ಮಂತ್ರಿಗಳು, ಆಸ್ಥಾನದ ಕವಿಗಳು, ಉನ್ನತ ಅಧಿಕಾರಿಗಳು ಹಾಗೂ ಧರ್ಮ ಮತ್ತು ಸಂಪ್ರದಾಯವಾದ ಕಟ್ಟುಪಾಡುಗಳು ಹತೋಟಿಯಲ್ಲಿಟ್ಟಿದ್ದವು. ರಾಜನು ತನ್ನ ಪ್ರಜೆಗಳಿಗೆ ಪಿತೃವಿನಂತಿದ್ದನು. ಮನ್ರಮ್ ಅಥವ ಪೋಟಿಯಲ್ (ಹಿರಿಯರ ಸಭೆ) ಎಂಬುದು ಉನ್ನತ ನ್ಯಾಯಾಲಯವಾಗಿತ್ತು. ಅಲ್ಲಿ ಹಿರಿಯರು ವ್ಯಾಜ್ಯಗಳನ್ನು ಬಗೆ ಹರಿಸುತ್ತಿದ್ದರು. ರಾಜನೂ ಕೂಡ ಕೆಲವು ಮುಖ್ಯ ವಿಷಯಗಳ ಬಗ್ಗೆ ಈ ನ್ಯಾಯಾಲಯದ ಸಲಹೆ ಕೇಳುತ್ತಿದ್ದನು. ಒಟ್ಟಿನಲ್ಲಿ ಹೇಳುವುದಾದರೆ ರಾಜನು ಸ್ವೇಚ್ಛಾನುಸಾರವಾಗಿ ಆಡಳಿತ ನಡೆಸದೆ ಪ್ರಜಾಕ್ಷೇಮವನ್ನು ಗುರಿಯಾಗಿಟ್ಟುಕೊಂಡು ಧರ್ಮದ ಕಟ್ಟಲೆಗಳು ಹಾಗೂ ಸಂಪ್ರದಾಯದ ಕಟ್ಟುಪಾಡುಗಳಿಗನುಸಾರವಾಗಿ ಆಡಳಿತ ಮಾಡುತ್ತಿದ್ದುದಾಗಿ ತಿಳಿದುಬರುತ್ತದೆ.

### ಆಡಳಿತ ವ್ಯವಸ್ಥೆ

ಸಂಘಮ್ ಯುಗಧ ರಾಜರುಗಳು ಆಡಳಿತದ ಅನುಕೂಲಕ್ಕಾಗಿ ರಾಜ್ಯವನ್ನು ಅನೇಕ ಆಡಳಿತ ಘಟಕಗಳನ್ನಾಗಿ ವಿಭಜಿಸಿದ್ದರು. ಸಾಮಾನ್ಯವಾಗಿ ಜನರು ಹೆಚ್ಚಾಗಿ ಗ್ರಾಮಗಳಲ್ಲಿ ವಾಸಿಸುತ್ತಿದ್ದರು. ಗ್ರಾಮವು ಆಡಳಿತದ ಕೊನೆಯ ಘಟಕವಾಗಿತ್ತು. ಹಲವು ಗ್ರಾಮಗಳನ್ನು ಸೇರಿಸಿ ಕುರ್‍ರಂ ಎಂಬ ಮತ್ತೊಂದು ಆಡಳಿತ ಘಟಕವನ್ನು ನಿರ್ಮಿಸಲಾಗಿತ್ತು. ಅನೇಕ ಕುರ್‍ರಂಗಳು ಸೇರಿ ನಾಡು ಎಂದು ಕರೆಯಲ್ಪಟ್ಟಿದ್ದ ಆಡಳಿತದ ದೊಡ್ಡ ಘಟಕವಿದ್ದಿತು. ಇವುಗಳ ಮೇಲೆ ಹಲವು ನಾಡುಗಳನ್ನೊಳಗೊಂಡ ಕೊಟ್ಟಮ್ ಅಥವ ಪ್ರಾಂತ್ಯಗಳಿದ್ದವು.

ಗ್ರಾಮಗಳು ಸ್ವಾಯತ್ತತೆಯನ್ನು ಹೊಂದಿದ್ದವು. ಗ್ರಾಮಗಳಲ್ಲಿನ ಜನರು ತಮ್ಮ ಅಧಿಕಾರವನ್ನು ತಾವೇ ನಡೆಸುವ ಸ್ವಾತಂತ್ರ್ಯವನ್ನು ಹೊಂದಿದ್ದರು. ಪ್ರತಿಯೊಂದು ಗ್ರಾಮವೂ ಪ್ರತ್ಯೇಕವಾದ ಆಡಳಿತ ಘಟಕವೆಂದು ಪರಿಗಣಿಸಲ್ಪಟ್ಟಿದ್ದರಿಂದ ಪ್ರತಿಯೊಂದು ಗ್ರಾಮವೂ ಚುನಾಯಿತ ಗ್ರಾಮ ಸಭೆಯನ್ನು ಹೊಂದಿತ್ತು. ಇಂತಹ ಸಭೆಗಳಿಗೆ 'ಊರ್' ಎಂದು ಕರೆಯುತ್ತಿದ್ದರು. ಗ್ರಾಮಗಳ ಅಗತ್ಯಗಳನ್ನು ನೋಡಿಕೊಳ್ಳಲು ಅನೇಕ ಕಾರ್ಯನಿರ್ವಾಹಕ ಸಮಿತಿಗಳಿದ್ದವು.

**ಸಾಮಾಜಿಕ ಸ್ಥಿತಿ**

ಸಂಘಮ್ ಯುಗಧ ಸಾಹಿತ್ಯವು ಆ ಕಾಲದ ರಾಜಕೀಯ ಸಂಸ್ಥೆಗಳಿಗಿಂತಲೂ ಹೆಚ್ಚಾಗಿ ಅಂದಿನ ಜನರ ಜೀವನ ಪದ್ಧತಿ ಮತ್ತು ಸಾಮಾಜಿಕ ಸ್ಥಿತಿಗತಿಗಳ ಮೇಲೆ ಅಪಾರವಾದ ಬೆಳಕನ್ನು ಚೆಲ್ಲುತ್ತದೆ. ಈ ಕಾಲದ ತಮಿಳರು ತಮ್ಮ ಜೀವನೋಪಾಯಕ್ಕೆ ಯೋಗ್ಯವಾದ ಭೂಪ್ರದೇಶವನ್ನು ಐದು ಭಾಗಗಳನ್ನಾಗಿ ವಿಂಗಡಿಸಿಕೊಂಡಿದ್ದರು. ಈ ಐದು ಭಾಗಗಳನ್ನು ಪಾಲೈ (ಮರಳು ಭೂಮಿ), ಕುರುಂಜಿ (ಬೆಟ್ಟ ಗುಡ್ಡಗಳಿಂದ ಕೂಡಿದ್ದ ಪ್ರದೇಶ), ಮುಲ್ಲೈ (ಅರಣ್ಯ ಪ್ರದೇಶ), ಮರುದಂ (ನದೀಕಣಿವೆಗಳ ಪ್ರದೇಶ), ನೈದಲ್ (ಕರಾವಳಿ ಪ್ರದೇಶ) ಎಂಬ ಹೆಸರುಗಳಿಂದ ಕರೆಯುತ್ತಿದ್ದರು. ಪ್ರತಿಯೊಂದು ಭಾಗವೂ ಅಲ್ಲಿನ ಪರಿಸರಕ್ಕೆ ತಕ್ಕಂತೆ ಅಂದರೆ ಪಾಲೈ ಪ್ರದೇಶದಲ್ಲಿ ಜೀವನೋಪಾಯಕ್ಕಾಗಿ ಊರಿಂದೂರಿಗೆ ಅಲೆದಾಡುವ ಜನರೂ, ಮುಲ್ಲೈ ಪ್ರದೇಶದಲ್ಲಿ ಕುರುಬರೂ, ಕುರಿಂಜಿ ಪ್ರದೇಶದಲ್ಲಿ ಬೇಟೆಗಾರರೂ, ಮರುದಂ ಪ್ರದೇಶದಲ್ಲಿ ಒಕ್ಕಲುತನ ಮಾಡುವವರೂ, ನೈದಲ್ ಪ್ರದೇಶದಲ್ಲಿ ಬೆಸ್ತರೂ ವಿಶಿಷ್ಟವಾದ ಜೀವನ ಕ್ರಮವನ್ನು ರೂಪಿಸಿಕೊಂಡಿದ್ದರು. ಆದರೆ ಕಾಲಕ್ರಮೇಣ ಪ್ರತಿಯೊಂದು ಪ್ರದೇಶವೂ ಪರಸ್ಪರ ಪ್ರಭಾವಕ್ಕೊಳಗಾಗಿ ತಮ್ಮ ಪ್ರತ್ಯೇಕತೆಯನ್ನು ಕಳೆದುಕೊಂಡವು.

ಸಂಘಮ್ ಯುಗದ ಜನಸಾಮಾನ್ಯ ತಮಿಳರ ಜೀವನ ಕ್ರಮವು ಅತ್ಯಂತ ಸರಳವಾಗಿತ್ತು. ಸಮಾಜವು ವೃತ್ತಿಗಳ ಆಧಾರದ ಮೇಲೆ ರೂಪಿತವಾಗಿತ್ತು. ಪುರಾನಾನೂರು ಗ್ರಂಥದ ಪ್ರಕಾರ ನಾಲ್ಕು ಜಾತಿಗಳಿದ್ದುದಾಗಿ ಕಂಡುಬರುತ್ತದೆ. ಅವುಗಳೆಂದರೆ, ಕುಡಿಯನ್, ಪಾನನ್, ಪರಯನ್ ಮತ್ತು ಕಡಂಬನ್. ಆದರೂ ಕಸುಬಿನ ಆಧಾರದ ಮೇಲೆ ರಚಿತವಾಗಿದ್ದ ಇತರ ಗುಂಪುಗಳೂ ಇದ್ದವು. ಈ ಗುಂಪುಗಳೆಂದರೆ ವೆಳ್ಳಾರ್ (ಭೂಮಾಲೀಕರು), ವಣಿಗರ್ (ವರ್ತಕರು), ವಿನೈವಲರ್ (ಶ್ರಮಜೀವಿಗಳು), ಅಡಿಯಾರ್ (ಸ್ವಂತ ಸೇವಕರು). ಈ ನಾಲ್ಕು ಸ್ಥಳೀಯ ಜಾತಿಗಳು ಈ ಭಾಗದಲ್ಲಿ ನೆಲೆಗೊಳ್ಳುತ್ತಿದ್ದಾಗಲೇ ಆರ್ಯರೂ ಜಾತಿ ಪದ್ಧತಿಯು ಪ್ರಚಾರಕ್ಕೆ ಬಂದು ಕಾಲಕ್ರಮೇಣ ಇವುಗಳು ಮಿಲನಗೊಂಡು ಚತುರ್ವರ್ಣಗಳು ಕಾಣಿಸಿಕೊಂಡವು. ನಾಲ್ಕು ಜಾತಿ ಪದ್ಧತಿಗಳ ಜೊತೆಗೆ ಅನೇಕ ಉಪಜಾತಿಗಳು ಹುಟ್ಟುಕೊಂಡವು. ಒಂದೇ ಜಾತಿಯವರು ತಮ್ಮ ತಮ್ಮ ಜಾತಿಯವರಲ್ಲೇ ವಿವಾಹ ಮಾಡಿಕೊಳ್ಳುವ ವಾಡಿಕೆಯು ರೂಢಿಗೆ ಬಂದಿತು. ಪ್ರಾಚೀನ ತಮಿಳರಲ್ಲಿ ರಹಸ್ಯ ಮತ್ತು ಬಹಿರಂಗ ವಿವಾಹಗಳೆಂಬ ಎರಡು ರೀತಿಯ ವಿವಾಹಗಳು ಆಚರಣೆಯಲ್ಲಿದ್ದವು. ಆದರೆ ಆರ್ಯರ ಪ್ರಭಾವದಿಂದಾಗಿ ಅಗ್ನಿ ಸಾಕ್ಷಿಯಿಂದ ಕೂಡಿದ್ದ ಆರ್ಯರ ವಿವಾಹ ಪದ್ಧತಿಗಳು ಆಚರಣೆಗೆ ಬಂದವು. ಬ್ರಾಹ್ಮಣರೂ ಸ್ಥಳೀಯ ಸಂಪ್ರದಾಯ ಮತ್ತು ಆಚರಣೆಗಳನ್ನು ಅನುಸರಿಸಲಾರಂಭಿಸಿದರು. ವಧುನಿಕ ಕೊರಳಿಗೆ ಮಾಂಗಲ್ಯ ಕಟ್ಟುವುದು. ಸತಿ ಪದ್ಧತಿ, ವಿಧವೆಯರಿಗೆ ತಲೆ ಕೂದಲು ತೆಗೆಯುವುದು ಮತ್ತಿತರ ಆರ್ಯ ಸಂಸ್ಕಾರಗಳು, ಆಚಾರಗಳು, ಉತ್ತರ ಕ್ರಿಯೆಗಳು ಆಚರಣೆಗೆ ಬಂದವು. ಸ್ತ್ರೀಯರಿಗೆ ಸಮಾಜದಲ್ಲಿ ಗೌರವ ಸ್ಥಾನಕೊಡಲಾಗಿತ್ತು ಮತ್ತು ಅವರನ್ನು 'ಗೃಹಲಕ್ಷ್ಮಿ' ಎಂದು ಪರಿಗಣಿಸಲಾಗಿತ್ತು. ಪತಿಭಕ್ತಿಯು ಅವರ ಉನ್ನತ ಆದರ್ಶವಾಗಿತ್ತು. ವೇಶ್ಯಾ ವಾಟಿಕೆಯೂ ಆಚರಣೆಯಲ್ಲಿತ್ತು. ಆದರೆ ವೇಶ್ಯೆಯರನ್ನು ಸಮಾಜವು ಕೀಳಾಗಿ ಕಾಣುತ್ತಿತ್ತು.

ಪ್ರಾಚೀನ ತಮಿಳರು ಅವರವರ ಅನುಕೂಲಕ್ಕೆ ತಕ್ಕಂತೆ ಮನೆಗಳನ್ನು ಕಟ್ಟಿಕೊಂಡಿದ್ದರು. ಗುಡ್ಡಗಾಡು ಪ್ರದೇಶಗಳಲ್ಲಿ ವಾಸಿಸುತ್ತಿದ್ದ ಜನರು ಮನೆಗಳು

ಸರಳವಾಗಿದ್ದು ಆವು ಗರಿಗಳು ಇಲ್ಲವೆ ಹುಲ್ಲಿನಿಂದ ಹೊದಿಸಲ್ಪಟ್ಟ ಜೋಪಡಿಗಳಾಗಿದ್ದವು. ನದೀ ಕಣಿವೆಗಳ ಪ್ರದೇಶದಲ್ಲಿ ವಾಸಿಸುತ್ತಿದ್ದವರು ಸುಟ್ಟ ಇಟ್ಟಿಗೆಗಳಿಂದ ಕಟ್ಟಲ್ಪಟ್ಟ ದೊಡ್ಡ ದೊಡ್ಡ ಮನೆಗಳಲ್ಲಿ ವಾಸಿಸುತ್ತಿದ್ದರು. ಶ್ರೀಮಂತರ ಮನೆಗಳಿಗೆ ಮಹಡಿಗಳಿದ್ದವು. ರಾಜರು ಭವ್ಯವಾದ ಅರಮನೆಗಳಲ್ಲಿ ವಾಸಿಸುತ್ತಿದ್ದರು. ಇದರಿಂದ ವಾಸ್ತುಶಿಲ್ಪ ಕಲೆಯು ಈ ಕಾಲದಲ್ಲಿ ಅಭಿವೃದ್ಧಿ ಹೊಂದಿತ್ತೆಂಬುದಾಗಿ ತಿಳಿದುಬರುತ್ತದೆ.

**ವಿನೋದ ಕ್ರೀಡೆಗಳು**

ಜನರು ವಿನೋಧ ಪ್ರಿಯರಾಗಿದ್ದರು. ವಿವಿಧ ರೀತಿಯ ಮನರಂಜನೆ ಕಾರ್ಯಗಳನ್ನು ಏರ್ಪಡಿಸುತ್ತಿದ್ದರು. ಪಗಡೆ ಮತ್ತು ಜೂಜಾಟಗಳು ಜನಪ್ರಿಯ ಆಟಗಳಾಗಿದ್ದವು. ಯುವಕರು ಸಾಮಾನ್ಯವಾಗಿ ಮನ್ರಮ್ ಎಂಬ ಸಾರ್ವಜನಿಕ ಸ್ಥಳದಲ್ಲಿ ತಮಗೆ ಪ್ರಿಯವಾದ ಆಟಗಳನ್ನು ಆಡುತ್ತಿದ್ದರು. ರಾಜರು ಮತ್ತು ಶ್ರೀಮಂತರು ತಮ್ಮ ಭವನಗಳ ಮುಂಬದಿಯ ಪಡಸಾಲೆಗಳಲ್ಲಿ ಕುಳಿತು ಸಂಗೀತಗಾರರು ಹಾಡುವ ಸಂಗೀತವನ್ನು ಕೇಳುತ್ತಿದ್ದರು. ಹಬ್ಬ ಹರಿದಿನಗಳು ಸರ್ವಸಾಮಾನ್ಯವಾಗಿದ್ದವು. ಉತ್ಸವ ಕಾಲದಲ್ಲಿ ಮಲ್ಲ ಯುದ್ಧ, ನೃತ್ಯ ಮೊದಲಾದ ಮನರಂಜನೆಯ ಕಾರ್ಯಗಳನ್ನು ಏರ್ಪಡಿಸಿ ಸಾರ್ವಜನಿಕರಿಗೆ ಮನರಂಜನೆ ಒದಗಿಸಲಾಗುತ್ತಿತ್ತು.

**ಶಿಕ್ಷಣ**

ಮಕ್ಕಳಿಗೆ ಶಿಕ್ಷಣಕೊಡಲು ತಕ್ಕ ವ್ಯವಸ್ಥೆ ಮಾಡಲಾಗಿತ್ತು. ನುರಿತ ಪಂಡಿತರು ವಿದ್ಯಾರ್ಥಿಗಳಿಗೆ, ಗಣಿತ, ವ್ಯಾಕರಣ ಮತ್ತು ಸಾಹಿತ್ಯವನ್ನು ಕಲಿಸುತ್ತಿದ್ದರು. ಸೈನ್ಯ ಶಿಕ್ಷಣಕ್ಕೆ ಹೆಚ್ಚಿನ ಮಹತ್ವ ಕೊಡಲಾಗಿತ್ತು. ಪ್ರತಿಯೊಂದು ಗ್ರಾಮದಲ್ಲೂ ಪೂರವ್ವೆ ಮತ್ತು ಮುರಂಕಲಾರಿ ಎಂಬ ಸೈನಿಕ ಶಿಕ್ಷಣ ಶಾಲೆಗಳಿದ್ದವು. ಸೈನಿಕ ಶಿಕ್ಷಣದಲ್ಲಿ ಪ್ರಶಸ್ತ ರೀತಿಯಲ್ಲಿ ಉತ್ತೀರ್ಣರಾದವರನ್ನು ಗೌರವಿಸುವ ಸಂಪ್ರದಾಯವನ್ನಿಟ್ಟುಕೊಂಡಿದ್ದರು. ರಣ ಪರಾಕ್ರಮವು ಆ ಕಾಲದ ಜನರ ಧ್ಯೇಯವಾಗಿತ್ತು. ರಾಜ್ಯದ ರಕ್ಷಣೆಗಾಗಿ ತಮ್ಮ ಪ್ರಾಣವನ್ನು ಅರ್ಪಿಸುವ ಸಂದರ್ಭವೊದಗಿ ಬಂದಾಗ ಸ್ತ್ರೀಯರು ತಮ್ಮ ಪತಿ ಇಲ್ಲವೆ ಪುತ್ರರಿಗೆ ಅಡ್ಡಿಯುಂಟುಮಾಡದೆ ಅದೊಂದು ಸತ್ಕಾರ್ಯವೆಂದು ತಿಳಿದು ಅವರನ್ನು ಪ್ರೊತ್ಸಾಹಿಸುತ್ತಿದ್ದರು. ನೃತ್ಯ ಕಲೆಯಲ್ಲಿ ಶಿಕ್ಷಣಕೊಡಲು ನೃತ್ಯಕಲೆ ಶಾಲೆಗಳೂ ಇದ್ದವು.

**ಆಹಾರ ಮತ್ತು ಉಡುಪುಗಳು**

ಆಗಿನ ಕಾಲದ ತಮಿಳರ ಆಹಾರ ಪದಾರ್ಥಗಳು ಹೆಚ್ಚು ಕಡಿಮೆ ಇಂದಿನಂತೆಯ ಇದ್ದವು. ಮೇಲ್ವರ್ಗದವರು ಅಕ್ಕಿ, ಹಾಲು, ತುಪ್ಪ, ಕಾಯಿ ಪಲ್ಯೆಗಳು ಮತ್ತು ಹಣ್ಣು ಹಂಪಲುಗಳನ್ನು ಯತೇಚ್ಚವಾಗಿ ಉಪಯೋಗಿಸುತ್ತಿದ್ದರು. ಬಡವರು ಅನ್ನದ ಗಂಜಿ ಮತ್ತು ಸೊಪ್ಪುಸದೆಗಳನ್ನು ತಿಂದು ಜೀವನ ಮಾಡುತ್ತಿದ್ದರು. ಮಾಂಸಾಹಾರವು ರೂಢಿಯಲ್ಲಿತ್ತು. ಕಾಲಕ್ರಮೇಣ ಜೈನ ಮತ್ತು ಬೌದ್ಧಮತಗಳು ತಮಿಳು ನಾಡಿನಲ್ಲಿ ಹರಡಿದ ಮೇಲೆ ಮಾಂಸಾಹಾರವನ್ನು ನಿಷೇಧಿಸುವ ಪ್ರಯತ್ನಗಳು ನಡೆದವು. ಹೆಂಡ ಕುಡಿಯುವುದು ಸರ್ವ ಸಾಮಾನ್ಯವಾಗಿತ್ತು. ತಾಂಬೂಲ ಜಗಿಯುವುದು ವಾಡಿಕೆಯಲ್ಲಿತ್ತು. ಅಥಿತಿ ಸತ್ಕಾರ, ಅನ್ನದಾನ ಮಾಡುವುದು ತಮಿಳರಿಗೆ ಸಹಜ ಗುಣವಾಗಿತ್ತು. ಹಬ್ಬ ಹರಿದಿನ ಮತ್ತು ಉತ್ಸವದ ದಿವಸಗಳಲ್ಲಿ ಸಾರ್ವಜನಿಕ ಭೋಜನಗಳು ನಡೆಯುತ್ತಿದ್ದವು. ಹವಾಗುಣಕ್ಕೆ

ತಕ್ಕಂತೆ ಉಡುಪುಗಳನ್ನು ತೊಡುತ್ತಿದ್ದರು. ಗಂಡಸರು ಎರಡು ವಸ್ತ್ರಗಳನ್ನು ಉಪಯೋಗಿಸುತ್ತಿದ್ದರು. ಒಂದನ್ನು ಸೊಂಟದ ಸುತ್ತಲೂ ಸುತ್ತಿಕೊಳ್ಳುತ್ತಿದ್ದರು. ಮತ್ತೊಂದನ್ನು ಭುಜದ ಮೇಲೆ ಹಾಕಿಕೊಳ್ಳುತ್ತಿದ್ದರು. ರಾಜರು ಮತ್ತು ಧನಿಕರು ಬೆಲೆ ಬಾಳುವ ಮತ್ತು ಅಲಂಕಾರಕವಾದ ಉಡುಪುಗಳನ್ನು ತೊಡುತ್ತಿದ್ದರು.

**ಆರ್ಥಿಕ ಸ್ಥಿತಿ**

ಭೂಮಿಯು ತುಂಬಾ ಫಲವತ್ತಾಗಿತ್ತು. ಒಕ್ಕಲುತನವು ಬಹುಸಂಖ್ಯಾತ ಜನರ ಪ್ರಧಾನ ಕಸುಬಾಗಿತ್ತು. ನೀರಾವರಿ ವ್ಯವಸಾಯವನ್ನೂ ಮಾಡುತ್ತಿದ್ದರು. ಭತ್ತ, ರಾಗಿ, ಹತ್ತಿ, ಕಬ್ಬು, ಎಣ್ಣೆಗಳು ಮತ್ತು ದ್ವಿದಳ ಧಾನ್ಯಗಳನ್ನು ತರಕಾರಿ ಮತ್ತು ಹಣ್ಣು ಹಂಪಲುಗಳನ್ನು ಹೇರಳವಾಗಿ ಬೆಳೆಯುತ್ತಿದ್ದರು. ವ್ಯವಸಾಯದ ಜೊತೆಗೆ ಪಶುಪಾಲನೆಯೂ ಮತ್ತೊಂದು ಮುಖ್ಯ ಕಸುಬಾಗಿತ್ತು. ನೂಲುವುದು, ನೇಯುವುದು, ಬೇಟೆಯಾಡುವುದು, ಮೀನುಗಾರಿಕೆ, ವ್ಯಾಪಾರ ವಾಣಿಜ್ಯ ಮತ್ತಿತರ ಕಸುಬುಗಳಲ್ಲೂ ಜನರು ತೊಡಗಿದ್ದರು. ಹತ್ತಿ ಬಟ್ಟೆಯನ್ನು ತಯಾರಿಸುವುದರಲ್ಲಿ ತಮಿಳರು ನಿಪುಣರಾಗಿದ್ದರು. ಅವರು ತಯಾರಿಸುತ್ತಿದ್ದ ಹತ್ತಿ ಬಟ್ಟೆಯು ಹಾವಿನ ಪೊರೆಯಂತೆ ತೆಳುವಾಗಿದ್ದಿತೆಂದು ತಮಿಳು ಕಾವ್ಯಗಳಲ್ಲಿ ವರ್ಣನೆಗಳು ಕಂಡುಬರುತ್ತವೆ. ಚಿನ್ನ, ಬೆಳ್ಳಿ, ತಾಮ್ರ, ಕಂಚು, ಹಿತ್ತಾಳೆ ಕಬ್ಬಿಣ ಮತ್ತಿತರ ಲೋಹಗಳ ಪರಿಚಯವಿತ್ತು. ಆಭರಣಗಳ ತಯಾರಿಕೆಯಲ್ಲೂ ಮತ್ತು ಕಂಚಿನ ವಿಗ್ರಹಗಳನ್ನು ತಯಾರಿಸುವುದರಲ್ಲಿ ಅವರದು ಪಳಗಿದಕೈಯಾಗಿತ್ತು. ಗಂಧದ ಮರದಿಂದಲೂ ಸುಂದರವಾದ ವಿಗ್ರಹಗಳನ್ನು ಮಾಡುತ್ತಿದ್ದರು. ಕೈಗಾರಿಕೆಯಲ್ಲೂ ಮುಂದುವರಿದಿದ್ದರು.

ಪ್ರಾಚೀನ ತಮಿಳರು ವ್ಯಾಪಾರ ವಾಣಿಜ್ಯದಲ್ಲೂ ಮುಂದುವರಿದಿದ್ದರು. ರೋಮನ್ ಸಾಮ್ರಾಜ್ಯದೊಂದಿಗೆ ವ್ಯಾಪಾರವು ಚುರುಕಾಗಿ ನಡೆಯುತ್ತಿತ್ತು. ಇತ್ತೀಚೆಗೆ ನಡೆದಿರುವ ಸಂಶೋಧನೆಗಳಲ್ಲಿ ರೋಮನ್ ನಾಣ್ಯಗಳು ಅಪಾರ ಸಂಖ್ಯೆಯಲ್ಲಿ ದೊರೆತಿರುವುದರಿಂದ ವ್ಯಾಪಾರ ಸಂಬಂಧಗಳು ಹೆಚ್ಚಿನ ಮಟ್ಟದಲ್ಲಿದ್ದುವೆಂದು ತಿಳಿದುಬರುತ್ತದೆ. ಹತ್ತಿಬಟ್ಟೆಗಳು, ಮುತ್ತುಗಳು, ಚಿನ್ನಬೆಳ್ಳಿ ಆಭರಣಗಳು ಸಂಬಾರವಸ್ತುಗಳು, ಗಂಧದ ಸಾಮಾನುಗಳು ಈ ರಾಜ್ಯಗಳಿಂದ ರಫ್ತಾಗುತ್ತಿದ್ದ ಮುಖ್ಯ ವಸ್ತುಗಳಾಗಿದ್ದವು. ಇವುಗಳಿಗೆ ವಿನಿಮಯವಾಗಿ ಚಿನ್ನವನ್ನು ಪಾಶ್ಚಾತ್ಯ ರಾಷ್ಟ್ರಗಳು ಇಲ್ಲಿಗೆ ಕಳುಹಿಸುತ್ತಿದ್ದವು. ಕಾವೇರಿಪಟ್ಟಣಮ್, ತುತ್ತೂಕುಡಿ, ನಾಗಪಟ್ಟಂ, ಕರುಪೂರ್‌ಗಳು ಸಮುದ್ರತೀರದಲ್ಲಿದ್ದುದರಿಂದ ಅವುಗಳ ಮೂಲಕ ವ್ಯಾಪಾರವು ಹೊರದೇಶಗಳೊಂದಿಗೆ ನಡೆಯುತ್ತಿತ್ತು.

**ಧರ್ಮ**

ಈ ಕಾಲದ ತಮಿಳರು ಧರ್ಮದಲ್ಲಿ ಅಪಾರವಾದ ಶ್ರದ್ಧೆ ಭಕ್ತಿಗಳನಿಟ್ಟುಕೊಂಡಿದ್ದರು. ದೇವಾಲಯಗಳಲ್ಲಿ ಪೂಜೆ ಪುರಸ್ಕಾರಗಳು ಅಡಿಗಡಿಗೆ ಪಡೆಯುತ್ತಿದ್ದವು. ಪುರನಾನೂರು ಮತ್ತು ಶಿಲಪ್ಪಾದಿಕಾರಂ ಗ್ರಂಥಗಳಲ್ಲಿ ಅನೇಕ ದೇವರುಗಳ ಪ್ರಸ್ತಾಪಗಳು ಕಂಡುಬರುತ್ತವೆ. ಶಿವ, ಮುರುಘ, ವಿಷ್ಣು, ಬಲದೇವ, ಇಂದ್ರ, ಕಾರ್ತಿಕೇಯ, ಲಕ್ಷ್ಮಿ, ಸರಸ್ವತಿ, ಬ್ರಹ್ಮ ಮೊದಲಾದ ದೇವರುಗಳನ್ನು ಪೂಜಿಸುತ್ತಿದ್ದರು. ಕಾಲಕ್ರಮೇಣ ತಮಿಳು ನಾಡಿನಲ್ಲಿ ಜೈನ ಮತ್ತು ಬೌದ್ಧ ಮತಗಳು ಪ್ರಚಾರಕ್ಕೆ ಬಂದರೂ ಧಾರ್ಮಿಕ ಘರ್ಷಣೆಗಳಿಲ್ಲದೆ ಅಭಿವೃದ್ಧಿಹೊಂದಿದವು. ಒಟ್ಟಾರೆ ಧಾರ್ಮಿಕ ಸಹಿಷ್ಣುತೆಯು ಈ ಕಾಲದ ವೈಶಿಷ್ಟ್ಯವಾಗಿತ್ತು.

**ಸಾಹಿತ್ಯ**

ಸಂಘಮ್ ಯುಗದ ಕಾಲದಲ್ಲಿ ಅಪಾರವಾದ ಸಾಹಿತ್ಯವು ಸೃಷ್ಟಿಯಾಯಿತು. ಈ ಯುಗವು ಸಂಘಮ್ ಸಾಹಿತ್ಯ ಯುಗವೆಂದೇ ಪ್ರಸಿದ್ಧಿ ಪಡೆದಿದೆ. ತಮಿಳು ಭಾಷೆಯು ಶುದ್ಧವಾದ ಸಾಹಿತ್ಯದ ಭಾಷೆಯಾಯಿತು. ಮೊದಲನೆಯ ಮತ್ತು ಎರಡನೆಯ ಸಂಘಮ್‌ಗಳಿಗೆ ಸೇರಿದ ಸಾಹಿತ್ಯವು ಹಾಳಾಗಿಹೋಗಿದೆ. ಈಗ ಲಭ್ಯವಿರುವ ಗ್ರಂಥಗಳು ಮೂರನೆಯ ಸಂಘಮ್ ಕಾಲದಲ್ಲಿ ರಚಿತವಾದವುಗಳೆಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ. ಮಧುರೆಯು ಈ ಸಾಹಿತ್ಯ ಚಟುವಟಿಕೆಗಳ ಕೇಂದ್ರವಾಗಿತ್ತು. ಪ್ರಾಚೀನ ತಮಿಳುನಾಡಿನಲ್ಲಿ ಸಂಘಮ್ ಎಂಬ ಅಪರೂಪವಾದ ಸಾಹಿತ್ಯ ಪರಿಷತ್ತುಗಳಿದ್ದವು. ಇವು ಸಾಹಿತ್ಯ ರಚನೆಯಲ್ಲಿ ಮಹತ್ವದ ಪಾತ್ರವನ್ನು ವಹಿಸಿದ್ದವು. ಶ್ರೇಷ್ಠ ಕವಿಗಳು ಮತ್ತು ಸಾಹಿತಿಗಳೆಂದು ಪರಿಗಣಿಸಲ್ಪಟ್ಟಿದ್ದವರೆಲ್ಲರೂ ಇವುಗಳ ಸದಸ್ಯರಾಗಿದ್ದರು.

ಇಂದು ಲಭ್ಯವಿರುವ ಗ್ರಂಥಗಳಲ್ಲಿ ತೋಲ್ಕಪ್ಪಿಯಮ್ ಎರಡನೆಯ ಸಂಘಮ್‌ಗೆ ಸೇರಿದುದೆಂದೂ ಪಟ್ಟುತೊಹೈ, ಪತ್ತುಪಾಟ್ಟು, ಪದಿಟ್ರು ಪತ್ತು ಮತ್ತು ಪದಿನೇನ್ ಕೀಳ್ ಕಣಕ್ಕು ಹಾಗೂ ಶಿಲಪ್ಪಾದಿಕಾರಂ ಮತ್ತು ಮಣಿಮೇಖಲೈ ಕೃತಿಗಳು ಮೂರನೆ ಸಂಘಮ್‌ಗೆ ಸೇರಿದವುಗಳೆಂಬುದಾಗಿ ಹೇಳಲಾಗಿದೆ. ಪ್ರಾಚೀನ ತಮಿಳು ಸಾಹಿತ್ಯದಲ್ಲಿ ಕುರಳ್ ಎಂಬ ಕೃತಿಯು ಒಂದು ಅಮರ ಕೃತಿಯಾಗಿದೆ. ತಿರುವಳ್ಳುವಾರ್ ಎಂಬ ಮಹಾನ್ ಕವಿಯು ಇದರ ಕರ್ತೃ. ಈ ಕೃತಿಯಲ್ಲಿ ಕವಿಯು ೧೩೩ ಅಧ್ಯಾಯಗಳಲ್ಲಿ ಆದರ್ಶ ರಾಜನಲ್ಲಿರಬೇಕಾದ ಸದ್ಗುಣಗಳನ್ನು ನೀತಿ ಧರ್ಮಗಳನ್ನು ಶ್ಲೋಕಗಳ ರೂಪದಲ್ಲಿ ರಚಿಸಿದ್ದಾನೆ. ಇದು ನೀತಿ ಧರ್ಮಗಳನ್ನು ತಿಳಿಸುವ ಸಂಹಿತೆಯಾಗಿ ಲೋಕ ಪ್ರಸಿದ್ಧ ಗ್ರಂಥಗಳಲ್ಲೊಂದಾಗಿದೆ. ಅಲ್ಲದೆ ಉತ್ತಮ ಕವಿತೆಯು ಹೇಗಿರಬೇಕೆಂಬುದಕ್ಕೆ ಒಂದು ಪ್ರಮಾಣ ಗ್ರಂಥವಾಗಿದೆ. ಶಿಲಪ್ಪಾದಿಕಾರಂ ಮತ್ತು ಮಣಿಮೇಖಲೈ ಗ್ರಂಥಗಳು ತಮಿಳು ಭಾಷೆಯ ಪದ್ಯಕಾವ್ಯಗಳಲ್ಲಿ ಅತ್ಯಂತ ಶ್ರೇಷ್ಠವಾದವುಗಳಾಗಿವೆ. ರಾಮಾಯಣ ಮತ್ತು ಮಹಾಭಾರತಗಳಂತೆ ಈ ಗ್ರಂಥಗಳನ್ನೂ ಮಹಾಕಾವ್ಯಗಳೆಂದೂ ಹಾಗೂ ಅಮರ ಕೃತಿಗಳೆಂದೂ ಪರಿಗಣಿಸಲಾಗಿದೆ. ಒಟ್ಟಿನಲ್ಲಿ ಈ ಕೃತಿಗಳು ಉಚ್ಚಸಾಹಿತ್ಯ ಯೋಗ್ಯತೆಯುಳ್ಳ ಕೃತಿಗಳಾಗಿದ್ದು ಪ್ರೌಢಿಮೆಗೆ ಹಾಗೂ ಶ್ರೇಷ್ಠತೆಗೆ ಹೆಸರಾಗಿವೆ. ಸಂಕ್ಷಿಪ್ತವಾಗಿ ಹೇಳುವುದಾದರೆ ಸಂಘಮ್ ಎಂಬುದು ವಿದ್ವನ್ಮಣಿಗಳ ಪರಿಷತ್ತುಗಳಾಗಿದ್ದು ಅವರು ರಚಿಸಿದ ತಮಿಳು ಸಾಹಿತ್ಯವು ತಮಿಳರಿಗಷ್ಟೆ ಅಲ್ಲದೆ ಇಡೀ ಭಾರತೀಯರಿಗೆ ತಮಿಳು ಸಂಸ್ಕೃತಿಯ ದಿವ್ಯದರ್ಶನ ಮಾಡಿದ ಸಾಹಿತ್ಯವಾಗಿತ್ತು. ಸಂಘಮ್ ಕಾಲದ ತಮಿಳರ ಇತಿಹಾಸವು ಭಾರತದ ಇತಿಹಾಸದ ಚಿರಸ್ಮರಣೀಯ ಅಧ್ಯಾಯಗಳಲ್ಲೊಂದಾಗಿದೆ.

ಅಧ್ಯಾಯ- 11

# ಸಾಮ್ರಾಟ ಗುಪ್ತರ ಯುಗ

ಮೌರ್ಯರ ಪತನಾನಂತರ ಉತ್ತರ ಭಾರತದಲ್ಲಿ ಕುಶಾನರೂ ದಕ್ಷಿಣ ಭಾರತದಲ್ಲಿ ಶಾತವಾಹನರೂ ಪ್ರಬಲ ಸಾಜ್ಯಗಳನ್ನು ಸ್ಥಾಪಿಸಿಕೆಲವು ಶತಮಾನಗಳ ಕಾಲ ರಾಜ್ಯವಾಳಿದರು. ಆದರೆ ಉತ್ತರ ಭಾರತದಲ್ಲಿ ಕುಶಾನರ ಅಧಿಕಾರವು ಕ್ಷೀಣಿಸಿದ ನಂತರ ರಾಜ ಕೀಯ ಗೊಂದಲವೇರ್ಪಟ್ಟು ಮಾಳವ, ಅರ್ಜುನಯನ ಯೌಧೇಯ. ಮಾದ್ರಕ ಅಭಿಹರ, ಪ್ರಕ್ಬುನ ಮತ್ತು ಕರಪಾರಿಕ ಇನ್ನೂ ಮುಂತಾದ ರಾಜ್ಯಗಳು ಅಸ್ತಿತ್ವಕ್ಕೆ ಬಂದವು. ಈ ರಾಜ್ಯಗಳಲ್ಲಿ ಪ್ರಬಲರಾದವರು ಕುಶಾನರ ಅಧಿಕಾರವನ್ನು ಕೊನೆಗಾಣಿಸಿದ್ದಲ್ಲದೆ ಶಕರ ಅಧಿಕಾರವನ್ನು ದುರ್ಬಲಗೊಳಿಸಿದರು. ಮಾದ್ರಕರು ಪಂಜಾಬ್ ಪ್ರದೇಶದಲ್ಲಿ ತಮ್ಮ ರಾಜ್ಯವನ್ನು ಸ್ಥಾಪಿಸಿಕೊಂಡಿದ್ದರು. ಸಕಲ ಅಥವ ಇಂದಿನ ಸಿಯಾಲ್ ಕೋಟ್ ಇವರ ರಾಜಧಾನಿಯಾಗಿತ್ತು. ಮೊದಲಿಗೆ ಪಂಜಾಬಿನಲ್ಲಿ ನೆಲೆಸಿದ್ದ ಮಾಳವರು ತರುವಾಯದಲ್ಲಿ ರಜಪುಟಾಣ, ಮಧ್ಯಭಾರತ ಮತ್ತು ಉತ್ತರಪ್ರದೇಶಗಳಲ್ಲಿ ಹರಡಿದರು. ಕ್ರಿ.ಶ. 225ರ ಸುಮಾರಿನಲ್ಲಿ ತಮ್ಮ ಸ್ವಾತಂತ್ರ್ಯವನ್ನು ಘೋಷಿಸಿಕೊಂಡರು. ನಗರಿ ಎಂಬುದು ಇವರ ರಾಜಧಾನಿಯಾಗಿತ್ತು. ಮಾಳವ ಗಣರಾಜ್ಯವು ಸಮುದ್ರಗುಪ್ತನ ಕಾಲದವರೆಗೂ ಅಸ್ತಿತ್ವದಲ್ಲಿತ್ತು. ಮಾಳವ ಗಣರಾಜ್ಯದ ಪಕ್ಕದಲ್ಲಿ ದೆಹಲಿ, ಜೈಪುರ ಮತ್ತು ಅಗ್ರಗಳನ್ನೊಳಗೊಂಡ ಅರ್ಜುನಯನ ಮತ್ತು ಪ್ರರ್ಬುನ ಗಣರಾಜ್ಯಗಳಿದ್ದವು. ಅರ್ಜುನಯನರ ರಾಜ್ಯಕ್ಕೆ ಸೇರಿಕೊಂಡಂತೆ ಯೌಧೇಯರ ಗಣರಾಜ್ಯವು ಪೂರ್ವಪಂಜಾಬಿನಲ್ಲಿದ್ದಿತು. ಪಶ್ಚಿಮ ಮತ್ತು ನೈರುತ್ಯ ಭಾಗದಲ್ಲಿ ಅಭಿಹರರ ರಾಜ್ಯವಿದ್ದಿತು. ಅಭಿಹರರು ಸೌರಾಷ್ಟ್ರ ಮತ್ತು ಅವಂತಿ ಪ್ರದೇಶಗಳಲ್ಲಿ ಬಹಳ ಪ್ರಬಲ ರಾಗಿದ್ದರು. ಅಂತೆಯೆ ಪೂರ್ವ ಭಾಗದಲ್ಲಿ ಲಿಚ್ಚವಿಗಳು ಏಳಿಗೆ ಹೊಂದಿದರು. ಈ ಕಾಲದಲ್ಲಿ ಗಣರಾಜ್ಯಗಳಂತೆಯೆ ಪ್ರವರ್ಧಮಾನಕ್ಕೆ ಬಂದ ಇತರ ರಾಜ್ಯಗಳಲ್ಲಿ ನಾಗರು ಮತ್ತು ವಾಕಾಟಕರು ಪ್ರಸಿದ್ಧರಾದವರು.

**ನಾಗರು ಮತ್ತು ವಾಕಾಟಕರು**

ಕುಶಾನರ ಅಧಿಕಾರವನ್ನು ಕೊನೆಗಾಣಿಸಿದ ನಾಗರು ಸುಮಾರು ಎರಡು ಶತಮಾನಗಳ ಕಾಲ ಉತ್ತರ ಭಾರತ ಮತ್ತು ಮಧ್ಯಬಾರತದಲ್ಲಿ ರಾಜ್ಯವಾಳಿದರು. ಇವರನ್ನು ಭಾರಶಿವನಾಗರು ಎಂದೂ ಕರೆಯುತ್ತಾರೆ. ಮಥುರ, ವಿದಿಸ (ಗ್ವಾಲಿಯರ್) ಮತ್ತು ಪದ್ಮಾವತಿ ಪ್ರದೇಶಗಳ ಮೇಲೆ ಇವರು ಅಧಿಕಾರ

ಹೊಂದಿದ್ದುದಾಗಿ ಪುರಾಣಗಳಲ್ಲಿ ಉಲ್ಲೇಖಿತವಾಗಿವೆ. ನಾಗರು ವೈದಿರ ಮತಾವಲಂಬಿಗಳಾಗಿದ್ದು ಅನೇಕ ಅಶ್ವಮೇಧ ಯಾಗಗಳನ್ನು ಮಾಡಿದರು. ನಾಗರು, ವಾಕಾಟಕರು ಮತ್ತು ಗುಪ್ತರೊಂದಿಗೆ ವೈವಾಹಿಕ ಸಂಬಂಧಗಳನ್ನು ಹೊಂದಿದ್ದು. ಸಮುದ್ರಗುಪ್ತನು ಅವರ ಮೇಲೆ ಆಕ್ರಮಣ ಮಾಡುವವರೆಗೂ ಅವರು ಸ್ವತಂತ್ರರಾಗಿದ್ದರು.

ಕ್ರಿ.ಶ. ಮೂರನೆ ಶತಾನದಲ್ಲಿ ವಾಕಾಟಕರು ಪ್ರವರ್ಧಮಾನಕ್ಕೆ ಬಂದರು. ವಿದ್ಯಾಶಕ್ತಿ ಎಂಬ ಬ್ರಾಹ್ಮಣನು ಈ ಸಂತತಿಯ ಸ್ಥಾಪಕ. ಬೀರಾರ್ ಪ್ರದೇಶವು ಇವರ ಅಧಿಕಾರದ ಕೇಂದ್ರವಾಗಿತ್ತು. ನಾಗರಂತೆ ವಾಕಾಟಕರೂ ಕೂಡ ವೈದಿಕ ಧರ್ಮೀಯರಾಗಿದ್ದರು. ವಾಕಾಟಕರಲ್ಲಿ ಪ್ರಬಲ ದೊರೆಯಾಗಿದ್ದ ಒಂದನೇ ಪ್ರವರಸೇನನು ನಾಗರೊಂದಿಗೆ ವೈವಾಹಿಕ ಸಂಬಂಧಗಳನ್ನು ಹೊಂದಿದ್ದನು. ಇವನು ತನ್ನ ಅಧಿಕಾರದ ಕುರುಹಾಗಿ ಅಶ್ವಮೇಧ ಯಾಗವನ್ನು ನೆರವೇರಿಸಿದನು. ಇವನು ತನ್ನ ರಾಜ್ಯವನ್ನು ವಿಶಾಲಗೊಳಿಸಿದನು. ಇವನ ಕಾಲದಲ್ಲಿ ವಾಕಾಟಕರ ಸಾಮ್ರಾಜ್ಯವು ಬೀರಾರ್, ಮಧ್ಯಪ್ರದೇಶ, ಮಹಾರಾಷ್ಟ್ರದ ಉತ್ತರ ಭಾಗವನ್ನೂ ಹಾಗೂ ಹೈದರಾಬಾದ್ ಪ್ರದೇಶದ ಬಹುಭಾಗವನ್ನು ಒಳಗೊಂಡಿತ್ತು. ವಾಕಾಟಕರು ಸಮುದ್ರಗುಪ್ತನ ಕಾಲದಲ್ಲೂ ಪ್ರಬಲರಾಗಿ ಮುಂದುವರಿದಿದ್ದು ಗುಪ್ತರು ಅವರೊಂದಿಗೆ ವೈವಾಹಿಕ ಸಂಬಂದಗಳನ್ನು ಏರ್ಪಡಿಸಿಕೊಂಡಿದ್ದರು. ಆದರೆ ಗುಪ್ತರು ಪ್ರಬಲ ಶಕ್ತಿಯಾಗಿ ಮಾರ್ಪಟ್ಟ ಮೇಲೆ ವಾಕಾಟಕರು ತಮ್ಮ ಪ್ರಾಬಲ್ಯವನ್ನು ಕಳೆದುಕೊಂಡರು. ಒಟ್ಟಿನಲ್ಲಿ ಉತ್ತರ ಭಾರತದಲ್ಲಿ ಕ್ರಿ.ಶ.ಮೂರನೆ ಶತಮಾನದಲ್ಲಿ ರಾಜಕೀಯ ಅನೈಕ್ಯತೆಯು ಕಂಡುಬರುತ್ತಿತ್ತು. ಇಂತಹ ಸಮಯದಲ್ಲಿ ಅಜ್ಞಾತವಾಗಿದ್ದ ಗುಪ್ತ ಮನೆತನದವರು ಪ್ರಾಮುಖ್ಯತೆಗೆ ಬಂದರು.

**ಗುಪ್ತರ ಏಳಿಗೆ**

ಗುಪ್ತಸಂತತಿಯವರ ಮೂಲವು ಪ್ರಾಚೀನ ಭಾರತದ ಕೆಲವು ರಾಜಮನೆತನಗಳ ಮೂಲದಂತೆ ಇನ್ನೂ ಅಸ್ಪಷ್ಟವಾಗಿ ಉಳಿದಿದೆ. ಅವರು ಮೂಲತಃ ವೈಶ್ಯಜಾತಿಗೆ ಸೇರಿದವರೆಂದು ಅನೇಕ ವಿದ್ವಾಂಸರು ಅಭಿಪ್ರಾಯಪಟ್ಟಿರುವರು. ಇವರು ಮೊದಲಿಗೆ ಉತ್ತರ ಬಿಹಾರದಲ್ಲಿದ್ದು ಅನಂತರ ಪ್ರಸಿದ್ಧಿಗೆ ಬಂದುದಾಗಿ ಕಂಡುಬರುತ್ತದೆ. ಗುಪ್ತ ಸಂತತಿಯ ಅರಸರ ವಿಷಯವನ್ನು ತಿಳಿಯಲು ಶಾಸನಗಳು ನಾಣ್ಯಗಳು, ಮತ್ತು ಸಾಹಿತ್ಯಾಧಾರಗಳು ಸಾಕಷ್ಟು ಸಂಖ್ಯೆಯಲ್ಲಿ ಇತಿಹಾಸಕಾರರಿಗೆ ದೊರೆತಿವೆ. ಅವುಗಳಲ್ಲಿ ಸಮುದ್ರಗುಪ್ತನ ಅಲಹಾಬಾದ್ ಶಿಲಾಶಾಸನ, ಎರಡನೆ ಚಂದ್ರಗುಪ್ತನ ಮಂಡಸಾರ್ ಶಾಸನ. ಸ್ಕಂಧಗುಪ್ತನ ಇಂದೋರ್ ತಾಮ್ರ ಶಾಸನ, ಗುಪ್ತರ ನಾಣ್ಯಗಳು ಅತ್ಯುಪಯುಕ್ತ ಮಾಹಿತಿಗಳನ್ನು ನೀಡುತ್ತವೆ. ಸಾಹಿತ್ಯಾಧಾರಗಳಲ್ಲಿ ಪುರಾಣಗಳು, ವಿಶಾಕದತ್ತನ 'ದೇವೀ ಚಂದ್ರಗುಪ್ತಂ' ವಜ್ಜಿಕ ಎಂಬ ಕವಯತ್ರಿಯ ಕೌಮುದಿ ಮುಹೋತ್ಸವ. ಮಹಾಯಾನ ಪಂಥೀಯರ ಐತಿಹಾಸಿಕ ದಾಖಲೆಯಾದ ಮಂಜೂ-ಶ್ರೀ-ಮುಲಕಲ್ಪ, ಕಾಳೀದಾಸನ ಕೃತಿಗಳು, ಬಾಣನ 'ಹರ್ಷಚರಿತ' ಹಾಗೂ ಚೀನೀ ಯಾತ್ರಿಕರ ಬರವಣಿಗೆಗಳು ಮುಖ್ಯ ಆಧಾರಗಳಾಗಿವೆ.

### ಶ್ರೀಗುಪ್ತ

ಶ್ರೀಗುಪ್ತ ಎಂಬುವನು ಗುಪ್ತಸಂತತಿಯ ಸ್ಥಾಪಕನೆಂಬುದಾಗಿ ಅಲಹಾಬಾದ್ ಶಾಲಾ ಸಾಸನದಲ್ಲಿನ ವಂಶಾವಳಿಯಿಂದ ತಿಳಿದು ಬರುತ್ತದೆ. ಇವನು ಮಗಧ ಪ್ರದೇಶದಲ್ಲಿ ಕ್ರಿ.ಶ.ಮೂರನೆ ಶತಮಾನದ ಕೊನೆಯ ಭಾಗದಲ್ಲಿ ಆಳುತ್ತಿದ್ದುದಾಗಿ ಕಂಡು ಬರುತ್ತದೆ. ಇವನ ತರುವಾಯ ಘಟೋತ್ಕಚ ಗುಪ್ತ ಎಂಬುವನು ಆಳಿದನು. ಆದರೆ ಇವರಿಬ್ಬರ ಆಳ್ವಿಕೆಗೆ ಸಂಬಂಧಿಸಿದಂತೆ ಹೆಚ್ಚಿನ ವಿವರಗಳು ದೊರೆತಿರುವುದಿಲ್ಲ. ಘಟೋತ್ಕಚಗುಪ್ತನ ಮರಣಾನಂತರ ಆವನ ಮಗನಾದ ಒಂದನೇ ಚಂದ್ರಗುಪ್ತನು ಸಿಂಹಾಸನಕ್ಕೆ ಬಂದನು.

### ಒಂದನೇ ಚಂದ್ರಗುಪ್ತ (ಕ್ರಿ.ಶ. 320-330)

ಗುಪ್ತ ಸಂತತಿಯ ದೊರೆಗಳಲ್ಲಿ ಮೂರನೆಯವನಾದ ಒಂದನೇ ಚಂದ್ರಗುಪ್ತನು ಒಬ್ಬ ಪ್ರಬಲ ದೊರೆಯಾಗಿದ್ದನು. ಒಂದನೇ ಚಂದ್ರಗುಪ್ತನು ಅಂದಿನ ಉತ್ತರ ಭಾರತದಲ್ಲಿ ಹದಗೆಟ್ಟಿದ್ದ ರಾಜಕೀಯ ಅನೈಕ್ಯತೆಯ ಪರಿಸ್ಥಿತಿಯ ಅನುಕೂಲವನ್ನು ಪಡೆದುಕೊಂಡು ಗುಪ್ತರ ಸಾಮ್ರಾಜ್ಯ ಸ್ಥಾಪನೆಗೆ ಭದ್ರ ಬುನಾದಿ ಹಾಕಿದನು. ಇವನು ತನ್ನ ವೈವಾಹಿಕ ಸಂಬಂಧದಿಂದ ರಾಜ್ಯವನ್ನು ವಿಸ್ತರಿಸಿದನು. ಬೌದ್ಧ ಯುಗದ ಆರಂಭದ ಕಾಲದಿಂದಲೂ ಒಂದು ಪ್ರಬಲ ರಾಜಕೀಯ ಶಕ್ತಿಯಾಗಿ ಹೆಸರುಗಳಿಸಿದ್ದ ಲಿಚ್ಛವಿ ಮನೆ ತನದ ರಾಜಕುಮಾರಿ ಕುಮಾರಿ ದೇವೀ ಎಂಬುವಳನ್ನು ವಿವಾಹವಾಗಿ ಮಗಧ ಮತ್ತು ಲಿಚ್ಛವಿ ರಾಜ್ಯಗಳನ್ನು ಒಟ್ಟುಗೂಡಿಸಿ ವಿಶಾಲ ಸಾಮ್ರಾಜ್ಯ ಸ್ಥಾಪನೆಗೆ ಅಂಕುರಾರ್ಪಣೆ ಮಾಡಿದನು. ಮಗಧ ರಾಜ್ಯವು ಮತ್ತೊಮ್ಮೆ ರಾಜಕೀಯ ಚಟುವಟಿಕೆಗಳ ಕೇಂದ್ರವಾಯಿತು ಮತ್ತು ಪಾಟಲೀಪುತ್ರವು ಆದರ ರಾಜಧಾನಿಯಾಗಿ ಮುಂದುವರಿಯಿತು. ಒಂದನೇ ಚಂದ್ರಗುಪ್ತನ ರಾಜ್ಯವು ಪೂರ್ವದಲ್ಲಿ ಬಂಗಾಳದಿಂದ ಹಿಡಿದು ಪಶ್ಚಿಮದಲ್ಲಿ ಅಲಹಾಬಾದ್ ಮತ್ತು ದಕ್ಷಿಣ ಬಿಹಾರ್‌ವರೆಗೆ ವಿಸ್ತರಿಸಿದ್ದಿತು. ಇವನು ಚಿನ್ನದ ನಾಣ್ಯಗಳನ್ನು ಜಾರಿಗೆ ತಂದನು. ಇವನ ನಾಣ್ಯಗಳ ಮೇಲೆ ಇವನ ಮತ್ತು ಇವನ ರಾಣಿ ಕುಮಾರಿದೇವಿಯ ಚಿತ್ರಗಳು ಕಂಡುಬರುತ್ತವೆ. ಇವನು ರಾಜಾಧಿರಾಜ ಮತ್ತು ಮಹಾ ರಾಜಾಧಿರಾಜ ಎಂಬ ಬಿರುದುಗಳನ್ನು ಧರಿಸಿದ್ದನು. ಒಂದನೇ ಚಂದ್ರಗುಪ್ತನು ಕ್ರಿ.ಶ. 320ರಲ್ಲಿ ಆರಂಭವಾಗುವ 'ಗುಪ್ತಶಕೆ'ಯನ್ನು ಆರಂಭಿಸಿದನು.

### ಸಮುದ್ರ ಗುಪ್ತ (ಕಿ.ಶ. 330-380)

ಒಂದನೇ ಚಂದ್ರಗುಪ್ತನ ಮರಣಾನಂತರ ಆವನ ವಿಖ್ಯಾತ ಮಗನಾದ ಸಮುದ್ರಗುಪ್ತನು ಸಿಂಹಾಸನಕ್ಕೆ ಬಂದನು. ಇವನು ಗುಪ್ತ ಸಾಮ್ರಾಟರಲ್ಲಿ ಹೆಚ್ಚು ಪ್ರಖ್ಯಾತ ನಾದವನು. ಒಂದನೇ ಚಂದ್ರಗುಪ್ತನಿಗೆ ಕಾಚ ಎಂಬ ಮತ್ತೊಬ್ಬ ಮಗನಿದ್ದುದಾಗಿಯೂ ಮತ್ತು ಇವನು ಸಮುದ್ರಗುಪ್ತನಿಗಿಂತ ಹಿರಿಯವನೂ ಆಗಿದ್ದುದಾಗಿಯೂ ಕಂಡುಬರುತ್ತದೆ. ಆದರೆ ಇವನು ಅಸಮರ್ಥನಾಗಿದ್ದನು. ಆದ್ದರಿಂದ ಒಂದನೆ ಚಂದ್ರಗುಪ್ತನು ತಾನು ಕಾಲವಾಗುವುದಕ್ಕೆ ಮುಂಚೆ ತನ್ನ ಮಕ್ಕಳಲ್ಲಿ ಅತ್ಯಂತ ಸಮರ್ಥನೂ ಮತ್ತು ದಕ್ಷನೂ ಆಗಿದ್ದ ಸಮುದ್ರಗುಪ್ತನನ್ನು ತನ್ನ ಉತ್ತರಾಧಿಕಾರಿ

ನೇಮಿಸಿದನು. ಸಮುದ್ರಗುಪ್ತನು ಚಿಕ್ಕಂದಿನಲ್ಲಿಯೆ ರಾಜಯೋಗ್ಯವಾದ ಶಿಕ್ಷಣವನ್ನು ಪಡೆದಿದ್ದನು. ವೇದಗಳು, ದರ್ಶನಶಾಸ್ತ್ರ, ಅರ್ಥಶಾಸ್ತ್ರ, ಇತಿಹಾಸ, ಅಲಂಕಾರಶಾಸ್ತ್ರ ಮತ್ತು ಕವಿತಾ ಶಾಸ್ತ್ರಗಳಲ್ಲಿ ಒಳ್ಳೆಯ ಶಿಕ್ಷಣಕೊಡಲಾಗಿತ್ತು. ಸಮುದ್ರಗುಪ್ತನು ಎಲ್ಲ ದೃಷ್ಟಿಯಿಂದಲೂ ಒಬ್ಬ ಸರ್ವಶಕ್ತ ದೊರೆಯಾಗಲು ಅರ್ಹನಾಗಿದ್ದನೆಂಬುದು ಅವನ ನಾಣ್ಯಗಳ ಮೇಲಿನ ಚಿತ್ರಗಳಿಂದ ಕಂಡುಬರುತ್ತದೆ. ಅವನ ಈ ಶಕ್ತಿ ಸಾಮರ್ಥ್ಯಗಳನ್ನು ಗಮನಿಸಿದ್ದ ಅವನ ತಂದೆಯು ಈ ಕಾರಣಗಳಿಂದಾಗಿಯೆ ಅವನನ್ನು ತನ್ನ ಉತ್ತರಾಧಿಕಾರಿಯನ್ನಾಗಿ ನೇಮಿಸಿದನು.

ತನ್ನ ತಂದೆಯ ಮರಣಾನಂತರ ಸಿಂಹಾಸನವನ್ನೇರಿದ ಸಮುದ್ರಗುಪ್ತನು ಗುಪ್ತರ ಸಾಮ್ರಾಜ್ಯ ಸಂಘಟನೆಗೆ ಪೂರ್ಣಗಮನ ಹರಿಸಿದನು. ಈ ಕಾಲದಲ್ಲಿ ಉತ್ತರಭಾರತವು ಅನೇಕ ಸಣ್ಣಪುಟ್ಟ ರಾಜ್ಯಗಳಾಗಿ ಒಡೆದುಹೋಗಿತ್ತು. ಈ ಪರಿಸ್ಥಿತಿಯನ್ನು ಕೊನೆಗಾಣಿಸಿ ಅವುಗಳ ಸ್ಥಾನದಲ್ಲಿ ಭಾರತದ ರಾಜಕೀಯ ಏಕತೆಯನ್ನು ಸ್ಥಾಪಿಸಲು ಸಮುದ್ರಗುಪ್ತನು ಕಾರ್ಯೋನ್ಮುಖನಾದನು. ಅವನು ತನ್ನ ಈ ಉದ್ದೇಶ ಸಾಧನೆಯಲ್ಲಿ ಕೌಟಿಲ್ಯನ ಅರ್ಥಶಾಸ್ತ್ರ 'ದಿಂದ ಪ್ರಬಾವಿತನಾಗಿದ್ದನು. ಸಮುದ್ರಗುಪ್ತನು ತನ್ನ ಸೈನಿಕ ಪ್ರತಿಭಾ ಸಾಮುರ್ಥ್ಯಗಳಿಂದಲೂ ಮತ್ತು ರಾಜಕೀಯ ಚಾತುರ್ಯದಿಂದಲೂ ವಿಶಾಲವಾದ ಸಾಮ್ರಾಜ್ಯವನ್ನು ಸ್ಥಾಪಿಸಿ ಪ್ರಾಚೀನ ಭಾರತದ ಇತಿಹಾಸದ ಪ್ರಸಿದ್ಧ ದೊರೆಗಳಲ್ಲಿ ಒಬ್ಬನಾದನು.

ಸಮುದ್ರಗುಪ್ತನ ಮಹತ್ಸಾಧನೆಗಳ ದೀರ್ಘ ವಿವರಣೆಯು ಅವನ ಅಲಹಾಬಾದ್ ಶಿಲಾಶಾಸನದಲ್ಲಿ ನಿರೂಪಿತವಾಗಿದೆ. ಅಲಹಾಬಾದಿನಲ್ಲಿರುವ ಈ ಏಕ ಶಿಲಾಸ್ತಂಭವು ಎರಡು ಶಾಸನಗಳಿಂದ ಕೂಡಿದೆ. ಸಮುದ್ರಗುಪ್ತನಿಗಿಂತ ಆರು ಶತಮಾನಗಳ ಹಿಂದೆ ಮೌರ್ಯಚಕ್ರವರ್ತಿ ದೇವನಾಂಪ್ರಿಯ ಅಶೋಕನು ತನ್ನ ಪ್ರಜೆಗಳಿಗೆ ಶಾಂತಿ ಸಹಿಷ್ಣುತೆಯನ್ನು ಅನುಸರಿಸಲು ಕರೆಕೊಟ್ಟ ದಿವ್ಯ ಸಂದೇಶವು ಇದರಲ್ಲಿದೆ. ಎರಡನೆಯದು, ಸಮುದ್ರಗುಪ್ತನ ಶಾಸನ. ಈ ಶಾಸನವು ಮೂವತ್ತಮೂರು ಪಂಕ್ತಿಗಳಿಂದ ಕೂಡಿದೆ, ಇದನ್ನು ಸಮುದ್ರಗುಪ್ತನ ಆಸ್ಥಾನ ಕವಿಯೂ ಮತ್ತು ದಂಡನಾಯಕನೂ ಆಗಿದ್ದಹರಿಷೇಣನು ಸಂಸ್ಕೃತ ಬಾಷೆಯಲ್ಲಿ ಕೆತ್ತಿದ್ದಾನೆ. ಈ ಶಾಸನವು ಸಮುದ್ರಗುಪ್ತನ ಚಿಕ್ಕಂದಿನ ವಿದ್ಯಾಭ್ಯಾಸ, ಅವನ ಯೋಜನೆಗಳು, ಅಧಿಕಾರಕ್ಕಾಗಿ ಅವನ ಸೋದರರಲ್ಲಿದ್ದ ಮತ್ಸರ. ಮಗಧ ಪ್ರದೇಶದಲ್ಲಿದ್ದ ರಾಜರುಗಳೊಂದಿಗೆ ಅವನ ಹೋರಾಟ ಮತ್ತು ಅವನನ್ನು 'ಏಕರಾಟ್'ನನ್ನಾಗಿ ಮಾಡಿದ ಅವನ ಮಿಲಿಟರಿ ದಂಡಯಾತ್ರೆಗಳ ವಿವರ, ಉತ್ತರಾಧಿ ಕಾರದ ಆಯ್ಕೆ ದಂಡಯಾತ್ರೆಗಳ ನಂತರ ಅಶ್ವಮೇಧ ಯಾಗವನ್ನು ನೆರವೇರಿಸಿದುದು ಮೊದಲಾದವುಗಳ ಬಗ್ಗೆಯೇ ಅಲ್ಲದೆ ಸಾಂಸ್ಕೃತಿಕ ಸಾಧನೆಗಳ ಬಗ್ಗೆಯೂ ದೀರ್ಘ ವಿವರಣೆಯನ್ನು ನೀಡುತ್ತದೆ.

### ಉತ್ತರ ಭಾರತದ ದಿಗ್ವಿಜಯಗಳು

ಸಮುದ್ರಗುಪ್ತನು ಮಹಾ ದಿಗ್ವಿಜಯಿಯಾಗಿದ್ದನು, ಅಲಹಾಬಾದ್ ಶಿಲಾ ಶಾಸನದ ಪ್ರಕಾರ ಅವನು ಸಿಂಹಾಸನವನ್ನೇರಿದ ಕೆಲವು ದಿವಸಗಳಲ್ಲಿಯೇ ಉತ್ತರ ಮತ್ತು ದಕ್ಷಿಣ ಬಾರತದ ರಾಜ್ಯಗಳ ಮೇಲೆ ತನ್ನ ದಂಡಯಾತ್ರೆಗಳನ್ನು ಕೈಗೊಂಡನು.

ಇವುಗಳಲ್ಲಿ ಕೆಲವು ದಿಗ್ವಿಜಯಗಳಾಗಿದ್ದರೆ ಮತ್ತೆ ಕೆಲವು ಧರ್ಮವಿಜಯಗಳಾಗಿದ್ದವು. ಉತ್ತರ ಬಾರತದಲ್ಲಿ ಅವನ ದಂಡಯಾತ್ರೆಗಳು ಕೆಲವು ರಾಜರುಗಳನ್ನು ಪದಚ್ಯುತಗೊಳಿಸುವುದರಲ್ಲಿ ಮತ್ತೆ ಕೆಲವು ರಾಜ್ಯಗಳನ್ನು ನಿರ್ಮೂಲ ಮಾಡುವುದರಲ್ಲಿ ಪರ್ಯಾವಸಾನಗೊಂಡವು ಆದರೆ ದಕ್ಷಿಣ ಭಾರತದ ಮೇಲಿನ ದಂಡಯಾತ್ರೆಗಳು ಧರ್ಮವಿಜಯಗಳಾಗಿದ್ದವು. ದಕ್ಷಿಣ ಬಾರತದಲ್ಲಿ ತಾನು ಸೋಲಿಸಿದ ರಾಜರುಗಳ ರಾಜ್ಯಗಳನ್ನು ಆಯಾಯ ರಾಜರುಗಳಿಗೆ ಬಿಟ್ಟುಕೊಟ್ಟು ಅವರಿಂದ ಕಪ್ಪಕಾಣಿಕೆಗಳನ್ನು ಪಡೆದುಕೊಳ್ಳುವುದರಿಂದ ತೃಪ್ತನಾಗಿ ಧರ್ಮವಿಜಯಿ ಎನಿಸಿಕೊಂಡನು. ಸಮುದ್ರಗುಪ್ತನು ಉತ್ತರಭಾರತದ ಮೇಲೆ ಕೈಗೊಂಡ ತನ್ನ ಎರಡು ದಂಡಯಾತ್ರೆಗಳಲ್ಲಿ ಒಟ್ಟು ಒಂಬತ್ತು ಜನ ರಾಜರುಗಳನ್ನು ಸೋಲಿಸಿದುದಾಗಿ ಕಡುಬರುತ್ತದೆ. ಮೊದಲನೆ ದಂಡಯಾತ್ರೆಯಲ್ಲಿ ಅಹಿಚ್ಚತ್ರ (ಬರ‍್ಯಲಿ ಪ್ರದೇಶ)ದ ಅಚ್ಯುತನನ್ನೂ, ನಾಗರ ಮನೆತನಕ್ಕೆ ಸೇರಿದ ಪದ್ಮಾವತ (ಗ್ವಾಲಿಯರ್ ಪ್ರದೇಶ)ದ ನಾಗಸೇನ ಮತ್ತು ಗಣಪತಿನಾಗನನ್ನು, ಗಂಗಾನದಿಯ ಮೇಲ್ದಂಡಯ ಕಣಿವೆಯಲ್ಲಿ ಆಳುತ್ತಿದ್ದ ಕೋಟ ಮನೆತನದ ರಾಜನನ್ನು ಸೋಲಿಸಿದನು. ಅನಂತರ ದಕ್ಷಿಣದ ದಂಡಯಾತ್ರೆಯನ್ನು ಆರಂಭಿಸಿ ವಿಜಯಿಯಾಗಿ ಹಿಂದಿರುಗಿದ ನಂತರ ಉತ್ತರ ಭಾರತದ ಉಳಿದ ರಾಜರುಗಳನ್ನು ತನ್ನ ಎರಡನೆ ದಂಡೆಯಾತ್ರೆಯಲ್ಲಿ ಸೋಲಿಸಿ ಅವರ ರಾಜ್ಯಗಳನ್ನು ತನ್ನ ಸಾಮ್ರಾಜ್ಯಕ್ಕೆ ಸೇರಿಸಿಕೊಂಡನು. ಅವರುಗಳೆಂದರೆ ರುದ್ರದೇವ, ಚಂದ್ರವರ್ಮನ್ ಬಾಲವರ್ಮನ್, ನಾಗದತ್ತ ಮತ್ತು ನಂದಿನ್, ಆದರೆ ಈ ರಾಜರುಗಳು ಆಳುತ್ತಿದ್ದ ಪ್ರದೇಶಗಳನ್ನು ಸ್ಪಷ್ಟವಾಗಿ ಗುರುತಿಸಲು ಸಾಧ್ಯವಾಗಿಲ್ಲ. ಸಮುದ್ರ ಗುಪ್ತನ ಈ ದಿಗ್ವಿಜಯಗಳು ಉತ್ತರ ಭಾರತದ ರಾಜಕೀಯದ ಮೇಲೆ ಮಹತ್ವಪೂರ್ಣ ಪ್ರಭಾವ ಬೀರಿದವು. ಅವನ ಯುದ್ಧದ ನಗಾರಿಗಳ ಶಬ್ದವನ್ನು ಕೇಳಿ ನಡುಗಿಹೋದ ಮಾಳವ, ಅರ್ಜುನಯನ, ಯೌಧೇಯ, ಮಾದ್ರ, ಕ್ಷುದ್ರಕ ಮತ್ತು ಆಭಿಹರ ಮೊದಲಾದ ಗಣರಾಜ್ಯಗಳ ಅಧಿಪತಿಗಳು ತಾವಾಗಿಯೇ ಅವನಿಗೆ ಶರಣು ಬಂದರು. ಇವುಗಳಲ್ಲದೆ ಅವನ ಸಾಮ್ರಾಜ್ಯದ ಗಡಿಗಳಿಗೆ ಸಮೀಪದಲ್ಲಿದ್ದ ಸಮತಾಟ, ಕಾಮರೂಪ, ನೇಪಾಳ, ದೇವಕ, ಕರ್ತಿಪುರ ಹಾಗೂ ಕಾಬೂಲ್ ಕಣಿವೆಯಲ್ಲಿದ್ದ ಕುಶಾನರ ದೊರೆಗಳು ಅವನ ಸಾರ್ವಭೌಮತ್ವವನ್ನು ಒಪ್ಪಿಕೊಂಡು ಪೊಗದಿಗಳನ್ನು ಸಲ್ಲಿಸಿ ಇವನೊಂದಿಗೆ ರಾಜ ತಾಂತ್ರಿಕ ಸಂಬಂಧಗಳನ್ನು ಏರ್ಪಡಿಸಿಕೊಂಡರು.

### ದಕ್ಷಿಣ ಭಾರತದ ದಂಡಯಾತ್ರೆ

ಸಮುದ್ರಗುಪ್ತನು ಉತ್ತರಬಾರತದಲ್ಲಿ ತನ್ನ ಶತ್ರುಗಳನ್ನು ನಿರ್ಮೂಲ ಮಾಡಿದ ನಂತರ ದಕ್ಷಿಣ ಭಾರತದ ಮೇಲೆ ತನ್ನ ದಂಡಯಾತ್ರೆಯನ್ನು ಕೈಗೊಂಡನು. ಈ ಅಪ್ರತಿಮ ಸಾಹಸಿಯು ದಕ್ಷಿಣಬಾರತದಲ್ಲಿನ ಹನ್ನೆರಡು ಜನ ರಾಜರನ್ನು ಸೋಲಿಸಿ ಅವರು ತನಗೆ ಕಪ್ಪಕಾಣಿಕೆಗಳನ್ನು ಕೊಡುವಂತೆ ಮಾಡಿಕೊಂಡನು. ಪಾಟಲೀಪುತ್ರದಿಂದ ದಕ್ಷಿಣದಲ್ಲಿ ಪಲ್ಲವರ ಅಧಿಕಾರದ ಕೇಂದ್ರವಾಗಿದ್ದ ಕಂಚಿಯವರೆಗಿನ ಬಂಗಾಳಕೊಲ್ಲಿಯ ತೀರ ಪ್ರದೇಶವು ಇವನ ಕಾರ್ಯಾಚರಣೆಗಳ ಪ್ರದೇಶವಾಗಿತ್ತು. ಮೊದಲಿಗೆ ಸಮುದ್ರಗುಪ್ತನು ತನ್ನ ಮಾರ್ಗದಲ್ಲಿ ಬೆಟ್ಟಗುಡ್ಡಗಳಿಂದ ಕೂಡಿದ್ದ ರಾಜ್ಯಗಳ ರಾಜರುಗಳಾದ ಕೋಸಲದ (ಬಿಲಾಸ್‌ಪುರ್ ರಾಯ್‌ಪುರ್ ಮತ್ತು ಸಂಬಲ್‌ಪುರ್ ಜಿಲ್ಲೆಗಳನ್ನೊಳಗೊಂಡ ಪ್ರದೇಶ) ಮಹೇಂದ್ರನನ್ನೂ, ಮಹಾಕಾಂತಾರದ (ಒರಿಸ್ಸದಲ್ಲಿನ

ಜೆಪೂರ್ ಅರಣ್ಯಪ್ರದೇಶ) ವ್ಯಾಘ್ರರಾಜನನ್ನೂ ಕುರಳದ ಮಂತರಾಜನನ್ನೂ ಸೋಲಿಸಿದನು. ಅನಂತರ ಗೋದಾವರಿ ಜಿಲ್ಲೆಯಲ್ಲಿನ ಪಿಷ್ಟಾಪುರದ ಮಂತರಾಜನನ್ನು, ವಿಶಾಖಪಟ್ಟಣಂ ಜಿಲ್ಲೆಯಲ್ಲಿನ ಎರಂಡಪಳ್ಳದ ಸ್ವಾಮಿದತ್ತನನ್ನೂ, ಕಂಚಿಯ ಪಲ್ಲವರ ದೊರೆ ವಿಷ್ಣುಗೋಪನನ್ನೂ ಸೋಲಿಸಿದನು. ಇದಾದ ನಂತರ ಅವಮುಕ್ತದ ನೀಲರಾಜ, ವೆಂಗಿಯ ಹಸ್ತಿವರ್ಮನ್. ಪಲಕ್ಕದ (ನೆಲ್ಲೂರು ಜಿಲ್ಲೆಯಲ್ಲಿ ಪಲ್ಲವರ ವೈಸ್‌ರಾಯ್‌ನ ಅಧಿಕಾರದ ಕೇಂದ್ರವಾಗಿದ್ದ ಪಲಕ್ಕಡ) ಉಗ್ರಸೇನ, ದೇವರಾಷ್ಟ್ರದ (ವಿಶಾಖ ಪಟ್ಟಣದ ಜೀಲ್ಲೆ) ಕುಬೇರ ಮತ್ತು ಕೌಸ್ಥಲಾಪುರದ ಧನಂಜಯನನ್ನು ಸೋಲಿಸಿದನು. ದಕ್ಷಿಣ ಭಾರತದಲ್ಲಿ ಅವನ ದಂಡಯಾತ್ರೆಯ ವ್ಯಾಪ್ತಿಯು ಸುಮಾರು ಮೂರುಸಾವಿರ ಮೈಲಿಗಳಷ್ಟಾಗಿತ್ತು. ಸಮುದ್ರಗುಪ್ತನೇ ಸ್ವತಃ ಈ ದಂಡಯಾತ್ರೆಯ ನಾಯಕತ್ವವನ್ನು ವಹಿಸಿ ಸೈನ್ಯವನ್ನು ನಿರ್ದೇಶಿಸಿದ್ದನು ಮತ್ತು ಅವನು ಈ ದಂಡಯಾತ್ರೆಯಲ್ಲಿ ಒಂದು ಸೋಲನ್ನೂ ಹೊಂದಲಿಲ್ಲ. ಈ ಎಲ್ಲ ವಿಜಯಗಳಿಂದ ಅವನ ಸಾಮ್ರಾಜ್ಯವು ಪೂರ್ವದಲ್ಲಿ ಬಂಗಾಳದಿಂದ ಪಶ್ಚಿಮದಲ್ಲಿ ಪಂಜಾಬಿನವರೆಗೂ ದಕ್ಷಿಣದಲ್ಲಿ ವಿಂಧ್ಯಪರ್ವತ ಶ್ರೇಣಿಗಳವರೆಗೂ ವಿಸ್ತರಿಸಿದ್ದಿತು. ವಿಂಧ್ಯ ಭಾಗದಲ್ಲಿ ವಾಕಾಟಕರೂ ಮತ್ತು ಪಶ್ಚಿಮ ಭಾರತದಲ್ಲಿನ ಶಕರು ಅವನ ಈ ದಂಡಯಾತ್ರೆಗಳಿಂದ ಹೊರಗುಳಿದಿದ್ದರು. ಅವರನ್ನು ಮುಂದೆ ಅವನ ಮಗನಾದ ಎರಡನೆ ಚಂದ್ರಗುಪ್ತನ ತನ್ನ ಅಧೀನಕ್ಕೊಳಪಡಿಸಿಕೊಂಡನು. ಸಮುದ್ರಗುಪ್ತನ ಈ ಎಲ್ಲ ಸೈನಿಕ ಸಾಧನಗಳಿಂದ ಅವನನ್ನು 'ಪ್ರಾಚೀನ ಭಾರತದ ನೆಪೋಲಿಯನ್' ಎಂದು ಕನೆಯಲಾಗಿದ್ದರೂ ಅವನು ನೆಪೋಲಿಯನ್ನನಿಗಿಂತ ಅನೇಕ ವಿಷಯಗಳಲ್ಲಿ ಮೇಲಾಗಿದ್ದನು, ಸಮುದ್ರಗುಪ್ತನು ತನ್ನ ಆಕ್ರಮಣಕಾಲದಲ್ಲಿ ನೆಪೋಲಿಯನ್ನನಷ್ಟು ಕ್ರೂರರೀತಿಯಲ್ಲಿ ವರ್ತಿಸಲಿಲ್ಲ. ಅವನು ತನ್ನ ದಿಗ್ವಿಜಯಗಳಲ್ಲಿ ಅಸುರ ವಿಜಯ ಮತ್ತು ಧರ್ಮವಿಜಯಗಳೆರಡನ್ನೂ ಅನುಸರಿಸಿದನು. ಉತ್ತರಭಾರತದಲ್ಲಿ ತನ್ನ ಕಾರ್ಯಸಾಧನೆಗೆ ಅಡ್ಡಿಯಾಗಿದ್ದ ಶತ್ರುಗಳ ಬಗ್ಗೆ ಕಠಿಣವಾಗಿ ವರ್ತಿಸಿದರೂ, ದಕ್ಷಿಣ ಬಾರತದ ರಾಜರುಗಳ ಬಗ್ಗೆ ಅವನು ಬಹಳ ಔದಾರ್ಯದಿಂದ ನಡೆದುಕೊಂಡನು, ಸಮುದ್ರಗುಪ್ತನು ದಕ್ಷಿಣಭಾರತದಲ್ಲಿ ಗೆದ್ದ ರಾಜ್ಯಗಳನ್ನು ತನ್ನ ಸಾಮ್ರಾಜ್ಯಕ್ಕೆ ಸೇರಿಸಿಕೊಳ್ಳಬೇಕೆಂಬ ಉದ್ದೇಶವನ್ನು ಹೊಂದಿರದೆ ಅವರ ರಾಜ್ಯಗಳನ್ನು ಅವರಿಗೆ ಬಿಟ್ಟುಕೊಟ್ಟು ಅವರಿಂದ ಕಪ್ಪಕಾಣಿಕೆಗಳನ್ನು ಪಡೆದುಕೊಳ್ಳುವುದರಲ್ಲಿ ತೃಪ್ತನಾಗಿ ಅವರೊಂದಿಗೆ ಸೌಹಾರ್ದತೆಯಿಂದ ನಡೆದುಕೊಂಡನು. ಸಮುದ್ರಗುಪ್ತನು ತನ್ನ ಈ ಎಲ್ಲ ದಂಡಯಾತ್ರೆಗಳ ನಂತರ ಅಶ್ವಮೇಧ ಯಾಗವನ್ನು ನೆರವೇರಿಸಿದನು ಮತ್ತು ಈ ಸಾಧನೆಗಳ ನೆನಪಿಗಾಗಿ ಚಿನ್ನದ ನಾಣ್ಯಗಳನ್ನು ಟಂಕಿಸಿದನು.

ಸಮುದ್ರಗುಪ್ತನು ಮಹಾದಿಗ್ವಿಜಯಿಯಾಗಿದ್ದುದಲ್ಲದೆ ದಕ್ಷ ಆಡಳಿತಗಾರನೂ ಆಗಿದ್ದನು. ಇವನೊಬ್ಬ ಶ್ರೇಷ್ಠಮಟ್ಟದ ರಾಜತಂತ್ರಜ್ಞನಾಗಿದ್ದನು. ತಾನು ಸೋಲಿಸಿದ ರಾಜರುಗಳ ಬಗ್ಗೆ ಅನುಸರಿಸದ ವಿವಿಧ ನೀತಿಗಳು ಅವನ ವ್ಯವಹಾರ ಕೌಶಲ ಮತ್ತು ರಾಜಕೀಯ ದೂರದೃಷ್ಟಿಯನ್ನು ತಿಳಿಸುತ್ತವೆ. ತಾನು ಗೆದ್ದು ಸಾಮ್ರಾಜ್ಯಕ್ಕೆ ಸೇರಿಸಿ ಕೊಂಡ ರಾಜ್ಯಗಳ ಮೇಲೆ ತನ್ನ ಸಾರ್ವಭೌಮಾಧಿಕಾರವನ್ನು ಸ್ಥಾಪಿಸುವುದಷ್ಟೆ ಅವನ ಉದ್ದೇಶವಾಗಿರದೆ ಅವುಗಳಿಗೆ ಒಳ್ಳೆಯ ಆಡಳಿತ ವ್ಯವಸ್ಥೆಯನ್ನು ರೂಪಿಸಿ ಪ್ರಜೆಗಳ ಒಳಿತಿಗಾಗಿ ದುಡಿಯುವುದನ್ನೂ ತನ್ನ ಮುಖ್ಯ ಗುರಿಯನ್ನಾಗಿ

ಇಟ್ಟುಕೊಂಡಿದ್ದನು. ತನಗೆ ಅಧೀನರಾಗಿದ್ದ ರಾಜರುಗಳ ಬಗ್ಗೆ ಗೌರವದಿಂದ ನಡೆದುಕೊಂಡು ಅವರ ಪ್ರೀತ್ಯಾದರಗಳನ್ನು ಗಳಿಸಿಕೊಂಡಿದ್ದನು.

ಸಮುದ್ರಗುಪ್ತನು ಒಬ್ಬ ಸುಸಂಸ್ಕೃತ ದೊರೆಯಾಗಿದ್ದನು. ಅವನು ಜಾರಿಗೆ ತಂದ ನಾಣ್ಯಗಳು ಈ ಅಂಶವನ್ನು ಸಮರ್ಥಿಸುತ್ತವೆ. ಅವನು ಒಟ್ಟು ಏಳು ಬಗೆಯ ಚಿನ್ನದ ನಾಣ್ಯಗಳನ್ನು ಜಾರಿಗೆ ತಂದನು. ಅವುಗಳೆಂದರೆ (1) ಒಂದು ಕಡೆ ಧ್ವಜವನ್ನು ಹಿಡಿದು ನಿಂತಿರುವ ರಾಜನ ಚಿತ್ರವನ್ನು ಮತ್ತೊಂದು ಕಡೆ ಲಕ್ಷ್ಮಿಯ ಚಿತ್ರವನ್ನುಳ್ಳ (Standard Type) ನಾಣ್ಯ (2) ಬಿಲ್ಲುಬಾಣಗಳನ್ನು ಹಿಡಿದು ನಿಂತಿರುವ ಚಿತ್ರದಿಂದ ಕೂಡಿರುವ (Archer Type) ನಾಣ್ಯ (3) ಆಯುಧಧಾರಿಯಾಗಿ ನಿಂತಿರುವ (Battle Axe Type) ನಾಣ್ಯ. (4) ಭೂಮಂಡಲವನ್ನು ಗೆದ್ದು ಅನಂತರ ಒಳ್ಳೆಯ ಕೆಲಸಗಳಿಂದ ಸ್ವರ್ಗವನ್ನು ಗೆಲ್ಲಲು ಸಿದ್ಧವಾಗಿ ಹೊರಟಿರುವ ಕಾಚಾ ಚಿತ್ರದ ವಿಧಾನದ ನಾಣ್ಯ. 5. ಹುಲಿಯನ್ನು ಕೊಲ್ಲುತ್ತಿರುವ ಚಿತ್ರದ (Tiger Type) ನಾಣ್ಯ 6. ರಾಜನು ವೀಣೆಯನ್ನು ನುಡಿಸುತ್ತಿರುವ (Veena Type) ಚಿತ್ರದ ನಾಣ್ಯ. 7. ಯಜ್ಞವೇದಿಕೆಯ ಹತ್ತಿರ ನಿಂತಿರುವ ಕುದುರೆಯ ಚಿತ್ರದಿಂದ ಕೂಡಿರುವ ಅಶ್ವಮೇಧ ಯಜ್ಞದ ಚಿತ್ರದ ನಾಣ್ಯ. ಅವನ ಈ ನಾಣ್ಯಗಳು ಅವನ ಬಹುಮುಖ ಪ್ರತಿಭೆಗಳನ್ನು ತಿಳಿಯಲು ಉಪಯುಕ್ತವಾಗಿದೆ. ವೀಣೆಯನ್ನು ನುಡಿಸುತ್ತಿರುವ ಚಿತ್ರದಿಂದ ಕೂಡಿರುವ ನಾಣ್ಯವು ಸಂಗೀತದಲ್ಲಿ ಅವನಿಗಿದ್ದ ಆಸಕ್ತಿಯನ್ನೂ, ಬಿಲ್ಲುಬಾಣಗಳ ಚಿತ್ರದಿಂದ ಕೂಡಿರುವ ನಾಣ್ಯವು ಧನುರ್ವಿದ್ಯೆಯಲ್ಲಿ ಕೌಶಲವನ್ನೂ, ಹುಲಿಯನ್ನು ಕೊಲ್ಲುತ್ತಿರುವ ಚಿತ್ರದಿಂದ ಕೂಡಿರುವ ನಾಣ್ಯವು ಬೇಟೆಯಲ್ಲಿ ಆಸಕ್ತಿಯನ್ನೂ ಅಶ್ವಮೇಧಯಾಗದ ಚಿತ್ರದಿಂದ ಕೂಡಿರುವ ನಾಣ್ಯವು ವೈದಿಕ ಧರ್ಮದಲ್ಲೂ ಮತ್ತು ಯಜ್ಞಯಾಗಾದಿಗಳಲ್ಲೂ ಅವನ ನಂಬಿಕೆಯನ್ನೂ, ಯುದ್ಧದ ಆಯುಧವನ್ನು ಹಿಡಿದು ನಿಂತಿರುವ ಚಿತ್ರದಿಂದ ಕೂಡಿರುವ ನಾಣ್ಯವು ಅವನ ಬಾಹುಬಲ ಶಕ್ತಿಯನ್ನೂ ಪ್ರದರ್ಶಿಸುತ್ತವೆ. ಮೇಲಾಗಿ ಅವನು ಪರಕೀಯ ಪ್ರಭಾವಕ್ಕೊಳಗಾಗಿದ್ದ ಹಿಂದೂ ನಾಣ್ಯ ಪದ್ಧತಿಯನ್ನು ಸಂಪೂರ್ಣವಾಗಿ ಸುಧಾರಿಸಿದನು.

ಸಮುದ್ರಗುಪ್ತನು ಘನವಿದ್ವಾಂಸನೂ ಮತ್ತು ವಿದ್ವಾಂಸರ ಆಶ್ರಯದಾತನೂ ಆಗಿದ್ದನು. ಅಲಹಾಬಾದ್ ಪ್ರಶಸ್ತಿಯು ಅವನು ವಿದ್ಯಾಬುದ್ಧಿಯಲ್ಲಿ ಬೃಹಸ್ಪತಿಯನ್ನೂ ಗಾನಕಲೆಯಲ್ಲಿ ತುಂಬರ ಮತ್ತು ನಾದರನನ್ನೂ ಮೀರಿಸಿದ್ದನೆಂದು ವರ್ಣಿಸುತ್ತದೆ. ಸಂಸ್ಕೃತದಲ್ಲಿ ಘನ ಪಂಡಿತನಾಗಿದ್ದು ಅನೇಕ ಕಾವ್ಯಗಳನ್ನು ರಚಿಸಿ 'ಕವಿರಾಜ' ಎಂಬ ಬಿರುದನ್ನು ಧರಿಸಿದ್ದನ್ನು. ಅಲಹಾಬಾದ್ ಪ್ರಶಸ್ತಿಯನ್ನು ಕೆತ್ತಿದ ಹರಿಷೇಣನೂ ಮತ್ತು ಬೌದ್ಧಮುನಿ ವಸುಬಂಧುವು ಇವನ ಉದಾರಾಶ್ರಯ ಪಡೆದಿದ್ದರು.



ಸಮುದ್ರಗುಪ್ತನು ವೈದಿಕ ಧರ್ಮದ ಪ್ರೋತ್ಸಾಹಕನಾಗಿದ್ದನು. ವಿಷ್ಣುವು ಇವನ ಆರಾಧ್ಯದೇವರಾಗಿದ್ದಿತು. ಅಶ್ವಮೇಧಯಾಗವನ್ನು ಪುನರುಜ್ಜೀವನ ಗೊಳಿಸಿದನು. ಆದರೂ ಸಮುದ್ರಗುಪ್ತನು ಭಾರತದ ಇತರ ಹಿಂದೂ ರಾಜರುಗಳಂತೆ ಪರಮತ ಸಹಿಷ್ಣುವಾಗಿದ್ದನು. ಬೌದ್ಧಮತಕ್ಕೂ ಪ್ರೋತ್ಸಾಹ ನೀಡಿದ್ದನು. ಸಿಲೋನಿನ ರಾಜನಾಗಿದ್ದ ಮೇಘವರ್ಮನು ಬೌದ್ಧಗಯೆಯಲ್ಲಿ ಬೌದ್ಧಯಾತ್ರಿಕರ ಅನುಕೂಲಕ್ಕಾಗಿ ಬೌದ್ಧ ವಿಹಾರವೊಂದನ್ನು ನಿರ್ಮಿಸಲು ಅನುಮತಿ ಕೇಳಲು ತನ್ನ ರಾಯಭಾರಿಯೊಬ್ಬನನ್ನು ಅವನ ಆಸ್ಥಾನಕ್ಕೆ ಕಳುಹಿಸಿ ಆದಕ್ಕೆ ಅನುಮತಿ ಪಡೆದುಕೊಂಡಿದ್ದನು, ಒಟ್ಟಾರೆ

ಹೇಳುವುದಾದರೆ, ಸಮುದ್ರಗುಪ್ತನು ಮಿಲಿಟರಿ ಶಕ್ತಿ, ಆಡಳಿತಪ್ರತಿಭೆ, ತೀಕ್ಷ್ಣ ಬುದ್ಧಿ, ಲಲಿತಕಲೆಗಳಲ್ಲಿದ್ದ ಅಭಿರುಚಿ ವಿದ್ವಾಂಸರ ಬಗ್ಗೆ ಇದ್ದ ಗೌರವ ಮೊದಲಾದವುಗಳಿಂದ ಗುಪ್ತರ ದೊರೆಗಳಲ್ಲಿ ಒಬ್ಬ ಸರ್ವಶ್ರೇಷ್ಠ ದೊರೆಯಾಗಿ ಹೆಸರು ಗಳಿಸಿಕೊಂಡಿದ್ದಾನೆ. ಸಮುದ್ರಗುಪ್ತನ ಆಳ್ವಿಕೆಯು ತನ್ನ ಮುಗನ ಆಳ್ವಿಕೆಯಲ್ಲಿ ಕಂಡುಬಂದ ಬೌದ್ಧಿಕ ಮತ್ತು ಸಾಂಸ್ಕೃತಿಕ ಪ್ರಗತಿಯ ಮುನ್ಸೂಚಕವಾಗಿದ್ದಿತು ಮತ್ತು ಅವನು ಬಾರತೀಯ ಸಂಸ್ಕೃತಿಯ ಉನ್ನತ ಧ್ಯೇಯಾದರ್ಶಗಳ ಪ್ರತೀಕವಾಗಿದ್ದನು.

**ಎರಡನೆ ಚಂದ್ರಗುಪ್ತ (ಕ್ರಿ.ಶ. 380-414)**

ಸಮುದ್ರಗುಪ್ತನು ಅರ್ಧಶತಮಾನಗಳ ಕಾಲ ರಾಜ್ಯವಾಳಿ ಕ್ರಿ.ಶ. 380ರಲ್ಲಿ ಕಾಲವಾದನು. ಅವನಿಗೆ ರಾಮಗುಪ್ತ ಮತ್ತು ಎರಡನೆ ಚಂದ್ರಗುಪ್ತ ಎಂಬ ಇಬ್ಬರು ಮಕ್ಕಳಿದ್ದರು. ಇವರಲ್ಲಿ ಹೆಚ್ಚು ಸಮರ್ಥನಾಗಿದ್ದ ಎರಡನೆ ಚಂದ್ರಗುಪ್ತನನ್ನು ಸಮುದ್ರಗುಪ್ತನು ತಾನು ಕಾಲವಾಗುವುದಕ್ಕೆ ಮುಂಚೆಯೆ ಸಿಂಹಾಸನಕ್ಕೆ ತನ್ನ ಉತ್ತರಾಧಿಕಾರಿಯನ್ನಾಗಿ ನೇಮಿಸಿದ್ದನು. ಎರಡನೆ ಚಂದ್ರಗುಪ್ತನಿಗೆ ವಿಕ್ರಮಾದಿತ್ಯ ಎಂಬ ಹೆಸರು ಉಂಟು. ಸಮುದ್ರಗುಪ್ತನ ಕಾಲದಲ್ಲೇ ಅತ್ಯಂತ ಪ್ರಬಲವಾಗಿದ್ದ ಗುಪ್ತ ಸಾಮ್ರಾಜ್ಯವು ಇವನ ಕಾಲದಲ್ಲಿ ಇನ್ನೂ ಹೆಚ್ಚು ಪ್ರಬಲವಾಗಿ ಒಂದು ಹೊಸ ಯುಗವನ್ನು ಆರಂಭಿಸಿತು. ಎರಡನೆ ಚಂದ್ರಗುಪ್ತನು ತನ್ನ ತಂದೆಯಂತೆಯೆ ಮಹಾ ಪರಾಕ್ರಮಶಾಲಿಯೂ, ರಾಜನೀತಿಚತುರನೂ. ಸಾಹಿತ್ಯ ಕಲೆಗಳ ಪೋಷಕನೂ ಆಗಿದ್ದನು. ಇವನು ಗುಪ್ತ ಸಾಮ್ರಾಜ್ಯವನ್ನು ತನ್ನ ತೋಳ್ಬಲದಿಂದಲೇ ಅಲ್ಲದೆ ವೈವಾಹಿಕ ಸಂಬಂಧಗಳ ಮೂಲಕವೂ ವಿಸ್ತರಿಸಿದನು. ಪಶ್ಚಿಮ ಭಾರತದಲ್ಲಿದ್ದ ಶಕಸತ್ರಪರ ದೊರೆ ಮೂರನೆ ರುದ್ರದಾಮನ್‌ನನ್ನು ಸೋಲಿಸಿ ಕೊಂದು ಅವನ ರಾಜ್ಯವನ್ನು ತನ್ನ ಸಾಮ್ರಾಜ್ಯಕ್ಕೆ ಸೇರಿಸಿಕೊಂಡನು. ಶಕರ ಮೇಲೆ ಆವನು ಗಳಿಸಿದ ವಿಜಯವು ಅವನ ಬಹುಮುಖ್ಯ ಸಾಧನೆಗಳಲ್ಲೊಂದಾಗಿತ್ತು ಮತ್ತು ಈ ವಿಜಯದ ನೆನಪಿಗಾಗಿ 'ಶಕಾರಿ' ಎಂಬ ಬಿರುದನ್ನು ಧರಿಸಿದನು. ಶಕರ ಮೇಲಿನ ಈ ವಿಜಯವು ಕೇವಲ ರಾಜಕೀಯ ದೃಷ್ಟಿಯಿಂದಲೇ ಮುಖ್ಯವಾಗಿರದೆ ಅದು ಅವನ ಸಾಮ್ರಾಜ್ಯದ ಆರ್ಥಿಕ ದೃಷ್ಟಿಯಿಂದಲೂ ಮುಖ್ಯಾಗಿತ್ತು. ಶಕರ ಸಾಮ್ರಾಜ್ಯವು ಸೌರಾಷ್ಟ್ರ ಮತ್ತು ಗುಜರಾತುಗಳ ಶ್ರೀಮಂತ ಪ್ರದೇಶವನ್ನು ಮತ್ತು ಪಶ್ಚಿಮ ತೀರದಲ್ಲಿ ಅನೇಕ ಪ್ರಮುಖ ಬಂದರುಗಳನ್ನೂ ಹೊಂದಿದ್ದು ಶ್ರೀಮಂತಿಕೆಯಿಂದ ತುಂಬಿ ತುಳುಕುತ್ತಿತ್ತು. ಚಂದ್ರಗುಪ್ತನು ಅದನ್ನು ವಶಪಡಿಸಿಕೊಂಡುದುದರ ಪರಿಣಾಮವಾಗಿ ಆ ಸಂಪದ್ಭರಿತ ಪ್ರದೇಶವು ಗುಪ್ತರ ಸಾಮ್ರಾಜ್ಯದಲ್ಲಿ ಸೇರಿ ಅಲ್ಲಿನ ಬಂದರುಗಳ ಮೂಲಕ ಮಧ್ಯಪ್ರಾಚ್ಯ ಮತ್ತು ರೋಂ ದೇಶಗಳೊಂದಿಗೆ ನಡೆಯುತ್ತಿದ್ದ ವ್ಯಾಪಾರದಿಂದ ಬಾರತಕ್ಕೆ ಹರಿದು ಬರುತ್ತಿದ್ದ ಚಿನ್ನದಿಂದ ದೇಶವು ಆರ್ಥಿಕವಾಗಿ ಮುಂದುವರಿಯು ವಂತಾಯಿತು. ಚಂದ್ರಗುಪ್ತನ ಎರಡನೆ ಸಾಧನೆಯೆಂದರೆ ನಾಗರು ಎಂಬವರನ್ನು ವೈವಾಹಿಕ ಸಂಬಂಧದ ಮೂಲಕ ತನ್ನ ಕಡೆ ಒಲಿಸಿಕೊಂಡಿದುದಾಗಿತ್ತು. ಚಂದ್ರಗುಪ್ತನು ನಾಗಮನೆತನದ ರಾಜಕುಮಾರಿಯಾದ ಕುಬೇರನಾಗ ಎಂಬವಳನ್ನು ವಿವಾಹವಾಗಿ ಎರಡು ಮನೆತನಗಳ ನಡುವೆ ಸ್ನೇಹ ಸಂಬಂಧಗಳನ್ನು ಏರ್ಪಡಿಸಿದನು. ಇದೇ ರೀತಿಯಲ್ಲಿ ವಾಕಾಟಕರ ದೊರೆ ಎರಡನೆ ರುದ್ರಸೇನನಿಗೆ ತನ್ನ ಮಗಳಾದ ಪ್ರಭಾವತಿಗುಪ್ತಳನ್ನು ಕೊಟ್ಟು ವಿವಾಹ ಮಾಡಿದನು. ರುದ್ರಸೇನನು ಕಾಲವಾದ ಮೇಲೆ ಪ್ರಭಾವತಿಯು

ರಾಜಮಾತೆಯಾಗಿ ಬಹಳ ದಕ್ಷತೆಯಿಂದ ಆಡಳಿತ ನಡೆಸಿದಳು. ಇದರಿಂದಾಗಿ ವಾಕಾಟಕರ ರಾಜ್ಯದ ಆಡಳಿತವು ಪೂರ್ಣವಾಗಿ ಗುಪ್ತರ ಹತೋಟಿಗೊಳಪಟ್ಟಿತು. ಮಾಳವದ ದೊರೆ ಕಾಕುತ್ಸವರ್ಮನ ಮಗಳನ್ನು ಗುಪ್ತ ಸಂತತಿಯ ರಾಜಕುಮಾರನೊಬ್ಬನಿಗೆ ತಂದು ಕೊಂಡು ಅವರೊಂದಿಗೂ ಸೌಹಾರ್ದ ಸಂಬಂಧಗಳನ್ನೇರ್ಪಡಿಸಿಕೊಂಡನು. ದೆಹಲಿಯಲ್ಲಿನ ಕುತುಬ್‌ಮೀನಾರ್‌ಗೆ ಸಮೀಪದಲ್ಲಿರುವ ಕಬ್ಬಿಣದ ಸ್ತಂಭದ ಮೇಲಿರುವ ಶಾಸನದ ಪ್ರಕಾರ ಚಂದ್ರ ಎಂಬ ರಾಜನು ವಂಗಪ್ರದೇದಲ್ಲಿನ ರಾಜರುಗಳ ಒಕ್ಕೂಟವನ್ನು ಮತ್ತು ಸಿಂಧೂನದಿಯ ಆಚೆಗಿದ್ದ ಎಂಬ ಜನಗಳನ್ನು ಸೋಲಿಸಿದುದಾಗಿಯೂ ಕಂಡುಬರುತ್ತದೆ. ಚಂದ್ರ ವಹ್ಲಿಕ ಎಂಬ ಈ ರಾಜನು ಎರಡನೆ ಚಂದ್ರಗುಪ್ತನೇ ಆಗಿರಬೇಕೆಂದು ಕೆಲವು ವಿದ್ವಾಂಸರು ಅಭಿಪ್ರಾಯ ಪಟ್ಟಿರುವರು. ಈ ಅಂಶವು ನಿಜವಾಗಿದ್ದಲ್ಲಿ ಎರಡನೆ ಚಂದ್ರಗುಪ್ತನ ಕಾಲದಲ್ಲಿ ಗುಪ್ತರ ಸಾಮ್ರಾಜ್ಯದ ಗಡಿಗಳು ಪೂರ್ವ ಮತ್ತು ವಾಯುವ್ಯ ಭಾಗದಲ್ಲಿ ಮತ್ತುಷ್ಟು ವಿಸ್ತರಿಸಿದ್ದುದಾಗಿ ಕಂಡುಬರುತ್ತದೆ. ಚಂದ್ರಗುಪ್ತನು ತನ್ನ ತಂದೆಯಂತೆಯ ಚಿನ್ನ ಮತ್ತು ಬೆಳ್ಳಿಯ ನಾಣ್ಯಗಳನ್ನೇ ಅಲ್ಲದೆ ತಾಮ್ರದಲ್ಲೂ ನಾಣ್ಯಗಳನ್ನು ಅಚ್ಚು ಹಾಕಿಸಿದನು. ಈ ನಾಣ್ಯಗಳ ಮೇಲೆ ಸಿಂಹ, ಕುದುರೆ, ಹೂವು, ವಿಷ್ಣು ಮತ್ತು ಗರುಡನ ಚಿತ್ರಗಳು ಕಂಡುಬರುತ್ತವೆ. ಇವನು 'ಸಿಂಹವಿಕ್ರಮ ಸಾಹಸಾಂಕ' ವಿಕ್ರಮಾಂಕ' 'ಸಿಂಹಚಂದ್ರ' 'ಶಕಾರಿ' ಮತ್ತು 'ದೇವರಾಜ' ಎಂಬ ಬಿರುದುಗಳನ್ನು ಧರಿಸಿದ್ದನು.

ಎರಡನೆ ಚಂದ್ರಗುಪ್ತನ ಕಾಲದಲ್ಲಿ ಗುಪ್ತರ ಸಾಮ್ರಾಜ್ಯವು ತನ್ನ ಅಧಿಕಾರದ ಮತ್ತು ವೈಭವದ ಉತ್ತುಂಗ ಶಿಖರವನ್ನು ಮುಟ್ಟಿತು. ಇವನ ಕಾಲದಲ್ಲಿ ಬಾರತಕ್ಕೆ ಭೇಟಿಕೊಟ್ಟಿದ್ದ ಚಿನೀಯಾತ್ರಿಕ ಪಾಹಿಯಾನನು ತನ್ನ ಪೊ-ಕ್ವಾ-ಕಿ. ("Fo-kwo-ki") ಗ್ರಂಥದಲ್ಲಿ ಗುಪ್ತರ ಸಾಮ್ರಾಜ್ಯದಲ್ಲಿನ ಸ್ಥಿತಿಗತಿಗಳ ಬಗ್ಗೆ ದೀರ್ಘ ವಿವರಣೆ ಕೊಡುತ್ತಾನೆ. ಚಂದ್ರಗುಪ್ತನ ಆಳ್ವಿಕೆಯಲ್ಲಿ ಸಾಮ್ರಾಜ್ಯದಲ್ಲಿ ಶಾಂತಿ ಸುಬಿಕ್ಷೆಗಳು ನೆಲಸಿದ್ದವು. ಇವನ ಕಾಲದಲ್ಲಿ ಪಾಟಲೀಪುತ್ರದ ಜೊತೆಗೆ ಉಜ್ಜೈನಿಯೂ ರಾಜಧಾನಿಯಾಯಿತು. ಚಂದ್ರಗುಪ್ತನು ವೀರಯೋಧನಾಗಿದ್ದು ದಲ್ಲದೆ ಪ್ರಗತಿಪರ ದೊರೆಯೂ ಆಗಿದ್ದನು. ಬಾರತೀಯ ರಾಜತ್ವದ ಉನ್ನತ ಆದರ್ಶಗಳ ಪ್ರತೀಕವಾಗಿದ್ದನು. ಸಮರ್ಥ ಯೋಧನಾಗಿ ಆಡಳಿತ ಗಾರನಾಗಿ, ನಿಷ್ಪಕ್ಷ ನ್ಯಾಯಾಧೀಶನಾಗಿ, ಕಲೆ ಮತ್ತು ಸಾಹಿತ್ಯಗಳ ಪೋಷಕನೂ ಹಾಗೂ ವಿದ್ವಜ್ಜನರ ಆಶ್ರಯದಾತನೂ ಆಗಿ ತನ್ನ ಪ್ರಜೆಗಳೆಲ್ಲರ ಪ್ರೀತ್ಯಾದರಗಳಿಗೆ ಪಾತ್ರನಾಗಿದ್ದನು. ಮರಣದಂಡನೆ ಮೊದಲಾದ ಕ್ರೂರಶಿಕ್ಷೆಗಳನ್ನು ಇವನು ತೆಗೆದುಹಾಕಿದ್ದನು. ಧಾರ್ಮಿಕ ವಿಷಯಗಳಲ್ಲಿ ಪರಮತಸಹಿಷ್ಣುವಾಗಿದ್ದು ಎಲ್ಲ ಮತದವರಿಗೂ ಗೌರವ ತೋರಿಸುತ್ತಿದ್ದನು. ಇವನ ಸಚಿವರು ವಿವಿಧ ಧರ್ಮಗಳಿಗೆ ಸೇರಿದ್ದರು. ಕಲೆ ಮತ್ತು ಸಾಹಿತ್ಯಕ್ಕೆ ಉದಾರ ಪ್ರೋತ್ಸಾಹ ನೀಡಿದ್ದನು. ಇವನ ಆಸ್ಥಾನವನ್ನು 'ನವಮಣಿ'ಗಳು ಎಂದು ಪ್ರಸಿದ್ಧರಾದ ಒಂತ್ತು ಜನ ಘನವಿದ್ವಾಂಸರು ಅಲಂಕರಿಸಿದ್ದರೆಂದು ಪ್ರತೀತಿಯಿದೆ. ಅವರುಗಳೆಂದರೆ ಮಹಾಕವಿ ಕಾಳಿದಾಸ, ವೈದ್ಯಶಾಸ್ತ್ರಜ್ಞ ಧನ್ವಂತರಿ, ಖಗೋಳ ಶಾಸ್ತ್ರಜ್ಞ ವರಹಮೀರ, ನಿಘಂಟುಕಾರ ಅಮರಸಿಂಹ, ವ್ಯಾಕರಣಕಾರ ವರರುಚಿ, ವಾಸ್ತು ಶಿಲ್ಪಜ್ಞ ಶಂಕು, ಜ್ಯೋತಿಷ್ಯಶಾಸ್ತ್ರಕಾರ ಕ್ಷಪಣಕ, ಐಂದ್ರಜಾಲಿಕ ವೇತಾಲಭಟ್ಟ ಹಾಗೂ ಮತ್ತೊಬ್ಬ ಕವಿ ಘಟಕರ್ಪಣ. ಆದರೆ ಇವರೆಲ್ಲರೂ

ಚಂದ್ರಗುಪ್ತನ ಸಮಕಾಲೀನರಾಗಿದ್ದು ಅವನ ಆಸ್ಥಾನದಲ್ಲಿದ್ದರೆ ಎಂಬುದರ ಬಗ್ಗೆ ಇತಿಹಾಸಕಾರರು ವಿಭಿನ್ನ ಅಭಿಪ್ರಾಯಗಳನ್ನು ಹೊಂದಿದ್ದರೂ ಇವರೆಲ್ಲರೂ ಗುಪ್ತರ ಕಾಲದ ಪುನರುಜ್ಜೀವನ ಯುಗದ ಮಹಾ ಮೇಧಾವಿಗಳಾಗಿದ್ದರು ಎಂಬುದರಲ್ಲಿ ಸಂಶಯವಿಲ್ಲ. ಚಂದ್ರಗುಪ್ತನು ಕಲಾಭಿಮಾನಿಯೂ ಆಗಿದ್ದನು. ಅವನು ಜಾರಿಗೆ ತಂದ ಚಿನ್ನ ಮತ್ತು ಬೆಳ್ಳಿಯ ನಾಣ್ಯಗಳ ಮೇಲೆ ಕಂಡುಬರುವ ವಿವಿಧ ಚಿತ್ರಗಳು ಕಲಾತ್ಮಕವಾಗಿದ್ದು ಅವನ ಕಲಾಭಿರುಚಿಯನ್ನು ವ್ಯಕ್ತಪಡಿಸುತ್ತವೆ. ಒಟ್ಟಿನಲ್ಲಿ ಎರಡನೆ ಚಂದ್ರಗುಪ್ತನ ಮೂವತ್ತ ನಾಲ್ಕು ವರ್ಷಗಳದೀರ್ಘಕಾಲದ ಆಳ್ವಿಕೆಯಲ್ಲಿ ಗುಪ್ತರ ಅಧಿಕಾರವು ಉತ್ತರ ಮತ್ತು ಪಶ್ಚಿಮ ಭಾರತಗಳ ಮೇಲೆ ಸುಭದ್ರವಾಗಿ ಸ್ಥಾಪಿಸಲ್ಪಟ್ಟು ತನ್ಮೂಲಕ ಸಾಮ್ರಾಜ್ಯದ ಸಂಪತ್ತುಗಳು ಹೆಚ್ಚಿ ಬೌದ್ಧಿಕ ಮತ್ತು ಸಾಂಸ್ಕೃತಿಕ ಕ್ಷೇತ್ರಗಳೆರಡರಲ್ಲೂ ಮಹತ್ವಪೂರ್ಣ ಸಾಧನೆಗಳು ಜರುಗುವಂತಾಯಿತು.

**ಒಂದನೇ ಕುಮಾರಗುಪ್ತ (ಕ್ರಿ.ಶ. 414-456)**

ಎನಡನೆ ಚಂದ್ರಗುಪ್ತನ ಮರಣಾನಂತರ ಅವನ ಮಕ್ಕಳಲ್ಲಿ ಹಿರಿಯವನೂ ಮತ್ತು ದಕ್ಷನೂ ಆಗಿದ್ದ ಒಂದನೇ ಕುಮಾರಗುಪ್ತನು ಸಿಂಹಾಸನವನ್ನೇರಿ ಸುಮಾರು ನಲವತ್ತು ವರ್ಷಗಳ ಕಾಲ ರಾಜ್ಯವಾಳಿದನು. ಇವನ ಆಳ್ವಿಕೆಯ ಬಹುಭಾಗವು ಶಾಂತಿ ಸಂಮೃದ್ಧಿಗಳಿಂದ ಕೂಡಿದ್ದಿತು. ಕುಮಾರಗುಪ್ತನು ತನ್ನ ತಾತ ಮತ್ತು ತಂದೆಯು ನಿರ್ಮಿಸಿದ್ದ ಸಾಮ್ರಾಜ್ಯವನ್ನು ಕಾಪಾಡಿಕೊಳ್ಳುವುದರಲ್ಲಿ ಯಶಸ್ವಿಯಾದನು. ಗುಪ್ತರ ಸಾಮ್ರಾಜ್ಯದ ವಿವಿಧ ಬಾಗಗಳಲ್ಲಿ ಇವನ ನಾಣ್ಯಗಳು ದೊರೆತಿರುವುದರಿಂದ ಗುಪ್ತರ ಸಾಮ್ರಾಜ್ಯವು ಹಿಂದಿನಂತೆಯೆ ಮುಂದುವರಿದಿದ್ದುದಾಗಿ ಕಂಡುಬರುತ್ತದೆ. ಅಶ್ವಮೇಧಯಾಗವನ್ನುಮಾಡಿದನು. ಇವನು 'ಶ್ರೀ ಮಹೇಂದ್ರ ಮಹೇಂದ್ರಸಿಂಹ' ಎಂಬ ಬಿರುದುಗಳನ್ನು ಹೊಂದಿದ್ದನು. ಕುಮಾರಗುಪ್ತನು ತನ್ನ ತಂದೆಯಂತೆಯೆ ಹೊಸ ನಾಣ್ಯಗಳನ್ನು ಜಾರಿಗೆ ತಂದನು. ಅವನ ನಾಣ್ಯಗಳ ಮೇಲೆ ಕಾರ್ತಿಕೇಯನ ಚಿತ್ರವು ಕಂಡುಬರುತ್ತದೆ ಆದ್ದರಿಂದ ಇವನು ಶೈವಧರ್ಮದ ಬಗ್ಗೆ ಒಲವು ಉಳ್ಳವನಾಗಿದ್ದುದಾಗಿ ಕಂಡುಬರುತ್ತದೆ. ಕುಮಾರಗುಪ್ತನು ವಿದ್ಯಾಭಿಮಾನಿಯೂ ಆಗಿದ್ದನು. ಮುಂದೆ ವಿಖ್ಯಾತ ವಿಶ್ವವಿದ್ಯಾನಿಲಯವಾಗಿ ಮಾರ್ಪಟ್ಟ ನಳಂದ ವಿದ್ಯಾಪೀಠಕ್ಕೆ ಅನೇಕ ದಾನದತ್ತಿಗಳನ್ನು ನೀಡಿದ್ದನು. ಇವನ ಆಳ್ವಿಕೆಯ ಕೊನೆಯ ಬಾಗದಲ್ಲಿ ಭಾರತದ ಮೇಲೆ ಮಧ್ಯಏಷ್ಯಾದಲ್ಲಿನ ಅಲೆಮಾರಿ ಜನಾಂಗಗಳಾಗಿದ್ದ ಹೂಣರು ಧಾಳಿಮಾಡಿದರು. ಕುಮಾರಗುಪ್ತನು ಅವರನ್ನು ಹಿಮ್ಮೆಟ್ಟಿಸಲು ತನ್ನ ಮಗ ಸ್ಕಂಧಗುಪ್ತನನ್ನು ಕಳುಹಿಸಿದನು. ಸ್ಕಂಧಗುಪ್ತನು ಅವರನ್ನು ಹಿಮ್ಮೆಟ್ಟಿಸಿ ಹಿಂತಿರುವುದರೊಳಗಾಗಿಯೆ ಕುಮಾರಗುಪ್ತನು ಕಾಲವಾದನು. ಕುಮಾರಗುಪ್ತನ ಮರಣದೊಂದಿಗೆ ಸಾಮ್ರಾಟ ಗುಪ್ತಸಂತತಿಯವರ ವೈಭವದ ಆಳ್ವಿಕೆಯು ಕೊನೆಗಂಡಿತು.

**ಸ್ಕಂಧಗುಪ್ತ (456-468)**

ಒಂದನೆ ಕುಮಾರಗುಪ್ತನು ಕಾಲವಾದ ಮೇಲೆ ಸಿಂಹಾಸನಕ್ಕಾಗಿ ನಡೆದ ಉತ್ತರಾಧಿಕಾರಿತ್ವದ ಯುದ್ಧದಲ್ಲಿ ಸ್ಕಂಧಗುಪ್ತನು ತನ್ನ ಸೋದರ ಪುರಗುಪ್ತನನ್ನು ಸೋಲಿಸಿ ಸಿಂಹಾಸನಕ್ಕೆ ಬಂದನು. ಇವನು ಹನ್ನೆರಡು ವರ್ಷಗಳ ಕಾಲ ರಾಜ್ಯವಾಳಿದನು. ಇವನ ಆಳ್ವಿಕೆಯಲ್ಲಿ ಸಂಭವಿಸಿದ ಬಹುಮುಖ್ಯ ಘಟನೆಯೆಂದರೆ

ಹೂಣರ ಧಾಳಿ. ಹೂಣರ ಧಾಳಿಯು ಅವನ ಧೈರ್ಯ ಸಾಹಸಗಳಿಗೆ ದೊಡ್ಡ ಸವಾಲಾಗಿದ್ದು ಅದನ್ನು ಎದುರಿಸಿ ಜಯಗಳಿಸಿದನು.

ಹೂಣರು ಮಧ್ಯಏಷ್ಯಾದ ಅಲೆಮಾರಿ ಜನಾಂಗವಾಗಿದ್ದರು. ಅವರು ಅಲ್ಲಿಂದ ವಲಸೆ ಹೊರಟು ಎರಡು ಗುಂಪುಗಳಾಗಿ ಒಡೆದು ಒಂದು ಗುಂಪು ಕ್ರಿ.ಶ. 485ರಲ್ಲಿ ಯೂರೋಪಿಗೆ ನುಗ್ಗಿ ರೋಮನ್ ಸಾಮ್ರಾಜ್ಯದ ಬುಡವನ್ನೇ ಅಲುಗಾಡಿಸಿತು. ಬಿಳಿಯ ಹೂಣರೆಂದು ಕರೆಯಲಾದ ಮತ್ತೊಂದು ಗುಂಪು ಭಾರತದ ಮೇಲೆ ಧಾಳಿಮಾಡಿತು. ಆದರೆ ಅವರನ್ನು ಸ್ಕಂಧಗುಪ್ತನು ಹಿಮ್ಮೆಟ್ಟಿಸಿ ಓಡಿಸಿದನು. ಹೂಣರ ಧಾಳಿಯು ಇಷ್ಟಕ್ಕೆ ಮುಗಿಯಲಿಲ್ಲ. ಕ್ರಿ.ಶ. ಆರನೆ ಶತಮಾನದ ಆರಂಭದಲ್ಲಿ ಹೂಣರು ಮತ್ತೊಮ್ಮೆ ಧಾಳಿಮಾಡಿದರು. ತೋರಮಾನ ಮತ್ತು ಮಿಹಿರಗುಲ ಎಂಬವರು ಇವರ ನಾಯಕರಾಗಿದ್ದರು. ಇವರು ಮಹಾ ಕ್ರೂರಿಗಳಾಗಿದ್ದರು ಮತ್ತು ಬೌದ್ಧಮತ ದ್ವೇಷಿಗಳಾಗಿದ್ದರು. ಮಿಹಿರಗುಲನ ವಿರುದ್ಧ ನರಸಿಂಹಗುಪ್ತ ಬಾಲಾದಿತ್ಯನು ಒಂದು ಪವಿತ್ರ ಯುದ್ಧವನ್ನೇ ಮಾಡಿ ಅವನನ್ನು ಕ್ರಿ.ಶ. 520ರಲ್ಲಿ ಸೋಲಿಸಿದನು. ಮಿಹಿರಗುಲನು ಕಾಶ್ಮೀರಕ್ಕೆ ತಪ್ಪಿಸಿಕೊಂಡು ಹೋದನು. ತರುವಾಯದಲ್ಲಿ ಗುಪ್ತರ ಅಧಿಕಾರದ ಅವನತಿಯ ನಂತರ ಪ್ರಾಬಲ್ಯಕ್ಕೆ ಬಂದ ಮಾಳವದ ಯಶೋಧರ್ಮನ್ ಅವನನ್ನು ಕ್ರಿ.ಶ. 533ರಲ್ಲಿ ಸಂಪೂರ್ಣವಾಗಿ ಸೋಲಿಸಿದನು. ಹೂಣರು ಅಂತ್ಯದಲ್ಲಿ ಭಾರತದಲ್ಲೇ ನೆಲೆಸಿ ಕಾಲಾನುಕ್ರಮದಲ್ಲಿ ಭಾರತೀಯ ಸಮಾಜದಲ್ಲಿ ಬೆರತುಹೋದರು.

ಸ್ಕಂಧಗುಪ್ತನು ಪ್ರಬಲ ಹೋರಾಟಗಾರನಾಗಿದ್ದುದಲ್ಲದೆ ಒಳ್ಳೆಯ ಆಡಳಿತಗಾರನೂ ಆಗಿದ್ದು ಅನೇಕ ಜನೋಪಯುಕ್ತ ಕಾರ್ಯಗಳನ್ನು ಮಾಡಿದನು. ಮೌರ್ಯರ ಕಾಲದಲ್ಲಿ ಸೌರಾಷ್ಟ್ರದಲ್ಲಿ ನಿರ್ಮಿಸಲಾಗಿದ್ದ ಸುದರ್ಶನ ಸರೋವರವು ದುರವಸ್ಥೆಗೀಡಾಗಿದ್ದು ಜನರಿಗೆ ತೊಂದರೆಯಾಗಿದ್ದಿತು. ಸ್ಕಂಧಗುಪ್ತನು ಸೌರಾಷ್ಟ್ರದ ಪ್ರಾಂತ್ಯಾಧಿಕಾರಿಯಾಗಿದ್ದ ಪರ್ಣದತ್ತನಿಗೆ ಅದನ್ನು ದುರಸ್ತುಗೊಳಿಸುವಂತೆ ಆಜ್ಞೆಮಾಡಿ ನೀರಾವರಿ ವ್ಯವಸಾಯಕ್ಕೆ ಅನುಕೂಲ ಮಾಡಿಕೊಟ್ಟನು. ಇವನೂ ಕೂಡ ತನ್ನ ಹಿಂದಿನವರಂತೆ ನಾಣ್ಯಗಳನ್ನು ಅಚ್ಚುಹಾಕಿಸಿದನು. ಆದರೆ ಈ ನಾಣ್ಯಗಳು ಗುಣಮಟ್ಟದಲ್ಲಿ ಕೆಳಮಟ್ಟದವುಗಳಾಗಿದ್ದು ಸಾಮ್ರಾಜ್ಯದ ಆರ್ಥಿಕತೆಯ ಅಭದ್ರತೆಯನ್ನು ಸೂಚಿಸುತ್ತಿದ್ದವು ಸ್ಕಂಧಗುಪ್ತನು ಕ್ರಿ.ಶ. 468ರಲ್ಲಿ ಕಾಲವಾದನು.

**ಗುಪ್ತ ಸಂತತಿಯ ಕೊನೆಯ ರಾಜರುಗಳು**

ಸ್ಕಂಧಗುಪ್ತನ ನಂತರ ರಾಜ್ಯವಾಳಿದ ಗುಪ್ತರ ದೊರೆಗಳ ಇತಿಹಾಸವು ಸ್ಪಷ್ಟವಾಗಿ ತಿಳಿದುಬಂದಿಲ್ಲ. ಇತಿಹಾಸದ ದಾಖಲೆಗಳ ಪ್ರಕಾರ ಸ್ಕಂಧಗುಪ್ತನ ನಂತರ ಪುರಗುಪ್ತ ಬುಧಗುಪ್ತ ಒಂದನೆ ನರಸಿಂಹ ಗುಪ್ತ ಬಾಲಾದಿತ್ಯ, ಎರಡನೆ ಕುಮಾರ ಗುಪ್ತ ವಿನಯ ಗುಪ್ತ, ಭಾನುಗುಪ್ತ ತತಗತಗುಪ್ತ ಮೊದಲಾದವರು ರಾಜ್ಯವಾಳಿದುದಾಗಿ ಕಂಡುಬರುತ್ತದೆ. ಇವರ ಆಳ್ವಿಕೆಯ ಕಾಲದಲ್ಲಿ ಗುಪ್ತರ ಅಧಿಕಾರವು ಸ್ಥಳೀಯ ಶಕ್ತಿಯಾಗಿ ಮಾರ್ಪಟ್ಟು ಮಗಧ ಪ್ರದೇಶಕ್ಕೆ ಸೀಮಿತಗೊಂಡು ಕೆಲವು ವರ್ಷಗಳಲ್ಲಿಯೆ ಕಣ್ಮರೆಯಾಯಿತು.

ಗುಪ್ತರ ಸಾಮ್ರಾಜ್ಯದ ಅವನತಿಗೆ ಅನೇಕ ಕಾರಣಗಳಿದ್ದವು. ಅವುಗಳಲ್ಲಿ ಮುಖ್ಯವಾದವುಗಳೆಂದರೆ 1. ಸ್ಕಂಧಗುಪ್ತನ ತರುವಾಯ ಆಳಿದ ರಾಜರುಗಳು ತುಂಬಾ

ಅಸಮರ್ಥರಾಗಿದ್ದರು ಮತ್ತು ಸಿಂಹಾಸನಕ್ಕಾಗಿ ಇವರಲ್ಲಿ ನಡೆದ ಕಲಹಗಳು ಸಾಮ್ರಾಜ್ಯವನ್ನು ಅವನತಿಗೀಡು ಮಾಡಿದವು. 2. ಹೂಣರ ಧಾಳಿ. ಗುಪ್ತರ ಸಾಮ್ರಾಜ್ಯದ ಮೇಲೆ ಹೂಣರು ಮಾಡಿದ ಧಾಳಿಯು ಆ ಸಾಮ್ರಾಜ್ಯದ ಬುಡವನ್ನು ಅಲುಗಾಡಿಸಿತು. ಹೂಣರ ಧಾಳಿಯು ಸರ್ಕಾರದ ಬೊಕ್ಕಸದ ಮೇಲೆ ತೀವ್ರ ಪರಿಣಾಮವನ್ನುಂಟು ಮಾಡಿತು. 3. ಸಮುದ್ರ ಗುಪ್ತ ಮತ್ತು ಅವನ ಮಗ ಎರಡನೇ ಚಂದ್ರಗುಪ್ತನು ಅನೇಕ ರಾಜರುಗಳನ್ನು ಸೋಲಿಸಿ ಅವರ ರಾಜ್ಯಗಳನ್ನು ತಮ್ಮ ಸಾಮ್ರಾಜ್ಯಕ್ಕೆ ಸೇರಿಸಿಕೊಂಡಿದ್ದರು. ಹೀಗೆ ರಾಜ್ಯಗಳನ್ನು ಕಳೆದುಕೊಂಡಿದ್ದ ಅನೇಕ ಸಾಮಂತರುಗಳು ಮತ್ತಿತರ ಮುಖ್ಯರು ಸನ್ನಿವೇಶದ ಅನುಕೂಲವನ್ನು ಪಡೆದುಕೊಂಡು ತಮ್ಮ ಸ್ವಾತಂತ್ರ್ಯವನ್ನು ಘೋಷಿಸಿಕೊಂಡರು. ಅವರಲ್ಲಿ ಸೌರಾಷ್ಟ್ರದ ಮೈತ್ರಕ ಸಂತತಿಯವರು. ಮಾಳವದ ಯಶೋಧರ್ಮನ್ ಮತ್ತು ಗಂಗಾ ಮತ್ತು ಗೋಗ್ರಾ ನದಿಗಳ ನಡುವಣ ಪ್ರದೇಶದಲ್ಲಿ ಪ್ರಬಲರಾಗಿದ್ದ ಮೌಕರಿ ಸಂತತಿಯವರು ಮುಖ್ಯರಾಗಿದ್ದರು. ಮೇಲಾಗಿ ಗುಪ್ತಸಂತತಿಯ ಕೊನೆಯ ರಾಜರುಗಳಿಗೆ ನಿಷ್ಠಾವಂತ ಅಧಿಕಾರಿಗಳ ಸೇವೆಯು ಮತ್ತು ಪ್ರಜೆಗಳ ಪ್ರೀತಿ ವಿಶ್ವಾಸಗಳು ಇಲ್ಲದೆ ಹೋದುದು ಗುಪ್ತರ ಅವನತಿಗೆ ಮತ್ತೊಂದು ಕಾರಣವಾಗಿತ್ತು.

### ಗುಪ್ತರ ಆಡಳಿತ ವ್ಯವಸ್ಥೆ

ಪ್ರಾಚೀನ ಭಾರತದಲ್ಲಿ ಮೌರ್ಯರ ನಂತರ ವಿಶಾಲ ಸಾಮ್ರಾಜ್ಯವನ್ನು ಬಹುದಕ್ಷತೆಯಿಂದ ಆಳಿದ ರಾಜರುಗಳಲ್ಲಿ ಗುಪ್ತರು ಎರಡನೆಯವರಾಗಿದ್ದಾರೆ. ಗುಪ್ತರ ಸಾಮ್ರಾಜ್ಯವು ಉತ್ತರದಲ್ಲಿ ಹಿಮಾಲಯ ಪರ್ವತದಿಂದ ಹಿಡಿದು ದಕ್ಷಿಣದಲ್ಲಿ ವಿಂಧ್ಯ ಪರ್ವತದವರೆಗೂ ಪೂರ್ವದಲ್ಲಿ ಬಂಗಾಳದಿಂದ ಪಶ್ಚಿಮದಲ್ಲಿ ವಾಯುವ್ಯ ಭಾರತದ ಕೆಲವು ಪ್ರದೇಶಗಳನ್ನು ಒಳಗೊಂಡಿತ್ತು. ಪಾಟಲೀಪುತ್ರವು ರಾಜಧಾನಿಯಾಗಿತ್ತು. ಎರಡನೇ ಚಂದ್ರಗುಪ್ತನ ಕಾಲದಲ್ಲಿ ಉಜ್ಜೈನಿಯು ಮತ್ತೊಂದು ರಾಜಧಾನಿಯಾಗಿತ್ತು. ಗುಪ್ತರ ದೊರೆಗಳು ಕೌಟಿಲ್ಯನ ಅರ್ಥಶಾಸ್ತ್ರದ ರಾಜಕೀಯ ಸಂಪ್ರದಾಯಗಳನ್ನೇ ಅಲ್ಲದೆ ಕಾಮಾಂಡಕನ ನೀತಿಸಾರ ಹಾಗೂ ಮತ್ತಿತರ ಧರ್ಮಶಾಸ್ತ್ರ ಗ್ರಂಥಗಳಲ್ಲಿನ ನೀತಿಗಳನ್ನು ತಮ್ಮ ಆಡಳಿತದಲ್ಲಿ ಅನುಸರಿಸಿದರು. ರಾಜನು ಆಡಳಿತದ ಕೇಂದ್ರ ಬಿಂದುವಾಗಿದ್ದನು. ರಾಜನ ಅಧಿಕಾರವು .ದೈವದತ್ತವಾದುದೆಂಬ ಕಲ್ಪನೆಯು ಇದ್ದಿತಾದರೂ ರಾಜನು ನಿರಂಕುಶ ಪ್ರಭುವಾಗಿರಲಿಲ್ಲ. ಗುಪ್ತರ ರಾಜರು ಕೇವಲ ರಾಜನ್ ಎಂಬ ಬಿರುದನ್ನು ಹೊಂದಿರುವುದರಿಂದಲೇ ತೃಪ್ತಿಪಟ್ಟುಕೊಳ್ಳದೆ 'ಮಹಾರಾಜಾಧಿರಾಜ' 'ಪರಮಭಟ್ಟಾರಕ' ಮತ್ತು 'ಪರಮದೈವತ್' ವಿಕ್ರಮಾದಿತ್ಯ' ಮಹೇಂದ್ರ ಮೊದಲಾದ ದೊಡ್ಡ ದೊಡ್ಡ ಬಿರುದುಗಳನ್ನು ಹೊಂದಿದ್ದರು. ಇದಲ್ಲದೆ ಸಮುದ್ರಗುಪ್ತ ಮೊದಲಾದವರು ತಮ್ಮನ್ನು ದೇವಾನುದೇವತೆಗಳಾದ ಇಂದ್ರ, ವರುಣ, ಕುಬೇರ, ಬೃಹಸ್ಪತಿ ಮೊದಲಾದ ದೇವತೆಗಳಿಗೆ ಸರಿಸಮಾನರೆಂದು ಹೇಳಿಕೊಂಡಿರುವರು. ರಾಜತ್ವವು ಸಾಮಾನ್ಯವಾಗಿ ವಂಶಾನುಗತವಾಗಿದ್ದರೂ ಅನೇಕ ವೇಳೆ ಈ ನಿಯಮವನ್ನು ಕೈಬಿಟ್ಟು ರಾಜರುಗಳು ತಮ್ಮ ಉತ್ತರಾಧಿಕಾರಿಗಳನ್ನು ದಕ್ಷತೆಯ ಮೇಲೆ ಆರಿಸುತ್ತಿದ್ದರು. ರಾಜನು ತನ್ನ ನಡತೆ, ಗುಣ, ವಿದ್ವತ್ತು ಧರ್ಮಪರಿಪಾಲನೆ, ಹಿರಿಯರ ಬಗ್ಗೆ ಗೌರವ. ಪ್ರಜಾಹಿತ ಚಿಂತನೆ ಮೊದಲಾದ ಆದರ್ಶ ಗುಣಗಳನ್ನು ಹೊಂದಿದ್ದುದು ಈ ಕಾಲದ ಸಂಪ್ರದಾಯವಾಗಿತ್ತು.

ಗುಪ್ತರ ದೊರೆಗಳ ಆಡಳಿತವು ಪ್ರಗತಿಪರವಾಗಿತ್ತು. ರಾಜನು ಸಾಮ್ರಾಜ್ಯದ ಸರ್ವೋತ್ಕೃಷ್ಟ ಅಧಿಕಾರಿಯಾಗಿದ್ದನು. ರಾಜನು ಆಡಳಿತದ ಮೇಲ್ವಿಚಾರಕನಾಗಿದ್ದುದಲ್ಲದೆ ನ್ಯಾಯದ ಅಂತಿಮ ತೀರ್ಪುಗಾರನೂ ಮತ್ತು ಸೈನ್ಯದ ಮೇಲ್ವಿಚಾರಕನೂ ಆಗಿದ್ದನು. ತನಗೆ ಆಡಳಿತದಲ್ಲಿ ಸಹಾಯ ಮಾಡಲು ರಾಜ್ಯದ ಹಿರಿಯ ಅಧಿಕಾರಿಗಳನ್ನು ಸ್ವತಃ ನೇಮಿಸಿಕೊಳ್ಳುತ್ತಿದ್ದನು. ಯುದ್ಧ ಕಾಲದಲ್ಲಿ ರಾಜನೇ ಸೈನ್ಯದ ನಾಯಕತ್ವವನ್ನು ವಹಿಸಿ ಯುದ್ಧಭೂಮಿಗೆ ಹೋಗುತ್ತಿದ್ದನು. ಶಾಂತಿಕಾಲದಲ್ಲಿ ರಾಜ್ಯದಲ್ಲಿ ಪ್ರವಾಸ ಕೈಗೊಂಡು ಪ್ರಜೆಗಳ ಕಷ್ಟ ಸುಖಗಳನ್ನು ವಿಚಾರಿಸಿ ಸೂಕ್ತಕ್ರಮಗಳನ್ನು ಕೈಗೊಳ್ಳುತ್ತಿದ್ದನು. ಆಡಳಿತದಲ್ಲಿ ರಾಜನಿಗೆ ಸಹಾಯಮಾಡಲು ಮಂತ್ರಿಮಂಡಲವಿದ್ದಿತು. ಪ್ರಧಾನ ಮಂತ್ರಿ, ಆರ್ಥಿಕ ಮಂತ್ರಿ, ಮಹಾಬಲಾಧಿಕೃತ, ಮೊದಲಾದ ಸಚಿವರ ಹೆಸರುಗಳು ಕಾಳಿದಾಸನ ಕೃತಿಗಳಲ್ಲಿ ಉಲ್ಲೇಖಿತವಾಗಿವೆ. ಇವರುಗಳಲ್ಲದೆ ಮಹಾದಂಡನಾಯಕ, ಸಂಧಿವಿಗ್ರಹಕ, ಯುವರಾಜನೂ ರಾಜನ ಮಂತ್ರಾಲೋಚನೆಯ ಸಭೆಗಳಲ್ಲಿ ಭಾಗವಹಿಸುತ್ತಿದ್ದರು. ಮಂತ್ರಾಲೋಚನ ಸಬೆಯು ರಾಜ್ಯದ ಪ್ರಮುಖ ವಿಷಯಗಳನ್ನು ಚರ್ಚಿಸಿ ತೀರ್ಮಾನ ಕೈಗೊಳ್ಳುತ್ತಿತ್ತು. ಮಂತ್ರಿ ಮಂಡಲದ ನಿರ್ಧಾರಗಳನ್ನು ಜಾರಿಗೆ ತರಲು ವಿವಿಧ ದರ್ಜೆಯ ಅಧಿಕಾರಿಗಳಿದ್ದರು. ಅವರಲ್ಲಿ ಕುಮಾರ ಅಮಾತ್ಯರು ಎಂದು ಕರೆಯಲ್ಪಡುತ್ತಿದ್ದ ಅಧಿಕಾರಿಗಳು ಕೇಂದ್ರ ಸರ್ಕಾರದ ಕಾರ್ಯಾಲಯದಲ್ಲಿ ಹೆಚ್ಚು ಪ್ರಮುಖರಾದವರು. ಕೆಲವು ಕುಮಾರ ಅಮಾತ್ಯರು ಪ್ರಾಂತ್ಯಗಳ ಸರ್ಕಾರದ ಮುಖ್ಯಾಧಿಕಾರಿಗಳೂ ಆಗಿದ್ದರು. ಸಮುದ್ರ ಗುಪ್ತನ ಮಂತ್ರಿಯಾಗಿದ್ದ ಹರಿಷೇಣ, ಎರಡನೇ ಚಂದ್ರಗುಪ್ತನ ಸಚಿವನಾಗಿದ್ದ ಶಿಖರಸ್ವಾಮಿ, ಕುಮಾರ ಗುಪ್ತನ ಮಂತ್ರಿಯಾಗಿದ್ದ ಪೃಥ್ವಿಸೇನ ಈ ವರ್ಗಕ್ಕೆ ಸೇರಿದ್ದರು. ಇವರುಗಳಲ್ಲದೆ ಉಪಾರಿಕರು ಅಮಾತ್ಯರು ಮತ್ತು ಆಯುಕ್ತರು ಎಂಬ ಬೇರೆ ಬೇರೆ ಅಧಿಕಾರಿಗಳೂ ಇದ್ದರು. ಆದರೆ ಇವರ ಕೆಲಸ ಕಾರ್ಯಗಳ ಬಗೆಗೆ ಹೆಚ್ಚಿನ ವಿವರಗಳು ತಿಳಿದು ಬಂದಿಲ್ಲ.

ಗುಪ್ತರು ತಮ್ಮ ವಿಶಾಲವಾದ ಸಾಮ್ರಾಜ್ಯವನ್ನು ಆಡಳಿತಾನುಕೂಲಕ್ಕಾಗಿ ದೇಶ', 'ಭುಕ್ತಿ' ಮತ್ತು 'ವಿಷಯ'ಗಳೆಂದು ವಿಂಗಡಿಸಿಕೊಂಡಿದ್ದರು. ಪ್ರತಿಯೊಂದು ದೇಶ ಅಥವ ಪ್ರಾಂತ್ಯವನ್ನು ಅನೇಕ ಭುಕ್ತಿಗಳನ್ನಾಗಿಯೂ, ಭುಕ್ತಿಗಳನ್ನು ವಿಷಯಗಳನ್ನಾಗಿಯೂ ವಿಂಗಡಿಸಲಾಗಿತ್ತು. ಭುಕ್ತಿಗಳ ಮೇಲ್ವಿಚಾರಣೆಯನ್ನು ನೋಡಿಕೊಳ್ಳುತ್ತಿದ್ದ ಅಧಿಕಾರಿಗಳಿಗೆ 'ಉಪಾರಿಕ'ರೆಂತಲೂ ವಿಷಯ ಅಥವ ಜಿಲ್ಲೆಗಳ ಮೇಲ್ವಿಚಾರಣೆಯನ್ನು ನೋಡಿಕೊಳ್ಳುತ್ತಿದ್ದ ಅಧಿಕಾರಿಗೆ 'ವಿಷಯಪತಿ' ಎಂತಲೂ ಕರೆಯುತ್ತಿದ್ದರು. ಇವರ ಸಹಾಯಕ್ಕಾಗಿ ವಿವಿಧ ದರ್ಜೆಯ ಅಧಿಕಾರಿಗಳಿದ್ದರು. ಈ ಕಾಲದಲ್ಲಿ ಗೂಢಾಚಾರ ಪದ್ಧತಿಯು ಇದ್ದುದಾಗಿ ಕಂಡುಬರುವುದಿಲ್ಲ. ನಗರ ಪ್ರದೇಶಗಳಲ್ಲಿ ಪುರ ಅಥವ ನಗರವೂ ಗ್ರಾಮಾಂತರ ಪ್ರದೇಶಗಳಲ್ಲಿ ಗ್ರಾಮವೂ ಆಡಳಿತದ ಘಟಕಗಳಾಗಿದ್ದವು. ಪಾಟಲೀಪುತ್ರ, ಆಯೋಧ್ಯೆ ಉಜ್ಜೈನಿಯು ಈ ಕಾಲದ ಪ್ರಮುಖ ನಗರಗಳಾಗಿದ್ದವು. ಗ್ರಾಮಗಳ ಉಸ್ತುವಾರಿಯನ್ನು ಗ್ರಾಮ ಸಭೆಗಳು ನೋಡಿಕೊಳ್ಳುತ್ತಿದ್ದವು ಮತ್ತು ಅವುಗಳು ಸಾಕಷ್ಟು ಸ್ಥಳೀಯ ಸ್ವಾತಂತ್ರ್ಯವನ್ನು ಹೊಂದಿದ್ದವು.

**ಸಾಮಾಜಿಕ ಸ್ಥಿತಿ**

ಗುಪ್ತರ ಕಾಲದ ಸಾಮಾಜಿಕ ಸ್ಥಿತಿಗತಿಗಳನ್ನು ತಿಳಿಯಲು ಚೀನೀಯಾತ್ರಿಕ ಫಾಹಿಯಾನನ ಬರವಣಿಗೆಗಳು ಮುಖ್ಯ ಆಧಾರಗಳಾಗಿವೆ. ಭಾರತವನ್ನು ಸಂದರ್ಶಿಸಿದ್ದ

ಮೂವರು ಚೀನೀ ಯಾತ್ರಿಕರಲ್ಲಿ ಇವನು ಮೊಟ್ಟ ಮೊದಲಿಗನು. ಫಾಹಿಯಾನನು ಗುಪ್ತರ ದೊರೆ ಎರಡನೇ ಚಂದ್ರಗುಪ್ತನು ರಾಜ್ಯವಾಳುತ್ತಿದ್ದಾಗ ಕ್ರಿ.ಶ. 399ರಲ್ಲಿ ಭಾರತಕ್ಕೆ ಬಂದನು. ಇವನ ಮೊದಲ ಹೆಸರು ಕುಂಗ್ ಎಂದಿದ್ದಿತು. ಇವನ ತಂದೆಯು ಬೌದ್ಧಮತದಲ್ಲಿ ಆಸಕ್ತಿಯುಳ್ಳವನಾಗಿದ್ದು ಇವನನ್ನು ಬೌದ್ಧ ಸನ್ಯಾಸಾಶ್ರಮಕ್ಕೆ ವಿದ್ಯಾರ್ಜನೆಗೆ ಕಳುಹಿಸಿದ್ದನು. ಆದರೆ ಫಾಹಿಯಾನನ ತಂದೆಯು ಅವನಿಗೆ ಹತ್ತುವರ್ಷವಾಗಿದ್ದಾಗಲೇ ತೀರಿಕೊಂಡನು. ಅನಂತರ ಕುಂಗ್ ತನ್ನ ಚಿಕ್ಕಪ್ಪನ ಸಲಹೆಯ ಮೇರೆಗೆ ಸನ್ಯಾಸಶ್ರಮವನ್ನು ಬಿಟ್ಟು ತನ್ನ ತಾಯಿಯ ಉಸ್ತುವಾರಿ ನೋಡಿಕೊಳ್ಳಲು ಸ್ವಗ್ರಾಮಕ್ಕೆ ಹಿಂದಿರುಗಿದನು. ಕೆಲವು ವರ್ಷಗಳಲ್ಲಿಯೆ ಅವನ ತಾಯಿಯೂ ತೀರಿಕೊಂಡಳು. ಇದಾದ ನಂತರ ಕುಂಗ್ ಬೌದ್ಧ ಧರ್ಮದ ಬಗ್ಗೆ ಹೆಚ್ಚಿಗೆ ಅಧ್ಯಯನ ಮಾಡಲು ನಿರ್ಧರಿಸಿ ಅದಕ್ಕಾಗಿ ತನ್ನ ಜೀವಮಾನವನ್ನೆಲ್ಲಾ ಮುಡಿಪಾಗಿಟ್ಟನು. ಅನಂತರ ಕುಂಗ್ ಎಂಬ ಹೆಸರಿಗೆ ಬದಲಾಗಿ ಷಿಹ್ ಫಾಹಿಯಾನ್ (ಷಿಹ್ ಎಂಬುದು ಶಾಕ್ಯ ಪುತ್ರ ಎಂಬ ಹೆಸರಿನ ಸಂಕ್ಷಿಪ್ತ ಹೆಸರು) ಎಂಬ ಹೆಸರಿಟ್ಟುಕೊಂಡನು. ಅಲ್ಪ ಕಾಲದಲ್ಲಿಯೆ ಜ್ಞಾನ ಸಂಪಾದನೆಯಿಂದ ಇವನ ಹೆಸರು ಎಲ್ಲೆಲ್ಲಿಯೂ ಕೇಳಿ ಬಂದಿತು. ಫಾಹಿಯಾನನಿಗೆ ಬೌದ್ಧ ಧರ್ಮದ ಜನ್ಮಭೂಮಿಯಾದ ಭಾರತಕ್ಕೆ ಭೇಟಿ ನೀಡಿ ಆ ಧರ್ಮದ ಬಗ್ಗೆ ಹೆಚ್ಚು ತಿಳಿಯುಬೇಕೆಂಬ ಅಪೇಕ್ಷೆಯು ಬಲವಾಯಿತು. ಅವನು ಕ್ರಿ.ಶ. 399ರಲ್ಲಿ ಚೀನಾವನ್ನು ಬಿಟ್ಟು ಭಾರತಕ್ಕೆ ಬಂದನು. ಫಾಹಿಯಾನನ ಪ್ರಯಾಣವು ಅತ್ಯಂತ ಕಷ್ಟಕರವಾಗಿತ್ತು. ಅವನು ಗೋಬಿ ಮರುಭೂಮಿಯ ಮೂಲಕ ಪ್ರಯಾಣ ಮಾಡಿ ಖೋಟಾನ್ ತಲುಪಿದನು. ಅಲ್ಲಿನ ಬೌದ್ಧ ಸಂಘರಾಮದಲ್ಲಿದ್ದ ಸನ್ಯಾಸಿಗಳು ಅವನನ್ನು ಆದರದಿಂದ ಬರಮಾಡಿಕೊಂಡು ಸತ್ಕರಿಸಿದರು. ಫಾಹಿಯಾನನು ಕೆಲವು ದಿವಸಗಳು ಅಲ್ಲಿ ತಂಗಿದ್ದು ತನ್ನ ದಣಿವನ್ನು ಪರಿಹರಿಸಿಕೊಂಡು ಅನಂತರ ಪ್ರಯಾಣವನ್ನು ಮುಂದುವರಿಸಿ ಭಾರತವನ್ನು ಪ್ರವೇಶಿಸಿದನು. ಫಾಹಿಯಾನ್ ಮತ್ತು ಅವನ ಪರಿವಾರದವರು ಗಾಂಧಾರ, ತಕ್ಷಶಿಲ ಮತ್ತು ಪುರುಷ ಪುರಗಳಿಗೆ ಭೇಟಿಯಿತ್ತು ಅನಂತರ ಮಥುರವನ್ನು ತಲುಪಿದರು. ಮಥುರದಲ್ಲಿದ್ದ ಬೌದ್ಧ ಸನ್ಯಾಸಿಗಳು ಅವರನ್ನು ಆದರದಿಂದ ಸ್ವಾಗತಿಸಿದರು. ಫಾಹಿಯಾನನು ಅಲ್ಲಿಂದ ಬುದ್ಧನ ಜೀವನಕ್ಕೆ ಸಂಬಂಧಿಸಿದ ಎಲ್ಲ ಪವಿತ್ರ ಸ್ಥಳಗಳಿಗೂ ಭೇಟಿ ಕೊಟ್ಟನು. ಸ್ರಾವಷ್ಠಿಯಲ್ಲಿನ ಬೌದ್ಧ ಭಿಕ್ಷುಗಳನ್ನು ಭೇಟಿ ಮಾಡಿ, ರಾಜಗೃಹಕ್ಕೆ ಬಂದನು. ಅಲ್ಲಿಂದ ಬೌದ್ಧಗಯೆಯನ್ನು ತಲುಪಿದನು. ಈಗ ಫಾಹಿಯಾನನು ಬೌದ್ಧಮತದ ಹೃದಯದಭೂಮಿಲ್ಲಿದ್ದನು. ಬೌದ್ಧಗಯೆಯಲ್ಲಿ ಬುದ್ಧನ ಜೀವನಕ್ಕೆ ಸಂಬಂಧಪಟ್ಟ ಸ್ಥಳಗಳ ಬಗ್ಗೆ ಹೆಚ್ಚನ ಮಾಹಿತಿ ಪಡೆದನು. ಅನಂತರ ಕನೂಜ್, ಸಾಕೇತ, ಕಪಿಲವಸ್ತು ವೈಶಾಲಿ ಮತ್ತು ಕೌಸಂಬಿಗಳಿಗೆ ಭೇಟಿ ನೀಡಿ ಅಲ್ಲಿಂದ ಮುಂದುವರಿದು ಪಾಟಲೀಪುತ್ರವನ್ನು ತಲುಪಿದನು. ಪಾಟಲೀಪುತ್ರದಲ್ಲಿ ಅವನು ವಿನಯ ಪಿಟಕದ ಮೂಲ ಪ್ರತಿಯನ್ನು ಪಡೆದು ಅದರ ಅಧ್ಯಯನದಲ್ಲಿ ತೊಡಗಿದನು. ಫಾಹಿಯಾನನು ಪಾಟಲೀಪುತ್ರದಲ್ಲಿ ಮೂರು ವರ್ಷಗಳ ಕಾಲ ತಂಗಿದ್ದು ಸಂಸ್ಕೃತ ಮತ್ತು ಪಾಳೀ ಭಾಷೆಗಳನ್ನು ಕಲಿತನು. ಅನಂತರ ಅವನು ಕ್ರಿ.ಶ. 413ರಲ್ಲಿ ಭಾರತವನ್ನು ಬಿಟ್ಟು ಸ್ವದೇಶಕ್ಕೆ ಹಿಂದಿರುಗಿದನು. ಚೀನಾವನ್ನು ತಲುಪಿದ ನಂತರ ಫಾಹಿಯಾನನು ತನ್ನ ಹದಿನಾಲ್ಕು ವರ್ಷಗಳ ಪ್ರವಾಸದ ಅನುಭವಗಳನ್ನು ಬರೆಯುವುದರಲ್ಲಿ ನಿರತನಾದನು. ಅವನು 'ಪೊ-ಕಾ-ಕಿ' (Fo-Kwo-Ki) ಕೃತಿಯನ್ನು ಚೀನೀಯರ ದೊರೆ ಚೌ ಎಂಬವನ ಸನ್ಯಾಸಾಶ್ರಮದಲ್ಲಿ

ಬರೆದು ಮುಗಿಸಿದನು. ಇದಲ್ಲದೆ ಫಾಹಿಯಾನನು ಬೌದ್ಧಧರ್ಮದ ಕೃತಿಗಳನ್ನು ಬುದಭದ್ರ ಎಂಬ ಭಾರತೀಯ ವಿದ್ವಾಂಸನ ಸಹಾಯದಿಂದ ಚೀನೀ ಭಾಷಗೆ ಭಾಷಾಂತರಿಸಿದನು. ಫಾಹಿಯಾನನ ಬರವಣಿಗೆಯು ಈ ಕಾಲದ ಇತಿಹಾಸ ರಚನೆಗೆ ಅತ್ಯಮೂಲ್ಯ ಆಧಾರವಾಗಿದೆ.

ಫಾಹಿಯಾನನ ಬರವಣಿಗೆಯಿಂದ ಗುಪ್ತರ ಸರ್ಕಾರವು ಪ್ರಗತಿಪರವಾಗಿದ್ದಿತ್ತೆಂದು ತಿಳಿದುಬರುತ್ತದೆ. ಸರ್ಕಾರದ ಅಧಿಕಾರಿಗಳಿಗೆ ಸಂಬಳವನ್ನು ನಿಯಮಾನುಸಾರವಾಗಿ ಕೊಡಲಾಗುತ್ತಿತ್ತು. ತೆರಿಗೆಗಳು ನ್ಯಾಯಸಮ್ಮತವಾಗಿದ್ದವು. ಪ್ರಜೆಗಳು ಪ್ರಾಮಾಣಿಕರಾಗಿದ್ದು ಜನರ ನೈತಿಕ ಮಟ್ಟವು ಉನ್ನತಮಟ್ಟದಲ್ಲಿತ್ತು. ಅಪರಾಧದ ಕಾನೂನುಗಳು ಮೌರ್ಯರ ಕಾಲದಲ್ಲಿದ್ದಷ್ಟು ಕಠಿಣವಾಗಿರಲಿಲ್ಲ. ಪದೇ ಪದೇ ಕಳ್ಳತನ ಮತ್ತು ದರೋಡೆಗಳನ್ನು ಮಾಡಿದ ಅಪರಾಧಿಗಳಿಗೆ ಮರಣದಂಡನೆಗೆ ಬದಲಾಗಿ ಅವರ ಬಲಗೈಯನ್ನು ಕತ್ತರಿಸಿಹಾಕಲಾಗುತ್ತಿತ್ತು. ಪ್ರವಾಸಿಗರಿಗೆ ಎಲ್ಲ ಸೌಲಭ್ಯಗಳು ದೊರೆಯುತ್ತಿದ್ದವು. ಜಾತಿಪದ್ಧತಿಯು ರೂಢಿಯಲ್ಲಿತ್ತು. ಆದರೆ ಸಮಾಜದಲ್ಲಿ ವಿಕಾಸತೆಯು ಕಂಡುಬರುತ್ತಿತ್ತು. ಇದರಿಂದ ಜಾತಿಯ ನಿಯಮಗಳು ಕಟ್ಟುನಿಟ್ಟಾಗಿರಲಿಲ್ಲವೆಂದೂ ಮತ್ತು ತಮಗಿಷ್ಟಬಂದ ವೃತ್ತಿಗಳನ್ನು ಕೈಗೊಳ್ಳಬಹುದಿತ್ತೆಂದು ಹೇಳುತ್ತಾನೆ. ಬ್ರಾಹ್ಮಣರು ಸೈನಿಕ ವೃತ್ತಿ, ವ್ಯಾಪಾರ ಮೊದಲಾದ ವೃತ್ತಿಗಳನ್ನು ಕೈಗೊಂಡಿದ್ದರು. ಇದಲ್ಲದೆ ಬ್ರಾಹ್ಮಣ ಜಾತಿಗೆ ಸೇರಿದವರು ರಾಜರುಗಳಾಗಿ ರಾಜವಂಶಗಳನ್ನು ಸ್ಥಾಪಿಸಿ ರಾಜ್ಯವಾಳಿದದುಕ್ಕೆ ಹಾಗೂ ಸೈನ್ಯದ ಮಹಾದಂಡನಾಯಕರುಗಳಾಗಿ ಸೇವೆ ಸಲ್ಲಿಸುದುದಕ್ಕೆ ಹಲವಾರು ನಿದರ್ಶನಗಳು ಈ ಕಾಲದಲ್ಲಿ ಕಂಡುಬರುತ್ತವೆ. ಅಂತೆಯೆ ಸೈನ್ಯದಲ್ಲಿ ವೈಶ್ಯರೂ ಮತ್ತು ಶೂದ್ರರೂ ಸೇವೆ ಸಲ್ಲಿಸುತ್ತಿದ್ದರು. ವಿವಾಹಗಳ ಮೂಲಕ ವಿದೇಶೀಯರು ಹಿಂದೂ ಸಮಾಜದಲ್ಲಿ ಸೇರ್ಪಡೆಗೊಂಡರೂ ಅಂತರ್ಜಾತೀಯ ವಿವಾಹಗಳಿಗೆ ಕೆಲವು ಕಟ್ಟುಪಾಡುಗಳಿದ್ದವು. ಸಂಪ್ರದಾಯ ಶರಣ ಹಿಂದುಗಳು ಕುಲ ಗೋತ್ರಗಳನ್ನು ಬಿಟ್ಟು ಬೇರೆ ವಿವಾಹಗಳನ್ನು ಅನುಮೋದಿಸುತ್ತಿರಲಿಲ್ಲ. ವಿವಾಹ ಸಂಬಂಧಗಳು, ಉಟೋಪಚಾರಗಳು ಮೊದಲಾದವುಗಳಲ್ಲಿ ಜಾತಿಯ ನಿಯಮಗಳನ್ನು ಅವರು ಕಟ್ಟುನಿಟ್ಟಾಗಿ ಅನುಸರಿಸುತ್ತಿದ್ದರು. ಪ್ರಗತಿಪರವಾಗಿದ್ದ ಗುಪ್ತರ ಕಾಲದಲ್ಲೂ ಹಿಂದೂ ಸಮಾಜದಲ್ಲಿ ಜಾತೀಯತೆಯ ಅನಾರೋಗ್ಯ ವಾತಾವರಣವಿದ್ದುದು ಶೋಚನೀಯ ಸಂಗತಿ.

ಅವಿಭಕ್ತ ಕುಟುಂಬ ಪದ್ಧತಿಯು ರೂಢಿಯಲ್ಲಿತ್ತು. ವಿವಾಹ ಸಂಬಂಧವನ್ನು ಪವಿತ್ರವೆಂದು ಪರಿಗಣಿಸಲಾಗಿತ್ತು. ರಾಜರುಗಳು ಮತ್ತು ಧನಿಕರು ಬಹುಪತ್ನಿತ್ವವನ್ನು ಅನುಸರಿಸುತ್ತಿದ್ದರು. ಸ್ತ್ರೀಯರ ಸ್ಥಾನಮಾನಗಳು ಅನೇಕ ಕಾರಣಗಳಿಂದ ಹಿಂದುಳಿದಿದ್ದವು ಮತ್ತು ಅವರ ವಿದ್ಯಾಭ್ಯಾಸಕ್ಕೆ ಹೆಚ್ಚಿನ ಉತ್ತೇಜನವಿದ್ದುದಾಗಿ ಕಂಡುಬರುವುದಿಲ್ಲ. ಜನರ ಆಹಾರ ಮತ್ತು ಉಡುಗೆ ತೊಡಿಗೆಗಳು ಸರಳವಾಗಿದ್ದವು. ಫಾಹಿಯಾನನು ಜನರು ಅತ್ಯಂತ ಸರಳರೂ ಮತ್ತು ಮೃದುಸ್ವಭಾವದರೂ ಆಗಿದ್ದರೆಂದು ಹೇಳುತ್ತಾನೆ. ಜನರು ಸಸ್ಯಹಾರಿಗಳಾಗಿದ್ದರು. ಮಧ್ಯಮಾಂಸಗಳನ್ನು ಎಲ್ಲರೂ ಸೇವಿಸುತ್ತಿರಲಿಲ್ಲ, ವಿದೇಶೀಯರ ಸಂಪರ್ಕದಿಂದ ಉತ್ತರ ಭಾರತದ ರಾಜರುಗಳ ಉಡುಗೆ ತೊಡುಗೆಗಳಲ್ಲಿ ಬದಲಾವಣೆಗಳಾಗಿ ಕೋಟು ಮತ್ತು ಷರಾಯಿಗಳನ್ನು ತೊಡುತ್ತಿದ್ದರು. ಆದರೆ ಜನಸಾಮಾನ್ಯರ ಉಡುಗೆ ತೊಡುಗೆಗಳಲ್ಲಿ ಹಿಂದಿನ ಪದ್ಧತಿಯೇ

ಮುಂದುವರಿದಿತ್ತು. ಗಂಡಸರು ಮತ್ತು ಹೆಂಗಸರು ಆಭರಣ ಪ್ರಿಯರಾಗಿದ್ದರು. ಜಾತ್ರೆ, ಉತ್ಸವ, ಹಬ್ಬ ಹರಿದಿನಗಳು ಜನಸಾಮಾನ್ಯರ ಮನರಂಜನೆಗಳಾಗಿದ್ದವು.

**ಆರ್ಥಿಕ ಪರಿಸ್ಥಿತಿ**

ಗುಪ್ತರ ದೊರೆಗಳು ಪ್ರಜೆಗಳ ಆರ್ಥಿಕಾಭಿವೃದ್ಧಿಗೆ ಹೆಚ್ಚಿನ ಗಮನ ಕೊಟ್ಟಿದ್ದರು. ರೈತರಿಗೆ ಸರ್ಕಾರದ ಕಿರುಕುಳವಿರಲಿಲ್ಲ. ರೈತರು ಹೇರಳವಾಗಿ ಫಸಲನ್ನು ಬೆಳೆಯುತ್ತಿದ್ದರು. ವ್ಯವಸಾಯವು ಜನರ ಪ್ರಧಾನ ಕಸುಬಾಗಿದ್ದರಿಂದ ರಾಜರುಗಳು ಕೆರೆ ಕಟ್ಟೆಗಳನ್ನು, ಕಾಲುವೆಗಳನ್ನು ಮತ್ತು ಅಣೆಕಟ್ಟುಗಳನ್ನು ನಿರ್ಮಿಸಿ ವ್ಯವಸಾಯಕ್ಕೆ ಪ್ರೋತ್ಸಾಹ ನೀಡಿದ್ದರು. ಕೈಗಾರಿಕೆ ವ್ಯಾಪಾರ ವಾಣಿಜ್ಯಗಳಿಗೆ ಉತ್ತೇಜನ ನೀಡಲಾಗಿತ್ತು. ವ್ಯಾಪಾರವು ಆಂತರಿಕವಾಗಿಯೆ ಅಲ್ಲದೆ ವಿದೇಶಗಳೊಂದಿಗೂ ಬಹಳ ಬಿರುಸಾಗಿ ನಡೆಯುತ್ತಿತ್ತು. ಗುಪ್ತರ ಸಾಮ್ರಾಜ್ಯದಲ್ಲಿ ಅನೇಕ ನಗರಗಳು ಶ್ರೀಮಂತಿಕೆಯಿಂದ ತುಂಬಿತುಳುಕುತ್ತಿದ್ದು ಜನಸಂದಣಿಯು ಕಂಡುಬರುತ್ತಿತ್ತು. ಎರಡನೆ ಚಂದ್ರಗುಪ್ತನು ಸೌರಾಷ್ಟ್ರ ಪ್ರದೇಶವನ್ನು ಗೆದ್ದು ವಶಪಡಿಸಿಕೊಂಡ ಮೇಲೆ ಅಲ್ಲಿನ ಸಂಪದ್ಭರಿತ ನಗರಗಳು ಮತ್ತು ರೇವುಗಳು ಗುಪ್ತರ ಸಾಮ್ರಾಜ್ಯದಲ್ಲಿ ಸೇರಿ ಸಾಮ್ರಾಜ್ಯದ ಶ್ರೀಮಂತಿಕೆಯನ್ನು ದ್ವಿಗುಣಗೊಳಿಸಿದವು. ಹಾಗೂ ಮತ್ತಿತರ ಪಾಶ್ಚಾತ್ಯ ರಾಜ್ಯಗಳೊಂದಿಗೆ ನಡೆಯುತ್ತಿದ್ದ ವ್ಯಾಪಾರದಿಂದ ಅಪಾರ ಚಿನ್ನವು ಭಾರತಕ್ಕೆ ಹರಿದು ಬಂದಿತು. ವರ್ತಕರು ವೃತ್ತಿ ಸಂಘಗಳನ್ನು ಏರ್ಪಡಿಸಿಕೊಂಡಿದ್ದರು ಮತ್ತು ಈ ವೃತ್ತಿ ಸಂಘಗಳು ದೇಶದ ಆರ್ಥಿಕ ಜೀವನದಲ್ಲಿ ಬಹುಮುಖ್ಯ ಪಾತ್ರವಹಿಸಿದ್ದವು. ವೃತ್ತಿ ಸಂಘಗಳು, ಕೈಗಾರಿಕೆಗಳ ಬ್ಯಾಂಕಿಂಗ್ ವ್ಯವಹಾರಗಳ ಮತ್ತು ವ್ಯಾಪಾರದ ಚಟುವಟಿಕೆಗಳ ನಾಬಿಗಳಾಗಿದ್ದವು. ವ್ಯಾಪಾರದಲ್ಲಿ ಚಿನ್ನ, ಬೆಳ್ಳಿ ಮತ್ತು ತಾಮ್ರದ ನಾಣ್ಯಗಳನ್ನು ಬಳಸಲಾಗುತ್ತಿತ್ತು, ಸರ್ಕಾರವು ವಿವಿಧ ರೀತಿಯ ತೆರಿಗೆಗಳನ್ನು ವಿಧಿಸಿ ಖಜಾನೆಯನ್ನು ತುಂಬಿಕೊಳ್ಳುತ್ತಿತ್ತು. ಭೂ ಕಂದಾಯವು ಸರ್ಕಾರದ ಮುಖ್ಯ ವರಮಾನವಾಗಿದ್ದು ರೈತರು ಬೆಳೆದ ಫಸಲಿನಲ್ಲಿ ಷಡ್ಭಾಗವನ್ನು ಕಂದಾಯದ ರೂಪದಲ್ಲಿ ವಸೂಲಿ ಮಾಡಿಕೊಳ್ಳುತ್ತಿತ್ತು. ಭೂಕಂದಾಯವಲ್ಲದೆ ಉಪ್ಪಿನ ತೆರಿಗೆ, ಗಣಿ ಉದ್ಯಮಗಳ ಮೇಲಿನ ತೆರಿಗೆ, ವೃತ್ತಿ ಸಂಘಗಳ ಮೇಲಿನ ತೆರಿಗೆ, ದಂಡ ಮೊದಲಾದವುಗಳಿಂದ ಬರುತ್ತಿದ್ದ ಹಣವು ಸರ್ಕಾರದ ಇತರ ವರಮಾನಗಳಾಗಿದ್ದವು. ಒಟ್ಟಾರೆ ಸಾಮ್ರಾಜ್ಯದ ಆರ್ಥಿಕ ಸ್ಥಿತಿಯು ತೃಪ್ತಿಕರವಾಗಿದ್ದಿತು.

**ಧಾರ್ಮಿಕ ಸ್ಥಿತಿ**

ಹಿಂದೂ ಧರ್ಮವು ವೈಷ್ಣವ ಮತ್ತು ಶೈವಧರ್ಮಗಳೋಪಾದಿಯಲ್ಲಿ ಮುನ್ನಡೆ ಕಂಡಿತು. ಗುಪ್ತರ ದೊರೆಗಳು ವೈಷ್ಣವ ಮತಾವಲಂಬಿಗಳಾಗಿದ್ದು ಆ ಮತಕ್ಕೆ ಪ್ರೋತ್ಸಾಹ ನೀಡಿದ್ದರಿಂದ ಅದು ಹೆಚ್ಚು ಜನಪ್ರಿಯವಾಯಿತು. ಈ ಕಾಲದಲ್ಲಿ ವೈಷ್ಣವ ಪಂಥವು ಜನಾನುರಾಗಿಯಾಯಿತು. ವಿಷ್ಣುವನ್ನು ನಾರಾಯಣ, ಕೃಷ್ಣ, ಕೇಶವ, ಮಾಧವ, ಪೀತಾಂಬರ, ಅಚ್ಯುತ, ಪುಂಡರೀಕಾಕ್ಷ, ಉಪೇಂದ್ರ ಮುಕುಂದ, ಜನಾರ್ಧನ ಎಂಬ ಅನೇಕ ಹೆಸರುಗಳಿಂದಲೂ ಶಿವನನ್ನು ಶಂಭು, ಈಶ, ವಿರೂಪಾಕ್ಷ, ತ್ರಿಲೋಚನ, ಪಿನಾಕಿನ್, ನೀಲಲೋಹಿತ, ತ್ರಿಯಾಂಬಕ, ಉಮಾಪತಿ, ರುದ್ರ ಎಂಬ ಹೆಸರುಗಳಿಂದಲೂ ಪೂಜಿಸ ತೊಡಗಿದರು. ಜನರು ಧಾರ್ಮಿಕ ಸ್ವಾತಂತ್ರ್ಯವನ್ನು

ಹೊಂದಿದ್ದರು. ಗುಪ್ತರ ದೊರೆಗಳು ಪರಮತಸಹಿಷ್ಣುಗಳಾಗಿದ್ದು ಎಲ್ಲ ಮತಗಳಿಗೂ ಪ್ರೋತ್ಸಾಹ ನೀಡಿದ್ದರು. ಸರ್ಕಾರದ ಸೇವೆಯಲ್ಲಿ ಧಾರ್ಮಿಕ ಭೇದ ಭಾವನೆಗಳಿಲ್ಲದೆ ಎಲ್ಲ ಧರ್ಮದವರನ್ನು ಪ್ರತಿಭಾ ಸಾಮರ್ಥ್ಯಗಳ ಆಧಾರದ ಮೇಲೆ ನೇಮಿಸಿಕೊಂಡಿದ್ದರು. ಬೌದ್ಧಧರ್ಮದ ಅಧ್ಯಯನದ ಪ್ರಮುಖ ಕೇಂದ್ರವಾಗಿದ್ದ ನಳಂದ ವಿದ್ಯಾಪೀಠಕ್ಕೆ ಗುಪ್ತರ ದೊರೆಗಳು ಉದಾರವಾಗಿ ದಾನದತ್ತಿಗಳನ್ನು ನೀಡಿದ್ದರು. ಈ ಕಾಲದಲ್ಲಿ ಹಿಂದೂ ಬೌದ್ಧ ಮತ್ತು ಜೈನಧರ್ಮಗಳ ನಡುವೆ ಪರಸ್ಪರ ಅನ್ಯೋನ್ಯತೆ ಕಂಡುಬರುತ್ತಿತ್ತು.

ಗುಪ್ತರ ಕಾಲವು ಹಿಂದೂಧರ್ಮದ ಪುನರುಜ್ಜೀವನದ ಕಾಲವಾಗಿತ್ತು. ಶುಂಗ ಸಂತತಿಯವರಿಂದ ಆರಂಭವಾದ ವೈದಿಕ ಧರ್ಮದ ಪುನರುಜ್ಜೀವನ ಕಾರ್ಯವು ಗುಪ್ತರ ಕಾಲದಲ್ಲಿ ಪೂರ್ಣಗೊಂಡಿತು. ಹಿಂದೂಧರ್ಮವು ಪ್ರಬಲ ಧರ್ಮವಾಗಿ ಮಾರ್ಪಡಲು ಅನೇಕ ಕಾರಣಗಳಿದ್ದವು. ಗುಪ್ತರ ದೊರೆಗಳು ಹಿಂದೂಧರ್ಮಕ್ಕೆ ನೀಡಿದ ಪ್ರೋತ್ಸಾಹ ಈ ಕಾಲದಲ್ಲಿ ರಚಿತವಾದ ಧರ್ಮಶಾಸ್ತ್ರಗ್ರಂಥಗಳು ಪುರಾಣಗಳು ಹಾಗೂ ಮತ್ತಿತರ ಸಾಹಿತ್ಯ ಕೃತಿಗಳಲ್ಲಿ ಹಿಂದೂಧರ್ಮದ ಪ್ರತಿಪಾದನೆ, ಭಕ್ತಿಚಳುವಳಿ, ದೇವಾಲಯಗಳ ನಿರ್ಮಾಣ, ಧಾರ್ಮಿಕ ಹಬ್ಬಹರಿದಿನಗಳ ಆಚರಣೆ ಮೊದಲಾದವುಗಳು ಜನರನ್ನು ಹೆಚ್ಚು ಆಕರ್ಷಿಸಿ ಹಿಂದೂ ಧರ್ಮವನ್ನು ಪ್ರಬಲ ಧರ್ಮವನ್ನಾಗಿ ಮಾಡಿದವು. ಗುಪ್ತರಂತೆಯೆನಾಗ ಮತ್ತು ವಾಕಾಟಕ ಸಂತತಿಯವರೂ ವೈದಿಕಧರ್ಮಕ್ಕೆ ನೀಡಿದ ಪ್ರೋತ್ಸಾಹವೂ ಹಿಂದೂಧರ್ಮದ ಪ್ರಾಬಲ್ಯಕ್ಕೆ ಮತ್ತೊಂದು ಕಾರಣವಾಗಿತ್ತು.

### ಗುಪ್ತರ ಕಾಲದ ಸುವರ್ಣಯುಗ

ಪ್ರಾಚೀನ ಭಾರತದ ಇತಿಹಾಸದಲ್ಲಿ ಗುಪ್ತರ ಆಳ್ವಿಕೆಯ ಕಾಲವನ್ನು ಸುವರ್ಣಯುಗವೆಂದು ಕರೆಯಲಾಗಿದೆ. ಗುಪ್ತರಾಜರುಗಳ ಪ್ರಗತಿಪರ ಆಳ್ವಿಕೆಯಿಂದಲೂ, ಹೊರದೇಶಗಳೊಂದಿಗೆ ನಡೆಯುತ್ತಿದ್ದ ಲಾಭದಾಯಕವಾದ ವ್ಯಾಪಾರದಿಂದಲೂ ಮತ್ತು ಉತ್ತಮ ರೀತಿಯ ಸಂಚಾರ ಸೌಲಭ್ಯಗಳಿಂದಲೂ ದೇಶವು ಸಂಪದ್ಯುಕ್ತವಾಗಿ, ಶಾಂತಿ ಸಮೃದ್ಧಿಗಳು ನೆಲಸಿ ಭಾರತೀಯರ ಪ್ರತಿಭಾ ಶಕ್ತಿಯು ವಿಕಸಿತಗೊಂಡು ಸಾಹಿತ್ಯ, ಕಲೆ ವಿಜ್ಞಾನ ಮತ್ತು ವಿದ್ಯಾಭ್ಯಾಸ ಮೊದಲಾದ ಕ್ಷೇತ್ರಗಳಲ್ಲಿ ಮಹತ್ವಪೂರ್ಣ ಸಾಧನೆಗಳ ಜರುಗಿದವು. ಇತಿಹಾಸಕಾರರು ಗುಪ್ತರ ಕಾಲವನ್ನು ಪ್ರಾಚೀನ ಗ್ರೀಸಿನ ಪರಿಕ್ಲಿಸ್ಸನ ಕಾಲಕ್ಕೂ, ರೋಮಿನ ಅಗಸ್ಟಸ್ ಸೀಸರನ ಕಾಲಕ್ಕೂ ಹಾಗೂ ಇಂಗ್ಲೆಂಡಿನ ಒಂದನೇ ಎಲಿಜಬೆತ್ ರಾಣಿಯ ಕಾಲಕ್ಕೂ ಹೋಲಿಸಿದ್ದಾರೆ. ಗುಪ್ತರ ಕಾಲದಲ್ಲಿ ಜನಜೀವನದ ಎಲ್ಲ ಕ್ಷೇತ್ರಗಳಲ್ಲಿಯೂ ಕಂಡುಬಂದ ಸರ್ವತೋಮುಖ ಪ್ರಗತಿಯು ಇದಕ್ಕೆ ಮುಖ್ಯ ಕಾರಣವಾಗಿತ್ತು. ಭಾರತೀಯರ ಪ್ರತಿಭಾಸಂಪನ್ನತೆ ಮತ್ತು ಕರ್ತೃತ್ವ ಶಕ್ತಿಗಳು ಉತ್ಕೃಷ್ಟತೆಯ ಶಿಖರವನ್ನು ಮುಟ್ಟಿ ಹಿಂದೆಂದೂ ಕಾಣದಿದ್ದಂತಹ ಪ್ರಗತಿಯು ಎಲ್ಲ ಕ್ಷೇತ್ರಗಳಲ್ಲಿಯೂ ಕಂಡುಬಂದಿತು. ಈ ಕೆಲವು ಕಾರಣಗಳಿಂದ ಗುಪ್ತರ ಕಾಲವು 'ಸುವರ್ಣಯುಗ' ವೆಂಬ ಖ್ಯಾತಿಯನ್ನು ಪಡೆಯಿತು.

ಗುಪ್ತರ ಕಾಲವು ಸುವರ್ಣಯುಗವೆಂದು ಖ್ಯಾತಿಯನ್ನು ಪಡೆಯಲು ಕಾರಣವಾದ ಅಂಶಗಳಲ್ಲಿ ರಾಜಕೀಯ ಶಾಂತಿ ಮತ್ತು ಸುಭಿಕ್ಷ ಸ್ಥಿತಿಯು

ಮುಖ್ಯವಾದವು. ಮೌರ್ಯರ ಪತನಾನಂತರ ಉತ್ತರಭಾರತದಲ್ಲಿ ಏರ್ಪಟ್ಟಿದ್ದ ರಾಜಕೀಯ ಅಶಾಂತಿ. ಅನೈಕ್ಯತೆ ಮತ್ತು ಪರಕೀಯರ ಆಳ್ವಿಕೆಯನ್ನು ಕೊನೆಗಾಣಿಸಿ ದೇಶಕ್ಕೆ ಏಕತೆಯನ್ನೂ, ದಕ್ಷ ಆಡಳಿತವನ್ನೂ ದೊರೆಕಿಸಿಕೊಟ್ಟ ಕೀರ್ತಿಯು ಗುಪ್ತಸಾಮ್ರಾಟರಿಗೆ ಸಲ್ಲುತ್ತದೆ. ಇದರಿಂದ ಸಾಮ್ರಾಜ್ಯದಲ್ಲಿ ಶಾಂತಿ ಸುಭಿಕ್ಷಗಳು ನೆಲಸಿ ಜನರು ತೃಪ್ತಿಕರ ಜೀವನವನ್ನು ನಡೆಸುವುದಕ್ಕೂ ಮತ್ತು ವಿವಿಧ ಕ್ಷೇತ್ರಗಳಲ್ಲಿ ಪ್ರಮುಖ ಸಾಧನೆಗಳನ್ನು ಸಾಧಿಸುವುದಕ್ಕೂ ಸಾಧ್ಯವಾಯಿತು. ಫಾಹಿಯಾನನ ಬರವಣಿಗೆಯಿಂದ ಗುಪ್ತರ ಆಳ್ವಿಕೆಯು ಪ್ರಗತಿಪರವಾಗಿದ್ದಿತೆಂದು ತಿಳಿದುಬರುತ್ತದೆ. ಗುಪ್ತರ ದೊರೆಗಳು ಪ್ರಜೆಗಳ ಆರ್ಥಿಕ ಮತ್ತು ನೈತಿಕ ಅಭಿವೃದ್ಧಿಯನ್ನು ತಮ್ಮ ಗುರಿಯನ್ನಾಗಿಟ್ಟುಕೊಂಡಿದ್ದರು. ಗುಪ್ತರ ಕಾಲದ ಆರ್ಥಿಕ ಶ್ರೀಮಂತಿಕೆಯೂ ಕೂಡ ಈ ಕಾಲದ ಬಹುಮುಖ ಪ್ರತಿಭೆಗೆ ಕಾರಣವಾಗಿತ್ತು. ವ್ಯಾಪಾರ-ವಾಣಿಜ್ಯ ಮತ್ತು ಕೈಗಾರಿಕೆಗಳು ಪ್ರಗತಿ ಹೊಂದಿದ್ದು ಜನತೆಯ ಸಂತೃಪ್ತ ಜೀವನಕ್ಕೆ ಮತ್ತು ಶ್ರೀಮಂತಿಕೆಗೆ ಕಾರಣವಾಗಿದ್ದವು. ಧಾರ್ಮಿಕ ಅನ್ಯೋನ್ಯತೆಯು ನೆಲೆಸಿದ್ದಿತು. ಇಂತಹ ಸಮೃದ್ಧ ವಾತಾವರಣದಲ್ಲಿ ಪ್ರತಿಭಾಶಕ್ತಿಯುಳ್ಳ ಜನರು ಸಾಹಿತ್ಯ ಕಲೆ ಮತ್ತು ವಿಜ್ಞಾನವೇ ಮೊದಲಾದ ಕ್ಷೇತ್ರಗಳಲ್ಲಿ ರಚನಾತ್ಮಕ ಕಾರ್ಯಗಳ ಕಡೆ ಗಮನ ಕೊಡಲು ಸಾಧ್ಯವಾಯಿತು. ಇದಲ್ಲದೆ ರಾಜರುಗಳು ಮತ್ತು ಧನಿಕರು ಧರ್ಮ ಹಾಗೂ ಜನೋಪ ಯುಕ್ತ ಕಾರ್ಯಗಳಿಗೆ ಮಾಡುತ್ತಿದ್ದ ಉದಾರ ಸಹಾಯಗಳು ಗುಪ್ತರ ಕಾಲದ ಮಹತ್ತರ ಪ್ರಗತಿಗೆ ಕಾರಣವಾಗಿದ್ದವು. ಬಹುಶಃ ಪ್ರಾಚೀನ ಕಾಲದಲ್ಲಿ ಅಶೋಕ ಚಕ್ರವರ್ತಿಯ ಕಾಲವನ್ನು ಬಿಟ್ಟರೆ ಭಾರತವು ಇನ್ನಾವ ಕಾಲದಲ್ಲೂ ಇಷ್ಟೊಂದು ಸಂಪತ್ಸಮೃದ್ಧಿಗಳನ್ನು ಕಂಡಿರಲಿಲ್ಲವೆಂದು ಹೇಳಬಹುದು.

**ಸಾಹಿತ್ಯಾಭಿವೃದ್ಧಿ**

ಗುಪ್ತರ ಕಾಲದಲ್ಲಿ ಸಾಹಿತ್ಯದ ಪ್ರಗತಿಯು ಅತ್ಯದ್ಭುತವಾಗಿದ್ದು ಶ್ರೇಷ್ಠಕೃತಿಗಳು ರಚಿಸಲ್ಪಟ್ಟವು. ಈ ಕಾಲವು ಸಂಸ್ಕೃತ ಭಾಷೆಯ ಮತ್ತು ಸಾಹಿತ್ಯಕೃತಿಗಳ ರಚನೆಯ ಸುವರ್ಣಯುಗವಾಗಿದ್ದು ವೈವಿಧ್ಯಮಯ ಸಾಹಿತ್ಯವು ರಚಿತವಾಯಿತು. ಮಹಾಕಾವ್ಯಗಳೂ ನಾಟಕಗಳೂ ದಾರ್ಶನಿಕ ಮತ್ತು ಆಧ್ಯಾತ್ಮ ಗ್ರಂಥಗಳೂ, ಅಲಂಕಾರ ಶಾಸ್ತ್ರಗಳೂ, ವೈದ್ಯಕೀಯ ಮತ್ತು ವಿಜ್ಞಾನಕ್ಕೆ ಸಂಬಂಧಿಸಿದಂತೆ ಹಲವಾರು ಗ್ರಂಥಗಳು ರಚಿತವಾದವು. ಈ ಕಾಲದ ಪ್ರಖ್ಯಾತ ಕವಿಗಳಲ್ಲಿ ಮತ್ತು ನಾಟಕ ಕೃತಿಗಳ ರಚನೆಕಾರರಲ್ಲಿ ಕಾಳಿದಾಸನ ಹೆಸರು ಅಮರವಾದುದು. ಇವನನ್ನು 'ಕವಿಕುಲಗುರು'ವೆಂತಲೂ ಮತ್ತು 'ಭಾರತದ ಷೇಕ್ಸ್‌ಪಿಯರ್' ಎಂತಲೂ ವರ್ಣಿಸಲಾಗಿದೆ. ಕಾಳಿದಾಸನು 'ಅಭಿಜ್ಞಾನಶಾಕುಂತಲ', 'ವಿಕ್ರಮೋರ್ವಶೀಯ' ಮತ್ತು ಮಾಳವಿಕಾಗ್ನಿಮಿತ್ರ ಎಂಬ ಮೂರು ನಾಟಕಗಳನ್ನೂ. ರಘುವಂಶ ಮತ್ತು ಕುಮಾರಸಂಭವ ಎಂಬ ಮಹಾ ಕಾವ್ಯಗಳನ್ನೂ ಮೇಘದೂತ ಮತ್ತು ಋತುಸಂಹಾರ ಎಂಬ ಭಾವಗೀತೆಗಳನ್ನೂ ರಚಿಸಿರುವನು. ಇವುಗಳಲ್ಲಿ ಅಭಿಜ್ಞಾನ ಶಾಕುಂತಲವು ವಿಶ್ವವಿಖ್ಯಾತಿಯಾಗಿದ್ದು ಪ್ರಪಂಚದ ವಿವಿಧ ಭಾಷೆಗಳಿಗೆ ಭಾಷಾಂತರಿಸಲ್ಪಟ್ಟಿದೆ. ಕಾಳಿದಾಸನ ಕೃತಿಗಳು ರಸಾಸ್ವಾದನೆಗೆ ಮತ್ತು ಭಾವಪರವಶತೆಗೆ ಹೆಸರುವಾಸಿಯಾಗಿವೆ. ಇವನ ಶೈಲಿ ಮತ್ತು ಕಲ್ಪನಾಶಕ್ತಿಗೆ ತಲೆದೂಗದವರಿಲ್ಲ. ವಿಶಾಖದತ್ತನು ಈ ಕಾಲದ ಮತ್ತೊಬ್ಬ ಪ್ರಸಿದ್ಧ ಕವಿ ಮತ್ತು ನಾಟಕರಚನೆಕಾರನಾಗಿದ್ದು 'ಮುದ್ರಾರಾಕ್ಷಸ' ಮತ್ತು 'ದೇವಿ ಚಂದ್ರಗುಪ್ತಂ' ನಾಟಕಗಳನ್ನು ರಚಿಸಿರುವನು.

ಗುಪ್ತರ ಕಾಲದ ಮತ್ತೊಬ್ಬ ಶ್ರೇಷ್ಠ ನಾಟಕ ರಚನೆಕಾರ ಶೂದ್ರಕ. ಇವನು 'ಮೃಚ್ಛಕಟಿಕ' ಎಂಬ ಕೃತಿಯನ್ನು ರಚಿಸಿರುವನು. ಈ ಕೃತಿಯು ಗುಪ್ತರ ಕಾಲದ ಸಾಮಾಜಿಕ ಜೀವನದ ಮೇಲೆ ಅಪಾರ ಬೆಳಕನ್ನು ಚೆಲ್ಲುತ್ತದೆ. ಇವರುಗಳಲ್ಲದೆ 'ಕಿರುತಾರ್ಜುನೀಯ'ವನ್ನು ಬರೆದ ಭಾರವಿ ಕವಿಯೂ 'ದಶಕುಮಾರಚರಿತ' ಮತ್ತು 'ಕಾವ್ಯಾದರ್ಶ'ಗಳನ್ನು ಬರೆದ ದಂಡಿಯೂ ಈ ಕಾಲದ ಪ್ರಸಿದ್ಧ ಕವಿಗಳಾಗಿದ್ದು ಸಾಹಿತ್ಯ ಕ್ಷೇತ್ರಕ್ಕೆ ಅಮೋಘ ಸೇವೆಸಲ್ಲಿಸಿದರು. ಇದಲ್ಲದೆ ಧಾರ್ಮಿಕ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಅಪಾರ ಧಾರ್ಮಿಕ ಸಾಹಿತ್ಯವು ಸೃಷ್ಟಿಯಾಯಿತು. ಮಹಾಕಾವ್ಯಗಳಾದ ರಾಮಾಯಣ ಮತ್ತು ಮಹಾಭಾರತಗಳು ಪರಿಷ್ಕಾರ ಹೊಂದಿದವು. ಅಂತೆಯೆ ಶ್ರೀಮದಾಭಗವತ, ಸ್ಮೃತಿಗಳು ಹಾಗೂ ಮನುಧರ್ಮಶಾಸ್ತ್ರವು ಪರಿಷ್ಕರಣಗೊಂಡು ಇಂದಿನ ರೂಪವನ್ನು ಪಡೆದವು. ನಾಮಲಿಂಗಾನುಶಾಸನ ಅಥವ ಸಂಸ್ಕೃತ ಶಬ್ದಕೋಶವಾದ ಅಮರಕೋಶವನ್ನು ಬರೆದ ಅಮರ ಸಿಂಹನು ಈ ಕಾಲಕ್ಕೆ ಸೇರಿದವನು. ಈ ಕಾಲದ ಮತ್ತೊಂದು ಪ್ರಮುಖ ರಚನೆಯೆಂದರೆ ಜನಪದ ಸಾಹಿತ್ಯದ ರಚನೆ. ಭಾರತೀಯರ ಕಾಲ್ಪನಿಕವಾದ ಅದ್ಭುತ ಕಥೆಗಳ ಸೃಷ್ಟಿಯು ಅದ್ಭುತವಾಗಿತ್ತು. ಈ ಸಾಹಿತ್ಯದಲ್ಲಿ ಕಂಡುಬರುವ ಕಳ್ಳರಿಂದ ಕಪಟ ಸಂನ್ಯಾಸಿಗಳವರೆಗೆ ಮತ್ತು ಹಲವಾರು ವಿಚಿತ್ರ ಪ್ರಾಣಿಗಳ ಮತ್ತು ವಿಷಯಗಳ ಕಥೆಗಳಿಂದ ಕೂಡಿದ ಈ ಸಾಹಿತ್ಯವು ನೀತಿಭೋಧನೆ ಮತ್ತು ಮನರಂಜನೆಯ ಅಧ್ಯಯನವಾಗಿದ್ದು ಓದುಗರ ಮನಸ್ಸಿಗೆ ಹರ್ಷ ಮತ್ತು ಉಲ್ಲಾಸವನ್ನುಂಟುಮಾಡುತ್ತದೆ. ಇವುಗಳಲ್ಲಿ ಜಾತಕ ಕಥೆಗಳು, ಕಥಾಸರಿತ್ಸಾಗರ, ಹಿತೋಪದೇಶ ಮತ್ತು ಪಂಚತಂತ್ರಕಥೆಗಳು ಪ್ರಸಿದ್ಧವಾದವುಗಳು. ಪಂಚತಂತ್ರ ಕಥೆಗಳು ಸಂಸ್ಕೃತ ಭಾಷೆಯಲ್ಲಿ ಕ್ರಿ.ಶ. 300ರಿಂದ 500ರ ಅವಧಿಯಲ್ಲಿ ರಚಿತವಾಗಿ ವಿಶ್ವವಿಖ್ಯಾತಿಗಳಿಸಿವೆ. ಪಂಚತಂತ್ರದ ಹಲವಾರು ಕಥೆಗಳು ಕಾಲಾನುಕ್ರಮದಲ್ಲಿ ಮುಸ್ಲಿಮರಿಂದ ಯೂರೋಪಿಗೆ ಪರಿಚಯಿಸಲ್ಪಟ್ಟು ಸುಮಾರು ನೂರೈವತ್ತು ಭಾಷೆಗಳಿಗೂ ಹೆಚ್ಚಾಗಿ ತರ್ಜುಮೆ ಮಾಡಲ್ಪಟ್ಟಿವೆ. ಯೂರೋಪಿನ ಪ್ರಸಿದ್ಧ ಕವಿಗಳೂ ಸಾಹಿತಿಗಳೂ ಆದ ಬೊಕಾಸಿಯೋ ಛಾಸರ್, ಲಫಾಂಟೈನ್, ಗ್ರಿಮ್ ಮತ್ತು ಕಿಪ್ಲಿಂಗ್ ಮೊದಲಾದ ಪ್ರಸಿದ್ಧ ಸಾಹಿತಿಗಳು ಭಾರತೀಯ ಜನಪದ ಸಾಹಿತ್ಯದಿಂದ ಸ್ಫೂರ್ತಿಗೊಂಡಿದ್ದಾರೆ.

### ವಿಜ್ಞಾನಾಭಿವೃದ್ಧಿ

ವಿಜ್ಞಾನ ಕ್ಷೇತ್ರದಲ್ಲಿಯೂ ಗುಪ್ತರ ಕಾಲವು ಮಹಾ ವಿಜ್ಞಾನಿಗಳ ಮತ್ತು ಮಹತ್ಸಾಧನೆಗಳ ಯುಗವಾಗಿದ್ದಿತು. ಗಣಿತಶಾಸ್ತ್ರ, ಖಗೋಳಶಾಸ್ತ್ರ, ಜ್ಯೋತಿಷ್ಯ ಶಾಸ್ತ್ರ, ವೈದ್ಯಶಾಸ್ತ್ರ, ಶಸ್ತ್ರಚಿಕಿತ್ಸೆ, ಲೋಹವಿದ್ಯೆ ಮತ್ತು ರಾಸಾಯನ ಶಾಸ್ತ್ರ, ಭೌತಶಾಸ್ತ್ರ ಮೊದಲಾದವುಗಳಲ್ಲಿ ಮಹತ್ವಪೂರ್ಣ ಸಂಶೋಧನೆಗಳು ಜರುಗಿದವು. ಪ್ರಾಚೀನ ಭಾರತದ ಮಹಾವಿಜ್ಞಾನಿಗಳೆನಿಸಿಕೊಂಡಿರುವ ವರಹಮೀರ ಮತ್ತು ಆರ್ಯಭಟ್ಟನು ಈ ಕಾಲಕ್ಕೆ ಸೇರಿದವರು. ವರಹಮೀರನು 'ಬೃಹಜ್ಜಾತಕ' ಎಂಬ ಕೃತಿಯನ್ನು ರಚಿಸಿರುವನು. ಈ ಗ್ರಂಥವು ಒಂದು ವಿಶ್ವಕೋಶವೇ ಆಗಿದ್ದು ಖಗೋಳಶಾಸ್ತ್ರ, ಸಸ್ಯಶಾಸ್ತ್ರ, ಪ್ರಾಣಿಶಾಸ್ತ್ರ, ಭೂಗೋಳಶಾಸ್ತ್ರ ಮತ್ತು ವಿವಾಹ ವಿಷಯಗಳೇ ಮೊದಲಾದ ಹಲವಾರು ವಿಷಯಗಳಿಂದ ಕೂಡಿರುವ ಸಾರಸಂಗ್ರಹ ಕೃತಿಯಾಗಿದೆ. ಆರ್ಯಭಟ್ಟನು ರಚಿಸಿರುವ ಕೃತಿಗಳಲ್ಲಿ 'ಆರ್ಯಭಟ್ಟೀಯ' ಎಂಬ ಕೃತಿಯು ಸುಪ್ರಸಿದ್ಧವಾದುದು,

ಆರ್ಯಭಟ್ಟನು ಪ್ರಖ್ಯಾತ ಗಣಿತ ಶಾಸ್ತ್ರಜ್ಞನೂ ಮತ್ತು ಖಗೋಳ ಶಾಸ್ತ್ರಜ್ಞನೂ ಆಗಿದ್ದನು. ಈತನು ಗಣಿತ ಶಾಸ್ತ್ರದಲ್ಲಿ ಸೊನ್ನೆಯ ಮತ್ತು ದಶಮಾಂಶ ಪದ್ಧತಿಯ ಉಪಯೋಗವನ್ನು ತೋರಿಸಿಕೊಟ್ಟನು. ಸೂರ್ಯ, ಚಂದ್ರ ಮತ್ತು ಭೂ ಗ್ರಹಗಳ ಚಲನವಲನಗಳನ್ನು ಗುರುತಿಸಿ ಸೂರ್ಯ ಮತ್ತು ಚಂದ್ರಗ್ರಹಣಗಳಾಗುವ ರೀತಿಯ ಬಗ್ಗೆ ವೈಜ್ಞಾನಿಕ ವಿವರಣೆ ನೀಡಿದವರಲ್ಲಿ ಮೊದಲಿಗನೆಂಬುದಾಗಿ ತಿಳಿದು ಬಂದಿದೆ. ವಾಗ್ಭಟ, ಶುಶ್ರುತ, ಧನ್ವಂತರಿ, ವೇತಾಳ ಭಟ್ಟ ಮತ್ತು ವರರುಚಿ ಎಂಬುವರು ಪ್ರಸಿದ್ಧ ವೈದ್ಯ ಶಾಸ್ತ್ರಜ್ಞರಾಗಿದ್ದು ವೈದ್ಯಕೀಯಶಾಸ್ತ್ರ, ಶಸ್ತ್ರಚಿಕಿತ್ಸೆ ಮತ್ತು ಪಶುಚಿಕಿತ್ಸೆಯನ್ನು ಕುರಿತು ಗ್ರಂಥಗಳನ್ನು ರಚಿಸಿದ್ದರು. ಹಿಂದುಗಳು ರಸಾಯನಶಾಸ್ತ್ರ ಭೌತಶಾಸ್ತ್ರ ಮತ್ತು ಲೋಹ ಶಾಸ್ತ್ರಗಳಲ್ಲಿ ಬಹಳವಾಗಿ ಮುಂದುವರಿದಿದ್ದರು. ಸಾಬೂನು ಮತ್ತು ಸಿಮೆಂಟಿನ ತಯಾರಿಕೆಯು ಅವರಿಗೆ ಗೊತ್ತಿದ್ದಿತು. ಬ್ರಹ್ಮಗುಪ್ತನು ಗಣಿತಶಾಸ್ತ್ರ, ರೇಖಾಗಣಿತ ಮತ್ತು ಭೌತಶಾಸ್ತ್ರದಲ್ಲಿ ಮಹಾಪಾಂಡಿತ್ಯಗಳಿಸಿದ್ದು ನ್ಯೂಟನ್ನನಿಗಿಂತಲೂ ಒಂದು ಸಾವಿರ ವರ್ಷಗಳಿಗೂ ಮೊದಲೇ ಗುರುತ್ವಾಕರ್ಷಣ ಶಕ್ತಿಯ ಸಿದ್ಧಾಂತವನ್ನು ಕಂಡುಹಿಡಿದ ಮಹಾ ವಿಜ್ಞಾನಿಯಾಗಿದ್ದನು. ಲೋಹಶಾಸ್ತ್ರದಲ್ಲಿ ಭಾರತೀಯ ಎಂಜಿನಿಯರುಗಳ ಜ್ಞಾನವು ಅಸದೃಶವಾಗಿದ್ದು ಉಕ್ಕನ್ನು ಹದಗೊಳಿಸುವುದರಲ್ಲಿ ಪರಿಣತಿ ಪಡೆದಿದ್ದರು. ದೆಹಲಿಯ ಮೆಹರಾಲಿ ಎಂಬಲ್ಲಿ ಬಟ್ಟ ಬಯಲಿನಲ್ಲಿರುವ ಕಬ್ಬಿಣದ ಕಂಬವು ಇಂದಿಗೂ ತುಕ್ಕು ಹಿಡಿಯದಿರುವುದು ಅಂದಿನ ಲೋಹ ವಿಜ್ಞಾನಿಗಳ ತಾಂತ್ರಿಕ ಜ್ಞಾನ ಕೌಶಲ್ಯಕ್ಕೆ ನಿದರ್ಶನವಾಗಿದೆ.

ಗುಪ್ತರ ಕಾಲದ ವೈದ್ಯರು ಶಸ್ತ್ರಚಿಕಿತ್ಸೆಯಲ್ಲಿ ಆಶ್ಚರ್ಯಕರವಾಗಿ ಅತ್ಯಾಧುನಿಕವಾಗಿದ್ದರು. ಅವರು ಗಾಯಗಳನ್ನು ಶಸ್ತ್ರಚಿಕಿತ್ಸೆಯಿಂದ ಗುಣಪಡಿಸುತ್ತಿದ್ದರು ಮತ್ತು ಗಾಯಗಳಿಗೆ ಧೂಪದ ಪರಿಮಳದ ಹೊಗೆಯನ್ನು ಕೊಟ್ಟು ಗುಣಪಡಿಸುತ್ತಿದ್ದರು. ಶಸ್ತ್ರ ಚಿಕಿತ್ಸೆ, ಮೂಳೆಗಳನ್ನು ಜೋಡಿಸುವುದು, ಅಂಗಭಿನ್ನ ಚಿಕಿತ್ಸೆ (Plastic Sugery) ಮೊದಲಾದವುಗಳನ್ನು ಪ್ರಯತ್ನಿಸಿದ್ದರು. ಚಾಲ್ಮೂಗ್ರಮರದ ಬೀಜದ ಎಣ್ಣೆಯಿಂದ ಕುಷ್ಠರೋಗವನ್ನು ನಿವಾರಿಸುತ್ತಿದ್ದರು. ಹಾವು ಕಡಿದವರಿಗೆ ಪ್ರತಿವಿಷವನ್ನು ಕೊಟ್ಟು ಗುಣಪಡಿಸುವುದನ್ನು ಕಂಡುಹಿಡಿದಿದ್ದರು. ಭಾರತೀಯ ಔಷಧಿಯ (Indian Medicine) ತಯಾರಿಕೆಯಲ್ಲಿ ಗುಪ್ತರ ಕಾಲದ ನಂತರ ಅರಬ್ಬರಿಂದ ಎರವಲು ಪಡೆಯುವುದನ್ನು ಬಿಟ್ಟರೆ ಹೆಚ್ಚಿನ ಪ್ರಗತಿಯು ಸಾಧಿತವಾದಂತೆ ಕಂಡುಬರುವುದಿಲ್ಲ.

### ಕಲೆ

ಗುಪ್ತರ ದೊರೆಗಳು ಕಲಾಭಿಮಾನಿಗಳೂ ಆಗಿದ್ದು ಕಲೆಯ ವಿವಿಧ ಮುಖಗಳಾದ ವಾಸ್ತುಶಿಲ್ಪ, ಶಿಲ್ಪಕಲೆ, ಚಿತ್ರಕಲೆ, ನೃತ್ಯ ಮತ್ತು ಸಂಗೀತ ಕಲೆಗಳು ವಿಕಸಿತಗೊಳ್ಳಲು ವಿಶೇಷ ಪ್ರೋತ್ಸಾಹ ನೀಡಿದರು. ಈ ಕಾಲದಲ್ಲಿ ಸಂಪೂರ್ಣವಾಗಿ ಭಾರತೀಯವಾದ ಕಲೆಯ ಹೊಸ ಪರಂಪರೆಯು ಸೃಷ್ಟಿಯಾಯಿತು. ಗಾಂಧಾರದಲ್ಲಿನ ಗ್ರೀಕೊ-ಬುದ್ಧಿಸ್ಟ್ ಕಲೆಯ ಪ್ರಭಾವದಿಂದ ಪೂರ್ಣ ದೂರವಾಗಿ ಸಾರನಾಥ ಮತ್ತು ಮಥುರಗಳನ್ನು ಕೇಂದ್ರವನ್ನಾಗಿ ಉಳ್ಳ ರಾಷ್ಟ್ರೀಯ ಕಲೆಯು ಅಸ್ತಿತ್ವಕ್ಕೆ ಬಂದಿತು. ಸಾಮ್ರಾಜ್ಯದ ಸಂಪತ್ತು, ರಾಜರ ಮತ್ತು ಧನಿಕರ ಸಹಾಯ ದೊರೆತುದರಿಂದ ಕಲೆಯಲ್ಲಿ ವಿಶೇಷ ಪ್ರಗತಿಯು ಕಂಡುಬಂದಿತು. ಗುಪ್ತರ ಕಾಲದ ಕಲೆಯು ನೈಜತೆ,

ಸರಳತೆ, ಸೌಂದರ್ಯ, ಧಾರ್ಮಿಕ ಮತ್ತು ದಾರ್ಶನಿಕತೆಯ ದೃಷ್ಟಿಯಿಂದಲೇ ಅಲ್ಲದೆ ಕಲಾಕೌಶಲಕ್ಕೂ ಹಾಗೂ ಪರಿಪೂರ್ಣತೆಗೂ ಹೆಸರುವಾಸಿಯಾಗಿದೆ. ಗುಪ್ತರ ಕಾಲದ ಕಲೆಯು 'ಹಿಂದೂ ಕಲೆಯ ಅತ್ಯುನ್ನತಿ' ಎಂದು ಕಲಾವಿಮರ್ಶಕರಾದ ವಿನ್ಸೆಂಟ್ ಸ್ಮಿತ್ ಅಭಿಪ್ರಾಯಪಟ್ಟಿರುವರು.

ಹಿಂದೂ ಧರ್ಮದ ಪುನರುಜ್ಜೀವನವೂ ಕೂಡ ಕಲಾಕ್ಷೇತ್ರದ ಮೇಲೆ ವಿಶೇಷ ಪ್ರಭಾವವನ್ನು ಬೀರಿತು. ಮೊದಲ ಬಾರಿಗೆ ಭಾರತೀಯ ವಾಸ್ತುಶಿಲ್ಪಕಾರರು ಧರ್ಮ ಶ್ರದ್ಧೆಯುಳ್ಳ ಜನರ ಧಾರ್ಮಿಕ ಬಯಕೆಗಳನ್ನು ಈಡೇರಿಸಲೋಸುಗ ದೇವಾಲಯಗಳನ್ನು ಕಲ್ಲುಗಳಿಂದ ನಿರ್ಮಿಸುವುದರಲ್ಲಿ ಪ್ರಯೋಗ ನಡೆಸಿದರು. ಬಿತರ್‌ಗಾಂವನ್ (ಕಾನ್ಪುರ್ ಜಿಲ್ಲೆ) ಮತ್ತು ಧಿಯೋಗರ್ (ಜಾನ್ಸಿ ಜಿಲ್ಲೆ) ಗಳಲ್ಲಿನ ದೇವಾಲಯಗಳು ಈ ಕಾಲದ ವಾಸ್ತುಶಿಲ್ಪಕ್ಕೆ ಅತ್ಯುತ್ತಮ ನಿದರ್ಶನಗಳಾಗಿವೆ. ವೈಷ್ಣವ ಮತ್ತು ಶೈವ ಮತಗಳು ಈ ಕಾಲದಲ್ಲಿ ಜನಪ್ರಿಯ ಮತಗಳಾಗಿ ಮಾರ್ಪಟ್ಟು ವಿಷ್ಣು ಮತ್ತು ಶಿವನ ವಿವಿಧ ಅವತಾರಗಳು ಮತ್ತು ಬಂಗಿಗಳಿಂದ ಕೂಡಿದ ಸುಂದರ ವಿಗ್ರಹಗಳು ನಿರ್ಮಾಣಗೊಂಡವು ಪರಮತಸಹಿಷ್ಣುಗಳಾಗಿದ್ದ ಗುಪ್ತರ ದೊರೆಗಳು ನೀಡಿದ ಪ್ರೋತ್ಸಾಹದಿಂದಾಗಿ ಬೌದ್ಧ ಗಯೆ, ನಳಂದ, ಉದಯಗಿರಿ ಮತ್ತು ಅಜಂತ ಮೊದಲಾದ ಸ್ಥಳಗಳಲ್ಲಿ ಚೈತ್ಯಗಳು ವಿಹಾರಗಳು ಮತ್ತು ಗುಹಾಲಯಗಳು ನಿರ್ಮಾಣಗೊಂಡವು. ಬುದ್ಧನ ಮತ್ತು ಬೋಧಿಸತ್ವರ ವಿಗ್ರಹಗಳನ್ನು ಅತ್ಯಂತ ಸುಂದರವಾಗಿ ಕೆತ್ತುವುದರಲ್ಲಿ ಈ ಕಾಲದ ಶಿಲ್ಪಕಾರರು ತಮ್ಮ ಕಲಾಕೌಶಲವೆಲ್ಲವನ್ನೂ ಧಾರೆಯೆರೆದಿದ್ದಾರೆ. ಬುದ್ಧನ ವಿಗ್ರಹಗಳು ಗಾಂಧಾರ ಕಲೆಗಿಂತ ಬೇರೆಯಾಗಿವೆ. ಸಾರನಾಥದ ಮ್ಯೂಜಿಯಂನಲ್ಲಿರುವ ಧ್ಯಾನಾಸಕ್ತ ಬುದ್ಧನ ವಿಗ್ರಹವು ಶಾಂತಚಿತ್ತತೆಯ ಭವ್ಯ ಮೂರ್ತಿಯಾಗಿದೆ. ಇಂತಹ ನೂರಾರು ವಿಗ್ರಹಗಳು ಕಲ್ಲು ಮತ್ತು ಲೋಹಗಳಲ್ಲಿ ಕೆತ್ತಲ್ಪಟ್ಟಿದ್ದು ಅವುಗಳಲ್ಲಿ ಎಷ್ಟೋ ಹಾಳಾಗಿ ಹೋಗಿವೆ. ಒಟ್ಟಿನಲ್ಲಿ ಹೇಳುವುದಾದರೆ ಈ ಕಾಲದಲ್ಲಿ ಕೆತ್ತಲ್ಪಟ್ಟ ವಿಗ್ರಹಗಳು ಮುಂದಿನ ಶಿಲ್ಪಕಲಾಕಾರರಿಗೆ ಮಾದರಿಯಾದುದಲ್ಲದೆ ಮಲಯ ಪರ್ಯಾಯದ್ವೀಪ, ಜಾವಾ ಮತ್ತು ಕಾಂಬೋಡಿಯಗಳಲ್ಲಿನ ಭಾರತೀಯ ವಸಾಹತುಗಳಲ್ಲಿನ ಶಿಲ್ಪಕಲೆಗೂ ಮಾರ್ಗದರ್ಶಕವಾದವು.

ಚಿತ್ರ ಕಲೆಯಲ್ಲಿ ಗುಪ್ತರ ಕಾಲವು ಪರ್ವಕಾಲವಾಗಿತ್ತು. ಗುಪ್ತರ ಕಾಲದ ಚಿತ್ರಕಲೆಯು ಸಾಮ್ರಾಜ್ಯಕ್ಕೆ ಬಹುದೂರದಲ್ಲಿದ್ದ ಇಂದಿನ ಮಹಾರಾಷ್ಟ್ರ ಪ್ರದೇಶದ ಅಜಂತ ಗುಹೆಗಳಲ್ಲಿ ಕಂಡುಬರುತ್ತದೆ. ಇಲ್ಲಿರುವ ಕುದುರೆಯ ಲಾಳದ ಆಕಾರದಲ್ಲಿರುವ ಗುಡ್ಡದಲ್ಲಿ ಒಟ್ಟು 29 ಗುಹೆಗಳಿದ್ದು ಇವುಗಳಲ್ಲಿ ಆರು ಗುಹೆಗಳು ಚಿತ್ರಕಲೆಯ ದೃಷ್ಟಿಯಿಂದ ಹೆಚ್ಚು ಆಕರ್ಷಣೀಯವಾಗಿವೆ. ಈ ಗುಹೆಗಳಲ್ಲಿ ಕಂಡುಬರುವ ಕೆಲವು ವರ್ಣಚಿತ್ರಗಳು ಕ್ರಿ.ಪೂ. 2ನೇ ಶತಮಾನಕ್ಕೆ ಸೇರಿದವುಗಳಾಗಿವೆ. ಆದರೆ ಇವುಗಳಲ್ಲಿನ ಅತ್ಯುತ್ತಮ ಚಿತ್ರಗಳು ಗುಪ್ತರ ಕಾಲದಲ್ಲಿ ಚಿತ್ರಸಿದವುಗಳಾಗಿವೆ. ಬುದ್ಧನ ಮತ್ತು ಬೋಧಿಸತ್ವರ ಜೀವನವನ್ನೇ ಅಲ್ಲದೆ ಅಜಂತ ಗುಹೆಗಳಲ್ಲಿನ ಚಿತ್ರಗಳು ಅಂದಿನ ಭಾರತದ ಜೀವನವನ್ನು ಸೂಕ್ಷ್ಮವಾಗಿ ಪ್ರತಿಬಿಂಬಿಸುತ್ತವೆ. ರಾಜರ ಮತ್ತು ರಾಜಕುಮಾರರ, ರೈತರ, ಭಿಕ್ಷುಕರ, ಸಾಧು ಸಂತರ ಸಂಗೀತಗಾರರ ಗಂಧರ್ವ ಕನ್ಯೆಯರು ಅಲಂಕರಿಸಿಕೊಳ್ಳುತ್ತಿರುವ ವಿರಮಿಸಿ ಕೊಳ್ಳುತ್ತಿರುವ, ನೃತ್ಯ ಮಾಡುತ್ತಿರುವ,

ಉದ್ಯಾನವನದಲ್ಲಿ ಆಲೆದಾಡುತ್ತಿರುವ, ವಿವಿಧ ಭಾವ ಭಂಗಿಗಳ ಮತ್ತು ಮಕ್ಕಳ ಪ್ರಾಣಿ ಪಕ್ಷಿಗಳ ಮತ್ತು ತರುಲತೆಗಳ ಸಮೂಹವೇ ಇಲ್ಲಿ ಮೂಡಿ ಬಂದಿದೆ. ಧಾರ್ಮಿಕ ವಿಷಯಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ ಒಂದನೇ ಗುಹೆಯಲ್ಲಿ ಚಿತ್ರಿಸಲಾಗಿರುವ ಪದ್ಮಪಾಣಿ ಬುದ್ಧನ ಚಿತ್ರವು ಅತ್ಯಂತ ಆಕರ್ಷಕವಾಗಿದೆ. ಮಹಾತ್ಮ ಬುದ್ಧನು ಬಲಗೈಯಲ್ಲಿ ಕಮಲವೊಂದನ್ನು ಹಿಡಿದು ಸ್ವಲ್ಪ ಬಾಗಿ ನಿಂತು ದುಃಖಿಗಳಾದ ಮಾನವರ ಬಗ್ಗೆ ಕರುಣೆಯ ದೃಷ್ಟಿಯಿಂದ ನೋಡುತ್ತಿರುವ ದೃಶ್ಯವು ಪ್ರವಾಸಿಗರನ್ನು ಮೂಕ ವಿಸ್ಮಿತರನ್ನಾಗಿ ಮಾಡುತ್ತದೆ. ಗುಪ್ತರ ಕಾಲದ ವರ್ಣಚಿತ್ರಗಳು ಅಜಂತದಲ್ಲಿನ ಗುಹೆಗಳಲ್ಲೇ ಅಲ್ಲದೆ ಬಾಗ್ (ಗ್ವಾಲಿಯರ್ ಜಿಲ್ಲೆ) ಸುಲ್ತಾನ್ ಗಂಜ್, ಪುದುಕೋಟಿಯ ಸಿತ್ತನ ವಾಸಲ್ ಮತ್ತು ಸಿಲೋನಿನ ಸಿಗಿರಿಯಾಗಳಲ್ಲಿ ಕಂಡು ಬರುತ್ತವೆ. ಬಹಳ ಕಾಲದವರೆಗೆ ಮರತೇ ಹೋಗಿದ್ದ ಅಜಂತ ಗುಹೆಗಳನ್ನು ಹತ್ತೊಂಬತ್ತನೆಯ ಶತಮಾನದ ಮೊದಲ ಭಾಗದಲ್ಲಿ (1819) ಆಕಸ್ಮಿಕವಾಗಿ ಇಂಗ್ಲಿಷರ ಸೈನಿಕ ತಂಡವೊಂದು ಪತ್ತೆ ಹಚ್ಚಿತು. ಇಂದು ಅಜಂತವು ಪ್ರವಾಸಿ ಕೇಂದ್ರವಾಗಿದ್ದು ಅಲ್ಲಿರುವ ಚಿತ್ರಗಳು ದೇಶವಿದೇಶಗಳಿಂದ ಬರುವ ಸಹಸ್ರಾರು ಪ್ರವಾಸಿಗರನ್ನು ಆಕರ್ಷಿಸಿ ಅವರ ಕಣ್ಮನಗಳಿಗೆ ಆನಂದವನ್ನುಂಟುಮಾಡುತ್ತವೆ.

ಗುಪ್ತರ ಕಾಲದಲ್ಲಿ ಸಂಗೀತ ಮತ್ತು ನೃತ್ಯ ಕಲೆಗಳೂ ಪ್ರಗತಿ ಹೊಂದಿದವು. ಸಮುದ್ರಗುಪ್ತನು ಸ್ವತಃ ಸಂಗೀತಗಾರನಾಗಿದ್ದನೆಂಬುದಾಗಿ ಅವನ ನಾಣ್ಯಗಳ ಮೇಲೆ ವೀಣೆ ಹಿಡಿದು ನುಡಿಸುತ್ತಿರುವ ಚಿತ್ರಗಳಿಂದ ತಿಳಿದುಬರುತ್ತದೆ. ಗುಪ್ತರ ದೊರೆಗಳು ವಿದ್ಯಾಭಿಮಾನಿಗಳೂ ಆಗಿದ್ದರು ತಕ್ಷಶಿಲೆ ಮತ್ತು ಉಜ್ಜೈನಿಗಳು ಪ್ರಮುಖ ವಿದ್ಯಾ ಕೇಂದ್ರಗಳಾಗಿದ್ದವು. ಇವರ ಕಾಲದಲ್ಲಿ ನಳಂದ ವಿಶ್ವವಿದ್ಯಾನಿಲಯವು ಅಸ್ತಿತ್ವಕ್ಕೆ ಬಂದಿತು. ಗುಪ್ತರ ಕೊನೆಯ ಅರಸರು ಅನೇಕ ದಾನದತ್ತಿಗಳನ್ನು ಇದಕ್ಕೆ ನೀಡಿದ್ದರು. ನಳಂದ ವಿಶ್ವವಿದ್ಯಾನಿಲಯವು ಮುಂದೆ ಶ್ರೀ ಹರ್ಷ ಚಕ್ರವರ್ತಿಯ ಕಾಲದಲ್ಲಿ ಅಂತರರಾಷ್ಟ್ರೀಯ ಖ್ಯಾತಿಯನ್ನು ಪಡೆದು ದೇಶವಿದೇಶಗಳಿಂದ ವಿದ್ವಾಂಸರನ್ನು ಆಕರ್ಷಿಸಿತು.

ಗುಪ್ತರ ಕಾಲವು ಭಾರತದ ಇತಿಹಾಸದಲ್ಲಿ ಸಂಸ್ಕೃತಿಯ ವಿಸ್ತರಣೆಯ ಯುಗವೂ ಆಗಿತ್ತು. ಭಾರತೀಯ ಸಂಸ್ಕೃತಿಯು ಹೊರದೇಶಗಳಲ್ಲಿಯೂ ಪ್ರಸಾರವಾಗಿ ಭಾರತೀಯರಿಗೆ ಹೆಚ್ಚಿನ ಗೌರವವನ್ನು ತಂದುಕೊಟ್ಟಿತು. ಭಾರತೀಯರ ಧರ್ಮ, ಸಾಹಿತ್ಯ, ಕಲೆ, ಸಂಪ್ರದಾಯ ಮತ್ತು ಆಚಾರ ವಿಚಾರಗಳು ಏಷ್ಯಾದ ಅನೇಕ ರಾಜ್ಯಗಳಲ್ಲಿ ಹರಡಿ 'ಬೃಹದ್ಭಾರತ' ಅಥವ ಭಾರತದ ಸಾಂಸ್ಕೃತಿಕ ಸಾಮ್ರಾಜ್ಯವೊಂದು ಸೃಷ್ಟಿಯಾಯಿತು. ಈ ಎಲ್ಲ ಸಾಧನೆಗಳಿಂದ ಗುಪ್ತರ ಕಾಲವು ಭಾರತದ ಇತಿಹಾಸದಲ್ಲಿ ಒಂದು ಸುವರ್ಣ ಯುಗವೆಂದು ಖ್ಯಾತಿಯನ್ನು ಪಡೆಯಿತು.

## ಅಧ್ಯಾಯ- 12

# ವರ್ಧನ ಸಾಮ್ರಾಜ್ಯ

ಕ್ರಿ.ಶ. ಆರನೇ ಶತಮಾನದ ಮಧ್ಯಭಾಗದ ವೇಳೆಗೆ ಗುಪ್ತ ಸಾಮ್ರಾಜ್ಯವು ಸಿಂಹಾಸನಕ್ಕಾಗಿ ನಡೆದ ಅಂತಃಕಲಹಗಳಿಂದಲೂ ಅಧಿಕಾರಿಗಳ ಅಪ್ರಮಾಣಿಕ ವರ್ತನೆಯಿಂದಲೂ ಮತ್ತು ಮಹಾ ಕ್ರೂರಿಗಳಾದ ಹೂಣರ ಧಾಳಿಗಳಿಂದಲೂ ಹಾಗೂ ಅಧೀನ ರಾಜರುಗಳು ತಮ್ಮ ತಮ್ಮ ಸ್ವಾತಂತ್ರ್ಯವನ್ನು ಘೋಷಿಸಿಕೊಂಡಿದುದರ ಪರಿಣಾಮವಾಗಿ ಕಣ್ಮರೆಯಾಯಿತು. ಇದರ ಸ್ಥಾನದಲ್ಲಿ ಅನೇಕ ಸಣ್ಣ ಪುಟ್ಟ ರಾಜ್ಯಗಳು ತಲೆಯೆತ್ತಿ ಮತ್ತೊಮ್ಮೆ ಭಾರತದಲ್ಲಿ ರಾಜಕೀಯ ಅನೈಕ್ಯತೆಯು ಏರ್ಪಟ್ಟಿತು. ಹೀಗೆ ತಲೆಯೆತ್ತಿದ ರಾಜ್ಯಗಳಲ್ಲಿ ಕನೂಜಿನ ಮೌಖರಿಯವರೂ, ವಲ್ಲಭಿಯ ಮೈತ್ರಕರೂ, ಮಗಧದಲ್ಲಿ ಕೊನೆಯ ಗುಪ್ತರೂ, ಮಾಳವದಲ್ಲಿ ಯಶೋವರ್ಮನೂ ಗೌಡ ದೇಶದಲ್ಲಿ (ಬಂಗಾಳ) ಶಶಾಂಕನೂ ಸ್ಥಾಣೇಶ್ವರದಲ್ಲಿ ವರ್ಧನರೂ ಪ್ರಮುಖರಾಗಿದ್ದರು. ಇವುಗಳಲ್ಲಿ ಸರಸ್ವತಿ ನದಿಯ ದಂಡೆಯಲ್ಲಿದ್ದ ಸ್ಥಾಣೇಶ್ವರ ರಾಜ್ಯವು ತನ್ನ ಸೈನಿಕ ವ್ಯೂಹ ಸ್ಥಾನದಿಂದಾಗಿ ಕ್ರಿ.ಶ. ಏಳನೇ ಶತಮಾನದ ಆಧಿಯಲ್ಲಿ ಪ್ರವರ್ಧಮಾನಕ್ಕೆ ಬಂದು ಸಾಮ್ರಾಟ ಗುಪ್ತರ ಸಾಮ್ರಾಜ್ಯದಷ್ಟು ವಿಶಾಲವಾದ ಸಾಮ್ರಾಜ್ಯವನ್ನು ಸ್ಥಾಪಿಸಿದೆ ಹೋದರೂ ಉತ್ತರ ಭಾರತದ ಬಹುಭಾಗದ ಮೇಲೆ ತನ್ನ ಸಾರ್ವಭೌಮತ್ವವನ್ನು ಸ್ಥಾಪಿಸಿ ರಾಜಕೀಯ ಏಕತೆಯನ್ನು ಮತ್ತೊಮ್ಮೆ ಏರ್ಪಡಿಸಿತು.

ವರ್ಧನ ಸಂತತಿಯವರ ಇತಿಹಾಸವನ್ನು ತಿಳಿಯಲು ಶಾಸನಗಳು ಮತ್ತು ಸಾಹಿತ್ಯಾಧಾರಗಳು ಮುಖ್ಯ ಆಧಾರಗಳಾಗಿವೆ. ಶಾಸನಾಧಾರಗಳಲ್ಲಿ ಸೋನಪೇಟ್ ತಾಮ್ರದ ಶಾಸನ, ಕ್ರಿ.ಶ. 628ರ ಬಾನ್ಸಕೇರ ಶಾಸನ ಮತ್ತು ಕ್ರಿ.ಶ. 631ರ ಮಧುಬಾನ್ ಶಾಸನವೂ, ಸಾಹಿತ್ಯಾಧಾರಗಳಲ್ಲಿ ಬಾಣ ಕವಿಯ 'ಹರ್ಷಚರಿತ' ಹ್ಯೂಯನ್ ತ್ಸಾಂಗ್‌ನ ಬರವಣಿಗೆಯು ಬಹು ಮುಖ್ಯ ಆಧಾರಗಳಾಗಿವೆ. ಹರ್ಷಚರಿತವು ಹರ್ಷನ ಬಗೆಗೆ ಹಾಗೂ ಅಂದಿನ ಆಸ್ಥಾನ ಜೀವನ ಮತ್ತು ಜನ ಜೀವನದ ಬಗ್ಗೆ ತಿಳಿಯಲು ಸಪ್ರಮಾಣ ಗ್ರಂಥವಾಗಿದೆ. ಅಂತೆಯೆ ಹ್ಯೂಯನ್‌ತ್ಸಾಂಗನ ಬರವಣಿಗೆಯು ಪ್ರಾಚೀನ ಭಾರತದ ಇತಿಹಾಸದ ಕೊನೆಯ ಅಧ್ಯಾಯಗಳ ಪುನರ್ರಚನೆಗೆ ಆಧಾರಗಳ ಐಶ್ವರ್ಯದ ಗಣಿಯಾಗಿದೆ.

ಬಾಣಕವಿಯ 'ಹರ್ಷಚರಿತ' ಮತ್ತು ಮಧುಬಾನ್ ಶಾಸನದ ವಂಶಾವಳಿಯ ಪ್ರಕಾರ ಪುಷ್ಯಭೂತಿ ಎಂಬವನು ವರ್ಧನ ಸಂತತಿಯ ಸ್ಥಾಪಕ. ಇವನು ಶಿವನ ಆರಾಧಕನಾಗಿದ್ದನು. ಇವನು ಸ್ಥಾಣೇಶ್ವರ ಪ್ರದೇಶದಲ್ಲಿ ಒಂದು ಸಣ್ಣ ರಾಜ್ಯವನ್ನು

ಸ್ಥಾಪಿಸಿ ಆಳುತ್ತಿದ್ದನು. ಇವನ ತರುವಾಯ ನರವರ್ಧನ, ಒಂದನೇ ರಾಜ್ಯವರ್ಧನ, ಆದಿತ್ಯ ವರ್ಧನ ಎಂಬವರು ರಾಜ್ಯವಾಳಿದರು. ಆದಿತ್ಯವರ್ಧನ ನಂತರ ಅವನ ಮಗನಾದ ಪ್ರಭಾಕರವರ್ಧನನು ರಾಜನಾದನು. ಇವನ ಕಾಲದಲ್ಲಿ ವರ್ಧನ ಸಂತತಿಯವರು ಪ್ರಾಮುಖ್ಯತೆಗೆ ಬಂದು ಖ್ಯಾತಿಗಳಿಸಿದರು.

ಪ್ರಭಾಕರವರ್ಧನನು ಒಬ್ಬ ಪರಾಕ್ರಮಶಾಲಿ ದೊರೆಯಾಗಿದ್ದನು. ಇವನು 'ಮಹಾರಾಜಾಧಿರಾಜ' ಪರಮಭಟ್ಟಾರಕ ಎಂಬ ಬಿರುದುಗಳನ್ನು ಹೊಂದಿದ್ದನು. ಪ್ರಭಾಕರವರ್ಧನನು ಪಂಜಾಬ್ ಪ್ರದೇಶದ ಮೇಲೆ ಆಕ್ರಮಣ ಮಾಡಿದ ಅಲೆಮಾರಿ ಜನಾಂಗವಾಗಿದ್ದ ಹೂಣರನ್ನು ಸೋಲಿಸಿ ಓಡಿಸಿದನು ಮತ್ತು ಅವರಿಗೆ ಸಿಂಹ ಸ್ವಪ್ನವಾಗಿದ್ದನು. ಲಟಾ ರಾಜ್ಯವನ್ನು ಗೆದ್ದು ತನ್ನ ರಾಜ್ಯಕ್ಕೆ ಸೇರಿಸಿಕೊಂಡಿದುದು ಇವನ ಮತ್ತೊಂದು ಬಹುಮುಖ್ಯ ಸಾಧನೆಯಾಗಿತ್ತು. ಮಾಳವ, ಗುಜರಾತ್ ಮತ್ತು ಗಾಂಧಾರದ ರಾಜರುಗಳಿಗೆ ಇವನು ಸಿಂಹಸ್ವರೂಪವಾಗಿದ್ದನು.

ಪ್ರಭಾಕರವರ್ಧನನಿಗೆ ರಾಜ್ಯವರ್ಧನ, ಹರ್ಷವರ್ಧನ ಎಂಬ ಇಬ್ಬರು ಪುತ್ರರೂ ರಾಜ್ಯಶ್ರೀ ಎಂಬ ಪುತ್ರಿಯೂ ಇದ್ದರು. ಪ್ರಭಾಕರವರ್ಧನನು ತನ್ನ ಮಕ್ಕಳಿಗೆ ಒಳ್ಳೆಯ ಸೈನಿಕ ಶಿಕ್ಷಣವನ್ನು ಕೊಡಿಸಿದನು. ಅಂತೆಯೆ ರಾಜ್ಯಶ್ರೀಯು ಪ್ರಾಪ್ತವಯಸ್ಸಿಗೆ ಬಂದ ಮೇಲೆ ಅವಳನ್ನು ಕನೂಜಿನ ದೊರೆ ಆವಂತಿವರ್ಮನ ಮಗನಾದ ಗೃಹವರ್ಮನಿಗೆ ಕೊಟ್ಟು ವಿಜೃಂಭಣೆಯಿಂದ ವಿವಾಹ ಮಾಡಿದನು. ಇದಾದ ತರುವಾಯದಲ್ಲೇ ಹೂಣರು ಪಂಜಾಬು ಪ್ರದೇಶದ ಮೇಲೆ ಧಾಳಿಮಾಡಿದರು. ಪ್ರಭಾಕರವರ್ಧನನಿಗೆ ಆಗಲೇ ವಯಸ್ಸಾಗಿದ್ದರಿಂದ ಅವನು ಯುದ್ಧಭೂಮಿಗೆ ಹೋಗುವಂತಿರಲಿಲ್ಲ. ಆದ್ದರಿಂದ ತನ್ನ ಹಿರಿಯ ಮಗ ರಾಜ್ಯವರ್ಧನನನ್ನು ಹೂಣರ ವಿರುದ್ಧ ಸೈನ್ಯ ಸಮೇತ ಕಳುಹಿಸಿದನು. ಹರ್ಷನು ತನ್ನ ಸೋದರನೊಂದಿಗೆ ಹೋಗುವ ಅಪೇಕ್ಷೆಯನ್ನು ವ್ಯಕ್ತಪಡಿಸಿದರೂ ಅವನಿನ್ನೂ ಅಪ್ರಾಪ್ತ ವಯಸ್ಕನಾಗಿದ್ದರಿಂದ ಅವನಿಗೆ ಬೆಂಬಲ ಪಡೆಯ ನಾಯಕತ್ವವನ್ನು ವಹಿಸಿ ರಾಜ್ಯವರ್ಧನನು ಮುಂಚೂಣಿ ಸೈನ್ಯದ ನಾಯಕತ್ವವನ್ನು ವಹಿಸಿ ಯುದ್ಧರಂಗಕ್ಕೆ ಹೋದನು. ಹರ್ಷವರ್ಧನನು ತನ್ನ ಬಿಡುವಿನ ಸಮಯವನ್ನು ಬೇಟೆಯಲ್ಲಿ ಕಳೆಯುತ್ತಿದ್ದನು. ಹೀಗೆ ಮಕ್ಕಳಿಬ್ಬರೂ ರಾಜಧಾನಿಯಿಂದ ಹೊರಗಿದ್ದ ಸಮಯದಲ್ಲಿ ಪ್ರಭಾಕರವರ್ಧನನು ತೀವ್ರಖಾಯಿಲೆಗೊಳಗಾಗಿ ಹಾಸಿಗೆ ಹಿಡಿದನು. ಈ ಸುದ್ದಿಯನ್ನು ಆಸ್ಥಾನದ ದೂತನೊಬ್ಬನು ಹರ್ಷನಿಗೆ ಸುದ್ದಿ ಮುಟ್ಟಿಸಲು ಹರ್ಷನು ಕೂಡಲೆ ರಾಜಧಾನಿಗೆ ಧಾವಿಸಿ ಬಂದನು. ಅನಂತರ ತನ್ನ ಅಣ್ಣನಿಗೆ ಸುದ್ದಿ ಮುಟ್ಟಿಸಲು ದೂತನೊಬ್ಬನನ್ನು ಕಳುಹಿಸಿದನು. ರಾಜ್ಯವರ್ಧನನು ಹೂಣರ ವಿರುದ್ಧ ಹೋರಾಟದಲ್ಲಿ ತೀವ್ರವಾಗಿ ಗಾಯಗೊಂಡಿದ್ದನು. ಆದಾಗ್ಯೂ ತನ್ನ ತಂದೆಯ ಖಾಯಿಲೆಯ ಸುದ್ದಿಯು ತಲುಪಿದ ತಕ್ಷಣದಲ್ಲಿ ಅವನು ಹಿಂತಿರುಗಿ ಬಂದನು. ಆದರೆ ಈ ಸಮಯಕ್ಕಾಗಲೇ ಪ್ರಭಾಕರವರ್ಧನನು ಅಸುನೀಗಿದ್ದನು. ಇಬ್ಬರೂ ಸೋದರರು ತೀವ್ರವಾಗಿ ದುಃಖಿಸಿದರು. ದುಃಖ ತಪ್ತನಾದ ರಾಜ್ಯವರ್ಧನನು ತನ್ನ ತಮ್ಮನ ಪರವಾಗಿ ಸಿಂಹಾಸನವನ್ನು ಪರಿತ್ಯಜಿಸಿ ಸಂನ್ಯಾಸವನ್ನು ಕೈಗೊಳ್ಳುವುದಾಗಿ ತಿಳಿಸಿದನು. ಆದರೆ ಹರ್ಷವರ್ಧನನು ತನ್ನ ಸೋದರನ ಮನ ಸಂತೈಸಿ ಅವನನ್ನು ಸಂನ್ಯಾಸಿಯಾಗದಂತೆ ತಡೆಹಿಡಿದನು. ರಾಜ್ಯವರ್ಧನನು ಕ್ರಿ.ಶ.೬೦೫ರಲ್ಲಿ ಸ್ಥಾಣೇಶ್ವರದ ಅಧಿಪತಿಯಾಗಿ ಘೋಷಿಸಲ್ಪಟ್ಟನು.

ರಾಜ್ಯವರ್ಧನನು ಸಿಂಹಾಸನವನ್ನೇರಿದರೂ ಆದರಿಂದ ಸುಖಸಂತೋಷಗಳನ್ನು ಅನುಭವಿಸುವ ಅದೃಷ್ಟವನ್ನು ಹೊಂದಿರಲಿಲ್ಲ. ಇದೇ ಸಮಯದಲ್ಲಿ ಮತ್ತೊಂದು ಧಾರುಣ ಸುದ್ದಿಯು ಅವನಿಗೆ ತಲುಪಿತು. ಅದೆಂದರೆ ಮಾಳವದ ಅರಸನಾದ ದೇವಗುಪ್ತನು ಕನೂಜಿನ ದೊರೆಯೂ ಹಾಗೂ ತನ್ನ ಸೋದರಿ ರಾಜ್ಯಶ್ರೀಯ ಪತಿಯೂ ಆಗಿದ್ದ ಗೃಹವರ್ಮನ ಮೇಲೆ ಆಕ್ರಮಣ ಮಾಡಿ ಅವನನ್ನು ಮೋಸದಿಂದ ಕೊಂದುದಾಗಿತ್ತು. ಅಲ್ಲದೆ ರಾಜ್ಯಶ್ರೀಯನ್ನು ಬಂಧಿಸಿ ಮಾಳವದ ರಾಜಧಾನಿಯಾಗಿದ್ದ ಕನ್ಯಕುಬ್ಜದ ಸೆರೆಮನೆಯಲ್ಲಿ ಬಂಧಿಯನ್ನಾಗಿಡಲಾಗಿದೆಯೆಂಬ ಸುದ್ದಿಯು ಅವನಿಗೆ ತಲುಪಿತು. ರಾಜ್ಯವರ್ಧನನು ಬಹಳವಾಗಿ ದುಃಖಿಸಿದನು ಮತ್ತು ಅವನು ಕೆಣಕಿದ ಸಿಂಹವಾಗಿ **ಈ ಆಘಾತಕ್ಕೆ** ಕಾರಣನಾದ ಮಾಳವದ ದೊರೆಯನ್ನು ತುಂಡರಿಸಲು ನಿರ್ಧರಿಸಿ, ರಾಜ್ಯಾಡಳಿತವನ್ನು ತನ್ನ ತಮ್ಮ ಹರ್ಷನಿಗೆ ವಹಿಸಿ ಸೈನ್ಯದೊಂದಿಗೆ ಹೊರಟನು. ಮಾಳವದ ದೊರೆಯ ವಿರುದ್ಧ ಮಾಡಿದ ಹೋರಾಟದಲ್ಲಿ ರಾಜ್ಯವರ್ಧನನು ವಿಜಯಗಳಿಸಿ ಅವನಿಗೆ ಸಹಾಯ ಮಾಡಿದ್ದ ಬಂಗಾಳದ ಶಶಾಂಕನನ್ನು ಶಿಕ್ಷಿಸಲು ಗೌಡದೇಶದ ಕಡೆ ಮುಂದುವರಿದನು. ಆದರೆ ಶಶಾಂಕನು ಶಾಂತಿ ಸಂಧಾನದ ಸೋಗನ್ನು ಒಡ್ಡಿ ರಾಜ್ಯವರ್ಧನನನ್ನು ಔತಣಕೂಟಕ್ಕೆ ಆಹ್ವಾನಿಸಿದನು. ಆದರೆ ಈ ಔತಣಕೂಟದಲ್ಲಿ ರಾಜ್ಯವರ್ಧನನು ಮೋಸದಿಂದ ಕೊಲ್ಲಲ್ಪಟ್ಟನು. ಇದರಿಂದ ಹರ್ಷನಿಗೆ ದುರಂತಗಳ ಮೇಲೆ ದುರಂತವು ಒದಗಿಬಂದಿತು. ಆದರೆ ಅವನು ಎದೆಗುಂದದೆ ಮಂತ್ರಿಗಳ ಸಲಹೆಯ ಮೇರೆಗೆ ತಕ್ಷಣವೇ ಕಾರ್ಯೋನ್ಮುಖನಾದನು.

**(ಹರ್ಷವರ್ಧನ ಕ್ರಿ.ಶ. 606-647)**

ಹರ್ಷವರ್ಧನನು ಪಟ್ಟಾಭಿಷಕ್ತನಾದಾಗ ಅವನಿಗಿನ್ನೂ ಹದಿನಾರು ವರ್ಷವಯಸ್ಸಾಗಿತ್ತು ಮತ್ತು ಅವನ ಎದುರಿಸಬೇಕಾಗಿದ್ದ ಸಮಸ್ಯೆಗಳು ಬಹಳ ಭೀಕರವಾಗಿದ್ದವು. ಇವುಗಳಲ್ಲಿ ತನ್ನ ತಂಗಿಯನ್ನು ಬಂಧನದಿಂದ ಬಿಡಿಸಿ ಕರೆತರುವುದು ಮೊದಲನೆಯ ಕೆಲಸವಾಗಿತ್ತು. ಎರಡನೆಯದು ತನ್ನ ಅಣ್ಣನನ್ನು ಮೋಸದಿಂದ ಕೊಂದ ಶಶಾಂಕನ ಮೇಲೆ ಸೇಡುತೀರಿಸಿಕೊಳ್ಳುವುದಾಗಿತ್ತು. ಹರ್ಷನು ತನ್ನ ಸೋದರಮಾವನ ಮಗನಾದ ಭಂಡಿ ಎಂಬವನನ್ನು ಶಶಾಂಕನ ವಿರುದ್ಧ ಕಳುಹಿಸಿ ತನ್ನ ತಂಗಿಯನ್ನು ಬಂಧನದಿಂದ ಬಿಡಿಸಲು ಮಾಳವದ ಕಡೆ ತಾನೆ ಸೈನ್ಯದೊಂದಿಗೆ ಹೊರಟನು. ಆದರೆ ಈ ನಡುವೆ ರಾಜ್ಯಶ್ರೀಯು ಕನ್ಯಕುಬ್ಜದ ಸೆರೆಮನೆಯಿಂದ ತಪ್ಪಿಸಿಕೊಂಡು ವಿಂಧ್ಯಪರ್ವತದ ಅರಣ್ಯದಲ್ಲಿದ್ದ ಬೌದ್ಧ ಸನ್ಯಾಸಿ ದಿವಾಕರ ಮಿತ್ರನ ಆಶ್ರಮ ಸೇರಿದ್ದಳು ಮತ್ತು ಅವಳು ಜೀವನದಲ್ಲಿ ಜಿಗುಪ್ಸೆ ಗೊಂಡು ಅಗ್ನಿಪ್ರವೇಶ ಮಾಡಲು ಸಿದ್ಧತೆ ನಡೆಸಿದ್ದಳು. ಹರ್ಷವರ್ಧನನು ತನ್ನ ಸಹೋದರಿಯನ್ನು ಹುಡುಕಿಕೊಂಡು ವಿಂಧ್ಯಾರಣ್ಯವನ್ನು ಪ್ರವೇಶಿಸಿ ದಿವಾಕರ ಮಿತ್ರನ ಆಶ್ರಮವನ್ನು ತಲುಪಿ ತನ್ನ ಸೋದರಿಯನ್ನು ಸಂತೈಸಿ ಅವಳನ್ನು ಕನೂಜಿಗೆ ಕರೆದು ಕೊಂಡು ಬಂದನು. ರಾಜ್ಯಶ್ರೀಯು ಬೌದ್ಧಭಿಕ್ಷುಣಿಯಾಗುವುದಾಗಿ ತಿಳಿಸಿದಳು ರಾಜ್ಯಶ್ರೀಗೆ ಮಕ್ಕಳಿರಲಿಲ್ಲವಾದ್ದರಿಂದ ಕನೂಜಿನ ಸಿಂಹಾಸನವೂ ತೆರವಾಗಿದ್ದಿತು. ಹರ್ಷನು ತನ್ನ ತಂಗಿಯ ಅಪೇಕ್ಷೆಯಂತೆ ಮೌಖರಿ ರಾಜ್ಯದ ಆಡಳಿತ ಸೂತ್ರವನ್ನೂ ವಹಿಸಿಕೊಂಡನು. ಈಗ ಎರಡು ರಾಜ್ಯಗಳೂ ಒಂದುಗೂಡಿಸಲ್ಪಟ್ಟು ಸ್ಥಾಣೇಶ್ವರದ ಹರ್ಷವರ್ಧನನು ಕನೂಜಿನ ಶ್ರೀಹರ್ಷನೂ ಆದನು ಮತ್ತು ತನ್ನ ರಾಜಧಾನಿಯನ್ನು ಕನೂಜಿಗೆ ವರ್ಗಾಯಿಸಿದನು.

## ಶ್ರೀಹರ್ಷನ ದಿಗ್ವಿಜಯಗಳು

ಶ್ರೀಹರ್ಷನು ತನ್ನ ಸಹೋದರಿಯನ್ನು ರಾಜಧಾನಿಗೆ ಹಿಂದಿರುಗಿ ಕರೆದುಕೊಂಡು ಬಂದನಂತರ ತನ್ನ ಮನೆತನದ ಪರಮ ಶತ್ರುವಾಗಿದ್ದ ಬಂಗಾಳದ ಶಶಾಂಕನ ವಿರುದ್ಧ ಸೇಡುತೀರಿಸಿಕೊಳ್ಳಲು ಅಪಾರ ಸೈನ್ಯದೊಂದಿಗೆ ದಂಡೆತ್ತಿ ಹೋದನು. ಅವನಿಗೆ ಕಾಮರೂಪ (ಅಸ್ಸಾಂ)ದ ಭಾಸ್ಕರವರ್ಮನು ಸಹಾಯ ಮಾಡಿದನು. ಶಶಾಂಕನು ಸಧ್ಯದಲ್ಲಿ ಸೋಲಿಸಲ್ಪಟ್ಟರೂ ಅವನು ಕ್ರಿ.ಶ. 638ರಲ್ಲಿ ಕಾಲವಾಗುವವರೆಗೂ ಹರ್ಷನಿಗೆ ತೊಂದರೆಕೊಟ್ಟನು. ಹರ್ಷನು ಮಹತ್ವಾಕಾಂಕ್ಷಿಯೂ ಮತ್ತು ಮಹಾದಿಗ್ವಿಜಯಿಯೂ ಆಗಿದ್ದನು ಸಮುದ್ರಗುಪ್ತನಂತೆ ಇಡೀ ಭಾರತದ ಮೇಲೆ ತನ್ನ ಪ್ರಭುತ್ವವನ್ನು ಸ್ಥಾಪಿಸಬೇಕೆಂಬ ಅಪೇಕ್ಷೆ ಹೊಂದಿದ್ದನು. ಮಾಳವ ಮತ್ತು ಗೌಡದೇಶಗಳ ಮೇಲೆ ದಂಡಯಾತ್ರೆಗಳನ್ನು ನಡೆಸಿ ಪ್ರತೀಕಾರ ಕೈಗೊಂಡಿದ್ದನು. ಈಗ ಅವನು ಸಾಮ್ರಾಜ್ಯ ವಿಸ್ತರಣೆಯ ಕಡೆಗಮನ ಹರಿಸಿ ತನ್ನ ದಿಗ್ವಿಜಯಗಳನ್ನು ಆರಂಭಿಸಿದನು. ಸುಮಾರು ಆರುವರ್ಷಗಳ ಉತ್ತರಭಾರತದ ಮೇಲೆ ದಂಡಯಾತ್ರೆಗಳನ್ನು ಕೈಗೊಂಡು ಅನೇಕ ರಾಜರುಗಳನ್ನು ಸೋಲಿಸಿ ತನಗೆ ಶರಣಾಗತರನ್ನಾಗಿ ಮಾಡಿಕೊಂಡನು. ಪೂರ್ವದಲ್ಲಿ ಮಗಧ ಪ್ರದೇಶವನ್ನು ಗುಪ್ತರಿಂದ ವಶಪಡಿಸಿಕೊಂಡನು. ಪಶ್ಚಿಮದಲ್ಲಿ ವಲ್ಲಭಿಯ ಮೈತ್ರಕರ ರಾಜನಾಗಿದ್ದ ಧೃವಸೇನನನ್ನು ಸೋಲಿಸಿದನು. ಸೋತ ಧೃವಸೇನನನ್ನು ಹರ್ಷನು ತನ್ನ ಸಾಮಂತ ರಾಜನನ್ನಾಗಿ ಮಾಡಿಕೊಂಡಿದ್ದಲ್ಲದೆ ಅವನಿಗೆ ತನ್ನ ಮಗಳನ್ನು ಕೊಟ್ಟು ವಿವಾಹ ಮಾಡಿ ಎರಡು ರಾಜ್ಯಗಳ ನಡುವೆ ಮಧುರ ಬಾಂಧವ್ಯವನ್ನೇರ್ಪಡಿಸಿದನು. ಪಶ್ಚಿಮ ಭಾರತದ ಮೇಲೆ ಕೈಗೊಂಡ ದಂಡಯಾತ್ರೆಗಳ ಪರಿಣಾಮವಾಗಿ ಆನಂದಪುರ, ಕಚ್, ಸೌರಾಷ್ಟ್ರ ಮತ್ತು ಪಶ್ಚಿಮ ಮಾಳವ ಪ್ರದೇಶಗಳು ಅವನ ಸಾಮ್ರಾಜ್ಯದಲ್ಲಿ ಸೇರಿಹೋದವು.

ಉತ್ತರ ಭಾರತದ ಮೇಲಿನ ದಿಗ್ವಿಜಯದ ನಂತರ ಹರ್ಷನು ಸಮುದ್ರಗುಪ್ತನಂತೆ ದಕ್ಷಿಣ ಭಾರತದ ದಿಗ್ವಿಜಯವನ್ನು ಕೈಗೊಂಡನು. ಆದರೆ ಹರ್ಷನು ಉತ್ತರ ಭಾರತದಲ್ಲಿ ವಿಶಾಲ ಸಾಮ್ರಾಜ್ಯ ಸ್ಥಾಪನೆಯ ಕಾರ್ಯದಲ್ಲಿ ತೊಡಗಿದ್ದಂತೆ ದಕ್ಷಿಣ ಭಾರತದಲ್ಲಿ ಚಾಳುಕ್ಯರ ದೊರೆ ಎರಡನೆ ಪುಲಿಕೇಶಿಯು ಅಂತಹದೇ ಸಾಮ್ರಾಜ್ಯ ಸ್ಥಾಪನೆಯಲ್ಲಿ ತೊಡಗಿದ್ದನು. ಇದರಿಂದ ಇಬ್ಬರೂ ತಮ್ಮ ತಮ್ಮ ಶಕ್ತಿ ಸಾಮರ್ಥ್ಯಗಳನ್ನು ಅಳೆದು ಕೊಳ್ಳಬೇಕಾಗಿತ್ತು. ಈ ಇಬ್ಬರು ಸಾಮ್ರಾಟರ ಸೈನ್ಯಗಳು ಕ್ರಿ.ಶ. 630ರಿಂದ 643ರ ಅವಧಿಯಲ್ಲಿ ನರ್ಮದಾನದಿಯ ದಂಡೆಯ ಮೇಲೆ ಹೋರಾಡಿದವು. ಅಂತ್ಯದಲ್ಲಿ ಶ್ರೀ ಹರ್ಷನು ಸೋತು ಹಿಮ್ಮೆಟ್ಟಬೇಕಾಯಿತು. ನರ್ಮದಾನದಿಯು ಎರಡು ಸಾಮ್ರಾಜ್ಯಗಳ ಗಡಿಯಾಯಿತು. ಎರಡನೆ ಪುಲಿಕೇಶಿಯು ಹರ್ಷನ ವಿರುದ್ಧ ಗಳಿಸಿದ ವಿಜಯವು ಚಾಳುಕ್ಯರ ಶಕ್ತಿ ಸಾಮರ್ಥ್ಯದ ವೈಭವದ ವಿಜಯುವಾಗಿತ್ತು. ಇದಾದನಂತರ ಹರ್ಷನು ಯುದ್ಧವನ್ನು ತ್ಯಜಿಸಿ ಶಾಂತಿಯಿಂದ ರಾಜ್ಯವಾಳತೊಡಗಿದನು.

## ಹರ್ಷನ ಸಾಮ್ರಾಜ್ಯ

ಪ್ರಾಚೀನ ಭಾರತದಲ್ಲಿ ವಿಶಾಲ ಸಾಮ್ರಾಜ್ಯಗಳನ್ನು ಸ್ಥಾಪಿಸಿ ಆಳಿದ ರಾಜರುಗಳಲ್ಲಿ ಹರ್ಷನು ಕೊನೆಯವನಾಗಿದ್ದಾನೆ. ಇವನ ಸಾಮ್ರಾಜ್ಯವು ಪೂರ್ವದಲ್ಲಿ

ಬಂಗಾಳದ ಗಂಜಾಂನಿಂದ ಹಿಡಿದು ಪಶ್ಚಿಮದಲ್ಲಿ ವಲ್ಲಭಿಯವರೆಗೂ ಉತ್ತರದಲ್ಲಿ ಕಾಶ್ಮೀರದಿಂದ ದಕ್ಷಿಣದಲ್ಲಿ ನರ್ಮದಾನದಿಯವರೆಗೂ ವಿಸ್ತರಿಸಿದ್ದಿತು. ಆದರೆ ಇಡೀ ಉತ್ತರ ಭಾರತವೆಲ್ಲವೂ ಅವನ ಮತ್ತು ಅವನ ಅಧಿಕಾರಿಗಳ ನೇರವಾದ ಆಡಳಿತಕ್ಕೊಳಪಟ್ಟಿದ್ದಿತೆಂಬುದು ಎಲ್ಲಿಯೂ ಸೂಚಿಸಲ್ಪಟ್ಟಿಲ್ಲ. ಉತ್ತರ ಭಾರತದಲ್ಲಿನ ಬಹುಭಾಗವು ಸ್ಥಳೀಯ ರಾಜರುಗಳ ವಶದಲ್ಲಿಯೇ ಇದ್ದು ಅವರು ಹರ್ಷನ ಸಾಮಂತರಾಜರುಗಳಾಗಿ ಮುಂದುವರಿದಿದ್ದರು. ಇದೊಂದು ರೀತಿಯ ಊಳಿಗಮಾನ್ಯ ಒಕ್ಕೂಟ ವ್ಯವಸ್ಥೆಯಾಗಿದ್ದಿತೆಂದು ಇತಿಹಾಸಕಾರ ಬೇನಿಪ್ರಸಾದ್ ಅಭಿಪ್ರಾಯ ಪಟ್ಟಿರುವರು. ಈ ಸಾಮಂತರಾಜರುಗಳು ಸ್ವಪ್ರೇರಣೆಯಿಂದಲೇ ಹರ್ಷನಿಗೆ ಶರಣಾಗತರಾಗಿದ್ದರು. ಈ ಕಾರಣದಿಂದಾಗಿಯೆ ಹರ್ಷನ ಸಾಮ್ರಾಜ್ಯವು ಎಷ್ಟು ಶೀಘ್ರವಾಗಿ ಏಳಿಗೆ ಹೊಂದಿತೋ ಅಷ್ಟೇ ಶೀಘ್ರವಾಗಿ ಅವನ ಮರಣಾನಂತರ ಪತನ ಹೊಂದಿತು. ಆದಾಗ್ಯೂ ಈ ಸಾಮಂತ ರಾಜರುಗಳು ಹರ್ಷನ ಬಗ್ಗೆ ಭೀತಿಯಿಂದಿದ್ದರು. ಕಾಮರೂಪದ ದೊರೆಯು ಹರ್ಷನ ಮಿತ್ರನಾಗಿದ್ದನು. ಸಿಂಧ್‌ನ ರಾಜನು ಕಪ್ಪಕಾಣಿಕೆಗಳನ್ನು ಒಪ್ಪಿಸಿದ್ದನು. ವಲ್ಲಭಿ ರಾಜನು ಅವನ ಅಳಿಯನಾಗಿದ್ದನು. ಹರ್ಷನು ಖ್ಯಾತಿಯು ದೇಶ ವಿದೇಶಗಳಲ್ಲೂ ಹರಡಿತ್ತು. ಚೀನಾ ಮತ್ತು ಪರ್ಶಿಯದ ರಾಜರುಗಳೂ ಹರ್ಷನ ಆಸ್ಥಾನಕ್ಕೆ ರಾಯಭಾರಿಗಳನ್ನು ಕಳುಹಿಸಿ ಸ್ನೇಹ ಸಂಬಂಧಗಳನ್ನು ಏರ್ಪಡಿಸಿಕೊಂಡಿದ್ದರು.

**ರಾಜ್ಯಾಡಳಿತ**

ಹರ್ಷನು ಮಹಾ ದಿಗ್ವಿಜಯಿಯಾಗಿದ್ದುದಲ್ಲದೆ ಶ್ರೇಷ್ಠ ಆಡಳಿತಗಾರನೂ ಆಗಿದ್ದನು. ಅವನ ಆಡಳಿತ ನೀತಿಯು ಉನ್ನತ ಆದರ್ಶಗಳಿಂದ ಕೂಡಿದ್ದಿತು. ಪ್ರಜೆಗಳ ಒಳಿತಿಗಾಗಿ ದುಡಿಯುವುದರಲ್ಲಿ ಹರ್ಷನಿಗೆ ಆಯಾಸವೆಂಬುದಿರಲಿಲ್ಲ. ಪ್ರಜಾನುರಾಗಿ ಯಾಗಿದ್ದ ಹರ್ಷನು ಆಗಾಗ್ಗೆ ಪ್ರವಾಸಕ್ಕೈಗೊಂಡು ಪ್ರಜೆಗಳ ಕಷ್ಟಸುಖಗಳನ್ನು ವಿಚಾರಿಸುತ್ತಿದ್ದನು. ಅವನ ಸಾಮ್ರಾಜ್ಯವು ಗುಪ್ತರ ಸಾಮ್ರಾಜ್ಯದಷ್ಟು ವಿಸ್ತಾರವಾಗಿರಲಿಲ್ಲವಾದರೂ ಅದಕ್ಕೆ ಒಳ್ಳೆಯ ಆಡಳಿತವನ್ನು ರೂಪಿಸಿದ್ದನು. ಗುಪ್ತ ಸಾಮ್ರಾಟರಂತೆ ತನ್ನ ಸಾಮ್ರಾಜ್ಯವನ್ನು ಆಡಳಿತಾನುಕೂಲಕ್ಕಾಗಿ ಅನೇಕ ಭಾಗಗಳನ್ನಾಗಿ ವಿಂಗಡಿಸಿದ್ದನು. ಗ್ರಾಮವು ಆಡಳಿತದ ಕಟ್ಟಕಡೆಯ ಅಂಗವಾಗಿತ್ತು. ಆಡಳಿತದ ವಿಭಾಗಗಳ ಮೇಲ್ವಿಚಾರಣೆಯನ್ನು ನೋಡಿಕೊಳ್ಳಲು ನೇಮಿತರಾಗಿದ್ದ ಅಧಿಕಾರಿಗಳಿಗೆ ಮಹಾಸಾಮಂತ (ಗೌವರ್ನರ್) ರಾಜಸ್ಥಾನೀಯ, ಉಪಾರಿಕ ಮತ್ತು ವಿಷಯಪತಿಗಳೆಂದು ಕರೆಯುತ್ತಿದ್ದರು. ಕೆಲವು ವೇಳೆ ಸರ್ಕಾರದ ಉನ್ನತ ಅಧಿಕಾರದ ಸ್ಥಾನಗಳಿಗೆ ಸಾಮಂತರಾಜರುಗಳನ್ನು ನೇಮಿಸಿಕೊಳ್ಳುವ ಪದ್ಧತಿಯತ್ತು. ಆಡಳಿತದಲ್ಲಿ ಚಕ್ರವರ್ತಿಗೆ ಸಹಾಯಮಾಡಲು ಮಂತ್ರಿಮಂಡಲವಿದ್ದಿತು. ಆವಂತಿ ಎಂಬುವನು ಪ್ರಧಾನ ಮಂತ್ರಿಯೂ, ಸಿಂಹನಾದ ಎಂಬುವನು ಮಹಾದಂಡನಾಯಕನೂ ಕುಂತಲ ಎಂಬವನು ಅಶ್ವಪಡೆಯ ಅಧಿಕಾರಿಯೂ ಸ್ಕಂಧಗುಪ್ತನು ಗಜಸೈನ್ಯದ ಅಧಿಕಾರಿಯೂ ಆಗಿದ್ದರು. ಇವರ ಸೇವೆಗೆ ಹಣದರೂಪದ ಸಂಭಾವನೆಗೆ ಬದಲಾಗಿ ಭೂಮಿಯನ್ನು ಉಂಬಳಿಯಾಗಿ ಕೊಡಲಾಗಿತ್ತು.

ಹರ್ಷನು ಶಿಸ್ತಿನಿಂದ ಕೂಡಿದ ಸೈನ್ಯವನ್ನಿಟ್ಟುಕೊಂಡಿದ್ದನು. ದೇಶದಲ್ಲಿನ ಆಂತರಿಕ ಗಲಭೆಗಳನ್ನು ಮತ್ತು ಶತ್ರುಗಳನ್ನು ಎದುರಿಸಬೇಕಾಗಿದ್ದರಿಂದ ದೊಡ್ಡ

ಸೈನ್ಯದ ಅವಶ್ಯಕತೆಯಿತ್ತು. ಇವನ ಸೈನ್ಯವು 5,000 ಗಜ ಸೈನ್ಯದಿಂದಲೂ 20,000 ಅಶ್ವದಳದಿಂದಲೂ ಮತ್ತು 50,000 ಪದಾತಿದಳದಿಂದಲೂ ಕೂಡಿದ್ದಿತು. ಸೈನಿಕರಿಗೆ ನೇರವಾಗಿ ಸಂಬಳ ಕೊಡಲಾಗುತ್ತಿತ್ತು.

ಚಕ್ರವರ್ತಿಯು ನ್ಯಾಯದ ಅಂತಿಮ ತೀರ್ಪುಗಾರನಾಗಿದ್ದನು. ಈ ಕಾಲದಲ್ಲಿ ಶಿಕ್ಷೆಗಳು ಕಠಿಣವಾಗಿದ್ದವು. ಜೀವಾವಧಿ ಶಿಕ್ಷೆ, ಗಡೀಪಾರು, ಅಂಗವಿಚ್ಛೇದನ ಮತ್ತು ದಂಡ ಮೊದಲಾದ ಶಿಕ್ಷೆಗಳು ಬಳಕೆಯಲ್ಲಿದ್ದವು. ಕಳ್ಳತನ, ದರೋಡೆಗಳು ಸರ್ವ ಸಾಮಾನ್ಯವಾಗಿದ್ದು ಚೀನೀ ಯಾತ್ರಿಕ ಹ್ಯೂಯನ್‌ತ್ಸಾಂಗನೂ ಕೂಡ ತನ್ನ ಪರ್ಯಟನೆ ಕಾಲದಲ್ಲಿ ದರೋಡೆಕಾರರ ಆಕ್ರಮಣಕ್ಕೊಳಗಾಗಿದ್ದನು.

ಭೂಕಂದಾಯವು ರಾಜ್ಯದ ಮುಖ್ಯ ವರಮಾನವಾಗಿತ್ತು. ರೈತರು ತಾವು ಬೆಳೆದ ಫಸಲಿನಲ್ಲಿ ಷಡ್ಭಾಗವನ್ನು ಕಂದಾಯದ ರೂಪದಲ್ಲಿ ಸರ್ಕಾರಕ್ಕೆ ಸಲ್ಲಿಸಬೇಕಿತ್ತು. ಆದಾಗ್ಯೂ ತೆರಿಗೆಗಳು ಭಾರವಾಗಿರಲಿಲ್ಲ. ವ್ಯಾಪಾರ ಪದಾರ್ಥಗಳ ಮೇಲಿನ ತೆರಿಗೆ, ದೋಣಿ, ವೃತ್ತಿತೆರಿಗೆ, ದಂಡ ಕಪ್ಪಕಾಣಿಕೆಗಳು ಇತರ ಮುಖ್ಯ ಆಧಾರಗಳಾಗಿದ್ದವು, ವೃತ್ತಿ ಸಂಘಗಳು ಹಣಕಾಸಿನ ವ್ಯವಹಾರದಲ್ಲಿ ಮುಖ್ಯ ಪಾತ್ರವಹಿಸಿದ್ದವು. ಆಭರಣಗಳ ತಯಾರಿಕೆ, ಕೆತ್ತನೆ ಕೆಲಸ, ನೂಲುವುದು, ನೇಯುವುದು, ಮರದಿಂದ ಗೃಹೋಪಕರಣಗಳನ್ನು ತಯಾರಿಸುವುದು, ಮೊದಲಾದ ಕೈಗಾರಿಕೆಗಳು ಪ್ರಗತಿ ಹೊಂದಿದ್ದವು. ಬಾಣನ ಹರ್ಷಚರಿತ ಮತ್ತು ಹ್ಯೂಯನ್‌ತ್ಸಾಂಗನ ಬರವಣಿಗೆಗಳಿಂದ ದೇಶವು ಸುಭಿಕ್ಷವಾಗಿದ್ದಿತ್ತೆಂದು ತಿಳಿದುಬರುತ್ತದೆ. ರಾಜರುಗಳು ಮತ್ತು ಗಣ್ಯ ವ್ಯಕ್ತಿಗಳು, ಶ್ರೀಮಂತ ಜೀವನ ನಡೆಸುತ್ತಿದ್ದರು. ಕನೂಜ್, ಸ್ಥಾಣೇಶ್ವರ, ವಲ್ಲಭಿ, ಅಯೋಧ್ಯೆ, ಕೌಸಾಂಬಿ, ಚಂಪ ಮತ್ತು ವಾರಣಾಸಿಗಳು ಪ್ರಮುಖ ನಗರಗಳಾಗಿದ್ದು. ಕಲೆ, ಕೈಗಾರಿಕೆ ಮತ್ತು ವಿದ್ಯಾಭ್ಯಾಸ ಹಾಗೂ ಶ್ರೀಮಂತಿಕೆಗೆ ಹೆಸರುವಾಸಿಯಾಗಿದ್ದವು.

ಹರ್ಷನು ಅಶೋಕ ಚಕ್ರವರ್ತಿಯಂತೆ ಅನೇಕ ಪ್ರಜಾಹಿತ ಕಾರ್ಯಗಳಲ್ಲಿ ಆಸಕ್ತಿಯುಳ್ಳವನಾಗಿದ್ದನು. ಸರ್ಕಾರದ ಒಟ್ಟು ವರಮಾನದಲ್ಲಿ ಚತುರ್ಭಾಗವನ್ನು ಸರ್ಕಾರದ ಆಡಳಿತ ಸಿಬ್ಬಂದಿ ಹಾಗೂ ಧಾರ್ಮಿಕ ವೃತ್ತಿಗಳಿಗೂ, ಉಳಿದುದನ್ನು ಶ್ರೇಷ್ಠ ಅಧಿಕಾರಿಗಳಿಗೂ ಘನವಿದ್ವಾಂಸರಿಗೂ ಹಾಗೂ ಬುದ್ಧಿಜೀವಿಗಳಿಗೂ ಉಂಬಳಿ ಕೊಡುವುದಕ್ಕೂ, ಹಾಗೂ ವಿವಿಧ ಧರ್ಮಗಳಿಗೆ ಸೇರಿದವರಿಗೆ ದಾನಧರ್ಮಗಳನ್ನು ಮಾಡುವುದಕ್ಕೂ ವಿನಿಯೋಗಿಸಲಾಗುತ್ತಿತ್ತು. ಪ್ರಜೆಗಳ ಅನುಕೂಲಕ್ಕಾಗಿ ರಸ್ತೆಗಳನ್ನು ನಿರ್ಮಿಸಿ ಅವುಗಳ ಇಕ್ಕೆಲಗಳಲ್ಲೂ ನೆರಳಿಗಾಗಿ ಸಾಲುಮರಗಳನ್ನು ನೆಡಿಸಿದ್ದನು. ಹೆಚ್ಚಿನ ಸಂಖ್ಯೆಯಲ್ಲಿ ಧಾರ್ಮಿಕ ಸಂಸ್ಥೆಗಳನ್ನೂ ವಿಶ್ರಾಂತಿ ಗೃಹಗಳನ್ನೂ, ಆಸ್ಪತ್ರೆಗಳನ್ನೂ, ಕೆರೆಕಟ್ಟೆಗಳನ್ನೂ ವಿದ್ಯಾಸಂಸ್ಥೆಗಳನ್ನೂ ಮತ್ತು ಸನ್ಯಾಸಾಶ್ರಮಗಳನ್ನು ನಿರ್ಮಿಸಿದ್ದನು. ಒಟ್ಟಿನಲ್ಲಿ ಹರ್ಷನ ಆಡಳಿತವು ಪ್ರಜಾಹಿತ ಕಾರ್ಯಗಳಿಂದ ಕೂಡಿದ್ದು ಜನರು ಸಂತೃಪ್ತ ಜೀವನ ನಡೆಸುತ್ತಿದ್ದರು. ಜನರು ಪ್ರಾಮಾಣಿಕರಾಗಿದ್ದರು ಮತ್ತು ಅವರ ನೈತಿಕ ಮಟ್ಟವು ಉನ್ನತ ಮಟ್ಟದಲ್ಲಿತ್ತೆಂದು ಹ್ಯೂಯನ್‌ತ್ಸಾಂಗ್ ಹೇಳುತ್ತಾನೆ.

**ಕನೂಜಿನ ಧಾರ್ಮಿಕ ಮಹಾಸಭೆ**

ಬೌದ್ಧಮತದ ಇತಿಹಾಸದಲ್ಲಿ ಹರ್ಷನ ಹೆಸರು ಅಶೋಕ ಚಕ್ರವರ್ತಿಯ ಹೆಸರಿನಂತೆ ಚಿರಸ್ಥಾಯಿಯಾಗಿ ಉಳಿದಿದೆ. ಹರ್ಷಚಕ್ರವರ್ತಿಯು ಹುಟ್ಟಿನಿಂದಲೇ

ಬೌದ್ಧ ಮತೀಯನಾಗಿರಲಿಲ್ಲ. ಅವನು ತನ್ನ ಆಳ್ವಿಕೆಯ ಇಪ್ಪತ್ತೈದನೇ ವರ್ಷದವರೆಗೂ ಶಿವನ ಆರಾಧಕನಾಗಿದ್ದನು. ಅನಂತರ ಬೌದ್ಧ ಸನ್ಯಾಸಿ ದಿವಾಕರ ಮಿತ್ರ ಮತ್ತು ತನ್ನ ಸಹೋದರಿ ರಾಜ್ಯಶ್ರೀಯ ಪ್ರಭಾವವೂ ಹಾಗೂ ಚೀನೀ ಯಾತ್ರಿಕ ಹ್ಯೂಯನ್‌ತ್ಸಾಂಗನು ಬೌದ್ಧಮತದ ಬಗ್ಗೆ ನೀಡಿದ ವ್ಯಾಖ್ಯಾನಗಳೂ ಅವನ ಮೇಲೆ ಹೆಚ್ಚಿನ ಪ್ರಭಾವ ಬೀರಿ ಹರ್ಷನು ಮಹಾಯಾನ ಬೌದ್ಧಮತದ ಪ್ರತಿಪಾದಕನಾದನು. ಆದರೆ ಅವನು ಧರ್ಮ ಪ್ರಚಾರಕನಾಗಿರಲಿಲ್ಲ. ಹರ್ಷಚಕ್ರವರ್ತಿಯು ಬೌದ್ಧಮತದ ಬಗ್ಗೆ ಹೆಚ್ಚಿನ ಒಲವು ಉಳ್ಳವನಾಗಿದ್ದರೂ ಇತರ ಮತಗಳನ್ನು ಅಗೌರವದಿಂದ ಕಾಣಲಿಲ್ಲ. ಬೌದ್ಧಮತದ ಪ್ರತಿಪಾದಕನಾಗಿ ಬುದ್ಧನ ತತ್ವಗಳಿಗನುಗುಣವಾಗಿ ನಡೆದುಕೊಂಡನು. ಗಂಗಾನದಿ ಕಣಿವೆ ಪ್ರದೇಶದಲ್ಲಿ ಮತ್ತು ಬೌದ್ಧಮತೀಯರ ಧಾರ್ಮಿಕ ಕೇಂದ್ರಗಳಲ್ಲಿ ಅನೇಕ ಸ್ತೂಪಗಳನ್ನು ನಿರ್ಮಿಸಿದನು. ಹರ್ಷನು ಬೌದ್ಧಮತಕ್ಕೆ ವಿಶೇಷ ಪ್ರೋತ್ಸಾಹ ನೀಡಿದ್ದರೂ ಬೌದ್ಧಮತವು ಕನೂಜನ್ನು ಬಿಟ್ಟರೆ ಬೇರೆ ಕಡೆ ಆದರ ಜನಪ್ರಿಯತೆಯು ಕಡಿಮೆಯಾಗಿದ್ದಿತೆಂದು ಹೇಳಲಾಗಿದೆ.

ಹರ್ಷಚಕ್ರವರ್ತಿಯು ಪ್ರತಿವರ್ಷವೂ ಬೌದ್ಧರ ಸಮ್ಮೇಳನವನ್ನು ಸಮಾವೇಶಗೊಳಿಸಿ ಧಾರ್ಮಿಕ ಚರ್ಚೆಯನ್ನು ಏರ್ಪಡಿಸುತ್ತಿದ್ದನು. ಇಂತಹ ಸಮ್ಮೇಳನಗಳಲ್ಲಿ ಹ್ಯೂಯನ್‌ತ್ಸಾಂಗನ ಗೌರವಾರ್ಥವಾಗಿ ಕನೂಜಿನಲ್ಲಿ ಏರ್ಪಡಿಸಿದ್ದ ಸಭೆಯು ಹೆಚ್ಚು ಪ್ರಸಿದ್ಧಿಯಾದುದಾಗಿದೆ. ಹಿಂದೆ ಉತ್ತರ ಭಾರತದಲ್ಲಿ ಪಾಟಲೀಪುತ್ರವು ಪಡೆದಿದ್ದ ಪ್ರಸಿದ್ಧಿಯನ್ನು ಹರ್ಷನ ಕಾಲದಲ್ಲಿ ಕನೂಜ್ ಪಟ್ಟಣವು ಪಡೆದಿತ್ತು. ಈ ಪಟ್ಟಣವು ಐದುಮೈಲಿ ಉದ್ದವೂ ಒಂದೂವರೆ ಮೈಲಿ ಅಗಲವೂ ಇದ್ದು ಬೌದ್ಧ ವಿಹಾರಗಳಿಂದಲೂ ಮತ್ತು ಹಿಂದೂ ದೇವಾಲಯಗಳಿಂದಲೂ ಶೋಭಿಸುತ್ತಿತ್ತೆಂದು ಹೂಯನ್‌ತ್ಸಾಂಗ್ ಹೇಳುತ್ತಾನೆ. ಈ ಮಹಾಸಭೆಗೆ ಎಲ್ಲ ಧರ್ಮದವರನ್ನು ಆಹ್ವಾನಿಸಲಾಗಿತ್ತು ಇದಲ್ಲದೆ ಈ ಮಹಾಸಭೆಯಲ್ಲಿ ಇಪ್ಪತ್ತು ಜನ ಸಾಮಂತರಾಜರು, ಇನ್ನೂರು ಮಂದಿ ಸಚಿವರು, ಒಂದುಸಾವಿರ ಬೌದ್ಧ ಸನ್ಯಾಸಿಗಳು, ಐದುನೂರು ಬ್ರಾಹ್ಮಣ ಪಂಡಿತರು ಮತ್ತು ಅಪರಾ ಸಂಖ್ಯೆಯಲ್ಲಿ ಜೈನ ವಿದ್ವಾಂಸರು ಭಾಗವಹಿಸಿದ್ದರು. ಗಂಗಾ ನದಿಯ ದಂಡೆಯ ಮೇಲೆ ಒಂದುನೂರು ಅಡಿ ಎತ್ತರದ ಗೋಪುರವನ್ನುಳ್ಳ ವೇದಿಕೆಯನ್ನು ನಿರ್ಮಿಸಿ ಅದರಲ್ಲಿ ದೊರೆಯ ಪ್ರಮಾಣದ ಬುದ್ಧನ ಚಿನ್ನದ ವಿಗ್ರಹವನ್ನು ಇಡಲಾಗಿತ್ತು. ಅಂತೆಯೆ ಸಭಿಕರಿಗೆ ವಿಶಾಲವಾದ ಚಪ್ಪರವನ್ನು ನಿರ್ಮಿಸಿ ಸಹಸ್ರಾರು ಜನರು ಕುಳಿತು ಕಾರ್ಯಕಲಾಪಗಳಲ್ಲಿ ಭಾಗವಹಿಸಲು ಸ್ಥಳಾವಕಾಶ ಕಲ್ಪಿಸಲಾಗಿತ್ತು. ಈ ಸಭೆಯು ಸುಮಾರು ಮೂರು ವಾರಗಳ ಕಾಲ ಸತತವಾಗಿ ನಡೆಯಿತು. ಪ್ರತಿದಿವಸವೂ ಬುದ್ಧನ ವಿಗ್ರಹವನ್ನು ಸುಂದರವಾಗಿ ಅಲಂಕರಿಸಿದ್ದ ಆನೆಯ ಮೇಲೆ ಇಟ್ಟು ಮೆರವಣಿಗೆ ಮಾಡಲಾಗುತ್ತಿತ್ತು. ಹರ್ಷನು ಇಂದ್ರನಂತೆ ಉಡುಪು ಧರಿಸಿ, ಸಾಮಂತ ರಾಜರುಗಳು, ಪ್ರಮುಖ ಅಧಿಕಾರಿಗಳು, ಪುರೋಹಿತರು ಶ್ರಮಣರು, ಸಾಧುಸಂತರು ಮತ್ತು ಆನೆ ಕುದುರೆಗಳಿಂದೊಡಗೂಡಿದ ಈ ಉನ್ನತ ಸಮಾರಂಭದಲ್ಲಿ ವಿತಾನವನ್ನು ಹಿಡಿದು ಭಾಗವಹಿಸಿ ಬುದ್ಧದೇವನಿಗೆ ತನ್ನ ಗೌರವವನ್ನು ತೋರಿಸುತ್ತಿದ್ದನು. ಹೀಗೆ ಪ್ರತಿದಿವಸವೂ ಉತ್ಸವವು ನಡೆಯುತ್ತಿದ್ದು ವಿಗ್ರವನ್ನು ಗೋಪುರದಲ್ಲಿನ ಪೀಠದಲ್ಲಿ ಪ್ರತಿಷ್ಠಿಸಿದ ನಂತರ ಸಭೆಯು ಧಾರ್ಮಿಕ ಚರ್ಚೆಗಳನ್ನು ಆರಂಭಿಸುತ್ತಿತ್ತು. ಹರ್ಷನು ತನ್ನ ಸೋದರಿಯೊಂದಿಗೆ ಕುಳಿತು

ಆಸಕ್ತಿಯಿಂದ ಚರ್ಚೆಯಲ್ಲಿ ಪಾಲ್ಗೊಳ್ಳುತ್ತಿದ್ದನು. ಹ್ಯೂಯನ್‌ತ್ಸಾಂಗನು ಚರ್ಚೆಯಲ್ಲಿ ಅಗ್ರಪಾತ್ರ ವಹಿಸಿದ್ದನು. ಅವನು ಮಹಾಯಾನ ಪಂಥದ ತತ್ವಗಳನ್ನು ವಿವರಿಸಿ ಅದನ್ನೊಪ್ಪದವರು ಯಾರಾದರೂ ಇದ್ದರೆ ತಮ್ಮ ವಾದಗಳನ್ನು ಮಂಡಿಸುವಂತೆ ತಿಳಿಸಿದನು. ಆದರೆ ಇದರಿಂದ ಅಸೂಯೆಗೊಂಡ ಕೆಲವರು ವಾದವನ್ನು ಮಂಡಿಸುವುದಕ್ಕೆ ಬದಲಾಗಿ ಹೂಯನ್‌ತ್ಸಾಂಗನನ್ನು ಕೊಲೆಮಾಡಲು ಸಂಚು ನಡೆಸಿದರು. ಆದರೆ ಇದನ್ನು ತಿಳಿದ ಚಕ್ರವರ್ತಿಯು ಹ್ಯೂಯನ್‌ತ್ಸಾಂಗನ ವಿರುದ್ಧ ಸಂಚು ಮಾಡಲು ಪ್ರಯತ್ನಿಸಿದವರ ತಲೆಯನ್ನು ಕತ್ತರಿಸಲು ಆಜ್ಞೆಮಾಡುವುದಾಗಿ ಎಚ್ಚರಿಕೆ ನೀಡಿದನು. ಆದುದರಿಂದ ಜೀವದ ಮೇಲೆ ಆಸೆಯಿದ್ದ ವಿರೋಧಿಗಳು ತಮ್ಮ ಸಂಚನ್ನು ಕೈಬಿಟ್ಟರು. ಸಭೆಯ ಕಾರ್ಯಕಲಾಪಗಳು ಮುಂದುವರಿದವು. ಆದರೆ ಈ ಅಸೂಯೆಯು ಇಷ್ಟಕ್ಕೆ ಮುಗಿಯಲಿಲ್ಲ. ಸಭೆಯ ಮುಕ್ತಾಯದ ಸಮಯದಲ್ಲಿ ಅಸೂಯಪರರಾದ ಕೆಲವರು ಚಪ್ಪರಕ್ಕೆ ಬೆಂಕಿಹಚ್ಚಿದರು. ಚಪ್ಪರವು ಭಾಗಶಃ ಸುಟ್ಟು ಭಸ್ಮವಾಯಿತು. ಇದಲ್ಲದೆ ಹರ್ಷನನ್ನು ಕೊಲೆಮಾಡಲು ಅವರು ಪ್ರಯತ್ನಿಸಿದರು. ಹರ್ಷನು ಸಬೆಯ ಕಾರ್ಯ ಕಲಾಪಗಳನ್ನು ಕುರಿತು ವೀಕ್ಷಿಸುತ್ತಿದ್ದಾಗ ಕೊಲೆಗಡುಕನೊಬ್ಬನು ಚೂರಿ ಹಿಡಿದು ಅವನತ್ತ ಧಾವಿಸಿ ಬಂದನು. ಆದರೆ ಅವನ ಪ್ರಯತ್ನವು ಫಲಿಸಲಿಲ್ಲ. ಅವನನ್ನು ಬಂಧಿಸಿ ವಿಚಾರಿಸಿದಾಗ ಹರ್ಷನು ಬೌದ್ಧಮತಕ್ಕೆ ತೋರಿಸಿದ ಪ್ರೋತ್ಸಾಹದಿಂದಲೂ ಮತ್ತು ಹ್ಯೂಯನ್‌ತ್ಸಾಂಗನಿಗೆ ತೋರಿಸಿದ ವಿಶೇಷ ಗೌರವದಿಂದಲೂ ಅಸೂಯೆಗೊಂಡ ಕೆಲವು ಬ್ರಾಹ್ಮಣ ಮುಖಂಡರು ತನ್ನನ್ನು ಈ ಕೆಲಸಕ್ಕೆ ನಿಯೋಜಿಸಿದರೆಂದು ಅವನು ತಿಳಿಸಿದನು. ಹರ್ಷನು ಅಪಾದಿತರಾದ ಐನೂರು ಮಂದಿ ಬ್ರಾಹ್ಮಣರನ್ನು ಗಡೀಪಾರು ಮಾಡುವುದರ ಮೂಲಕ ಸಮ್ಮೇಳನದ ಕಾರ್ಯಕಲಾಪಗಳನ್ನು ಮುಕ್ತಾಯಗೊಳಿಸಿದನು.

**ಪ್ರಯಾಗದ ಪಂಚವಾರ್ಷಿಕ ಸಭೆ**

ಹರ್ಷಚಕ್ರವರ್ತಿಯು ಸಮುದ್ರಗುಪ್ತನಂತೆ ಯುದ್ಧೋತ್ಸಾಹಿಯೂ ಅಶೋಕನಂತೆ ಶಾಂತಿಪ್ರಿಯನೂ ಆಗಿದ್ದನೂ. ಅವನ ಔದಾರ್ಯ ಮತ್ತು ಧಾರಾಳತನಕ್ಕೆ ಮಿತಿಯಿರಲಿಲ್ಲ. ರಾಜಕೀಯ ಐಕ್ಯತೆಯನ್ನು ಕಳೆದುಕೊಂಡಿದ್ದ ದೇಶಕ್ಕೆ ಏಕತೆಯನ್ನು ದೊರಕಿಸಿ ಕೊಟ್ಟಿದ್ದಲ್ಲದೆ ರಾಜಪದವಿಯ ಹೊಣೆಗಾರಿಕೆಯಾಗಿದ್ದ ಧಾರ್ಮಿಕ ಮತ್ತು ನೈತಿಕ ಮೌಲ್ಯಗಳಿಗೂ ಗಮನ ಕೊಟ್ಟಿದ್ದನು. ಅವನು ಐದು ವರ್ಷಗಳಿಗೊಮ್ಮೆ ಗಂಗಾ ಮತ್ತು ಯಮುನಾ ನದಿಗಳ ಸಂಗಮ ಸ್ಥಾನದಲ್ಲಿನ ಪ್ರಯಾಗ ಕ್ಷೇತ್ರದಲ್ಲಿ ಧಾರ್ಮಿಕ ಪುಣ್ಯ ಸಂಪಾದನೆಗಾಗಿ ಎಲ್ಲ ಧರ್ಮಗಳ ಸಾಧುಸಂತರನ್ನೂ ಬಡವರು, ನಿರ್ಗತಿಕರು ಮತ್ತು ನಿಸ್ಸಹಾಯಕರನ್ನು ಆಮಂತ್ರಿಸಿ, ಕಳೆದ ಐದು ವರ್ಷಗಳಿಂದಲೂ ಸಂಗ್ರಹಿತವಾಗಿದ್ದ ಐಶ್ವರ್ಯವೆಲ್ಲವನ್ನೂ ದಾನ ಮಾಡುತ್ತಿದ್ದನು. ಇಂತಹ ಸಮ್ಮೇಳನವು ಹ್ಯೂಯನ್ ತ್ಸಾಂಗನು ಭಾರತದಲ್ಲಿದ್ದಾಗ ಆರನೆಯ ಬಾರಿಗೆ ಏರ್ಪಟ್ಟಿದ್ದಿತು. ಹರ್ಷನ ಹ್ಯೂಯನ್ ತ್ಸಾಂಗನನ್ನು ಈ ಸಭೆಗೆ ಆಹ್ವಾನಿಸಿದ್ದನು. ಹೂಯನ್‌ತ್ಸಾಂಗನು ಈ ಸಮ್ಮೇಳನದ ಬಗ್ಗೆ ದೀರ್ಘ ವಿವರಣೆಯನ್ನು ಕೊಟ್ಟಿದ್ದಾನೆ. ಎಪ್ಪತ್ತೈದು ದಿವಸಗಳ ಕಾಲ ನಡೆಯುತ್ತಿದ್ದ ಈ ಸಮ್ಮೇಳನ ಮತ್ತು ಉತ್ಸವದಲ್ಲಿ ಹರ್ಷನು ಬುದ್ಧ, ಆದಿತ್ಯ, ಸೂರ್ಯ ಮತ್ತು ಶಿವನನ್ನು ಆರಾಧಿಸಿ ಎಲ್ಲ ಧರ್ಮದವರಿಗೂ ತನ್ನಲ್ಲಿದ್ದ ಐಶ್ವರ್ಯವೆಲ್ಲವೂ ಮುಗಿಯುವವರೆಗೂ ದಾನಧರ್ಮಗಳನ್ನು ಮಾಡುತ್ತಿದ್ದನು. ಕೊನೆಗೆ

ಚಕ್ರವರ್ತಿಯು ತನ್ನ ಮೈಮೇಲಿದ್ದ ಆಭರಣ ವಸ್ತ್ರಾದಿಗಳೆಲ್ಲವನ್ನೂ ದಾನ ಮಾಡಿ ತನ್ನ ಸಹೋದರಿಯಿಂದ ಹಳೆಯ ಉಡುಪನ್ನು ನಡೆದು ಧರಿಸಿ ಶಾಂತಮನಸ್ಕನಾಗಿ ಅರಮನೆಗೆ ಹಿಂತಿರುಗುತ್ತಿದ್ದನು. ಹರ್ಷನು ಈ ರೀತಿಯಲ್ಲಿ ತನ್ನ ಐಶ್ವರ್ಯವೆಲ್ಲವೂ ಪುಣ್ಯಪ್ರಾಪ್ತಿಗಾಗಿ ಸದ್ವಿನಿ ಯೋಗವಾದುದರಿಂದ ಹೆಚ್ಚು ಸಂತೋಷಪಡುತ್ತಿದ್ದನು.

**ಸಾಹಿತ್ಯ ಮತ್ತು ವಿದ್ಯಾಭ್ಯಾಸ**

ಹರ್ಷ ಚಕ್ರವರ್ತಿಯ ಕಾಲವು ಧಾರ್ಮಿಕ ಚಟುವಟಿಕೆಗಳ ದೃಷ್ಟಿಯಿಂದಲೇ ಅಲ್ಲದೆ ಸಾಹಿತ್ಯ ಚಟುವಟಿಕೆಗಳ ದೃಷ್ಟಿಯಿಂದಲೂ ಪ್ರಸಿದ್ಧಿಯಾಗಿತ್ತು. ಧರ್ಮ ಪ್ರಭುವೂ ಮತ್ತು ದಾನಶೂರನೂ ಆಗಿದ್ದ ಹರ್ಷನು ಘನವಿದ್ವಾಂಸನೂ, ನಾಟಕ ರಚನೆಕಾರನೂ ಮತ್ತು ಒಳ್ಳೆಯ ಬರವಣಿಗೆಕಾರನೂ ಆಗಿದ್ದನು. ಆವನು ರಚಿಸಿರುವ 'ನಾಗಾನಂದ' 'ರತ್ನಾವಳಿ' ಮತ್ತು 'ಪ್ರಿಯದರ್ಶಿಕ' ನಾಟಕಗಳು ಯಾವ ಕಾಲಕ್ಕೂ ಮಾನ್ಯತೆ ಪಡೆದಿವೆ. ಅಂತೆಯೆ ಆವನು ಅಂದವಾಗಿ ಬರವಣಿಗೆ ಮಾಡುತ್ತಿದ್ದನೆಂಬುದು ಬನ್ಸಕೇರ ಫಲಕದ ಮೇಲಿನ ಆವನ ಸಹಿಯಿಂದ ತಿಳಿದುಬರುತ್ತದೆ. ಸ್ವತಃ ವಿದ್ವಾಂಸನಾಗಿದ್ದ ಹರ್ಷಚಕ್ರವರ್ತಿಯು ಅನೇಕ ವಿದ್ವಾಂಸರ ಆಶ್ರಯದಾತನೂ ಆಗಿದ್ದನು. 'ಹರ್ಷಚರಿತ' ಮತ್ತು 'ಕಾದಂಬರಿ'ಯ ಕೃತವಾದ ಬಾಣಕವಿಯು ಇವನ ಆಸ್ಥಾನ ಕವಿಯಾಗಿದ್ದನು. ಇವನಲ್ಲದೆ ಮಯೂರ, ಹರದತ್ತ, ಮಾತಂಗ ಮತ್ತು ಜಯಸೇನ ಮೊದಲಾದ ಕವಿಗಳು ಇವನ ಉದಾರಾಶ್ರಯ ಪಡೆದಿದ್ದರು. ಆದ್ದರಿಂದ ಗುಪ್ತರ ನಂತರದ ಕಾಲವು ಸಂಸ್ಕೃತ ಸಾಹಿತ್ಯದ ಇತಿಹಾಸದಲ್ಲಿ ಸ್ಥಗಿತಗೊಂಡ ಕಾಲವಾಗಿರದೆ ಸಾಹಿತ್ಯ, ತತ್ವಶಾಸ್ತ್ರಗಳಲ್ಲೇ ಅಲ್ಲದೆ ವಿಜ್ಞಾನದಲ್ಲೂ ಬಹುಮುಖ ಕೊಡುಗೆಗಳಿಂದ ಕೂಡಿದ ಕಾಲವಾಗಿತ್ತೆಂದು ಈ ಕಾಲದಲ್ಲಿ ರಚಿತವಾದ ಕೃತಿಗಳಿಂದ ತಿಳಿದುಬರುತ್ತದೆ.

**ನಳಂದ ವಿಶ್ವವಿದ್ಯಾನಿಲಯ**

ಪ್ರಾಚೀನ ಭಾರತವನ್ನಾಳಿದ ರಾಜಮನೆತನಗಳು ವಿದ್ಯಾಭಿವೃದ್ಧಿಗೆ ವಿಶೇಷ ಪ್ರೋತ್ಸಾಹ ಕೊಟ್ಟಿದ್ದವು. ವಿದ್ಯಾಭ್ಯಾಸವನ್ನು ರಾಜರುಗಳು ಒಂದು ಧಾರ್ಮಿಕ ಮತ್ತು ನೈತಿಕ ಹೊಣೆಯೆಂದು ಭಾವಿಸಿದ್ದರು. ಇದರಿಂದ ಕ್ರಿ.ಶ. 4ನೇ ಶತಮಾನದಿಂದ 10ನೇ ಶತಮಾನದ ಅವಧಿಯಲ್ಲಿ ಭಾರತದ ವಿವಿಧ ಭಾಗಗಳಲ್ಲಿ ಹಲವಾರು ಉನ್ನತ ವಿದ್ಯಾಭ್ಯಾಸ ಕೇಂದ್ರಗಳಿದ್ದುದಾಗಿ ಭೂಸಂಶೋಧನೆಗಳಿಂದಲೂ ಮತ್ತು ಸಾಹಿತ್ಯಾಧಾರಗಳಿಂದಲೂ ತಿಳಿದುಬರುತ್ತವೆ. ಇಂತಹ ವಿದ್ಯಾಪೀಠಗಳಲ್ಲಿ ಹರ್ಷಚಕ್ರವರ್ತಿಯ ಕಾಲದಲ್ಲಿ ಅಂತರ ರಾಷ್ಟ್ರೀಯ ಖ್ಯಾತಿಯನ್ನು ಪಡೆದಿದ್ದ ನಳಂದ ವಿಶ್ವವಿದ್ಯಾನಿಲಯವು ಹೆಚ್ಚು ಹೆಸರು ವಾಸಿಯಾದುದು. ಇಂದಿನ ಬಿಹಾರ ರಾಜ್ಯದ ರಾಜಘಿರ್‌ಗೆ ಉತ್ತರಕ್ಕೆ ಏಳುಮೈಲಿ ದೂರದಲ್ಲಿರುವ ಬರಗಾನವ್ ಗ್ರಾಮವು ನಳಂದ ವಿಶ್ವವಿದ್ಯಾನಿಲಯದ ನಿವೇಶನವಾಗಿತ್ತೆಂದು ಅಲೆಗ್ಸಾಂಡರ್ ಕನ್ನಿಂಗ್ ಹ್ಯಾಮರ ಸಂಶೋಧನೆಯಿಂದ ಸ್ಪಷ್ಟಪಡಿಸಲ್ಪಟ್ಟಿತು. ಈ ವಿದ್ಯಾಪೀಠದ ಅಸ್ತಿತ್ವವು ಬುದ್ಧನ ಕಾಲದಲ್ಲೇ ಇದ್ದಿತೆಂದೂ ಆ ಪ್ರದೇಶದ ಸುಮಾರು ಐದುನೂರು ವರ್ತಕರು ಈ ನಿವೇಶನವನ್ನು ಕೊಂಡು ಅಲ್ಲಿ ಬೌದ್ಧ ವಿಹಾರವೊಂದನ್ನು ಕಟ್ಟಿಸಿ ಬುದ್ಧನಿಗೆ ಅರ್ಪಿಸಿದ್ದರೆಂದು ಹ್ಯೂಯನ್‌ತ್ಸಾಂಗನು ಹೇಳುತ್ತಾನೆ. ಅದು ಅಸ್ತಿತ್ವಕ್ಕೆ ಬಂದಂದಿನಿಂದ

ಹಲವಾರು ರಾಜರುಗಳ ಮತ್ತು ಧನಿಕ ವರ್ತಕರ ಉದಾರ ದಾನಧರ್ಮಗಳಿಂದ ದಿನೇ ದಿನೇ ಪ್ರವರ್ಧಮಾನಕ್ಕೆ ಬಂದಿತು. ಈ ವಿಶ್ವವಿದ್ಯಾನಿಲಯವು ವಿದ್ಯಾಪಕ್ಷಪಾತಿಗಳಾಗಿದ್ದ ಗುಪ್ತಸಂತತಿಯ ಕೊನೆಯ ರಾಜರುಗಳಾದ ಒಂದನೆ ಕುಮಾರಗುಪ್ತ ಬುಧಗುಪ್ತ, ತಥಗತಗುಪ್ತ, ಬಾಲಾಧಿತ್ಯ ಮೊದಲಾದವರು ನೀಡಿದ ಪ್ರೋತ್ಸಾಹದಿಂದ ರಾಷ್ಟ್ರೀಯ ಖ್ಯಾತಿಯನ್ನೂ ಹರ್ಷಚಕ್ರವರ್ತಿ ಮತ್ತಿತರು ನೀಡಿದ ಪ್ರೋತ್ಸಾಹದಿಂದ ಅಂತಹ ರಾಷ್ಟ್ರೀಯ ಖ್ಯಾತಿಯನ್ನೂ ಪಡೆದು ಭಾರತದ ವಿವಿಧ ಭಾಗಗಳಿಂದಲೇ ಅಲ್ಲದೆ ಮಧ್ಯಏಷ್ಯಾ, ಚೈನಾ, ಕೊರಿಯ ಜಾವ ಮತ್ತಿತರ ದೇಶಗಳಿಂದಲೂ ವಿದ್ಯಾರ್ಥಿಗಳನ್ನು ಆಕರ್ಷಿಸಿತು. ಮೊದಲಿಗೆ ಒಂದೆರಡು ವಿಹಾರಗಳಿಂದ ಕೂಡಿದ್ದ ವಿದ್ಯಾಪೀಠವು ವಿದ್ಯಾರ್ಥಿಗಳ ಸಂಖ್ಯೆಯು ಹೆಚ್ಚಿದಂತೆಲ್ಲಾ ಅವರ ಸ್ಥಳಾವಕಾಶಕ್ಕಾಗಿ ಹೆಚ್ಚಿನ ಸಂಖ್ಯೆಯಲ್ಲಿ ವಿಹಾರಗಳು ನಿರ್ಮಿಸಲ್ಪಟ್ಟು ನಳಂದವು ವಿಶಾಲವಾದ ಸಭಾಂಗಣಗಳ ಉಪನ್ಯಾಸ ಕೊಠಡಿಗಳ, ಗ್ರಂಥಭಂಡಾರಗಳ ಮತ್ತು ವೀಕ್ಷಣಾಲಯಗಳ ಕೇಂದ್ರವಾಯಿತು. ಇವುಗಳ ಸುತ್ತಲೂ ರಕ್ಷಣೆಗಾಗಿ ಒಂದು ಗೋಡೆಯಿತ್ತು. ಇದರಲ್ಲಿದ್ದ ಮಹಾದ್ವಾರದ ಮೂಲಕ ಸಂಘರಾಮಕ್ಕೆ ಪ್ರವೇಶ ಮಾಡಬೇಕಿತ್ತು. ಇಲ್ಲಿನ ಕಟ್ಟಡಗಳು ಮಹಡಿಗಳಿಂದ ಕೂಡಿದ್ದು ಭವ್ಯವಾದ ಗೋಪುರಗಳಿಂದ ಅಲಂಕೃತವಾಗಿದ್ದವು. ಹ್ಯೂಯನ್‌ತ್ಸಾಂಗ್ ಮತ್ತು ಅವನ ಜೀವನ ಚರಿತ್ರಕಾರನಾದ ಹುಯಿಲಿ Hwuili ನಳಂದ ವಿದ್ಯಾಪೀಠದ ಸೌಂದರ್ಯದ ಬಗ್ಗೆ ದೀರ್ಘವಿವರಣೆ ನೀಡಿದ್ದಾರೆ. ವಿದ್ಯಾಪೀಠವು ತಾವರೆ ಮತ್ತು ಕಮಲದ ಹೂವುಗಳಿಂದ ಕೂಡಿದ ಕೊಳಗಳಿಂದಲೂ ಮತ್ತು ತಮ್ಮ ಕೊಂಬೆಗಳನ್ನು ಎಲ್ಲ ಕಡೆಗೂ ಹರಡಿ ತಂಪಾದ ನೆರಳನ್ನು ಸದಾ ಕೊಡುತ್ತಿದ್ದ ಮಾವಿನ ಮರಗಳ ತೋಪಿನಿಂದಲೂ ವಿಜೃಂಭಿಸುತ್ತಿತ್ತು. ಇವುಗಳ ನಡುವೆ ಅಲ್ಲಲ್ಲಿ ಪ್ರಾಚಾರ್ಯರ ಸುಂದರವಾದ ಕೊಠಡಿಗಳಿದ್ದುವು.

ನಳಂದ ವಿಶ್ವವಿದ್ಯಾನಿಲಯವು ಮುಖ್ಯವಾಗಿ ಮಹಾಯಾನ ಪಂಥದ ಬೌದ್ಧರ ಅಧ್ಯಯನ ಕೇಂದ್ರವಾಗಿತ್ತು. ಇದರಿಂದಾಗಿ ಇಲ್ಲಿದ್ದ ವಿದ್ಯಾರ್ಥಿಗಳಲ್ಲಿ ಬೌದ್ಧ ಸನ್ಯಾಸಿಗಳ ಸಂಖ್ಯೆಯು ಹೆಚ್ಚಾಗಿತ್ತು. ವಿದ್ಯಾಪೀಠದ ಪ್ರವೇಶ ನಿಯಮಗಳು ಬಹಳ ಕಠಿಣವಾಗಿದ್ದವು. ಪ್ರವೇಶಕ್ಕೆ ಮೊದಲು ಏರ್ಪಡಿಸಲಾಗುತ್ತಿದ್ದ ಪರೀಕ್ಷೆಯಲ್ಲಿ ಹತ್ತಕ್ಕೆ ಮೂರು ವಿದ್ಯಾರ್ಥಿಗಳು ಪ್ರವೇಶಾರ್ಹತೆ ಪಡೆಯುತ್ತಿದ್ದರು. ಇಂತಹ ಕಟುತರ ನಿಯಮಗಳನ್ನು ಹೊಂದಿದ್ದ ವಿದ್ಯಾಪೀಠವು ವಿದ್ಯೆಯ ಉನ್ನತ ಮಟ್ಟವನ್ನು ಸಮರ್ಥಿಸಿ ಕೊಂಡಿತ್ತು. ಇದರ ಖ್ಯಾತಿಯು ಭಾರತದ ಭೌತಿಕ ಮೇರೆಗಳಿಂದಾಚೆಗೆ ಪಸರಿಸಿತ್ತು. ಇಲ್ಲಿಗೆ ಕಲಿಯಲು ಬಂದ ವಿದ್ಯಾರ್ಥಿಗಳು ಪರಿಪಕ್ವ ಜ್ಞಾನವನ್ನು ಪಡೆದು ತಮ್ಮ ಜೀವನವನ್ನು ಪುನೀತಗೊಳಿಸಿಕೊಳ್ಳುತ್ತಿದ್ದರು. ಐದು ಅಥವ ಆರು ಜನ ವಿದ್ಯಾರ್ಥಿಗಳಿಗೆ ಒಬ್ಬ ಪ್ರಾಧ್ಯಾಪಕರಿದ್ದರು. ಹೂಯನ್‌ತ್ಸಾಂಗನು ನಳಂದಕ್ಕೆ ಭೇಟಿ ಕೊಟ್ಟ ಸಮಯದಲ್ಲಿ 1500 ಅಧ್ಯಾಪಕರೂ 8500 ವಿದ್ಯಾರ್ಥಿಗಳೂ ಇದ್ದರೆಂದು ಹೇಳುತ್ತಾನೆ. ಅಂತೆಯೆ ಈತ್ಸಿಂಗನು ನಳಂದ ವಿಶ್ವವಿದ್ಯಾನಿಲಯದಲ್ಲಿ ಮೂರು ಸಾವಿರಕ್ಕಿಂತಲೂ ಹೆಚ್ಚು ಬೌದ್ಧ ಸನ್ಯಾಸಿಗಳಿದ್ದರೆಂದೂ ಅವರ ವಾಸ ಮತ್ತು ವ್ಯಾಸಂಗದ ಅನುಕೂಲಕ್ಕಾಗಿ ಮುನ್ನೂರು ಕೊಠಡಿಗಳನ್ನೂ ಮತ್ತು ಎಂಟು ಸಭಾಂಗಣಗಳನ್ನೂ ನಿರ್ಮಿಸಲಾಗಿದ್ದಿತೆಂದು ಹೇಳುತ್ತಾನೆ.

ನಳಂದ ವಿಶ್ವವಿದ್ಯಾನಿಲಯದಲ್ಲಿ ಬೋಧಿಸಲಾಗುತ್ತಿದ್ದ ವಿಷಯಗಳು ಧಾರ್ಮಿಕವಷ್ಟೇ ಆಗಿರದೇ ವೈದಿಕ ಸಾಹಿತ್ಯ, ತರ್ಕಶಾಸ್ತ್ರ ವ್ಯಾಕರಣ, ಛಂದಸ್ಸು, ಅಲಂಕಾರಶಾಸ್ತ್ರ, ವಾಸ್ತುಶಿಲ್ಪ ಮತ್ತು ಶಿಲ್ಪಶಾಸ್ತ್ರ, ಆಯುರ್ವೇದ, ಖಗೋಳಶಾಸ್ತ್ರ, ಲೋಹಶಾಸ್ತ್ರ, ರಸಾಯನ ಶಾಸ್ತ್ರಗಳನ್ನೂ ಒಳಗೊಂಡಿದ್ದವು. ವಿಚಾರ ವಿಮರ್ಶೆ ಮತ್ತು ಬಹಿರಂಗ ಚರ್ಚೆಯು ಇಲ್ಲಿನ ಶಿಕ್ಷಣದ ಪ್ರಮುಖ ಲಕ್ಷಣವಾಗಿತ್ತು. ಪಾಂಡಿತ್ಯ ಪ್ರತಿಭೆಯ ಪ್ರದರ್ಶನವು ಇದರ ಮುಖ್ಯ ದೃಷ್ಟಿಯಾಗಿತ್ತು.

ನಳಂದ ವಿಶ್ವವಿದ್ಯಾನಿಲಯವು ತನ್ನ ಕೀರ್ತಿಯ ಪರಾಕಾಷ್ಠತೆಯ ಕಾಲದಲ್ಲಿ ಮಹಾ ದಿಗ್ಗಂತಿಗಳಾಗಿದ್ದ ಧರ್ಮಪಾಲ, ಚಂದ್ರಪಾಲ, ಗುಣಮತಿ, ಸ್ಥಿರಮತಿ, ಶೀಲಭದ್ರ ಧರ್ಮಕೀರ್ತಿ, ಮೊದಲಾದ ಮಹಾಮಹೋಪಧ್ಯಾಯರನ್ನು ಹೊಂದಿದ್ದಿತು. ಇವರು ತಮ್ಮ ಪಾಂಡಿತ್ಯ ಪ್ರತಿಭೆಗಳಿಂದ ಪ್ರಖ್ಯಾತಿ ಪಡೆದಿದ್ದು ದೇಶದ ವಿವಿಧ ಭಾಗಗಳಿಂದ ಬಂದವರಾಗಿದ್ದರು. ವಿಶ್ವವಿದ್ಯಾನಿಲಯದ ಆಡಳಿತದ ಮೇಲ್ವಿಚಾರಣೆಯನ್ನು ನೋಡಿಕೊಳ್ಳಲು ಪ್ರತ್ಯೇಕ ಅಧಿಕಾರವರ್ಗವಿದ್ದಿತು. ಕುಲಪತಿಯು ಆಡಳಿತವರ್ಗದ ಉನ್ನತಾಧಿಕಾರಿಯಾಗಿದ್ದನು. ವಿಶ್ವವಿದ್ಯಾನಿಲಯವು ಪ್ರೌಢಗ್ರಂಥಗಳಿಂದ ಕೂಡಿದ್ದ 'ರತ್ನಸಾಗರ' 'ರತ್ನೋದಧಿ' ಮತ್ತು 'ರತ್ನ ರಂಜಕ' ಎಂಬ ಮೂರು ಗ್ರಂಥಭಂಡಾರಗಳನ್ನು ಹೊಂದಿದ್ದಿತು. ಗ್ರಂಥಭಂಡಾರಗಳ ಈ ಆವರಣಕ್ಕೆ 'ಧರ್ಮಗುಂಜ' ಎಂದು ಕರೆಯುತ್ತಿದ್ದರು. ಕಾಲವನ್ನು ತಿಳಿಯಲು ನೀರಿನ ಗಡಿಯಾರವಿದ್ದಿತು. ನಿಯಮಾವಳಿಗಳಿಗನುಗುಣವಾಗಿ ಎಲ್ಲವೂ ನಡೆಯುತ್ತಿದ್ದ ಈ ವಿದ್ಯಾಪೀಠವು ಅತ್ಯುನ್ನತ ಮಟ್ಟದ ವಿದ್ಯಾಭ್ಯಾಸಕ್ಕೆ ಪ್ರಸಿದ್ಧಿಯಾಗಿತ್ತು.

ವಿಶ್ವವಿದ್ಯಾನಿಲಯವು ತನ್ನ ಖರ್ಚು ವೆಚ್ಚಗಳಿಗಾಗಿ, ರಾಜರುಗಳಿಂದ ಧನಿಕರಿಂದ ಉದಾರ ಸಹಾಯ ಪಡೆದಿದ್ದಿತು. "ಈ ದೇಶದ ರಾಜನು ವಿದ್ವಾಂಸರನ್ನೂ, ಸಾಧುಸನ್ಯಾಸಿಗಳನ್ನು ಬಹಳ ಗೌರವದಿಂದ ಕಾಣುವುದಲ್ಲದೆ ವಿದ್ಯಾಪೀಠದ ಖರ್ಚುವೆಚ್ಚಗಳಿಗಾಗಿ ಒಂದುನೂರು ಹಳ್ಳಿಗಳನ್ನು ದತ್ತಿ ಕೊಟ್ಟಿದ್ದನೆಂದು ಹ್ಯೂಯನ್‌ತ್ಸಾಂಗ್ ಹೇಳುತ್ತಾನೆ. ಅಲ್ಲದೆ ಈ ಹಳ್ಳಿಗಳಲ್ಲಿನ ಇನ್ನೂರು ಕುಟುಂಬಗಳು, ಇಲ್ಲಿನ ವಿದ್ಯಾರ್ಥಿಗಳಿಗೆ ಅಕ್ಕಿ, ಹಾಲು, ಮೊಸರು, ಬೆಣ್ಣೆ, ಮೊದಲಾದ ಆಹಾರ ಪದಾರ್ಥಗಳನ್ನು ಮತ್ತು ವಸ್ತ್ರಾಧಿಗಳನ್ನು ಪುಕ್ಕಟೆಯಾಗಿ ಒದಗಿಸುತ್ತಿದ್ದರೆಂದು ಹೇಳುತ್ತಾನೆ." ಅಂತೆಯೆ ಈತ್ಸಿಂಗನು ಕೂಡ ಅನೇಕ ತಲೆಮಾರುಗಳಿಂದ ರಾಜರು ದತ್ತಿಯಾಗಿ ಕೊಡಲ್ಪಟ್ಟಿದ್ದ ಇನ್ನೂರು ಹಳ್ಳಿಗಳ ಭೂಮಿಯ ಆದಾಯವನ್ನು ಈ ವಿಶ್ವವಿದ್ಯಾನಿಲಯವು ಪಡೆದಿದ್ದಿತೆಂದು ಮತ್ತು ಮತ್ತು ಶ್ರೀಹರ್ಷಚಕ್ರವರ್ತಿಯೇ ಅಲ್ಲದೆ, ಗುಪ್ತರ ದೊರೆಗಳು ಪಾಲಸಂತತಿಯ ದೊರೆಗಳು ಹಾಗೂ ಸುವರ್ಣ ದ್ವೀಪದ (ಸುಮಾತ್ರ) ದೊರೆ ಬಾಲ ಪುತ್ರದೇವನು ಉದಾರ ಸಹಾಯ ಮಾಡಿದ್ದರೆಂದು ಹೇಳುತ್ತಾನೆ. ರಾಜಾಧಿರಾಜರುಗಳ ಉದಾರ ಪ್ರೋತ್ಸಾಹವನ್ನು ಪಡೆದಿದ್ದ ನಳಂದ ವಿಶ್ವವಿದ್ಯಾನಿಲಯದ ಖ್ಯಾತಿಯು ಹೊರದೇಶಗಳಲ್ಲೂ ಹರಡಿದ್ದಿತು. ಇಲ್ಲಿ ವಿದ್ವತ್ತು ಮತ್ತು ಪಾಂಡಿತ್ಯಗಳಿಸಿದ ಶಾಂತರಕ್ಷಿತ ಮತ್ತು ಪದ್ಮಸಂಭವ ಮೊದಲಾದವರು ಧರ್ಮಪ್ರಸಾರಕರಾಗಿ ಟಿಬೆಟ್ಟಿಗೆ ಹೋಗಿ ಬೌದ್ಧಧರ್ಮ ಪ್ರಸಾರ ಮಾಡಿದರು. ಅಂತೆಯೆ ಈ ವಿದ್ಯಾಪೀಠಕ್ಕೆ ವಿದೇಶಗಳಿಂದ ಹ್ಯೂಯನ್‌ತ್ಸಾಂಗ್ ಹ್ಯೂಯೆನ್‌ಚಿಯು, ಹುಯಿಲಿ, ಚಾಂಗ್, ತರ್ವೊಸಿಂಗ್, ಆರ್ಯವರ್ಮನ್, ಬುಧವರ್ಮನ್ ಮೊದಲಾದವರು

ಜ್ಞಾನಾರ್ಜನೆಗಾಗಿ ಬಂದಿದ್ದರು. ಇದರಿಂದಾಗಿ ನಳಂದ ವಿದ್ಯಾಪೀಠವು ಪ್ರಾಚೀನ ಕಾಲದಲ್ಲಿ ವಿವಿಧ ಸಂಸ್ಕೃತಿಗಳ ಮತ್ತು ಅಭಿಪ್ರಾಯಗಳ ಸಮಾಗಮ ಸ್ಥಾನವಾಗಿ ಮಾರ್ಪಟ್ಟಿದ್ದಿತು. ಈ ವಿಶ್ವವಿದ್ಯಾನಿಲಯವು ಕ್ರಿ.ಶ. ಹದಿಮೂರನೆ ಶತಮಾನದವರೆಗೂ ಅಸ್ತಿತ್ವದಲ್ಲಿದ್ದು ಜ್ಞಾನಜ್ಯೋತಿಯನ್ನು ಬೆಳಗಿ ಹದಿಮೂರನೆ ಶತಮಾನದಲ್ಲಿ ಧರ್ಮಾಂಧರಾದ ಮುಸ್ಲಿಮರಿಂದ ನಾಶಮಾಡಲ್ಪಟ್ಟಿತು.

ನಳಂದ ವಿಶ್ವವಿದ್ಯಾನಿಲಯವು ಪ್ರಾಚೀನ ಭಾರತದಲ್ಲಿ ಅನೇಕ ವಿಶ್ವವಿದ್ಯಾನಿಲಯಗಳ ಸ್ಥಾಪನೆಗೂ ಸ್ಫೂರ್ತಿ ನೀಡಿತು. ಅವುಗಳಲ್ಲಿ ವಲ್ಲಭಿ ವಿಶ್ವವಿದ್ಯಾನಿಲಯವು ಒಂದಾಗಿತ್ತು. ಇದರ ಸ್ಥಾಪನೆಗೆ ಸೌರಾಷ್ಟ್ರದ ಮೈತ್ರಕ ಸಂತತಿಯ ದೊರೆಗಳು ಕಾರಣ ಕರ್ತರಾಗಿದ್ದರು. ಇದು ಬೌದ್ಧಮತದ ಥೇರವಾದ ಪಂಥದ ಅಧ್ಯಯನದ ಪ್ರಮುಖ ಕೇಂದ್ರವಾಗಿದ್ದಿತಾದರೂ, ಲೌಕಿಕ ವಿಷಯಗಳಾದ ಕಾನೂನುಶಾಸ್ತ್ರ, ಅರ್ಥಶಾಸ್ತ್ರ, ದಾರ್ಶನಿಕಶಾಸ್ತ್ರ, ತೆರಿಗೆ, ಲೆಕ್ಕಾಚಾರ, ಧನುರ್ವಿದ್ಯೆ, ವೈದ್ಯಶಾಸ್ತ್ರ, ಗಣಿತ ಮತ್ತು ಖಗೋಳಶಾಸ್ತ್ರಗಳನ್ನೂ ಇಲ್ಲಿ ಬೋಧಿಸಲಾಗುತ್ತಿತ್ತು. ವಲ್ಲಭಿ ವಿಶ್ವವಿದ್ಯಾನಿಲಯವು ಒಂದುನೂರು ಸಂಘರಾಮಗಳ ಸಮುದಾಯವಾಗಿತ್ತು. ಮೈತ್ರಕ ಸಂತತಿಯ ದೊರೆಯೂ ಮತ್ತು ಹರ್ಷಚಕ್ರವರ್ತಿಯ ಅಳಿಯನೂ ಆಗಿದ್ದ ಎರಡನೇ ಧೃವಸೇನನ ಕಾಲದಲ್ಲಿ ಆರುಸಾವಿರ ವಿದ್ಯಾರ್ಥಿಗಳು ಇಲ್ಲಿ ವ್ಯಾಸಂಗ ಮಾಡುತ್ತಿದ್ದರೆಂದು ಹೇಳಲಾಗಿದೆ. ಇಲ್ಲಿನ ಪಧವೀದರರು ತಮ್ಮ ಪ್ರತಿಭಾಸಾಮರ್ಥ್ಯಗಳಿಂದ ದೇಶದಾದ್ಯಂತ ಗೌರವ ಪಡೆದಿದ್ದರು ಮತ್ತು ಇಲ್ಲಿನ ಪದವೀಧರರಿಗೆ ಸರ್ಕಾರದಿಂದ ಸದಾ ಬೇಡಿಕೆಯಿರುತ್ತಿತ್ತೆಂದು ಈತ್ಸಿಂಗ್ ಹೇಳುತ್ತಾನೆ.

ವಲ್ಲಭಿ ವಿಶ್ವವಿದ್ಯಾನಿಲಯದಂತೆ ಪ್ರಾಚೀನ ಭಾರತದಲ್ಲಿ ಖ್ಯಾತಿವೆತ್ತ ವಿಶ್ವವಿದ್ಯಾನಿಲಯಗಳಲ್ಲಿ ಮಗಧಕ್ಕೆ ಉತ್ತರ ಭಾಗದಲ್ಲಿ ಸ್ಥಾಪಿತವಾಗಿದ್ದ ವಿಕ್ರಮಶೀಲ ವಿಶ್ವವಿದ್ಯಾನಿಲಯವೂ ಒಂದಾಗಿದೆ. ಬಂಗಾಳದ ಪಾಲಸಂತತಿಯ ಧರ್ಮಪಾಲನು ಈ ವಿಶ್ವವಿದ್ಯಾನಿಲಯದ ಸ್ಥಾಪಕನಾಗಿದ್ದನು. ನಳಂದ ವಿಶ್ವವಿದ್ಯಾನಿಲಯದ ಖ್ಯಾತಿಯು ಕ್ಷೀಣಿಸಿದ ಹಾಗೆಲ್ಲ ಇದರ ಖ್ಯಾತಿಯು ಹೆಚ್ಚುತ್ತಾ ಬಂದಿತು. ಇದು ಆರು ಕಾಲೇಜುಗಳನ್ನು ಹೊಂದಿದ್ದು ಅವುಗಳ ಮೇಲ್ವಿಚಾರಣೆಯನ್ನು ನೋಡಿಕೊಳ್ಳಲು ಆಡಳಿತ ಮಂಡಲಿಯಿದ್ದಿತು. ವಿಕ್ರಮಶೀಲ ವಿಶ್ವವಿದ್ಯಾನಿಲಯವು ನಳಂದ ವಿಶ್ವವಿದ್ಯಾನಿಲಯದೊಂದಿಗೆ ನಿಕಟ ಸಂಪರ್ಕವನ್ನಿಟ್ಟುಕೊಂಡಿದ್ದು ಅನೇಕ ಪಂಡಿತರನ್ನು ಭಾರತೀಯ ಸಂಸ್ಕೃತಿ, ಧರ್ಮ ಮತ್ತು ವಿದ್ಯಾಭ್ಯಾಸ ಪ್ರಸಾರಕ್ಕಾಗಿ ಟಿಬೆಟ್ಟಿಗೆ ಕಳುಹಿಸಿತು. ಈ ಪಂಡಿತರ ಬರವಣಿಗೆಗಳಿಂದ ವಿಕ್ರಮಶೀಲ ವಿದ್ಯಾಪೀಠದ ಇತಿಹಾಸದ ಬಗ್ಗೆ ಸಾಕಷ್ಟು ಮಾಹಿತಿ ದೊರೆಕಿವೆ. ವಿಕ್ರಮಶೀಲದ ಪಂಡಿತರು ಟಿಬೆಟ್ಟಿನ ಸಂಸ್ಕೃತಿ ಮತ್ತು ನಾಗರಿಕತೆಯನ್ನು ರೂಪಿಸಿದರು. ಟಿಬೆಟ್ ದೇಶವು ಭಾರತಕ್ಕೆ ಚಿರಋಣಿಯಾಗಿದೆ.

ವಿಕ್ರಮಶೀಲ ವಿದ್ಯಾಪೀಠದಂತೆ ಓದಾಂತಪುರಿ ವಿದ್ಯಾಪೀಠವೂ ಪಾಲಸಂತತಿಯು ದೊರೆಗಳ ಪ್ರೋತ್ಸಾಹದಿಂದ ಅಸ್ತಿತ್ವಕ್ಕೆ ಬಂದಿತು. ಪಾಲಸಂತತಿಯ ಗೋಪಾಲ ಎಂಬ ರಾಜನು ಕ್ರಿ.ಶ. ಎಂಟನೆ ಶತಮಾನದ ಮಧ್ಯಭಾಗದಲ್ಲಿ ಇದನ್ನು ಸ್ಥಾಪಿಸಿದನು. ಇದು ಪಾಟಲೀಪುತ್ರಕ್ಕೆ ಸಮೀಪದಲ್ಲಿ ಸ್ಥಾಪಿಸಲ್ಪಟ್ಟಿದ್ದಿತು. ಟಿಬೆಟ್ಟಿನ ಬಹು ದೊಡ್ಡ

ಸಂಘರಾಮವಾದ ಸಾಮ್-ಯಿ ಸಂಘರಾಮದ ನಿರ್ಮಾಣಕ್ಕೆ ಸ್ಫೂರ್ತಿ ನೀಡಿತು. ಓದಾಂತಿಪುರಿ ವಿದ್ಯಾಪೀಠವು ತಾಂತ್ರಿಕ ದರ್ಶನಶಾಸ್ತ್ರದ ಅಧ್ಯಯನಕ್ಕೆ ಪ್ರಸಿದ್ಧಿಯಾಗಿದ್ದು ಒಂದು ಸಾವಿರ ವಿದ್ಯಾರ್ಥಿಗಳು ಇಲ್ಲಿ ವಿದ್ಯಾರ್ಜನೆ ಮಾಡುತ್ತಿದ್ದರೆಂದು ಹೇಳಲಾಗಿದೆ. ಪ್ರಾಚೀನ ಭಾರತದ ಖ್ಯಾತಿವೆತ್ತ ವಿದ್ಯಾಪೀಠಗಳಲ್ಲಿ ಜಗಡ್ಡಲ ವಿದ್ಯಾಪೀಠವು ಕೊನೆಯದು. ರಾಮಪಾಲ ದೊರೆಯು ಇದನ್ನು ಹನ್ನೆರಡನೆ ಶತಮಾನದಲ್ಲಿ ಸ್ಥಾಪಿಸಿದನು. ಆದ್ದರಿಂದ ಇದು ಹೆಚ್ಚುಕಾಲ ಮುಂದುವರಿಯಲಾಗದೆ ವಿಕ್ರಮಶೀಲ ಮತ್ತು ಓದಾಂತಪುರಿ ವಿದ್ಯಾಪೀಠಗಳಂತೆ ವಿದೇಶಿ ಧಾಳಿಕಾರರಾದ ಮುಸ್ಲಿಮರಿಂದ ನಾಶಮಾಡಲ್ಪಟ್ಟಿತು.

ಒಟ್ಟಿನಲ್ಲಿ ಹೇಳುವುದಾದರೆ ಪ್ರಾಚೀನ ಭಾರತದ ವಿಶ್ವವಿದ್ಯಾನಿಲಯಗಳು ಭಾರತೀಯ ಸಂಸ್ಕೃತಿಯನ್ನು ರಕ್ಷಿಸುವುದರಲ್ಲಿ ಮತ್ತು ಪ್ರಸಾರ ಮಾಡುವುದರಲ್ಲಿ ಬಹುಮುಖ ಪಾತ್ರವನ್ನು ವಹಿಸಿದ್ದವು. ಈ ವಿದ್ಯಾಪೀಠಗಳಲ್ಲಿ ಸೃಷ್ಟಿಯಾದ ಬಹುಪಾಲು ಸಾಹಿತ್ಯವು ದುರಾದೃಷ್ಟವಶಾತ್ ನಶಿಸಿಹೋಗಿದೆ. ಆದಾಗ್ಯೂ ನೇಪಾಳಿ, ಟಿಬೆಟ್, ಚೀನೀ ಭಾಷೆಗಳಲ್ಲಿ ಇಂದಿಗೂ ಲಭ್ಯವಿರುವ ಸಾಹಿತ್ಯ ಕೃತಿಗಳಿಂದ ಈ ವಿದ್ಯಾಪೀಠಗಳಲ್ಲಿ ನಿರಂತರವಾಗಿ ನಡೆಯುತ್ತಿದ್ದ ಬೌದ್ಧಿಕ ಚಟುವಟಿಕೆಗಳ ಚಿತ್ರವನ್ನು ಗ್ರಹಿಸಿಕೊಳ್ಳಬಹುದಾಗಿದೆ. ಈ ವಿದ್ಯಾಪೀಠಗಳಿಗೆ ಟಿಬೆಟ್, ಮಧ್ಯಏಷ್ಯ, ಚೈನಾ, ಕೊರಿಯ ಮತ್ತು ಜಾವಾ ದೇಶಗಳಿಂದ ವಿದ್ಯಾರ್ಥಿಗಳು ಬರುತ್ತಿದ್ದುದರಿಂದಲೂ ಮತ್ತು ಇಲ್ಲಿನ ವಿದ್ವಾಸಂರು ಬೌದ್ಧಮತ ಪ್ರಸಾರಕ್ಕಾಗಿ ಆ ದೇಶಗಳಿಗೆ ಹೋಗಿ ಧರ್ಮಪ್ರಸಾರ ಮಾಡಿದುದರಿಂದಲೂ ಭಾರತವು ಪ್ರಾಚೀನ ಕಾಲದಲ್ಲಿಯೆ ಅಂತರರಾಷ್ಟ್ರೀಯ ಸಂಪರ್ಕವನ್ನು ಹೊಂದುವಂತಾಯಿತು. ಧರ್ಮಪ್ರಸಾರಕ್ಕಾಗಿ ಹೋದ ವಿದ್ವಾಂಸರು ಭಾರತೀಯ ಸಾಹಿತ್ಯವನ್ನು ಟಿಬೆಟಿಯನ್ ಮತ್ತು ಚೀನೀ ಭಾಷೆಗಳಿಗೆ ತರ್ಜುಮೆಗೊಳಿಸಿ ಭಾರತೀಯ ಸಂಸ್ಕೃತಿಯನ್ನು ಪ್ರಸಾರಮಾಡಿದರು. ಇವರಲ್ಲಿ ಕೆಲವರು ಅಲ್ಲಿಯೆ ನೆಲಸಿ ಸಂಸ್ಕೃತಭಾಷೆ, ಸಾಹಿತ್ಯ, ಕಲೆ, ಧರ್ಮ ಸಂಪ್ರದಾಯಗಳನ್ನು ಮತ್ತು ಆಚಾರ ನಡವಳಿಕೆಗಳನ್ನು ಈ ದೇಶಗಳಲ್ಲಿ ನೆಲೆಗೊಳಿಸಿದರು. ಹೀಗೆ ಪ್ರಾಚೀನ ಭಾರತದಲ್ಲಿ ಜ್ಞಾನಜ್ಯೋತಿಯ ಕೇಂದ್ರಗಳಾಗಿದ್ದ ವಿದ್ಯಾಪೀಠಗಳು ಭಾರತೀಯ ಸಂಸ್ಕೃತಿಯನ್ನು ವಿದೇಶಗಳಲ್ಲಿ ಪ್ರಸಾರ ಮಾಡುವುದರಲ್ಲಿಯೂ ಮತ್ತು ಅಲ್ಲಿನ ಸಂಸ್ಕೃತಿಯನ್ನು ಭಾರತೀಯ ಸಂಸ್ಕೃತಿಯಲ್ಲಿ ಸಂಮಿಳನಗೊಳಿಸಿಕೊಳ್ಳುವುದರಲ್ಲಿಯೂ ವಹಿಸಿರುವ ಪಾತ್ರವು ಅಸದೃಶವಾಗಿದೆ.

**ಹರ್ಷನ ವ್ಯಕ್ತಿತ್ವ**

ಪ್ರಾಚೀನ ಭಾರತವನ್ನಾಳಿದ ಶ್ರೇಷ್ಠ ದೊರೆಗಳಾದ ಅಶೋಕ, ಕಾನಿಷ್ಕ, ಸಮುದ್ರ ಗುಪ್ತ ಮತ್ತು ಎರಡನೇ ಚಂದ್ರಗುಪ್ತ ಮೊದಲಾದ ದೊರೆಗಳ ಪಂಕ್ತಿಯಲ್ಲಿ ಸೇರಲು ಹರ್ಷನು ಅರ್ಹನಾಗಿದ್ದಾನೆ. ಹರ್ಷನು ಸದ್ಗುಣ ಸಂಪನ್ನತೆಯ ಅಭಿವೃತ್ತಿಯಾಗಿದ್ದನು. ಪ್ರಗತಿಪರ ಪ್ರಭುವಾಗಿದ್ದ ಹರ್ಷನ ರಾಜ್ಯಾಡಳಿತ ಕಲ್ಪನೆಯು ಆದರ್ಶಯುತವಾಗಿತ್ತು. ಅಶೋಕ ಚಕ್ರವರ್ತಿಯಂತೆ ಹರ್ಷನು ರಾಜನ ಪದವಿಯು ವೈಭವ ವಿಲಾಸಗಳ ಪ್ರದರ್ಶನದ ಸ್ಥಾನವಾಗಿರದೆ ಅದೊಂದು ಅತ್ಯಂತ ಹೊಣೆಗಾರಿಕೆಯ ಸ್ಥಾನವೆಂದು ತಿಳಿದಿದ್ದನು. ಇಂತಹ ಅಭಿಪ್ರಾಯವನ್ನು ಹೊಂದಿದ್ದ ಹರ್ಷನು ಮೊದಲಿಗೆ ತನ್ನ

ಸೋದರಿ ರಾಜ್ಯಶ್ರೀ ರಾಜ್ಯವಾಗಿದ್ದ ಕನೂಜಿನ ಸಿಂಹಾಸನವನ್ನು ವಹಿಸಿಕೊಳ್ಳಲು ಹಿಂಜರಿದು ಆನಂತರ ನೋಬಲ್ಲರ ಒತ್ತಾಯದ ಮೇರೆಗೆ ಅದನ್ನು ಒಪ್ಪಿಕೊಂಡನು. ಈ ಸನ್ನಿವೇಶದಲ್ಲಿ ಅವನಿನ್ನೂ ಅಪ್ರಾಪ್ತವಯಸ್ಸಿನವನಾಗಿದ್ದರೂ ಅವನು ತನ್ನ ಮತ್ತು ತನ್ನ ಸೋದರಿಯ ಶತ್ರುಗಳ ವಿರುದ್ಧ ತೋರಿಸಿದ ಧೈರ್ಯ ಸಾಹಸಗಳು ಅಸಾಮಾನ್ಯವಾಗಿದ್ದವು. ತನ್ನ ಶತ್ರುಗಳನ್ನು ಸದೆಬಡಿದ ಹರ್ಷಚಕ್ರವರ್ತಿಯು ಆ ವಿಜಯಗಳಿಂದಲೇ ಹೆಮ್ಮೆಪಟ್ಟು ಕೊಳ್ಳಲಿಲ್ಲ. ಅವನು ತನ್ನ ಜೀವನದ ಬಹುಮುಖ್ಯ ಉದ್ದೇಶವಾಗಿದ್ದ ಭಾರತದ ಏಕತೆಯನ್ನು ಸ್ಥಾಪಿಸಲು ಕ್ರಮಗಳನ್ನು ಕೈಗೊಂಡನು. ಅವನು ಕೆಲವು ರಾಜರುಗಳನ್ನು ನೇರವಾಗಿ ಸೋಲಿಸಿದನು. ಮತ್ತೆ ಕೆಲವರನ್ನು ವೈವಾಹಿಕ ಸಂಬಂಧದ ಮೂಲಕವೂ ಒಲಿಸಿಕೊಂಡು ರಾಜಕೀಯ ಏಕತೆಯನ್ನು ಏರ್ಪಡಿಸಿದನು. ಇನ್ನು ಕೆಲವರು ಅವನ ಶಕ್ತಿ ಸಾಮರ್ಥ್ಯಗಳಿಗೆ ಹೆದರಿ ತಾವಾಗಿಯೆ ಶರಣು ಬಂದು ಕಪ್ಪಕಾಣಿಕೆಗಳನ್ನು ತಂದೊಪ್ಪಿಸಿದರು. ಹರ್ಷನು ರಾಜನೀತಿ ವಿಶಾರದನೂ ಮತ್ತು ವಿವೇಕಶಾಲಿಯೂ ಆದ ದೊರೆಯಾಗಿದ್ದನು. ಅವನು ವಿಜಯವನ್ನು ಎಷ್ಟು ಸಂತೋಷದಿಂದ ಸ್ವಾಗತಿಸುತ್ತಿದ್ದನೋ ಸೋಲನ್ನೂ ಅಷ್ಟೇ ಸಂತೋಷದಿಂದ ಸ್ವಾಗತಿಸುತ್ತಿದ್ದನು. ತನ್ನಷ್ಟೇ ಪರಾಕ್ರಮ ಶಾಲಿಯಾದ ಚಾಳುಕ್ಯರ ದೊರೆ ಎರಡನೆ ಪುಲಿಕೇಶಿಯ ವಿರುದ್ಧ ಮಾಡಿದ ಯುದ್ಧದಲ್ಲಿ ಅವನನ್ನು ಸೋಲಿಸಲು ಸಾಧ್ಯವಿಲ್ಲವೆಂದು ತಿಳಿದ ಅವನು ಯುದ್ಧವನ್ನು ಅನಾವಶ್ಯಕವಾಗಿ ಮುಂದುವರಿಸುವುದನ್ನು ನಿಲ್ಲಿಸಿ ಶಾಂತಿ ಒಪ್ಪಂದ ಮಾಡಿಕೊಂಡು ಗೌರವದಿಂದ ಹಿಂತಿರುಗಿದನು ಇದಲ್ಲದೆ ಅವನ ರಾಜ್ಯಾಡಳಿತದ ಆದರ್ಶವು ರಾಜಕೀಯ ಏಕತೆಯನ್ನು ಸ್ಥಾಪಿಸಿ ಶಾಂತಿ ವ್ಯವಸ್ಥೆಯನ್ನು ಏರ್ಪಡಿಸುವುದಷ್ಟೇ ಆಗಿರದೆ ಪ್ರಜೆಗಳಿಗೆ ಸುಖಸಮೃದ್ಧಿಗಳನ್ನೂ ತಂದುಕೊಡುವುದಾಗಿತ್ತು. ಹರ್ಷನು ತನ್ನ ಆಳ್ವಿಕೆಗೆ ನೇರವಾಗಿ ಒಳಪಟ್ಟಿದ್ದ ತನ್ನ ಸಾಮ್ರಾಜ್ಯದ ವಿವಿಧ ಭಾಗಗಳಿಗೆ ಆಗಾಗ್ಗೆ ಭೇಟಿಕೊಟ್ಟು ಪ್ರಜೆಗಳ ಕುಂದುಕೊರತೆಗಳನ್ನು ಸ್ವತಃ ವಿಚಾರಿಸಿ ಪರಿಹಾರ ಕ್ರಮಗಳನ್ನು ಕೈಗೊಳ್ಳುತ್ತಿದ್ದನು. ಅಂತೆಯೆ ತನ್ನ ಅಧಿಕಾರಿಗಳಿಗೂ ಕೂಡ ಪ್ರಜೆಗಳ ವಿನಮ್ರ ಸೇವಕರಾಗಿ ನಡೆದುಕೊಳ್ಳುವಂತೆ ಆದೇಶ ನೀಡಿದನು. ದುಷ್ಟನಿಗ್ರಹ ಶಿಷ್ಟರಕ್ಷಣೆಯು ಅವನ ಆಡಳಿತ ನೀತಿಯಾಗಿತ್ತು. ಕೊನೆಯದಾಗಿ ಹರ್ಷನು ವಿದ್ಯಾಪಾರಗಂತನೂ, ವಿದ್ವಜ್ಜನರ ಆಶ್ರಯದಾತನೂ ಧರ್ಮರಕ್ಷಕನೂ, ದಾನಶೀಲನೂ, ಸಾಹಿತ್ಯ, ಕಲೆ, ವಿದ್ಯೆ ಮತ್ತು ಸಂಸ್ಕೃತಿಯ ಪೋಷಕನೂ ಆಗಿದ್ದು ಭಾರತದ ಇತಿಹಾಸದಲ್ಲಿ ಚಿರಸ್ಮರಣೀಯ ಸ್ಥಾನವನ್ನು ಗಳಿಸಿಕೊಂಡಿದ್ದಾನೆ. ಹರ್ಷನು ಕ್ರಿ.ಶ. 605ರಲ್ಲಿ ಹರ್ಷಶಖೆಯನ್ನು ಆರಂಭಿಸಿದನು. ಇದು ಅವನ ಆಳ್ವಿಕೆಯು ಆರಂಭವಾದ ವರ್ಷದಿಂದ ಆರಂಭಿಸಲ್ಪಟ್ಟಿತು. ಹರ್ಷನು ಕಾಲವಾದ ನಂತರವೂ ಉತ್ತರ ಭಾರತದಲ್ಲಿ ಒಂದೆರಡು ಶತಮಾನಗಳ ಕಾಲ ಹರ್ಷಶಕೆಯು ಬಳಕೆಯಲ್ಲಿದ್ದಿತು.

**ಹ್ಯೂಯನ್‌ತ್ಸಾಂಗ್**

ಮಹಾತ್ಮ ಬುದ್ಧನ ಪವಿತ್ರ ಜನ್ಮಭೂಮಿಯಾದ ಭಾರತವನ್ನು ಸಂದರ್ಶಿಸಿ ತಮ್ಮ ಜೀವನವನ್ನು ಪುನೀತಗೊಳಿಸಿಕೊಳ್ಳಲು ಪ್ರಯಾಣದ ಕಷ್ಟಸುಖಗಳನ್ನು ಸ್ವಲ್ಪವೂ ಲೆಕ್ಕಿಸದೆ ಚೀನಾದಿಂದ ಬಂದ ಪ್ರಸಿದ್ಧ ಯಾತ್ರಿಕರಲ್ಲಿ ಹ್ಯೂಯನ್‌ತ್ಸಾಂಗನು ಎರಡನೆಯವನು. ಇವನನ್ನು 'ಯಾತ್ರಿಕರ ರಾಜಕುಮಾರ'ನೆಂದು ಕರೆಯುತ್ತಾರೆ. ಇವನು

ಫಾಹಿಯಾನನಂತೆ ಬೌದ್ಧ ಧರ್ಮದ ತತ್ವೋಪದೇಶಗಳಲ್ಲಿ ಮತ್ತು ಬೌದ್ಧ ಸಾಹಿತ್ಯದಲ್ಲಿ ಹೆಚ್ಚಿನ ಆಸಕ್ತಿಯನ್ನು ಹೊಂದಿದ್ದನು. ಇವನ ಜೀವನ ಚರಿತ್ರಕಾರನಾದ ಹುಯಿ-ಲಿ ಪ್ರಕಾರ ಹ್ಯೂಯನ್‌ತ್ಸಾಂಗನು ಒಂದು ವಿದ್ವತ್‌ಮನೆತನಕ್ಕೆ ಸೇರಿದ್ದನು. ಹ್ಯೂಯನ್‌ತ್ಸಾಂಗನು ಚೀನಾದಲ್ಲಿ ಲಭ್ಯವಾಗಿದ್ದ ಬೌದ್ಧ ಧರ್ಮ ಕೃತಿಗಳ ಅಧ್ಯಯನದಿಂದ ತೃಪ್ತನಾಗಿದೆ ಬೌದ್ಧ ಮತದ ಸತ್ಯಾಂಶಗಳನ್ನು ತಿಳಿಯಲು ಭಾರತವನ್ನು ಸಂದರ್ಶಿಸಬೇಕೆಂದು ನಿಶ್ಚಯಿಸಿದ್ದನು. ಇಂತಹ ಅಪೇಕ್ಷೆಯನ್ನು ಇಟ್ಟುಕೊಂಡಿದ್ದ ಹ್ಯೂಯನ್‌ತ್ಸಾಂಗನು ಕ್ರಿ.ಶ. 629ರಲ್ಲಿ ತನ್ನ ಇಪ್ಪತ್ತಾರನೆ ವಯಸ್ಸಿನಲ್ಲಿ ಚೀನಾದಿಂದ ಹೊರಟು ಗೋಬಿ ಮರಭೂಮಿಯನ್ನು ಪರ್ವತಗಳನ್ನೂ ಮತ್ತು ನದಿಕಣಿವೆಗಳಿಂದ ಕೂಡಿದ ಕಷ್ಟಕರವಾದ ಮಾರ್ಗದಲ್ಲಿ ಪ್ರಯಾಣ ಮಾಡಿದನು. ಅವನು ತನ್ನ ಪ್ರಯಾಣ ಕಾಲದಲ್ಲಿ ತಾಷ್ಕೆಂಟ್ ಬಾಲ್ಕ್, ಬಾಮಿಯನ್ ಮತ್ತು ಕಾಬೂಲ್‌ಗಳನ್ನು ಸಂದರ್ಶಿಸಿದನು ಮತ್ತು ಇಲ್ಲಿನ ಜನಗಳು ಬೌದ್ಧ ತತ್ವಗಳನ್ನು ಪಾಲಿಸುತ್ತಿದ್ದರೆಂದು ಹೇಳುತ್ತಾನೆ. ಅನಂತರ ಭಾರತವನ್ನು ತಲುಪಿ ಕಪಿಸ, ಗಾಂಧಾರ ಮತ್ತು ಕಾಶ್ಮೀರಗಳಿಗೆ ಭೇಟಿ ನೀಡಿ ಸಂಸ್ಕೃತ ಭಾಷೆಯನ್ನು ಮತ್ತು ಬೌದ್ಧ ಗ್ರಂಥಗಳನ್ನು ಅಧ್ಯಯನ ಮಾಡಿದನು. ತರುವಾಯ ಹರ್ಷ ಚಕ್ರವರ್ತಿಯ ಸಾಮ್ರಾಜ್ಯವನ್ನು ಪ್ರವೇಶಿಸಿ ಕಪಿಲವಸ್ತು, ಲುಂಬಿಣಿ, ಗಯಾ, ಸಾರನಾಥ, ಕುಶಿನಗರ, ರಾಜಗೃಹ, ಕಾಮರೂಪ ಮೊದಲಾದ ಸ್ಥಳಗಳಿಗೆ ಭೇಟಿ ನೀಡಿದನು. ಹ್ಯೂಯನ್‌ತ್ಸಾಂಗನ ಪ್ರವಾಸವು ಉತ್ತರ ಭಾರತಕ್ಕೆ ಸೀಮಿತವಾಗಿರಲಿಲ್ಲ. ಅವನು ಸೌರಾಷ್ಟ್ರ, ಮಹಾರಾಷ್ಟ್ರ, ಆಂಧ್ರಪ್ರದೇಶ, ಕರ್ನಾಟಕ ಮತ್ತು ತಮಿಳು ನಾಡಿಗೂ ಭೇಟಿ ನೀಡಿದನು. ಕರ್ನಾಟಕದಲ್ಲಿ ಎರಡನೇ ಪುಲಿಕೇಶಿಯ ಆಸ್ಥಾನಕ್ಕೂ ತಮಿಳು ನಾಡಿನಲ್ಲಿ ಪಲ್ಲವರ ರಾಜಧಾನಿಯಾಗಿದ್ದ ಕಂಚಿಗೂ ಭೇಟಿನೀಡಿ ಅಲ್ಲಿನ ದೇವಾಲಯಗಳನ್ನು ಮತ್ತು ಬೌದ್ಧ ವಿಹಾರಗಳನ್ನು ವೀಕ್ಷಿಸಿದನು. ಅವನು ಹೋದ ಕಡೆಯಲೆಲ್ಲಾ ಬೌದ್ಧಮತಕ್ಕೆ ಸಂಬಂಧಿಸಿದಂತೆ ಹಸ್ತಪ್ರತಿಗಳನ್ನೂ ಮತ್ತು ಬುದ್ಧನ ವಿಗ್ರಹಗಳನ್ನು ಸಂಗ್ರಹಿಸಿದನು. ಕ್ರಿ.ಶ. 643ರಲ್ಲಿ ಹರ್ಷ ಚಕ್ರವರ್ತಿಯು ಹ್ಯೂಯನ್‌ತ್ಸಾಂಗನನ್ನು ತನ್ನ ರಾಜಧಾನಿಯಾಗಿದ್ದ ಕನೂಜಿಗೆ ಆಹ್ವಾನಿಸಿ ರಾಜಮರ್ಯಾದೆಯಿಂದ ಗೌರವಿಸಿದನು. ಅಲ್ಲದೆ ಚೀನೀ ಯಾತ್ರಿಕನ ಗೌರವಾರ್ಥವಾಗಿ ಕನೂಜಿನಲ್ಲಿ ಧಾರ್ಮಿಕ ಗೋಷ್ಠಿಯನ್ನು ಏರ್ಪಡಿಸಿದನು. ಹ್ಯೂಯನ್‌ತ್ಸಾಂಗನು ಕನೂಜಿನ ಸಬೆಯ ನಂತರ ಪ್ರಯಾಗದಲ್ಲಿ ಏರ್ಪಡಿಸಿದ ಮಹಾಸಭೆಗೂ ಆಹ್ವಾನಿಸಲ್ಪಟ್ಟಿದ್ದು ಅಲ್ಲಿನ ಕಾರ್ಯಕಲಾಪಗಳನ್ನು ವೀಕ್ಷಿಸಿದನು. ಹ್ಯೂಯನ್‌ತ್ಸಾಂಗನು ಕೆಲವು ವರ್ಷಗಳು ನಳಂದ ವಿಶ್ವವಿದ್ಯಾನಿಲಯದಲ್ಲೂ ಇದ್ದು ಅಧ್ಯಯನ ಮಾಡಿದನು.

ಹ್ಯೂಯನ್‌ತ್ಸಾಂಗನು ಭಾರತದಲ್ಲಿ ಹದಿನೈದು ವರ್ಷಗಳ ಕಾಲ ಪರ್ಯಟನೆ ಮಾಡಿ ತನ್ನ ಉದ್ದೇಶ ಸಾರ್ಥಕತೆಯ ನಂತರ ಕ್ರಿ.ಶ. 644ಸ್ವದೇಶಕ್ಕೆ ಹಿಂದಿರುಗಿದನು. ಅವನ ಮರು ಪ್ರಯಾಣಕ್ಕೆ ಹರ್ಷಚಕ್ರವರ್ತಿಯು ಎಲ್ಲ ಸಿದ್ಧತೆಗಳನ್ನು ಮಾಡಿ ಗೌರವದಿಂದ ಬೀಳ್ಕೊಟ್ಟನು. ಹ್ಯೂಯನ್‌ತ್ಸಾಂಗನು ತನ್ನ ಜತೆಯಲ್ಲಿ ಬುದ್ಧನ ಅವಶೇಷಗಳನ್ನು ಚಿನ್ನ, ಬೆಳ್ಳಿ ಮತ್ತು ಗಂಧದ ಮರದಿಂದ ಮಾಡಿದ ಬುದ್ಧನ ನೂರಾರು ವಿಗ್ರಹಗಳನ್ನು ಮತ್ತು ಆರುನೂರೈವತ್ತು ಹಸ್ತಪ್ರತಿಗಳನ್ನು ಇಪ್ಪತ್ತೆರಡು ಕುದುರೆಗಳ ಮೇಲೆ ಸಾಗಿಸಿಕೊಂಡು ಹೊರಟನು. ಅವನ ಬೆಂಗಾವಲಾಗಿ ಹರ್ಷ ಚಕ್ರವರ್ತಿಯು ಅನೇಕ ಭಟರನ್ನು ಮತ್ತು ಸಾಮಂತ ರಾಜರನ್ನೂ ಕಳುಹಿಸಿಕೊಟ್ಟನು.

ಅವರು ಅವನೊಂದಿಗೆ ತಾಮ್ರ ಲಿಪ್ತಿಯವರೆಗೂ ಪ್ರಯಾಣಿಸಿ ಅವನಿಗೆ ಶುಭಕೋರಿ ಹಿಂತಿರುಗಿದರು.

ಹ್ಯೂಯನ್‌ತ್ಸಾಂಗನು ಸ್ವದೇಶವನ್ನು ತಲುಪಿದ ಮೇಲೆ ಕ್ರಿ.ಶ. 649ರಲ್ಲಿ ಚೀನಾದ ಚಕ್ರವರ್ತಿ ಟೈ-ಸುಂಗ್ ಚಕ್ರವರ್ತಿಯು ಅವನಿಗೆ ಗೌರವ ಸತ್ಕಾರ ಸಮಾರಂಭವೊಂದನ್ನು ಏರ್ಪಡಿಸಿದನು. ಹ್ಯೂಯನ್‌ತ್ಸಾಂಗನು ತನ್ನ ಉಳಿದ ಕಾಲವನ್ನು ತಾನು ಭಾರತದಿಂದ ತೆಗೆದುಕೊಂಡತು ಹೋಗಿದ್ದ ಭೌದ್ಧ ಗ್ರಂಥಗಳನ್ನು ಚೀನೀ ಭಾಷೆಗೆ ಭಾಷಾಂತರಿಸುವುದರಲ್ಲಿ ಕಳೆದನು. ಅವನು ಕ್ರಿ.ಶ. 661ರ ಸಮಯಕ್ಕೆ ಆರುನೂರು ಅಧ್ಯಾಯಗಳಿಂದ ಕೂಡಿದ ಮಹಾ-ಪ್ರಜ್ಞ-ಪರಿಮಿತ ಸೂತ್ರದ ಭಾಷಾಂತರವನ್ನು ಪೂರ್ಣಗೊಳಿಸಿದನು. ಹ್ಯೂಯನ್‌ತ್ಸಾಂಗನು ಕ್ರಿ.ಶ. 664ರಲ್ಲಿ ಕಾಲವಾದನು.

ಹ್ಯೂಯನ್‌ತ್ಸಾಂಗನ ಭಾರತದ ಯಾತ್ರೆಯ ಬಗೆಗಿನ ಬರವಣಿಗೆಯು ಪ್ರಾಚೀನ ಭಾರತದ ಇತಿಹಾಸ ರಚನೆಗೆ ಅತ್ಯಮೂಲ್ಯ ಮಾಹಿತಿಗಳನ್ನೊದಗಿಸುತ್ತದೆ. ಬೌದ್ಧ ಗ್ರಂಥಗಳ ಅಧ್ಯಯನವು ಭಾರತದಲ್ಲಿ ಅವನ ಭೇಟಿಯ ಮುಖ್ಯ ಉದ್ದೇಶವಾಗಿದ್ದರೂ ಭಾರತೀಯರ ಜೀವನ ವಿಧಾನ, ಆಚಾರ ವಿಚಾರಗಳು, ಗುಣ ಸ್ವಭಾವ ಮೊದಲಾದುವುಗಳನ್ನು ತಿಳಿಯುವುದರಲ್ಲೂ ಅವನು ಆಸಕ್ತಿ ವಹಿಸಿದ್ದನು. ಅವನು ಭಾರತೀಯರ ಪ್ರಾಮಾಣಿಕತೆಯನ್ನು ಪ್ರಶಂಸೆ ಮಾಡಿರುವನು. ಇಲ್ಲಿನ ಜನರು ಐಶ್ವರ್ಯ ಸಂಪಾದನೆಗೆ ದುರ್ಮಾರ್ಗಗಳನ್ನು ಅನುಸರಿಸುವುದಿಲ್ಲ. ಮೋಸ, ವಂಚನೆಗಳಾಗಲಿ, ಮಾತಿಗೆ ತಪ್ಪಿ ನಡೆಯುವುದಾಗಲೀ ಅವರ ಸ್ವಭಾವವಲ್ಲ. ನಡವಳಿಕೆ ಸೌಜನ್ಯದಿಂದ ಕೂಡಿತ್ತು. ಜನರ ಶೀಲ ಸ್ವಭಾವಗಳು ಮತ್ತು ನೈತಿಕ ಮಟ್ಟವು ಉನ್ನತವಾಗಿತ್ತು. ಅಪರಾಧಿಗಳಿದ್ದರೂ ಅವರ ಸಂಖ್ಯೆಯು ಕಡಿಮೆಯಿತ್ತು. ಆಡಳಿತವು ಉತ್ತಮ ನೀತಿಗಳಿಂದ ಕೂಡಿತ್ತು ತೆರಿಗೆಗಳು ಭಾರವಾಗಿರಲಿಲ್ಲ. ಪ್ರತಿಯೊಬ್ಬರು ಕಷ್ಟಪಟ್ಟು ದುಡಿದು ಜೀವನ ಸಾಗಿಸುತ್ತಾರೆ. ಇದರಿಂದ ದೇಶದಲ್ಲಿ ಶಾಂತಿ ಸುಭಿಕ್ಷೆಯು ನೆಲೆಸಿದ್ದಿತೆಂದು ಹೇಳುತ್ತಾನೆ. ಹ್ಯೂಯನ್‌ತ್ಸಾಂಗನು ಭಾರತೀಯರ ವಿದ್ಯಾಕಾಂಕ್ಷೆಯನ್ನು ಮತ್ತು ವಿದ್ವಾಂಸರ ಬಗ್ಗೆ ಅವರಿಟ್ಟುಕೊಂಡಿದ್ದ ಗೌರವವನ್ನು ಮನಸಾರೆ ಕೊಂಡಾಡಿದ್ದಾನೆ. ನಳಂದ ವಿಶ್ವವಿದ್ಯಾನಿಲಯದ ವೈಭವದ ಬಗ್ಗೆ ದೀರ್ಘ ವಿವರಣೆಯನ್ನು ನೀಡಿರುವನು.

ಭಾರತವನ್ನು ಸಂದರ್ಶಿಸಿದ ಪ್ರಸಿದ್ಧ ಚೀನೀಯಾತ್ರಿಕರಲ್ಲಿ ಈ-ತ್ಸಿಂಗ್ ಕೊನೆಯವನು. ಇವನು ತನ್ನ ಹದಿನೈದನೆ ವಯಸ್ಸಿನಲ್ಲಿಯೆ ಬೌದ್ಧ ಸಂಘವನ್ನು ಸೇರಿ ಬೌದ್ಧ ಧರ್ಮದ ಅಧ್ಯಯನದಲ್ಲಿ ನಿರತನಾದನು. ಈ-ತ್ಸಿಂಗನು ತನ್ನ ಮೂವತ್ತೇಳನೆ ವಯಸ್ಸಿನಲ್ಲಿ ಕ್ರಿ.ಶ. 671ರಲ್ಲಿ ಚೀನಾದಿಂದ ಹೊರಟು ಇಂಡೋನೇಷಿಯದ ಮೂಲಕ ಸಮುದ್ರದ ಮೇಲೆ ಪ್ರಯಾಣ ಮಾಡಿ ಭಾರತವನ್ನು ತಲುಪಿದನು. ಭಾರತದಲ್ಲಿ ಈ-ತ್ಸಿಂಗನು ತಾಮ್ರಲಿಪ್ತಿ, ರಾಜಗೃಹ, ಕುಶಿನಾರ, ಸಾರನಾಥ ಮತ್ತು ನಳಂದಗಳಿಗೆ ಸಂದರ್ಶನ ನೀಡಿದನು. ನಳಂದದಲ್ಲಿ ಹತ್ತು ವರ್ಷಗಳ ಕಾಲ ಅಧ್ಯಯನ ಮಾಡಿ ಕ್ರಿ.ಶ. 695ರಲ್ಲಿ ಚೀನಾಕ್ಕೆ ಹಿಂತಿರುಗಿದನು. ಈ-ತ್ಸಿಂಗನು ತಾನು ಹಿಂದಿರುಗಿ ಹೋಗುವಾಗ ತನ್ನ ಜೊತೆಯಲ್ಲಿ ನಾನೂರಕ್ಕೂ ಹೆಚ್ಚು ಸಂಸ್ಕೃತ ಹಸ್ತಪ್ರತಿಗಳನ್ನು ತೆಗೆದುಕೊಂಡು ಹೋದನು.

ಈ ಮೂವರು ಪ್ರವಾಸಿಗಳ ಬರವಣಿಗೆಗಳು ಕ್ರಿ.ಶ. 5ನೇ ಶತಮಾನದಿಂದ 8ನೇ ಶತಮಾನದವರೆಗೆ ಭಾರತದಲ್ಲಿ ಬೌದ್ಧಮತದ ಸ್ಥಿತಿಗತಿಗಳ ಬಗ್ಗೆ ಅಪಾರ ಬೆಳಕನ್ನು ಚೆಲ್ಲುತ್ತವೆ. ಇದಲ್ಲದೆ ಇವರ ಬರವಣಿಗೆಗಳಿಂದ ಎರಡನೇ ಚಂದ್ರಗುಪ್ತ, ಶ್ರೀಹರ್ಷಚಕ್ರವರ್ತಿ ಯಂತಹ ಸಾರ್ವಭೌಮರ ವ್ಯಕ್ತಿತ್ವದ ಬಗ್ಗೆಯೂ ನಳಂದ ವಿಶ್ವವಿದ್ಯಾನಿಲಯದ ಬಗ್ಗೆಯೂ ಅಪೂರ್ವ ಮಾಹಿತಿಗಳು ದೊರೆಯುತ್ತವೆ. ಮೇಲಾಗಿ ಈ ಮೂವರು ಪ್ರವಾಸಿಗಳ ಬರವಣಿಗೆಯನ್ನು ಹೋಲಿಸಿ ನೋಡಿದಾಗ ಭಾರತೀಯರ ಸಾಮಾಜಿಕ ಮತ್ತು ಆರ್ಥಿಕ ಕ್ಷೇತ್ರಗಳಲ್ಲಿ ಮಹತ್ತರ ಬದಲಾವಣೆಗಳಾಗುತ್ತಿದ್ದುದಾಗಿಯೂ ಮತ್ತು ಸಮಾಜದಲ್ಲಿ ಜಾತೀಯತೆಯ ನಿಯಮಗಳು ಕಠಿಣವಾಗಿದ್ದುದಾಗಿ ಗೋಚರವಾಗುತ್ತದೆ. ಕೊನೆಯದಾಗಿ ಇವರ ಬರವಣಿಗೆಗಳು ಭಾರತೀಯರ ವಿದ್ಯಾಕಾಂಕ್ಷೆ ಹಾಗೂ ಬೌದ್ಧಿಕ ಸಾಧನೆಗಳ ಮೇಲೂ ಬೆಳಕನ್ನು ಚೆಲ್ಲುತ್ತದೆ. ಒಟ್ಟಾರೆ ಇವರ ಬರವಣಿಗೆಗಳು ಪ್ರಾಚೀನ ಭಾರತದ ಇತಿಹಾಸ ರಚನೆಗೆ ಆಧಾರ ನಿಧಿಗಳಾಗಿವೆ.

### ಶ್ರೀಹರ್ಷ ನಂತರ ಭಾರತದ ರಾಜಕೀಯ ಸ್ಥಿತಿಗತಿಗಳು

ಹರ್ಷಚಕ್ರವರ್ತಿಯು ಕ್ರಿ.ಶ. 647ರಲ್ಲಿ ಕಾಲವಾದನು. ಇವನಿಗೆ ಗಂಡುಮಕ್ಕಳಿಲ್ಲವಾದ್ದರಿಂದ ಇವನ ಮರಣದೊಂದಿಗೆ ವರ್ಧನ ಸಂತತಿಯವರ ಆಳ್ವಿಕೆಯೂ ಕೊನೆಗೊಂಡಿತು. ಹ್ಯೂಯನ್‌ತ್ಸಾಂಗನ ಬರವಣಿಗೆಯ ಪ್ರಕಾರ ಆವನ ಮಂತ್ರಿಗಳಲ್ಲೊಬ್ಬನಾದ ಅರ್ಜುನ ಎಂಬವನು ಸಿಂಹಾಸನವನ್ನು ವಶಪಡಿಸಿಕೊಂಡನು. ಹರ್ಷನು ಕಾಲವಾದ ತರುವಾಯದಲ್ಲೇ ಕನೂಜಿಗೆ ಭೇಟಿ ಕೊಟ್ಟ ವಾಂಗ್ ಹ್ಯೂಯನ್-ಟ್ಸೆ ಎಂಬವನ ನೇತೃತ್ವದಲ್ಲಿ ಚೀನೀ ನಿಯೋಗವನ್ನು ಅರ್ಜುನನು ಹಿಂಸಿಸಿದನೆಂದು, ಇದರಿಂದ ಕ್ರೋಧಗೊಂಡ ಚೀನೀ ಚಕ್ರವರ್ತಿಯು ಟಿಬೆಟ್ಟಿನ ದೊರೆ ಸ್ಟ್ರಾಂಗ್‌ಸಾನ್-ಗಾಂಪೂ ಎಂಬುವನ ಸೈನಿಕ ಸಹಾಯದಿಂದ ಅರ್ಜುನನ ಮೇಲೆ ಯುದ್ಧವನ್ನು ಘೋಷಿಸಿ ಅವನನ್ನು ಸೋಲಿಸಿ. ಸೆರೆಹಿಡಿದು ಚೀನಾಕ್ಕೆ ಕರೆದುಕೊಂಡು ಹೋಗಲಾಯಿತೆಂದು, ಚೀನೀಯರ ಬರವಣಿಗೆಗಳು ತಿಳಿಸುತ್ತವೆ. ಆದರೆ ಈ ಸಂಗತಿಯು ಎಷ್ಟರಮಟ್ಟಿಗೆ ನಿಜ ಎಂಬುದು ಸಂಶಯಾಸ್ಪದ ವಿಷಯವಾಗಿದೆ. ಒಟ್ಟಾರೆ ಹರ್ಷನ ಮರಣಾನಂತರ ಉತ್ತರ ಭಾರತದಲ್ಲಿ ರಾಜಕೀಯ ಅರಾಜಕತೆಯು ಏರ್ಪಟ್ಟಿದ್ದು ಕನೂಜಿನ ಮೇಲಿನ ಒಡೆತನಕ್ಕಾಗಿ ಗೂರ್ಜರ ಪ್ರತೀಹಾರರು. ಪಾಲರು ಮತ್ತು ರಾಷ್ಟ್ರಕೂಟರ ನಡುವೆ ತ್ರಿಕೋಣ ಸ್ಪರ್ಧೆಯು ಏರ್ಪಟ್ಟಿತು. ಹರ್ಷನ ಮರಣಾನಂತರ ಉತ್ತರ ಭಾರತದಲ್ಲಿ ಏರ್ಪಟ್ಟಿದ್ದ ರಾಜಕೀಯ ಅರಾಜಕತೆಯ ಪರಿಸ್ಥಿತಿಯಲ್ಲಿ ಅಜ್ಞಾತ ವಂಶಕ್ಕೆ ಸೇರಿದ ಯಶೋವರ್ಮನ್ ಎಂಬವನು ಪ್ರಸಿದ್ಧಿಗೆ ಬಂದನು. ಯಶೋವರ್ಮನ್ ಕೆಲವು ವರ್ಷಗಳ ಕಾಲ ಇತಿಹಾಸ ಪ್ರಸಿದ್ಧ ವ್ಯಕ್ತಿಯಾಗಿ ಪ್ರಾಮುಖ್ಯತೆ ಗಳಿಸಿದನು. ಇವನು ಕನೂಜಿನಿಂದ ಆಳ್ವಿಕೆ ನಡೆಸಿದನು. ಯಶೋವರ್ಮನ್ ವಿದ್ಯಾಭಿಮಾನಿಯಾಗಿದ್ದನು. ಸಂಸ್ಕೃತದಲ್ಲಿ ಘನ ವಿದ್ವಾಂಸನಾಗಿದ್ದ ಭವಭೂತಿಯು ಇವನ ಆಶ್ರಯ ಪಡೆದಿದ್ದನು. ಭವಭೂತಿಯು ಮಾಲತಿಮಾಧವ, 'ಉತ್ತರರಾಮಚರಿತಂ', 'ಮಹಾವೀರಚರಿತಂ' ಎಂಬ ಪ್ರಸಿದ್ಧ ಕೃತಿಗಳನ್ನು ರಚಿಸಿದ್ದನು. ಇವನ ಆಸ್ಥಾನ ಕವಿಯಾಗಿದ್ದ ವಾಕ್ಪತಿಯು ಪ್ರಾಕೃತ ಭಾಷೆಯಲ್ಲಿ ರಚಿಸಿರುವ ಗೌಡ-ವಾಹೋ ಕಾವ್ಯದಲ್ಲಿ ಇವನ ಸಾಧನೆಗಳು ಪ್ರಸ್ತಾಪಿಸಲ್ಪಟ್ಟಿವೆ. ಅಂತೆಯೆ

ಕಾಶ್ಮೀರದ ರಾಜನಾಗಿದ್ದ ಲಲಿತಾದಿತ್ಯನೊಂದಿಗೆ ಇವನು ಮಾಡಿದ ಹೋರಾಟ ಮತ್ತು ಲಲಿತಾದಿತ್ಯನಿಂದ ಹೊಂದಿದ ಸೋಲು ಕಲ್ಹಣನ 'ರಾಜತರಂಗಿಣಿ'ಯಲ್ಲಿ ವಿವರಿಸಲ್ಪಟ್ಟಿವೆ. ಇವನ ಅತಿ ಶೀಘ್ರದ ಏಳಿಗೆ ಮತ್ತು ಪತನವು ಉತ್ತರ ಭಾರತದ ಸಾರ್ವಭೌಮತ್ವಕ್ಕಾಗಿ ಆರಂಭವಾದ ಹೋರಾಟದಲ್ಲಿ ದಕ್ಷಿಣದ ರಾಜರೂ ಆಸಕ್ತಿವಹಿಸಿದ್ದ ಹೋರಾಟದ ಮೊದಲ ಹಂತವಾಗಿತ್ತು. ಚಾಳುಕ್ಯರ ಮತ್ತು ರಾಷ್ಟ್ರಕೂಟರ ಶಾಸನಗಳಲ್ಲಿ ಈ ಹೋರಾಟದ ಬಗ್ಗೆ ಮಾಹಿತಿಗಳು ದೊರೆಕಿವೆ. ಮಧ್ಯಭಾರತದ ಯಿ-ಶಾ-ಪ-ಮೊ ಅಥವ ಯಸೋವರ್ಮನ್ ಎಂದು ಗುರುತಿಸಲಾಗಿರುವ ರಾಜನೊಬ್ಬನು ಮಂತ್ರಿಯೂ ಮತ್ತು ಬೌದ್ಧ ಸನ್ಯಾಸಿಯೂ ಆಗಿದ್ದ ಪು-ಟ-ಸಿನ್ (ಬುದ್ಧಸೇನ) ಎಂಬವನನ್ನು ಟಿಬೆಟ್ಟಿಯನ್ನರ ಮತ್ತು ಅರಬ್ಬರ ವಿರುದ್ಧ ಸಹಾಯಕ್ಕಾಗಿ ಚೀನಾದ ರಾಜನ ಆಸ್ಥಾನಕ್ಕೆ ಕಳುಹಿಸಿದ್ದನೆಂದು ಹೇಳಲಾಗಿದೆ. ಯಶೋವರ್ಮನ್ ಸೋಲಿಸಿದ ಪರಕೀಯರು ಅರಬ್ಬರೇ ಆಗಿರಬೇಕೆಂದೂ ಮತ್ತು ಅರಬ್ಬರು ಸಿಂಧ್ ಪ್ರದೇಶದಲ್ಲಿ ನೆಲಸಿದ ಮೇಲೆ ಕನೂಜಿನ ಮೇಲೆ ದಂಡಯಾತ್ರೆಯನ್ನು ನಿಯೋಜಿಸಿ ವಿಫಲರಾದರು. ಯಶೋವರ್ಮನ್ 740ರಲ್ಲಿ ಕಾಲವಾದನು. ಇವನ ಮರಣಾನಂತರ ರಾಜಕೀಯ ಶಕ್ತಿಗಳು ಪುನಃ ಕನೂಜಿನ ಮೇಲಿನ ಒಡೆತನಕ್ಕಾಗಿ ಸ್ಪರ್ಧೆಗಳಿದ್ದವು. ಅವರಲ್ಲಿ ಗೂರ್ಜರ-ಪ್ರತೀಹಾರರು. ಬಂಗಾಳದ ಪಾಲರು ಮತ್ತು ಮಾನ್ಯ ಖೇಟದ ರಾಷ್ಟ್ರಕೂಟರು ಮುಖ್ಯರಾಗಿದ್ದು ಇವರ ನಡುವೆ ತ್ರಿಕೋಣ ಸ್ಪರ್ಧೆಯು ಆರಂಭವಾಯಿತು.

ಅಧ್ಯಾಯ- 13

# ಕಂಚಿಯ ಪಲ್ಲವರು

ದಕ್ಷಿಣ ಭಾರತದಲ್ಲಿ ಶಾತವಾಹನರ ಸಾಮ್ರಾಜ್ಯದ ಪತನಾನಂತರ ಕಂಚಿಯಪಲ್ಲವರು ರಾಜಕೀಯ ಪ್ರಾಮುಖ್ಯತೆಗೆ ಬಂದರು. ಪಲ್ಲವರು ಕ್ರಿ.ಶ. ಸುಮಾರು ಮೂರನೇ ಶತಮಾನದಿಂದ ಕ್ರಿ.ಶ. ಒಂಬತ್ತನೇ ಶತಮಾನದ ಕೊನೆಯ ಭಾಗದವರೆಗೂ ಆಳಿದರು. ಪಲ್ಲವರು ಸಂಸ್ಕೃತಿ, ಸಾಹಿತ್ಯ ಮತ್ತು ಕಲೆಗೆ ವಿಶೇಷವಾದ ಪ್ರೋತ್ಸಾಹ ನೀಡಿ ಭಾರತದ ಇತಿಹಾಸದಲ್ಲಿ ವಿಶಿಷ್ಟ ಸ್ಥಾನವನ್ನು ಪಡೆದುಕೊಂಡಿದ್ದಾರೆ. ಪ್ರಾಕೃತ ಮತ್ತು ಸಂಸ್ಕೃತದಲ್ಲಿನ ಶಾಸನಗಳು ಹಾಗೂ ಅವರ ಕಾಲದಲ್ಲಿ ಸಂಸ್ಕೃತ ಮತ್ತು ತಮಿಳು ಭಾಷೆಯಲ್ಲಿ ರಚಿತವಾಗಿರುವ ಸಾಹಿತ್ಯ ಕೃತಿಗಳು ಅವರ ಇತಿಹಾಸಕ್ಕೆ ಮುಖ್ಯ ಆಧಾರಗಳಾಗಿವೆ. ಈ ಕಾಲಕ್ಕೆ ಸೇರಿದ ಶೈವ ಮತ್ತು ವೈಷ್ಣವ ಸಂತರು ರಚಿಸಿರುವ ಗ್ರಂಥಗಳು ಆ ಕಾಲದ ಧಾರ್ಮಿಕ ಮತ್ತು ಸಾಮಾಜಿಕ ಜೀವನದ ಮೇಲೆ ಬೆಳಕನ್ನು ಚೆಲ್ಲುತ್ತವೆ. ಒಂದನೇ ಮಹೇಂದ್ರವರ್ಮನು (ಕ್ರಿ.ಶ. 600-630) ಕವಿಗಳಿಗೆ ವಿಶೇಷ ಪ್ರೋತ್ಸಾಹ ಕೊಟ್ಟಿದ್ದನಲ್ಲದೆ ತಾನು 'ಮತ್ತವಿಲಾಸ ಪ್ರಹಸನ' ಎಂಬ ಗ್ರಂಥವನ್ನು ಬರೆದಿದ್ದಾನೆ. ಇವುಗಳ ಜೊತೆಗೆ ಕ್ರಿ.ಶ. 640ರ ಸುಮಾರಿನಲ್ಲಿ ಪಲ್ಲವರ ರಾಜಧಾನಿಯಾದ ಕಂಚಿಗೆ ಭೇಟಿಕೊಟ್ಟಿದ್ದ ಚೀನೀ ಯಾತ್ರಿಕ ಹ್ಯೂಯನ್‌ತ್ಸಾಂಗ್‌ನ ಬರವಣಿಗೆಯೂ ಪಲ್ಲವರ ಇತಿಹಾಸರಚನೆಗೆ ಅಧಿಕೃತ ಆಧಾರಗಳಾಗಿವೆ.

ಪಲ್ಲವರೆ ಮೂಲ ಖಚಿತವಾಗಿ ತಿಳಿದುಬಂದಿಲ್ಲ. ಪಲ್ಲವ ಸಂತತಿಯ ಹೆಸರು ಪ್ರಾಚೀನ ದಕ್ಷಿಣ ಭಾರತದ ಪ್ರಸಿದ್ಧ ಮನೆತನಗಳಾದ ಚೋಳ, ಚೇರ ಮತ್ತು ಪಾಂಡ್ಯರ ಜೊತೆಗೆ ಸೇರಿದುದಾಗಿಲ್ಲ. ಅಲ್ಲದೆ ಸಂಘಮ್ ಸಾಹಿತ್ಯದಲ್ಲೂ ಪಲ್ಲವರ ಹೆಸರು ಅಷ್ಟಾಗಿ ಕಂಡುಬರುವುದಿಲ್ಲ. ಮೇಲಾಗಿ ಪಲ್ಲವರ ಮನೆತನದ ಪ್ರಾರಂಭದ ಶಾಸನಗಳಲ್ಲಿ ಅವರ ಮೂಲದ ವಿಷಯಕ್ಕೆ ಸಂಬಂಧಿಸಿದ ಮಾಹಿತಿಗಳಿಲ್ಲ. ಈ ಕಾರಣಗಳಿಂದ ವಿದ್ವಾಂಸರು ಪಲ್ಲವರ ಮೂಲನಿವಾಸ ಸ್ಥಾನವನ್ನು ತಿಳಿಯುವ ಪ್ರಯತ್ನದಲ್ಲಿ ಪರ್ಶಿಯಾದಿಂದ ಹಿಡಿದು ಸಿಂಹಳ ದ್ವೀಪದವರೆಗೂ ಅನೇಕ ಪ್ರದೇಶಗಳನ್ನು ಹೆಸರಿಸಿದ್ದಾರೆ.

ಪಲ್ಲವ ಮತ್ತು ಪಹ್ಲವ ಎಂಬ ಪದಗಳಲ್ಲಿ ಕಾಣಬರುವ ಸಾಮ್ಯತೆಯ ಮೇಲೆ ವಿನ್ಸೆಂಟ್‌ಸ್ಮಿತ್, ವೆಂಕಯ್ಯ ಮತ್ತು ಬಿ.ಎಲ್.ರೈಸ್ ಮೊದಲಾದ ವಿದ್ವಾಂಸರು ಪಲ್ಲವರು ಪರ್ಶಿಯಾದ ಪಹ್ಲವರ ಗುಂಪಿಗೆ ಸೇರಿದವರೆಂದೂ ಅವರು ಮೊದಲು

ಪಾರ್ಥಿಯಾ ಹಾಗೂ ಪರ್ಶಿಯಾದಲ್ಲಿದ್ದು ಸಿಂಧೂ ಬಯಲನ್ನು ಪ್ರವೇಶಿಸಿ ಕಾಲಕ್ರಮೇಣ ದಕ್ಷಿಣ ಭಾರತಕ್ಕೆ ಬಂದು ತೊಂಡೈ ಮಂಡಲ ಅಥವ ಕಂಚಿ ಪ್ರದೇಶದಲ್ಲಿ ರಾಜ್ಯ ಸ್ಥಾಪನೆ ಮಾಡಿದರೆಂದು ಅಭಿಪ್ರಾಯಪಟ್ಟಿದ್ದಾರೆ. ಆದರೆ ಈ ಅಭಿಪ್ರಾಯವು ಇತ್ತೀಚಿನ ಸಂಶೋಧನೆಗಳಿಂದ ತಳ್ಳಿಹಾಕಲ್ಪಟ್ಟಿದೆ. ಪಲ್ಲವರು ವೈದಿಕ ಧರ್ಮದ ಅನುಯಾಯಿಗಳಾಗಿದ್ದು ಯಜ್ಞಯಾಗಾದಿಗಳನ್ನು ಆಚರಿಸುತ್ತಿದ್ದರೆಂದು ಅವರ ಶಾಸನಗಳಿಂದ ತಿಳಿದುಬರುತ್ತದೆ. ಭಾರತದಲ್ಲಿ ಆಳಿದ ವಿದೇಶಿಯರಾದ ಪಾರ್ಥಿಯನ್ನರು ಯಜ್ಞಯಾಗಾದಿಗಳನ್ನು ಆಚರಿಸಿದಂತೆ ಕಂಡುಬರುವುದಿಲ್ಲ. ಆದ್ದರಿಂದ ಪಲ್ಲವರು ಪಾರ್ಥಿಯನ್ ಮೂಲದವರೆಂದು ಒಪ್ಪಿಕೊಳ್ಳಲು ಸಾಧ್ಯವಿಲ್ಲ. ರಸನಾಯಗಂ ಮೊದಲಾದ ವಿದ್ವಾಂಸರು ಪಲ್ಲವರ ಮೂಲಕ್ಕೂ ಸಿಂಹಳ ದ್ವೀಪಕ್ಕೂ ಸಂಬಂಧ ಕಲ್ಪಿಸಲು ಪ್ರಯತ್ನಿಸಿದ್ದಾರೆ. ಈ ವಾದದ ಪ್ರಕಾರ ಕಿಲ್ಲಿವಳವನ್ ಚೋಳ ಎಂಬವನು ಪಿಲ್ಲಿವೂಳೈ ಎಂಬ ರಾಜಕುಮಾರಿಯನ್ನು ವಿವಾಹವಾದನು. ಈ ರಾಜಕುಮಾರಿಯು ಸಿಂಹಳದ ಸಮೀಪದಲ್ಲಿದ್ದ ಮಣಿಪಲ್ಲವಂ ಎಂಬ ಸಣ್ಣ ದ್ವೀಪವೊಂದರ ರಾಜನಾಗಿದ್ದ ನಾಗಬಳೈವನನ್ ಎಂಬುವನ ಮಗಳೆಂತಲೂ ಕಿಲ್ಲಿವಳವನ್ ಮತ್ತು ಪಿಲ್ಲಿವೂಳೈ ದಂಪತಿಗಳಿಗೆ ಒಬ್ಬ ಮಗನಿದ್ದನೆಂತಲೂ ಅವನು ಒಮ್ಮೆ ಸಮುದ್ರದ ಮೇಲೆ ಪಯಣಿಸುತ್ತಿದ್ದಾಗ ಅವನ ಹಡಗು ನಾಶವಾಗಲಾಗಿ ಅವನು ಹೇಗೊ ಅಲೆಗಳ ಸಹಾಯದಿಂದ ದಡವನ್ನು ಸೇರಿದನೆಂತಲೂ, ಆ ಸಮಯದಲ್ಲಿ ಅವನ ಕಾಲಿಗೆ ತೊಂಡೆಗಿಡದ ಬಳ್ಳಿಯು ಸುತ್ತಿಕೊಂಡಿದ್ದಿತೆಂದು ಆದ್ದರಿಂದ ಅವನಿಗೆ ತೊಂಡೈಯವನೆಂಬ ಹೆಸರು ಬಂದಿತೆಂದು ಮತ್ತು ಈ ತೊಂಡೈಯವನೇ ಸಂಘಂ ಯುಗದ ಮಣಿಮೇಖಲೈ ಗ್ರಂಥದಲ್ಲಿ ಹೆಸರಿಸಲಾಗಿರುವ ಪಲ್ಲವರ ಮೊದಲನೆ ರಾಜನೆಂತಲೂ ಮತ್ತು ಅವನು ಆಳಲು ಪ್ರಾರಂಭಿಸಿದ ರಾಜ್ಯಕ್ಕೆ ತೊಂಡೈಮಂಡಲ ಅಥವ ತೊಂಡೈನಾಡು ಎಂಬ ಹೆಸರು ಬಂದಿತೆಂದು ಅಭಿಪ್ರಾಯಪಟ್ಟಿರುವರು. ಮಣಿಮೇಖಲೈ ಗ್ರಂಥದ ಕಥೆಯೊಂದರ ಮೇಲೆ ಹೆಣೆದಿರುವ ಮೇಲ್ಕಂಡ ಅಭಿಪ್ರಾಯವು ಐತಿಹಾಸಿಕವಾಗಿ ಸಮಂಜಸವಾಗಿ ಕಾಣುವುದಿಲ್ಲ. ಪಲ್ಲವರ ರಾಜರ ಪ್ರಾರಂಭದ ಪ್ರಾಕೃತ ಶಾಸನಗಳಲ್ಲಿ ಈ ಬಗ್ಗೆ ಯಾವ ಉಲ್ಲೇಖವೂ ಇಲ್ಲ. ಮೇಲಾಗಿ ಪಲ್ಲವರು ತಾವು ಭರಧ್ವಾಜ ಗೋತ್ರದವರೆಂದು ಶಾಸನಗಳಲ್ಲಿ ಹೇಳಿಕೊಂಡಿರುವುದಲ್ಲದೆ ಅವರ ಪ್ರಾರಂಭದ ಶಾಸನಗಳೆಲ್ಲವೂ ಪ್ರಾಕೃತ ಮತ್ತು ಸಂಸ್ಕೃತ ಭಾಷೆಗಳಲ್ಲಿವೆ.

ಪಲ್ಲವರು ದಕ್ಷಿಣ ಭಾರತದ ನಿವಾಸಿಗಳೆಂದು ಬಹುಮಂದಿ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಸರ್ ವಾಲ್ಟರ್ ಈಲಿಯಟ್ ಎಂಬ ವಿದ್ವಾಂಸರ ಅಭಿಪ್ರಾಯದ ಪ್ರಕಾರ ಪಲ್ಲವರು 'ಕಾಡವರ್' ಎಂಬ ಮೂಲನಿವಾಸಿಗಳ ಪಂಗಡಕ್ಕೆ ಸೇರಿದವರು. ಹಿಂದಿನ ಪುದುಕೋಟೆ ಸಂಸ್ಥಾನದ ರಾಜನು ರಾಜಾಪಲ್ಲವ ಎಂಬ ಹೆಸರಿನಿಂದ ಕರೆದುಕೊಳ್ಳುತ್ತಿದ್ದನು ಮತ್ತು ಕಾಡವರ್ ಗುಂಪಿನವರು ಅವನನ್ನು ತಮ್ಮ ಮುಖಂಡನೆಂದು ಒಪ್ಪಿಕೊಂಡಿದ್ದರೆಂಬ ವಿಷಯವನ್ನು ಅವರು ಉದಾಹರಿಸಿರುವುರಲ್ಲದೆ. ಕಾಡವರ್ ಕಲ್ಲವರ್ ಮುಂತಾದ ಬಣಗಳ ಜನರಿಗೂ ಪಲ್ಲವರ ರಾಜರಿಗೂ ಗುಣ ಸ್ವಭಾವಗಳಲ್ಲಿ ಹೋಲಿಕೆಯು ಕಂಡುಬರುವುದೆಂದು ಅಭಿಪ್ರಾಯಪಟ್ಟಿದ್ದಾರೆ. ತರುವಾಯದಲ್ಲಿ ವಿನ್ಸೆಂಟ್‌ಸ್ಮಿತ್ ತಮ್ಮ ಅಭಿಪ್ರಾಯವನ್ನು ಬದಲಿಸಿ ಪಲ್ಲವರು ದಕ್ಷಿಣ ಭಾರತದ ನಿವಾಸಿಗಳೆಂದು ಹೇಳಿದ್ದಾರೆ. ಡಾ॥ಎಸ್. ಶ್ರೀಕಂಠಶಾಸ್ತ್ರಿಗಳು ಹಿರೆ ಹಡಗಲಿ ಶಾಸನದ ಆಧಾರದ ಮೇಲೆ ಪಲ್ಲವರು ಪ್ರಾಚೀನ

ಕಾಲದಲ್ಲಿ ಶಾತಾಹನಿಹಾರ ಎಂದು ಕರೆಯಲ್ಪಡುತ್ತಿದ್ದ ಈಗಿನ ಬಳ್ಳಾರಿ ಜಿಲ್ಲೆಯವರೆಂದೂ, ಅವರು ಬನವಾಸಿಯ ನಾಗ ಸಂತತಿಯವರೊಡನೆ ವೈವಾಹಿಕ ಸಂಬಂಧಗಳನ್ನು ಹೊಂದಿದ್ದರೆಂದು, ಅನಂತರ ಶಾತವಾಹನರ ಸಾಮ್ರಾಜ್ಯವು ಪತನ ಹೊಂದಿದ ಮೇಲೆ ಕಂಚಿ ಪ್ರದೇಶವನ್ನು ಆಕ್ರಮಿಸಿಕೊಂಡರೆಂದು ಅಭಿಪ್ರಾಯಪಟ್ಟಿದ್ದಾರೆ. ಪ್ರೊ|| ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್ ಮತ್ತು ಎಚ್. ಕೃಷ್ಣಶಾಸ್ತ್ರಿಯವರು ಪಲ್ಲವರು ದಕ್ಷಿಣ ಭಾರತದ ನಿವಾಸಿಗಳಾಗಿದ್ದರೆಂಬುದರಲ್ಲಿ ಯಾವ ಸಂಶಯವೂ ಇಲ್ಲವೆಂದೂ ಅವರು ಕಂಚಿ ಪ್ರದೇಶದಲ್ಲಿ ರಾಜ್ಯ ಸ್ಥಾಪನೆ ಮಾಡಿ ಆಳಲು ಪ್ರಾರಂಭಿಸಿದರೆಂದು ಕ್ರಮೇಣ ಅವರು ತಮ್ಮ ರಾಜ್ಯವನ್ನು ಕೃಷ್ಣಾನದಿಯ ದಕ್ಷಿಣ ಭಾಗದಿಂದ ಪಾಲಾರ್ ನದಿಯವರೆಗೂ ವಿಸ್ತರಿಸಿದರೆಂದು, ಅವರ ರಾಜ್ಯದ ಹೆಚ್ಚು ಭಾಗವನ್ನು ತೊಂಡೈ ಮಂಡಲವೆಂದು ಕರೆಯುತ್ತಿರೆಂದು ಅಭಿಪ್ರಾಯಪಟ್ಟಿದ್ದಾರೆ. ಪ್ರೊ|| ಆರ್. ಸತ್ಯನಾಥಯ್ಯರ್ ಅವರು ಪಲ್ಲವರು ತೊಂಡೈಮಂಡಲದ ನಿವಾಸಿಗಳೆಂದು, ಅಶೋಕ ಚಕ್ರವರ್ತಿಯ ಶಿಲಾಶಾಸಿನಗಳಲ್ಲಿ ಕಂಡುಬರುವ ದೇಶೀಯರಾದ ಪುಳಿಂದರ ವಂಶೀಯರಾಗಿದ್ದಿರಬೇಕೆಂದು, ಶಾತವಾಹನರ ಪತನಾ ನಂತರ ಅವರು ಪ್ರವರ್ಧಮಾನಕ್ಕೆ ಬಂದರೆಂದು ಅಭಿಪ್ರಾಯಪಟ್ಟಿದ್ದಾರೆ. ಆ ಅಭಿಪ್ರಾಯವು ಹೆಚ್ಚು ಸಮಂಜಸವಾಗಿ ಕಾಣುತ್ತದೆ.

**ರಾಜಕೀಯ ಇತಿಹಾಸ**

ಪಲ್ಲವರ ರಾಜಕೀಯ ಇತಿಹಾಸದ ಕಾಲವನ್ನು ನಾಲ್ಕು ಭಾಗಗಳಾಗಿ ವಿಂಗಡಿಸಲಾಗಿದೆ. 1. ಪ್ರಾಕೃತ ಶಿಲಾಶಾಸನಗಳ ಕಾಲ 2. ಸಂಸ್ಕೃತ ಶಿಲಾಶಾನಗಳ ಕಾಲ 3. ಪಲ್ಲವರ ಅಭ್ಯುದಯದ ಕಾಲ 4. ಅವರ ಪತನದ ಕಾಲ. ಪಲ್ಲವರ ಪ್ರಾರಂಭದ ಇತಿಹಾಸಕ್ಕೆ ಸಂಬಂಧಿಸಿದಂತೆ ಹೆಚ್ಚಿನ ವಿವರಗಳು ದೊರೆತಿಲ್ಲ. ಪ್ರಾಕೃತ ಶಿಲಾಶಾಸನಗಳಲ್ಲಿ ಶಿವಸ್ಕಂದವರ್ಮ ಮೊದಲಾದ ಕೆಲವು ರಾಜರುಗಳ ಹೆಸರುಗಳು ಕಂಡುಬರುತ್ತವೆ. ಶಿವಸ್ಕಂಧವರ್ಮನು ಕ್ರಿ.ಶ. ನಾಲ್ಕನೇ ಶತಮಾನದ ಆರಂಭದಲ್ಲಿ ಆಳುತ್ತಿದ್ದುದಾಗಿ ಕಂಡುಬಂದಿದೆ. ಇವನ ರಾಜ್ಯವು ಕೃಷ್ಣಾನದಿಯ ಬಯಲಿನಿಂದ ದಕ್ಷಿಣ ಪೆನ್ನಾರ್ ನದಿಯವರೆಗೂ ವಿಸ್ತರಿಸಿದ್ದಿತು. ಇವನು ಒಂದು ಅಶ್ವಮೇಧಯಾಗವನ್ನು ಮಾಡಿದನು. ಅನಂತರದ ಪ್ರಮುಖ ರಾಜನೆಂದರೆ ವಿಷ್ಣುಗೋಪ ಎಂಬವವನು. ಇವನು ದಕ್ಷಿಣ ಭಾರತದ ಮೇಲೆ ದಂಡೆತ್ತಿ ಬಂದಿದ್ದ ಸಮುದ್ರಗುಪ್ತನೊಂದಿಗೆ ಹೋರಾಡಿ ಸೋತಿದ್ದುದಾಗಿ ಅಲಹಾಬಾದ್ ಶಿಲಾಶಾಸನದಿಂದ ತಿಳಿದುಬರುತ್ತದೆ. ಕ್ರಿ.ಶ. ನಾಲ್ಕನೇ ಶತಮಾನದ ಪ್ರಾರಂಭದಿಂದ ಐದನೇ ಶತಮಾನದ ಕೊನೆಯವರೆಗೆ ಸುಮಾರು ಹದಿನಾರು ಜನ ಪಲ್ಲವ ರಾಜರುಗಳು ಆಳಿದುದಾಗಿ ಅವರ ಪ್ರಾಕೃತ ಮತ್ತು ಸಂಸ್ಕೃತ ಶಿಲಾಶಾಸನಗಳಿಂದ ತಿಳಿದುಬರುತ್ತದೆ. ಪಲ್ಲವರ ಆಳ್ವಿಕೆಯ ಮೂರನೆಯದು ಮತ್ತು ಅಭ್ಯುದಯ ಭರಿತವೂ ಆದ ಕಾಲವು ಸಿಂಹವಿಷ್ಣುವಿನೊಂದಿಗೆ ಆರಂಭವಾಯಿತು. ಇವನು ಚೋಳರನ್ನೂ, ಪಾಂಡ್ಯರನ್ನೂ ಗೆದ್ದು ಪಲ್ಲವರ ರಾಜ್ಯವನ್ನು ದಕ್ಷಿಣದ ಕಡೆಗೆ ವಿಸ್ತರಿಸಿದನು. ಸಿಂಹವಿಷ್ಣುವಿಗೆ 'ಅವನಿ ಸಿಂಹ' ಎಂಬ ಬಿರುದ್ದಿತು. ಸಿಂಹವಿಷ್ಣುವಿನ ನಂತರ ಅವನ ಪ್ರಖ್ಯಾತ ಮಗನಾಗಿದ್ದ ಒಂದನೇ ಮಹೇಂದ್ರವರ್ಮನ್ ಪಟ್ಟಕ್ಕೆ ಬಂದನು.

ಒಂದನೇ ಮಹೇಂದ್ರ ವರ್ಮನು ಕ್ರಿ.ಶ. 600ರಿಂದ 630ರವರೆಗೆ ರಾಜ್ಯವಾಳಿದನು. ಇವನು ಚತುರನೂ, ಕವಿಯೂ, ಸಂಗೀತಕಾರನೂ, ರಾಜ್ಯ ಸಂಸ್ಥಾಪಕನೂ ಮತ್ತು ಜ್ಞಾನ ಪ್ರಕಾಶನಾದ ಅರಸನಾಗಿದ್ದನು. ಇವನ ಆಳ್ವಿಕೆಯು ಅನೇಕ ರೀತಿಯಲ್ಲಿ ಪಲ್ಲವರ ಇತಿಹಾಸದಲ್ಲಿ ಪ್ರಮುಖವಾಗಿದೆ. ಇವನು ಕಲೆ ಮತ್ತು ಸಾಹಿತ್ಯಕ್ಕೆ ವಿಶೇಷ ಪ್ರೋತ್ಸಾಹ ಕೊಟ್ಟಿದ್ದನು. ಇವನು ಕವಿಗಳಿಗೆ ಪ್ರೋತ್ಸಾಹ ನೀಡಿದ್ದುದಲ್ಲದೆ ತಾನೇ ಕವಿಯೂ ಆಗಿದ್ದು ಸಂಸ್ಕೃತದಲ್ಲಿ 'ಮತ್ತವಿಲಾಸ ಪ್ರಹಸನ' ಎಂಬ ಗ್ರಂಥವನ್ನು ರಚಿಸಿದ್ದಾನೆ. ಶೈವ ಸಂತರಾದ ಅಪ್ಪಾರ್ ಎಂಬವರೂ ಮತ್ತು 'ಕಿರಾತಾರ್ಜುನೀಯ'ದ ಕೃತವೂ ಆದ ಭಾರವಿಯೂ ಮಹೇಂದ್ರವರ್ಮನ ಸಮಕಾಲೀನರಾಗಿದ್ದು ಸಂಸ್ಕೃತದಲ್ಲಿ ಗ್ರಂಥ ರಚನೆಮಾಡಿರುವರು. ತಮಿಳು ಗ್ರಂಥವಾದ 'ಪೆರಿಯ ಪುರಾಣ'ದ ಪ್ರಕಾರ ಮಹೇಂದ್ರ ವರ್ಮನು ಮೊದಲು ಜೈನನಾಗಿದ್ದು ಅನಂತರ ಅಪ್ಪಾರ್‌ರಿಂದ ಶೈವಧರ್ಮಕ್ಕೆ ಮತಾಂತರ ಗೊಂಡನೆಂಬುದಾಗಿ ತಿಳಿದುಬರುತ್ತದೆ. ಒಂದನೇ ಮಹೇಂದ್ರವರ್ಮನು ಸಂಗೀತಾಭಿಲಾಷಿಯೂ ಆಗಿದ್ದನು. ರುದ್ರಾಚಾರ್ಯ ಎಂಬ ಪ್ರಸಿದ್ಧ ಸಂಗೀತ ವಿದ್ವಾಂಸನು ಇವನ ಗುರುವಾಗಿದ್ದನು. ಇವನ ಕುಡಿಮಿಯಾಮಲೈ ಶಾಸನವು ಕರ್ನಾಟಿಕ ಸಂಗೀತದ ವಿಕಾಸವನ್ನು ತಿಳಿಯಲು ಉಪಯುಕ್ತ ಆಧಾರವಾಗಿದೆ.

ಮಹೇಂದ್ರವರ್ಮನ್ ವಾಸ್ತುಶಿಲ್ಪ ಮತ್ತು ಶಿಲ್ಪಕಲೆಗೂ ಪ್ರೋತ್ಸಾಹ ಕೊಟ್ಟಿದ್ದನು. ಮಹಾಬಲಿಪುರಂ, ಪಲ್ಲಾವರಂ, ತಿರುಚ್ಚಿ, ಸುತ್ತನವಾಸಲ್ ಮತ್ತು ದಲವನೂರು ಮೊದಲಾದ ಕಡೆಗಳಲ್ಲಿ ಇವನು ಗುಹಾಲಯಗಳನ್ನು ನಿರ್ಮಿಸಿದ್ದನು. ಇವನಿಗೆ 'ಮಹೇಂದ್ರ ವಿಕ್ರಮ' 'ಮತ್ತವಿಲಾಸ' 'ವಿಚಿತ್ರಚಿತ್ತ' 'ಚೈತ್ಯಾಕಾರಿ' 'ಚಿತ್ರಕಾರ ಪುಲಿ' ಎಂಬ ಬಿರುದುಗಳಿದ್ದವು. ಈ ಬಿರುದುಗಳೆಲ್ಲವೂ ಇವನ ಬಹುಮುಖ ಪ್ರತಿಭೆಯನ್ನು ಸೂಚಿಸುತ್ತವೆ.

ಒಂದನೇ ಮಹೇಂದ್ರವರ್ಮನ ಆಡಳಿತ ಕಾಲದಲ್ಲಿ ಪಲ್ಲವರು ಮತ್ತು ಬಾದಾಮಿಯ ಚಾಳುಕ್ಯರ ನಡುವೆ ರಾಜಕೀಯ ಹೋರಾಟಗಳು ಆರಂಭವಾದವು. ಎರಡನೇ ಪುಲೀಕೇಶಿಯು ಪಲ್ಲವ ರಾಜ್ಯದ ಉತ್ತರಭಾಗಕ್ಕೆ ಮುತ್ತಿಗೆ ಹಾಕಿ ಮಹೇಂದ್ರವರ್ಮನನ್ನು ಸೋಲಿಸಿದಲ್ಲದೆ ಪಲ್ಲವರಿಂದ ವೆಂಗಿ ಪ್ರದೇಶವನ್ನು ವಶಪಡಿಸಿಕೊಂಡು ತನ್ನ ತಮ್ಮ ಕುಬ್ಜ ವಿಷ್ಣುವರ್ಧನನನ್ನು ಅಲ್ಲಿಗೆ ರಾಜನನ್ನಾಗಿ ಮಾಡಿದನು..

ಒಂದನೇ ಮಹೇಂದ್ರವರ್ಮನ ನಂತರ ಅವನ ಮಗ ಒಂದನೇ ನರಸಿಂಹವರ್ಮನ್ (ಕ್ರಿ.ಶ. 630-668) ಸಿಂಹಾಸನವನ್ನೇರಿದನು. ಇವನು ಚೋಳ, ಚೇರ, ಪಾಂಡ್ಯ ಮತ್ತು ಸಿಂಹಳದ ಅರಸರನ್ನು ಸೋಲಿಸಿದ್ದಲ್ಲದೆ ಚಾಳುಕ್ಯರ ಮೇಲೂ ದಂಡೆತ್ತಿ ಬಂದು ಅವರ ರಾಜಧಾನಿಯಾದ ವಾತಾಪಿಯನ್ನು ಕ್ರಿ.ಶ. 642ರಲ್ಲಿ ಹಿಡಿದನು. ಹರ್ಷ ಚಕ್ರವರ್ತಿಯ ಮೇಲೆ ವಿಜಯವನ್ನು ಗಳಿಸಿದ ಎರಡನೆ ಪುಲಿಕೇಶಿಯು ಈಗ ನರಸಿಂಹವರ್ಮನಿಂದ ಸೋಲಿಸಲ್ಪಟ್ಟಿದ್ದಲ್ಲದೆ ಪ್ರಾಯಶಃ ಯುದ್ಧಭೂಮಿಯಲ್ಲಿ ಅವನಿಂದ ಕೊಲ್ಲಲ್ಪಟ್ಟನು. ಪಲ್ಲವರು ವಾತಾಪಿಯನ್ನು ಹದಿಮೂರು ವರ್ಷಗಳ ಕಾಲ ಆಕ್ರಮಿಸಿದ್ದರು. ಒಂದನೇ ನರಸಿಂಹವರ್ಮನು

'ವಾತಾಪಿಗೊಂಡ' ಎಂಬ ಬಿರುದನ್ನು ಈ ವಿಜಯದಿಂದ ಪಡೆದನು. ಬಾದಾಮಿಯ ಗುಹೆಯೊಂದರಲ್ಲಿ ನರಸಿಂಹವರ್ಮನು ಶಾಸನವೊಂದನ್ನು ಕೆತ್ತಿಸಿದನು. ಕ್ರಿ.ಶ. 655ರ ವೇಳೆಗೆ ಪುಲಿಕೇಶಿಯ ಮಕ್ಕಳಲ್ಲೊಬ್ಬನಾಗಿದ್ದ ಒಂದನೇ ವಿಕ್ರಮಾದಿತ್ಯನು ನರಸಿಂಹವರ್ಮನನ್ನು ಸೋಲಿಸಿ ಪಲ್ಲವರ ಆಕ್ರಮಣಕ್ಕೊಳಗಾಗಿದ್ದ ವಾತಾಪಿಯನ್ನು ಪುನಃ ವಶಪಡಿಸಿಕೊಂಡು ತನ್ನ ಅಧೀನಕ್ಕೊಳಪಡಿಸಿಕೊಂಡನು.

ಸಿಂಹಳ ದ್ವೀಪದ ಮೇಲಿನ ನರಸಿಂಹವರ್ಮನ ದಂಡಯಾತ್ರೆಯ ವಿವರಗಳು ಮಹಾವಂಶ ಗ್ರಂಥದಿಂದ ತಿಳಿದುಬರುತ್ತವೆ. ಸಿಂಹಳದ ರಾಜನಾಗಿದ್ದ ಮಾನವರ್ಮ ಎಂಬವನು ರಾಜ್ಯಭ್ರಷ್ಟನಾಗಿ ಪಲ್ಲವ ರಾಜನ ಆಶ್ರಯವನ್ನು ಪಡೆದನು. ನರಸಿಂಹ ವರ್ಮನು ಸಿಂಹಳ ದ್ವೀಪದ ಮೇಲೆ ದೊಡ್ಡ ನೌಕಾ ಸೈನ್ಯವನ್ನು ಕಳುಹಿಸಿ ಮಾನವರ್ಮನ ಶತ್ರುಗಳನ್ನು ಸದೆಬಡಿದು ಮಾನವರ್ಮನನ್ನು ಪುನಃ ಸಿಂಹಳದ ರಾಜನನ್ನಾಗಿ ಮಾಡಿದನು.

ಈ ಕಾಲದಲ್ಲಿ ಬೌದ್ಧ ಧರ್ಮದ ಸ್ಥಿತಿಗತಿಗಳನ್ನು ತಿಳಿದುಕೊಳ್ಳಲು ಭಾರತಕ್ಕೆ ಭೇಟಿ ಕೊಟ್ಟಿದ್ದ ಚೀನೀಯಾತ್ರಿಕ ಹ್ಯೂಯನ್‌ತ್ಸಾಂಗನು ಪಲ್ಲವರ ರಾಜ್ಯದಲ್ಲೂ ಸಂಚರಿಸಿ ಕಂಚಿಗೆ ಭೇಟಿಯಿತ್ತಿದ್ದನು. ಪಲ್ಲವರ ರಾಜ್ಯವು ಫಲವತ್ತಾಗಿದ್ದಿತೆಂದು ಜನರು ದವಸಧಾನ್ಯಗಳನ್ನು ಹೇರಳವಾಗಿ ಬೆಳೆಯುತ್ತಿದ್ದರೆಂದು ಅವನು ಹೇಳುತ್ತಾನೆ. ರಾಜಧಾನಿಯಾದ ಕಂಚಿಯು ಸುಮಾರು ಆರು ಮೈಲಿ ಸುತ್ತಳತೆಯಿಂದ ಕೂಡಿದ್ದುದಾಗಿಯೂ ಅಲ್ಲಿ ಒಂದುನೂರು ಸಂಘರಾಮಗಳಿದ್ದುದಲ್ಲದೆ 10,000 ಮಂದಿ ಬೌದ್ಧ ಭಿಕ್ಷುಗಳು ಅಲ್ಲಿದ್ದರೆಂದು ಹೇಳುತ್ತಾನೆ. ಇದಲ್ಲದೆ ಕಂಚಿಯಲ್ಲಿ ಜೈನ ಮತ್ತು ಹಿಂದೂ ಧರ್ಮೀಯರ ಸುಮಾರು ಎಂಬತ್ತು ದೇವಾಲಯಗಳನ್ನು ತಾನು ನೋಡಿದುದಾಗಿಯೂ ಹೇಳುತ್ತಾನೆ.

ನರಸಿಂಹವರ್ಮನ್ ತನ್ನ ತಂದೆಯಂತೆಯೆ ಹಿರಿಯ ರಾಜ್ಯ ಸಂಸ್ಥಾಪಕನಾಗಿದ್ದನು. ಅವನ ಕಾಲದಲ್ಲಿ ರಾಜ್ಯವು ಮತ್ತಷ್ಟು ವಿಸ್ತಾರಗೊಳ್ಳಲಾಗಿ ಮಾಮಲ್ಲಪುರಂ ಅಥವಾ ಮಹಾಬಲಿಪುರಂ ಅನ್ನು ಒಂದು ಉಪರಾಜಧಾನಿಯನ್ನಾಗಿ ಮಾಡಿಕೊಂಡನು ಮತ್ತು ಅದನ್ನು ಕಲ್ಲುಬಂಡೆಗಳಲ್ಲಿಕೊರೆದ ದೇವಾಲಯಗಳಿಂದಲೂ ಕಲ್ಲಿನ ರಥಗಳಿಂದಲೂ ಹಾಗೂ ಮತ್ತಿತರ ಕಲಾಕೃತಿಗಳಿಂದಲೂ ತುಂಬಿ ಆ ಪ್ರದೇಶವನ್ನು ಮನಮೋಹಕವಾಗಿ ಮಾಡಿದನು. ಆ ಪ್ರದೇಶದ ಹೆಸರೂ ಕೂಡ ಅವನ ಬಿರುದಾದ 'ಮಹಾಮಲ್ಲ' ಎಂಬುದರಿಂದ ಉದ್ಭೃತವಾಗಿದೆ. ಒಂದನೇ ನರಸಿಂಹವರ್ಮನ ಕಾಲದಲ್ಲಿ ಪಲ್ಲವ ಮನೆತನದ ಕೀರ್ತಿ ಪ್ರತಿಷ್ಠೆಗಳು ಹೆಚ್ಚಿದವು. ಇವನ ಆಳ್ವಿಕೆಯ ಕಾಲವು ಪಲ್ಲವರ ಸರ್ವೋತ್ಕೃಷ್ಟ ಕಾಲವಾಗಿತ್ತು. ನರಸಿಂಹವರ್ಮನ್ ಕ್ರಿ.ಶ. 668ರಲ್ಲಿ ಕಾಲವಾದನು. ನಂತರ ಅವನ ಮಗನೂ ಮತ್ತು ಉತ್ತರಾಧಿಕಾರಿಯೂ ಆದ ಎರಡನೆ ಮಹೇಂದ್ರವರ್ಮನ್ ಕ್ರಿ.ಶ. 670ರವರೆಗೆ ರಾಜ್ಯವಾಳಿದನು.

ಎರಡನೆಯ ಪುಲಿಕೇಶಿಯ ಮರಣದೊಂದಿಗೆ ಚಾಲುಕ್ಯ ಮತ್ತು ಪಲ್ಲವರ ನಡುವಣ ಹೋರಾಟಗಳು ಕೊನೆಗೊಳ್ಳಲಿಲ್ಲ. ಈ ಹೋಟಾರಗಳು ಅವನ ನಂತರದ ರಾಜರುಗಳ ಆಳ್ವಿಕೆಯ ಕಾಲದಲ್ಲೂ ಮುಂದುವರಿದವು. ಕೆಲವು ವೇಳೆ ಚಾಲುಕ್ಯರೂ

ಕೂಡ ಪಲ್ಲವರಿಂದ ಅಧಿಕ ನಷ್ಟಗಳನ್ನು ಅನುಭವಿಸಿದರು. ಕ್ರಿ.ಶ. 696ರಿಂದ 733ರವರೆಗೆ ರಾಜ್ಯವಾಳಿದ ವಿಜಯಾದಿತ್ಯ ಚಾಳುಕ್ಯನ ದೀರ್ಘ ಆಳ್ವಿಕೆಯ ಕಾಲದಲ್ಲಿ ಅದೃಷ್ಟವಶಾತ್ ಉಭಯ ವಂಶಸ್ಥರಿಗೂ ಯಾವ ಹೋರಾಟವೂ ನಡೆಯದೆ ಪ್ರಶಾಂತ ವಾತಾವರಣವು ಏರ್ಪಟ್ಟಿದ್ದಿತು. ಇದು ಹೆಚ್ಚು ಕಡಿಮೆ ಎರಡನೆಯ ನರಸಿಂಹವರ್ಮ-ರಾಜಸಿಂಹ ಪಲ್ಲವನ (ಕ್ರಿ.ಶ. 680ರಿಂದ 720) ಶಾಂತಿಯುತ ರಾಜ್ಯಾಡಳಿತಕ್ಕೆ ಸಮಕಾಲೀನವಾಗಿತ್ತು. ಉಭಯ ರಾಜರೂ ತಾವು ಕೂಡಿಸಿದ ಸಂಪತ್ತನ್ನು ರಚನಾತ್ಮಕ ಕಾರ್ಯಗಳಿಗಾಗಿ ವಿನಿಯೋಗಿಸಿ ತಮ್ಮ ತಮ್ಮ ರಾಜ್ಯಗಳ ವೈಭವವನ್ನು ಮನೋಹರವಾದ ದೇವಾಲಯಗಳ ನಿರ್ಮಾಣದ ಮೂಲಕ ಹೆಚ್ಚಿಸಿದರು. ರಾಜಸಿಂಹನು ರಾಜಧಾನಿ ಕಂಚಿಯಲ್ಲಿ ಸುಪ್ರಸಿದ್ಧ ಕೈಲಾಸನಾಥ ದೇವಾಲಯವನ್ನು ಕಟ್ಟಿಸಿದನು. ಇವನು ಚೀನಾದೇಶದ ಚಕ್ರವರ್ತಿಯ ಆಸ್ಥಾನಕ್ಕೆ ತನ್ನ ರಾಯಭಾರಿಯನ್ನು ಕಳುಹಿಸಿದ್ದನು. ಇವನಿಗೆ ವಾದ್ಯವಿದ್ಯಾಧರ, ಆಗಮಪ್ರಿಯ ಎಂಬ ಬಿರುದುಗಳಿದ್ದವು. ದಂಡಿ ಕವಿಯು ರಾಜಸಿಂಹನ ಆಸ್ಥಾನದಲ್ಲಿದ್ದನೆಂಬ ಒಂದು ಅಭಿಪ್ರಾಯವೂ ಇದೆ.

ರಾಜಸಿಂಹನ ನಂತರ ಎರಡನೇ ನಂದಿವರ್ಮನ್ ಪಲ್ಲವಮಲ್ಲ (ಕ್ರಿ.ಶ. 744-766)ನು ರಾಜನಾದನು. ಇವನ ಕಾಲದಲ್ಲಿ ಚಾಳುಕ್ಯರ ಎರಡನೇ ವಿಕ್ರಮಾದಿತ್ಯ (ಕ್ರಿ.ಶ. 733-744)ನು ನಿಂತುಹೋಗಿದ್ದ ಚಾಳುಕ್ಯ ಮತ್ತು ಪಲ್ಲವರ ನಡುವಿನ ಹೋರಾಟವನ್ನು ಮುಂದುವರಿಸಿ ಕಂಚಿಯ ಮೇಲೆ ದಂಡೆತ್ತಿ ಬಂದು ಅದನ್ನು ಹಿಡಿದುಕೊಂಡನು. ಇದೇ ಸಮಯದಲ್ಲಿ ಪಲ್ಲವ ರಾಜನು ಪಾಂಡ್ಯರ ಎಡೆತಡೆಯಿಲ್ಲದ ಹೊಡೆತಗಳನ್ನು ಎದುರಿಸಬೇಕಾಗಿ ಬಂದಿತ್ತು. ಆದರೂ ಚಾಳುಕ್ಯ ಅರಸನು ಕಂಚಿಗೆ ಯಾವ ವಿಶೇಷವಾದ ಕಷ್ಟನಷ್ಟಗಳನ್ನು ಉಂಟುಮಾಡಲಿಲ್ಲ. ಬದಲಾಗಿ ಅವನ ದೇವಾಲಯಕ್ಕೆ ಸೇರಿದ ಆಭರಣಗಳೆಲ್ಲವನ್ನೂ ಹಿಂತಿರುಗಿಸಿ ಕೊಟ್ಟು ಜನತೆಯ ಅನುರಾಗಕ್ಕೆ ಪಾತ್ರನಾದನು. ಮಾನವೀಯತೆಯಿಂದ ಕೂಡಿದ ಈ ಅರಸನು ಚಾಳುಕ್ಯರ ಗೌರವ ಪ್ರತಿಷ್ಠೆಗಳನ್ನು ಪುನರ್‌ಸ್ಥಾನಗೊಳಿಸಬಯಸಿದನೇ ಹೊರತು ರಾಜ್ಯವಿಸ್ತರಣೆಗಾಗಲೀ ಅಥವ ಧನವನ್ನು ಕೊಳ್ಳೆ ಹೊಡೆಯುವುದಕ್ಕಾಗಲೀ ಬಂದವನಲ್ಲವೆಂಬುದನ್ನು ಸ್ಥಳೀಯ ಜನರಿಗೆ ತೋರಿಸಿ ಕೊಟ್ಟನು. ನಂದಿವರ್ಮನ್ ಪಲ್ಲವಮಲ್ಲನ ನಂತರ ಅನೇಕ ಅಶಕ್ತ ರಾಜರುಗಳು ಪಟ್ಟಕ್ಕೆ ಬಂದರು. ನಂದಿವರ್ಮನ ನಂತರ ಆಳಿದವರಲ್ಲಿ ಅವನ ಮಗ ದಂತಿವರ್ಮ (ಕ್ರಿ.ಶ. 755-826) ಎಂಬವನು ರಾಷ್ಟ್ರಕೂಟರ ಮೂರನೆಯ ಗೋವಿಂದನಿಂದ ಸೋಲಿಸಲ್ಪಟ್ಟಿದುದು ಮಾತ್ರವಲ್ಲದೆ ಅದೇ ಕಾಲಕ್ಕೆ ಸರಿಯಾಗಿ ಅವನು ಪಾಂಡ್ಯರಿಂದ ಉಂಟಾದ ಒತ್ತಡವನ್ನೂ ಎದುರಿಸಬೇಕಾಯಿತು. ಆದರೂ ದಂತಿವರ್ಮನ ಶಕ್ತಿಯುತ ಮಗನೂ ಅವನ ಉತ್ತರಾಧಿಕಾರಿಯೂ ಆದ ಮೂರನೇ ನಂದಿವರ್ಮನು (ಕ್ರಿ.ಶ. 844-866) ತೆಲ್ಲೂರು ಎಂಬಲ್ಲಿ ಪಾಂಡ್ಯರ ಮೇಲೆ ಸ್ಪಷ್ಟವಾದ ವಿಜಯವನ್ನು ಗಳಿಸಿದನು. ಅಪರಾಜಿತ ವಿಂಬುವವನು ಪಲ್ಲವ ವಂಶದ ಕೊನೆಯ ಅರಸ. ಇವನು ಕ್ರಿ.ಶ. 879ರಿಂದ 897ರವರೆಗೆ ರಾಜ್ಯವಾಳಿದನು. ಇವನು ಕುಂಭಕೋಣದ ಬಳಿ ಪಾಂಡ್ಯರನ್ನು ಸೋಲಿಸಿದನು. ಆದರೆ ಅದಕ್ಕೆ ಪ್ರತೀಕಾರವೋ ಎಂಬಂತೆ ಚೋಳರ ಅರಸನಾದ ಒಂದನೆ ಆದಿತ್ಯನಿಂದ ಅವನು ಸದೆಬಡಿಯಲ್ಪಟ್ಟನು. ಇದರಿಂದಾಗಿ ಪಲ್ಲವರು ತೊಂಡೈನಾಡಿನ ಮೇಲಿನ ತಮ್ಮ ಅಧಿಪತ್ಯವನ್ನು ಕಳೆದುಕೊಂಡರು. ತದನಂತರ ಸ್ವಲ್ಪ ಕಾಲದವರೆಗೆ ಅವರು ಸ್ಥಳೀಯ ಮುಖಂಡರಾಗಿ ಮಾತ್ರ ಉಳಿದಿದ್ದರು.

### ಪಲ್ಲವರ ಕಾಲದ ಸಂಸ್ಕೃತಿ

ಪಲ್ಲವರು ವೈದಿಕ ಧರ್ಮಾನುಯಾಯಿಗಳಾಗಿದ್ದರು. ಇವರು ಸಂಸ್ಕೃತ ಸಾಹಿತ್ಯಕ್ಕೆ ವಿಶೇಷ ಪ್ರೋತ್ಸಾಹ ಕೊಟ್ಟಿದ್ದರು. ರಾಜಧಾನಿ ಕಂಚಿಯು ದಕ್ಷಿಣ ಭಾರತದಲ್ಲಿ ಒಂದು ಪ್ರಸಿದ್ಧ ಘಟಿಕಸ್ಥಾನವಾಗಿದ್ದು ಅನೇಕ ಪ್ರಖ್ಯಾತ ವಿದ್ವಾಂಸರನ್ನು ಬೆಳಕಿಗೆ ತಂದಿತ್ತು. ನಳಂದ ವಿಶ್ವವಿದ್ಯಾನಿಲಯದ ಪ್ರಸಿದ್ಧ ಆಚಾರ್ಯರಲ್ಲೊಬ್ಬನಾಗಿದ್ದ ಧರ್ಮಪಾಲನು ಕಂಚಿಯವನೆಂಬುದಾಗಿ ಹ್ಯೂಯನ್‌ತ್ಸಾಂಗ್ ಹೇಳುತ್ತಾನೆ. ದಕ್ಷಿಣ ಭಾರತದ ಸಂಸ್ಕೃತ ಕವಿಯಾದ ಭಾರವಿಯು ಪಲ್ಲವರ ಆಸ್ಥಾನದಲ್ಲಿದ್ದನೆಂದು ಕೆಲವು ವಿದ್ವಾಂಸರು ಅಭಿಪ್ರಾಯಪಟ್ಟಿರುವರು. ಈತನು 'ಕಿರಾತಾರ್ಜುನೀಯಂ' ಎಂಬ ಸುಪ್ರಸಿದ್ಧ ಕಾವ್ಯವನ್ನು ಬರೆದಿರುವನು. ಈ ಕೃತಿಯು ಹದಿನೆಂಟು ಸರ್ಗಗಳಿಂದ ಕೂಡಿದ್ದು ಅರ್ಜುನನು ಶಿವನಿಂದ ಪಾಶುಪತಾಸ್ತ್ರವನ್ನು ಪಡೆದ ಕತೆಯನ್ನು ವರ್ಣಿಸುತ್ತದೆ. ಪಲ್ಲವ ಆರಸರಲ್ಲಿ ಅತ್ಯಂತ ಸುಶಿಕ್ಷಿತ ಆರಸನಾಗಿದ್ದ ಒಂದನೇ ಮಹೇಂದ್ರವರ್ಮನು 'ಮತ್ತವಿಲಾಸ ಪ್ರಹಸನ' ಮತ್ತು 'ಭಾಗವದಜ್ಜುಕ' ಎಂಬ ಎರಡು ಪ್ರಹಸನಗಳ ರಚನಕಾರನಾಗಿದ್ದನು. ಈ ಎರಡು ಪ್ರಹಸನಗಳು ಆ ಕಾಲದ ಸಮಾಜದಲ್ಲಿನ ಕೆಲವು ಲೋಪದೋಷಗಳನ್ನು ಮತ್ತು ಕುಂದುಕೊರತೆಗಳನ್ನು ಚಿತ್ರಿಸುತ್ತವೆ. ಪ್ರಖ್ಯಾತದಂಡಿನ್ ಕವಿಯು ಒಂದನೇ ನರಸಿಂಹವರ್ಮನ ಸಮಕಾಲೀನನಾಗಿದ್ದನು. ಇವನು 'ಅವಂತಿ ಸುಂದರ ಕಥಾ' 'ದಶಕುಮಾರ ಚರಿತ' ಮತ್ತು ಸಾಹಿತ್ಯ ಟೀಕೆಯ ಉದ್ಗ್ರಂಥವಾದ 'ಕಾವ್ಯಾದರ್ಶ'ವನ್ನು ಬರೆದಿದ್ದಾನೆ.

ಕ್ರಿ.ಶ. ಆರನೇ ಶತಮಾನದಿಂದ ಒಂಬತ್ತನೆಯ ಶತಮಾನದವರೆಗೆ ತಮಿಳು ಸಾಹಿತ್ಯವು ಶೈವ ನಾಯನಾರ್ ಮತ್ತು ವೈಷ್ಣವ ಆಳ್ವಾರ್‌ಗಳ ಧಾರ್ಮಿಕ ಸಾಹಿತ್ಯ ಕೃತಿಗಳ ರಚನೆಯಿಂದ ಕೂಡಿದ್ದಿತು. ಸುಪ್ರಸಿದ್ಧ ಶೈವ ಕೀರ್ತನಕಾರರಾಗಿದ್ದ ತಿರುಜ್ಞಾನ ಸಂಬಂಧರ್, ತಿರುನಾವಕ್ಕರಸರ್ (ಅಪ್ಪಾರ್) ಮತ್ತು ಸುಂದರಮೂರ್ತಿ (ಸುಂದರರ್) ಹಾಗೂ ಮಾಣಿಕ್ಯ ವಾಚಕರ್ ಈ ಕಾಲಕ್ಕೆ ಸೇರಿದ್ದರು. ಇವರುಗಳಲ್ಲದೆ 'ತಿರುಮಾಳಿ ಗೈತ್ತೇವಾರ್' 'ಪಟ್ಟಿನತ್ತಾರ್' 'ಕಾರೈಕ್ಕಲ್ ಅಮ್ಮಯಾರ್' ಮತ್ತು 'ಕಡವರ್‌ಕೋನ್ ಎಂಬ ಶೈವ ಕವಿಗಳು ನಾಯನಾರ್‌ಗಳಂತೆಯೆ ಭಕ್ತಿಪ್ರದ ಸಾಹಿತ್ಯವನ್ನು ರಚಿಸಿ ಶೈವಧರ್ಮವನ್ನು ಪ್ರತಿಪಾದಿಸಿದರು. ಇವರು ತಮ್ಮ ಕೀರ್ತನೆಗಳನ್ನು ಸರಳವಾದ ನೇರವಾದ ಮತ್ತು ಜನಮನ ರಂಜಕವಾದ ಭಾಷೆಯಲ್ಲಿ ರಚಿಸಿದ್ದಾರೆ. ಮಮುಲರ್ ಎಂಬವರು ಶೈವ ರಹಸ್ಯೋಪದೇಶಗಳ ಸಂಹಿತೆಯಾದ 'ತಿರುಮಂದಿರಮ್' ಎಂಬ ಮೂರು ಸಾವಿರ ಕೀರ್ತನೆಗಳನ್ನೊಳಗೊಂಡ ಕೃತಿಯನ್ನು ರಚಿಸಿದ್ದರು.

ನಾಯನಾರ್‌ರಂತೆಯೆ ವೈಷ್ಣವ ಆಳ್ವಾರರೂ ಸಹ ಭಕ್ತಿಪ್ರಧಾನವಾದ ಸಾಹಿತ್ಯವನ್ನು ನಿರ್ಮಿಸಿದರು. ಈ ಸಾಹಿತ್ಯದಲ್ಲಿ ಮುಖ್ಯವಾದ ಭಾಗವೆಂದರೆ ಆತ್ಮಜಾಗೃತಿಯನ್ನುಂಟುಮಾಡುವ ನಾಲ್ಕು ಸಾವಿರ ಪವಿತ್ರ ಕೀರ್ತನೆಗಳಿಂದ ಕೂಡಿರುವ 'ನಾಲಾಯಿರ ಪ್ರಬಂಧಂ' ಹೆಚ್ಚು ಪ್ರಸಿದ್ಧಿಯಾದುದು. ಹನ್ನೆರಡು ಆಳ್ವಾರರ ಪ್ರಬಂಧಗಳಲ್ಲಿ 'ತಿರುಮಂಗೈ ಆಳ್ವಾರರ' ಪ್ರಬಂಧಗಳು ತಮ್ಮ ಶಬ್ದ ಸಂಪತ್ತಿಗೂ, ಕಾವ್ಯ ವಾಕ್ಸರಣಿಗೂ ಹೆಸರುವಾಸಿಯಾಗಿವೆ. ಅಂತೆಯೆ ನಮ್ಮಾಳ್ವಾರ್, ರಚಿಸಿರುವ ಪ್ರಬಂಧಗಳು ವೇದಾಂತ ಭಾವನೆಗಳ ಅಂತರಾಳಕ್ಕೆ ಪ್ರಸಿದ್ಧಿಯಾಗಿವೆ. ಪೆರಿಯಾಳ್ವಾರ್

ಮತ್ತು ಅವರ ಪೋಷಿತ ಕುಮಾರಿಯಾಗಿದ್ದ ಆಂಡಾಳ್ ಅವರು ಉಚ್ಚಯೋಗ್ಯತೆಯನ್ನುಳ್ಳ ಕೀರ್ತನೆಗಳನ್ನು ರಚಿಸಿದ ಸಂತರ ಗುಂಪಿಗೆ ಸೇರಿದವರು. ಒಂದನೆ ಮಹೇಂದ್ರವರ್ಮನ ಸಮಕಾಲೀನರಾಗಿದ್ದ ತಿರುಮಲಿಶೈ ಆಳ್ವಾರ್ ಎಂಬವರು 'ಸನ್‌ಮುಖತ್ತಿರು ವಂದಡಿ' ಮತ್ತು 'ತಿರುಚ್ಚಂದವಿರುತ್ತನ್' ಎಂಬ ಎರಡು ಗ್ರಂಥಗಳನ್ನು ರಚಿಸಿದ್ದರು. ಇವರು ಈ ಎರಡು ಕೃತಿಗಳಲ್ಲಿ ಜೈನಮತ ಮತ್ತು ಬೌದ್ಧಮತಗಳನ್ನು ಖಂಡಿಸಿ ವೈಷ್ಣವ ಮತವನ್ನು ಪ್ರತಿಪಾದಿಸಿದರು. ಮೂರನೆಯ ಪಲ್ಲವ ನಂದಿವರ್ಮನ್ ಆಸ್ಥಾನದಲ್ಲಿದ್ದ ಪೆರುಂದೇವನಾರ್ ಎಂಬ ಕವಿಯು ಮಹಾಭಾರತವನ್ನು ತಮಿಳು ಭಾಷೆಗೆ ಭಾಷಾಂತರಿಸಿದ್ದನು. ಒಟ್ಟಿನಲ್ಲಿ ಹೇಳುವುದಾದರೆ ಈ ಶೈವ ಮತ್ತು ವೈಷ್ಣವ ಸಂತರುಕೀರ್ತನಾರೂಪದ ಗ್ರಂಥಗಳ ರಚನೆಯಿಂದ ಶೈವ ಮತ್ತು ವೈಷ್ಣವ ಮತಗಳನ್ನು ಪುನಶ್ಚೇತನಗೊಳಿಸಿದ್ದಲ್ಲದೆ ತಮಿಳುನಾಡಿನಲ್ಲಿ ಬೌದ್ಧ ಮತ್ತು ಜೈನಮತಗಳನ್ನು ಬಲಹೀನಗೊಳಿಸುವುದರಲ್ಲಿ ಬಹು ಮುಖ್ಯ ಪಾತ್ರವಹಿಸಿದ್ದರು.

**ಕಲೆ**

ಪಲ್ಲವರು ವಾಸ್ತುಶಿಲ್ಪ ಮತ್ತು ಶಿಲ್ಪಕಲೆಗೆ ಅಮೋಘವಾದ ಕೊಡಿಗೆಗಳನ್ನಿತ್ತಿದ್ದಾರೆ. ದ್ರಾವಿಡ ಶೈಲಿಯೆಂದು ಪ್ರಸಿದ್ಧವಾಗಿರುವ ದಕ್ಷಿಣ ಭಾರತದ ಕಲಾಶೈಲಿಯನ್ನು ಪಲ್ಲವರು ಸ್ಥಾಪಿಸಿ ಬೆಳಸಿದರು. ಪಲ್ಲವರ ಕಾಲದ ದೇವಾಲಯಗಳ ನಿರ್ಮಾಣವನ್ನು ಅವುಗಳ ವಿನ್ಯಾಸ ಮತ್ತು ವಿಕಾಸಕ್ಕನುಗುಣವಾಗಿ ಎರಡು ಭಾಗಗಳಾಗಿ ವಿಂಗಡಿಸಲಾಗಿದೆ. ಕ್ರಿ.ಶ. ಏಳನೇ ಶತಮಾನದಲ್ಲಿ ನಿರ್ಮಿಸಲ್ಪಟ್ಟ ದೇವಾಲಯಗಳು ಮೊದಲನೆಯ ವರ್ಗಕ್ಕೂ ಏಳು ಮತ್ತು ಒಂಬತ್ತನೇ ಶತಮಾನದ ಅವಧಿಯಲ್ಲಿ ಕಟ್ಟಲ್ಪಟ್ಟ ದೇವಾಲಯಗಳು ಎರಡನೆ ವರ್ಗಕ್ಕೂ ಸೇರಿದವುಗಳಾಗಿವೆ. ಮೊದಲನೆಯ ವರ್ಗದಲ್ಲಿ ಮುಖ್ಯವಾಗಿ ಗುಹಾಂತರ್ದೇವಾಲಯಗಳನ್ನೂ ಎರಡನೆಯ ವಿಭಾಗದಲ್ಲಿ ದೇವಾಲಯಗಳನ್ನು ಕಾಣುತ್ತೇವೆ. ಒಂದನೇ ಮಹೇಂದ್ರವರ್ಮನ್ ಮಹಾಬಲಿಪುರಂನಲ್ಲಿ ಕೊರೆಸಿದ ಗುಹಾಂತರ್ದೇವಾಲಯಗಳು ಮತ್ತು ಒಂದನೇ ನರಸಿಂಹವರ್ಮನು ಕೆತ್ತಿಸಿದ ಮಂಟಪಗಳೂ ಹಾಗೂ ರಥಗಳು ಕ್ರಿ.ಶ. ಏಳನೇ ಶತಮಾನದಲ್ಲಿ ನಿರ್ಮಾಣಗೊಂಡವು. ಮಹೇಂದ್ರ ವರ್ಮನ್ ಕಾಲದ ಗುಹಾಂತರ್ದೇವಾಲಯಗಳು ಮುಂಭಾಗದಲ್ಲಿ ಕಂಭಗಳಿಂದ ಕೂಡಿದ ಸಭಾಂಗಣಗಳನ್ನೂ ಮತ್ತು ಅದರ ಹಿಂದಕ್ಕೆ ಗರ್ಭಗೃಹವನ್ನೂ ಹೊಂದಿವೆ. ಈ ದೇವಾಲಯಗಳ, ಕಂಭಗಳ ಮತ್ತು ಗೋಡೆಗಳ ಮೇಲೆ ದೇವಾನುದೇವತೆಗಳ ವಿಗ್ರಹಗಳನ್ನು ಕೆತ್ತಿದ್ದಾರೆ. ಇವುಗಳಲ್ಲಿ ವಿಷ್ಣುವಿನ ವಹಾರ ಮತ್ತು ವಾಮನ ಅವತಾರಗಳು ಸೂರ್ಯ, ದುರ್ಗಿ ಗಜಲಕ್ಷ್ಮಿ ಮೊದಲಾದ ವಿಗ್ರಹಗಳು ಭವ್ಯವಾಗಿವೆ. ಅಲ್ಲದೆ ಇಲ್ಲಿ ಸಿಂಹ ವಿಷ್ಣು ಹಾಗೂ ಒಂದನೇ ಮಹೇಂದ್ರವರ್ಮ ಮತ್ತು ಅವರ ರಾಣಿಯರ ಪ್ರತಿಮೆಗಳನ್ನು ಸುಂದರವಾಗಿ ಕಡೆದು ನಿಲ್ಲಿಸಿದ್ದಾರೆ. ಅನಂತಶಯನ, ಮಹಿಷಾಸುರಮರ್ದಿನಿ ಮತ್ತು ಶ್ರೀಕೃಷ್ಣನು ಗೋವರ್ಧನಗಿರಿಯನ್ನು ಎತ್ತಿ ಹಿಡಿದಿರುವ ಶಿಲ್ಪಕಲಾ ಕೃತಿಗಳು ಅತ್ಯಂತ ರಮಣೀಯವಾಗಿವೆ.

ಮಹಾಬಲಿಪುರಂ ಪಲ್ಲವರ ಉಪರಾಜಧಾನಿಯೂ ಆಗಿದ್ದಿತು. ಇದು ಮದ್ರಾಸಿನಿಂದ ಪೂರ್ವಕ್ಕೆ ಮೂವತ್ತೆರಡು ಮೈಲಿ ದೂರದಲ್ಲಿದ್ದು ಅಲ್ಲಿರುವ ಕಲ್ಲಿನ

ರಥಗಳಿಂದ ವಿಶ್ವವಿಖ್ಯಾತವಾಗಿದೆ. ಬಂಡೆಗಳನ್ನು ಕೊರೆದು ದೇವಾಲಯಗಳನ್ನು ನಿರ್ಮಿಸುವ ಕಾರ್ಯವನ್ನು ಮಹೇಂದ್ರವರ್ಮನು ಆರಂಭಿಸಿದ್ದನಾದರೂ ಅದನ್ನು ಒಂದನೆಯ ಪಲ್ಲವ ನರಸಿಂಹವರ್ಮನು ಇನ್ನೂ ಹೆಚ್ಚಾಗಿ ಅಭಿವೃದ್ಧಿಗೊಳಿಸಿದನು. ನರಸಿಂಹ ವರ್ಮನು ನಗರವನ್ನು ಕಲ್ಲು ಕೊರೆತದ ಮಂಟಪಗಳಿಂದಲೂ, ರಥಗಳಿಂದಲೂ ಮತ್ತು ಶಿಲ್ಪಗಳಿಂದಲೂ ತುಂಬಿದ್ದನು. ಇಲ್ಲಿರುವ ಪಂಚಪಾಂಡವ ರಥಗಳು ಮತ್ತು ಗಣೇಶರಥವು ಮನಮೋಹಕವಾಗಿವೆ. ಪ್ರತಿಯೊಂದು ರಥವು ಅಖಂಡ ಏಕಶಿಲೆಯಲ್ಲಿ ಕೊರೆಯಲ್ಪಟ್ಟಿವೆ ಮತ್ತು ಇವು ಪೂರ್ಣ ದೇವಾಲಯದ ವಿನ್ಯಾಸ ಹೊಂದಿದ್ದು ಪಲ್ಲವರ ಶಿಲ್ಪ ಚಾತುರ್ಯದ ಕೌಶಲದ ಪ್ರತೀಕಗಳಾಗಿವೆ. ಈ ರಥಗಳಲ್ಲಿ ಧರ್ಮರಾಯನ ರಥವು ಅತ್ಯಂತ ದೊಡ್ಡದೂ ದ್ರೌಪದಿಯ ರಥವು ಅತ್ಯಂತ ಚಿಕ್ಕದೂ ಆಗಿವೆ. ಭೀಮನ ರಥವು ಮೂರು ಅಂತಸ್ತುಗಳ ವಿನ್ಯಾಸದಿಂದ ಕೂಡಿದೆ. ಈ ರಥಗಳಲ್ಲಿ ಕೆತ್ತಿರುವ ಆಕೃತಿಗಳು ಬಹು ಸುಂದರವಾಗಿವೆ.

ಮಹಾಬಲಿಪುರಂನಲ್ಲಿರುವ ಮತ್ತೊಂದು ಅಸದೃಶವಾದ ಶಿಲ್ಪವೆಂದರೆ ಭಗೀರಥನು ಪವಿತ್ರ ಗಂಗೆಯನ್ನು ಭೂಮಿಗೆ ಕರೆದುಕೊಂಡು ಬಂದ ಚಿತ್ರ. ಇದನ್ನು ಇಲ್ಲಿನ ಗುಡ್ಡದ ಬಂಡೆಯೊಂದರಲ್ಲಿ ಕೆತ್ತಲಾಗಿದೆ. ಈ ಬಂಡೆಯು 90 ಅಡಿ ಉದ್ದ 30 ಅಡಿ ಎತ್ತರವಾಗಿದೆ. ಇದರಲ್ಲಿನ ಕೆತ್ತನೆ ಕೆಲಸಗಳು ಅತ್ಯಂತ ಅನನ್ಯವಾಗಿ ಮತ್ತು ನೈಜವಾಗಿಯೂ ಇವೆ. ಬಹಳ ಕಾಲದವರೆಗೆ 'ಅರ್ಜುನನ ತಪಸ್ಸು' ಎಂದು ಈ ಶಿಲ್ಪ ಚಿತ್ರವನ್ನು ವ್ಯಾಖ್ಯಾನಿಸಲಾಗಿತ್ತು. ಆದರೆ ಇತ್ತೀಚೆಗೆ ಕಲಾವಿಮರ್ಶಕರು ವಾಸ್ತವವಾಗಿ ದೇವಗಂಗೆಯನ್ನು ಭೂಮಿಗೆ ಕರೆತರಲು ಶಿವನನ್ನು ಕುರಿತು ಭಗೀರಥನು ಮಾಡಿದ ತಪಸ್ಸಿನ ಚಿತ್ರವೆಂದು ಸ್ಪಷ್ಟಪಡಿಸಿದ್ದಾರೆ. ಗಂಗೆಯು ಭೂಮಿಗೆ ಬಂದ ಸಮಯದಲ್ಲಿ ತಮ್ಮ ಸಂತೋಷವನ್ನು ವ್ಯಕ್ತಪಡಿಸುತ್ತಿರುವ ಪ್ರಾಣಿಗಳ ಸಮೂಹವನ್ನು ಶಿಲ್ಪಿಗಳು ಸಹಜವಾಗಿ ಚಿತ್ರಿಸಿದ್ದಾರೆ. ಒಟ್ಟಿನಲ್ಲಿ ಈ ಶಿಲ್ಪ ನಿರ್ಮಾಣ ಕಾರ್ಯದಲ್ಲಿ ಒಂದೊಂದು ವಿಚಾರವನ್ನು ಗಮನದಲ್ಲಿಟ್ಟುಕೊಂಡು ಶ್ರದ್ಧೆ ಮತ್ತು ಆಸಕ್ತಿಗಳಿಂದ ಸಹಜತೆ ಅಥವ ನೈಜತೆಯನ್ನು ಸ್ಪಷ್ಟವಾಗಿ ಮತ್ತು ಸ್ವಚ್ಛವಾಗಿ ರೂಪುಗೊಳಿಸಲಾಗಿದೆ.

ಪಲ್ಲವರ ಕಾಲದಲ್ಲಿ ಕಟ್ಟಲಾದ ದೇವಾಲಯಗಳನ್ನು ತಮ್ಮ ಶೈಲಿಗೆ ಅನುಗುಣ ಎರಡು ಹಂತಗಳನ್ನಾಗಿ ವಿಂಗಡಿಸಲಾಗಿದೆ. ಒಂದು, ರಾಜಸಿಂಹ ಹೆಸರಿನಲ್ಲಿ ಕಟ್ಟಲ್ಪಟ್ಟವು. ಎರಡು, ಅಪರಾಜಿತನ ಹೆಸರಿನಲ್ಲಿ ಕಟ್ಟಲ್ಪಟ್ಟವು. ರಾಜಸಿಂಹನ ಶೈಲಿಗೆ ಮಹಾಬಲಿಪುರದ ತೀರಪ್ರದೇಶದ ದೇವಾಲಯ (Shore Temple) ವೂ ಕಂಚಿಯ ಕೈಲಾಸನಾಥ ದೇವಾಲಯ ಮತ್ತು ವೈಕುಂಠ ಪೆರುಮಾಳ್ ದೇವಾಲಯವು ಮುಖ್ಯ ನಿದರ್ಶನಗಳಾಗಿವೆ. ಅಪರಾಜಿತನ ಶೈಲಿಗೆ ಕಂಚಿಯ ಮುಕ್ತೇಶ್ವರ ಮತ್ತು ಮಾತಂಗೇಶ್ವರ ದೇವಾಲಯಗಳೂ ಹಾಗೂ ತಿರುತ್ತಣಯಲ್ಲಿರುವ ವೀರನಾಥೇಶ್ವರ ದೇವಾಲಯವು ಗುಡಿಮಲ್ಲಮ್ ನಲ್ಲಿರುವ ಪರಮೇಶ್ವರ ದೇವಾಲಯವೂ ನಿದರ್ಶನಗಳಾಗಿವೆ. ಅಪರಾಜಿತ ಶೈಲಿಯ ದೇವಾಲಯಗಳು ಗಾತ್ರದಲ್ಲಿ ಚಿಕ್ಕವುಗಳಾಗಿವೆ ಮತ್ತು ಅವು ಕಳೆಗುಂದುತ್ತ ಬಂದ ಪಲ್ಲವರ ಸ್ಥಿತಿಗತಿಗಳನ್ನು ಸಾಕ್ಷಾತ್ಕಾಗಿ ಸೂಚಿಸುವಂತಿವೆ. ಆದರೂ ಪಲ್ಲವರು ಕಲೆಯ ಅಭಿವೃದ್ಧಿಗೆ ನೀಡಿದ ಪ್ರೋತ್ಸಾಹವೆಂದರೆ ಅವರು ದಕ್ಷಿಣ ಭಾರತದಲ್ಲಿ ಪ್ರಾರಂಭಿಸಿದ ಶಿಲಾ ಶಿಲ್ಪಗಳು. ಅವರು ಮೊದಮೊದಲು ದಖನ್ನಿನಲ್ಲಿ ಬಂಡೆಗಳಲ್ಲಿ ಕೊರೆದ ಮಾದರಿಗಳ ಲಕ್ಷಣಗಳನ್ನು ಅಳವಡಿಸಿಕೊಂಡರೂ,

ಅನಂತರದಲ್ಲಿ ಅವರು ಸಮಗ್ರ ದಕ್ಷಿಣ ಭಾರತದಲ್ಲಿ ಮಾತ್ರವೇ ಅಲ್ಲದೆ ಭಾರತದ ದೂರಪ್ರಾಚ್ಯ ವಸಾಹತುಗಳಲ್ಲಿಯೂ ದೇವಾಲಯಗಳ ನಿರ್ಮಾಣದ ಮಾದರಿಗಳಿಗೆ ಮೇಲ್ಪಂಕ್ತಿ ಹಾಕಿದರು. ಒಟ್ಟಿನಲ್ಲಿ ಪಲ್ಲವರ ಕಾಲದಲ್ಲಿ ಆರಂಭವಾದ ದ್ರಾವಿಡ ಶೈಲಿಯು ಚೋಳರ ಕಾಲದಲ್ಲಿ ಅತ್ಯಂತ ಉತ್ಕೃಷ್ಟವಾಗಿ ವಿಕಾಸವಾದುದಲ್ಲದೆ ಈ ಶೈಲಿಯಲ್ಲಿ ದೂರಪ್ರಾಚ್ಯ ರಾಜ್ಯಗಳಲ್ಲೂ ಭವ್ಯವಾದ ಅನೇಕ ದೇವಾಲಯಗಳು ನಿರ್ಮಾಣವಾದವು. ಪಲ್ಲವರು ಚಿತ್ರಕಲೆಗೂ ಪ್ರೋತ್ಸಾಹ ನೀಡಿದ್ದರು. ಇವರ ಕಾಲದ ಚಿತ್ರಕಲೆಯನ್ನು ಕಂಚಿಯ ಕೈಲಾಸನಾಥ ದೇವಾಲಯದಲ್ಲೂ ಮತ್ತು ಸಿತ್ತನವಾಸಲ್‌ನಲ್ಲಿರುವ ಜೈನ ಮಂದಿರದಲ್ಲೂ ನೋಡಬಹುದಾಗಿದೆ. ಸಿತ್ತನವಾಸಲ್‌ನಲ್ಲಿರುವ ಜೈನ ಗುಹಾಶೈಲ ಚಿತ್ರಗಳು ನೃತ್ಯಕಲೆಯನ್ನು ಉದಹರಿಸಿರುವುದು ಮಾತ್ರವಲ್ಲದೆ ಒಂದನೆಯ ಮಹೇಂದ್ರವರ್ಮನ ಮತ್ತು ಅವನ ಪತ್ನಿಯ ಚಿತ್ರಗಳನ್ನು ಒಳಗೊಂಡಿವೆ. ಹೀಗೆ ಪಲ್ಲವರು ತಮ್ಮ ಉತ್ಕೃಷ್ಟ ಕಾಲದಲ್ಲಿ ಭಾರತದ ಸಂಸ್ಕೃತಿಗೆ ಅಮೋಘ ಕೊಡುಗೆಗಳನ್ನು ಸಲ್ಲಿಸಿದ್ದಾರೆ.

**ಚೋಳರು**

ಪೂರ್ವ ಮಧ್ಯಕಾಲೀನ ಯುಗದ ಆರಂಭದ ಕಾಲದಲ್ಲಿನ ದಖನ್ನಿನ ಇತಿಹಾಸವು ಬಹಳಮಟ್ಟಿಗೆ ಎರಡು ದೊಡ್ಡ ರಾಜ್ಯಗಳಾಗಿದ್ದ ಕಲ್ಯಾಣಿಯ ಚಾಳುಕ್ಯರ ಮತ್ತು ಚೋಳರ ಇತಿಹಾಸವೇ ಆಗಿದ್ದಿತು. ಕ್ರಿ.ಶ. ಹತ್ತನೆಯ ಶತಮಾನದ ಅಂತ್ಯದ ವೇಳೆಗೆ ರಾಷ್ಟ್ರಕೂಟರ ಅಧಿಕಾರವು ಕ್ಷೀಣಿಸಿ ಅವರ ಕೊನೆಯ ಅರಸನಾದ ಎರಡನೇ ಕರ್ಕ ರಾಜನನ್ನು ಕ್ರಿ.ಶ. 973-974ರಲ್ಲಿ ಬಾದಾಮಿ ಚಾಳುಕ್ಯರ ವಂಶೀಯನಾಗಿದ್ದ ಎರಡನೇ ತೈಲಪನು ಸೋಲಿಸಿ ಕಲ್ಯಾಣಿ ಚಾಳುಕ್ಯರ ಆಳ್ವಿಕೆಯನ್ನು ಆರಂಭಿಸಿದನು. ಇದೇ ಕಾಲದಲ್ಲಿ ಚೋಳರು ಅತಿ ಪ್ರಾಚೀನರಾಗಿದ್ದರೂ ಬಾದಾಮಿ ಚಾಳುಕ್ಯರ, ಪಲ್ಲವರ ಮತ್ತು ರಾಷ್ಟ್ರಕೂಟರ ಹೊಡೆತಗಳ ಪರಿಣಾಮವಾಗಿ ರಾಜಕೀಯದಿಂದ ನಿರ್ಗಮಿಸಿದ್ದು ಸುಮಾರು ಕ್ರಿ.ಶ. 9ನೇ ಶತಮಾನದ ಉತ್ತರಾರ್ಧದಲ್ಲಿ ಮತ್ತೊಮ್ಮೆ ಪ್ರಾಬಲ್ಯಕ್ಕೆ ಬಂದರು. ಇವರು ಸುಮಾರು ಎರಡೂವರೆ ಶತಮಾನಗಳಿಗೂ ಹೆಚ್ಚು ಕಾಲ ವೈಭವದಿಂದ ರಾಜ್ಯವಾಳಿ ಭಾರತದ ಸಂಸ್ಕೃತಿಗೆ ಮಹತ್ವಪೂರ್ಣ ಕೊಡುಗೆಗಳನ್ನು ಸಲ್ಲಿಸಿದರು.

**ರಾಜಕೀಯ ಇತಿಹಾಸ**

ಚೋಳರ ಅಧಿಕಾರವನ್ನು ಪುನರ್ ಸ್ಥಾಪಿಸಿದವನು ವಿಜಯಾಲಯ. ಇವನು ಮೊದಲಿಗೆ ಪಲ್ಲವರ ಸಾಮಂತನಾಗಿದ್ದು ಕ್ರಿ.ಶ. 850ರಲ್ಲಿ ತಂಜಾವೂರನ್ನು ವಶಪಡಿಸಿಕೊಂಡು ಚೋಳರ ಸ್ವತಂತ್ರ ಆಳ್ವಿಕೆಯನ್ನು ಆರಂಭಿಸಿದನು. ಇವನ ತರುವಾಯ ಅಧಿಕಾರಕ್ಕೆ ಬಂದ ಒಂದನೇ ಆದಿತ್ಯ (871-907)ನು ಪಲ್ಲವರ ಕೊನೆಯ ಅರಸನಾದ ಅಪರಾಜಿತನನ್ನು ಸೋಲಿಸಿ ಪಲ್ಲವ ರಾಜ್ಯವನ್ನು ಸಂಪೂರ್ಣವಾಗಿ ವಶಪಡಿಸಿಕೊಂಡನು. ಅನಂತರ ಪಾಂಡ್ಯರ ರಾಜನನ್ನು ಶ್ರೀಪುರಂಬಿಯಂ ಎಂಬಲ್ಲಿ ಸೋಲಿಸಿ ಅವರ ರಾಜ್ಯವನ್ನು ತನ್ನ ರಾಜ್ಯಕ್ಕೆ ಸೇರಿಸಿಕೊಂಡನು. ಆದಿತ್ಯನು ಕ್ರಿ.ಶ. 907ರಲ್ಲಿ ಕಾಲವಾದನು. ಈ ವೇಳೆಗಾಗಲೇ ಚೋಳರ ರಾಜ್ಯವು ಉತ್ತರದಲ್ಲಿ ಕಾಳಹಸ್ತಿಯಿಂದ ದಕ್ಷಿಣದಲ್ಲಿ ಪುದುಕೋಟೆಯವರೆಗೆ ವಿಸ್ತರಿಸಿದ್ದಿತು.

ಆದಿತ್ಯನು ಕಾಲವಾದ ಮೇಲೆ ಅವನ ಮಗನಾದ ಒಂದನೇ ಪರಾಂತಕನು ಅಧಿಕಾರಕ್ಕೆ ಬಂದನು. ಇವನು ಕ್ರಿ.ಶ. 907ರಿಂದ 955ರವರೆಗೆ ರಾಜ್ಯವಾಳಿದನು. ಇವನು ಅಧಿಕಾರರೂಢನಾದ ಕೆಲವು ದಿವಸಗಳಲ್ಲಿಯೆ ದಂಡಯಾತ್ರೆ ಕೈಗೊಂಡನು. ಮಧುರೆಯ ಮೇಲೆ ದಂಡೆತ್ತಿಹೋಗಿ ಪಾಂಡ್ಯರ ದೊರೆ ಮತ್ತು ಅವನ ಮಿತ್ರನಾದ ಸಿಂಹಳದ ರಾಜನನ್ನು ವೆಲ್ಲೂರು ಎಂಬಲ್ಲಿ ಸೋಲಿಸಿ ತನ್ನ ರಾಜ್ಯವನ್ನು ಉತ್ತರ ಆರ್ಕಾಟಿನವರೆಗೂ ವಿಸ್ತರಿಸಿದನು. ಆದರೆ ಇವನ ರಾಜ್ಯ ವಿಸ್ತರಣೆಗೆ ರಾಷ್ಟ್ರಕೂಟರ ಪ್ರಬಲ ವಿರೋಧವು ಇದ್ದಿತು. ರಾಷ್ಟ್ರಕೂಟರ ದೊರೆಯಾಗಿದ್ದ ಮೂರನೆ ಕೃಷ್ಣನು (939-966) ಪರಾಕ್ರಮಶಾಲಿಯೂ ಮತ್ತು ಮಹತ್ವಾಕಾಂಕ್ಷಿಯೂ ಆಗಿದ್ದನು. ಇವನು ಕ್ರಿ.ಶ. 949ರಲ್ಲಿ ಪರಾಂತಕನ ಮೇಲೆ ದಂಡೆತ್ತಿ ಹೋಗಿ ತಕ್ಕೋಲಂ ಯುದ್ಧದಲ್ಲಿ ಅವನನ್ನು ಸೋಲಿಸಿದ್ದಲ್ಲದೆ ಅವನ ಮಗನೂ ಮತ್ತು ಸಿಂಹಾಸನಕ್ಕೆ ಉತ್ತರಾಧಿಕಾರಿಯೂ ಆಗಲಿದ್ದ ರಾಜಾದಿತ್ಯನನ್ನು ಕೊಂದನು. ಚೋಳರ ಸಾಮ್ರಾಜ್ಯದ ಉತ್ತರ ಭಾಗವು ಕೃಷ್ಣನ ವಶವಾಯಿತು. ಚೋಳರಿಗೆ ಹೀಗೆ ಒದಗಿ ಬಂದ ವಿಪತ್ತಿನ ಅನುಕೂಲವನ್ನು ಪಡೆದುಕೊಂಡು ಪಾಂಡ್ಯರು ತಮ್ಮ ಸ್ವತಂತ್ರವನ್ನು ಘೋಷಿಸಿಕೊಂಡರು. ಈ ಮಧ್ಯೆ ಪರಾಂತಕನು ಪುತ್ರಶೋಕದಿಂದ ಕಾಲವಾದನು. ಇವನ ತರುವಾಯ ಉತ್ತಮ ಚೋಳನು ಅಧಿಕಾರ ರೂಢನಾದನು. ಆದರೆ ಇವನ ಆಳ್ವಿಕೆಯು ಪ್ರಜೆಗಳಿಗೆ ಹಿಡಿಸದೆ ಅವರು ದಂಗೆಯೆದ್ದರು. ಈ ಅರಾಜಕ ಪರಿಸ್ಥಿತಿಯು ಸುಮಾರು ಮೂವತ್ತು ವರ್ಷಗಳ ಕಾಲ ಮುಂದುವರಿದು ಒಂದನೇ ರಾಜರಾಜನು ಅದನ್ನು ಕೊನೆಗಾಣಿಸಿದನು.

**ಒಂದನೇ ರಾಜರಾಜ (ಕ್ರಿ.ಶ. 985-1014)**

ಒಂದನೇ ರಾಜರಾಜನು ಚೋಳರ ಸಾಮ್ರಾಜ್ಯದ ನಿಜವಾದ ಶಿಲ್ಪಿಯಾಗಿದ್ದನು. ಇವನ ಸಿಂಹಾಸನಾ ರೋಹಣದೊಂದಿಗೆ ದಕ್ಷಿಣ ಭಾರತದ ರಾಜಕೀಯದಲ್ಲಿ ಮಹತ್ತರ ಬದಲಾವಣೆಗಳಾದವು. ರಾಜರಾಜನು ಪಟ್ಟಾಭಿಷಿಕ್ತನಾದ ಕೆಲವೇ ದಿವಸಗಳಲ್ಲಿ ವಿಜಯ ಯಾತ್ರೆಯನ್ನು ಕೈಗೊಂಡು ಮೊದಲಿಗೆ ಪಾಂಡ್ಯರನ್ನು ಮತ್ತು ಚೇರರನ್ನು ಬಗ್ಗು ಬಡಿದನು. ಅನಂತರ ಸಿಂಹಳ ದ್ವೀಪದ ಮೇಲೆ ದಂಡೆತ್ತಿ ಹೋಗಿ ಅದನ್ನು ವಶಪಡಿಸಿಕೊಂಡನು. ಈ ವಿಜಯಗಳನಂತರ ಮೈಸೂರು ರಾಜ್ಯದ ಕೂಡಮಲೈನಾಡಿನ (ಕೊಡಗು) ಮೇಲೆ ದಂಡೆತ್ತಿ ಬಂದು, ಅಲ್ಲಿನ ರಾಜನಾದ ಐದನೇ ಮಹೇಂದ್ರನನ್ನು ಸೋಲಿಸಿ ಆ ರಾಜ್ಯದ ಉತ್ತರ ಭಾಗವನ್ನು ವಶಪಡಿಸಿಕೊಂಡನು. ಇಷ್ಟೇ ಅಲ್ಲದೆ ಕ್ರಿ.ಶ. 991ರಲ್ಲಿ ತಲಕಾಡಿನ ಗಂಗರ ಮೇಲೆ ದಂಡೆತ್ತಿ ಬಂದು ಗಂಗವಾಡಿ, ತಡಗೈವಾಡಿ ಮತ್ತು ನೊಳಂಬವಾಡಿಗಳನ್ನು ಗೆದ್ದು ವಶಪಡಿಸಿಕೊಂಡು ಅಲ್ಲಿ ಚೋಳರ ಅಧಿಕಾರವನ್ನು ಸ್ಥಾಪಿಸಿದನು. ಇದೇ ಸಮಯದಲ್ಲಿ ಪೂರ್ವ ಚಾಳುಕ್ಯರ ರಾಜ್ಯವಾದ ವೆಂಗಿರಾಜ್ಯದಲ್ಲಿ ಸಿಂಹಾಸನಕ್ಕಾಗಿ ಅಂತಃಕಲಹವು ಆರಂಭವಾಗಿದ್ದಿತು. ಇದರಿಂದಾಗಿ ಚೋಳರಿಗೂ ಚಾಳುಕ್ಯರಿಗೂ ಹೋರಾಟವು ಆರಂಭವಾಯಿತು. ವೆಂಗಿ ರಾಜ್ಯದ ವ್ಯವಹಾರದಲ್ಲಿ ರಾಜರಾಜನು ಪ್ರವೇಶಿಸಿದುದು ಈ ಯುದ್ಧಕ್ಕೆ ಕಾರಣವಾಗಿತ್ತು. ಸ್ಥಳೀಯ ಮುಖಂಡನೊಬ್ಬನಿಂದ ಅಟ್ಟಲ್ಪಟ್ಟು ಸಿಂಹಾಸನವನ್ನು ಕಳೆದುಕೊಂಡಿದ್ದ ಶಕ್ತಿವರ್ಮ ಎಂಬವನಿಗೆ ಸಿಂಹಾಸನವನ್ನು ದೊರಕಿಸಿಕೊಟ್ಟು ಅವನ ತಮ್ಮ ವಿಮಲಾದಿತ್ಯನಿಗೆ ತನ್ನ ಮಗಳು ಕುಂದವ್ವೆಯನ್ನು ಕೊಟ್ಟು ವಿವಾಹ ಮಾಡಿದನು.

ಈ ವಿವಾಹ ಸಂಬಂಧವು ಮುಂದೆ ಕುಲೋತ್ತುಂಗ ಚೋಳನ ಕಾಲದಲ್ಲಿ ಚೋಳ ಮತ್ತು ವೆಂಗಿರಾಜ ವಂಶದವರಿಬ್ಬರೂ ಒಂದುಗೂಡುವುದಕ್ಕೆ ಕಾರಣವಾಯಿತು. ವೆಂಗಿಯಲ್ಲಿ ಚೋಳರ ಪ್ರಭಾವವು ಹೆಚ್ಚಿದುದನ್ನು ಸಹಿಸದ ಚಾಳುಕ್ಯರ ದೊರೆ ಸತ್ಯಾಶ್ರಯ (997-1008) ಅಪಾರ ಸೈನ್ಯದೊಂದಿಗೆ ವೆಂಗಿಯ ಮೇಲೆ ದಂಡೆತ್ತಿ ಹೋಗಿ ವೆಂಗಿ ರಾಜ್ಯದ ಒಂದು ಭಾಗವನ್ನು ಆಕ್ರಮಿಸಿಕೊಂಡನು. ಆದರೆ ಇದರಿಂದ ಚಾಳುಕ್ಯರ ಮತ್ತು ಚೋಳರ ನಡುವಿನ ದ್ವೇಷವು ಮತ್ತಷ್ಟು ಹೆಚ್ಚಿತು. ರಾಜರಾಜನು ಕ್ರಿ.ಶ. 1008ರಲ್ಲಿ ತನ್ನ ಮಗ ರಾಜೇಂದ್ರಚೋಳನೊಂದಿಗೆ ಚಾಲುಕ್ಯರ ರಾಜ್ಯದ ಮೇಲೆ ದಂಡೆತ್ತಿಹೋಗಿ ವಿಜಯಗಳಿಸಿದನು. ಈ ಯುದ್ಧದಲ್ಲಿ ಎರಡು ಕಡೆಯವರೂ ಅಪಾರ ಸಾವುನೋವುಗಳನ್ನು ಹೊಂದಿದರು. ರಾಜರಾಜನ ಈ ವಿಜಯದ ಪರಿಣಾಮವಾಗಿ ಚೋಳರ ಸಾಮ್ರಾಜ್ಯವು ತುಂಗಭದ್ರೆಯವರೆಗೆ ವಿಸ್ತರಿಸಿತು. ರಾಜರಾಜನು ಆನಂತರ ಕಳಿಂಗ ರಾಜ್ಯವನ್ನೂ ಮಾಲ್ಡೀವ್ ದ್ವೀಪಗಳನ್ನೂ ಜಯಸಿದನು. ರಾಜರಾಜನು ತನ್ನ ಈ ಎಲ್ಲ ದಿಗ್ವಿಜಯಗಳಿಂದ ಚೋಳರ ಸಾಮ್ರಾಜ್ಯವನ್ನು ವಿಸ್ತರಿಸಿ ಆದನ್ನು ಭದ್ರವಾಗಿ ನೆಲೆಗೊಳಿಸಿದನು. ಇವನು ಸ್ಥಾಪಿಸಿದ ವಿಶಾಲ ಸಾಮ್ರಾಜ್ಯವು ಹಿಂದಿನ ಮದ್ರಾಸ್ ರಾಜ್ಯ, ಕೊಡಗು, ಮೈಸೂರಿನ ಕೆಲವು ಪ್ರದೇಶಗಳು, ಕೇರಳ ಮತ್ತು ಸಿಂಹಳ ದ್ವೀಪದ ಉತ್ತರಭಾಗವನ್ನೊಳಗೊಂಡಿತ್ತು. ಇವನು 'ಮುಮ್ಮಡಿ ಚೋಳ', 'ಚೋಳ ಮಾರ್ತಾಂಡ', 'ಜಯಗೊಂಡ', 'ಪಾಂಡ್ಯಕುಲಾಶನಿ', 'ಕೇರಳಾಂತಕ', 'ಸಿಂಹಳಾಂತಕ' ಮತ್ತು 'ತೆಲಂಗ ಕುಲಾಂತಕ' ಎಂಬ ಬಿರುದುಗಳನ್ನು ಧರಿಸಿದ್ದನು.

ರಾಜರಾಜನು ಚೋಳಸಂತತಿಯ ದೊರೆಗಳಲ್ಲಿ ಒಬ್ಬ ಸುಪ್ರಸಿದ್ಧ ದೊರೆಯಾಗಿದ್ದಾನೆ. ಮಹಾದಿಗ್ವಿಜಯಿಯೂ, ಸಾಮ್ರಾಜ್ಯ ಸ್ಥಾಪಕನೂ, ಉತ್ತಮ ಆಡಳಿತಗಾರನೂ ಪರಮತಸಹಿಷ್ಣುವೂ ಮತ್ತು ಸಾಹಿತ್ಯ ಕಲೆಗಳ ಪೋಷಕನೂ ಆಗಿದ್ದನು. ಕ್ರಿ.ಶ. 1000ದಲ್ಲಿ ಭೂಮಿಯ ಅಳತೆಯನ್ನು (Land Survey) ಮಾಡಿಸಿ ಕಂದಾಯವನ್ನು ಕ್ರಮಗೊಳಿಸಿದನು. ರಾಜರಾಜನು ಕೇಂದ್ರ ಸರ್ಕಾರವನ್ನು ಬಲಗೊಳಿಸಿ ಆಡಳಿತದಲ್ಲಿ ದಕ್ಷತೆಯನ್ನೇರ್ಪಡಿಸಿದ್ದನು. ಸ್ಥಳೀಯ ಆಡಳಿತಕ್ಕೆ ಪ್ರೋತ್ಸಾಹ ನೀಡಿದ್ದನು. ಇವನಿಗೆ 'ಶಿವಪಾದಶೇಖರ' ಎಂಬ ಮತ್ತೊಂದು ಬಿರುದೂ ಇದ್ದಿತು. ತಂಜಾವೂರಿನಲ್ಲಿ 'ರಾಜರಾಜೇಶ್ವರ' ಅಥವ 'ಬೃಹದೇಶ್ವರ' ಎಂಬ ಸುಪ್ರಸಿದ್ಧ ದೇವಾಲಯವನ್ನು ಕಟ್ಟಿಸಿದನು. ರಾಜರಾಜನು ಕ್ರಿ.ಶ. 1014ರಲ್ಲಿ ಕಾಲವಾದನು. ಅವನ ತರುವಾಯ ಅವನ ಮಗನಾದ ಒಂದನೇ ರಾಜೇಂದ್ರಚೋಳನು ಸಿಂಹಾಸನವನ್ನೇರಿದನು.

**ಒಂದನೇ ರಾಜೇಂದ್ರ** (ಕ್ರಿ.ಶ. 1014-1044)

ಒಂದನೇ ರಾಜರಾಜನ ನಂತರ ಚೋಳ ಸಾಮ್ರಾಟರಲ್ಲೇ ಅತ್ಯಂತ ಪ್ರಸಿದ್ಧನಾದ ಒಂದನೇ ರಾಜೇಂದ್ರನು ಪಟ್ಟಕ್ಕೆ ಬಂದನು. ಈತನು ಕ್ರಿ.ಶ. 1044ರವರೆಗೆ ರಾಜ್ಯವಾಳಿದನು. ಇವನು ತಂದೆಗಿಂತಲೂ ಪರಾಕ್ರಮದಲ್ಲಿ ಒಂದು ಕೈಮೇಲಾಗಿದ್ದನು ಇವನ ಕಾಲದಲ್ಲಿ ಚೋಳರ ಸಾಮ್ರಾಜ್ಯವು ತುತ್ತತುದಿಯನ್ನು ಮುಟ್ಟಿತು. ಮಹಾದಿಗ್ವಿಜಯಿಯಾಗಿದ್ದ ರಾಜೇಂದ್ರನು ಕ್ರಿ.ಶ. 1018ರಲ್ಲಿ ಪಾಂಡ್ಯ, ಚೇರ ಮತ್ತು

ಸಿಂಹಳ ರಾಜ್ಯಗಳ ಮೇಲೆ ದಂಡೆತ್ತಿ ಹೋಗಿ ಅವರನ್ನು ಸೋಲಿಸಿ ಶರಣಾಗತರನ್ನಾಗಿ ಮಾಡಿಕೊಂಡು ಕಪ್ಪಕಾಣಿಕೆಗಳನ್ನು ಕೊಡುವಂತೆ ಮಾಡಿದನು. ಈ ನಡುವೆ ಕಲ್ಯಾಣಿ ಚಾಳುಕ್ಯರ ದೊರೆಯಾದ ಎರಡನೇ ಜಯಸಿಂಹನು (1015-42) ವೆಂಗಿರಾಜ್ಯದ ವ್ಯವಹಾರದಲ್ಲಿ ಪ್ರವೇಶಿಸಿ ರಾಜೇಂದ್ರನ ಕೋಪಕ್ಕೆ ಪಾತ್ರನಾದನು. ರಾಜೇಂದ್ರನು ಅವನ ವಿರುದ್ಧ ದಂಡೆತ್ತಿ ಹೋಗಿ ಚಾಳುಕ್ಯರ ಸೈನ್ಯವನ್ನು ಮಾಸ್ಕಿ ಎಂಬಲ್ಲಿ ಸಂಪೂರ್ಣವಾಗಿ ಸೋಲಿಸಿದನು ಮತ್ತು ವೆಂಗಿರಾಜ್ಯದಲ್ಲಿ ಚೋಳರ ಅಧಿಕಾರವನ್ನು ಭದ್ರಗೊಳಿಸಿದನು.

ದಕ್ಷಿಣ ಭಾರತದ ದಂಡೆಯಾತ್ರೆಯ ನಂತರ ರಾಜೇಂದ್ರನು ಉತ್ತರ ಭಾರತದ ಮೇಲೆ ದಂಡಯಾತ್ರೆ ಕೈಗೊಂಡನು. ಅವನ ಸೈನ್ಯವು ಗಂಗಾನದಿಯನ್ನು ದಾಟಿ ಆ ನದಿಯ ಬಯಲಿನ ಇಬ್ಬರು ರಾಜರುಗಳನ್ನು ಸೋಲಿಸಿತು. ಅನಂತರ ಬಂಗಾಳದ ಕಡೆ ಮುಂದುವರಿದು ಬಂಗಾಳದ ಪಾಲರ ಸಂತತಿಯ ಅರಸನಾದ ಮಹೀಪಾಲನನ್ನು ಸೋಲಿಸಿ ವಿಜಯಮಾಲಿಕೆಯನ್ನು ಧರಿಸಿ ರಾಜ್ಯಕ್ಕೆ ಹಿಂದಿರುಗಿತು. ಹೀಗೆ ವಿಜಯದೊಂದಿಗೆ ಹಿಂದಿರುಗಿ ಬರುವಾಗಿ ಪವಿತ್ರ ಗಂಗಾತೀರ್ಥವನ್ನು ಅವನ ಸೈನ್ಯವು ಕುಂಭಗಳಲ್ಲಿ ಹೊತ್ತು ತಂದು ರಾಜೇಂದ್ರನು ಹೊಸದಾಗಿ ಕಟ್ಟಿಸಿದ್ದ 'ಚೋಳಗಂಗ' ಎಂಬ ಕೆರೆಯ ನೀರಿನೊಂದಿಗೆ ಬೆರೆಸಿದರೆಂದು ಹೇಳಲಾಗಿದೆ. ಇದಲ್ಲದೆ ರಾಜೇಂದ್ರನು ಉತ್ತರ ಭಾರತದ ಮೇಲಿನ ಈ ಪ್ರಖ್ಯಾತ ದಂಡಯಾತ್ರೆಯ ಸವಿನೆನಪಿಗಾಗಿ 'ಗಂಗೈಕೊಂಡ' ಎಂಬ ಬಿರುದನ್ನು ಧರಿಸಿದ್ದಲ್ಲದೆ 'ಗಂಗೈಕೊಂಡ ಚೋಳಪುರಂ' ಎಂಬ ಹೊಸ ರಾಜಧಾನಿಯನ್ನು ನಿರ್ಮಿಸಿದನು. ಈ ಹೊಸ ರಾಜಧಾನಿಯನ್ನು ಸುಂದರವಾದ ದೇವಾಲಯಗಳಿಂದಲೂ ಮತ್ತು ಅರಮನೆಗಳೇ ಮೊದಲಾದ ಭವ್ಯಭವನಗಳಿಂದಲೂ ಸುಂದರಗೊಳಿಸಿದನು.

ರಾಜೇಂದ್ರ ಚೋಳನ ಮತ್ತೊಂದು ಬಹು ಮುಖ್ಯ ಸಾಧನೆಯೆಂದರೆ ಸುಮಾತ್ರ ದ್ವೀಪದ ಶ್ರೀ ವಿಜಯ ರಾಜ್ಯದ ಮೇಲೆ ನೌಕಾದಂಡಯಾತ್ರೆಯನ್ನು ಕೈಗೊಂಡುದುದಾಗಿತ್ತು. ತನ್ನ ಕೀರ್ತಿಯನ್ನು ಭಾರತದ ಹೊರಗೂ ಹರಡಬೇಕೆಂಬುದು ಅವನ ಈ ದಂಡಯಾತ್ರೆಯ ಮುಖ್ಯ ಉದ್ದೇಶವಾಗಿತ್ತು. ಅವನ ಸೈನ್ಯವು ಬಂಗಾಳಕೊಲ್ಲಿಯನ್ನು ದಾಟಿ ಶ್ರೀ ವಿಜಯ ಸಾಮ್ರಾಜ್ಯದ ರಾಜಧಾನಿಯಾಗಿದ್ದ ಕಡಾರಂ ಅನ್ನು ಮುತ್ತಿತು. ಶ್ರೀ ವಿಜಯ ಸಾಮ್ರಾಜ್ಯದ ಅರಸನಾಗಿದ್ದ ಶ್ರೀ ಸಂಗ್ರಾಮ ವಿಜಯೋತ್ತುಂಗವರ್ಮನು ಸೋತು ರಾಜೇಂದ್ರನಿಗೆ ಪೊಗದಿ ಕೊಡಲು ಒಪ್ಪಿಕೊಂಡನು. ಇದಲ್ಲದೆ ಈ ಕಾಲದಲ್ಲಿ ಮಲಯ, ಸುಮಾತ್ರ, ಜಾವಾ ಮತ್ತು ಅದರ ಸುತ್ತಮುತ್ತಲಿನ ದ್ವೀಪಗಳು ಶ್ರೀ ವಿಜಯ ಸಾಮ್ರಾಜ್ಯದ ಅಧೀನದಲ್ಲಿದ್ದುದರಿಂದ ಅವುಗಳೆಲ್ಲವೂ ಚೋಳರ ಸಾರ್ವ ಭೌಮತ್ವವನ್ನು ಒಪ್ಪಿಕೊಂಡವು. ರಾಜೇಂದ್ರ ಚೋಳನ ಈ ವಿಜಯದಿಂದ ಭಾರತ ಮತ್ತು ಮಲಯ ದ್ವೀಪಗಳ ನಡುವೆ ರಾಜಕೀಯ, ಸಾಂಸ್ಕೃತಿಕ ಮತ್ತು ವ್ಯಾಪಾರ ಸಂಬಂಧ ವೃದ್ಧಿಗೊಂಡವು. ಈ ಎಲ್ಲ ದಿಗ್ವಿಜಯಗಳಿಂದ ರಾಜೇಂದ್ರ ಚೋಳನ ಕೀರ್ತಿಯು ಭಾರತದಲ್ಲೇ ಅಲ್ಲದೆ ಸಿಂಹಳ ಹಾಗೂ ಆಗ್ನೇಯ ಏಷ್ಯಾ ರಾಜ್ಯಗಳಲ್ಲೂ ಹರಡಿತು. ರಾಜೇಂದ್ರನು 'ಗಂಗೈಕೊಂಡ', 'ಕಡಾರಂಗೊಂಡ', 'ಪಂಡಿತ ಚೋಳ' ಎಂಬ ಅನೇಕ ಬಿರುದುಗಳನ್ನು ಧರಿಸಿದ್ದನು.

ರಾಜೇಂದ್ರ ಚೋಳನು ಮಹಾ ದಿಗ್ವಿಜಯಿಯಾಗಿದ್ದುದಲ್ಲದೆ, ಒಳ್ಳೆಯ ಆಡಳಿತಗಾರನೂ, ಸಾಹಿತ್ಯ, ಕಲೆ ಮತ್ತು ವಿದ್ಯೆಯ ಪೋಷಕನೂ ಆಗಿದ್ದನು. ತನ್ನ ನೂತನ ರಾಜಧಾನಿ ಗಂಗೈಕೊಂಡ ಚೋಳಪುರಂನಲ್ಲಿ ಒಂದು ಶಿವದೇವಾಲಯವನ್ನು ಕಟ್ಟಿಸಿದನು. ದಕ್ಷಿಣ ಆರ್ಕಾಟ್ ಜಿಲ್ಲೆಯ ಎನ್ನಾಯಿರಂ ಎಂಬಲ್ಲಿ ಒಂದು ವಿದ್ಯಾಪೀಠವನ್ನು ಸ್ಥಾಪಿಸಿದ್ದನು. ಇಲ್ಲಿ ವ್ಯಾಕರಣ, ಮೀಮಾಂಸೆ, ನ್ಯಾಯ ಮೊದಲಾದ ವಿಷಯಗಳನ್ನು ಕಲಿಸಲಾಗುತ್ತಿತ್ತು. ಈ ವಿದ್ಯಾಪೀಠದ ಖರ್ಚು ವೆಚ್ಚಗಳಿಗಾಗಿ ರಾಜೇಂದ್ರನು ಕೆಲವು ಗ್ರಾಮಗಳನ್ನು ದತ್ತಿಯಾಗಿ ನೀಡಿದ್ದನು. ವ್ಯವಸಾಯಾಭಿವೃದ್ಧಿಗಾಗಿ ಕೆರೆಕಟ್ಟೆಗಳನ್ನು ನಿರ್ಮಿಸಿ ಜನರನ್ನು ಸುಖಿಗಳನ್ನಾಗಿ ಮಾಡಿದ್ದನು. ಇಂತಹ ಕೆಲವು ಸಾಧನೆಗಳಿಂದ ರಾಜೇಂದ್ರ ಚೋಳನು ಚೋಳ ಸಾಮ್ರಾಟರಲ್ಲಿ ಒಬ್ಬ ಪ್ರಖ್ಯಾತ ದೊರೆಯಾಗಿದ್ದಾನೆ. ರಾಜೇಂದ್ರ ಚೋಳನು ಕ್ರಿ.ಶ. 1044ರಲ್ಲಿ ಕಾಲಾವಾದನು.

ರಾಜೇಂದ್ರ ಚೋಳನು ಕಾಲವಾದ ಮೇಲೂ ಚೋಳರಿಗೂ ಕಲ್ಯಾಣಿಯ ಚಾಳುಕ್ಯರಿಗೂ, ಚೋಳರಿಗೂ ಮತ್ತು ಪಾಂಡ್ಯರಿಗೂ ಆಗಿಂದ್ದಾಗ್ಗೆ ಯುದ್ಧಗಳು ನಡೆಯುತ್ತಲೇ ಇದ್ದವು. ರಾಜೇಂದ್ರನ ನಂತರ ಸಿಂಹಾಸನವನ್ನೇರಿದ ಅವನ ಮಗ ಒಂದನೇ ರಾಜಾಧಿರಾಜನ ಕಾಲದಲ್ಲಿ ಚಾಳುಕ್ಯರ ದೊರೆ ಒಂದನೇ ಸೋಮೇಶ್ವರ (1042-68) ನು ವೆಂಗಿ ರಾಜ್ಯಕ್ಕೆ ಮುತ್ತಿಗೆ ಹಾಕಿದನು. ರಾಜಾಧಿರಾಜನು ಅವನ ಮೇಲೆ ದಂಡೆತ್ತಿ ಹೋಗಿ ಚಾಳುಕ್ಯರ ರಾಜಧಾನಿ ಕಲ್ಯಾಣಿಯನ್ನು ವಶಪಡಿಸಿಕೊಂಡನು. ಸೋಮೇಶ್ವರನು ಅವನನ್ನು ಎದುರಿಸಲು ವೆಂಗಿಯಿಂದ ಧಾವಿಸಿ ಬಂದನು. ಎರಡು ಕಡೆಯ ಸೈನ್ಯಗಳೂ ಕೊಪ್ಪಂ ಎಂಬಲ್ಲಿ (1053) ಭೀಕರವಾಗಿ ಹೋರಾಡಿದವು. ಈ ಯುದ್ಧದಲ್ಲಿ ಚೋಳರು ಜಯ ಗಳಿಸಿದರೂ ರಾಜಾಧಿರಾಜನು ಕೊಲ್ಲಲ್ಪಟ್ಟು ಅವರು ತುಂಬಲಾರದ ನಷ್ಟವನ್ನು ಹೊಂದಿದರು.

ಒಂದನೇ ರಾಜಾಧಿರಾಜನು ಕಾಲವಾದ ಮೇಲೆ ಒಬ್ಬರಾದ ಮೇಲೊಬ್ಬರಂತೆ ಎರಡನೆಯ ರಾಜೇಂದ್ರ, ಒಂದನೆಯ ವೀರರಾಜೇಂದ್ರ ಮತ್ತು ಆದಿರಾಜೇಂದ್ರರು ಚೋಳ ರಾಜ್ಯದ ಚಕ್ರವರ್ತಿಗಳಾದರು. ಎರಡನೆಯ ರಾಜೇಂದ್ರನು (1052-64) ಕೂಡಲಸಂಗಮಂ ಯುದ್ಧದಲ್ಲಿ ಚಾಳುಕ್ಯರ ದೊರೆ ಸೋಮೇಶ್ವರನ್ನು ಮತ್ತೊಮ್ಮೆ ಸೋಲಿಸಿದನು. ಎರಡನೆಯ ರಾಜೇಂದ್ರನ ನಂತರ ಸಿಂಹಾಸನವನ್ನೇರಿದ ಒಂದನೆಯ ವೀರರಾಜೇಂದ್ರನೂ ಒಬ್ಬ ಪರಾಕ್ರಮಶಾಲಿ ದೊರೆಯಾಗಿದ್ದನು. ಇವನ ಕಾಲದಲ್ಲಿ ಚಾಳುಕ್ಯರ ಮತ್ತು ಚೋಳರ ನಡುವೆ ಹೋರಾಟಗಳು ಮುಂದುವರಿದು ಚಾಳುಕ್ಯರ ಸೈನ್ಯವನ್ನು ವಿಜಯವಾಡದ ಹತ್ತಿರ ಸಂಪೂರ್ಣವಾಗಿ ಸೋಲಿಸಿದನು. ಈ ನಡುವೆ ಗುಣಮುಖವಾಗದ ವ್ಯಾಧಿಯಿಂದ ನರಳುತ್ತಿದ್ದ ಒಂದನೇ ಸೋಮೇಶ್ವರನು 1068ರಲ್ಲಿ ತುಂಗಭದ್ರಾ ನದಿಯಲ್ಲಿ ಮುಳುಗಿ ಅಸುನೀಗಿದನು. ಒಂದನೇ ಸೋಮೇಶ್ವರನು ಕಲ್ಯಾಣಿ ಚಾಳುಕ್ಯರ ದೊರೆಗಳಲ್ಲಿ ಒಬ್ಬ ಪ್ರಸಿದ್ಧ ದೊರೆಯಾಗಿದ್ದನು.

ವೀರರಾಜೇಂದ್ರನ ನಂತರ ಚೋಳರ ಸಿಂಹಾಸನವನ್ನೇರಿದ ದೊರೆಗಳಲ್ಲಿ ಒಂದನೇ ಕುಲೋತ್ತುಂಗನು (1070-1118) ಹೆಚ್ಚು ಪ್ರಸಿದ್ಧನಾದವನು. ಇವನು ಸಹ ಒಬ್ಬ ಪರಾಕ್ರಮಶಾಲಿ ದೊರೆಯಾಗಿದ್ದನು. ಇವನ ಕಾಲದಲ್ಲಿ ಚೋಳರ ಅಧಿಕಾರವು ಮತ್ತೊಮ್ಮೆ ತನ್ನ ಪ್ರಾಬಲ್ಯವನ್ನು ಗಳಿಸಿಕೊಂಡಿತು. ಪಾಂಡ್ಯರ ಮತ್ತು ಚೇರರ ದಂಗೆಗಳನ್ನು ಅಡಗಿಸಿ ತನ್ನ ಅಧಿಕಾರವನ್ನು ಆ ರಾಜ್ಯಗಳಲ್ಲಿ ಭದ್ರಪಡಿಸಿದನು.

ಇದೇ ಸಮಯದಲ್ಲಿ ಚಾಳುಕ್ಯರ ಸಿಂಹಾಸನವನ್ನೇರಿದ ಆರನೆಯ ವಿಕ್ರಮಾದಿತ್ಯನು ಇವನಷ್ಟೇ ಬಲಶಾಲಿಯಾಗಿದ್ದನು. ಇದರಿಂದಾಗಿ ಇಬ್ಬರೂ ಒಬ್ಬರ ಬಲವನ್ನು ಒಬ್ಬರು ಅರಿತು ಕೊಳ್ಳುವಷ್ಟು ಚತುರರಾಗಿದ್ದು ಇಬ್ಬರೂ ಪರಸ್ಪರ ಒಳಗೊಳಗೆ ದ್ವೇಷಿಸುತ್ತಿದ್ದರೂ ಯುದ್ಧಕ್ಕೆ ಅವಕಾಶಕೊಡದೆ ತಮ್ಮ ತಮ್ಮ ಕಾರ್ಯಾಚರಣೆಗಳಲ್ಲಿ ನಿರತರಾಗಿದ್ದರು. ಒಂದನೇ ಕುಲೋತ್ತುಂಗನ ಕಾಲದಲ್ಲಿ ಸಿಂಹಳ ದ್ವೀಪವು ಚೋಳರಿಂದ ಸ್ವತಂತ್ರವಾಯಿತು. ಆದರೂ ಕುಲೋತ್ತುಂಗನು ಸಿಂಹಳದ ರಾಜನೊಂದಿಗೆ ವಿವಾಹ ಸಂಬಂಧಗಳನ್ನು ಬೆಳೆಸಿ ತನ್ನ ಮೈತ್ರಿಯನ್ನು ಬಲಗೊಳಿಸಿಕೊಂಡನು. ಕುಲೋತ್ತುಂಗನು ಕಳಿಂಗ ರಾಜ್ಯದ ಅನಂತವರ್ಮ ಜೋಡಗಂಗವನ್ನು ಸೋಲಿಸಿದನು. ವೆಂಗಿರಾಜ್ಯದ ಮೇಲೂ ಚೋಳರ ಶ್ರೇಷ್ಠಾಧಿಕಾರವನ್ನು ಪುನಃ ಸ್ಥಾಪಿಸಿದನು.

ಕುಲೋತ್ತುಂಗನು ಆಗ್ನೇಯ ಏಷ್ಯಾದ ರಾಜ್ಯಗಳೊಂದಿಗೂ ರಾಯಭಾರ ಸಂಪರ್ಕಗಳನ್ನು ಹೊಂದಿದ್ದನು. ಬರ್ಮ ಮತ್ತು ಕಾಂಬೋಜದ ರಾಜರುಗಳ ಆಸ್ಥಾನಕ್ಕೆ ತನ್ನ ರಾಯಭಾರಿಗಳನ್ನು ಕಳುಹಿಸಿದ್ದನು. ಅಂತೆಯೆ ಕ್ರಿ.ಶ. 1090ರಲ್ಲಿ ಶ್ರೀ ವಿಜಯಸಾಮ್ರಾಜ್ಯದ ಅರಸನು ನಾಗಪಟಂನಲ್ಲಿದ್ದ ಬೌದ್ಧ ವಿಹಾರವನ್ನು ದುರಸ್ತುಗೊಳಿಸಲು ಅನುಮತಿ ಪಡೆಯುವುದಕ್ಕಾಗಿ ಕುಲೋತ್ತುಂಗನ ಆಸ್ಥಾನಕ್ಕೆ ತನ್ನ ರಾಯಭಾರಿಯನ್ನು ಕಳುಹಿಸಿದ್ದನು.

ಕುಲೋತ್ತುಂಗನ ಆಳ್ವಿಕೆಯ ಕೊನೆಯ ವರ್ಷಗಳು ಚೋಳರಿಗೆ ಅಶುಭದಿನಗಳಾಗಿ ಪರಿಣಮಿಸಿಸಿದವು. ಕ್ರಿ.ಶ. ಹನ್ನೊಂದನೆ ಶತಮಾನದಲ್ಲಿ ಕರ್ಣಾಟಕದಲ್ಲಿ ರಾಜ್ಯಸ್ಥಾಪನೆ ಮಾಡಿದ ಹೊಯ್ಸಳರಿಂದಾಗಿ ಚೋಳರು ಕಷ್ಟಗಳನ್ನು ಎದುರಿಸಬೇಕಾಯಿತು. ಹೊಯ್ಸಳರ ರಾಜನಾದ ವಿಷ್ಣುವರ್ಧನನು ಕ್ರಿ.ಶ. 1116ರಲ್ಲಿ ತಲಕಾಡಿನ ಮೇಲೆ ದಂಡೆತ್ತಿ ಹೋಗಿ ಅಲ್ಲಿ ಚೋಳರ ರಾಜ್ಯಪಾಲನಾದ ಆದಿಗೈಮನ್ ಅಥವ ಆದಿಯಮನನ್ನು ಸೋಲಿಸಿ ಗಂಗವಾಡಿಯುಲ್ಲಿ ಚೋಳರ ಆಳ್ವಿಕೆಯನ್ನು ಕೊನೆಗಾಣಿಸಿದನು. ಇದೇ ರೀತಿಯಲ್ಲಿ ಚೋಳರ ಅಧಿಕಾರವನ್ನು ವೆಂಗಿ ರಾಜ್ಯದಲ್ಲಿ ಕೊನೆಗಾಣಿಸಬೇಕೆಂದು ಪ್ರಯತ್ನಿಸುತ್ತಿದ್ದ ಚಾಳುಕ್ಯರ ದೊರೆ ಆರನೇ ವಿಕ್ರಮಾದಿತ್ಯನು ಕ್ರಿ.ಶ. 1118ರಲ್ಲಿ ವೆಂಗಿಯ ಮೇಲೆ ತನ್ನ ಸೈನ್ಯವನ್ನು ಕಳುಹಿಸಿ ಅಲ್ಲಿ ಚೋಳರ ಅಧಿಕಾರವನ್ನು ಕೊನೆಗಾಣಿಸಿದನು. ಹೀಗಾಗಿ ಕುಲೋತ್ತುಂಗನ ಆಳ್ವಿಕೆಯ ಕೊನೆಯ ಭಾಗದಲ್ಲಿ ಅವನ ಗೌರವ ಪ್ರತಿಷ್ಠೆಗಳು ನುಚ್ಚುನೂರಾದವು ಮತ್ತು ಇವುಗಳೊಂದಿಗೆ ಚೋಳರ ಅಧಿಕಾರದ ಅವನತಿಯೂ ತ್ವರಿತವಾಯಿತು. ಕುಲೋತ್ತುಂಗನ ನಂತರ ಅಧಿಕಾರಕ್ಕೆ ಬಂದ ಒಂದನೇ ವಿಕ್ರಮಚೋಳ (ಕ್ರಿ.ಶ. 1118-35)ನ ಕಾಲದಲ್ಲಿ ಚೋಳರ ರಾಜ್ಯದಲ್ಲಿ ದಂಗೆಗಳು ಸರ್ವ ಸಾಮಾನ್ಯವಾದವು. ವಿಕ್ರಮಚೋಳನು ಈ ದಂಗೆಗಳ ವಿರುದ್ಧ ಹೋರಾಡಿ ಅಧಿಕಾರದಲ್ಲಿ ಮುಂದುವರಿದನು. ಇವನ ತರುವಾಯ ಆಳಿದ ಚೋಳರ ದೊರೆಗಳು ತುಂಬಾ ಅಸಮರ್ಥರಾಗಿದ್ದರು. ಇವರಲ್ಲಿ ಕೊನೆಯವನಾದ ಮೂರನೆ ರಾಜೇಂದ್ರನ (1246-79) ಕಾಲದಲ್ಲಿ ಪಾಂಡ್ಯರು ಪ್ರಬಲರಾಗಿ ಚೋಳರ ಅಧಿಕಾರವನ್ನು ಕೊನೆಗಾಣಿಸಿದರು.

**ಚೋಳರ ಆಡಳಿತ ಕ್ರಮ**

ಚೋಳ ಚಕ್ರವರ್ತಿಗಳು ತಮ್ಮ ವಿಶಾಲವಾದ ಸಾಮ್ರಾಜ್ಯಕ್ಕೆ ಹಿರಿದಾದ ಆಡಳಿತ ವ್ಯವಸ್ಥೆಯನ್ನೇರ್ಪಡಿಸಿ ಬಹುದಕ್ಷತೆಯಿಂದ ರಾಜ್ಯವಾಳಿದರು. ರಾಜತ್ವವು

ವಂಶಾನುಗತವಾಗಿತ್ತು. ರಾಜನು ಮಿತಿಯಿಲ್ಲದಷ್ಟು ಅಧಿಕಾರವನ್ನು ಹೊಂದಿದ್ದರೂ ಅವನು ನಿರಂಕುಶನಾಗಿ ವರ್ತಿಸುತ್ತಿರಲಿಲ್ಲ. ರಾಜನಿಗೆ ಆಡಳಿತದಲ್ಲಿ ಸಹಾಯ ಮಾಡಲು ಮಂತ್ರಿ ಪರಿಷತ್ತು (ಉದಾಂಕಟ್ಟಂ) ಇದ್ದು ಅವರ ಸಲಹೆಗಳನ್ನು ಗಮನದಲ್ಲಿಟ್ಟುಕೊಂಡು ರಾಜನು ನಿಯಮಗಳನ್ನು ರೂಪಿಸುತ್ತಿದ್ದನು. ಮಂತ್ರಿಗಳು ಮಾತ್ರವಲ್ಲದೆ ಇತರ ಅನೇಕ ಅಧಿಕಾರಿಗಳೂ ಇದ್ದರು. ಇವರು ತಮಗೆ ವಹಿಸಿದ್ದ ಕೆಲವು ನಿರ್ದಿಷ್ಟ ಕಾರ್ಯಗಳ ಜವಾಬ್ದಾರಿಯನ್ನು ಹೊತ್ತಿದ್ದರು. ಕಂದಾಯ ನಿಗದಿ ಮತ್ತು ವಸೂಲಿ, ಲೆಕ್ಕ ಪತ್ರಗಳು, ದಾಖಲೆಗಳು ಮತ್ತು ಕಾಗದ ಪತ್ರಗಳ ರವಾನೆ ಮೊದಲಾದವುಗಳ ನಿರ್ವಹಣೆಗಾಗಿ ಪ್ರತ್ಯೇಕ ಇಲಾಖೆಗಳಿದ್ದವು. ಎಂದಿನಂತೆ ಭೂಕಂದಾಯವು ಸರ್ಕಾರದ ಮುಖ್ಯ ವರಮಾನವಾಗಿತ್ತು. ಭೂಮಿಯನ್ನು ಆಗಾಗ್ಗೆ ಅಳತೆ ಮಾಡಿಸಿ ಫಲವತ್ತಿಕೆಯ ಆಧಾರದ ಮೇಲೆ ಕಂದಾಯವನ್ನು ವಿಧಿಸಲಾಗುತ್ತಿತ್ತು. ವ್ಯವಸಾಯಕ್ಕೆ ಯೋಗ್ಯವಾದ ಭೂಮಿಯನ್ನು ತರಿ ಮತ್ತು ಖುಷ್ಕಿ ಎಂದು ವಿಭಜಿಸಲಾಗಿತ್ತು. ಒಂದನೇ ರಾಜರಾಜನ ಕಾಲದಲ್ಲಿ ರೈತರು ತಾವು ಬೆಳೆದ ಬೆಳೆಯಲ್ಲಿ 1/3 ಭಾಗವನ್ನು ಸರ್ಕಾರಕ್ಕೆ ಸಲ್ಲಿಸಬೇಕಿತ್ತೆಂದು ಅವನ ಶಾಸನಗಳಿಂದ ತಿಳಿದುಬರುತ್ತದೆ. ಆದರೆ ಚೋಳರ ಇನ್ನಿತರ ಕೆಲವು ಶಾಸನಗಳು ಕಂದಾಯದ ಪ್ರಮಾಣವು ಅಷ್ಟು ಹೆಚ್ಚಾಗಿರದೆ ಅದು 1/6 ಭಾಗವಾಗಿತ್ತೆಂದು ತಿಳಿಸುತ್ತವೆ. ಭೂಕಂದಾಯವನ್ನು ಬಿಟ್ಟರೆ ಸರ್ಕಾರವು ವೃತ್ತಿ, ಚರಸ್ಥಿರ ಆಸ್ತಿ, ವ್ಯಾಪಾರ ಪದಾರ್ಥಗಳು ಸಂತೆಗಳ ಸುಂಕ, ನ್ಯಾಯಾಸ್ಥಾನದ ಜುಲ್ಮಾನೆಗಳು, ಮದುವೆ ತೆರಿಗೆ, ಗಣಿಗಳು, ಅರಣ್ಯಗಳು, ಉಪ್ಪಿನ ಉತ್ಪಾದನೆಯ ಮೇಲೆ ತೆರಿಗೆ ಮೊದಲಾದ ತೆರಿಗೆಗಳನ್ನು ವಿಧಿಸುವುದರ ಮೂಲಕ ಖಜಾನೆಯನ್ನು ತುಂಬಿಸಿಕೊಳ್ಳುತ್ತಿತ್ತು. ಗ್ರಾಮ ಸಭೆಗಳು ಸರ್ಕಾರಕ್ಕೆ ಸಲ್ಲಿಸಬೇಕಾದ ಕಂದಾಯವನ್ನು ವಸೂಲಿಮಾಡಿ ನಿಯುಕ್ತ ಅಧಿಕಾರಿಗಳಿಗೆ ಒಪ್ಪಿಸುತ್ತಿದ್ದವು. ರಾಜ್ಯಾದಾಯದ ಬಹುಪಾಲು ಸೈನ್ಯ, ನೌಕಾದಳ, ಆಡಳಿತ ಸಿಬ್ಬಂದಿ, ದೇವಾಲಯ ಕೆರೆಕಟ್ಟೆಗಳ ಮತ್ತು ಕಾಲುವೆಗಳ, ರಸ್ತೆಗಳ ನಿರ್ಮಾಣ ಮತ್ತು ಅವುಗಳ ದುರಸ್ತು, ಮೊದಲಾದ ಬಾಬತ್ತುಗಳಿಗೆ ಖರ್ಚಾಗುತ್ತಿತ್ತು. ಚೋಳರ ದೊರೆಗಳು ವಿದ್ವಾಂಸರಿಗೆ, ರಣಯೋಧರಿಗೆ ನೀಡಿದ ಭೂಮಿಗಳ ಮೇಲೆ, ದೇವಾಲಯಗಳಿಗೆ ಕೊಡಲಾಗಿದ್ದ ಪುದುವಟ್ಟುಗಳು, ಧಾರ್ಮಿಕ ಹಾಗೂ ವಿದ್ಯಾಸಂಸ್ಥೆಗಳಿಗೆ ನೀಡಲಾಗಿದ್ದ ಭೂಮಿಯ ಮೇಲೆ ಹಾಗೂ ಬ್ರಾಹ್ಮಣರಿಗೆ ಬಿಟ್ಟುಕೊಟ್ಟಿದ್ದ ಭೂಮಿ ಇವುಗಳಿಗೆ ತೆರಿಗೆಯ ವಿನಾಯಿತಿ ತೋರಿಸಿದ್ದರು. ಅಂತೆಯೆ ಕ್ಷಾಮ ಪರಿಸ್ಥಿತಿಯು ತಲೆದೋರಿದಾಗ ಕಂದಾಯದಲ್ಲಿ ರೈತರಿಗೂ ರಿಯಾಯಿತಿ ತೋರಿಸಲಾಗುತ್ತಿತ್ತು.

**ಸೈನ್ಯಾಡಳಿತ**

ಚೋಳರ ಸೈನ್ಯವು ಬಹಳ ದಕ್ಷವಾಗಿತ್ತು. ಅವರ ಸೈನ್ಯವು ಗಜಸೈನ್ಯ, ಅಶ್ವಪಡೆ ಪದಾತಿದಳ ಮತ್ತು ನೌಕಾಪಡೆಯಿಂದ ಕೂಡಿತ್ತು. ಚೋಳರ ನೌಕಾಪಡೆಯು ಸಿಂಹಳ ಮತ್ತು ಶ್ರೀವಿಜಯ ಸಾಮ್ರಾಜ್ಯಗಳನ್ನು ಗೆದ್ದು ಸಾಮ್ರಾಜ್ಯಕ್ಕೆ ಸೇರಿಸುವುದರ ಮೂಲಕ ತನ್ನ ಕೀರ್ತಿಯನ್ನು ಎಲ್ಲೆಡೆಗೂ ಹರಡಿತ್ತು.

**ಪ್ರಾಂತ್ಯಾಡಳಿತ**

ಚೋಳರು ತಮ್ಮ ಸಾಮ್ರಾಜ್ಯವನ್ನು ಅನೇಕ ಭಾಗಗಳಾಗಿ ವಿಂಗಡಿಸಿದ್ದರು.

ಅವುಗಳಲ್ಲಿ ಹಿರಿದಾದ ಭಾಗವನ್ನು ಮಂಡಳಂ ಎಂದು ಕರೆಯಲಾಗಿತ್ತು. ಈ ಮಂಡಳಂಗಳು ಪುನಃ ವಿಭಾಗಿಸಲ್ಪಟ್ಟಿದ್ದು ಅವುಗಳ ಕೆಳಗೆ ವಳನಾಡು, ನಾಡು, ಕುರ್ರಂ ಅಥವ ಕೊಟ್ಟಂ ಎಂಬ ಆಡಳಿತ ವಿಭಾಗಗಳಿದ್ದವು. ಗ್ರಾಮವು ಆಡಳಿತದ ಕಟ್ಟಕಡೆಯ ಹಂತವಾಗಿತ್ತು. ಯುವರಾಜ, ರಾಜಕುಮಮಾರರು ಇಲ್ಲವೆ ರಾಜನ ರಕ್ತ ಸಂಬಂಧಿಗಳು ಅಥವ ವಿಖ್ಯಾತ ದಂಡನಾಯಕರು ಇವುಗಳ ಮೇಲಿನ ಆಡಳಿತಾಧಿಕಾರಿಗಳಾಗಿರುತ್ತಿದ್ದರು.

**ಸ್ಥಳೀಯ ಆಡಳಿತ**

**ಚೋಳರ ಕಾಲದಲ್ಲಿ ಆಡಳಿತಕ್ಕೆ** ಸಂಬಂಧಿಸಿದಂತೆ ಕಂಡುಬರುವ ಮತ್ತೊಂದು ಗಮನಾರ್ಹ ಸಂಗತಿಯೆಂದರೆ ಗ್ರಾಮಗಳ ಸ್ವಯಂ ಆಡಳಿತ. ಗ್ರಾಮಗಳ ಮೇಲ್ವಿಚಾರಣೆಯನ್ನು ನೋಡಿಕೊಳ್ಳಲು ಮಹಾಸಬೆಗಳಿದ್ದವು. ಒಂದನೇ ಪರಾಂತಕನ ಉತ್ತರ ಮೇರೂರು ಶಿಲಾಶಾಸನವು ಈ ಗ್ರಾಮಸಭೆಗಳ ಕಾರ್ಯಕಲಾಪಗಳ ಬಗ್ಗೆ ವಿವರಣೆಗಳನ್ನು ನೀಡುತ್ತದೆ. ಪ್ರತಿಯೊಂದು ಗ್ರಾಮವೂ ತನ್ನದೇ ಆದ ಖಜಾನೆಯನ್ನೂ ಮತ್ತು ಗ್ರಾಮಸಭೆಯನ್ನು ಹೊಂದಿತ್ತು. ಗ್ರಾಮಸಭೆಯನ್ನು ಹಲವಾರು ಸಮಿತಿಗಳನ್ನಾಗಿ ವಿಂಗಡಿಸಿ ಪ್ರತಿಯೊಂದು ಸಮಿತಿಗೂ ನಿರ್ದಿಷ್ಟ ಕೆಲಸಗಳನ್ನು ವಹಿಸಲಾಗಿತ್ತು. ಅಂತಹ ಸಮಿತಿಗಳಲ್ಲಿ ಸಂವತ್ಸರವಾರಿಯಂ, ಏರಿವಾರಿಯಂ (ತೋಟದ ಸಮಿತಿ), ಪೊನ್‌ವಾರಿಯಂ (ಸ್ವರ್ಣಸಮಿತಿ) ನ್ಯಾಯಸಮಿತಿ (ನ್ಯಾಯತ್ತರ್) ಮೊದಲಾದವುಗಳು ಮುಖ್ಯವಾಗಿದ್ದವು. ಈ ಸಮಿತಿಗಳನ್ನು ರಚಿಸುವ ರೀತಿಯೂ ಸಹ ಶ್ಲಾಘನೀಯವಾಗಿತ್ತು. ಗ್ರಾಮವನ್ನು ಮೂವತ್ತು ಕುಟುಂಬ ಅಥವ ಮೊಹಲ್ಲಗಳನ್ನಾಗಿ ವಿಂಗಡಿಸಿ ಪ್ರತಿಯೊಂದು ವಿಭಾಗದಿಂದಲೂ ಒಬ್ಬೊಬ್ಬ ಪ್ರತಿನಿಧಿಯನ್ನು ಅವನ ವಿದ್ಯೆ, ಆಸ್ತಿ, ವಯಸ್ಸು, ನಡತೆ ಮತ್ತು ಪ್ರಾಮಾಣಿಕತೆಗಳನ್ನು ಆಧಾರವಾಗಿಟ್ಟುಕೊಂಡು ಮಹಾಸಭೆಗೆ ಆರಿಸಿಕೊಳ್ಳಲಾಗುತ್ತಿತ್ತು. ಹೀಗೆ ಈ ಮೇಲೆ ಹೇಳಿದ ಅರ್ಹತೆಗಳನ್ನು ಹೊಂದಿದವರ ಹೆಸರುಗಳನ್ನು ಚೀಟಿಗಳಲ್ಲಿ ಬರೆದು ಅವುಗಳನ್ನು ಒಂದು ಮಡಕೆಯಲ್ಲಿ ಹಾಕಿ ಒಬ್ಬ ಬಾಲಕನ ಕೈಯಿಂದ ಎತ್ತಿಸಿ ಅವರನ್ನು ಚುನಾಯಿಸುತ್ತಿದ್ದರು. ಹೀಗೆ ಮೂವತ್ತು ವಿಭಾಗದಿಂದಲೂ ಮೂವತ್ತು ಜನರನ್ನು ಚುನಾಯಿಸುತ್ತಿದ್ದರು, ಗ್ರಾಮ ಸಭೆಗಳಿಗೆ ಸ್ಪರ್ಧಿಸಲು ಕೆಲವು ನಿರ್ಬಂಧಗಳೂ ಇದ್ದವು. ಹಿಂದಿನ ಮೂರು ವರ್ಷಗಳಲ್ಲಿ ಸದಸ್ಯರಾಗಿದ್ದವರು, ಯಾವುದಾದರೂ ಜವಾಬ್ದಾರಿಯುತ ಸ್ಥಾನದಲ್ಲಿದ್ದು ಲೆಕ್ಕ ಪತ್ರಗಳನ್ನು ಒಪ್ಪಿಸದಿದ್ದವರು, ಕೊಲೆ ದರೋಡೆ ಕಳ್ಳತನ ಮಾಡಿದವರ ಸಂಬಂಧಿಗಳು ಸಭೆಯ ಸದಸ್ಯರಾಗಲು ಅನರ್ಹರಾಗುತ್ತಿದ್ದರು. ಗ್ರಾಮಸಭೆಯು ಗ್ರಾಮದ ಸಾರ್ವಜನಿಕ ಆಸ್ತಿಪಾಸ್ತಿಗಳ ಮೇಲ್ವಿಚಾರಣೆ ಮತ್ತು ರಕ್ಷಣೆಯ ಜವಾಬ್ದಾರಿಯನ್ನು ಹೊಂದಿತ್ತು. ಗೋಮಾಳ ಮತ್ತು ಅರಣ್ಯ ಭೂಮಿಯನ್ನು ವ್ಯವಸಾಯಕ್ಕೆ ಬಿಡುಗಡೆಮಾಡುವುದು, ಕಂದಾಯವನ್ನು ವಸೂಲಿ ಮಾಡುವುದು, ಸಣ್ಣಪುಟ್ಟ ಕೆರೆಗಳನ್ನು ಕಾಲುವೆಗಳನ್ನು ನಿರ್ಮಿಸುವುದು ಇಲ್ಲವೆ ದುರಸ್ತುಗೊಳಿಸುವುದು, ರಸ್ತೆಗಳ ನಿರ್ಮಾಣ, ಧರ್ಮದತ್ತಿಗಳ ಉಸ್ತುವಾರಿ, ವೈದ್ಯಕೀಯ ಮತ್ತು ಶಿಕ್ಷಣಸಂಸ್ಥೆಗಳ ಹಾಗೂ ದೇವಾಲಯಗಳ ಮೇಲ್ವಿಚಾರಣೆ ನೋಡಿಕೊಳ್ಳುವುದು ಈ ಸಭೆಗಳ ಕರ್ತವ್ಯಗಳಾಗಿದ್ದವು. ಗ್ರಾಮಗಳಲ್ಲಿನ ಸಣ್ಣಪುಟ್ಟ ಜಗಳಗಳ ಬಗ್ಗೆ ನ್ಯಾಯತ್ತರ್ ಸಮಿತಿಯು ವಿಚಾರಣೆ ನಡೆಸಿ ತೀರ್ಪು ಕೊಡುತ್ತಿತ್ತು. ಒಟ್ಟಿನಲ್ಲಿ ಹೇಳುವುದಾದರೆ

ಗ್ರಾಮಗಳ ಸರ್ವತೋಮುಖವಾದ ಪ್ರಗತಿಗೆ ದುಡಿಯುವುದು ಈ ವ್ಯವಸ್ಥೆಯ ಮುಖ್ಯ ಉದ್ದೇಶವಾಗಿತ್ತು.

**ಸಾಮಾಜಿಕ ಮತ್ತು ಆರ್ಥಿಕ ಜೀವನ**

ಸಾಮಾಜಿಕ ಜೀವನದಲ್ಲಿ ಜಾತಿಪದ್ಧತಿಯು ಈ ಕಾಲದಲ್ಲೂ ಮುಂದುವರಿದಿದ್ದು ಕೈಕೋಳರು, ಚೆಟ್ಟಿಗಳು, ಕಮ್ಮಾರರು, ರಥಕಾರರು, ಪಟ್ಟಣವಾನರು ಎಂಬ ಹಲವಾರು ಉಪಜಾತಿಗಳು ಅಸ್ತಿತ್ವದಲ್ಲಿದ್ದವು. ಇವುಗಳೇ ಅಲ್ಲದೆ ಎಡಂಗೈ, ಬಲಂಗೈ, ವೆಲ್ಲಾಳ, ವೇಡ ಎಂಬ ಹೊಸ ಜಾತಿಗಳೂ ಈ ಕಾಲದಲ್ಲಿ ಹುಟ್ಟಿಕೊಂಡವು. ಇದರಿಂದಾಗಿ ಜಾತಿಯ ಬಗ್ಗೆ ಜಗಳಗಳು ಸಂಭವಿಸುತ್ತಿದ್ದವು. ಹಲವಾರು ಜಾತಿಗಳು ಆಚರಿಸುತ್ತಿದ್ದ ವೃತ್ತಿಗಳು ಮಾತ್ರವಲ್ಲವೆ ಅವರ ಸಾಮಾಜಿಕ ಹಾಗೂ ದೈನಂದಿನ ಜೀವನ ಕ್ರಮವು ಈ ಜಾತಿಗಳ ಬೆಳವಣಿಗೆಯಿಂದ ರೂಪುಗೊಳ್ಳ ತೊಡಗಿದವು. ಅನೇಕ ವೇಳೆ ವಿವಿಧ ಜಾತಿಗಳಿಗೆ ಸೇರಿದ ಜನರು ತಂತಮ್ಮ ಹಕ್ಕುಗಳನ್ನು ಪ್ರತಿಪಾದಿಸಿ ಜಾತಿಯ ಘರ್ಷಣೆಗಳು ಸಂಭವಿಸಿದುದೂ ಕಂಡುಬರುತ್ತದೆ. ಒಂದನೇ ರಾಜರಾಜ ಮತ್ತು ಒಂದನೇ ಕುಲೋತ್ತುಂಗ ಮೊದಲಾದ ರಾಜರುಗಳು ಮಧ್ಯಪ್ರವೇಶಿಸಿ ಜಾತಿಯ ಜಗಳಗಳನ್ನು ಇತ್ಯರ್ಥಪಡಿಸಿದುದಾಗಿ ಅವರ ಶಾಸನಗಳಿಂದ ತಿಳಿದುಬರುತ್ತದೆ. ಆದರೂ ಪ್ರತಿಯೊಂದು ಜಾತಿಯವರಲ್ಲೂ ಸಾಂಘಿಕ ಐಕ್ಯತೆಯು ನೆಲೆಸಿತ್ತು. ಸಾಮಾಜಿಕ ಸಂಸ್ಥೆಗೆ ತಳಹದಿಯಂತಿದ್ದ ಜಾತಿಯು ಜೀವನ ಕ್ರಮದ ಪ್ರಮುಖ ಸೂತ್ರವಾಗಿ ಪರಿಣಮಿಸಿತು. ಕೀಳು ಜಾತಿಗೆ ಸೇರಿದವರ ಪರಿಸ್ಥಿತಿಯು ಶೋಚನೀಯವಾಗಿ ಅವರು ನಿಸ್ಸಹಾಯಕರಾಗಿ ಎಲ್ಲವೂ ವಿಧಿನಿಯಮವೆಂದು ಭಾವಿಸಿಕೊಂಡು ಜೀವನ ಸಾಗಿಸುತ್ತಿದ್ದರು. ಅವರ ಜೀವನವು ಗುಲಾಮಗಿರಿಯ ಜೀವನವಾಗಿತ್ತು.

ಸಾಮಾಜದಲ್ಲಿ ಸ್ತ್ರೀಯರನ್ನು ಗೌರವದಿಂದ ಕಾಣುತ್ತಿದ್ದರೂ ಅವರ ಸ್ಥಾನಮಾನಗಳು ಉತ್ತಮವಾಗಿರಲಿಲ್ಲ. ಸ್ತ್ರೀಯರು ದೇವಾಲಯಗಳಿಗೆ ಪೂಜೆಮಾಡುವುದಕ್ಕೂ, ಇಲ್ಲವೆ ಉತ್ಸವಗಳನ್ನು ನೋಡುವುದಕ್ಕೂ, ಹೊರಗೆ ಹೋಗುವುದನ್ನು ಬಿಟ್ಟರೆ ಅವರು ಒಂದು ರೀತಿಯ ಗೃಹಬಂಧನದ ಜೀವನ ನಡೆಸುತ್ತಿದ್ದರು. ವಿಧವೆಯರು ಅತಿ ಹೆಚ್ಚಿನ ಸಾಮಾಜಿಕ ಅಡತಡೆಗಳಿಗೂ ಅಜ್ಞೆಗಳಿಗೂ ಒಳಪಟ್ಟಿದ್ದರು. ಬಾಲ್ಯವಿವಾಹವು ರೂಢಿಯಲ್ಲಿತ್ತು. ಸತಿಸಹಗಮನ ಪದ್ಧತಿಯು ಆಚರಣೆಯಲ್ಲಿದ್ದರೂ ಹೆಚ್ಚು ವ್ಯಾಪಕವಾಗಿರಲಿಲ್ಲ. ಸುಂದರ ಚೋಳನ ರಾಣಿ (965-976) ವಾನವನ್ ಮಹಾದೇವಿಯು ಸತಿ ಸಹಗಮನ ಮಾಡಿದ ದೃಷ್ಟಾಂತವು ಬೆಳಕಿಗೆ ಬಂದಿದೆ. ದೇವದಾಸಿ ಪದ್ಧತಿಯು ತಮಿಳುನಾಡಿನಲ್ಲಿ ಬಹಳ ಹಿಂದೆಯೆ ಅನುಷ್ಠಾನಕ್ಕೆ ಬಂದ ಪದ್ಧತಿಯಾಗಿದ್ದು ಅದು ಚೋಳರ ಕಾಲದಲ್ಲಿ ಭದ್ರವಾಗಿ ನೆಲೆಗೊಂಡಿತು. ದೇವದಾಸಿಯರಿಗೆ ಸಮಾಜದಲ್ಲಿ ಗೌರವವಿದ್ದಿತು. ದೇವಸ್ಥಾನದ ಪರಿವಾರದಲ್ಲಿ ದೇವದಾಸಿಯರು ಮುಖ್ಯ ಅಂಗವಾಗಿದ್ದರು. ಸಾಮಾನ್ಯವಾಗಿ ಅವರು ನೃತ್ಯ ಮತ್ತು ಸಂಗೀತ ಕಲೆಗಳಲ್ಲಿ ಪ್ರವೀಣೆಯರಾಗಿದ್ದರು. ಅಲ್ಲದೆ ಅವರು ಭಕ್ತಿಗೂ ಶ್ರದ್ಧೆಗೂ ದಾನಧರ್ಮಗಳನ್ನು ಮಾಡುವುದಕ್ಕೂ ಹೆಸರು ಪಡೆದಿದ್ದರು. ಅವರಲ್ಲಿ ಕೆಲವರು ಅರಸರ ಮತ್ತು ಉನ್ನತಾಧಿಕಾರಿಗಳ ಉಪಪತ್ನಿಯರೂ ಆಗಿರುತ್ತಿದ್ದರು. ಆದರೆ ಮುಂದಿನ ಶತಮಾನಗಳಲ್ಲಿ ಅವರನ್ನು ಸಮಾಜವು ಬಹಳ ಹೀನಾಯವಾಗಿ ಕಾಣತೊಡಗಿತು.

ಆರ್ಥಿಕ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ ಜನರು ಸುಖಕರ ಜೀವನ ನಡೆಸುತ್ತಿದ್ದರು. ಚೋಳ ಸಾಮ್ರಾಟರು ವ್ಯವಸಾಯಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡಿದ್ದರು. ಕೆರೆಕಟ್ಟೆಗಳನ್ನು ನಿರ್ಮಿಸುವುದು. ಕಾಲುವೆಗಳನ್ನು ತೋಡಿಸುವುದು, ನದಿಗಳಿಗೆ ಅಣೆಕಟ್ಟುಗಳನ್ನು ನಿರ್ಮಿಸುಮದರ ಮೂಲಕ ನೀರಾವರಿ ವ್ಯವಸಾಯಕ್ಕೂ ಅನುಕೂಲಮಾಡಿಕೊಟ್ಟಿದ್ದರು. ಕಾವೇರಿ ನದಿಯ ನೀರನ್ನು ವ್ಯವಸಾಯಕ್ಕೆ ಉಪಯೋಗಿಸುತ್ತಿದ್ದರು. ಒಂದನೇ ರಾಜೇಂದ್ರಚೋಳನು 'ಚೋಳ ಗಂಗ' ಎಂಬ ದೊಡ್ಡ ಜಲಾಶಯವನ್ನು ನಿರ್ಮಿಸಿ ವ್ಯವಸಾಯಕ್ಕೆ ಅನುಕೂಲಮಾಡಿಕೊಟ್ಟಿದ್ದನು. ರಾಜ್ಯದಲ್ಲಿ ಹಲವು ಬಗೆಯ ಕೈಗಾರಿಕೆಗಳಿದ್ದವು. ಕಾಂಜೀವರಂ ಬಟ್ಟೆ ತಯಾರಿಕೆಗೆ ಪ್ರಸಿದ್ಧಿಯಾಗಿತ್ತು. ಕನ್ಯಾಕುಮಾರಿಯಲ್ಲಿ ಉಪ್ಪನ್ನು ತಯಾರಿಸಲಾಗುತ್ತಿತ್ತು. ಆಭರಣಗಳನ್ನು ಮಾಡುವ ಕಲೆಯು ಕರಗತವಾಗಿತ್ತು. ಚೋಳ ಸಾಮ್ರಾಟರು ಆಂತರಿಕ ಮತ್ತು ವಿದೇಶೀಯ ವ್ಯಾಪಾರಕ್ಕೂ ಪ್ರೋತ್ಸಾಹ ನೀಡಿದ್ದರು. ವ್ಯಾಪಾರದ ಅನುಕೂಲಕ್ಕಾಗಿ ರಾಜ್ಯದಲ್ಲಿ ಅನೇಕ ರಸ್ತೆಗಳನ್ನು ನಿರ್ಮಿಸಿದ್ದರು. ಚೀನಾ, ಸುಮಾತ್ರ, ಜಾವ ಮತ್ತು ಅರೇಬಿಯಾ ದೇಶಗಳೊಂದಿಗೆ ಲಾಭದಾಯಕವಾದ ವ್ಯಾಪಾರವು ನಡೆಯುತ್ತಿತ್ತು.

**ಧರ್ಮ**

ಚೋಳ ರಾಜರುಗಳು ಶೈವಮತಾವಲಂಭಿಗಳಾಗಿದ್ದರೂ ಪರಮತ ಸಹಿಷ್ಣುಗಳಾಗಿದ್ದರು. ಅವರ ರಾಜ್ಯದಲ್ಲಿ ಶೈವ ಮತ್ತು ವೈಷ್ಣವ ಧರ್ಮಗಳು ಅಭಿವೃದ್ಧಿ ಹೊಂದಿದ್ದವು. ಚೋಳಚಕ್ರವರ್ತಿಗಳು ಶಿವ ಮತ್ತು ವಿಷ್ಣು ದೇವಾಲಯಗಳನ್ನು ಕಟ್ಟಿಸಿದ್ದರು. ಈ ಕಾಲದಲ್ಲಿ ದೇವಾಲಯಗಳು ಎಲ್ಲ ರೀತಿಯಲ್ಲೂ ಅತಿಮುಖ್ಯವಾದ ಸಂಸ್ಥೆಯಾಗಿದ್ದವು. ಜನತೆಯ ಆರ್ಥಿಕ, ಸಾಮಾಜಿಕ, ಆಧ್ಯಾತ್ಮಿಕ, ನೈತಿಕ, ನಾಗರಿಕ ಮತ್ತು ರಾಜಕೀಯ ಜೀವನವು ಸಹ ದೇವಾಲಯಗಳಿಂದ ಪ್ರಭಾವಿತವಾಗುತ್ತಿತ್ತು. ದೇವಾಲಯಗಳ ಕಾರ್ಯಕಲಾಪಗಳಲ್ಲಿ ಬ್ರಾಹ್ಮಣರೇ ಅಲ್ಲದೆ ಇತರ ಜಾತಿಯವರೂ ಹಲವಾರು ವಿಧದಲ್ಲಿ ಭಾಗವಹಿಸುತ್ತಿದ್ದರು. ತಂಜಾವೂರಿನ ಬೃಹದೇಶ್ವರ ದೇವಾಲಯದ ವಿವಿಧ ಸೇವೆಗಳಿಗಾಗಿ ರಾಜರಾಜನು ನೇಮಿಸಿದ್ದ ಆರುನೂರಒಂಭತ್ತು ಜನ ಸಿಬ್ಬಂದಿಯಲ್ಲಿ ಎಲ್ಲ ಜಾತಿಯವರೂ ಇದ್ದರೆಂದು ಅವನ ಶಿಲಾಶಾಸನವು ತಿಳಿಸುತ್ತದೆ. ಇಷ್ಟೇ ಅಲ್ಲದೆ ದೇವಾಲಯಗಳು ಪ್ರಾಚೀನ ಸಂಗೀತ, ನೃತ್ಯ, ಶಿಲ್ಪಕಲೆ ಮತ್ತು ಚಿತ್ರಕಲೆಗಳನ್ನು ಜೀವಂತವಾಗಿ ಉಳಿಸಿಕೊಂಡಿದ್ದವು. ತೇವಾರಂ, ತಿರುಪ್ಪಡಿಯಂ, ತಿರುಪ್ಪಲ್ಲಾಂಡು, ತಿರುವಾಯ್‌ಮೊಳಿ ಮುಂತಾದ ಭಕ್ತಿಪ್ರಧಾನವಾದ ಗೀತೆಗಳು ಆಗಿಂದ್ದಾಗ್ಗೆ ದೇವಾಲಯಗಳಲ್ಲಿ ಹಾಡಲ್ಪಡುತ್ತಿದ್ದವು. ಅಂತೆಯೆ ವೇದ ಪುರಾಣಗಳ ಪ್ರವಚನಗಳೂ ದೇವಾಲಯಗಳಲ್ಲಿ ನಡೆಯುತ್ತಿದ್ದವು. ಮೇಲಾಗಿ ವೇದ, ಪುರಾಣ, ಇತಿಹಾಸ ವ್ಯಾಕರಣ ಮೊದಲಾದವುಗಳ ಅಧ್ಯಯನವು ದೇವಾಲಯಗಳಲ್ಲಿ ನಡೆಯುತ್ತಿತ್ತು.

**ಸಾಹಿತ್ಯ**

ಚೋಳರ ರಾಜರುಗಳು ಸಾಹಿತ್ಯ ವಿದ್ಯೆ ಮತ್ತು ಕಲೆಯ ಪೋಷಕರಾಗಿದ್ದರು. ಈ ಕಾಲದಲ್ಲಿ ತಮಿಳು ಭಾಷೆಯಲ್ಲಿ ಅತ್ಯುತ್ತಮ ಕೃತಿಗಳು ರಚಿಸಲ್ಪಟ್ಟು ಈ

ಕಾಲವನ್ನು ತಮಿಳು ಸಾಹಿತ್ಯದ ಸುವರ್ಣಯುಗವನ್ನಾಗಿ ಮಾಡಿದ್ದವು. ರಾಜರು ಸಾಹಿತ್ಯಾಭಿವೃದ್ಧಿಗೆ ತೋರಿಸಿದ ಪ್ರೋತ್ಸಾಹ ಮತ್ತು ಭಕ್ತಿ ಪಂಥವು ಜಾಗೃತಿಗೊಳಿಸಿದ ಅತಿಶಯ ಪ್ರಮಾಣದ ಆಧ್ಯಾತ್ಮಿಕ ಆಸಕ್ತಿಯು ಸಾಹಿತ್ಯ ರಚನೆಗೆ ಸ್ಫೂರ್ತಿದಾಯಕವಾದ ವಾತಾವರಣವನ್ನು ಕಲ್ಪಿಸಿಕೊಟ್ಟಿತು.

ಸಾಹಿತ್ಯ ರಚನೆಯು ಏಕಮುಖವಾಗಿರಲಿಲ್ಲ. ಇವುಗಳಲ್ಲಿ ಆಧ್ಯಾತ್ಮಿಕ ವಿಷಯ, ಭಕ್ತಿಗೀತೆಗಳು, ಇತಿಹಾಸ ಪುರಾಣಗಳು ಶೃಂಗಾರವಸ್ತು ಮೊದಲಾದ ವಿಷಯಗಳು ಸೇರಿದ್ದವು. ಶೃಂಗಾರವಸ್ತುವನ್ನು ಆಧಾರವಾಗಿಟ್ಟುಕೊಂಡು ಜಿನಭಕ್ತನಾದ ತಿರುತ್ತಕ್ಕ ದೇವರ್ ಎಂಬವನು 'ಜೀವಕ ಚಿಂತಾಮಣಿ' ಎಂಬ ಶೃಂಗಾರರಸ ಪ್ರಧಾನವಾದ ಕಾವ್ಯವನ್ನು ರಚಿಸಿದನು. ಹನ್ನೆರಡನೆಯ ಶತಮಾನದಲ್ಲಿ ಕಂಬನ್ ಕವಿಯು ರಚಿಸಿರುವ ಕಂಬರಾಮಾಯಣವು ತಮಿಳು ಸಾಹಿತ್ಯ ಚರಿತ್ರೆಯಲ್ಲಿ ಸದಾಕಾಲಕ್ಕೂ ವಿರಾಜಿಸುತ್ತಿದ್ದು ಇಂದೂ ಕೂಡ ಅದನ್ನು ತಮಿಳುನಾಡಿನ ಪ್ರತಿಯೊಂದು ಗ್ರಾಮದಲ್ಲಿಯೂ ಮತ್ತು ನಗರದಲ್ಲಿಯೂ ಅನನ್ಯಭಕ್ತಿಯಿಂದ ತಮಿಳರು ಪಠಿಸುತ್ತಾರೆ. ಕಂಬನ್ ಕವಿಯು ಈ ಮೇರು ಕೃತಿಯನ್ನೇ ಅಲ್ಲದೆ ವ್ಯವಸಾಯದ ಉತ್ಕೃಷ್ಟತೆಯನ್ನು ಪ್ರಶಂಸಿಸಿ ಈರೇಳು ಪಾಡು ಎಂಬ ಗ್ರಂಥವನ್ನೂ, ಶಡಗೋಪರಾಂಡಡಿ ಎಂಬ ನಮ್ಮಾಳ್ವರನ್ನು ಸ್ತುತಿಸುವ ಗ್ರಂಥವನ್ನು ರಚಿಸಿದವನೂ ಇವನೇ ಎಂದು ಹೇಳಲಾಗಿದೆ.

ಆಧ್ಯಾತ್ಮಿಕ ಕಥಾವಸ್ತುಗಳನ್ನು ಆಧಾರವಾಗಿಟ್ಟುಕೊಂಡು ರಚಿಸಲ್ಪಟ್ಟ ಪುರಾಣಗಳ ರಚನೆಯೇ ಅಲ್ಲದೆ ಭಕ್ತಿ ಪ್ರಧಾನವಾದ ಸಾಹಿತ್ಯ ಕೃತಿಗಳ ರಚನೆಯೂ ಈ ಕಾಲದಲ್ಲಾಯಿತು. ಈ ಕಾಲದಲ್ಲಿ ಅಸಂಖ್ಯಾತ ದೇವಾಲಯಗಳು ನಿರ್ಮಿತವಾದವು. ಅವುಗಳಿಗೆ ಸಂಬಂಧಿಸಿದಂತೆ ಭಕ್ತಿಪ್ರದವಾದ ಕೀರ್ತನೆಗಳು ರಚಿತವಾದವು. ಅವುಗಳಲ್ಲಿ ವಿವಿಧ ದೇವರುಗಳನ್ನು ಕುರಿತು ವಿವಿಧ ಕವಿಗಳು ರಚಿಸಿ ಹಾಡಿದ ತಿರುವಿಶೈಪ್ಪಗಳ್ ಮುಖ್ಯ ವಾದವುಗಳು, ಹನ್ನೊಂದನೆ ಶತಮಾನಕ್ಕೆ ಸೇರಿದ ಕರೂರ್‌ದೇವರ್ ಎಂಬುವನು ಭಕ್ತಿಯ ಬಗೆಗೆ ಭಕ್ತಿಗೀತೆಗಳನ್ನು ರಚಿಸಿದನು. ಇದೇ ರೀತಿಯಲ್ಲಿ ಹೆಚ್ಚು ಕಡಿಮೆ ಇದೇ ಕಾಲಕ್ಕೆ ಸೇರಿದ ನಂಬಿ ಅಂಡಾರ್ ನಂಬಿ ಎಂಬವನು ತನ್ನ ಕಾಲದವರೆಗಿನ ಶೈವ ಶಾಸ್ತ್ರವನ್ನು ಸಂಗ್ರಹಿಸಿ ಶೈವರ ಭಕ್ತಿಪ್ರದ ಸಾಹಿತ್ಯವನ್ನು ಹತ್ತು ಗ್ರಂಥಗಳಲ್ಲಿ ಪ್ರಕಟಿಸಿದನು. ಈ ಕಾಲದ ಭಕ್ತಿ ಪೂರ್ಣ ಸಾಹಿತ್ಯದಲ್ಲಿ ಅತ್ಯಂತ ಶ್ರೇಷ್ಠ ಕೃತಿಯೆಂದು ಮತ್ತು ತಮಿಳಿನ ಐದನೆಯ ವೇದವೆಂದು ಪರಿಗಣಿಸಲಾಗಿರುವ 'ಪೆರಿಯ ಪುರಾಣ'ವನ್ನು ಶೇಕ್ಕಿಳಾರ್ ಎಂಬ ಕವಿಯು ರಚಿಸಿದನು. ಕಂಬರಾಮಾಯಣದಂತೆ ಈ ಗ್ರಂಥವೂ ಸಹ ತಮಿಳರಿಗೆ ಒಂದು ಧಾರ್ಮಿಕ ಗ್ರಂಥವೇ ಆಗಿದ್ದು ಅವರು ಅದನ್ನು ಅತ್ಯಂತ ಭಕ್ತಿಯಿಂದ ಓದುತ್ತಾರೆ. ರಾಮಾನುಜಾಚಾರ್ಯರನ್ನು ಕುರಿತು ಸ್ತುತಿಸುವ 'ರಾಮಾನೂಜೂ ಟ್ರಾಂಡಡಿ' ಎಂಬ ಭಕ್ತಿ ಪ್ರಧಾನವಾದ ಗ್ರಂಥವೂ ಸಹ ಈ ಕಾಲಕ್ಕೆ ಸೇರಿದುದಾಗಿದೆ.

ಧಾರ್ಮಿಕ ಮತ್ತು ಭಕ್ತಿ ವಿಷಯಗಳೇ ಅಲ್ಲದೆ ಲೌಕಿಕ ವಿಷಯಗಳನ್ನೂ ಕುರಿತ ಅನೇಕ ಗ್ರಂಥಗಳು ಈ ಕಾಲದಲ್ಲಿ ರಚಿಸಲ್ಪಟ್ಟವು. ಒಂದನೇ ಕುಲೋತ್ತುಂಗನ ಮತ್ತು ಅವನ ಮಗನ ಆಸ್ಥಾನ ಕವಿಯಾಗಿದ್ದ ಜಯಗೊಂಡಾರ್ ರಚಿಸಿದ 'ಕಳಿಂಗಟ್ಟುಪ್ಪರಣಿ' ಎಂಬ ಕೃತಿಯು ಹೆಚ್ಚು ಪ್ರಸಿದ್ಧಿಯಾದುದು. ಈ ಗ್ರಂಥವು

ಕುಲೋತ್ತುಂಗನು ಕಳಿಂಗದ ಮೇಲೆ ದಂಡೆತ್ತಿ ಹೋಗಿ ಆ ಯುದ್ಧದಲ್ಲಿ ಆವನು ತೋರಿಸಿದ ಶೌರ್ಯ ಪರಾಕ್ರಮಗಳನ್ನು ಚಿತ್ರಿಸುತ್ತದೆ. ಅಂತೆಯೆ ವಿಕ್ರಮಚೋಳ, ಎರಡನೇ ಕುಲೋತ್ತುಂಗನ ಮತ್ತು ಎರಡನೇ ರಾಜರಾಜನ ಆಸ್ಥಾನ ಕವಿಯಾಗಿದ್ದ ಒಟ್ಟಕುತ್ತರ್ ಎಂಬವನು ಆವನ ಆಶ್ರಯದಾತರನ್ನು ಗುಣಗಾನ ಮಾಡಿ ರಚಿಸಿರುವ 'ಊಲ' ಎಂಬ ಕೃತಿಯು ಮತ್ತೊಂದು ಪ್ರಸಿದ್ಧ ಕೃತಿಯಾಗಿದೆ.

ಕಾವ್ಯ ರಚನೆ ಮತ್ತು ವ್ಯಾಕರಣವನ್ನು ಕುರಿತು ರಚಿತವಾದ ಗ್ರಂಥಗಳಲ್ಲಿ ಜೈನ ಧರ್ಮೀಯನಾದ ಅಮಿತಸಾಗರ ಎಂಬವನು ರಚಿಸಿದ 'ಯಪ್ಪರುಂಗಲಂ' ಮತ್ತು 'ಯಪ್ಪರುಂಗಲಕರಿಕ್ಕೈ' ಎಂಬ ಗ್ರಂಥಗಳು ತಮಿಳು ಛಂದಸ್ಸನ್ನು ಕುರಿತು ಹೇಳುವ ಪ್ರಮಾಣಬದ್ಧ ಗ್ರಂಥಗಳಾಗಿವೆ. ಮತ್ತೊಬ್ಬ ಜೈನ ಕವಿಯಾದ ಪಾವನಂದಿ ಎಂಬವನು 'ನನ್ನೂಲ್' ಎಂಬ ತಮಿಳು ವ್ಯಾಕರಣ ಕೈಪಿಡಿಯನ್ನು ಬರೆದನು. ಬುದ್ಧಮಿತ್ರ ಎಂಬ ಬೌದ್ಧಕವಿಯು ತಮಿಳು ವ್ಯಾಕರಣ, ವಾಕ್ಯರಚನೆ ಅಥವ ಅಲಂಕಾರ ಶಾಸ್ತ್ರಗಳನ್ನು ಕುರಿತು ಹೇಳುವ 'ವೀರಸೋಳಿಯಂ' ಎಂಬ ಗ್ರಂಥವನ್ನು ಹನ್ನೊಂದನೆ ಶತಮಾನದಲ್ಲಿ ರಚಿಸಿದನು.

ಚೋಳರ ತಮಿಳು ಸಾಹಿತ್ಯದ ಸ್ವರ್ಣಯುಗವು ಪ್ರಖ್ಯಾತ ವ್ಯಾಖ್ಯಾನಕಾರರ ಯುಗವೂ ಆಗಿತ್ತು. 'ತೋಳಕ್ಕಪ್ಪಿಯಂ' ಮೇಲೆ ವ್ಯಾಖ್ಯಾನವನ್ನು ಬರೆದ 'ಇಲಾಂಪುರನಾರ್', ಅಂತೆಯೆ ತೋಳಕ್ಕಪ್ಪಿಯಂನ ಕೆಲವು ಭಾಗಗಳ ಮೇಲೆ ವ್ಯಾಖ್ಯಾನಗಳನ್ನು ಬರೆದ ಸೇನ್‌ವಾರಿಯರ್, 'ಪೇರಾಶಿರಿಯರ್' ಮತ್ತು 'ನಂಚಿನಾರ್ಕಿನ್ನೆಯಾರ್' ಎಂಬುವರೂ ಕೂಡ ಈ ಕಾಲಕ್ಕೆ ಸೇರಿದವರಾಗಿದ್ದರು. ಹೀಗೆಯೆ 'ಶಿಲಪ್ಪದಿಕಾರಂ' ಮೇಲೆ ವ್ಯಾಖ್ಯಾನವನ್ನು ಬರೆದ ಅದಿಯಾರುಕ್ಕು ನಲ್ಲಾರ್, ಕುರಲ್ ಮತ್ತು ಪರಿಪಾಡಲ್ ಕೃತಿಗಳ ಮೇಲೆ ವ್ಯಾಖ್ಯಾನಗಳನ್ನು ಬರೆದ 'ಪರಿಮೋಲಳಹತ್' ಕೂಡ ಈ ಕಾಲಕ್ಕೆ ಸೇರಿದವರು. ಹೀಗೆ ಚೋಳ ಚಕ್ರವರ್ತಿಗಳ ಕಾಲದಲ್ಲಿ ಇವರೆಲ್ಲರ ಬರವಣಿಗೆಗಳಿಂದ ತಮಿಳು ಸಾಹಿತ್ಯ ಸಂಮೃದ್ಧವಾಗಿ ಬೆಳೆದು ತಮಿಳು ಸಾಹಿತ್ಯಕ್ಕೆ ಅಪಾರ ಕೊಡುಗೆಯುಸಲ್ಲಿತು.

### ವಾಸ್ತು ಶಿಲ್ಪಕಲೆ

ಚೋಳರ ದೊರೆಗಳು ದೇವಾಲಯಗಳ ನಿರ್ಮಾಣದಲ್ಲೂ ಹೆಚ್ಚಿನ ಆಸಕ್ತಿ ಹೊಂದಿದ್ದರು. ಚೋಳ ಸಂತತಿಯ ಮೊದಲಿನ ದೊರೆಗಳ ಆಳ್ವಿಕೆಯಲ್ಲಿ ಪಲ್ಲವ ಶೈಲಿ ಅಥವ ದ್ರಾವಿಡ ಶೈಲಿಯನ್ನೇ ಅನುಸರಿಸಿ ನೂರಾರು ದೇವಾಲಯಗಳು ಕಟ್ಟಲ್ಪಟ್ಟವು. ಒಂದನೇ ಆದಿತ್ಯನ ಕಾಲದಿಂದ ಹಿಡಿದು ಒಂದನೇ ರಾಜರಾಜನು ಸಿಂಹಾಸನವನ್ನೇರುವವರೆಗೆ ಕಟ್ಟಲ್ಪಟ್ಟ ದೇವಾಲಯಗಳೆಲ್ಲವೂ ದ್ರಾವಿಡ ಶೈಲಿಯಲ್ಲಿ ಕಟ್ಟಲ್ಪಟ್ಟಿದ್ದು ಪ್ರಮಾಣದಲ್ಲಿ ಚಿಕ್ಕವಾಗಿದ್ದರೂ ಸುಂದರವಾಗಿವೆ. ಸುಂದರೇಶ್ವರ, ವಿಜಯಾಲಯ ಚೋಳೇಶ್ವರ ಮತ್ತು ಕೋರಂಗನಾಥ ದೇವಾಲಯಗಳು ಇದಕ್ಕೆ ನಿದರ್ಶನಗಳಾಗಿವೆ. ಈ ದೇವಾಲಯಗಳೆಲ್ಲವೂ ಕಲ್ಲಿನಿಂದ ಕಟ್ಟಲ್ಪಟ್ಟು ಅವುಗಳ ಗೋಡೆಗಳಲ್ಲಿ ಆಳೆತ್ತರ ಪ್ರಮಾಣದ ಮೂರ್ತಿಗಳನ್ನು ಸುಂದರವಾಗಿ ಕೆತ್ತಿ ನಿಲ್ಲಿಸಿದ್ದಾರೆ. ಒಂದನೇ ರಾಜರಾಜ ಮತ್ತು ಅವನ ಮಗ ಒಂದನೇ ರಾಜೇಂದ್ರನ ಕಾಲದಲ್ಲಿ ಚೋಳರ ದೇವಾಲಯಗಳ ನಿರ್ಮಾಣ ಕಾರ್ಯವು ಪರಾಕಾಷ್ಠತೆಯನ್ನು ಮುಟ್ಟಿ

ಆದು ಚೋಳರ ಶೈಲಿಯೆಂದೇ ಕರೆಯಲ್ಪಟ್ಟಿತು. ರಾಜರಾಜನು ತಂಜಾವೂರಿನಲ್ಲಿ ಕಟ್ಟಿಸಿರುವ ರಾಜರಾಜೇಶ್ವರ ಅಥವ ಬೃಹದೇಶ್ವರ ದೇವಾಲಯವು ಚೋಳರ ವಾಸ್ತುಶಿಲ್ಪಕಲೆಯ ಮಹೋನ್ನತಿಯಾಗಿದೆ. ಈ ದೇವಾಲಯದ ಪ್ರಮುಖ ಲಕ್ಷಣವೆಂದರೆ ಗರ್ಭಗೃಹದ ಮೇಲೆ 14 ಅಂತಸ್ತುಗಳಿಂದ ಕೂಡಿದ 190 ಅಡಿ ಎತ್ತರವಿರುವ ಸುಂದರವಾದ ವಿಮಾನ. ಈ ಬೃಹತ್ ವಿಮಾನದ ನಿರ್ಮಾಣದಿಂದಾಗಿ ಈ ದೇವಾಲಯದ ಸೌಂದರ್ಯವು ಇಮ್ಮಡಿಗೊಂಡಿದೆ. ಇದೇ ರೀತಿಯಲ್ಲಿ ಸುಮಾರು ಕ್ರಿ.ಶ. 1030ರಲ್ಲಿ ಒಂದನೇ ರಾಜೇಂದ್ರ ಚೋಳನಿಂದ 'ಗಂಗೈಕೊಂಡ ಚೋಳಪುರಂ'ನಲ್ಲಿ ಕಟ್ಟಲ್ಪಟ್ಟಿರುವ ಶಿವ ದೇವಾಲಯವು ಇದೇ ಶೈಲಿಗೆ ಸೇರಿರುತ್ತದೆ. ರಾಜೇಂದ್ರಚೋಳ ನಂತರ ಸಾಮ್ರಾಜ್ಯವನ್ನಾಳಿದ ಚೋಳ ದೊರೆಗಳು ಈ ಶೈಲಿಯನ್ನೇ ಮುಂದುವರಿಸಿ ಅನೇಕ ದೇವಾಲಯಗಳನ್ನು ನಿರ್ಮಿಸಿದರು. ಚೋಳರ ಕಾಲದಲ್ಲಿ ಶಿಲ್ಪ ಕಲೆಯಲ್ಲೂ ಅದ್ಭುತ ಪ್ರಗತಿಯು ಕಂಡುಬಂದಿತು. ಚೋಳರ ದೇವಾಲಯಗಳಲ್ಲಿ ಕಂಡುಬರುವ ಶಿಲಾಮೂರ್ತಿಗಳು ಬೃಹತ್ತತೆಗೆ, ಗಾಂಭೀರ್ಯಕ್ಕೆ ಮತ್ತು ಸೂಕ್ಷ್ಮವಾದ ಕೆತ್ತನೆಯ ಕೆಲಸಕ್ಕೆ ಹೆಸರುವಾಸಿಯಾಗಿವೆ. ಬೃಹದೇಶ್ವರ ದೇವಾಲಯ, ಗಂಗೈಕೊಂಡ ಚೋಳಪುರಂ ದೇವಾಲಯ, ತಿರುನೆಲ್‌ವೇಲಿಯ ತಿರುವಾಲೀಶ್ವರಂ ದೇವಾಲಯ, ಶ್ರೀನಿವಾಸನಲ್ಲೂರಿನಲ್ಲಿರುವ ಕೋರಂಗನಾಥ ದೇವಾಲಯ ಹಾಗೂ ಕುಂಭಕೋಣಂನಲ್ಲಿರುವ ದೇವಾಲಯಗಳಲ್ಲಿರುವ ಶಿವ, ಪಾರ್ವತಿ, ವಿಷ್ಣು, ಲಕ್ಷ್ಮಿ, ಸರಸ್ವತಿ, ಹನುಮಾನ್ ಮೊದಲಾದ ದೇವರುಗಳ ನೂರಾರು ವಿಗ್ರಹಗಳು ಸೌಂದರ್ಯೋಪಾಸಕರನ್ನು ವಿಸ್ಮಯಗೊಳಿಸುತ್ತವೆ.

ಚೋಳರ ಕಾಲದಲ್ಲಿ ಕಂಚಿನಲ್ಲಿ ವಿಗ್ರಹಗಳನ್ನು ಮತ್ತು ಕಲಾಕೃತಿಗಳನ್ನು ಮಾಡುವ ಕಲೆಯು ಪರಿಪೂರ್ಣತೆಯನ್ನು ಪಡೆದಿತ್ತು. ಇವುಗಳಲ್ಲಿ ನಟರಾಜನ ವಿಗ್ರಹವು, ಲೋಹದ ಎರಕದ ಕೆಲಸದಲ್ಲಿ ಶಿಲ್ಪಿಗಳು ಗಳಿಸಿದ್ದ ಅಪಾರ ನಿಪುಣತೆಗೆ ಚಿರಕಾಲವೂ ಸಾಕ್ಷಿಯಾಗಿದೆ. ಇಂತಹ ನೂರಾರು ವಿಗ್ರಗಳನ್ನು ಚೋಳರ ದೇವಾಲಯಗಳಲ್ಲಿ ಇಂದೂ ನೋಡಬಹುದಾಗಿದೆ. ಚೋಳರು ಚಿತ್ರಕಲೆಗೂ ಪ್ರೋತ್ಸಾಹ ಕೊಟ್ಟಿದ್ದುದಾಗಿ ತಂಜಾವೂರು ದೇವಾಲಯದ ಗೋಡೆಗಳ ಮೇಲೆ ಚಿತ್ರಿತವಾಗಿ ವರ್ಣಚಿತ್ರಗಳಿಂದ ಗೊತ್ತಾಗುತ್ತದೆ. ಒಟ್ಟಿನಲ್ಲಿ ಹೇಳುವುದಾದರೆ ಚೋಳ ಸಾಮ್ರಾಟರು ದಖನ್ನಿನಲ್ಲಿ ವಿಶಾಲವಾದ ಸಾಮ್ರಾಜ್ಯ ಸ್ಥಾಪಕರೂ, ಸಾಹಿತ್ಯಕಲೆ, ಧರ್ಮಗಳ ಪೋಷಕರೂ, ಶ್ರೇಷ್ಠ ಆಡಳಿತಗಾರರೂ ಆಗಿ ಭಾರತೀಯ ಸಂಸ್ಕೃತಿಗೆ ಶ್ಲಾಘನೀಯವಾದ ಕೊಡುಗೆಗಳನ್ನಿತ್ತಿದ್ದಾರೆ.

# ಅಧ್ಯಾಯ-14

# ಬೃಹದ್ಭಾರತ

ಭೌಗೋಳಿಕವಾಗಿ ಭಾರತವು ಏಷ್ಯಾದ ಒಂದು ಉಪಖಂಡದಂತಿದೆ. ಏಷ್ಯಾಖಂಡದ ಭೂಪಟವನ್ನು ವೀಕ್ಷಿಸಿದಾಗ ಭಾರತವು ಪೌರ್ವಾತ್ಯ ಮತ್ತು ಪಾಶ್ಚಾತ್ಯ ಜಗತ್ತಿಗೆ ಸಂಪರ್ಕವೇರ್ಪಡಿಸುವ ಸರವಳಿಯ ಕೊಂಡಿಯಂತಿದೆ. ಭೌಗೋಳಿಕವಾಗಿ ಇಂತಹ ಅನುಕೂಲ ಸ್ಥಾನವನ್ನು ಪಡೆದುಕೊಂಡಿರುವ ಭಾರತವು ಪ್ರಾಚೀನ ಕಾಲದಿಂದಲೂ ಹೊರ ಜಗತ್ತಿನೊಂದಿಗೆ ಸಂಪರ್ಕವೇರ್ಪಡಿಸಿಕೊಂಡಿರುವುದು ಭಾರತದ ಇತಿಹಾಸದ ಪುಟಗಳಲ್ಲಿ ಕಂಡುಬರುತ್ತದೆ. ಪ್ರಾಚೀನ ಕಾಲದಲ್ಲಿ ಹಲವಾರು ಜನಾಂಗಗಳು ಮುಖ್ಯವಾಗಿ ಆರ್ಯರು, ಪರ್ಶಿಯನ್ನರು, ಗ್ರೀಕರು ಶಕರು, ಪಾರ್ಥಿಯನ್ನರು, ಕುಶಾನರು, ಹೂಣರು ಮೊದಲಾದವರು ಭಾರತವನ್ನು ಪ್ರವೇಶಿಸಿ ಭಾರತದ ಇತಿಹಾಸ ಮತ್ತು ಸಂಸ್ಕೃತಿಯ ಮೇಲೆ ತಮ್ಮದೇ ಆದ ಪ್ರಭಾವವನ್ನು ಬೀರಿದ್ದಾರೆ. ಆದರೆ ಈ ಪ್ರಭಾವವು ಏಕಮುಖವಾಗಿರಲಿಲ್ಲ. ಭಾರತವು ಹಲವಾರು ಸಂಸ್ಕೃತಿಗಳ ಪ್ರಭಾವಕ್ಕೊಳಗಾಗಿ ಅನೇಕ ಅಂಶಗಳನ್ನು ತನ್ನ ಸಂಸ್ಕೃತಿಯಲ್ಲಿ ಅಳವಡಿಸಿಕೊಂಡು ಪ್ರಭಾವಿತವಾಗಿದ್ದರೂ ಅದು ನೆರೆಯ ರಾಜ್ಯಗಳ ಮೇಲೆ ತನ್ನ ಪ್ರಭಾವವನ್ನೂ ಬೀರಿ ಅಲ್ಲಿನ ಸಂಸ್ಕೃತಿಗಳನ್ನು ರೂಪುಗೊಳಿಸಿರುವುದು ಹೆಮ್ಮೆಯ ವಿಷಯ. ಸಾಹಸಿಗಳಾಗಿದ್ದ ಪ್ರಾಚೀನ ಭಾರತೀಯರು ವ್ಯಾಪಾರ ವಾಣಿಜ್ಯಗಳನ್ನರಿಸಿಕೊಂಡು ಮರುಭೂಮಿಗಳನ್ನೂ ಸಾಗರ ಸಮುದ್ರಗಳನ್ನೂ ಸಾಹಸದಿಂದ ದಾಟಿ ನಾಗರಿಕತೆಯಲ್ಲಿ ಹೆಚ್ಚು ಮುಂದುವರಿಯದಿದ್ದ ಪ್ರದೇಶಗಳಲ್ಲಿ ವಸಾಹತುಗಳನ್ನು ಸ್ಥಾಪಿಸಿದ್ದಲ್ಲದೆ ಭಾರತದ ಶ್ರೀಮಂತ ಸಂಸ್ಕೃತಿಯನ್ನೂ ಆ ಪ್ರದೇಶಗಳಲ್ಲಿ ಪ್ರಸಾರ ಮಾಡಿದರು. ಭಾರತದ ವಸಾಹತು ಮತ್ತು ಸಾಂಸ್ಕೃತಿಕ ವಿಸ್ತರಣೆಯು ಭಾರತದ ಇತಿಹಾಸದ ವೈಭವದ ಅಧ್ಯಾಯಗಳಲ್ಲೊಂದಾಗಿದೆ. ಆದರೆ ಬಹಳ ಕಾಲದವರೆಗೆ ಇದೊಂದು ಗುರುತಿಸದ ಮತ್ತು ಮರೆತುಹೋಗಿದ್ದ ಅಧ್ಯಾಯವಾಗಿದ್ದುದು ದುರದೃಷ್ಟಿ ಸಂಗತಿ. ಆದರೆ ಈಗ ಭಾರತದ ಯಾವ ಇತಿಹಸಕಾರನೂ ಇದರ ಅಧ್ಯಯನವನ್ನು ಅಲಕ್ಷಿಸುವಂತಿಲ್ಲ ಮತ್ತು ಈ ಬಗ್ಗೆ ಹೆಚ್ಚು ಹೆಚ್ಚು ಬೆಳಕನ್ನು ಚೆಲ್ಲಲು ಇತಿಹಾಸಕಾರರು ತೀವ್ರವಾಗಿ ಪ್ರಯತ್ನಿಸುತ್ತಿರುವುದು ಸಂತಸದ ಸಂಗತಿಯಾಗಿರುತ್ತದೆ.

**ಪಾಶ್ಚಾತ್ಯ ಜಗತ್ತಿನೊಂದಿಗೆ ಭಾರತದ ಸಂಪರ್ಕ**

ಪಾಶ್ಚಾತ್ಯ ಜಗತ್ತಿನೊಂದಿಗೆ ಕ್ರಿ.ಶ. ಒಂದನೆ ಶತಮಾನದವರೆಗೆ ಭಾರತದ ಸಂಪರ್ಕವನ್ನು ತಿಳಿಯಲು ನಾವು ಮುಖ್ಯವಾಗಿ ಪ್ರಾಕ್ತನ ಶಾಸ್ತ್ರಾಧಾರಗಳನ್ನು

ಅವಲಂಬಿಸಬೇಕಾಗಿದೆ. ಮೊಹೆಂಜೊದಾರೋ ಪಟ್ಟಣದ ನಿವೇಶನದ ಸಂಶೋಧನೆಗಳಿಂದ ಸಿಂಧೂ ಕಣಿವೆಯ ಜನರು ಮೆಸೂಪೊಟಾಮಿಯ ಮತ್ತು ಈಜಿಪ್ಟ್ ದೇಶಗಳೊಂದಿಗೆ ಸಂಪರ್ಕ ಹೊಂದಿದ್ದುದಾಗಿ ಕಂಡುಬರುತ್ತದೆ. ಸಿಂಧೂಕಣಿವೆಯ ನಾಗರಿಕತೆಗೆ ಸಂಬಂಧಿದಂತೆ ದೊರೆತಿರುವ ಮುದ್ರೆಗಳ ಮೇಲೆ ಕಂಡುಬರುವ ಹಡಗಿನ ಚಿತ್ರಗಳಿಂದ ಈ ದೇಶಗಳೊಂದಿಗೆ ವ್ಯಾಪಾರ ಸಂಬಂಧಗಳಿದ್ದುದಾಗಿ ಕಂಡುಬರುತ್ತದೆ. ಅಲ್ಲದೆ ಭಾರತೀಯ ಕಪಿಗಳ ಮತ್ತು ಆನೆಗಳ ಚಿತ್ರಗಳು ಈಜಿಪ್ಟಿನ ಶಾಲ್‌ಮಾನೆ ಸಾರ್‌ನಲ್ಲಿನ ಓಬೆಲಿಸ್ಕ್ ಸ್ಥಂಭಗಳ ಮೇಲೆ ಕೆತ್ತಲ್ಪಟ್ಟಿರುವುದರಿಂದ ಭಾರತ ಮತ್ತು ಈಜಿಪ್ಟ್ ದೇಶಗಳೊಂದಿಗೆ ಪ್ರಾಕ್ಚಾರಿತ್ರಿಕ ಯುಗದಲ್ಲೇ ಸಂಪರ್ಕವಿದ್ದುದು ಕಂಡುಬರುತ್ತದೆ. ಅಂತೆಯೆ ಬ್ಯಾಬಿಲಾನ್ ರಾಜ್ಯದ ಚಾಲ್ಡಿಯನ್ನರ ದೊರೆ ನೆಬುಕಾಡ್ನೆಸಾರ್‌ನು ತನ್ನ ಅರಮನೆಯ ನಿರ್ಮಾಣದಲ್ಲಿ ಉಪಯೋಗಿಸಿರುವ ಮರವು ಭಾರತದ ತೇಗದ ಮರವಾಗಿದ್ದಿತೆಂದು ಸಂಶೋಧಕರು ಅಭಿಪ್ರಾಯ ಪಟ್ಟಿರುವರು. ಋಗ್ವೇದದ ಕಾಲದ ಆರ್ಯರಿಗೆ ಸಮುದ್ರದ ಪರಿಚಯವಿದ್ದು ಸಮುದ್ರದ ಮೇಲೆ ವ್ಯಾಪಾರ ಮಾಡುತ್ತಿದ್ದುದಾಗಿ ಋಗ್ವೇದದಿಂದ ತಿಳಿದುಬರುತ್ತದೆ. ಆದ್ದರಿಂದ ಪ್ರಾಚೀನ ಕಾಲದಲ್ಲಿಯೆ ಭಾರತೀಯರು ಬೂಮಾರ್ಗ ಮತ್ತು ಸಮುದ್ರ ಮಾರ್ಗಗಳನ್ನು ಕಂಡುಕೊಂಡು ಪಾಶ್ಚಾತ್ಯ ದೇಶಗಳೊಂದಿಗೆ ವ್ಯಾಪಾರ ಮಾಡುತ್ತಿದ್ದು ತನ್ಮೂಲಕ ಸಾಂಸ್ಕೃತಿಕ ವಿನಿಮಯವನ್ನು ಏರ್ಪಡಿಸಿಕೊಂಡಿದ್ದರು.

**ಪರ್ಶಿಯಾ ಮತ್ತು ಗ್ರೀಸ್**

ಕ್ರಿ.ಪೂ. ಆರನೆ ಶತಮಾನದಲ್ಲಿ ಪಶ್ಚಿಮ ಏಷ್ಯಾದಲ್ಲಿ ತಲೆಯೆತ್ತಿದ್ದ ಸಾಮ್ರಾಜ್ಯಗಳಲ್ಲಿ ಅಕೆಮೇನಿಯನ್ ಸಾಮ್ರಾಜ್ಯವು ಹೆಚ್ಚು ಹೆಸರುವಾಸಿಯಾಗಿದ್ದು ಸಿಂಧೂನದಿಯಿಂದ ಹಿಡಿದು ಮಧ್ಯಧರಾ ಸಮುದ್ರದವರೆಗೂ ರಾಜಕೀಯ ಏಕತೆಯನ್ನು ಏರ್ಪಡಿಸಿದ್ದಿತು. ಈ ಸಾಮ್ರಾಜ್ಯವನ್ನಾಳಿದ ಸೈರಸ್ ಮತ್ತು ಡೇರಿಯಸ್ ಚಕ್ರವರ್ತಿಗಳು ಏರ್ಪಡಿಸಿದ್ದ ಸಂಚಾರ ಸೌಲಭ್ಯಗಳಿಂದ ವ್ಯಾಪಾರ ವಾಣಿಜ್ಯಗಳ ಮತ್ತು ಸಾಂಸ್ಕೃತಿಕ ಸಂಪರ್ಕಕ್ಕೆ ಹೆಚ್ಚಿನ ಅನುಕೂಲವು ದೊರಕಿದ್ದಿತು, ಭಾರತದ ಐಶ್ವರ್ಯದ ಬಗ್ಗೆ ಕೇಳಿದ್ದ ಸಾಮ್ರಾಟ ಡೇರಿಯಸ್ ಚಕ್ರವರ್ತಿಯು ಸಿಂಧೂನದಿಯ ಅನ್ವೇಷಣೆಗಾಗಿ ಸ್ಕೈಲಾಕ್ಸ್ ಎಂಬ ಗ್ರೀಕ್ ನಾವಿಕನನ್ನು ಕಳುಹಿಸಿದ್ದನು. ಡೇರಿಯಸ್ಸನು ಅಲೆಗ್ಸಾಂಡರನಿಂದ ಸೋಲಿಸಲ್ಪಟ್ಟ ಮೇಲೆ ಪರ್ಶಿಯಾ ಸಾಮ್ರಾಜ್ಯವು ಅವನತಿ ಹೊಂದಿ ಅಲೆಗ್ಸಾಂಡರನು ಅದರ ಮೇಲೆ ಡಂಡೆಯಾತ್ರೆ ಕೈಗೊಂಡು ಅದರ ಮೇಲೆ ಅಧಿಕಾರವನ್ನು ಸ್ಥಾಪಿಸಿದನು. ಅನಂತರ ಅಲೆಗ್ಸಾಂಡರನು ಭಾರತದ ಮೇಲೆ ದಂಡಯಾತ್ರೆ ಕೈಗೊಂಡು ವಾಯುವ್ಯ ಭಾರತದ ಮೇಲೆ ತನ್ನ ಅಧಿಕಾರವನ್ನು ಸ್ಥಾಪಿಸಿದಲ್ಲದೆ ಗ್ರೀಕರ ನೆಲಸಿಕೆಯನ್ನು ಆರಂಭಿಸಿದನು. ಇದರಿಂದ ಭಾರತ ಮತ್ತು ಗ್ರೀಸ್ ದೇಶಗಳ ನಡುವೆ ಸಂಪರ್ಕವೇರ್ಪಟ್ಟಿತು. ಈ ರೀತಿಯ ಸಂಪರ್ಕದ ಬಗೆಗೆ ಗ್ರೀಕ್ ಇತಿಹಾಸಕಾರರಾದ ಹೆರೊಡೋಟಸ್, ಸ್ಟ್ರಾಬೋ ಮತ್ತು ಅರಿಯನ್‌ರ ಕೃತಿಗಳಲ್ಲೇ ಅಲ್ಲದೆ ಚಂದ್ರಗುಪ್ತಮೌರ್ಯನ ಆಸ್ಥಾನಕ್ಕೆ ರಾಯಭಾರಿಯಾಗಿ ಬಂದಿದ್ದ ಮೆಗಾಸ್ತನೀಸನ ಬರವಣಿಗೆಯಲ್ಲೂ ಅನೇಕ ಮಾಹಿತಿಗಳು ದೊರೆಯುತ್ತವೆ. ಭಾರತೀಯರು ಪರ್ಶಿಯನ್ನರು ಮತ್ತು ಗ್ರೀಕರಿಂದಲೂ ಹಾಗೂ ಗ್ರೀಕರೂ ಭಾರತೀಯರಿಂದಲೂ ಪರಸ್ಪರ, ಪ್ರಭಾವಿತರಾಗಿರುವ ವಿಷಯವನ್ನು ಈ ಹಿಂದೆಯೆ ಪ್ರಸ್ತಾಪಿಸಲಾಗಿದೆ. (ಏಳನೇ ಅಧ್ಯಾಯ ನೋಡಿ).

## ಭಾರತ ಮತ್ತು ರೋಂ

ಕ್ರಿ.ಶಕದ ಆರಂಭದಿಂದಲೂ ಭಾರತ ರೋಮನ್ ಸಾಮ್ರಾಜ್ಯಗಳೊಂದಿಗೆ ವ್ಯಾಪಾರ ಸಂಪರ್ಕಗಳಿದ್ದವು. ಅನಾಮಧೇಯ ಗ್ರೀಕ್ ನಾವಿಕನೊಬ್ಬನಿಂದ ಬರೆಯಲ್ಪಟ್ಟಿರುವ 'ದಿ ಪೆರಿಪ್ಲಸ್ ಆಫ್ ದಿ ಇರಿತರೇನಿಯನ್ ಸಿ' ಕೃತಿಯಲ್ಲೂ ಹಾಗೂ ರೋಮನ್ ಇತಿಹಾಸಕಾರನಾದ ಪ್ಲಿನಿಯ ಬರವಣಿಗೆಯಲ್ಲೂ ಈ ಬಗ್ಗೆ ಸಾಕಷ್ಟು ಮಾಹಿತಿಗಳು ದೊರೆಯುತ್ತವೆ, ಭಾರತದ ರೇಷ್ಮೆ ಹತ್ತಿಬಟ್ಟೆ ಆಭರಣಗಳು. ಪ್ರಶಸ್ತ ಶಿಲೆಗಳು ಸುಗಂಧ ದ್ರವ್ಯಗಳು, ಮೊದಲಾದ ಭೋಗವಸ್ತುಗಳಿಗೆ ಹೆಚ್ಚಿನ ಬೇಡಿಕೆಯು ರೋಂನಲ್ಲಿದ್ದು ದಾಗಿಯೂ ಮತ್ತು ಇವುಗಳಿಗಾಗಿ ರೋಮಿನಿಂದ ಅಪಾರ ಹಣವು ಹರಿದು ಬರುತ್ತಿದ್ದಿತೆಂದು ಪ್ಲಿನಿ ಹೇಳುತ್ತಾನೆ. ಮೇಲಾಗಿ ದಕ್ಷಿಣ ಭಾರತದ ಭಾಗಗಳಲ್ಲಿ ರೋಮನ್ ನಾಣ್ಯಗಳು ದೊರೆತಿದ್ದು ಈ ಅಂಶವನ್ನು ದೃಢೀಕರಿಸುತ್ತವೆ. ದಕ್ಷಿಣ ಭಾರತದಲ್ಲಿ ರೋಮಿನ ವರ್ತಕರು ವಾಸಿಸುತ್ತಿದ್ದರೆಂದು ಸೀವೆಲ್ ಹೇಳುತ್ತಾನೆ. ಸಂಘಂ ಸಾಹಿತ್ಯದಲ್ಲೂ ಯವನರ ಬಗ್ಗೆ ಪ್ರಸ್ತಾಪ ಮಾಡಲಾಗಿದೆ. ಭಾರತದ ರಾಜರುಗಳು ಸಹರೋಮಿಗೆ ವ್ಯಾಪಾರದ ನಿಯೋಗಗಳನ್ನು ಕಳುಹಿಸಿದ್ದರು, ಭಾರತ ಮತ್ತು ರೋಮ್ ದೇಶಗಳ ನಡುವಿನ ವ್ಯಾಪಾರ ಸಂಬಂಧಗಳು ಅರಬ್ಬರ ಸಾಮ್ರಾಜ್ಯ ಸ್ಥಾಪನೆಯಾಗುವವರೆಗೂ ಮುಂದುವರಿದಿದ್ದವು. ಅನಂತರ ಭಾರತ ಮತ್ತು ಪಾಶ್ಚಾತ್ಯ ರಾಷ್ಟ್ರಗಳೊಂದಿಗೆ ಇದ್ದ ನೇರವಾದ ವ್ಯಾಪಾರ ಸಂಪರ್ಕವು ಕಡಿದು ಹೋಗಿ ವ್ಯಾಪಾರವು ಅರಬ್ಬರ ಕೈಸೇರಿತು. ವ್ಯಾಪಾರ ಸಂಪರ್ಕಗಳು ಸಾಂಸ್ಕೃತಿಕ ವಿನಿಮಯಕ್ಕೂ ಅವಕಾಶಮಾಡಿಕೊಟ್ಟವು. ಚಾಲ್ಡಿಯನ್ನರ ಖಗೋಳ ಶಾಸ್ತ್ರವಾಗಲೀ ಬ್ಯಾಬಿಲೋನಿಯನ್ನರ ತೂಕ ಮತ್ತು ಅಳತೆಗಳಾಗಲೀ ಅಥವಾ ಸೆಮೆಟಿಕ್ ಭಾಷೆಯ ಪ್ರಭಾವವಾಗಲೀ ಭಾರತೀಯರ ಮೇಲೆ ಎಷ್ಟರ ಮಟ್ಟಿನ ಪ್ರಭಾವ ಬೀರಿದೆಯೆಂಬುದು ಚರ್ಚಾಸ್ಪದ ವಿಷಯವಾಗಿದೆ. ಅಂತೆಯೆ ಭಾರತೀಯರ ಕಲೆ, ಧರ್ಮ, ತತ್ವಶಾಸ್ತ್ರ ಮತ್ತು ಸಾಹಿತ್ಯದ ಮೇಲೆಗ್ರೀಕರ ಪ್ರಭಾವವೂ ವಿವಾದಾಸ್ಪದ ವಿಷಯವಾಗಿದೆ. ಕ್ರಿ.ಶ. ಒಂದನೇ ಶತಮಾನದಲ್ಲಿ ಕ್ರೈಸ್ತ ಮತವು ಸೈಂಟ್‌ಥಾಮಸ್ ಮೂಲಕ ಭಾರತವನ್ನು ಪ್ರವೇಶಿಸಿತು. ಅಂತೆಯೆ ಭಾರತವುಕೂಡತನ್ನ ಪ್ರಭಾವವನ್ನು ಬೀರಿತು. ಭಾರತೀಯರ ಗಣಿತಶಾಸ್ತ್ರ ಖಗೋಳಶಾಸ್ತ್ರ ಮತ್ತು ಔಷಧಿಗಳ ಬಗೆಗಿನ ಹಲವಾರು ವಿಷಯಗಳು ಅರಬ್ಬರ ಮೂಲಕ ಯೂರೋಪಿಗೆ ಪರಿಚಯಿಸಲ್ಪಟ್ಟವು.

## ಮಧ್ಯ ಏಷ್ಯ

ಮಧ್ಯ ಏಷ್ಯಾ ಮತ್ತು ಭಾರತಗಳ ನಡುವೆ ಬಹುದೊಡ್ಡ ಪರ್ವತ ಪಂಕ್ತಿಗಳಿದ್ದರೂ ಮಧ್ಯ ಏಷ್ಯಾ ರಾಜ್ಯಗಳು ಭಾರತೀಯ ಸಂಸ್ಕೃತಿಯ ಪ್ರಭಾವಕೊಳಗಾಗಿದ್ದುದಾಗಿ ಪ್ರಖ್ಯಾತ ಭೂಸಂಶೋದನ ಶಾಸ್ತ್ರಜ್ಞರಾದ ಸರ್ ಅರುಲ್ ಸ್ಟೈನ್‌ರ ಸಂಶೋಧನೆಗಳಿಂದ ಸ್ಪಷ್ಟಪಟ್ಟಿದೆ. ಅಶೋಕ ಚಕ್ರವರ್ತಿಯು, ಬೌದ್ಧಧರ್ಮ ಪ್ರಸಾರಕ್ಕಾಗಿ ಧರ್ಮ ಪ್ರಸಾರಕರನ್ನು ಕಳುಹಿಸಿದ್ದನು. ತರುವಾಯ ಮಧ್ಯ ಏಷ್ಯಾಕ್ಕೆ ಸೇರಿದ ಕುಶಾನರು ಭಾರತದ ಮೇಲೆ ಧಾಳಿ ಮಾಡಿ ತಮ್ಮ ರಾಜ್ಯಸ್ಥಾಪನೆ ಮಾಡಿದ ಮೇಲೆ ಮಧ್ಯ ಏಷ್ಯಾ ಮತ್ತು ಭಾರತಗಳ ನಡುವೆ ಸಾಂಸ್ಕೃತಿಕ ಸಂಪರ್ಕಗಳು ವೃದ್ಧಿಗೊಂಡವು. ಕಾನಿಷ್ಕ ಮೊದಲಾದ ಕುಶಾನರ ದೊರೆಗಳು ಬೌದ್ಧ ಮತಾವಲಂಬಿಗಳಾದುದಲ್ಲದೆ ಬೌದ್ಧಮತವನ್ನು ಮಧ್ಯ ಏಷ್ಯಾದ ಅನಾಗರಿಕ ಜನಾಂಗಗಳಲ್ಲೂ ಪ್ರಸಾರವಾಗುವಂತೆ ಮಾಡಿದರು. ಕ್ಯಾಷ್‌ಘರ್, ಯಾರ್ಕಂಡ್, ಕೊಟಾನ್ ಮತ್ತು ಕುಚಿ

ಬೌದ್ಧಧರ್ಮದ ಪ್ರಮುಖ ಕೇಂದ್ರಗಳಾಗಿದ್ದವು. ಕೊಟಾನ್‌ನಲ್ಲಿದ್ದ ಬೌದ್ಧರ ಗೋಮತಿ ಸಂಘರಾಮವು ವಿದ್ಯೆಯ ಕೇಂದ್ರವೂ ಆಗಿದ್ದಿತು. ಬೌದ್ಧಮತವು ಅಲ್ಲಿನ ಜನರ ಒರಟು ಸ್ವಭಾವವನ್ನು ಮೃದುಗೊಳಿಸುವುದರಲ್ಲಿ ಹೆಚ್ಚಿನ ಪಾತ್ರವಹಿಸಿತು. ಮುಂದಿನ ಶತಮಾನಗಳಲ್ಲಿ ಮಧ್ಯ ಏಷ್ಯಾದ ಜನರು ಇಸ್ಲಾಂ ಧರ್ಮಕ್ಕೆ ಮತಾಂತರಗೊಂಡರೂ ಕಂದಾಚಾರ ಪದ್ಧತಿಗಳಿಂದ ಕೂಡಿದ್ದ ಇಲ್ಲಿನ ಜನರ ಧರ್ಮವನ್ನು ಬೌದ್ಧಮತವು ಸುಧಾರಿಸಿದ್ದು ಇಸ್ಲಾಂ ಧರ್ಮದ ಪ್ರಸಾರಕ್ಕೆ ಮಾರ್ಗವನ್ನು ಸುಗಮವಾಗಿಸಿತ್ತು.

**ಆಫ್ಘಾನಿಸ್ತಾನ**

ಪ್ರಾಚೀನ ಕಾಲದಲ್ಲಿ ಆಫ್ಘಾನಿಸ್ಥಾನವು ವ್ಯವಾಹಾರಿಕ ದೃಷ್ಟಿಯಲ್ಲಿ ಬಾರತದ ಭಾಗವೇ ಆಗಿದ್ದಿತು. ಆಫ್ಘಾನಿಸ್ಥಾನದ ಮೇಲಿನ ಆಕ್ರಮಣವನ್ನು ಗ್ರೀಕರು ಭಾರತದ ಮೇಲಿನ ಆಕ್ರಮಣವೆಂದೇ ಬಾವಿಸಿದ್ದುದಾಗಿ ಗ್ರೀಕರ ಬರವಣಿಗೆಗಳಿಂದ ತಿಳಿದು ಬರುತ್ತದೆ. ಮೇಲಾಗಿ ಭಾರತ ಮತ್ತು ಚೀನಾಕ್ಕೂ ಹಾಗೂ ಭಾರತ ಮತ್ತು ಪಶ್ಚಿಮ ರಾಷ್ಟ್ರಗಳಿಗೂ ಇದ್ದ ಭೂಮಾರ್ಗವು ಆಫ್ಘಾನಿಸ್ಥಾನದ ಮೂಲಕ ಹಾದುಹೋಗುತ್ತಿದ್ದುದರಿಂದ ಆಫ್ಘಾನಿಸ್ಥಾನವು ಭಾರತದ ಸಂಸ್ಕೃತಿಯ ಪ್ರಭಾವಕ್ಕೊಳಗಾಗಿದ್ದುದರಲ್ಲಿ ಸಂಶಯವಿಲ್ಲ. ಆಫ್ಘಾನಿಸ್ಥಾನದ ಬಾಮಿಯನ್ ಮತ್ತು ಅದರ ಸುತ್ತಮುತ್ತಲ ಪ್ರದೇಶದಲ್ಲಿ ನಡೆಸಿದ ಸಂಶೋಧನೆಗಳಿಂದ ಬೌದ್ಧ ಕಲೆಯ ಹಲವಾರು ಸ್ಮಾರಕಗಳು ಬೆಳಕಿಗೆ ಬಂದಿವೆ. ಆಫ್ಘಾನಿಸ್ಥಾನದಲ್ಲಿ ಬೌದ್ಧಮತವು ನೆಲಸಿದ್ದ ಸಮಯದಲ್ಲಿ ಬೌದ್ಧರ ವಿಹಾರಗಳು ಭಾರತೀಯ ಸಂಸ್ಕೃತಿಯ ಹಾಗೂ ಅಧ್ಯಯನದ ಕೇಂದ್ರಗಳಾಗಿದ್ದು ವಿವಿಧ ಬುಡಕಟ್ಟುಗಳಿಗೆ ಸೇರಿದ್ದ ಲಕ್ಷಾಂತರ ಅಫ್‌ಘನ್ನರ ಮೇಲೆ ತಮ್ಮ ಪ್ರಭಾವವನ್ನು ಬೀರಿದ್ದವು.

**ದೂರಪ್ರಾಚ್ಯ**

ಚೀನಾದಲ್ಲಿ ಭಾರತದ ಸಂಸ್ಕೃತಿಯ ಪ್ರಸಾರವು ಬಹಳಮಟ್ಟಿಗೆ ಬೌದ್ಧಮತ ಪ್ರಸಾರದಿಂದ ಆರಂಭವಾಯಿತು. ಚೀನೀಯರ ಸಂಸ್ಕೃತಿಯು ಮುಖ್ಯವಾಗಿ ಕನ್‌ಫ್ಯೂಸಿಯಾನಿಸಂ, ಟವೋಯಿಸಂ ಮತ್ತು ಬೌದ್ಧ ಧರ್ಮಗಳಿಂದ ರೂಪುಗೊಂಡಿದೆ. ಚೀನಾದಲ್ಲಿ ಬೌದ್ಧಮತದ ಇತಿಹಾಸವು ಹಾನ್ ಸಂತತಿಯ ಮಿಂಗ್-ಟಿ ಚಕ್ರವರ್ತಿಯ ಆಳ್ವಿಕೆಯ ಕಾಲದಿಂದ ಆರಂಭವಾದುದಾಗಿ ಕಂಡುಬರುತ್ತದೆ. ಬೌದ್ಧಮತ ಪ್ರಸಾರಕ್ಕಾಗಿ ಚೀನಾಕ್ಕೆ ಹೋದ ಪ್ರಸಾರಕರಲ್ಲಿ ಧರ್ಮರಕ್ಷ ಮತ್ತು ಕಶ್ಯಪಮಾತಂಗ ಮೊಟ್ಟ ಮೊದಲಿಗರು. ಅವರು ತಮ್ಮ ಜೊತೆಯಲ್ಲಿ ಬೌದ್ಧರ ಪವಿತ್ರ ಗ್ರಂಥಗಳನ್ನೂ ಮತ್ತು ಅವಶೇಷಗಳನ್ನೂ ತೆಗೆದುಕೊಂಡು ಹೋದರು. ಚೀನಾದ ಮಣ್ಣಿನ ಮೇಲೆ ಕಟ್ಟಲ್ಪಟ್ಟ ಬೌದ್ಧ ಸಂಘರಾಮದಲ್ಲಿ 'ಶ್ವೇತಾಶ್ವಸಂಘರಾಮ'ವು ಮೊಟ್ಟ ಮೊದಲನೆಯದಾಗಿದೆ. ಭಾರತೀಯ ಬೌದ್ಧ ಸಂನ್ಯಾಸಿಗಳು ಚೀನಾದಲ್ಲಿ ನೆಲೆಸಿ ಸಂಸ್ಕೃತ ಭಾಷೆಯಲ್ಲಿದ್ದ ಬೌದ್ಧ ಗ್ರಂಥಗಳನ್ನು ಚೀನೀ ಭಾಷೆಗೆ ತರ್ಜುಮೆಗೊಳಿಸುವ ಕಾರ್ಯವನ್ನು ಆರಂಭಿಸಿದರು. ಕ್ರಿ.ಶ. ಒಂದನೇ ಶಥಮಾನದಿಂದ ಕ್ರಿ.ಶ. ಹತ್ತನೆ ಶತಮಾನದ ಅವಧಿಯಲ್ಲಿ ಅರವತ್ತಕ್ಕೂ ಹೆಚ್ಚು ಬೌದ್ಧ ವಿದ್ವಾಂಸರು ಚೀನಾಕ್ಕೆ ಹೋಗಿ ಸುಮಾರು ಐದುನೂರಕ್ಕೂ ಹೆಚ್ಚು ಬೌದ್ಧ ಗ್ರಂಥಗಳನ್ನು ಚೀನೀ ಭಾಷೆಗೆ ತರ್ಜುಮೆ ಮಾಡಿದರು. ಆದರೆ ಈ ಒಂದು ಮಹಾಕೆಲಸವು ಸುಲಭ ಸಾಧ್ಯವಾಗಿರಲಿಲ್ಲ. ಭಾರತೀಯ ವಿದ್ವಾಂಸರು ಚೀನೀ ಭಾಷೆಯನ್ನು ಕಲಿತು ಪರಿಶ್ರಮ ಪಡೆದ ನಂತರ ಭಾಷಾಂತರ ಕಾರ್ಯವನ್ನು ಆರಂಭಿಸಿ ಚೀನೀ ವಿದ್ವಾಂಸರ

ಮೆಚ್ಚುಗೆಗಳಿಸಿದರು. ಇಂತಹ ವಿದ್ವಾಂಸರುಗಳಲ್ಲಿ ಕುಮಾರ ಜೀವ, ಪಾರಮಾರ್ಥ ಮತ್ತು ಗುಣವರ್ಮರ ಹೆಸರುಗಳು ಚೀನೀಯರ ಬೌದ್ಧಮತದ ಇತಿಹಾಸದಲ್ಲಿ ಗೌರಮಯುತವಾದ ಸ್ಥಾನವನ್ನು ಪಡೆದುಕೊಂಡಿವೆ. ಇದಲ್ಲದೆ ಭಾರತೀಯ ವಿದ್ವಾಂಸರುಗಳಾದ ಜಿನಗುಪ್ತ, ಜ್ಞಾನಭದ್ರ, ಜಿನಸೇನ, ಧರ್ಮಗುಪ್ತ, ಬೋಧಿರುಚಿ ಮತ್ತು ಶುಭಕರಸಿಂಹ ಮೊದಲಾದವರು ಬೌದ್ಧಮತದ ಬಗ್ಗೆ ಮಾಡಿದ ವ್ಯಾಖ್ಯಾನಗಳು ಚೀನೀಯರ ಬೌದ್ಧಿಕ ಮತ್ತು ಸಾಂಸ್ಕೃತಿಕ ಜೀವನದ ಮೇಲೆ ತಮ್ಮ ಪ್ರಭಾವವನ್ನು ಬೀರಿದವು. ಬೌದ್ಧ ವಿಹಾರಗಳು ಮತ್ತು ದೇವಾಲಯಗಳು ಚೀನಾದ ವಿವಿಧ ಭಾಗಗಳಲ್ಲಿ ನಿರ್ಮಿತವಾದವು ಮತ್ತು ಅವುಗಳು ವಿದ್ಯೆಯ ಕೇಂದ್ರಗಳಾದವು. ಅವುಗಳಲ್ಲಿ ಚಂಗ್-ನಗನ್ ಮತ್ತು ಲೊಯಾಂಗ್ ಬೌದ್ಧ ವಿಹಾರಗಳು ಪ್ರಸಿದ್ಧವಾದವುಗಳು. ಬೌದ್ಧಮತವು ಚೀನೀಯರ ವಾಸ್ತುಶಿಲ್ಪ ಮತ್ತು ಶಿಲ್ಪಕಲೆಯ ಮೇಲೆ ತನ್ನ ಪ್ರಭಾವವನ್ನು ಬೀರಿತು. ಚೀನೀಯರ ಸ್ಮಾರಕಗಳಲ್ಲಿ ಪ್ರಮುಖವಾಗಿ ಕಂಡುಬರುವ ಪಗೋಡವು ಭಾರತೀಯರ ಸ್ಮಾರಕಗಳಲ್ಲಿನ ಗೋಪುರದ ಚೀನೀಯರ ರೂಪಾಂತರವಾಗಿದೆ. ಒಂದು ಸಾವಿರ ಬೌದ್ಧರ ಗುಹಾಲಯವಿರುವ ಟುನ್-ಹುವಾಂಗ್‌ನ ಕಲೆಯಲ್ಲಿ ಭಾರತೀಯ ಪ್ರಭಾವವು ಕಂಡುಬರುತ್ತದೆ. ವಾಸ್ತುಶಿಲ್ಪದಂತೆ ಸಂಸ್ಕೃತ ಭಾಷೆಯೂ ಮತ್ತು ಸಾಹಿತ್ಯವೂ ಚೀನೀಯರ ಭಾಷೆಯ ಮತ್ತು ಸಾಹಿತ್ಯದ ಬೆಳವಣಿಗೆಯ ಮೇಲೆ ಮಹತ್ವಪೂರ್ಣ ಪ್ರಭಾವವನ್ನು ಬೀರಿದೆ. ಭಾರತೀಯರ ಈ ಕೊಡುಗೆಗೆ ಪ್ರತಿಯಾಗಿ ಚೀನಾವು ಫಾಹಿಯಾನ್, ಹ್ಯೂಯನ್‌ತ್ಸಾಂಗ್ ಮತ್ತು ಈತ್ಸಿಂಗ್ ಎಂಬ ಮೂವರು ಸುಪ್ರಸಿದ್ಧ ಯಾತ್ರಿಕರನ್ನು ಭಾರತಕ್ಕೆ ಕಳುಹಿಸಿಕೊಟ್ಟಿದ್ದಿತು. ಈ ಮೂವರ ಬರವಣಿಗೆಗಳಿಂದ ಕ್ರಿ.ಶ. 5ನೇ ಶತಮಾನದಿಂದ ಕ್ರಿ.ಶ. 8ನೇ ಶತಮಾನದ ಅವಧಿಯಲ್ಲಿನ ಭಾರತೀಯರ ಸಾಮಾಜಿಕ ಆರ್ಥಿಕ ಮತ್ತು ಧಾರ್ಮಿಕ ಸ್ಥಿತಿಗಳ ಬಗ್ಗೆ ತಿಳಿಯಲು ಅಮೂಲ್ಯ ವಿಷಯಗಳು ಸಿಗುತ್ತವೆ. ಚೀನಾದ ಮೂಲಕ ಕೊರಿಯ ಮತ್ತು ಜಪಾನ್ ರಾಜ್ಯಗಳೂ ಭಾರತೀಯ ಸಂಸ್ಕೃತಿಯ ಪ್ರಭಾವಕ್ಕೊಳಗಾದವು. ಈ ದೇಶಗಳಲ್ಲಿನ ಕಲೆ, ಸಾಹಿತ್ಯ ಮತ್ತು ದಾರ್ಶನಿಕತೆಯ ಮೇಲೆ ಭಾರತೀಯ ಸಂಸ್ಕೃತಿಯು ಅಚ್ಚಳಿಯದ ಪ್ರಭಾವವನ್ನು ಬೀರಿತು.

**ಟಿಬೆಟ್**

ಪ್ರಾಚೀನ ಕಾಲದಲ್ಲಿ ಟಿಬೆಟ್ ಒಂದು ಸ್ವತಂತ್ರ ರಾಜ್ಯವಾಗಿತ್ತು. ಈ ರಾಜ್ಯವು ಭೌಗೋಳಿಕವಾಗಿ ಭಾರತ ಮತ್ತು ಚೀನಾಗಳಿಗೆ ನಡುವೆ ಇರುವುದರಿಂದ ಬೌದ್ಧರ ಕಾಲದಲ್ಲಿ ಬೌದ್ಧಮತದ ಪ್ರಭಾವದಿಂದ ತಪ್ಪಿಸಿಕೊಳ್ಳಲಾಗಲಿಲ್ಲ. ಟಿಬೆಟ್ಟಿನಲ್ಲಿ ಭಾರತೀಯ ಸಂಸ್ಕೃತಿಯ ಪ್ರಸಾರವು ಟಿಬೆಟಿಯನ್ನರ ದೊರೆ ಸ್ರೊಂಗ್‌ಸೆನ್ ಗಾಂಪೊ ಬೌದ್ಧ ಮತಕ್ಕೆ ಮತಾಂತರಗೊಂಡಂದಿನಿಂದ ಆರಂಭವಾಯಿತು. ಕ್ರಿ.ಶ. ಏಳನೇ ಶತಮಾನದಲ್ಲಿ ಆಳುತ್ತಿದ್ದ ಇವನು ಬೌದ್ಧ ಮತದಲ್ಲಿ ಹೆಚ್ಚಿನ ನಿಷ್ಠೆಯನ್ನು ಹೊಂದಿದ್ದ ತನ್ನ ಇಬ್ಬರು ರಾಣಿಯರಿಂದ ಬೌದ್ಧಮತಕ್ಕೆ ಮತಾಂತರಗೊಂಡು ಟಿಬೆಟ್ಟಿನಲ್ಲಿ ಬೌದ್ಧಮತವು ಶೀಘ್ರವಾಗಿ ಹರಡಲು ಕಾರಣನಾದನು. ಅಲ್ಲದೆ ತೋಮಿ ಸಂಭೋತ ಎಂಬವನನ್ನು ಭಾರತಕ್ಕೆ ಕಳುಹಿಸಿದನು. ಭಾರತಕ್ಕೆ ಬಂದ ಇವನು ಮಗಧದಲ್ಲಿ ಅಧ್ಯಯನ ಮಾಡಿ ಹಿಂದಿರುಗಿ ಹೋದ ನಂತರ ಭಾರತೀಯರ ವರ್ಣಮಾಲೆಯನ್ನು ಟಿಬೆಟಿಯನ್ ಭಾಷೆಗೆ ಅಳವಡಿಸಿದನೆಂದು ಪ್ರತೀತಿಯಿದೆ. ಇದಲ್ಲದೆ ಬೌದ್ಧ ಗ್ರಂಥಗಳನ್ನು ಟಿಬೆಟಿಯನ್ ಭಾಷೆಗೆ ಭಾಷಾಂತರಿಸುವ ಕಾರ್ಯವು ಆರಂಭವಾಗಿ ಅದು ಅನೇಕ ಶತಮಾನಗಳ ಕಾಲ ಅನೂಚಾನವಾಗಿ ಮುಂದುವರಿದು

ಧಾರ್ಮಿಕ, ದಾರ್ಶನಿಕ ವಿಷಯಗಳನ್ನೊಳಗೊಂಡ ನೂರಾರು ಗ್ರಂಥಗಳು ಭಾಷಾಂತರಿಸಲ್ಪಟ್ಟವು. ಈ ಒಂದು ಕೆಲಸದಲ್ಲಿ ಭಾರತೀಯ ವಿದ್ವಾಂಸರು ಟಿಬೆಟ್ಟಿಗೆ ಹೋಗಿ ಸಹಕರಿಸಿದರು. ಅಂತೆಯೆ ನೂರಾರು ವಿದ್ಯಾರ್ಥಿಗಳು ವಿದ್ಯಾರ್ಜನೆಗಾಗಿ ಭಾರತಕ್ಕೆ ಬಂದು ಬೌದ್ಧರ ವಿಶ್ವವಿದ್ಯಾನಿಲಯಗಳಾಗಿದ್ದ ನಳಂದ, ವಿಕ್ರಮಶೀಲ, ಓದಾಂತ ಪುರಿ, ಜಗದ್ದಲ ವಿಶ್ವವಿದ್ಯಾನಿಲಯಗಳಲ್ಲಿ ಅಧ್ಯಯನ ಮಾಡಿದರು. ನಳಂದ ವಿಶ್ವವಿದ್ಯಾನಿಲಯದ ಮಹಾಪಂಡಿತನಾಗಿದ್ದ ಶಾಂತಿ ರಕ್ಷಿತನು ಟಿಬೆಟ್ಟಿನ ದೊರೆ ಟಿ-ಸೋಂಗ್ ದಿಸಾನ್‌ನ ಆಹ್ವಾನದ ಮೆರೆಗೆ ಟಿಬೆಟ್ಟಿಗೆ ಭೇಟಿ ನೀಡಿದನು. ಈ ದೊರೆಯು ಶಾಂತಿರಕ್ಷಿತನ ಪಾಂಡಿತ್ಯವನ್ನು ಗೌರವಿಸಿ ಅವನ ಗೌರವಾರ್ಥವಾಗಿ ಓದಾಂತಪುರಿ ವಿಹಾರದ ಮಾದರಿಯಲ್ಲಿ ಟಿಬೆಟ್ಟಿನಲ್ಲಿ ಬೌದ್ಧ ವಿಹಾರವೊಂದನ್ನು ನಿರ್ಮಿಸಿದನು. ಕ್ರಿ.ಶ. 747ರಲ್ಲಿ ನಳಂದ ವಿಶ್ವವಿದ್ಯಾನಿಲಯದ ಮತ್ತೊಬ್ಬ ಪಂಡಿತ ಪದ್ಮ ಸಂಭವ ಎಂಬವನು ಟಿಬೆಟ್ಟಿಗೆ ಭೇಟಿ ನೀಡಿ ತಾಂತ್ರಿಕ್ ಬೌದ್ಧಧರ್ಮವನ್ನು ಪ್ರಚಾರ ಮಾಡಿದನು. ಕ್ರಿ.ಶ. ಹನ್ನೊಂದನೆ ಶತಮಾನದಲ್ಲಿ ವಿಕ್ರಮಶೀಲದ ಘನಪಂಡಿತನಾಗಿದ್ದ ಆಟಿಸ ಎಂಬುವನು ಭೇಟಿ ನೀಡಿದನು. ಬೌದ್ಧಧರ್ಮವು ಟಿಬೆಟಿಯನ್ನರ ಧರ್ಮ, ದಾರ್ಶನಿಕತೆ, ಸಾಹಿತ್ಯ ಮತ್ತು ಕಲೆಯ ಮೇಲೆ ಭಾರತೀಯ ಸಂಸ್ಕೃತಿಯ ಪ್ರಭಾವವನ್ನು ಬೀರಿತು. ಟಿಬೆಟ್ ಇದಕ್ಕೆ ಪ್ರತಿಯಾಗಿ ಭಾರತೀಯ ಬೌದ್ಧಿಕ ಕ್ಷೇತ್ರಕ್ಕೆ ಮಹತ್ತರ ಸೇವೆ ಸಲ್ಲಿಸಿತು. ಭಾರತದ ಮೇಲೆ ಮುಸ್ಲಿಮರು ಮಾಡಿದ ಧಾಳಿಗಳಿಂದ ನಳಂದ ಮತ್ತಿತರ ವಿದ್ಯಾ ಕೇಂದ್ರಗಳು ನಾಶಗೊಳಿಸಲ್ಪಟ್ಟಾಗ ಇಲ್ಲಿದ್ದ ಹಲವಾರು ಬೌದ್ಧ ಧರ್ಮ ಕೃತಿಗಳು ಟಿಬೆಟಿಯನ್ ಭಾಷೆಗೆ ಆಗಲೇ ಭಾಷಾಂತರಿಸಲ್ಪಟ್ಟಿದ್ದು. ಅವು ಬೌದ್ಧ ಧರ್ಮ ಮತ್ತು ದಾರ್ಶನಿಕತೆಯನ್ನು ಕುರಿತ ಅಧ್ಯಯನಕ್ಕೆ ಮುಂದಿನ ಪೀಳಿಗೆಗೆ ಮಹದುಪಕಾರ ಮಾಡಿದವು.

## ಬರ್ಮ

ಬರ್ಮದಲ್ಲಿ ಭಾರತೀಯ ಸಂಸ್ಕೃತಿಯ ಪ್ರಸಾರವು ಕ್ರಿ.ಪೂ. ಮೂರನೇ ಶತಮಾನದಲ್ಲಿ ಆರಂಭವಾದುದಾಗಿ ಕಂಡುಬರುತ್ತದೆ. ಅಶೋಕ ಚಕ್ರವರ್ತಿಯ ಕಾಲದಲ್ಲಿ ಪಾಟಲೀಪುತ್ರದಲ್ಲಿ ಸಮಾವೇಶಗೊಂಡಿದ್ದ ಮೂರನೆ ಬೌದ್ಧ ಸಮ್ಮೇಳನವು ಸೋನ ಮತ್ತು ಉತ್ತರ ಎಂಬ ಇಬ್ಬರು ಬೌದ್ಧ ಭಿಕ್ಷುಗಳನ್ನು ಬೌದ್ಧಮತ ಪ್ರಸಾರಕ್ಕಾಗಿ ಕಳುಹಿಸಿದ್ದುದಾಗಿ ಕೆಲವು ಸಾಂಪ್ರದಾಯಿಕ ಬರವಣಿಗೆಗಳಿಂದ ತಿಳಿದುಬರುತ್ತದೆ. ಕ್ರಿ.ಶ. 5 ಮತ್ತು ಆರನೇ ಶತಮಾನಗಳಲ್ಲಿ ಕೆಳಗಣ ಬರ್ಮದ ಪ್ರೋಮ್ ಬೌದ್ಧ ಧರ್ಮದ ಕೇಂದ್ರವಾಗಿದ್ದಿತೆಂದು ಐತಿಹಾಸಿಕ ಸಂಗತಿಗಳು ತಿಳಿಸುತ್ತವೆ. ಬೌದ್ಧಮತದ ಥೇರವಾದ ಮತ್ತು ಮಹಾಯಾನ ಪಂಥಗಳು ಹಾಗೂ ಬ್ರಾಹ್ಮಣ ಧರ್ಮವು ಬರ್ಮಾದಲ್ಲಿ ನೆಲೆಗೊಂಡು ತರುವಾಯದಲ್ಲಿ ಥೇರವಾದ ಬೌದ್ಧಮತವು ಬರ್ಮದ ಅಧಿಕೃತ ಧರ್ಮವಾಗಿ ಮಾರ್ಪಟ್ಟಿತು. ಬೌದ್ಧರ ಪಾಳೀ ಭಾಷೆಯು ಬರ್ಮೀಯರ ಭಾಷೆಯ ಬೆಳವಣಿಗೆಗೂ ಮತ್ತು ವಿಸ್ತೃತಗೊಳ್ಳುವುದಕ್ಕೂ ಸಹಾಯಕವಾಯಿತು. ಬರ್ಮೀಯರ ಧರ್ಮ ಶಾಸ್ತ್ರ ಗ್ರಂಥಗಳು ಮತ್ತು ಕಲೆಯ ಮೇಲೆ ಅಲ್ಲದೆ ಅವರ ಸಂಪ್ರದಾಯಗಳು ಮತ್ತು ನಡೆನುಡಿಗಳ ಮೇಲೂ ಭಾರತೀಯ ಸಂಸ್ಕೃತಿಯು ಪ್ರಭಾವ ಬೀರಿದ್ದಿತು. ಬರ್ಮೀಯರ ಧಮ್ಮಮತಾಸ್ ಅಥವ ಧರ್ಮಶಾಸ್ತ್ರಗಳು ಭಾರತೀಯ ಕಾನೂನು ನಿಯಮಗಳ ಬರ್ಮೀಯರ ರೂಪಾಂತರವಾಗಿದ್ದವು. ಕಲೆಗೆ ಸಂಬಂಧಿಸಿದಂತೆ ಪಾಗನ್‌ನಲ್ಲಿರುವ ಆನಂದ ದೇವಾಲಯವು ಭಾರತೀಯ ವಾಸ್ತುಶಿಲ್ಪ ಮತ್ತು ಶಿಲ್ಪಕಲೆಯ ಪ್ರಭಾವದಿಂದ ಕೂಡಿದೆ. ಆನಂದ ದೇವಾಲಯದ ಯೋಜನೆಕಾರರು

ಮತ್ತು ವಾಸ್ತುಶಿಲ್ಪಿಗಳು ಭಾರತೀಯರೇ ಆಗಿದ್ದರೆಂದು ಹೇಳಲಾಗಿದೆ. ಈ ದೇವಾಲಯದ ಶಿಖರದಿಂದ ಹಿಡಿದು ತಳಪಾಯದವರೆಗೂ ಕಂಡುಬರುವ ಶಿಲ್ಪಕೃತಿಗಳಲ್ಲಿ ಭಾರತೀಯರ ಶಿಲ್ಪಕಲಾ ಚಾತುರ್ಯದ ಪ್ರತಿಭೆಯು ಹಾಸುಹೊಕ್ಕಾಗಿ ಮೂಡಿ ಬಂದಿದೆ. ಬರ್ಮೀಯರ ಬರವಣಿಗೆಯು ಸಹ ದಕ್ಷಿಣ ಭಾರತದ ಹಲವಾರು ಲಿಪಿಗಳಿಂದ ರೂಪಾಂತರಗೊಂಡಿದೆ. ಇದಲ್ಲದೆ ಬರ್ಮೀಯರ ಭಾಷೆಯಲ್ಲಿ ರಚಿತವಾಗಿರುವ ಅನೇಕ ನಾಟಕಗಳಲ್ಲೂ ಮತ್ತು ಗದ್ಯಸಾಹಿತ್ಯ ವಿವರಣೆಗಳಲ್ಲೂ ಬೌದ್ಧರ ಸಾಹಿತ್ಯದ ಅನೇಕ ವಸ್ತುಗಳು ಕಂಡುಬರುತ್ತವೆ.

**ಸಿಲೋನ್**

ಸಿಲೋನಿನಲ್ಲಿ ಭಾರತೀಕರಣವು ಕ್ರಿ.ಶಕೆಯ ಆರಂಭದ ಶತಮಾನಗಳಿಂದ ಆರಂಭವಾಯಿತೆಂದು ಹೇಳಲಾಗಿದೆ. ಆದಾಗ್ಯೂ ಸಿಲೋನಿನಲ್ಲಿ ಭಾರತೀಯ ಸಂಸ್ಕೃತಿಯ ಪ್ರಸಾರವು ಇದಕ್ಕಿಂತಲೂ ಬಹಳ ಹಿಂದೆಯೆ ಮಹಾಕಾವ್ಯಗಳ ಕಾಲದಲ್ಲಿಯೆ ಆರಂಭವಾಗಿದ್ದಿತು. ವಿಜಯ ಎಂಬ ಭಾರತೀಯನೊಬ್ಬನು ಸಿಂಹಳಕ್ಕೆ ಹೋಗಿ ಸ್ಥಳೀಯ ರಾಜಕುಮಾರಿ ಯೊಬ್ಬಳನ್ನು ವಿವಾಹವಾಗಿ ಸಿಲೋನಿ ಜನಾಂಗದ ಮೂಲಜನಾದನೆಂದು ಸಿಲೋನಿಗಳ ವೃತ್ತಾಂತಗಳಲ್ಲಿ ದೀರ್ಘ ವಿವರಣೆಗಳಿವೆ. ಕ್ರಿ.ಪೂ. ಎರಡನೇ ಶತಮಾನದಲ್ಲಿ ಅಶೋಕ ಚಕ್ರವರ್ತಿಯ ಮಕ್ಕಳಾದ ಮಹೇಂದ್ರ ಮತ್ತು ಸಂಘಮಿತ್ರೆ ಸಿಲೋನಿಗೆ ಹೋಗಿ ಬೌದ್ಧ ಮತವನ್ನು ಪ್ರಸಾರ ಮಾಡಿದ್ದಲ್ಲದೆ ಅಲ್ಲಿನ ಜನಗಳನ್ನು ಬೌದ್ಧಮತಕ್ಕೆ ಮತಾಂತರಗೊಳಿಸಿದರು. ಕೆಲವು ಕಾಲದಲ್ಲಿಯೆ ಸಿಲೋನಿನಲ್ಲಿ ಸಿಲೋನಿಗಳ ಬೌದ್ಧ ಸನ್ಯಾಸ ಆಶ್ರಮಗಳು ಸ್ಥಾಪಿಸಲ್ಪಟ್ಟವು ಮತ್ತು ಬೌದ್ಧಮತವು ಸಿಲೋನಿನ ಅಧಿಕೃತ ಧರ್ಮವಾಯಿತು. ಬೌದ್ಧಮತವು ಸಿಲೋನಿನಲ್ಲಿ ಅಪಾರ ಸಾಹಿತ್ಯ ಮತ್ತು ಕಲೆಯ ಸೃಷ್ಟಿಗೆ ಕಾರಣವಾಯಿತು. ಇದರಿಂದಾಗಿ ಬೌದ್ಧಮತವು ಸಿಲೋನಿನಲ್ಲಿ ಭಾರತೀಯ ಸಂಸ್ಕೃತಿಯ ಪ್ರಸಾರದ ಪ್ರಮುಖ ಮಾಧ್ಯಮವಾಗಿ ಮಾರ್ಪಟ್ಟಿತು. ಮೇಲಾಗಿ ಭಾರತಕ್ಕೆ ಸಿಲೋನಿನ ಸಾಮೀಪ್ಯವು ಕೂಡ ಭಾರತೀಯ ಸಂಸ್ಕೃತಿಯ ಪ್ರಭಾವವು ಅಲೆ ಅಲೆಯಾಗಿ ಪಸರಿಸುವುದನ್ನು ಅನಿವಾರ್ಯವಾಗಿಸಿತು. ಸಿಲೋನಿನ ಇಸುರಮುನಿಯ, ಅನುರಾಧಪುರ ಮತ್ತು ಪೊಲೊನ್ನರುವಗಳಲ್ಲಿನ ಸ್ಮಾರಕಗಳ ಮೇಲೆ ಗುಪ್ತರ ವಾಸ್ತುಶಿಲ್ಪದ ಪ್ರಭಾವವು ಕಂಡುಬರುತ್ತದೆ. ಅಂತೆಯೆ ಸಿಗಿರಿಯದಲ್ಲಿ ಕಂಡುಬರುವ ವರ್ಣಚಿತ್ರಗಳು ಅಜಂತದಲ್ಲಿನ ವರ್ಣಚಿತ್ರಕಲೆಯ ಶಾಖೆಯ ವಿಸ್ತರಣೆಯಾಗಿರುತ್ತದೆ.

**ಆಗ್ನೇಯ ಏಷ್ಯಾ**

ಪ್ರಾಚೀನ ಕಾಲದಲ್ಲಿ ಆಗ್ನೇಯ ಏಷ್ಯಾದ ಜನಗಳ ಸಂಸ್ಕೃತಿಯನ್ನು ಗಮನಿಸಿದಾಗ ಏಷ್ಯಾದ ಇತರ ಭಾಗಗಳಿಗಿಂತಲೂ ಹೆಚ್ಚಾಗಿ ಆಗ್ನೇಯ ಏಷ್ಯಾದಲ್ಲಿ ಭಾರತೀಯ ಸಂಸ್ಕೃತಿಯ ಪ್ರಭಾವವು ಹೆಚ್ಚಾಗಿ ಕಂಡುಬರುತ್ತದೆ. ಆಗ್ನೇಯ ಏಷ್ಯಾದ ರಾಜ್ಯಗಳಲ್ಲಿನ ವಿವಿಧ ಭಾಗಗಳಲ್ಲಿ ನಡೆದಿರುವ ಭೂಸಂಶೋಧನೆಗಳಿಂದಲೂ ಬೌದ್ಧರ ಹಾಗೂ ಹಿಂದೂಗಳ ಸಾಹಿತ್ಯ ಕೃತಿಗಳಿಂದಲೂ ಪ್ರಾಚೀನ ಭಾರತೀಯರು ವ್ಯಾಪಾರಕ್ಕಾಗಿ, ರಾಜ್ಯಸ್ಥಾಪನೆಗಾಗಿ ಮತ್ತು ಧರ್ಮ ಪ್ರಚಾರಕ್ಕಾಗಿ ಆಗ್ನೇಯ ಏಷ್ಯಾದ ರಾಜ್ಯಗಳಿಗೆ ಪ್ರಯಾಣ ಮಾಡಿರುದಾಗಿ ತಿಳಿದುಬರುತ್ತದೆ. ಅಂದಿನ ಕಾಲದಲ್ಲಿ ಈ ಭಾಗವು ಅತ್ಯಂತ ಶ್ರೀಮಂತ ಪ್ರದೇಶವಾಗಿದ್ದು 'ಬಂಗಾರದ ನಾಡು' ಅಥವ 'ಸುವರ್ಣದ್ವೀಪ' ಎಂದು ಪ್ರಸಿದ್ಧಿ ಪಡೆದಿತ್ತು. ಈ ನಾಡಿಗೆ ಭಾರತೀಯರು ಪಶ್ಚಿಮ ತೀರಪ್ರದೇಶದಲ್ಲಿದ್ದ ಸೊಪಾರ

ಮತ್ತು ಬ್ರೋಚ್ ಹಾಗೂ ಪೂರ್ವ ತೀರ ಪ್ರದೇಶದಲ್ಲಿದ್ದ ತಾಮ್ಲುಕ್, ಗೋಪಾಲಪುರ ಮತ್ತು ಮಸಲಿಪಟಂ ಬಂದರುಗಳ ಮೂಲಕ ಪ್ರಯಾಣ ಮಾಡಿದರು. ಹೀಗೆ ಪ್ರಯಾಣ ಮಾಡಿದವರಲ್ಲಿ ವರ್ತಕರೂ, ಕ್ಷತ್ರಿಯರೂ ಮತ್ತು ಧರ್ಮಪ್ರಸಾರಕರೂ ಸೇರಿದ್ದರು. ಇವರಲ್ಲಿ ಕೆಲವರು ಅಲ್ಲಿಯೆ ನೆಲಸಿ ವ್ಯಾಪಾರದ ವಸಾಹತುಗಳನ್ನೂ, ಮಹತ್ವಾಕಾಂಕ್ಷಿಗಳಾದ ಕ್ಷತ್ರಿಯರು ರಾಜ್ಯಸ್ಥಾಪನೆಯನ್ನೂ ಧರ್ಮ ಪ್ರಸಾರಕರು ಧರ್ಮ ಪ್ರಸಾರವನ್ನೂ ಮಾಡಿಭಾರತದ ಸಾಂಸ್ಕೃತಿಕ ಸಾಮ್ರಾಜ್ಯವೊಂದನ್ನು ನಿರ್ಮಿಸಿದರು.

**ಸಯಾಂ**

ಕ್ರಿ.ಶ. ಎರಡನೆಯ ಶತಮಾನಕ್ಕೂ ಹಿಂದೆಯೇ ಭಾರತೀಯರು ಸಯಾಂನಲ್ಲಿ ವಸಾಹತುವನ್ನು ಸ್ಥಾಪಿಸಿದ್ದುದಾಗಿ ಪೋಂಗ್‌ಟುಕ್ ನಿವೇಶನದಲ್ಲಿ ನಡೆದಿರುವ ಭೂಸಂಶೋಧನೆಗಳಿಂದ ತಿಳಿದುಬಂದಿದೆ. ಭಾರತೀಯರ ಈ ವಸಾಹತುವು ಕ್ರಿ.ಶ. ಆರನೆಶತಮಾನದವರೆಗೂ ಅಸ್ತಿತ್ವದಲ್ಲಿದ್ದುದಾಗಿ ಕಂಡುಬಂದಿದೆ. ಬೌದ್ಧಮತವು ಅಧಿಕೃತ ಧರ್ಮವಾಗಿದ್ದಿತು. ಅಂತೆಯೆ ಪಾಳೀ ಭಾಷೆಯು ಸಯಾಮಿಗಳ ಭಾಷೆ ಮತ್ತು ಲಿಪಿಯ ಮೇಲೆ ಹೆಚ್ಚಿನ ಪ್ರಭಾವವನ್ನು ಬೀರಿದೆಯೆಂದು ಭಾಷಾತಜ್ಞರು ಅಭಿಪ್ರಾಯಪಟ್ಟಿದ್ದಾರೆ. ಇದಲ್ಲದೆ ಸಯಾಂ ರಾಜರುಗಳ ಆಸ್ಥಾನದ ಆಚರಣೆಗಳ ಮೇಲೂ ಭಾರತೀಯ ಸಂಪ್ರದಾಯಗಳ ಪ್ರಭಾವವಿದ್ದು ರಾಜನ ಕಿರೀಟಧಾರಣೆ ಸಮಾರಂಭವನ್ನು ಬ್ರಾಹ್ಮಣ ಪುರೋಹಿತನು ನೆರವೇರಿಸುತ್ತಿದ್ದನು. ಈ ಪೋರಿಹಿತರ ಮನೆತನಗಳಿಗೆ ಸೇರಿದ ಬ್ರಾಹ್ಮಣರು ಇತ್ತೀಚಿನವರೆಗೂ ಸಯಾಂನಲ್ಲಿ ವಾಸಿಸುತ್ತಿದ್ದರು. ಹಿಂದೂಗಳ ಸಂಪ್ರದಾಯಗಳಾದ ಚೂಡಕರ್ಮ ಮೊದಲಾದ ಸಂಸ್ಕಾರಗಳು ಸಯಾಮಿಗಳ ವ್ರತಾಚರಣೆಗಳ ಭಾಗಗಳಾಗಿವೆ.ಸಯಾಮಿಗಳ ಸಾಹಿತ್ಯದಲ್ಲಿ ರಾಮಾಯಣ ಮತ್ತು ಮಹಾಭಾರತಗಳ ಕಥಾವಸ್ತುಗಳು ಕಂಡುಬರುತ್ತವೆ. ಅಂತೆಯೆ ಇಲ್ಲಿನ ಕಲೆಯ ಮೇಲೂ ಭಾರತೀಯ ಕಲೆಯು ಆಳವಾದ ಪ್ರಭಾವವನ್ನು ಬೀರಿದೆ.

ಮಲಯ ಪರ್ಯಾಯದ್ವೀಪದ ಪ್ರಾಚೀನ ಖೇತಾ ನಿವೇಶನದಲ್ಲಿ ಕಂಡುಬಂದಿರುವ ಅವಶೇಷಗಳಿಂದ ಪ್ರಾಚೀನ ಕಾಲದಲ್ಲಿ ಭಾರತೀಯರ ನೆಲಸೊಂದು ಅನೇಕ ಶತಮಾನಗಳ ಕಾಲ ಅಲ್ಲಿದ್ದುದಾಗಿಯೂ ಕಂಡುಬಂದಿದೆ. ಅಲ್ಲಿನ ಶಾಸನಗಳು ಹಾಗೂ ದೇವಾಲಯಗಳ ಮತ್ತು ವಿಗ್ರಹಗಳ ಅವಶೇಷಗಳು ಈ ವಸಾಹತುಗಳಲ್ಲಿ, ಭಾರತೀಯರ ಧರ್ಮಗಳಾಗಿದ್ದ ಶೈವಧರ್ಮ ಮತ್ತು ಬೌದ್ಧಧರ್ಮಗಳ ಪ್ರಭಾವದ ಮೇಲೆ ಅಪೂರ್ವ ಬೆಳಕನ್ನು ಚೆಲ್ಲುತ್ತವೆ.

**ಇಂಡೋ-ಚೈನಾ**

ಇಂದಿನ ಇಂಡೋ-ಚೈನಾವನ್ನು ಪ್ರಾಚೀನ ಕಾಲದಲ್ಲಿ ಕಾಂಬೋಜದೇಶವೆಂದು ಕರೆಯುತ್ತಿದ್ದರು. ಕಾಂಬೋಜದೇಶವು ಪುನಾನ್ ಮತ್ತು ಚೆನ್-ಲಾ ಎಂಬ ರಾಜ್ಯಗಳಿಂದ ಕೂಡಿದ್ದಿತು. ಮೀಕಾಂಗ್ ನದಿಯ ಕಣಿವೆಯ ಕೆಳಗಣ ಭಾಗದ ಪ್ರದೇಶವನ್ನೊಳಗೊಂಡಿರುವ ಇಂದಿನ ಕಾಂಬೋಡಿಯ ಮತ್ತು ಕೊಚ್ಚಿ-ಚೀನಾಗಳನ್ನು ಪುನಾನ್ ಒಳಗೊಂಡಿತ್ತು. ವೈದ್ಯಪುರ ಎಂಬುದು ಪುನಾನ್‌ನ ರಾಜಧಾನಿಯಾಗಿತ್ತು. ಚಂದ್ರವಂಶಕ್ಕೆ ಸೇರಿದ ಕೌಂಡಿನ್ಯ ಎಂಬವನು ಕ್ರಿ.ಶ. ಎರಡನೆ ಶತಮಾನದಲ್ಲಿ ಮೊದಲಬಾರಿಗೆ ಇಲ್ಲಿಗೆ ಹೋಗಿ ವಸಾಹತುಗಳನ್ನು ಸ್ಥಾಪಿಸಿದ ಭಾರತೀಯ ವಸಾಹತುಗಾರರ ನಾಯಕನಾಗಿದ್ದನೆಂದು

ಪುರಾಣಗಳ ಪ್ರಕಾರ ತಿಳಿದು ಬರುತ್ತದೆ. ಹೀಗೆ ಕೌಂಡಿನ್ಯನಿಂದ ಸ್ಥಾಪಿತವಾದ ರಾಜ್ಯವು ಸುಮಾರು ಐದು ಶತಮಾನಗಳ ಕಾಲ ಪ್ರಬಲವಾಗಿದ್ದು ವಿಶಾಲ ಭಾಗದ ಮೇಲೆ ಅಧಿಕಾರವನ್ನು ಹೊಂದಿತ್ತು. ಕ್ರಿ.ಶ. ನಾಲ್ಕು ಮತ್ತು ಐದನೇ ಶತಮಾನಗಳಲ್ಲಿ ಭಾರತೀಯರ ಮತ್ತೊಂದು ತಂಡವು ಪುನಾನ್‌ಗೆ ವಲಸೆ ಹೋಯಿತು. ಎರಡನೆ ಕೌಂಡಿನ್ಯ ಇವರ ನಾಯಕನಾಗಿದ್ದನು. ಇವನು ಭಾರತೀಯರ ರಾಜಕೀಯ ಮತ್ತು ಸಾಮಾಜಿಕ ಸಂಸ್ಥೆಗಳನ್ನು ಪುನರ್ ಸ್ಥಾಪಿಸಿದನು. ಎರಡನೇ ಕೌಂಡಿನ್ಯನ ಉತ್ತರಾಧಿಕಾರಿಗಳಲ್ಲೊಬ್ಬನಾದ ಜಯವರ್ಮನ್ ಚೀನಾದೇಶಕ್ಕೆ ನಿಯೋಗವೊಂದನ್ನು ಕಳುಹಿಸಿದ್ದನು. ಇದಲ್ಲದೆ ಇವನ ಕಾಲದಲ್ಲಿ ಶೈವ, ವೈಷ್ಣವ ಮತ್ತು ಬೌದ್ಧ ಧರ್ಮಗಳು ಅನ್ಯೋನ್ಯತೆಯಿಂದ ಇಲ್ಲಿ ನೆಲೆಸಿದ್ದವು. ಜಯವರ್ಮನ್ ಕ್ರಿ.ಶ.೫೧೪ರಲ್ಲಿ ಕಾಲವಾದನು. ಇವನು ಕಾಲವಾದ ಒಂದು ಶತಮಾನದ ನಂತರದಲ್ಲಿ ಪುನಾನ್ ತನ್ನ ಪ್ರಾಬಲ್ಯವನ್ನು ಕಳೆದುಕೊಂಡಿತು ಮತ್ತು ಅದನ್ನು ಚೆನ್-ಲಾ ಅಥವ ಕಾಂಬೋಜ ರಾಜ್ಯವು ವಶಪಡಿಸಿಕೊಂಡಿತು. ಶ್ರೇಷ್ಠಪುರ ಎಂಬುದು ಇದರ ರಾಜಧಾನಿಯಾಗಿತ್ತು. ಕಂಬು ಎಂಬ ಋಷಿಯು ಈ ರಾಜ್ಯವನ್ನು ಸ್ಥಾಪಿಸಿದವನೆಂದು ಹೇಳಲಾಗಿದೆ. ಈ ರಾಜ್ಯವನ್ನಾಳಿದ ದೊರೆಗಳಲ್ಲಿ ಭವವರ್ಮನ್ ಎಂಬವನು ಪ್ರಸಿದ್ಧನಾದವನು. ಕಾಂಬೋಜ ರಾಜ್ಯವು ಸುಮಾರು ಐದು ಶತಮಾನಗಳ ಕಾಲ ತನ್ನ ಸಾರ್ವಬೌಮತ್ವವನ್ನು ಇಡೀ ಪ್ರದೇಶದ ಮೇಲೆ ಹೊಂದಿದ್ದು ಅನಂತರ ಸಯಾಂ ಮತ್ತು ಚಂಪ ರಾಜ್ಯಗಳೊಂದಿಗೆ ನಡೆದ ಯುದ್ಧಗಳಿಂದ ದುರ್ಬಲವಾಗಿ ಅವನತಿ ಹೊಂದಿತು.

ಕಾಂಬೋಜ ರಾಜ್ಯದಲ್ಲಿ ಭಾರತೀಯರು ನಿರ್ಮಿಸಿದ ಸ್ಮಾರಕಗಳಲ್ಲಿ ಅಂಗೋಕರ್ ಕಟ್ಟಡಗಳ ಸಮೂಹವು ಪ್ರಸಿದ್ಧಿಯಾದುದು. ಅಂಗೋಕರ್ ಥೋಮ್ ಮತ್ತು ವಿಶ್ವವಿಖ್ಯಾತವಾಗಿರುವ ಅಂಗೋಕರ್ ವಾಟ್ ದೇವಾಲಯವು ಅದರ ವಿನ್ಯಾಸ ಮತ್ತು ಭವ್ಯತೆಗೆ ಪ್ರಸಿದ್ಧಿಯಾಗಿದೆ. ಎರಡನೆ ಜಯವರ್ಮನ್ ಮತ್ತು ಅವನ ತರುವಾಯ ಆಳಿದ ಮೂರನೇ ಜಯವರ್ಮನ್ ಕಾಂಬೋಜ ಸಾಮ್ರಾಜ್ಯದ ನಿರ್ಮಾಪಕರಾಗಿದ್ದರು. ಇವರ ಕಾಲದಲ್ಲಿ ಅಂಗೋಕರ್ ಪ್ರದೇಶಕ್ಕೆ ರಾಜಧಾನಿಯು ವರ್ಗಾಯಿಲ್ಪಟ್ಟಿತು. ಕ್ರಿ.ಶ. ಹನ್ನೆರಡನೆ ಶತಮಾನದಲ್ಲಿ ಆಳುತ್ತಿದ್ದ ಏಳನೇ ಜಯವರ್ಮನ್ ಕಾಲದಲ್ಲಿ ರಾಜಧಾನಿ ಅಂಗೋಕರ್‌ಥೋಮ್‌ನಲ್ಲಿ ಅಂಗೋಕರ್‌ಥೋಮ್ ಕಟ್ಟಡವು ಕಟ್ಟಲ್ಪಟ್ಟು ನಗರದ ಶೋಭೆಯು ಹೆಚ್ಚಲ್ಪಟ್ಟಿತು.

ಇಲ್ಲಿನ ಮತ್ತೊಂದು ಪ್ರಖ್ಯಾತವಾದ ಕಟ್ಟಡವಾದ ಅಂಗೋಕರ್‌ವಾಟ್ ಅನ್ನು ಕ್ರಿ.ಶ. ಹನ್ನೆರಡನೆ ಶತಮಾನದಲ್ಲಿ ಎರಡನೇ ಸೂರ್ಯವರ್ಮನ್ ಎಂಬವನು ಕಟ್ಟಿಸಿದನು. ಖೇಮರ್ ಸ್ಮಾರಕಗಳಲ್ಲಿ ಇದು ಅತ್ಯಂತ ದೊಡ್ಡದಲ್ಲದೆ ಮಾನವ ನಿರ್ಮಿತ ಧಾರ್ಮಿಕ ಕಟ್ಟಡಗಳಲ್ಲಿ ಇದು ಅತ್ಯಂತ ದೊಡ್ಡದಾಗಿದೆ. ಈ ದೇವಾಲಯದ ಗೋಡೆಗಳ ಮೇಲೆ ಮತ್ತು ಸಭಾಂಗಣಗಳಲ್ಲಿ ರಾಮಾಯಣ, ಮಹಾಭಾರತ ಹರಿವಂಶ ಮತ್ತು ಪುರಾಣಗಳ ಕಥಾವಸ್ತುಗಳು ಸುದೀರ್ಘವಾಗಿ ಕೆತ್ತಲ್ಪಟ್ಟಿವೆ. ಅಂಗೋಕರ್‌ವಾಟ್ ದೇವಾಲಯವು ಭಾರತೀಕರಣಗೊಂಡ ಕಾಂಬೋಜದೇಶದ ಜನರ ಧಾರ್ಮಿಕ ನಿಷ್ಠೆಗೂ ಮತ್ತು ಕಲಾಭಿರುಚಿಗೂ ಭಾರತೀಯ ಸಾಂಸ್ಕೃತಿಕ ಪ್ರಭಾವಕ್ಕೂ ಚಿರಂತನ ಸ್ಮಾರಕವಾಗಿ ನಿಂತಿದೆ.

**ಚಂಪ**

ಚಂಪ ರಾಜ್ಯವು ಇಂದಿನ ಅನ್ನಾಂ ಪ್ರದೇಶಗಳನ್ನೊಳಗೊಂಡಿತ್ತು. ಕ್ರಿ.ಶ. ನಾಲ್ಕನೆ ಶತಮಾನದಲ್ಲಿ ಆಳುತ್ತಿದ್ದ ಭದ್ರವರ್ಮನ್ ಎಂಬುವನ ಕಾಲದಲ್ಲಿ ಶೈವಧರ್ಮವು ರಾಜನ ಉದಾರಾಶ್ರಯ ಪಡೆದಿದ್ದು ಪ್ರಬಲವಾಗಿದ್ದಿತು. ಇದಲ್ಲದೆ ಇಲ್ಲಿನ ರಾಜರುಗಳು ಶೈವ ದೇವಾಲಯಗಳಿಗೆ ಅನೇಕ ದಾನದತ್ತಿಗಳನ್ನು ನೀಡಿದ್ದುದಾಗಿ ಇಲ್ಲಿನ ಶಾಸನಗಳಲ್ಲೂ ಉಲ್ಲೇಖಿತವಾಗಿದೆ. ಶಾಸನಗಳು ಸಂಸ್ಕೃತ ಭಾಷೆಯ ಶೈಲಿಯಲ್ಲಿ ಕೆತ್ತಲ್ಪಟ್ಟಿವೆ. ಆಶ್ರಮ ವ್ಯವಸ್ಥೆಯ ವಿದ್ಯಾಭ್ಯಾಸವು ಇಲ್ಲಿ ರೂಢಿಯಲ್ಲಿದ್ದುದಾಗಿ ಕಂಡುಬಂದಿದೆ. ಇಂತಹ ನೂರಾರು ಆಶ್ರಮಗಳನ್ನು ರಾಜರುಗಳು ಕಟ್ಟಿಸಿದ್ದುದಾಗಿಯೂ ಮತ್ತು ಆಶ್ರಮಗಳಲ್ಲಿನ ಕೆಲವು ದಾಖಲೆಗಳಿಂದ ಇಲ್ಲಿನ ಜನರು ಉನ್ನತಮಟ್ಟದ ನೈತಿಕ ಮತ್ತು ಆಧ್ಯಾತ್ಮಿಕ ಆದರ್ಶಗಳನ್ನು ಹೊಂದಿದ್ದುದಾಗಿ ಕಂಡುಬರುತ್ತದೆ. ಮೇಲಾಗಿ ಈ ಆಶ್ರಮಗಳು ಸಮಾಜದ ಎಲ್ಲ ವರ್ಗಗಳ ಜನರ ಮೇಲೆ ತಮ್ಮ ಪ್ರಭಾವವನ್ನು ಬೀರಿದ್ದ ಪ್ರಾಚೀನ ಭಾರತದ ಆಶ್ರಮಗಳನ್ನು ಜ್ಞಾಪಕಕ್ಕೆ ತರುವಂತಿದ್ದವು. ಇಲ್ಲಿನ ಜನರ ಧಾರ್ಮಿಕ ಜೀವನದ ಮತ್ತೊಂದು ಪ್ರಮುಖ ಲಕ್ಷಣವೆಂದರೆ ದೇವರಾಜ ಪಂಥದ ಬೆಳವಣಿಗೆಯಾಗಿತ್ತು. ಶಿವನು ಇಲ್ಲಿನ ಜನರ ಪ್ರಧಾನ ದೇವರಾಗಿದ್ದು ಅವನನ್ನು ಲಿಂಗದ ರೂಪದಲ್ಲಿ ಪೂಜಿಸುತ್ತಿದ್ದರು. ಮೈಸೋನ್ ಎಂಬಲ್ಲಿ ನಿರ್ಮಿಸಲಾಗಿದ್ದ ದೇವಾಲಯದಲ್ಲಿ ಲಿಂಗದ ರೂಪದಲ್ಲಿ ಭದ್ರೇಶ್ವರ ಸ್ವಾಮಿಯನ್ನು ಪ್ರತಿಷ್ಠಾಪಿಸಲಾಗಿತ್ತು ಮತ್ತು ಈ ದೇವಾಲಯವು ರಾಷ್ಟ್ರೀಯ ದೇವಾಲಯವಾಗಿತ್ತು. ಚಂಪಾದಲ್ಲಿ ಶೈವಧರ್ಮವನ್ನೇ ಅಲ್ಲದೆ ವೈಷ್ಣವಧರ್ಮ ಮತ್ತು ಬೌದ್ಧಧರ್ಮಗಳನ್ನೂ ಪ್ರೋತ್ಸಾಹಿಸಲಾಗಿತ್ತು.

ಸುಮಾತ್ರ ಆಗ್ನೇಯ ಏಷ್ಯಾದಲ್ಲಿ ಭಾರತೀಕರಣಗೊಂಡ ರಾಜ್ಯಗಳಲ್ಲಿ ಸುಮಾತ್ರ ಅಥವ ಸುವರ್ಣದ್ವೀಪವು ಒಂದಾಗಿದ್ದಿತು. ಇಲ್ಲಿ ಭಾರತೀಯರು ಸಾಮ್ರಾಜ್ಯವೊಂದನ್ನು ಸ್ಥಾಪಿಸಿ ಅದನ್ನು ಶ್ರೀವಿಜಯ ಸಾಮ್ರಾಜ್ಯವೆಂದು ಕರೆಯುತ್ತಿದ್ದರು. ಭಾರತೀಯ ಸಂತತಿಯವರಾಗಿದ್ದ ಶೈಲೇಂದ್ರ ಸಂತತಿಯವರು ಇಲ್ಲಿ ಅರಸರಾಗಿದ್ದರು. ಕ್ರಿ.ಶ. ಎಂಟನೇ ಶತಮಾನದ ಆರಂಭದಲ್ಲಿ ಅಸ್ತಿತ್ವಕ್ಕೆ ಬಂದ ಶ್ರೀವಿಜಯ ಸಾಮ್ರಾಜ್ಯವು ಹದಿಮೂರನೆ ಶತಮಾನದವರೆಗೂ ಮುಂದುವರಿದಿದ್ದು ಅನಂತರ ಅವನತಿ ಹೊಂದಿತು. ಶ್ರೀವಿಜಯ ಸಾಮ್ರಾಜ್ಯವು ತನ್ನ ಉನ್ನತಿಯ ಕಾಲದಲ್ಲಿ ಮಲಯ, ಜಾವಾ, ಸುಮಾತ್ರ ಬೋರ್ನಿಯೋ ಮತ್ತು ಬಲಿದ್ವೀಪಗಳನ್ನು ಒಳಗೊಂಡಿತ್ತು. ಶೈಲೇಂದ್ರರು ಪ್ರಬಲವಾದ ನೌಕಾಪಡೆಯನ್ನು ಹೊಂದಿದ್ದರು ಮತ್ತು ಅವರು ಚಂಪರಾಜ್ಯದ ಮೇಲೆ ಅನೇಕ ಧಾಳಿಗಳನ್ನು ಮಾಡಿದ್ದಲ್ಲದೆ ಕ್ರಿ.ಶ. ಹನ್ನೊಂದನೆ ಶತಮಾನದಲ್ಲಿ ದಕ್ಷಿಣಭಾರತದಲ್ಲಿ ಅವರಷ್ಟೇ ಸಮರ್ಥ ನೌಕಾಪಡೆಯನ್ನು ಹೊಂದಿದ್ದ ಚೋಳರೊಂದಿಗೂ ಹೋರಾಟ ಮಾಡಿದರು. ಚೋಳರ ದೊರೆ ರಾಜೇಂದ್ರಚೋಳನು ಶ್ರೀವಿಜಯ ಸಾಮ್ರಾಜ್ಯವನ್ನು ಗೆಲ್ಲಲು ದೊಡ್ಡ ನೌಕಾಪಡೆಯೊಂದನ್ನು ಕಳುಹಿಸಿದ್ದುದಾಗಿ ಶಾಸನಗಳಿಂದ ತಿಳಿದುಬರುತ್ತದೆ. ಆದರೆ ಚೋಳರಿಗೆ ಶ್ರೀವಿಜಯ ಸಾಮ್ರಾಜ್ಯದ ಮೇಲೆ ತಮ್ಮ ಅಧಿಕಾರವನ್ನು ಬಹಳ ಕಾಲ ಸ್ಥಾಪಿಸಲು ಸಾಧ್ಯವಾಗಲಿಲ್ಲ. ಆದಾಗ್ಯೂ ಹನ್ನೊಂದನೆ ಶತಮಾನದ ಅಂತ್ಯದಲ್ಲಿ ಈ ಎರಡು ಸಾಮ್ರಾಜ್ಯಗಳ ನಡುವೆ ಸೌಹಾರ್ದ ಸಂಬಂಧಗಳೇರ್ಪಟ್ಟು ಸಾಂಸ್ಕೃತಿಕ ಪ್ರಸಾರವು ಎಂದಿನಂತೆ ಮುಂದುವರಿಯಿತು.

ಹಿಂದೂಗಳಾಗಿದ್ದ ಶೈಲೇಂದ್ರ ರಾಜರುಗಳು ಭಾರತೀಯ ಸಂಸ್ಕೃತಿಯ ಪ್ರಸಾರ ಕಾರ್ಯದಲ್ಲಿ ಬಹುಮುಖ್ಯಪಾತ್ರ ವಹಿಸಿದ್ದರು. ಶೈಲೇಂದ್ರ ಸಂತತಿಯ ಕೆಲವು ದೊರೆಗಳಿಗೆ ಕುಮಾರಘೋಷ ಎಂಬ ಭಾರತೀಯನು ರಾಜಗುರುವಾಗಿದ್ದನು. ಅಂತೆಯೆ ಸುವರ್ಣದ್ವೀಪದ ರಾಜನಾಗಿದ್ದ ಬಾಲಪುತ್ರದೇವ ಎಂಬವನು ನಳಂದದಲ್ಲಿ ಬೌದ್ಧ ವಿಹಾರವೊಂದನ್ನು ಕಟ್ಟಿಸಿದ್ದನು. ಪಾಲರ ದೊರೆಯು ಈ ವಿಹಾರದ ಖರ್ಚು ವೆಚ್ಚಗಳಿಗಾಗಿ ಐದು ಹಳ್ಳಿಗಳನ್ನು ದತ್ತಿಯಾಗಿ ಬಿಟ್ಟುಕೊಟ್ಟಿದ್ದನು. ಚೋಳರ ಮತ್ತು ಶೈಲೇಂದ್ರ ದೊರೆಗಳ ಸಂಬಂಧಗಳು ಸೌಹಾರ್ದಯುತವಾಗಿದ್ದ ಕಾಲದಲ್ಲಿ ಶೈಲೇಂದ್ರ ದೊರೆ ಶ್ರೀಮಾರ ವಿಜಯೋತ್ತುಂಗವರ್ಮನು ನಾಗಪಟಂನಲ್ಲಿ ಬೌದ್ಧವಿಹಾರವೊಂದನ್ನು ಕಟ್ಟಿಸಿದ್ದನು ಮತ್ತು ಇದರ ಖರ್ಚಿಗಾಗಿ ಚೋಳರ ದೊರೆಯು ಒಂದು ಹಳ್ಳಿಯನ್ನು ದತ್ತಿಯಾಗಿ ಕೊಟ್ಟಿದ್ದನು.

ಶೈಲೇಂದ್ರ ದೊರೆಗಳು ಮಹಾಯಾನ ಪಂಥಕ್ಕೆ ಸೇರಿದ ಬೌದ್ಧಧರ್ಮೀಯರಾಗಿದ್ದರು. ಬೌದ್ಧಧರ್ಮದಲ್ಲಿ ಅವರಿಗಿದ್ದ ನಿಷ್ಠೆಯಿಂದಾಗಿ ಅವರು ಭಾರತ ಮತ್ತು ಚೀನಾ ದೇಶಗಳೊಂದಿಗೆ ನಿಕಟ ಸಂಬಂಧಗಳನ್ನು ಹೊಂದಿದ್ದರು. ಶೈಲೇಂದ್ರರ ಧಾರ್ಮಿಕ ನಿಷ್ಠೆಯು ಬೌದ್ಧರ ಅನೇಕ ಸ್ಮಾರಕಗಳ ನಿರ್ಮಾಣದಲ್ಲಿ ವ್ಯಕ್ತಪಟ್ಟಿತು. ಇವುಗಳಲ್ಲಿ ಕ್ರಿ.ಶ. 750ರ ಅವಧಿಯಲ್ಲಿ ಪೇಡ ಎಂಬಲ್ಲಿ ಬೆಟ್ಟವೊಂದರ ಮೇಲೆ ನಿರ್ಮಿತವಾಗಿರುವ ಭವ್ಯವಾದ ಬಾರಾಬಡೂರ್ ಸ್ತೂಪವು ವಿಶ್ವವಿಖ್ಯಾತವಾಗಿದ್ದು ಪ್ರಪಂಚದ ಎಂಟನೇ ಅಶ್ಚರ್ಯವೆಂದು ಪರಿಗಣಿಸಲ್ಪಟ್ಟಿದೆ. ಈ ಸ್ತೂಪವು ಶಿಲ್ಪಕಲೆಯ ಭಂಡಾರವಾಗಿದ್ದು ಬುದ್ಧನ ಜೀವನಕ್ಕೆ ಸಂಬಂಧಿಸಿದಂತೆ ಲಲಿತವಿಸ್ತಾರದಲ್ಲಿ ಕಂಡುಬರುವ ಘಟನೆಗಳನ್ನು ಸೂಕ್ಷ್ಮವಾಗಿ ಕೆತ್ತಲಾಗಿದ್ದು ಅದರ ವೈಭವವನ್ನು ಅಜರಾಮರಗೊಳಿಸಿವೆ.

**ಜಾವಾ**

ಕ್ರಿ.ಶ. ನಾಲ್ಕನೆ ಶತಮಾನದಲ್ಲಿ ಜಾವಾದಲ್ಲಿ ಭಾರತೀಯರ ವಸಾಹತುವೊಂದು ಸ್ಥಾಪಿತವಾಗಿತ್ತು. ಶೈಲೇಂದ್ರ ಸಾಮ್ರಾಜ್ಯವು ಅಸ್ತಿತ್ವಕ್ಕೆ ಬಂದಮೇಲೆ ಜಾವಾ ಅದರಲ್ಲಿ ವಿಲೀನಗೊಂಡಿದ್ದು ಕ್ರಿ.ಶ. ಒಂಬತ್ತನೇ ಶತಮಾನದಲ್ಲಿ ಸ್ವತಂತ್ರವಾಯಿತು. ಶೈಲೇಂದ್ರ ಸಂತತಿಯವರ ಅಧಿಕಾರವು ಕ್ಷೀಣಿಸಿದ ಮೇಲೆ ವಿಜಯ ಎಂಬ ಸಂತತಿಯವರ ಆಳ್ವಿಕೆಯ ಕಾಲದಲ್ಲಿ ಶೈಲೇಂದ್ರ ಸಾಮ್ರಾಜ್ಯದಷ್ಟೇ ವಿಶಾಲವಾದ ಸಾಮ್ರಾಜ್ಯವನ್ನು ಅದು ಹೊಂದಿದ್ದಿತು.

ಜಾವಾದಿಂದ ಹಿಂದೂ ರಾಜಕುಮಾರನೊಬ್ಬನು ಪಲಾಯನ ಮಾಡಿ ಮಲಕ್ಕದಲ್ಲಿ ಸ್ವತಂತ್ರ ರಾಜ್ಯವೊಂದನ್ನು ಸ್ಥಾಪಿಸಿದನು. ಮಲಕ್ಕರಾಜ್ಯವನ್ನಾಳಿದ ಎರಡನೆ ದೊರೆಯು ಇಸ್ಲಾಂ ಅನ್ನು ಸ್ವೀಕರಿಸಿದನು. ತತ್ಪರಿಣಾಮವಾಗಿ ಕೆಲವು ಕಾಲದಲ್ಲಿಯೇ ಇಡೀ ದ್ವೀಪವು ಇಸ್ಲಾಂ ಧರ್ಮದ ಪ್ರಭಾವಕ್ಕೊಳಗಾಯಿತು.

**ಬಲಿ**

ಜಾವಾ ದ್ವೀಪವು ಇಸ್ಲಾಂ ಧರ್ಮದ ಪ್ರಭಾವಕ್ಕೊಳಗಾದ ಮೇಲೆ ಅಲ್ಲಿನ ರಾಜನ ಕುಟುಂಬವು ಮತ್ತು ಇಸ್ಲಾಂ ಧರ್ಮಕ್ಕೆ ಮತಾಂತರಗೊಳ್ಳಲಿಚ್ಛಿಸದ ಹಿಂದೂಗಳು ನೆರೆಯ ದ್ವೀಪವಾದ ಬಲಿದ್ವೀಪಕ್ಕೆ ವಲಸೆ ಹೋದರು. ಇದರಿಂದ ಬಲಿ ದ್ವೀಪದಲ್ಲಿ ಹಿಂದೂಗಳ ವಸಾಹತುವೊಂದು ಅಸ್ತಿತ್ವಕ್ಕೆ ಬಂದಿತು. ಉಗ್ರಸೇನ ಎಂಬುವನು ಇಲ್ಲಿನ ರಾಜನಾಗಿದ್ದು

ಇವನು ಕ್ರಿ.ಶ. ಹತ್ತನೆ ಶತಮಾನದ ಪೂರ್ವಾರ್ಧದಲ್ಲಿ ಆಳುತ್ತಿದ್ದನು. ಮುಂದಿನ ಶತಮಾನಗಳಲ್ಲಿ ಇಡೀ ಮಲಯ ಪರ್ಯಾಯ ದ್ವೀಪವು ಇಸ್ಲಾಂ ಧರ್ಮದ ಪ್ರಭಾವಕ್ಕೊಳಗಾದರೂ ಬಲಿದ್ವೀಪವು ಅದರಿಂದ ಹೊರಗುಳಿದು ಇಂದೂ ಕೂಡ ಅದು ಹಿಂದೂ ಧರ್ಮ ಮತ್ತು ಸಂಸ್ಕೃತಿಯ ಕೇಂದ್ರವಾಗಿ ಉಳಿದಿದ್ದು ಭಾರತೀಯ ಸಂಸ್ಕೃತಿಯನ್ನು ಈ ಭಾಗದಲ್ಲಿ ಚಿರಂತನಗೊಳಿಸಿದೆ.

ಒಟ್ಟಾರೆ ಹೇಳುವುದಾದರೆ ಆಗ್ನೇಯ ಏಷ್ಯಾದಲ್ಲಿ ಸಾಂಸ್ಕೃತಿಕ ವಿಸ್ತರಣೆಯ ಕಾರ್ಯದಲ್ಲಿ ಭಾರತೀಯ ವಸಾಹತುಗಾರರ ಕ್ಷತ್ರಿಯ ರಾಜಕುಮಾರ, ಧರ್ಮಪ್ರಸಾರಕರ ಸಾಧನೆಗಳು ಶ್ಲಾಘನೀಯವಾಗಿದ್ದವು. ಇವರ ಮೂಲಕ ಭಾರತೀಯರ ಧರ್ಮಗಳು ಸಾಹಿತ್ಯ, ದಾರ್ಶನಿಕ ತತ್ವಗಳು, ಸಾಮಾಜಿಕ ಮತ್ತು ರಾಜಕೀಯ ಸಂಸ್ಥೆಗಳು ಹಾಗೂ ವಾಸ್ತುಶಿಲ್ಪ ಮತ್ತು ಶಿಲ್ಪಕಲೆ ಇಲ್ಲಿ ಪ್ರಸಾರವಾದವು. ಈ ಎಲ್ಲ ಚಟುವಟಿಕೆಗಳು ಎಲ್ಲೊ ಒಮ್ಮೊಮ್ಮೆ ಬಿಟ್ಟರೆ ಶಾಂತಿಯುತವಾಗಿದ್ದವು. ಇದೇ ರೀತಿಯಲ್ಲಿ ಪಶ್ಚಿಮ ಏಷ್ಯಾದಲ್ಲೂ ಭಾರತೀಕರಣವು ಪೂರ್ಣವಾಗಿ ಸಾಂಸ್ಕೃತಿಕವಾಗಿದ್ದಿತೇ ವಿನಹ ಅದು ಸೈನಿಕ ಶಕ್ತಿಯದಾಗಿರಲಿಲ್ಲ. ಇದರಿಂದಾಗಿ ಅದು ಸ್ಥಿರವಾದ ಮೌಲ್ಯಗಳಿಂದ ಕೂಡಿದ ಅದ್ಭುತ ಪರಿಣಾಮಗಳನ್ನುಂಟುಮಾಡಿತು. ಈ ರೀತಿಯಲ್ಲಿ ಭಾರತವು ಪ್ರಾಚೀನ ಕಾಲದಲ್ಲಿ ನಾಗರಿಕತೆಯಲ್ಲಿ ಹಿಂದುಳಿದಿದ್ದ ತನ್ನ ಸುತ್ತಮುತ್ತಲಿನ ಜನಗಳನ್ನು ನಾಗರೀಕರನ್ನಾಗಿ ಮಾಡುವುದರಲ್ಲಿ ಮತ್ತು ತನ್ನ ಸಂಸ್ಕೃತಿಯನ್ನು ಹರಡುವುದರಲ್ಲಿ ಮಹತ್ವಪೂರ್ಣ ಪಾತ್ರವನ್ನು ವಹಿಸಿದ್ದು 'ಬೃಹದ್ಭಾರತ' ಎಂಬ ಹೆಸರನ್ನು ಸಾರ್ಥಕಗೊಳಿಸಿಕೊಂಡಿತ್ತು.

## ಅಧ್ಯಾಯ-15

# ಸಿಂಧ್ ಮೇಲೆ ಅರಬ್ಬರ ಆಕ್ರಮಣ

ಏಷ್ಯಾಖಂಡದ ದಕ್ಷಿಣ ಪರ್ಯಾಯ ದ್ವೀಪಗಳಲ್ಲೊಂದಾದ ಅರೇಬಿಯಾವು ಇಸ್ಲಾಂ ಧರ್ಮದ ಜನ್ಮಭೂಮಿ ಮಹಮದ್ ಪೈಗಂಬರರು ಇದರ ಸ್ಥಾಪಕರು. ಮಹಮದರು ಕ್ರಿ.ಶ.570ರಲ್ಲಿ ಮೆಕ್ಕಾ ನಗರದಲ್ಲಿ ಜನಿಸಿದರು. ಮಹಮದರು ತಮ್ಮ ನಲವತ್ತನೆ ವರ್ಷದವರೆಗೂ ಸಾಮಾನ್ಯ ಜೀವನವನ್ನು ನಡೆಸಿ, ತಮ್ಮ ನಲವತ್ತನೆ ವಯಸ್ಸಿನಲ್ಲಿ ನೂತನ ಧರ್ಮವನ್ನು ಭೋದಿಸತೊಡಗಿದರು. ಆ ಧರ್ಮವೇ ಇಸ್ಲಾಂಧರ್ಮ. ಇಸ್ಲಾಂ ಎಂದರೆ ದೇವರಿಗೆ ಶರಣಾಗುವುದು ಎಂದರ್ಥ. ಮಹಮದರು 'ದೇವರು ಒಬ್ಬನೆ' ಅವನ ಹೆಸರು 'ಅಲ್ಲಾ' 'ಮಹಮದನು ಅವನ ಪ್ರವಾದಿ' ಎಂದು ತಿಳಿಸಿದರು. ಮಹಮದರು ತಮ್ಮ ನೂತನ ಧರ್ಮದ ಮೂಲಕ ಸದಾ ಜಗಳವಾಡುತ್ತಿದ್ದ ಅರಬ್ಬರ ಬಣಗಳೆಲ್ಲವನ್ನೂ ಒಟ್ಟುಗೂಡಿಸಿ ಅವರನ್ನು ಒಂದು ಜನಾಂಗವನ್ನಾಗಿ ಮಾಡಿದ್ದಲ್ಲದೆ ಅವರು ಮುಂದೆ ಒಂದು ರಾಜಕೀಯ ಶಕ್ತಿಯಾಗಿ ಮಾರ್ಪಡುವುದಕ್ಕೂ ಬುನಾದಿ ಹಾಕಿದರು. ಮಹಮದರು ಕ್ರಿ.ಶ. 632ರಲ್ಲಿ ಕಾಲವಾದರು. ಮಹಮದರ ಮರಣಾನಂತರ ಇಸ್ಲಾಂ ಧರ್ಮವು ರಾಜಕೀಯ ಶಕ್ತಿಯಾಗಿ ಬೆಳೆಯಿತು. ಕೇವಲ ಒಂದು ಶತಮಾನದ ಅವಧಿಯಲ್ಲಿ ಆಶ್ಚರ್ಯಕರವಾದ ರೀತಿಯಲ್ಲಿ ಪಶ್ಚಿಮದಲ್ಲಿ ಸ್ಪೈನ್‌ನಿಂದ ಹಿಡಿದು ಪೂರ್ವದಲ್ಲಿ ಭಾರತದವರೆಗೂ ಹರಡಿ ವಿಶಾಲವಾದ ಇಸ್ಲಾಂ ಸಾಮ್ರಾಜ್ಯವು ಅಸ್ತಿತ್ವಕ್ಕೆ ಬಂದಿತು.

ಇಸ್ಲಾಂಧರ್ಮ ಶೀಘ್ರವಾಗಿ ಹರಡುವುದಕ್ಕೆ ಹಲವಾರು ಕಾರಣಗಳಿದ್ದವು. ಇಸ್ಲಾಂ ಧರ್ಮದ ಸರಳ ತತ್ವಗಳು, ಇಸ್ಲಾಂ ಧರ್ಮೀಯರಲ್ಲಿ ಧರ್ಮದ ಬಗ್ಗೆ ಇದ್ದ ನಿಷ್ಠೆ ಮತ್ತು ಮಹಮದರ ತರುವಾಯ ಅಧಿಕಾರಕ್ಕೆ ಬಂದ ಖಲೀಫರು ಧರ್ಮಪ್ರಸಾರ ಕಾರ್ಯದಲ್ಲಿ ಅನುಸರಿಸಿದ ಬಲಪ್ರಯೋಗ ಮೊದಲಾದವುಗಳು ಇಸ್ಲಾಂಧರ್ಮವು ಬಹುಶೀಘ್ರವಾಗಿ ಹರಡುವುದಕ್ಕೆ ಬಹುಮುಖ್ಯ ಕಾರಣಗಳಾಗಿದ್ದವು. ಮಹಮದರ ಉತ್ತರಾಧಿಕಾರಿಯಾದ ಅಬೂಬೇಕರನು (632-634) ಅರೇಬಿಯಾದಲ್ಲಿ ಇಸ್ಲಾಂಧರ್ಮದ ಪ್ರಾಬಲ್ಯವನ್ನು ಖಲೀದ್ ಮತ್ತಿತರ ದಂಡನಾಯಕರುಗಳ ಸಹಾಯದಿಂದ ಒಂದು ವರ್ಷದೊಳಗಾಗಿಯೆ ಹೆಚ್ಚಿಸಿ ಪ್ರಥಮ ಖಲೀಫನಾದನು. ಅನಂತರ ಸಿರಿಯಾ ಮತ್ತು ಇರಾಕ್‌ಗಳ ಮೇಲೆ ಆಕ್ರಮಣ ಕೈಗೊಂಡನು. ಆದರೆ ಈ ಆಕ್ರಮಣವು ಪೂರ್ಣಗೊಳ್ಳುವ ಮೊದಲೇ ಅಬೂಬೇಕರನು ಕಾಲವಾದನು. ಎರಡನೇ ಖಲೀಫನಾದ ಉಮ್ಮರ್ (634-644) ಕಾಲದಲ್ಲಿ ಅರಬರು ಶೀಘ್ರಗತಿಯಲ್ಲಿ ಹೆಚ್ಚು ವಿಜಯಗಳನ್ನು ಸಾಧಿಸಿದರು. ಈಜಿಪ್ಟ್,

ಸಿರಿಯಾ, ಪ್ಯಾಲಸ್ಟೈನ್, ಇರಾಕ್ ಮೆಸೊಪೊಟಾಮಿಯ ಮತ್ತು ಪರ್ಶಿಯಾ ದೇಶಗಳು ಇಸ್ಲಾಂ ಧರ್ಮದ ಪ್ರಭಾವಕ್ಕೊಳಗಾದವು. ಪರ್ಶಿಯಾದಲ್ಲಿ ಸಸಾನಿಯಡ್ ಸಂತತಿಯವರ ಅಧಿಕಾರವನ್ನು ಕೊನೆಗೊಳಿಸಿ ಇಡೀ ಪರ್ಶಿಯಾದ ಮೇಲೆ ತಮ್ಮ ಪ್ರಭುತ್ವವನ್ನು ಸ್ಥಾಪಿಸಿದರು. ಪೂರ್ವದಲ್ಲಿ ಇನ್ನೂ ಮುಂದುವರಿದು ಹೀರತ್, ಕಾಬೂಲ್ ಮತ್ತು ಬಾಲ್ಕ್ ರಾಜ್ಯಗಳನ್ನು ಗೆದ್ದು ಭಾರತದಲ್ಲಿ ಸಿಂಧ್ ಪ್ರಾಂತ್ಯದವರೆಗೂ ನುಗ್ಗಿದರು. ಹೀಗೆ ಅರಬರು ಒಂದಾದ ಮೇಲೊಂದರಂತೆ ವಿಜಯಗಳನ್ನು ಗಳಿಸಿ ಅರಬರ ಸಾಮ್ರಾಜ್ಯವನ್ನು ಭಾರತದ ಗಡಿಯವರೆಗೆ ವಿಸ್ತರಿಸಿದರು. ಇದೇ ಅವಧಿಯಲ್ಲಿ ಮಕ್ರಾನ್ ಮತ್ತು ಸಿಸ್ಟಾನ್‌ಗಳೂ ಕೂಡ ಅರಬರ ಆಡಳಿತಕ್ಕೊಳಪಟ್ಟವು. ಅರಬರು ಕ್ರಿ.ಶ. ಏಳನೇ ಶತಮಾನದಲ್ಲಿ ಸಮುದ್ರದ ಮುಖಾಂತರ ಮಹಾರಾಷ್ಟ್ರದ ಥಾಣದ ಮೇಲೆ ಮಾಡಿದ ಆಕ್ರಮಣವು ವಿಫಲವಾಯಿತು. ಇದರಿಂದ ಖಲೀಫನು ಸಿಂಧ್ ಮೇಲೆ ಪುನಃ ಆಕ್ರಮಣ ಮಾಡಲು ಅರಬರಿಗೆ ಅವಕಾಶ ಕೊಡಲಿಲ್ಲ.

ಉಮ್ಮರ್ ನಂತರ ಖಲೀಫನಾದ ಉಸ್ಮಾನನು (634-656) ಹಕೀಮ್-ಬಿನ್-ಜಾಬಾಲ್ ಎಂಬವನನ್ನು ಭಾರತದ ಮೇಲೆ ಆಕ್ರಮಣ ಮಾಡಲು ಇರುವ ಅನುಕೂಲ ಮತ್ತು ಪ್ರತಿಕೂಲಗಳನ್ನು ತಿಳಿಯುವ ಸಲುವಾಗಿ ಭಾರತಕ್ಕೆ ಕಳುಹಿಸಿಕೊಟ್ಟನು. ಭಾರತೀಯರ ಧೈರ್ಯ ಸ್ಥೈರ್ಯಗಳನ್ನು ಮನಗಂಡ ಹಕೀಮ್-ಬಿನ್-ಜಾಬಾಲನು ಭಾರತದ ಮೇಲೆ ಆಕ್ರಮಣ ಮಾಡುವ ಅಭಿಪ್ರಾಯವನ್ನು ವಿರೋಧಿಸಿದನು. ಆದ್ದರಿಂದ ಉಸ್ಮಾನನು ಭಾರತದ ಮೇಲೆ ಆಕ್ರಮಣಮಾಡುವ ಉದ್ದೇಶವನ್ನು ಕೈಬಿಡಬೇಕಾಯಿತು. ಉಸ್ಮಾನನ ತರುವಾಯ ಅಧಿಕಾರಕ್ಕೆ ಬಂದ ನಾಲ್ಕನೆಯ ಖಲೀಫ್ ಆಲಿ (656-661)ಯ ಕಾಲದಲ್ಲಿ ಮುಸ್ಲಿಂ ಸಾಮ್ರಾಜ್ಯವು ಮುಆವಿಯ (Muawiya) ಎಂಬುವನ ವಿರೋಧದಿಂದ ಹೆಚ್ಚು ಕಡಿಮೆ ವಿಭಜನೆಗೊಂಡಿತು. ಕ್ರಿ.ಶ. 661ರಲ್ಲಿ ಮುಆವಿಯನು ಆಲಿಯ ನಂತರ ಉತ್ತರಾಧಿಕಾರಿಯಾಗಿದ್ದ ಹಸನ್ ಎಂಬವನನ್ನು ಪದಚ್ಯುತಿಗೊಳಿಸಿ 'ಉಮ್ಮಾಯದ್' ಎಂಬ ಹೊಸ ವಂಶವನ್ನು ಸ್ಥಾಪಿಸಿ ತನ್ನ ಆಳ್ವಿಕೆಯನ್ನು ಆರಂಭಿಸಿದನು. ಡಮಾಸ್ಕಸ್ ಇವನ ರಾಜಧಾನಿಯಾಗಿತ್ತು.

ಮುಆವಿಯನ ವಂಶಜರು ಕ್ರಿ.ಶ. 750ರವರೆಗೆ ಆಳಿದರು. ಈ ಅವಧಿಯಲ್ಲಿ ಮುಸ್ಲಿಂ ಸಾಮ್ರಾಜ್ಯವು ಪೂರ್ವದಲ್ಲಿ ಅಫ್ಘಾನಿಸ್ಥಾನ, ಬೆಲೂಚಿಸ್ಥಾನ ಮತ್ತು ಮಧ್ಯಏಷ್ಯಾದ ಬಹುಭಾಗಕ್ಕೂ ಪಶ್ಚಿಮದಲ್ಲಿ ಸ್ಪೈನ್ ಮತ್ತು ಫ್ರಾನ್ಸ್‌ವರೆಗೂ, ಉತ್ತರ ಆಫ್ರಿಕಾದಲ್ಲಿ ಮೊರಾಕ್ಕೋವರೆಗೂ ವಿಸ್ತರಿಸಿದ್ದಿತು. ಈ ಒಂದು ವೈಭವದ ವಿಸ್ತರಣೆಯ ಸನ್ನಿವೇಶದಲ್ಲಿ ಅರಬರು ಸಿಂಧ್ ಪ್ರಾಂತ್ಯದ ಮೇಲೆ ಆಕ್ರಮಣಮಾಡಿದರು.

### ಸಿಂಧ್ ಮೇಲೆ ಅರಬ್ಬರ ಆಕ್ರಮಣ

ಭಾರತದ ಮೇಲೆ ಆಕ್ರಮಣಮಾಡಿದ ಮುಸ್ಲಿಂ ಆಕ್ರಮಣಕಾರರಲ್ಲಿ ಅರಬರು ಮೊಟ್ಟಮೊದಲಿಗರಾಗಿದ್ದರು. ಪ್ರವಾದಿ ಮಹಮದರು ಕಾಲವಾದ ಇಪ್ಪತ್ತು ವರ್ಷಗಳ ಅವಧಿಯಲ್ಲಿ ಅರಬರು ಸಿರಿಯಾ, ಪ್ಯಾಲಸ್ಟೈನ್, ಈಜಿಪ್ಟ್ ಮತ್ತು ಪರ್ಶಿಯಾಗಳ ಮೇಲೆ ಅಧಿಕಾರವನ್ನು ಸ್ಥಾಪಿಸಿದರು. ಪರ್ಶಿಯಾದ ಮೇಲೆ ತಮ್ಮ ಅಧಿಕಾರ ಸ್ಥಾಪನೆಯಿಂದ ಉತ್ತೇಜಿತರಾದ ಅರಬರು ತಮ್ಮ ಅಧಿಕಾರವನ್ನು ಪೂರ್ವದಲ್ಲೂ ಸ್ಥಾಪಿಸಬೇಕೆಂದು ಮನಸ್ಸುಮಾಡಿದರು. ಭಾರತದ ತೀರ ಪ್ರದೇಶಗಳೊಂದಿಗೆ ವ್ಯಾಪಾರ ಮಾಡುತ್ತಿದ್ದ

ಅರಬ್ ವರ್ತಕರಿಂದ ಭಾರತದ ಐಶ್ವರ್ಯದ ಬಗ್ಗೆ ತಿಳಿದ ಅರಬರು ಉಮ್ಮರನು ಖಲೀಫನಾಗಿದ್ದಾಗ (636-637) ಭಾರತದ ತೀರ ಪ್ರದೇಶಗಳನ್ನು ಲೂಟಿಮಾಡಿ ಐಶ್ವರ್ಯವನ್ನು ಕೊಳ್ಳೆ ಹೊಡೆಯಲು ದಂಡಯಾತ್ರೆಯನ್ನು ನಿಯೋಜಿಸಿದರು. ಆದರೆ ಅದೊಂದು ಕಷ್ಟಕರವಾದ ಕಾರ್ಯವೆಂದು ಖಲೀಫನು ಮನಗಂಡು ಆ ದಂಡಯಾತ್ರೆಯನ್ನು ತಡಿಹಿಡಿದನು. ಉಮ್ಮರನ ನಂತರ ಅಧಿಕಾರಕ್ಕೆ ಬಂದ ಖಲೀಫರು ಭಾರತದ ಮೇಲೆ ದಂಡಯಾತ್ರೆಗೆ ಪ್ರೋತ್ಸಾಹ ನೀಡಿದರು. ಕ್ರಿ.ಶ. 643-644ರಲ್ಲಿ ಅಬ್ದುಲ್ಲಾ-ಬಿನ್-ಅಮರ್-ಬೆನ್-ರಬಿ ಎಂಬವನು ಕಿರ್‌ಮನ್ ಮೇಲೆ ಧಾಳಿ ಮಾಡಿದನು. ಅನಂತರ ಅವನು ತನ್ನ ದಂಡಯಾತ್ರೆಯನ್ನು ಮುಂದುವರಿಸಿ ಸಿಸ್ತಾನ್‌ಗೆ ಮುತ್ತಿಗೆ ಹಾಕಿ ಅಲ್ಲಿಯ ರಾಜನು ಶಾಂತಿ ಒಪ್ಪಂದ ಮಾಡಿಕೊಳ್ಳುವಂತೆ ಮಾಡಿದನು. ಇದಾದ ಮೇಲೆ ಅವನು ಮಕ್ರಾನ್ ಕಡೆ ಮುಂದುವರಿದನು. ಮಕ್ರಾನ್ ಮತ್ತು ಸಿಂಧ್‌ನ ರಾಜರುಗಳ ಒಟ್ಟುಗೂಡಿದ ಸೈನ್ಯವು, ಅವನನ್ನು ಎದುರಿಸಿತು. ಆದರೆ ರಾತ್ರಿ ವೇಳೆಯಲ್ಲಿ ಅಬ್ದುಲ್ಲನ ಸೈನ್ಯವು ಮಾಡಿದ ಆಕ್ರಮಣದಿಂದ ಹಿಂದುಗಳ ಸೈನ್ಯವು ಪರಾಜಿತವಾಯಿತು. ಈ ವಿಜಯದಿಂದ ಉತ್ಸಾಹಗೊಂಡ ಅಬ್ದುಲ್ಲನು ಸಿಂಧುನದಿಯ ಮತ್ತೊಂದು ದಡದಲ್ಲಿಯೂ ವಿಜಯಗಳಿಸಬೇಕೆಂದು ಅಪೇಕ್ಷಿಸಿದನು. ಆದರೆ ಖಲೀಫನ ಆಜ್ಞೆಯು ಅವನ ಈ ಪ್ರಯತ್ನಕ್ಕೆ ಅಡ್ಡಬಂದು ಅಬ್ದುಲ್ಲನು ತನ್ನ ಪ್ರಯತ್ನವನ್ನು ಕೈಬಿಡಬೇಕಾಯಿತು. ಇದಾದ ನಂತರ ಅರಬ್ಬರು ಕ್ರಿ.ಶ. ಎಂಟನೆ ಶತಮಾನಕ್ಕೆ ಮುಂಚೆ ಭಾರತದ ಮೇಲೆ ತಮ್ಮ ಅಧಿಕಾರವನ್ನು ಸ್ಥಾಪಿಸಲು ಪ್ರಯತ್ನಿಸಲಿಲ್ಲ, ಆದರೆ ಅವರು ತಮ್ಮ ಆಸೆಯನ್ನು ಪೂರ್ಣವಾಗಿ ಕೈಬಿಟ್ಟಿರಲಿಲ್ಲ. ಕ್ರಿ.ಶ. ಎಂಟನೇ ಶತಮಾನದ ಆರಂಭದಲ್ಲಿ ಭಾರತದ ಮೇಲೆ ಆಕ್ರಮಣಮಾಡಲು ಅವಕಾಶವೊಂದು ಒದಗಿಬಂದಿತು. ಅದೇಂದರೆ ಸಿಂಹಳದ ರಾಜನು ಖಲೀಫನಿಗೆ ಉಡುಗೊರೆಯ ರೂಪದಲ್ಲಿ ಹಡಗಿನಲ್ಲಿ ಕಳುಹಿಸಿದ್ದ ಬೆಲೆಬಾಳುವ ವಸ್ತುಗಳನ್ನು ಸಿಂಧ್‌ಪ್ರಾಂತ್ಯದ ದೇಬಲ್‌ನ ಕಡಲ್ಗಳ್ಳರು ಲೂಟಿಮಾಡಿದುದಾಗಿತ್ತು. ಈ ಕಡಲ್ಗಳ್ಳರನ್ನು ಶಿಕ್ಷಿಸಲು ಖಲೀಫನ ಪ್ರತಿನಿಧಿಯೂ ಮತ್ತು ಇರಾಕಿನ ರಾಜ್ಯಪಾಲನೂ ಆಗಿದ್ದ ಹಜಾಜನು ಸೈನ್ಯವೊಂದನ್ನು ಕಳುಹಿಸಿದನು. ಆದರೆ ಈ ಸೈನ್ಯವು ಪೂರ್ಣಸೋಲನ್ನನುಭವಿಸಿದ್ದಲ್ಲದೆ ಆದರ ನಾಯಕನೂ ಕೊಲ್ಲಲ್ಪಟ್ಟನು. ಇದರಿಂದ ಅವಮಾನಿತನಾದ ಹಜಾಜನು ಸಿಂಧ್‌ನವರ ಮೇಲೆ ಪ್ರತೀಕಾರ ಕೈಗೊಳ್ಳಲು ನಿರ್ಧರಿಸಿ ಉತ್ತಮ ಶಸ್ತ್ರಾಸ್ತ್ರಗಳನ್ನು ಹೊಂದಿದ ಸೈನಿಕರಿಂದ ಕೂಡಿದ ಮತ್ತೊಂದು ದಂಡಯಾತ್ರೆಯನ್ನು ನಿಯೋಜಿಸಿ ಮಹಮದ್-ಬಿನ್-ಕಾಸಿಮ್ ಎಂಬವನ ನಾಯಕತ್ವದಲ್ಲಿ ಸಿಂಧ್‌ನ ಬ್ರಾಹ್ಮಣ ದೊರೆ ದಾಹಿರನನ್ನು ಶಿಕ್ಷಿಸಲು ಕಳುಹಿಸಿಕೊಟ್ಟನು.

**ಮಹಮದ್-ಬಿನ್-ಖಾಸಿಮ್‌ನ ಆಕ್ರಮಣ (ಕ್ರಿ.ಶ. 712)**

ಸಿಂಧ್ ಪ್ರಾಂತ್ಯದ ಮೇಲೆ ಮಹಮದ್ ಖಾಸಿಮನ ಆಕ್ರಮಣದ ಸಂಗತಿಯು ಮುಸ್ಲಿಮರ ಇತಿಹಾಸದ ಅದ್ಭುತ ಕಥೆಗಳಲ್ಲೊಂದಾಗಿದೆ. ಖಾಸಿಮನು ಧೀರಯೋಧನಾಗಿದ್ದನು. ಅವನು ಹಜಾಜ್‌ನಿಂದ ಆರಿಸಿ ಕಳುಹಿಸಲ್ಪಟ್ಟ ಸುಸಜ್ಜಿತ ಸೈನ್ಯದೊಂದಿಗೆ ತನ್ನ ಆಕ್ರಮಣವನ್ನು ಆರಂಭಿಸಿದನು. ಖಾಸಿಮನು ಮಕ್ರಾನ್ ತಲುಪಿದ ಮೇಲೆ ಅಲ್ಲಿಯ ರಾಜ್ಯಪಾಲನಾಗಿದ್ದ ಮಹಮದ್ ಹರೂನನು ತನ್ನ ಸೈನ್ಯದೊಂದಿಗೆ ಖಾಸಿಮನನ್ನು ಸೇರಿಕೊಂಡನು. ಅರಬರ ಈ ಸೈನ್ಯದ ಜೊತೆಗೆ ಹಿಂದೂಗಳ ರಾಜರುಗಳ ಆಡಳಿತದ ಬಗ್ಗೆ ಅತೃಪ್ತಿಗೊಂಡಿದ್ದ ಜಾತರು (Jats) ಮತ್ತು ಮೇಡರು (Medes) ಕೂಡ

ಖಾಸಿಮನ ಸೈನ್ಯದೊಂದಿಗೆ ಸೇರಿಕೊಂಡರು.

ಮಹಮದ್‌ಖಾಸಿಮನು ಕ್ರಿ.ಶ. 712ರಲ್ಲಿ ದೇಬಲ್ ಪಟ್ಟಣವನ್ನು ತಲುಪಿ ತನ್ನ ಕಾರ್ಯಾಚರಣೆಯನ್ನಾರಂಭಿಸಿದನು. ದೇಬಲ್‌ನ ದೊಡ್ಡ ದೇವಾಲಯದ ಮೇಲೆ ಹಾರಾಡುತ್ತಿದ್ದ ಧ್ವಜವನ್ನು ಮುಸ್ಲಿಮರು ಕೆಳಗಿಳಿಸಿ ಅಲ್ಲಿನ ಹಿಂದೂಗಳಲ್ಲಿ ಭಯೋತ್ಪಾದನೆಯನ್ನುಂಟುಮಾಡಿದರು. ಈ ಘಟನೆಯನಂತರ ಹಿಂದೂಗಳು ಮುಸ್ಲಿಮರ ವಿರುದ್ಧ ರಣರಂಗಕ್ಕಿಳಿದು ತೀವ್ರ ಹೋರಾಟವನ್ನಾರಂಭಿಸಿದರು. ಮಹಮದ್-ಬಿನ್-ಖಾಸಿಮನಿಗೂ ಸಿಂಧ್‌ನ ಬ್ರಾಹ್ಮಣ ದೊರೆ ದಾಹಿರನಿಗೂ ನಡೆದ ಯುದ್ಧವು ಭೀಕರವಾಗಿತ್ತು. ದಾಹಿರನ ಸೈನ್ಯದಲ್ಲಿ ಆನೆ ಮೊದಲಾದವುಗಳಿದ್ದರೂ ಅದು ಕೊನೆಗೆ ಸಂಪೂರ್ಣ ಸೋಲನ್ನನುಭವಿಸಬೇಕಾಯಿತು. ದಾಹಿರನು ಕುಳಿತಿದ್ದ ಆನೆಯ ಅಂಬಾರಿಗೆ ಬಾಣವೊಂದು ತಗುಲಿ ಅದು ಉರಿಯತೊಡಗಿದ್ದರಿಂದ ದಾಹಿರನು ಕೆಳಗೆ ಬಿದ್ದನು. ಆದರೆ ಅವನು ತಕ್ಷಣವೇ ಚೇತರಿಸಿಕೊಂಡು ಶತ್ರು ಸೈನ್ಯದ ವಿರುದ್ಧ ಹೋರಾಡುತ್ತಿರುವಾಗ ಅವನ ತಲೆಗೆ ಕತ್ತಿಯ ಬಲವಾದ ಏಟು ಬಿದ್ದು ಅವನು ರಣರಂಗದಲ್ಲಿಯೇ ಮಾಡಿದನು. ತಮ್ಮ ದೊರೆಯ ಮರಣದಿಂದ ದಿಗ್ಭ್ರಾಂತರಾದ ಹಿಂದುಗಳು ಶೌರ್ಯ ಸಾಹಸಗಳಿಂದ ಮುಸ್ಲಿಂ ಸೈನ್ಯದ ವಿರುದ್ಧ ಹೋರಾಡಿದರು. ಆದರೂ ಹಿಂದೂಗಳಿಗೆ ಜಯವು ಲಭಿಸಲಿಲ್ಲ. ದಾಹಿರನ ಹೆಂಡತಿ ಮತ್ತು ಮಕ್ಕಳು ರಾವರ್ ಕೋಟೆಯಲ್ಲಿ ಆಶ್ರಯ ಪಡೆದರು. ಅಲ್ಲಿ ಈ ವೀರರಾಣಿಯು ತನ್ನ ಪತಿಯ ಶತ್ರುಗಳ ವಿರುದ್ಧ ಹೋರಾಡಲು ಸಂಕಲ್ಪ ಮಾಡಿದಳು. ರಾವರ್ ಕೋಟೆಯ ಒಳಗಿದ್ದ ಹದಿನೈದು ಸಾವಿರ ಸೈನ್ಯವು ರಾಣಿಯ ಈ ಸಂಕಲ್ಪದಿಂದ ಪ್ರೋತ್ಸಾಹಗೊಂಡು ಕೋಟೆಯ ಹೊರಗೆ ಬೀಡುಬಿಟ್ಟಿದ್ದ ಮುಸ್ಲಿಂ ಸೈನ್ಯದ ಮೇಲೆ ಕಲ್ಲುಗಳ ಮತ್ತು ಬಾಣಗಳ ಸುರಿಮಳೆಯನ್ನು ಸುರಿಸಿತು. ಆದರೆ ಮುಸ್ಲಿಂ ಸೈನಿಕರು ಸ್ವಲ್ಪವೂ ಅಧೈರ್ಯಗೆಡದೆ ರಾವರ್ ಕೋಟೆಯ ಮುತ್ತಿಗೆಯನ್ನು ಮುಂದುವರಿಸಿದರು. ವಿಧವಾ ರಾಣಿಯು ತನ್ನ ಪತನವು ನಿಶ್ಚಿತವೆಂದು ತಿಳಿದ ಮೇಲೆ ಕೋಟೆಯ ಒಳಗಿದ್ದ ಎಲ್ಲಾ ಸ್ತ್ರೀಯರನ್ನು ಕುರಿತು ಈ ರೀತಿ ಹೇಳಿದಳು. "ಗೋಭಕ್ಷಕರಾದ ಕುಲಹೀನರಿಗೆ ತಮ್ಮ ಸ್ವಾತಂತ್ರ್ಯವನ್ನು ಒಪ್ಪಿಸಲೇಬೇಕೆಂಬುದನ್ನು ದೇವರು ತಪ್ಪಿಸಲಿ. ನಮ್ಮ ಮಾನಭಂಗವಾಗುವುದು ನಿಶ್ಚಿತ. ನಾವು ಇಲ್ಲಿಂದ ತಪ್ಪಿಸಿಕೊಂಡು ಹೋಗುವುದಕ್ಕೆ ಮಾರ್ಗವೂ ಇಲ್ಲ ಮತ್ತು ಅದಕ್ಕೆ ಸಮಯವೂ ಇಲ್ಲ. ಆದ್ದರಿಂದ ಎಲ್ಲರೂ ಚಿತೆಯಲ್ಲಿ ಬಿದ್ದು ಪ್ರಾಣಾರ್ಪಣೆಮಾಡಿ ನಮ್ಮ ಪತಿಗಳನ್ನು ಸೇರಿಕೊಳ್ಳೋಣ." ಅದೇ ಪ್ರಕಾರ ಅವರೆಲ್ಲರೂ ಬೆಂಕಿಯಲ್ಲಿ ಬಿದ್ದು ತಮ್ಮ ಪ್ರಾಣವನ್ನು ಕಳೆದುಕೊಳ್ಳುವುದರ ಮೂಲಕ ತಮ್ಮ ಕುಲದ ಗೌರವವನ್ನು ಕಾಪಾಡಿಕೊಂಡರು.

ಮಹಮದ್ ಖಾಸಿಮನು ರಾವರ್ ಕೋಟೆಯನ್ನು ವಶಪಡಿಸಿಕೊಂಡು ಅಲ್ಲಿ ಉಳಿದಿದ್ದವರಲ್ಲನೇಕರನ್ನು ಕೊಂದು ದಾಹಿರನಿಗೆ ಸೇರಿದ್ದ ಐಶ್ವರ್ಯವನ್ನೆಲ್ಲಾ ವಶಪಡಿಸಿಕೊಂಡನು. ಈ ವಿಜಯದಿಂದ ಉತ್ಸಾಹಿತನಾದ ಅವನು ಬ್ರಾಹ್ಮಣಬಾದ್ ಕಡೆ ತನ್ನ ದಂಡಯಾತ್ರೆಯನ್ನು ಮುಂದುವರಿಸಿ ಅದನ್ನೂ ವಶಪಡಿಸಿಕೊಂಡನು. ಇದೇ ಸಮಯದಲ್ಲಿ ಅಲೋರ್ ಮತ್ತು ಸಿಲ್‌ಗಳನ್ನೂ ವಶಪಡಿಸಿಕೊಂಡನು ಮತ್ತು ಆ ಪ್ರದೇಶಗಳಲ್ಲಿ ಮುಸ್ಲಿಮರ ನೆಲಸುವಿಕೆ ಪ್ರಾರಂಭವಾಯಿತು. ಬ್ರಾಹ್ಮಣಾಬಾದಿನ ವಿಜಯದ ನಂತರ ಖಾಸಿಮನು ಸಿಂಧೂನದಿಯ ಮೇಲ್ದಂಡೆಯ ಮೇಲಿದ್ದ ವ್ಯಾಪಾರ ಮತ್ತು ಕೈಗಾರಿಕೆಗಳ ಕೇಂದ್ರವಾಗಿದ್ದ ಮುಲ್ತಾನಿನ ಮೇಲೆ ತನ್ನ ದಂಡಯಾತ್ರೆಯನ್ನು ಮುಂದುವರಿಸಿದನು.

ಮುಲ್ತಾನ್ ಕೋಟೆಯಲ್ಲಿದ್ದ ಸೈನ್ಯವು ಸೋತು ಶರಣಾಗತವಾಯಿತು. ಖಾಸಿಮನು ಮುಲ್ತಾನನ್ನು ವಶಪಡಿಸಿಕೊಂಡ ನಂತರ ಆ ರಾಜ್ಯದ ಆಡಳಿತದ ವ್ಯವಸ್ಥೆಯ ಬಗ್ಗೆ ಗಮನ ಕೊಟ್ಟನು. ಅಲ್ಲಿನ ಜನಗಳ ಮೇಲೆ ಜೆಸಿಯಾ ಕಂದಾಯವನ್ನು ವಿಧಿಸಿದನು. ಅವನ ಸೈನ್ಯಾಧಿಕಾರಿಗಳಲ್ಲಿ ಸಮರ್ಥನಾದ ಅಬೂಹಕೀಮ್ ಎಂಬವನನ್ನು ಕನೂಜಿನ ಮೇಲೆ ದಂಡೆತ್ತಿ ಹೋಗಲು ನೇಮಿಸಿದನು. ಆದರೆ ಹಕೀಮನು ತನ್ನ ದಂಡಯಾತ್ರೆಯನ್ನು ಆರಂಭಿಸುವ ಮೊದಲೇ ಖಾಸಿಮನ ಜೀವನದ ಪತನಕ್ಕೆ ಸಂಬಂಧಿಸಿದ ಖಲೀಫನ ಆಜ್ಞಾಪತ್ರವೊಂದು ಖಾಸಿಮನ ಕೈಸೇರಿ ಕನೂಜಿನ ಮೇಲಿನ ದಂಡಯಾತ್ರೆಯನ್ನು ಅವನು ಕೈಬಿಡಬೇಕಾಯಿತು.

**ಮಹಮದ್ ಖಾಸಿಮನ ಮರಣ**

ಮಹಮದ್ ಖಾಸಿಮನ ಅವನತಿಯು ಅವನ ಏಳಿಗೆಯಷ್ಟೇ ತ್ವರಿತವಾಗಿತ್ತು. ಅವನ ಅದೃಷ್ಟದ ಜತೆಯಲ್ಲಿ ದುರಾದೃಷ್ಟವೂ ಅವನ ಬೆನ್ನು ಹತ್ತಿದ್ದಿತು. ಅವನ ಸಾವಿನ ಬಗ್ಗೆ ಒಂದು ಕಟ್ಟುಕಥೆಯನ್ನು ಹೇಳಲಾಗಿದೆ. ದಾಹಿರನ ಮಕ್ಕಳಾದ ಪರಿಮಳದೇವಿ ಮತ್ತು ಸೂರಜ್‌ದೇವಿ ಎಂಬವರು ತಮ್ಮ ತಂದೆಯ ಸಾವಿಗೆ ಕಾರಣನಾದ ಮಹಮದ್ ಖಾಸಿಮನ ವಿರುದ್ಧ ಪ್ರತೀಕಾರ ಕೈಗೊಳ್ಳಲು ನಿರ್ಧರಿಸಿದರು. ಖಾಸಿಮನು ಅವರಿಬ್ಬರನ್ನೂ ಸೆರೆಹಿಡಿದು ಖಲೀಫನ ಅಂತಃಪುರಕ್ಕೆ ಸೇರಿಸುವ ಮೊದಲು ಅವರನ್ನು ಖಲೀಫನ ಮುಂದೆ ಹಾಜರುಪಡಿಸಿದಾಗ ಅವರು ಖಾಸಿಮನ ವಿರುದ್ಧ ಒಂದು ಕತೆಯನ್ನು ಸೃಷ್ಟಿಸಿ ಹೇಳಿದರು. ಖಲೀಫನ ಹತ್ತಿರ ತಮ್ಮನ್ನು ಕಳುಹಿಸುವ ಮೊದಲೇ ಖಾಸಿಮನು ತಮ್ಮ ಮೇಲೆ ಅತ್ಯಾಚಾರವೆಸಗಿರುವುದರಿಂದ ತಾವು ಖಲೀಫರಿಗೆ ಯೋಗ್ಯವಲ್ಲವೆಂದು ತಿಳಿಸಿದರು. ಇದನ್ನು ನಂಬಿದ ಖಲೀಫನು ಖಾಸಿಮನನ್ನು ಜೀವಸಹಿತ ಎತ್ತಿನ ಒಣಚರ್ಮದಲ್ಲಿ ಸುತ್ತಿ ಅವನನ್ನು ರಾಜಧಾನಿಗೆ ಕಳುಹಿಸಬೇಕೆಂದು ಆಜ್ಞೆ ಮಾಡಿದನು. ಈ ಕಠೋರ ಆಜ್ಞೆಯನ್ನು ಕೇಳಿದ ಖಾಸಿಮನು ಆ ಚರ್ಮವನ್ನು ತಾನೇ ಮೈಗೆ ಸುತ್ತಿಕೊಂಡು ರಾಜಧಾನಿಗೆ ಹೋಗಲು ಸಿದ್ಧನಾದನು. ಆದರೆ ಅವನು ರಾಜಧಾನಿಯನ್ನು ತಲುಪುವ ಮೂರು ದಿವಸಗಳ ಮೊದಲೇ ಅವನ ಪ್ರಾಣಪಕ್ಷಿಯು ಹಾರಿಹೋಗಿತ್ತು. ಅವನ ಶವದ ಪೆಟ್ಟಿಗೆಯನ್ನು ಖಲೀಫನಿಗೆ ತಲುಪಿಸಿದರು. ಖಲೀಫನು ಅದನ್ನು ದಾಹಿರನ ಇಬ್ಬರು ಹೆಣ್ಣುಮಕ್ಕಳ ಎದುರಿಗೆ ತೆರೆಯುವಂತೆ ತಿಳಿಸಿದನು. ರಾಜಕುಮಾರಿಯರಿಬ್ಬರೂ ತಮ್ಮ ತಂದೆಯ ಮರಣಕ್ಕೆ ಕಾರಣನಾದ ಖಾಸಿಮನ ಬಗ್ಗೆ ಸ್ವಲ್ಪವೂ ಕೋಪವನ್ನು ವ್ಯಕ್ತಪಡಿಸದೆ ಖಾಸಿಮನು ನಿರಪರಾಧಿಯೆಂದು ಖಲೀಫನಿಗೆ ತಿಳಿಸಿದರು. ಇದರಿಂದ ಖಲೀಫನು ಪಶ್ಚಾತ್ತಾಪಗೊಂಡನು. ಆದರೆ ಕೆಲಸವು ಮಿಂಚಿಹೋಗಿತ್ತು. ಖಲೀಫನು ರಾಜಕುಮಾರಿಯರಿಬ್ಬರನ್ನೂ ಕುದುರೆಯ ಕಾಲಿಗೆ ಕಟ್ಟಿಸಿ ಅವರು ಸಾಯುವನತಕ ಎಳೆಸುವಂತೆ ಅಪ್ಪಣೆ ಮಾಡಿದನು. ಈ ರೀತಿಯಲ್ಲಿ ಅರಬರ ವೀರಯೋಧ ಮಹಮದ್ ಖಾಸಿಮನು ಮರಣವು ಸಂಭವಿಸಿತು. ಆದರೆ ಈ ಕಥೆಯನ್ನು ಇತಿಹಾಸಕಾರರೆಲ್ಲರೂ ಒಪ್ಪುವುದಿಲ್ಲ.

**ಅರಬರ ವಿಜಯಕ್ಕೆ ಕಾರಣಗಳು**

ಮಹಮದ್-ಬಿನ್-ಖಾಸಿಮನು ಕೇವಲ ಒಂದು ವರ್ಷದ ಅವಧಿಯಲ್ಲಿ ಗಳಿಸಿದ ವಿಜಯಗಳಿಗೆ ಹಲವಾರು ಕಾರಣಗಳಿದ್ದವು. ಅವುಗಳೆಂದರೆ 1. ಇರಾಕಿನ ರಾಜ್ಯಪಾಲನಾಗಿದ್ದ

ಹಜಾಜನು ಖಾಸಿಮನೊಂದಿಗೆ ಯುದ್ಧ ಕಲೆಯಲ್ಲಿ ನುರಿತ ಯೋಧರನ್ನು ಕಳುಹಿಸಿದ್ದನು. 2. ಮಕ್ರಾನ್‌ನ ರಾಜ್ಯಪಾಲನು ಖಾಸಿಮನಿಗೆ ಸೈನಿಕ ಸಹಾಯ ಮಾಡುವುದರ ಮೂಲಕ ನೆರವು ನೀಡಿದನು. 3. ದಾಹಿರನ ಆಡಳಿತದಿಂದ ಅಸಮಾಧಾನ ಗೊಂಡಿದ್ದ ಜಾತರು ಮೊದಲಾದ ಹಿಂದುಗಳು ತಮ್ಮ ರಕ್ಷಣೆಯ ಜವಾಬ್ದಾರಿಯನ್ನು ಹಜಾಜನಿಂದ ಪಡೆದುಕೊಂಡು ತಮ್ಮ ದೊರೆಯ ವಿರುದ್ಧ ಮೋಸಕೃತ್ಯದಲ್ಲಿ ತೊಡಗಿ ಖಾಸಿಮನ ವಿಜಯಕ್ಕೆ ಕಾರಣರಾದರು. 4. ದಾಹಿರನ ಸೈನ್ಯದಲ್ಲಿದ್ದ ಅರಬರ ಕೆಲವು ಸೈನಿಕರು ಯುದ್ಧದ ಸಮಯದಲ್ಲಿ ಪಕ್ಷಾಂತರಗೊಂಡುದುದು ಮತ್ತೊಂದು ಕಾರಣವಾಗಿತ್ತು. ಕೊನೆಯದಾಗಿ ಖಾಸಿಮನ ನೀತಿಯೂ ಕೂಡ ಅವನ ವಿಜಯಕ್ಕೆ ಕಾರಣವಾಗಿತ್ತು. ಅವನು ಆಕ್ರಮಣದ ಸಮಯದಲ್ಲಿ ಘೋರ ಕೃತ್ಯಗಳನ್ನೆಸಗಿ ಜನರಲ್ಲಿ ಭೀತಿ ಹುಟ್ಟಿಸಿದನು. ಯುದ್ಧಾನಂತರ ಅಲ್ಲಿನ ಜನಗಳ ಬಗ್ಗೆ ಉದಾರವಾಗಿ ವರ್ತಿಸಿ ಅವರ ಸಹಕಾರವನ್ನು ಪಡೆದುಕೊಂಡನು. ಬ್ರಾಹ್ಮಣರಿಗೆ ಆಡಳಿತದಲ್ಲಿ ಉನ್ನತ ಹುದ್ದೆಗಳನ್ನು ಕೊಟ್ಟು ಹಿಂದುಗಳಿಂದ ಗಲಭೆಗಳಾಗದಂತೆ ನೋಡಿಕೊಂಡನು. ದಾಹಿರನ ಅಸಮರ್ಪಕ ಸೇನಾವ್ಯವಸ್ಥೆಯೂ ಕೂಡ ಅರಬರ ವಿಜಯಕ್ಕೆ ಕಾರಣವಾಗಿದ್ದಿತು.

**ಅರಬರ ದಂಡಯಾತ್ರೆಯ ಪರಿಣಾಮಗಳು**

ಸಿಂಧ್‌ನಲ್ಲಿ ಅರಬರ ವಿಜಯವು ಭಾರತದಲ್ಲಿ ಮುಸ್ಲಿಮರ ಸಾಮ್ರಾಜ್ಯ ಸ್ಥಾಪನೆಗೆ ತಕ್ಷಣವೇ ಸಹಾಯಕವಾಗಿದಿದ್ದರೂ ಅದು ಭಾರತದ ಮತ್ತು ಇಸ್ಲಾಮಿನ ಇತಿಹಾಸದ ಪುಟಗಳಲ್ಲಿ ಬಹುಮುಖ್ಯವಾದ ಘಟನೆಯಾಗಿರುತ್ತದೆ. "ಸಿಂಧ್ ಮೇಲಿನ ಅರಬರ ದಂಡಯಾತ್ರೆಯು ಭಾರತದ ಮತ್ತು ಇಸ್ಲಾಮಿನ ಇತಿಹಾಸದಲ್ಲಿ ಒಂದು ಘಟನೆ ಮಾತ್ರ ಮತ್ತು ಅದೊಂದು ಫಲಿತಾಂಶವಿಲ್ಲದ ವಿಜಯವೆಂದು" ಆಂಗ್ಲ ಇತಿಹಾಸಕಾರ ಸ್ಟಾನ್ಲೆಲೇನ್‌ಪೂಲ್ ಅಭಿಪ್ರಾಯ ಪಟ್ಟಿರುವನು. ಅರಬರು ಸಿಂಧ್ ಪ್ರಾಂತ್ಯದ ಪಟ್ಟಣಗಳಲ್ಲಿ ನೆಲೆಸಿದರು. ಮನ್ಸೂರ, ಬ್ರಾಹ್ಮಣಾಬಾದ್ ಮತ್ತು ಮುಲ್ತಾನ್‌ಗಳಲ್ಲಿ ತಮ್ಮ ವಸಾಹತುಗಳನ್ನು ಸ್ಥಾಪಿಸಿದರು. ಅರಬರು ಸಿಂಧ್ ಪ್ರಾಂತ್ಯವನ್ನು ಬಹಳ ವರ್ಷಗಳ ಕಾಲ ಆಳಿದರು. ಅವರು ಭಾರತದ ಒಳಭಾಗಕ್ಕೆ ಪ್ರವೇಶಿಸಲು ಸಾಧ್ಯವಾಗಲಿಲ್ಲ. ಅವರು ರಜಪುಟಾಣ, ಗುಜರಾತು ಕಾಥೇವಾಡ ಮತ್ತು ಕಚ್‌ನ ದೊರೆಗಳ ವಿರುದ್ಧ ಪದೇ ಪದೇ ದಂಡಯಾತ್ರೆಗಳನ್ನು ಮಾಡಿದರೂ ಅವರ ಪ್ರಯತ್ನವು ಫಲಿಸಲಿಲ್ಲ. ಮೇಲಾಗಿ ಅಂದಿನ ಭಾರತದಲ್ಲಿ ಪ್ರಬಲರಾಗಿದ್ದ ಗೂರ್ಜರ ಪ್ರತೀಹಾರ ಮತ್ತು ರಾಷ್ಟ್ರಕೂಟರ ವಿರುದ್ಧ ಹೋರಾಡುವ ಧೈರ್ಯವು ಅವರಿಗಿಲ್ಲದೆ ಅವರು ತಮ್ಮ ಅಧಿಕಾರವನ್ನು ಕೇವಲ ಸಿಂಧ್ ಪ್ರಾಂತ್ಯಕ್ಕೆ ಸೀಮಿತಗೊಳಿಸಿಕೊಂಡರು. ಕಾಲಾನುಕ್ರಮದಲ್ಲಿ ಅರಬರು ತಮ್ಮ ತಮ್ಮಲ್ಲಿಯೆ ಜಗಳವಾಡಲು ಪ್ರಾರಂಭಿಸಿದರು. ಇದರಿಂದ ಸಿಂಧ್‌ನಲ್ಲಿ ಅವರ ಅಧಿಕಾರವು ಕ್ಷೀಣಿಸುತ್ತಾ ಬಂದು ಅವರ ಆಡಳಿತವು ಕೇವಲ ನಗರಗಳಿಗೆ ಮಾತ್ರ ಸೀಮಿತವಾಗತೊಡಗಿತು. ಆದರೂ ಅರಬರು ಸಿಂಧ್ ಮೇಲೆ ಆಕ್ರಮಣ ಮಾಡಿದಂದಿನಿಂದ ಮಧ್ಯ ಕಾಲೀನ ಯುಗವು ಮುಗಿಯುವವರೆಗೂ ಆ ಭಾಗದಲ್ಲಿ ಮುಸ್ಲಿಮರೇ ಹೆಚ್ಚಾಗಿದ್ದರೆಂಬ ಅಂಶವನ್ನು ಯಾರೂ ಮರೆಯುವಂತಿಲ್ಲ. ಅರಬರು ಸಿಂಧ್‌ನಲ್ಲಿ ನೆಲಸಿದುದರ ಪರಿಣಾಮವಾಗಿ ಅನೇಕ ಅರಬ್ಬೀ ಪ್ರವಾಸಿಗಳು, ವರ್ತಕರು, ಸಂತರು ಸಿಂಧ್ ಹಾಗೂ ಭಾರತದ ಇತರ ಭಾಗಗಳಿಗೆ ಭೇಟಿ ನೀಡಿದರು. ಅವರ ಪ್ರವಾಸದ ಬರವಣಿಗೆಗಳಿಂದ ಭಾರತದ ಐಶ್ವರ್ಯದ ಬಗ್ಗೆ ಕೇಳಿದ ಟರ್ಕರಿಗೆ ಮುಂದೆ ಭಾರತದ ಮೇಲೆ ದಂಡಯಾತ್ರೆ ಮಾಡಲು ಅನುಕೂಲವಾಯಿತು.

## ಸಾಂಸ್ಕೃತಿಕ ಪರಿಣಾಮಗಳು

ಸಿಂಧ್‌ಮೇಲಿನ ಅರಬರ ವಿಜಯವು ರಾಜಕೀಯವಾಗಿ ಭಾರತದ ಮತ್ತು ಇಸ್ಲಾಂಮಿನ ಇತಿಹಾಸದಲ್ಲಿ ಫಲಿತಾಂಶವಿಲ್ಲದ ವಿಜಯವೆಂದು ಕಂಡುಬಂದರೂ ಅದು ಮುಸ್ಲಿಂ ಸಂಸ್ಕೃತಿಯ ಮೇಲೆ ವಿಶೇಷವಾದ ಪ್ರಭಾವವನ್ನು ಬೀರಿರುತ್ತದೆ. ಅರಬರು ಭಾರತದ ಉತ್ತಮ ನಾಗರಿಕತೆಯನ್ನು ಕಂಡು ಚಕಿತರಾದರು. ಹಿಂದುಗಳ ವಿದ್ವತ್ತು, ದಾರ್ಶನಿಕತೆ ಮತ್ತು ತತ್ವಶಾಸ್ತ್ರಗಳು ಅವರಿಗೆ ಹಿಡಿಸಿ ಭಾರತೀಯರ ಬಗ್ಗೆ ಹೆಚ್ಚಿನ ಗೌರವ ಭಾವನೆ ಬೆಳೆಸಿಕೊಂಡರು. ದೇವರು ಒಬ್ಬನೇ ಎಂಬ ಇಸ್ಲಾಂ ಧರ್ಮದ ಬಹುಮುಖ್ಯ ತತ್ವಗಳು ಹಿಂದುಗಳ ದಾರ್ಶನಿಕರಿಗೆ ಮೊದಲೇ ತಿಳಿದಿದ್ದುವೆಂಬುದನ್ನು ಅರಬರು ಮನಗಂಡರು. ಅರಬರು ಹಿಂದುಗಳಿಂದ ಆಡಳಿತಕ್ಕೆ ಸಂಬಂಧಿಸಿದಂತೆ ಹಲವಾರು ವಿಷಯಗಳನ್ನು ಕಲಿತರು. ಆಡಳಿತದಲ್ಲಿ ಹೆಚ್ಚಿಗೆ ಅನುಭವವನ್ನು ಪಡೆದಿದ್ದ ಬ್ರಾಹ್ಮಣರನ್ನು ಸರ್ಕಾರದ ಉನ್ನತ ಹುದ್ದೆಗಳಿಗೆ ನೇಮಿಸಿಕೊಂಡರು. ಭಾರತೀಯ ಸಂಸ್ಕೃತಿಯ ಹಲವಾರು ಅಂಶಗಳನ್ನು ತಮ್ಮ ಸಂಸ್ಕೃತಿಯಲ್ಲಿ ಅಳವಡಿಸಿಕೊಂಡು ಅವುಗಳನ್ನು ಯೂರೋಪಿನಲ್ಲಿಯೂ ಪ್ರಚಾರ ಮಾಡಿದರು. ಬಾಗ್ದಾದಿನ ಖಲೀಫರು ತಮ್ಮ ಆಸ್ಥಾನಗಳಿಗೆ ಭಾರತದ ವಿದ್ವಾಂಸರನ್ನು ಆಹ್ವಾನಿಸಿ ಅವರಿಗೆ ಉದಾರಾಶ್ರಯ ನೀಡಿದರು. ಮನ್ಸೂರ್ (735-774) ಮತ್ತು ಹರೂನ್-ಅಲ್-ರಷೀದ್ (780-809) ಎಂಬುವರು ಖಲೀಫರಾಗಿದ್ದಾಗ ಅನೇಕ ಹಿಂದೂ ಪಂಡಿತರನ್ನು ಬಾಗ್ದಾದಿಗೆ ಆಮಂತ್ರಿಸಿದರು. ಅವರು ಗಣಿತ ಶಾಸ್ತ್ರ, ಖಗೋಳಶಾಸ್ತ್ರ, ವೈದ್ಯಶಾಸ್ತ್ರ, ರಸಾಯನಶಾಸ್ತ್ರ ಮತ್ತು ದರ್ಶನ ಶಾಸ್ತ್ರ ಮೊದಲಾದ ವಿಷಯಗಳನ್ನು ಸಂಸ್ಕೃತ ಭಾಷೆಯಿಂದ ಅರೇಬಿಕ್ ಬಾಷೆಗೆ ತರ್ಜುಮೆ ಮಾಡಲು ವ್ಯವಸ್ಥೆ ಮಾಡಿದರು. ಇದರಿಂದ ಮುಸ್ಲಿಂ ಸಂಸ್ಕೃತಿಯು ಇನ್ನೂ ತರುಣಾ ವಸ್ಥೆಯಲ್ಲಿದ್ದಾಗಲೇ ಭಾರತೀಯರ ವಿದ್ವತ್ತಿನಿಂದ ಪ್ರಭಾವಿತರಾದ ಅರಬರು ತಮ್ಮ ಸಾಹಿತ್ಯ ಮತ್ತು ವಿಜ್ಞಾನವನ್ನು ವೃದ್ಧಿಸಿಕೊಂಡರು.

## ಭಾರತದ ಮೇಲೆ ಪರಿಣಾಮಗಳು

ಅರಬ್ಬರ ಆಕ್ರಮಣವು ಭಾರತದ ರಾಜಕೀಯ ಭದ್ರತೆಗೆ ದೊಡ್ಡ ಸವಾಲಾಗಿದ್ದಿತು. ಹರ್ಷನ ಮರಣಾ ನಂತರ ಭಾರತದ ಸಾರ್ವಭೌಮತ್ವಕ್ಕಾಗಿ ನಡಯುತ್ತಿದ್ದ ಸ್ಪರ್ಧೆಯ ಜೊತೆಗೆ ಕ್ರಿ.ಶ. 712ರಲ್ಲಿ ಸಿಂಧ್‌ನಲ್ಲಿ ರಾಜ್ಯಸ್ಥಾಪನೆ ಮಾಡಿದ ಅರಬರೂ ಸೇರಿಕೊಂಡರು. ಅರಬರೂ ಕೂಡ ರಾಜ್ಯ ವಿಸ್ತರಣಾಕಾಂಕ್ಷಿಗಳಾಗಿದ್ದರು. ಮಹಮದ್ ಬಿನ್ ಖಾಸಿಮ ನಂತರ ಸಿಂಧ್‌ನ ರಾಜ್ಯಪಾಲನಾಗಿದ್ದ ಜುನಾಯಿಡ್‌ನು ಕ್ರಿ.ಶ. 725ರಲ್ಲಿ ಬ್ರೋಚ್, ಗುಜರಾತ್ ಮತ್ತು ಮಾಳವಗಳನ್ನು ಗೆಲ್ಲಲು ಪ್ರಯತ್ನಿಸಿದನು. ಅವನು ತನ್ನ ಪ್ರಯತ್ನದಲ್ಲಿ ಮೊದಲಿಗೆ ಅಲ್ಪ ಸ್ವಲ್ಪ ವಿಜಯಗಳಿಸಿದರೂ ಕೊನೆಯಲ್ಲಿ ವಿಫಲನಾದನು. ಉತ್ತರದಲ್ಲಿ ಅರಬರು ಉಜ್ಜೈನಿಯ ಮೇಲೆ ತನ್ನ ಸೈನ್ಯವನ್ನು ಕಳುಹಿಸಿದಾಗ ಅವರು ಗೂರ್ಜರ ಪ್ರತಿಹಾರರ ದೊರೆ ನಾಗಭಟನಿಂದ ಸಂಪೂರ್ಣ ಸೋಲನ್ನು ಹೊಂದಿದರು. ನಾಗಭಟನು ಅರಬರ ವಿರುದ್ಧಗಳಿಸಿದ ವಿಜಯವು ಭಾರತವನ್ನು ಸುಮಾರು ಮುಂದಿನ ಮೂರು ಶತಮಾನಗಳ ಕಾಲ ರಕ್ಷಿಸಿತು. ಕ್ರಿ.ಶ. 883ರಲ್ಲಿ ಸಿಂಧ್‌ನ ರಾಜ್ಯಪಾಲನಾಗಿದ್ದ ಇಮ್ರಾನ್-ಬಿನ್-ಮೂಸಾ ಎಂಬುವನು ಕಚ್ ಅನ್ನು ಗೆಲ್ಲಲು ಪ್ರಯತ್ನಿಸಿದಾಗ ಅವನನ್ನು ಮಿಹಿರ ಭೋಜನು ಹೊಡೆದೋಡಿಸಿದನು. ನಾಗಭಟನ ವಿಜಯದ ನಂತರ ವಾಯವ್ಯ ಭಾರತದಲ್ಲಿ

ಹೊಸ ಪರಿಸ್ಥಿತಿಯು ಏರ್ಪಡುವತನಕ ಮುಸ್ಲಿಮರಿಂದ ಭಾರತಕ್ಕೆ ಅಪಾಯವು ತಪ್ಪಿದ್ದಿತು.

ಭಾರತದ ಮೇಲೆ ಅರಬರ ಆಕ್ರಮಣದ ಗಂಡಾಂತರವು ತಪ್ಪಿದ ಮೇಲೆ ಎರಡು ಪ್ರಬಲ ರಾಜ್ಯಗಳು ತಲೆಯೆತ್ತಿದ್ದವು. ಅವುಗಳೆಂದರೆ ಉತ್ತರದಲ್ಲಿ ಗೂರ್ಜರ ಪ್ರತೀಹಾರ ರಾಜ್ಯವು ಮತ್ತು ದಕ್ಷಿಣದಲ್ಲಿ ರಾಷ್ಟ್ರಕೂಟರ ರಾಜ್ಯಗಳಾಗಿದ್ದವು. ಹೊರಗಿನ ಆಕ್ರಮಣವು ರಾಷ್ಟ್ರೀಯತೆಯನ್ನು ಪ್ರಚೋದಿಸಿ ಒಂದು ಪ್ರಬಲ ಸಾಮ್ರಾಜ್ಯದ ಅವಶ್ಯಕತೆಯ ಅರಿವನ್ನುಂಟುಮಾಡಿಕೊಟ್ಟಿತು. ಆದ್ದರಿಂದ ಸಣ್ಣ ಪುಟ್ಟ ರಾಜ್ಯಗಳನ್ನು ಒಟ್ಟುಗೂಡಿಸುವುದು ಅತ್ಯಾವಶ್ಯಕವಾಗಿತ್ತು. ಉತ್ತರದಲ್ಲಿ ಪ್ರತೀಹಾರರು ಪ್ರಬಲ ಶಕ್ತಿಯಾಗಿ ಮಾರ್ಪಟ್ಟರು. ದಕ್ಷಿಣದಲ್ಲಿ ರಾಷ್ಟ್ರಕೂಟರು ಅಧಿಕಾರಕ್ಕೆ ಬಂದರು. ದಖನ್ನಿನ ಮೇಲೆ ತಮ್ಮ ಅಧಿಕಾರವನ್ನು ಭದ್ರಪಡಿಸಿಕೊಂಡ ರಾಷ್ಟ್ರಕೂಟರು ಪ್ರತೀಹಾರರ ವಿರುದ್ಧ ಬಂಗಾಳದ ಪಾಲರಿಗೆ ಸಹಾಯ ಮಾಡುವುದರ ಮೂಲಕ ಉತ್ತರ ಭಾರತದಲ್ಲಿ ರಾಜಕೀಯ ಸಮತೋಲನವನ್ನುಂಟುಮಾಡಲು ಪ್ರಯತ್ನಿಸಿದರು. ಆದರೆ ರಾಷ್ಟ್ರಕೂಟರ ಈ ಪ್ರಯತ್ನವು ಫಲಿಸಲಿಲ್ಲ. ಪ್ರತೀಹಾರರು ಪಾಲರ ವಿರುದ್ಧ ವಿಜಯಗಳಿಸಿ ಕನೂಜಿನ ಮೇಲೆ ತಮ್ಮ ಅಧಿಕಾರವನ್ನು ಭದ್ರವಾಗಿ ಸ್ಥಾಪಿಸಿದರು. ಹೀಗಾಗಿ ಅರಬರ ಆಕ್ರಮಣವು ಭಾರತದಲ್ಲಿ ರಾಷ್ಟ್ರೀಯ ಭಾವನೆಯ ಪ್ರಚೋದನೆಗೂ ಹಾಗೂ ಸಣ್ಣ ಪುಟ್ಟ ರಾಜ್ಯಗಳ ಸಂಘಟನೆಗೂ ಮತ್ತು ಭೋಜರಾಜನ ಕಾಲದಲ್ಲಿ ಒಂದು ಸಾಮ್ರಾಜ್ಯವು ಉದಯಿಸುವುದಕ್ಕೂ ಸಹಾಯಕವಾಯಿತು.

ಅಧ್ಯಾಯ-16

# ಮುಸ್ಲಿಮರ ಆಕ್ರಮಣದ ಸಮಯದಲ್ಲಿ ಭಾರತದ ರಾಜಕೀಯ ಪರಿಸ್ಥಿತಿ

ಕ್ರಿ.ಶ. ಹತ್ತನೆ ಶತಮಾನದ ಉತ್ತರಾರ್ಧದಲ್ಲಿ ಅಫ್ಘಾನಿಸ್ಥಾನದ ಘಸ್ನಿಯ ಟರ್ಕಿಮುಸಲ್ಮಾನರು ಭಾರತದ ಮೇಲೆ ಧಾಳಿ ಮಾಡಲಾರಂಭಿಸಿದರು. ಅವರು ಪದೇ ಪದೇ ಭಾರತದ ಮೇಲೆ ಆಕ್ರಮಣ ಮಾಡಿ ಮೊದಲಿಗೆ ವಾಯುವ್ಯ ಭಾರತದ ಮೇಲೆ ತಮ್ಮ ಅಧಿಕಾರವನ್ನು ಸ್ಥಾಪನೆ ಮಾಡಿದರು. ಆ ಕಾಲದಲ್ಲಿ ಭಾರತದಲ್ಲಿ ರಾಜಕೀಯ ಏಕತೆಯೆಂಬುದಿರಲಿಲ್ಲ. ಉತ್ತರ ಮತ್ತು ದಕ್ಷಿಣ ಭಾರತದ ವಿವಿಧ ಭಾಗಗಳಲ್ಲಿ ಹಲವಾರು ಹಿಂದೂ ರಾಜಸಂತತಿಗಳು ಅಧಿಕಾರರೂಢವಾಗಿದ್ದವು. ಈ ಎಲ್ಲ ಹಿಂದೂ ರಾಜರುಗಳು ವಿದೇಶಿ ಆಕ್ರಮಣಕಾರರ ವಿರುದ್ಧ ಒಟ್ಟುಗೂಡಿ ಹೋರಾಡಿ ದೇಶವನ್ನು ರಕ್ಷಿಸಿಕೊಳ್ಳಬೇಕೆಂಬ ಮನೋಭಾವನೆಯನ್ನು ಬೆಳೆಸಿಕೊಂಡಿರಲಿಲ್ಲ. ಉತ್ತರಭಾರತದ ದೊರೆಗಳು ಒಬ್ಬರಾದ ಮೇಲೊಬ್ಬರಂತೆ ಮುಸ್ಲಿಮರ ಆಕ್ರಮಣಕ್ಕೆ ತುತ್ತಾದರೆ, ದಕ್ಷಿಣ ಭಾರತವನ್ನಾಳುತ್ತಿದ್ದ ಹಿಂದೂ ರಾಜರುಗಳು ಒಳಜಗಳಗಳಲ್ಲಿ ನಿರತರಾಗಿ ಉತ್ತರ ಭಾರತದಲ್ಲಿ ಸಂಭವಿಸುತ್ತಿದ್ದ ಘಟನೆಗಳ ಕಡೆ ತಮ್ಮ ಗಮನವನ್ನು ಹರಿಸಲಿಲ್ಲ. ತತ್ಪರಿಣಾಮವಾಗಿ ಉತ್ತರ ಭಾರತದಲ್ಲಿ ಮುಸ್ಲಿಮರ ಆಳ್ವಿಕೆಯು ಆರಂಭವಾದ ಒಂದೂನೂರು ವರ್ಷಗಳೊಳಗಾಗಿಯೇ ದಕ್ಷಿಣದ ರಾಜ್ಯಗಳೂ ಮುಸ್ಲಿಮರ ಆಕ್ರಮಣಕ್ಕೆ ತುತ್ತಾದವು.

ಹರ್ಷ ಚಕ್ರವರ್ತಿಯ ಮರಣಾನಂತರ ಉತ್ತರ ಭಾರತದಲ್ಲಿ ಅಸ್ತಿತ್ವಕ್ಕೆ ಬಂದ ಬಹುತೇಕ ಹಿಂದೂ ರಾಜ್ಯಗಳನ್ನು ರಜಪೂತ ವಂಶಜರು ಆಳುತ್ತಿದ್ದರು. ಮುಸ್ಲಿಮರು ಭಾರತಕ್ಕೆ ಬಂದಾಗ ಉತ್ತರಭಾರತದ ಬಹುಭಾಗವನ್ನು ರಜಪೂತರು ಆಳುತ್ತಿದ್ದರು. ರಜಪೂತರು ಸುಮಾರು ನಾಲ್ಕು ಶತಮಾನಗಳ ಕಾಲ ಮುಸ್ಲಿಮರ ವಿರುದ್ಧ ಹಿಂದೂ ಧರ್ಮ ಮತ್ತು ಸಂಸ್ಕೃತಿಯ ರಕ್ಷಣೆಗಾಗಿಯೇ ಅಲ್ಲದೆ ದೇಶದ ಸ್ವಾತಂತ್ರ್ಯದ ರಕ್ಷಣೆಗಾಗಿಯೂ ದಿಟ್ಟತನದ ಹೋರಾಟ ನಡೆಸಿದರು. ''ಮಾನವನ ಮೇಲೆ ಎಸಗಬಹುದಾದ ಎಲ್ಲಾ ರೀತಿಯ ಹಿಂಸಾತ್ಮಕ ಕೃತ್ಯಗಳೆಲ್ಲವನ್ನೂ ಸಹಿಸಿಕೊಂಡು ಅದರ ವಿರುದ್ಧ ಹೋರಾಡಿ ತಮ್ಮ ಧರ್ಮ ಮತ್ತು ವಂಶದ ಗೌರವಗಳನ್ನು ಕಾಪಾಡಿಕೊಂಡ ಜನರು ರಜಪುಟಾಣದ ರಜಪೂತರೆಂದು ಇತಿಹಾಸಕಾರ ಕರ್ನಲ್‌ಟಾಡ್ ಅಭಿಪ್ರಾಯಪಟ್ಟಿರುವರು. ಹರ್ಷಚಕ್ರವರ್ತಿಯ ಮರಣದ ತರುವಾಯದಿಂದ ಹಿಡಿದು ಹನ್ನೆರಡನೆ ಶತಮಾನದ

ಅಂತ್ಯದವರೆಗಿನ ಕಾಲವನ್ನು "ರಜಪೂತರಕಾಲ"ವೆಂದು ಕೆಲವು ಇತಿಹಾಸಕಾರರು ಅಭಿಪ್ರಾಯ ಪಡುವರು. ಈ ಅಭಿಪ್ರಾಯವು ಒಪ್ಪತಕ್ಕದ್ದಾಗಿದ್ದು ಭಾರತದ ಇತಿಹಾಸದ ಈ ಅವಧಿಯಲ್ಲಿ ರಜಪೂತರು ನಿರ್ವಹಿಸಿದ ಪಾತ್ರವು ಅತ್ಯಂತ ಮಹತ್ವಪೂರ್ಣವಾದುದಾಗಿದೆ.

**ರಜಪೂತರ ಮೂಲಃ ದೇಶೀಯ ಮೂಲ ಸಿದ್ಧಾಂತ**

ರಜಪೂತರ ಮೂಲದ ಬಗ್ಗೆ ಇತಿಹಾಸಕಾರರು ಹಲವಾರು ಅಭಿಪ್ರಾಯಗಳನ್ನು ವ್ಯಕ್ತಪಡಿಸಿರುವರು. ರಜಪೂತರು ಪ್ರಾಚೀನಕಾಲದ ಆರ್ಯರ ಬುಡಕಟ್ಟಿನ ಸೂರ್ಯ ಮತ್ತು ಚಂದ್ರ ವಂಶಕ್ಕೆ ಸೇರಿದ ಕ್ಷತ್ರಿಯರ ವಂಶಜರೆಂದು ದೇಶೀಯ ಮೂಲದ ಸಿದ್ಧಾಂತದ ಪ್ರತಿಪಾದಕರು ಅಭಿಪ್ರಾಯಪಡುತ್ತಾರೆ. ಆದರೆ ಈ ಅಭಿಪ್ರಾಯವು ಶಾಸನಗಳಲ್ಲಿ ದೊರೆಯುವ ದಾಖಲೆಗಳಿಂದ ಸಮರ್ಥಿಸಲ್ಪಡುವುದಿಲ್ಲ. ಐತಿಹಾಸಿಕ ದೃಷ್ಟಿಯಿಂದ ಸಂಪ್ರದಾಯಿಕ ಅಭಿಪ್ರಾಯಗಳಿಗಿಂತ ಶಾಸನಗಳಲ್ಲಿ ದೊರೆಯುವ ದಾಖಲೆಗಳು ಹೆಚ್ಚು ಆಧಾರಯುತವಾದವುಗಳಾಗಿರುತ್ತವೆ. ಹಿಂದೂಧರ್ಮದ ಬಗ್ಗೆ ರಜಪೂತರಿಗಿದ್ದ ಅಭಿಮಾನ ಮತ್ತು ಮುಸ್ಲಿಮರ ವಿರುದ್ಧ ಅದರ ರಕ್ಷಣೆಗಾಗಿ ಅವರು ನಡೆಸಿದ ಹೋರಾಟವು ಅವರು ಭಾರತೀಯರೇ ಹೊರತು ವಿದೇಶೀಯರ ಮೂಲಕ್ಕೆ ಸೇರಿದವರಲ್ಲವೆಂಬ ಅಭಿಪ್ರಾಯವನ್ನು ಬೆಂಬಲಿಸುತ್ತವೆ. ಅಲ್ಲದೆ ಕ್ರಿ.ಶ. ಒಂಬತ್ತು ಮತ್ತು ಹತ್ತನೆ ಶತಮಾನಗಳಲ್ಲಿನ ಕೆಲವು ಶಾಸನಗಳು ಆ ಕಾಲದಲ್ಲಿ ಆಡಳಿತ ನಡೆಸುತ್ತಿದ್ದ ಕೆಲವು ರಜಪೂತ ಸಂತತಿಯವರು ಸೂರ್ಯ ಮತ್ತು ಚಂದ್ರ ವಂಶಗಳಿಗೆ ಸೇರಿದವರೆಂಬುದಾಗಿ ತಿಳಿಸುತ್ತವೆ. ಬಿಕನೀರ್, ಮಾರ್‍ವಾರ ಜಯಪುರದ ಮಾಜೀ ರಾಜರುಗಳು ತಾವು ಸೂರ್ಯವಂಶಜರೆಂದೂ ಜಯಸಾಲ್‌ಮೀರ್ ಮತ್ತು ಕಚ್‌ನ ರಾಜರುಗಳು ತಾವು ಚಂದ್ರ ವಂಶಜರೆಂದೂ ಹೇಳಿಕೊಂಡಿರುವರು. ಆದ್ದರಿಂದ ರಜಪೂತರು ದೇಶೀಯರೇ ಹೊರತು ವಿದೇಶೀಯರಲ್ಲವೆಂಬ ದೇಶೀಯ ಮೂಲ ಸಿದ್ಧಾಂತವನ್ನು ಪ್ರತಿಪಾದಿಸುವ ಇತಿಹಾಸಕಾರರು ಅಭಿಪ್ರಾಯಪಡುತ್ತಾರೆ. ಆದರೆ ಈ ಅಭಿಪ್ರಾಯವನ್ನು ಕರ್ನಲ್ ಟಾಡ್, ವಿಲಿಯಂ ಬ್ರೂಕ್ ಮೊದಲಾದ ಇತಿಹಾಸಕಾರರು ಪೂರ್ಣವಾಗಿ ಅಲ್ಲಗಳೆದಿದ್ದಾರೆ.

**ವಿದೇಶೀಯ ಮೂಲ ಸಿದ್ಧಾಂತ**

ರಜಪೂತರ ಇತಿಹಾಸದ ಅಧಿಕೃತ ಕರ್ತೃವಾದ ಕರ್ನಲ್ ಟಾಡ್‌ರವರು ತಮ್ಮ 'ಅನಲ್ಸ್ ಆ್ಯಂಡ್ ಆಂಟಿಕ್ವಿಟಿಸ್ ಆಫ್ ರಾಜಸ್ಥಾನ್' (Annals and Antiquities of Rajasthan) ಎಂಬ ಕೃತಿಯಲ್ಲಿ ರಜಪೂತರು ವಿದೇಶೀಯರಾದ ಶಕರ ಮೂಲಕ್ಕೆ ಸೇರಿದವರೆಂದು ಅಭಿಪ್ರಾಯಪಟ್ಟಿದ್ದಾರೆ. ರಜಪೂತರ ಕೆಲವು ಬಣಗಳು ವಿದೇಶೀಯ ಮೂಲಕ್ಕೆ ಸೇರಿದವುಗಳೆಂಬ ಅಂಶವು ನಿಸ್ಸಂದೇಹವಾಗಿ ಶಾಸನಾಧಾರಗಳಿಂದ ಸಮರ್ಥಿಸಲ್ಪಟ್ಟಿದೆ. ಗೂರ್ಜರ ಪ್ರತೀಹಾರರು 'ಗೂರ್ಜರ ಸಂತತಿಯ ಪೀಳಿಗೆ'ಯಿಂದ ಬಂದವರೆಂಬುದಕ್ಕೆ ಶಾಸನಗಳಲ್ಲಿ ಉಲ್ಲೇಖವಿದೆ. ಗೂರ್ಜರರು ಮಧ್ಯ ಏಷ್ಯಾದಿಂದ ಹೂಣರೊಂದಿಗೆ ಭಾರತಕ್ಕೆ ಬಂದರು. ಟಾಡ್ ಅಭಿಪ್ರಾಯಪಡುವ ರಜಪೂತರ ಬಣಗಳಲ್ಲಿ ಹೂಣರು ಒಬ್ಬರಾಗಿದ್ದರೆಂದು ವಿದೇಶೀಯ ಮೂಲವನ್ನು ಪ್ರತಿಪಾದಿಸುವ ಇತಿಹಾಸಕಾರರು ಅಭಿಪ್ರಾಯಪಡುವರು. ಒಬ್ಬರಾದ ಮೇಲೊಬ್ಬರಂತೆ ಭಾರತದ ಮೇಲೆ ಆಕ್ರಮಣ ಮಾಡಿದ ಗ್ರೀಕರು, ಕುಶಾನರು, ಶಕರು, ಹೂಣರು ಮತ್ತು ಗೂರ್ಜರರು ದೇಶದ ಭಾಷೆ, ಧರ್ಮ ಮತ್ತು ಸಾಮಾಜಿಕ ಸಂಪ್ರದಾಯಗಳನ್ನು ಅನುಸರಿಸಿ

ಕಾಲಾನುಕ್ರಮದಲ್ಲಿ ಹಿಂದೂ ಸಮಾಜದಲ್ಲಿ ಬೆರೆತುಹೋದರು. ಶಕರು ಹಿಂದೂಗಳೊಂದಿಗೆ ವೈವಾಹಿಕ ಸಂಬಂಧಗಳನ್ನು ಹೊಂದಿದ್ದರೆಂಬುದಕ್ಕೆ ಐತಿಹಾಸಿಕ ದಾಖಲೆಗಳಿವೆ. ಶಾತವಾಹನರ ರಾಜನೊಬ್ಬನು ಶಕರ ದೊರೆ ರುದ್ರದಾಮನ ಮಗಳನ್ನು ವಿವಾಹವಾಗಿದ್ದನು. ಕುಶಾನರ ದೊರೆಗಳಾದ ವಾಸುದೇವ ಮೊದಲಾದವರು ಹಿಂದೂ ಧರ್ಮವನ್ನವಲಂಭಿಸಿ ಶಿವನನ್ನೂ ಮತ್ತು ವಿಷ್ಣುವನ್ನೂ ಆರಾಧಿಸುತ್ತಿದ್ದರು. ಅಂದಿನ ಹಿಂದೂಗಳು ಉದಾರ ದೃಷ್ಟಿಯನ್ನು ಹೊಂದಿದ್ದು ವಿದೇಶೀಯರನ್ನು ಹೊಡದಟ್ಟುವುದಕ್ಕೆ ಬದಲಾಗಿ ಅವರನ್ನೂ ತಮ್ಮ ಸಮಾಜದಲ್ಲಿ ಸೇರಿಸಿಕೊಂಡರು. ಆದ್ದರಿಂದ ರಜಪೂತರು ವಿದೇಶೀಯ ಮೂಲಕ್ಕೆ ಸೇರಿದವರಲ್ಲವೆಂದು ಅಭಿಪ್ರಾಯಪಡುವುದು ಅಷ್ಟು ಸಮಂಜಸವಲ್ಲವೆಂಬುದು ವಿದೇಶಿ ಮೂಲದ ಸಿದ್ಧಾಂತವನ್ನು ಪ್ರತಿಪಾದಿಸುವ ಇತಿಹಾಸಕಾರರ ಅಭಿಪ್ರಾಯವಾಗಿದೆ.

ಕರ್ನಲ್ ಟಾಡ್‌ರವರ ಅಭಿಪ್ರಾಯವನ್ನು ವಿಲಿಯಂ ಬ್ರೂಕ್‌ರವರೂ ಸಮರ್ಥಿಸುತ್ತಾರೆ. ರಜಪೂತರ ಮೂಲದ ಬಗ್ಗೆ ಇತ್ತೀಚಿನ ಸಂಶೋಧನೆಗಳು ಹೊಸ ಹೊಸ ಬೆಳಕನ್ನು ಚೆಲ್ಲಿವೆಯೆಂದೂ, ವೇದಗಳ ಕಾಲದ ಕ್ಷತ್ರಿಯರಿಗೂ, ಮಧ್ಯಕಾಲೀನ ಯುಗದ ರಜಪೂತರಿಗೂ ಬಹಳ ಅಂತರವಿರುವುದಾಗಿಯೂ ಮತ್ತು ರಜಪೂತರ ಕೆಲವು ಬಣಗಳ ಮೂಲವು ಕ್ರಿ.ಪೂ. ಎರಡನೆ ಶತಮಾನದಲ್ಲಿ ಶಕರ ಇಲ್ಲವೆ ಕುಶಾನರ ಆಕ್ರಮಣಗಳಿಂದ ಇಲ್ಲವೆ ಗುಪ್ತ ಸಾಮ್ರಾಜ್ಯವನ್ನು ನಾಶಮಾಡಿದ ಬಿಳಿಯ ಹೂಣರಿಂದ ಆರಂಭವಾಯಿತೆಂದು ಅಭಿಪ್ರಾಯಪಡುವರು. ಹೂಣರೊಂದಿಗೆ ಸಂಬಂಧವನ್ನು ಹೊಂದಿದ್ದ ಗೂರ್ಜರರು ಹಿಂದೂ ಧರ್ಮವನ್ನು ಅನುಸರಿಸಿದರು. ಅವರಲ್ಲಿ ಮುಖ್ಯರಾಗಿದ್ದ ನಾಯಕರಿಂದ ರಜಪೂತರ ದೊಡ್ಡ ದೊಡ್ಡ ಬಣಗಳು ಅಸ್ತಿತ್ವಕ್ಕೆ ಬಂದವು. ಇವರೆಲ್ಲರೂ ಹಿಂದೂ ಧರ್ಮ ಆದರ ಸಂಪ್ರದಾಯಗಳನ್ನು ಒಪ್ಪಿಕೊಂಡು ರಾಜರ ಸ್ಥಾನಮಾನಗಳನ್ನು ಪಡೆದುಕೊಂಡಮೇಲೆ ಮಹಾಭಾರತ ಮತ್ತು ರಾಮಾಯಣಗಳಲ್ಲಿನ ಪೌರಾಣಿಕ ವ್ಯಕ್ತಿಗಳಿಗೆ ತಮ್ಮ ಸಂಬಂಧಗಳನ್ನು ಹೇಳಿಕೊಳ್ಳಲಾರಂಭಿಸಿದರೆಂದು ಅಭಿಪ್ರಾಯಪಡುವರು.

### ಅಗ್ನಿಕುಲ ಮೂಲದ ಸಿದ್ಧಾಂತ

ರಜಪೂತರು ಅಗ್ನಿಕುಲ ಮೂಲಕ್ಕೆ ಸೇರಿದವರೆಂದು ಚಾಂದ್ ಬರ್ದಾಯ್ ತಮ್ಮ 'ಪೃಥ್ವಿರಾಜರಾಸೋ' ಎಂಬ ಕೃತಿಯಲ್ಲಿ ಅಭಿಪ್ರಾಯಪಟ್ಟಿರುವರು. ಈ ಸಿದ್ಧಾಂತದ ಪ್ರಕಾರ ವಿಷ್ಣುವಿನ ಅವತಾರವಾದ ಪರಶುರಾಮನು ಕ್ಷತ್ರಿಯರನ್ನೆಲ್ಲಾ ನಿರ್ಮೂಲ ಮಾಡಿದಾಗ, ಬ್ರಾಹ್ಮಣರು ತಮ್ಮನ್ನು ರಕ್ಷಿಸಲು ಒಬ್ಬ ಕ್ಷತ್ರಿಯನೂ ಇಲ್ಲವಾಗಲು, ತಮ್ಮನ್ನು ರಕ್ಷಿಸಲು ಕ್ಷತ್ರಿಯವರ್ಗವೊಂದನ್ನು ಸೃಷ್ಟಿಸಬೇಕೆಂದು ಮೌಂಟ್ ಅಬುವಿನಲ್ಲಿ ದೇವರನ್ನು ಕುರಿತು ಯಾಗವನ್ನು ಮಾಡಿದರು. ಅವರ ಪ್ರಾರ್ಥನೆಯು ನೆರವೇರಿತು. ಅವರು ಯಾಗಕ್ಕಾಗಿ ನಿರ್ಮಿಸಿದ್ದ ಅಗ್ನಿಕುಂಡದಿಂದ ನಾಲ್ಕು ಜನ ವೀರರು ಹುಟ್ಟಿ ಒಂದೊಂದು ರಜಪೂತ ವಂಶಗಳನ್ನು ಸ್ಥಾಪಿಸಿದರು. ಹೀಗೆ ಪ್ರತೀಹಾರರು, ಚೌಹಾಣರು ಸೋಲಂಕಿಗಳು ಮತ್ತು ಪಾರಮಾರರ ಸಂತತಿಗಳು ಅಸ್ತಿತ್ವಕ್ಕೆ ಬಂದವು. ಡಾ.ಡಿ.ಆರ್. ಭಂಡಾರ್ಕರ್ ಮತ್ತು ಎಡ್ವರ್ಡ್‌ರು ಅಗ್ನಿಕುಲ ಮೂಲದ ಸಿದ್ಧಾಂತದಲ್ಲಿ ರಜಪೂತರು ವಿದೇಶೀಯರೆಂಬ ವಾದವನ್ನು ಸಮರ್ಥಿಸಿ ವಿದೇಶೀಯರು ಹಿಂದೂ ಸಮಾಜಕ್ಕೆ ಸೇರುವ ಮೊದಲು ಅಗ್ನಿಯಿಂದ ತಮ್ಮ ಅಪವಿತ್ರತೆಯನ್ನು ಹೋಗಲಾಡಿಸಿಕೊಳ್ಳಬೇಕಾಗಿತ್ತೆಂಬ ಅಂಶವನ್ನು ಅಗ್ನಿಕುಲ ಮೂಲದ ಸಿದ್ಧಾಂತವು ಸಮರ್ಥಿಸುತ್ತದೆ ಎಂದು

ಅಭಿಪ್ರಾಯಪಡುವರು. ರಜಪೂತರ ಅಗ್ನಿಕುಲ ಮೂಲದ ಸಿದ್ಧಾಂತದ ಕಥೆಯು ಬ್ರಾಹ್ಮಣರಿಂದ ಸೃಷ್ಟಿಸಲ್ಪಟ್ಟುದಾಗಿದೆ. ಏಕೆಂದರೆ ಕ್ಷತ್ರಿಯರು ತಮಗೆ ದಾನ ಧರ್ಮಗಳ ಮೂಲಕ ಅಪಾರ ಹಣವನ್ನು ಕೊಡುತ್ತಿದ್ದುದರಿಂದ ಅವರ ಮೂಲದ ಬಗ್ಗೆ ಉನ್ನತ ವಂಶದ ಮೂಲವನ್ನು ನಿರೂಪಿಸುವ ಪ್ರಯತ್ನವು ಆಶ್ಚರ್ಯಕರ ಸಂಗತಿಯೇನಲ್ಲವೆಂದು ಚಾಂದ್ ಬರ್ದಾಯ್ ಅಭಿಪ್ರಾಯಪಟ್ಟಿರುವರು.

**ಮಿಶ್ರಕುಲದ ಸಿದ್ಧಾಂತ**

ರಜಪೂತರು ಮಿಶ್ರ ಜನಾಂಗಕ್ಕೆ ಸೇರಿದವರಿರಬೇಕೆಂದು ಡಾ|| ವಿ.ಎ. ಸ್ಮಿತ್ ಅಭಿಪ್ರಾಯ ಪಡುವರು. ರಜಪೂತರ ಬಣಗಳಲ್ಲಿ ಕೆಲವರು ಕುಶಾನರ, ಶಕರ ಮತ್ತು ಹೂಣರ ಬುಡಕಟ್ಟಿಗೆ ಸೇರಿದವರೆಂದೂ ಮತ್ತೆ ಕೆಲವರು ಆರ್ಯರ ಕಾಲದ ಕ್ಷತ್ರಿಯರ ಬುಡಕಟ್ಟಿಗೆ ಸೇರಿದವರೆಂದು ಅಭಿಪ್ರಾಯಪಡುವರು. ಪ್ರಾರಂಭದಲ್ಲಿ ಈ ಎರಡು ಗುಂಪುಗಳು ಪರಸ್ಪರ ವಿರೋಧಿಗಳಾಗಿದ್ದು ಕಾಲಾನುಕ್ರಮದಲ್ಲಿ ಅವುಗಳು ಒಂದುಗೂಡಿದವು. ಈಗಿನ ಕ್ಷತ್ರಿಯರು ಅಥವಾ ರಜಪೂತ ಜಾತಿಯವರು ವಿವಿಧ ಜನಾಂಗಗಳಿಗೆ ಸೇರಿದ್ದರು. ಅವರು ಹಿಂದೂಗಳ ಸಂಪ್ರದಾಯಗಳನ್ನು ಅನುಸರಿಸಲಾರಂಭಿಸಿದ ಮೇಲೆ ಅವರು ಒಂದೇ ಕಸುಬಿನ ಜನರಾದರೆಂದು ಸ್ಮಿತ್ ಅಭಿಪ್ರಾಯಪಡುವರು. ತತ್ಪರಿಣಾಮವಾಗಿ ವಿವಿಧ ಜನಾಂಗಗಳ ಜನರು ಒಟ್ಟಿಗೆ ರಜಪೂತರೆಂದು ಕರೆಯಲ್ಪಟ್ಟರು. ಈಗಲೂ ಅಸ್ತಿತ್ವದಲ್ಲಿರುವ ಕೆಲವು ದೊಡ್ಡ ರಜಪೂತ ಬಣಗಳು ಅವರ ಬಿರುದು ಬಾವಲಿಗಳು ಎಷ್ಟೇ ದೊಡ್ಡದಾಗಿದ್ದರೂ ಅವರು ವಿದೇಶಿಯರ ವಂಶದವರಾಗಿರಬೇಕು ಇಲ್ಲವೆ ದೇಶೀಯ ಜನಾಂಗಗಳಾದ ಗೊಂಡರು ಮತ್ತು ಭಾರತ ವಂಶಜರಾಗಿರಬೇಕೆಂದು ಹೇಳುವರು. ಪ್ರೊ. ಸತ್ಯನಾಥ ಅಯ್ಯರ್‌ರವರು ರಜಪೂತರು ವಿವಿಧ ಜನಾಂಗಕ್ಕೆ ಸೇರಿದ ಒಂದು ಕಸುಬಿನ ಜನ ಎಂದು ಅಭಿಪ್ರಾಯ ಪಟ್ಟಿರುವರು. ಅವರು ಇನ್ನೂ ಮುಂದುವರಿದು ಚೌಹಾಣರು, ಪ್ರತೀಹಾರರು, ಪಾರಮಾರರು ಮತ್ತು ಗುಜರಾತಿನ ಚಾಳುಕ್ಯರು ವಿದೇಶಿ ರಜಪೂತರೆಂದೂ, ಚಂದೇಲರು, ಗಹಡವಾಲರು, ರಾಷ್ಟ್ರಕೂಟರು ಮತ್ತು ಕಾಳಚೂರಿಗಳು ದೇಶೀಯ ರಜಪೂತರೆಂದು ಅಭಿಪ್ರಾಯ ಪಡುವರು. ಒಟ್ಟಿನಲ್ಲಿ ಹೇಳುವುದಾದರೆ ರಜಪೂತರ ಮೂಲದ ಬಗ್ಗೆ ಎಷ್ಟೇ ಭಿನ್ನಾಭಿಪ್ರಾಯಗಳಿದ್ದರೂ ಅವರು ಹಿಂದೂ ಧರ್ಮ ಮತ್ತು ಸಂಸ್ಕೃತಿಯನ್ನು ಮುಸ್ಲಿಮರಿಂದ ರಕ್ಷಿಸುವುದರಲ್ಲಿ ಬಹುಮುಖ್ಯ ಪಾತ್ರವಹಿಸಿದ್ದರೆಂಬುದರಲ್ಲಿ ಸ್ವಲ್ಪವೂ ಸಂಶಯವಿಲ್ಲ. ಇಂತಹ ರಕ್ಷಣೆಯ ಜವಾಬ್ದಾರಿಯನ್ನು ನಿರ್ವಹಿಸಿದ ಕೆಲವು ರಜಪೂತ ವಂಶಗಳ ವಿಷಯವನ್ನು ತಿಳಿಯುವುದು ಅವಶ್ಯಕ.

**ಕನೂಜಿನ ಗೂರ್ಜರ ಪ್ರತೀಹಾರರು**

ಹರ್ಷ ಚಕ್ರವರ್ತಿಯ ಮರಣಾನಂತರ ಉತ್ತರ ಭಾರತದಲ್ಲಿ ಅಧಿಕಾರರೂಢವಾದ ರಜಪೂತರ ರಾಜ ಸಂತತಿಗಳಲ್ಲಿ ಕನೂಜಿನ ಗೂರ್ಜರ ಪ್ರತೀಹಾರ ಸಂತತಿಯು ಮೊಟ್ಟಮೊದಲನೆಯದಾಗಿತ್ತು. ಮೊದಲಿಗೆ ಪ್ರತೀಹಾರರು ರಜಪುಟಾಣ, ಮಾಳವ ಮತ್ತು ಗುಜರಾತುಗಳ ಮೇಲೆ ತಮ್ಮ ಅಧಿಕಾರವನ್ನು ಸ್ಥಾಪಿಸಿ ಅನಂತರ ಉತ್ತರ ಭಾರತದ ವಿಶಾಲವಾದ ಪ್ರದೇಶದ ಮೇಲೆ ತಮ್ಮ ಅಧಿಕಾರವನ್ನು ವಿಸ್ತರಿಸಿದರು. ಸಿಂಧ್ ಪ್ರಾಂತ್ಯವು ಅರಬ್ಬರ ವಶವಾದ ಮೇಲೆ ಗೂರ್ಜರ ಪ್ರತೀಹಾರರು ಪಶ್ಚಿಮ ಭಾರತದಲ್ಲಿ ಮುಸ್ಲಿಮರೊಂದಿಗೆ ಪದೇ ಪದೇ ಘರ್ಷಣೆಯಲ್ಲಿ ತೊಡಗಿದರು. ವಿದೇಶೀಯ ಆಕ್ರಮಣಕಾರರ ವಿರುದ್ಧ

ದೇಶವನ್ನು ರಕ್ಷಿಸುವುದರಲ್ಲಿ ಈ ಸಂತತಿಯ ಅರಸರು ವಹಿಸಿದ ಪಾತ್ರವು ಶ್ಲಾಘನೀಯವಾದುದಾಗಿದೆ.

ಕ್ರಿ.ಶ. ಎಂಟನೆ ಶತಮಾನದ ಉತ್ತರಾರ್ಧದಲ್ಲಿ ಗುರ್ಜರ ಪ್ರತೀಹಾರರ ದೊರೆಗಳಾಗಿದದ್ದ ನಾಗಭಟ ಮತ್ತು ವತ್ಸರಾಜನು ಸಾಮ್ರಾಜ್ಯದ ಎಲ್ಲೆಗಳನ್ನು ವಿಸ್ತರಿಸಿ ಉತ್ತರ ಭಾರತದಲ್ಲಿ ಅದನ್ನು ಪ್ರಬಲ ಸಾಮ್ರಾಜ್ಯವನ್ನಾಗಿ ಮಾರ್ಪಡಿಸಿದರು. ಗೂರ್ಜರ ಪ್ರತೀಹಾರರು ದೀರ್ಘಕಾಲ ಬಂಗಾಳದ ಪಾಲರೊಂದಿಗೂ ಮತ್ತು ದಖನ್ನಿನ ರಾಷ್ಟ್ರಕೂಟರೊಂದಿಗೂ ಹೋರಾಡಿದರು. ಹರ್ಷನ ಕಾಲದಲ್ಲಿ ರಾಜಕೀಯ ಪ್ರಸಿದ್ಧಿಯನ್ನು ಪಡೆದಕನೂಜ್ ಅಂದಿನ ಉತ್ತರ ಭಾರತದಲ್ಲಿ ಸಾರ್ವಭೌಮಾಧಿಕಾರದ ಕೇಂದ್ರವೆಂದು ಪರಿಗಣಿಸಲ್ಪಟ್ಟಿದ್ದಿತು. ಅಲ್ಲದೆ ಕನೂಜಿನ ಮೇಲಿನ ಒಡೆತನವು ಇಡೀ ಉತ್ತರ ಭಾರತದ ಮೇಲಿನ ಸಾರ್ವಭೌಮಾಧಿಕಾರದ ಐತಿಹಾಸಿಕ ಕುರುಹಾಗಿದ್ದಿತು.

ಗೂರ್ಜರ ಪ್ರತೀಹಾರ ಸಂತತಿಯ ದೊರೆಗಳಲ್ಲಿ ಒಂದನೇ ಭೋಜರಾಜ ಅಥವ ಮಿಹಿರ ಭೋಜನು ಅತ್ಯಂತ ಬಲಶಾಲಿಯಾದ ದೊರೆಯಾಗಿದ್ದನು. ಭೋಜನು ತನ್ನ ಅರ್ಧಶತಮಾನದ (836-885) ಆಳ್ವಿಕೆಯ ಕಾಲದಲ್ಲಿ ತನ್ನ ಶಕ್ತಿ ಸಾಮರ್ಥ್ಯಗಳಿಂದ ಇಡೀ ಉತ್ತರ ಭಾರತದಲ್ಲೇ ಒಬ್ಬ ಪ್ರಬಲ ದೊರೆಯಾಗಿದ್ದನು. ಬಂಗಾಳದ ಪಾಲರ ದೊರೆ ದೇವಪಾಲನು ಕಾಲವಾದ ಮೇಲೆ ಪಾಲರ ಅಧಿಕಾರವು ಕ್ಷೀಣತೆಯ ಹಾದಿಯನ್ನು ಹಿಡಿಯಿತು. ಅಂತೆಯೆ ದಖನ್ನಿನಲ್ಲಿ ರಾಷ್ಟ್ರಕೂಟರೂ ಕೂಡ ನೆರೆಯ ಚಾಳುಕ್ಯರ ಆಕ್ರಮಣಗಳಿಂದಾಗಿ ಕಷ್ಟದ ಪರಿಸ್ಥಿತಿಯಲ್ಲಿ ಸಿಕ್ಕಿಕೊಂಡಿದ್ದರು. ಈ ಪರಿಸ್ಥಿತಿಯ ಸದವಕಾಶವನ್ನು ಉಪಯೋಗಿಸಿಕೊಂಡು ಬೋಜನು ರಾಷ್ಟ್ರಕೂಟರನ್ನು ಸೋಲಿಸಿ ಹಿಮ್ಮೆಟ್ಟಿಸಿ ಮಾಳವ ಮತ್ತು ಸೌರಾಷ್ಟ್ರಗಳನ್ನು ತನ್ನ ಸಾಮ್ರಾಜ್ಯಕ್ಕೆ ಸೇರಿಸಿಕೊಂಡನು. ಅಂತೆಯೆ ಪಾಲರ ಅಸಮರ್ಥ ದೊರೆಯನ್ನೂ ಸೋಲಿಸಿದನು. ಪಂಜಾಬು, ಅಯೋಧ್ಯ ಮತ್ತಿತರ ಭಾಗಗಳ ಮೇಲೂ ತನ್ನ ಅಧಿಕಾರವನ್ನು ಸ್ಥಾಪಿಸಿ ಕನೂಜನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡನು. ಭೋಜನು ಕ್ರಿ.ಶ. 885ರಲ್ಲಿ ಕಾಲವಾದನು.

ಮಿಹಿರ ಭೋಜನ ಮರಣಾ ನಂತರ ಅವನ ಮಗನಾದ ಮಹೇಂದ್ರ ಪಾಲನು ಅಧಿಕಾರಕ್ಕೆ ಬಂದನು. ಮಹೇಂದ್ರಪಾಲನು ತನ್ನ ತಂದೆಯಿಂದ ಬಂದಿದ್ದ ಸಾಮ್ರಾಜ್ಯವನ್ನು ಉಳಿಸಿಕೊಂಡಿದ್ದಲ್ಲದೆ ಮಗಧ ರಾಜ್ಯದ ಕೆಲವು ಭಾಗಗಳನ್ನೂ ಮತ್ತು ಪಾಲರ ದುರ್ಬಲ ದೊರೆಗಳಿಂದ ಉತ್ತರ ಬಂಗಾಳದ ಕೆಲವು ಭಾಗಗಳನ್ನು ಗೆದ್ದುಕೊಂಡು ತನ್ನ ಸಾಮ್ರಾಜ್ಯಕ್ಕೆ ಸೇರಿಸಿಕೊಂಡನು. ಪ್ರಸಿದ್ಧ ಕವಿ ರಾಜಶೇರನು ಇವನ ಆಸ್ಥಾನವನ್ನು ಅಲಂಕರಿಸಿದ್ದನು. ರಾಜಶೇಖರ ಕವಿಯು 'ಕರ್ಪೂರಮಂಜರಿ' ಕಾವ್ಯಮೀಮಾಂಸ, ಬಾಲರಾಮಾಯಣ, ಬಾಲಭಾರತ ಮತ್ತು ವಿದ್ಧಶಾಲ ಭಂಜಿಕ (viddhasalabhanjika) ಎಂಬ ಪ್ರಸಿದ್ಧ ಕೃತಿಗಳನ್ನು ರಚಿಸಿರುವನು. ಅಂದಿನ ಜನಜೀವನದ ಬಗ್ಗೆ ಈ ಕೃತಿಗಳು ಸಾಕಷ್ಟು ಬೆಳಕನ್ನು ಚೆಲ್ಲುತ್ತವೆ. ಮಹೇಂದ್ರಪಾಲನ ನಂತರ ಅಧಿಕಾರಕ್ಕೆ ಬಂದ ಮಹಿಪಾಲನು ಕ್ರಿ.ಶ. 919ರಲ್ಲಿ ರಾಷ್ಟ್ರಕೂಟರ ದೊರೆ ಮೂರನೆ ಇಂದ್ರನಿಂದ ಸೋಲನ್ನು ಹೊಂದಿದನು. ಇಂದ್ರನು ಕೆಲವು ಕಾಲದವರೆಗೆ ಕನೂಜನ್ನು ವಶಪಡಿಸಿಕೊಂಡಿದ್ದನು. ಅಂದಿನಿಂದ ಗೂರ್ಜರ ಪ್ರತೀಹಾರರ ಅಧಿಕಾರವು ಕ್ರಮಕ್ರಮವಾಗಿ ಕ್ಷೀಣಿಸತೊಡಗಿತು. ಕ್ರಿ.ಶ. ಹನ್ನೊಂದನೆ ಶತಮಾನದ ಪೂವಾರ್ಧದಲ್ಲಿ ಘಸ್ನಿಯ ಸುಲ್ತಾನ್ ಮಹಮದನು ಪ್ರತೀಹಾರರ

ಕೊನೆಯ ದೊರೆ ರಾಜ್ಯಪಾಲನ ಮೇಲೆ ದಂಡೆತ್ತಿ ಹೋಗಿ ಅವನನ್ನು ಸೋಲಿಸಿ ಓಡಿಸಿದ್ದಲ್ಲದೆ ಕನೂಜನ್ನು ಲೂಟಿ ಹೊಡೆದನು. ಗೂರ್ಜರ ಪ್ರತೀಹಾರ ಸಂತತಿಯ ದೊರೆಗಳ ಸಾಧನೆಗಳಲ್ಲಿ ಮುಖ್ಯವಾಗಿ ಮೂರು ಅಂಶಗಳು ಗಮನಾರ್ಹವಾದವು. ಮೊದಲನೆಯದಾಗಿ, ಗೂರ್ಜರ ಪ್ರತೀಹಾರರು ಪಶ್ಚಿಮ ಭಾರತದ ಮೇಲೆ ಮುಸ್ಲಿಮರ ಆಕ್ರಮಣವನ್ನು ಬಹಳ ಕಾಲದವರೆಗೆ ಪ್ರತಿಭಟಿಸಿದರು. ಅವರ ಸೈನಿಕ ಶಕ್ತಿಯ ಬಗ್ಗೆ ಅಂದಿನ ಮುಸ್ಲಿಂ ಬರಹಗಾರರೂ ತಮ್ಮ ಮೆಚ್ಚಿಗೆಯನ್ನು ವ್ಯಕ್ತಪಡಿಸಿರುವರು. ಎರಡನೆಯದಾಗಿ, ಈ ಸಂತತಿಯ ಅರಸರು ಬಹಳ ಕಾಲದವರೆಗೆ ಉತ್ತರಭಾರತದ ಬಹುಭಾಗದ ಮೇಲೆ ತಮ್ಮ ಅಧಿಕಾರವನ್ನು ಸ್ಥಾಪಿಸಿ ರಾಜಕೀಯ ಏಕತೆಯನ್ನುಂಟುಮಾಡಿದ್ದರು. ಪ್ರತೀಹಾರರ ಸಾಮ್ರಾಜ್ಯವು ವಿಸ್ತಾರದಲ್ಲಿ ಹರ್ಷ ವರ್ಧನನ ಸಾಮ್ರಾಜ್ಯಕ್ಕಿಂತಲೂ ದೊಡ್ಡದಾಗಿದ್ದು ಬಹಳ ಕಾಲ ಮುಂದುವರಿದಿದ್ದಿತು. ಪ್ರತೀಹಾರರು ಹಿಂದೂ ಧರ್ಮ ಮತ್ತು ಸಂಸ್ಕೃತ ಸಾಹಿತ್ಯದ ಪೋಷಕರಾಗಿದ್ದರು.

ಕ್ರಿ.ಶ. ಹತ್ತನೆ ಶತಮಾನದಲ್ಲಿ ಗೂರ್ಜರ ಪ್ರತೀಹಾರರ ಅಧಿಕಾರವು ಕ್ಷೀಣಿಸತೊಡಗಲು ಉತ್ತರ ಭಾರತದಲ್ಲಿನ ರಾಜಕೀಯ ಏಕತೆಯು ಕಣ್ಮರೆಯಾಯಿತು. ತತ್ಪರಿಣಾಮವಾಗಿ ಉತ್ತರ ಭಾರತದ ವಿವಿಧ ಭಾಗಗಳಲ್ಲಿ ಹಲವಾರು ಸ್ವತಂತ್ರ ಅರಸುಮನೆ ತನಗಳು ಅಧಿಕಾರಕ್ಕೆ ಬಂದವು.

**ಗುಜರಾತಿನ ಸೋಲಂಕಿಗಳು**

ಪಶ್ಚಿಮ ಭಾರತದ ಕೊನೆಯಲ್ಲಿ ಗುಜರಾತು ಮತ್ತು ಕಾಥೇವಾಡಗಳಲ್ಲಿ ರಜಪೂತ ಚಾಳುಕ್ಯ ಅಥವ ಸೋಲಂಕಿ ಸಂತತಿಯ ದೊರೆಗಳು ತಮ್ಮ ಆಳ್ವಿಕೆಯನ್ನಾರಂಭಿಸಿ ಸುಮಾರು ಮೂರೂವರೆ ಶತಮಾನಗಳ ಕಾಲ (950-1300) ರಾಜ್ಯವಾಳಿದರು. ಅನ್ಹಿಲವಾಡ ಇವರ ರಾಜಧಾನಿಯಾಗಿತ್ತು. ಸೋಲಂಕಿಗಳು ಮೊದಲಿಗೆ ಗೂರ್ಜರ ಪ್ರತೀಹಾರರ ಸಾಮಂತರಾಗಿದ್ದರು. ಕ್ರಿ.ಶ. ಹತ್ತನೆ ಶತಮಾನದ ಪೂರ್ವಾರ್ಧದಲ್ಲಿ ಗೂರ್ಜರ ಪ್ರತಿಹಾರರ ಅಧಿಕಾರವು ಅವನತಿ ಹೊಂದಲು ಸೋಲಂಕಿಗಳ ರಾಜನಾದ ಒಂದನೆ ಮೂಲರಾಜ (961-996) ನು ಅನ್ಹಿಲವಾಡ ಎಂಬಲ್ಲಿ ಸ್ವತಂತ್ರ ರಾಜ್ಯವನ್ನು ಸ್ಥಾಪಿಸಿದನು. ಮೂಲರಾಜನು ಪಾರಮಾರರ ರಾಜನನ್ನು ಗೆದ್ದನು ಮತ್ತು ಅಜ್ಮೀರದ ವಿಗ್ರಹರಾಜನು ವಿರುದ್ಧ ಹೋರಾಡಿ ಸೋಲನ್ನು ಹೊಂದಿದನು. ಮೂಲರಾಜನು ಸಿದ್ಧಾಪುರ ಎಂಬಲ್ಲಿ ರುದ್ರಮಹಾಲಯ ಎಂಬ ದೇವಾಲಯವನ್ನು ಕಟ್ಟಿಸಿದನು. ಇವನು ಕ್ರಿ.ಶ. 996ರಲ್ಲಿ ಕಾಲವಾದನು. ಮೂಲರಾಜನ ನಂತರ ಅವನ ಮಗನಾದ ಚಾಮುಂಡರಾಜನು ಅಧಿಕಾರಕ್ಕೆ ಬಂದನು. ಇವನು ಮಾಳವದ ಪಾರಮಾರರ ದೊರೆಯಾದ ಸಿಂಧು ರಾಜನನ್ನು ಯುದ್ಧದಲ್ಲಿ ಸೋಲಿಸಿ ಕೊಂದನು. ಇದರಿಂದ ಆ ಎರಡು ರಾಜ್ಯಗಳಿಗೂ ತೀವ್ರವಾದ ದ್ವೇಷವು ಬೆಳೆಯಿತು. ಚಾಮುಂಡ ರಾಜನ ನಂತರ ಅವನ ಮಗನಾದ ವಲ್ಲಭರಾಜ ಎಂಬವನು ಪಟ್ಟಕ್ಕೆ ಬಂದನು. ಆದರೆ ಅವನು ಹೆಚ್ಚು ದಿನಗಳು ಬದುಕಲಿಲ್ಲ. ಅವನ ತರುವಾಯ ಅವನ ಮಗ ದುರ್ಲಭರಾಜನು ಸುಮಾರು ಹನ್ನೆರಡು ವರ್ಷಗಳ ಕಾಲ ರಾಜ್ಯವಾಳಿದನು. ಅವನ ತರುವಾಯ ಒಂದನೆ ಭೀಮ (1022-1064) ಎಂಬುವನು ರಾಜನಾದನು, ಭೀಮನು ಮಾಳವದ ರಾಜನ ಮೇಲೆ ದಂಡೆತ್ತಿ ಹೋಗಿ

ಅವನಿಗೆ ತನ್ನ ಶಕ್ತಿ ಸಾಮರ್ಥ್ಯಗಳನ್ನು ತೋರಿಸಿಕೊಟ್ಟನು. ಆದರೆ ಭೀಮನಿಗೆ ದೊಡ್ಡ ಗಂಡಾಂತರವೊಂದು ಕಾದಿತ್ತು. ಘಸ್ನಿಯ ಮಹಮದನು ಸೋಮನಾಥಪುರದ ದೇವಾಲಯವನ್ನು ಕೊಳ್ಳೆ ಹೊಡೆಯುವ ಸಲುವಾಗಿ ಗುಜರಾತಿನ ಮೇಲೆ ದಂಡೆತ್ತಿ ಹೋದಾಗ ಭೀಮನು ರಾಜ್ಯಬಿಟ್ಟು ಓಡಿಹೋಗಿ ಕಚ್ ಕೋಟೆಯಲ್ಲಿ ಆಶ್ರಯ ಪಡೆದನು. ಮಹ ಮದನ ಧಾಳಿಯು ಮುಗಿದ ನಂತರ ಅವನು ತನ್ನ ರಾಜ್ಯಕ್ಕೆ ಹಿಂದಿರುಗಿ ಬಂದನು. ಭೀಮನು ಕ್ರಿ.ಶ. 1064ರಲ್ಲಿ ಕಾಲವಾದನು. ಭೀಮನ ನಂತರ ಈ ಸಂತತಿಯಲ್ಲಿ ಇನ್ನೂ ಕೆಲವು ಸಮರ್ಥ ರಾಜರುಗಳು 1300 ರವರೆಗೂ ರಾಜ್ಯವಾಳಿದರು. ಅನಂತರಗುಜರಾತು ರಾಜ್ಯವು ಅಲ್ಲಾವುದ್ದೀನ್ ಖಿಲ್ಜಿಯ ಸಾಮ್ರಾಜ್ಯದಲ್ಲಿ ಸೇರಿಹೋಯಿತು.

**ಅಜ್ಮೇರದ ಚೌಹಾಣರು**

ಉತ್ತರ ಭಾರತದಲ್ಲಿ ಪ್ರತೀಹಾರರ ನಂತರ ಪ್ರಸಿದ್ಧಿಗೆ ಬಂದ ಮತ್ತೊಂದು ರಜಪೂತ ವಂಶವೆಂದರೆ ರಾಜಪುಟಾಣದ ಅಜ್ಮೇರಿನ ಚೌಹಾಣರು. ಅಥವ ಚಹಮಾಣರು. ಇವರು ಕ್ರಿ.ಶ. 9ನೇ ಶತಮಾನದಿಂದ 12ನೇ ಶತಮಾನದವರೆಗೆ ರಾಜ್ಯವಾಳಿದರು. ಸಕಂಬರಿ ಅಥವ ಸಂಬಾರ್ ಎಂಬುದು ಪ್ರಾರಂಭದಲ್ಲಿ ಇವರ ಅಧಿಕಾರದ ಕೇಂದ್ರವಾಗಿತ್ತು. ತರುವಾಯದಲ್ಲಿ ಅಜ್ಮೇರ ಮತ್ತು ದೆಹಲಿಗಳನ್ನು ವಶಪಡಿಸಿಕೊಂಡು ಅದನ್ನು ಅಧಿಕಾರದ ಕೇಂದ್ರವನ್ನಾಗಿ ಮಾಡಿಕೊಂಡರು. ಅವರು ದೆಹಲಿಯನ್ನು ವಶಪಡಿಸಿ ಕೊಂಡ ಮೇಲೆ ಗಂಗಾ ಯಮುನಾ ನದಿಗಳ ಬಯಲಿಗೆ ಇದ್ದ ಪ್ರವೇಶ ದ್ವಾರವನ್ನು ಮುಸ್ಲಿಂ ಆಕ್ರಮಣಕಾರರಿಂದ ರಕ್ಷಿಸುವ ಜವಾಬ್ದಾರಿಯು ಅವರ ಪಾಲಿಗೆ ಬಂದಿತು.

ವಾಸುದೇವ ಎಂಬವನು ಈ ಸಂತತಿಯ ಸ್ಥಾಪಕನೆಂದು ಹೇಳಲಾಗಿದೆ. ಆದರೆ ಇವನ ಬಗ್ಗೆ ಹೆಚ್ಚಿನ ವಿವರಗಳು ತಿಳಿದು ಬಂದಿಲ್ಲ. ಇವನ ತರುವಾಯ ಆಳಿದವರಲ್ಲಿ ಒಂದನೆ ವಾಕ್ಪತಿ ಮತ್ತು ಸಿಂಹರಾಜ ಎಂಬವರು ಪ್ರಸಿದ್ಧರಾದವರು. ಇವರು ತಮ್ಮ ಸೈನಿಕ ವಿಜಯಗಳಿಂದ ತಮ್ಮ ವಂಶದ ಗೌರವ ಪ್ರತಿಷ್ಠೆಗಳನ್ನು ಹೆಚ್ಚಿಸಿದರು. ಇವರ ನಂತರ ಅಧಿಕಾರಕ್ಕೆ ಬಂದ ಎರಡನೆ ವ್ಯಾಘ್ರರಾಜನು ದಕ್ಷಿಣದಲ್ಲಿ ನರ್ಮದಾ ನದಿಯವರೊ ದಿಗ್ವಿಜಯಗಳನ್ನು ಮಾಡಿದನು ಮತ್ತು ಗುಜರಾತಿನ ಸೋಲಂಕಿಗಳ ರಾಜನಾದ ಮೂಲ ರಾಜನನ್ನು ಸೋಲಿಸಿದನು. ವ್ಯಾಘ್ರರಾಜನು ಹೊಸದಾಗಿ ಅಜ್ಮಿರ್ ಪಟ್ಟಣವನ್ನು ನಿರ್ಮಿಸಿದನು. ವ್ಯಾಘ್ರರಾಜನ ನಂತರ ಅಧಿಕಾರಕ್ಕೆ ಬಂದ ಅಜಯರಾಜನು ಮಾಳವದ ಪಾರಮಾರರ ದಂಡನಾಯಕನನ್ನು ಸೋಲಿಸಿದ್ದಲ್ಲದೆ ಉಜ್ಜೈನಿಯವರೆಗೂ ಮಾಳವದ ಪ್ರದೇಶವನ್ನು ಗೆದ್ದುಕೊಂಡನು. ಅಜಯರಾಜನ ನಂತರ ಅಧಿಕಾರಕ್ಕೆ ಬಂದ ಅವನ ಮಗ ಅರೋಠ ರಾಜ (1139)ನನ್ನು ಸೋಲಂಕಿಗಳ ರಜನಾದ ಜಯಸಿಂಹನು ಸೋಲಿಸಿದನು. ಅನಂತರ ಕ್ರಿ.ಶ. 1153ರಿಂದ 1164ರವರೆಗೆ ಆಳಿದ ನಾಲ್ಕನೆ ವಿಗ್ರಹರಾಜನು ಪಂಜಾಬಿನಲ್ಲಿ ಅವನತಿ ಹೊಂದುತ್ತಿದ್ದ 'ಯಾಮಿನಿ ಸಂತತಿಯ' ಕ್ಷೀಣತೆಯ ಅನುಕೂಲವನ್ನು ಪಡೆದುಕೊಂಡು ಸಟ್ಲೆಜ್ ಮತ್ತು ಯುಮುನಾ ನದಿಗಳ ನಡುವಣ ಪ್ರದೇಶವನ್ನು ವಶಪಡಿಸಿಕೊಂಡನು. ವಿಗ್ರಹ ರಾಜನು ತನ್ನ ಧೈರ್ಯ ಸಾಹಸಗಳಿಗೇ ಅಲ್ಲದೆ ಪಾಂಡಿತ್ಯಕ್ಕೂ ಹೆಸರುವಾಸಿಯಾಗಿದ್ದನು.

ಮುಸ್ಲಿಮರ ವಿರುದ್ಧವೂ ಹೋರಾಡಿ ಕೆಲವು ವಿಜಯಗಳನ್ನು ಗಳಿಸಿದನು. ಪ್ರತೀಹಾರರಿಂದ ದೆಹಲಿಯನ್ನು ಗೆದ್ದುಕೊಂಡನು. ವಿಗ್ರಹರಾಜನು ವಿದ್ಯಾಭಿಮಾನಿಯೂ ಆಗಿದ್ದನು. ಅವನ ಆಸ್ಥಾನದಲ್ಲಿ 'ಲಲಿತ ವಿಗ್ರಹರಾಜ ನಾಟಕ' ಮತ್ತು ಹರಕೇಲಿನಾಟಕ' ಎಂಬ ಎರಡು ಸುಪ್ರಸಿದ್ಧನಾಟಕಗಳು ರಚಿಸಲ್ಪಟ್ಟವು. ವಿಗ್ರಹರಾಜನು ಅಜ್ಮೀರ್‌ನಲ್ಲಿ ಒಂದು ಕಾಲೇಜನ್ನು ಕಟ್ಟಿಸಿ ಸಂಸ್ಕೃತ ವ್ಯಾಸಂಗಕ್ಕೆ ಪ್ರೋತ್ಸಾಹ ನೀಡಿದನು. ಆದರೆ ಈ ಕಾಲೇಜನ್ನು ಮಹಮದ್ ಘೋರಿಯ ಸೈನಿಕರು ನಾಶಮಾಡಿದರು.

ಚೌಹಾಣ ಸಂತತಿಯ ಕೊನೆಯ ಅರಸರಲ್ಲಿ ಮೂರನೆ ಪೃಥ್ವಿರಾಜ (1139-1192)ನು ಹೆಚ್ಚು ಪ್ರಸಿದ್ಧನಾದವನು. ಪೃಥ್ವಿರಾಜನ ಹೆಸರು ಭಾರತದ ಇತಿಹಾಸದಲ್ಲಿ ಅಮರವಾಗಿ ಉಳಿದಿದೆ. "ಪೃಥ್ವಿರಾಜ ವಿಜಯ" ಎಂಬ ಕೃತಿಯಲ್ಲಿ ಪೃಥ್ವಿರಾಜನ ಬಗ್ಗೆ ಹೆಚ್ಚಿನ ವಿವರಗಳು ದೊರೆಯುತ್ತವೆ. ಪೃಥ್ವಿರಾಜನು ಕ್ರಿ.ಶ. 1184ರಲ್ಲಿ ಬುಂದೇಲ್ ಖಂಡದ ಮೇಲೆ ಆಕ್ರಮಣ ಮಾಡಿ ಮಾಳವದ ಪಾರಮಾರ ರಾಜನನ್ನು ಸೋಲಿಸಿದನು. ಕ್ರಿ.ಶ. 1189ರಲ್ಲಿ ಪಂಜಾಬಿನ ಯಾಮಿನಿ ಸಂತತಿಯನ್ನು ನಿರ್ಮೂಲಮಾಡಿದನು. ಪೃಥ್ವಿರಾಜನು ರಾಜಪೂತರ ರಾಜರುಗಳ ಸಹಾಯದಿಂದ ಕ್ರಿ.ಶ. 1191ರಲ್ಲಿ ತರೈನ್ ಯುದ್ಧಭೂಮಿಯಲ್ಲಿ ಮಹಮದ್ ಘೋರಿಯನ್ನು ಸೋಲಿಸಿ ಅವನು ಭಾರತದಿಂದ ಹಿಂದಿರುಗಿ ಹೋಗುವಂತೆ ಮಾಡಿದನು. ಆದರೆ ಮಹಮದ್ ಘೋರಿಯುಮಾರನೆ ವರ್ಷ ಸುಸಜ್ಜಿತ ಸೈನ್ಯದೊಂದಿಗೆ ಪುನಃ ಭಾರತದ ಮೇಲೆ ದಂಡೆತ್ತಿ ಬಂದು ಪೃಥ್ವಿರಾಜನನ್ನು ಕ್ರಿ.ಶ. 1192ರಲ್ಲಿ ಎರಡನೆ ತರೈನ್ ಯುದ್ಧದಲ್ಲಿ ಸೋಲಿಸಿ ಅವನನ್ನು ಸೆರೆಹಿಡಿದು ಕೊಂದನು. ಈ ಯುದ್ಧದ ಪರಿಣಾಮವಾಗಿ ಚೌಹಾಣರ ರಾಜ್ಯವು ಮುಸ್ಲಿಮರ ವಶವಾಯಿತು. ಇದಾದ ಸ್ವಲ್ಪ ವರ್ಷಗಳಲ್ಲಿಯೆ ದೆಹಲಿ, ಅಜ್ಮೀರ್ ಮತ್ತು ಮೀರತ್‌ಗಳನ್ನು ಮುಸ್ಲಿಮರು ವಶಪಡಿಸಿಕೊಂಡು ಮುಸ್ಲಿಂ ರಾಜ್ಯವನ್ನು ಸ್ಥಾಪಿಸಿದರು.

**ಮಾಳವದ ಪಾರಮಾರರು**

ಮಾಳವದ ಪಾರಮಾರರ ರಾಜ್ಯವು ಕೃಷ್ಣರಾಜ ಅಥವ ಉಪೇಂದ್ರ ಎಂಬವನಿಂದ ಕ್ರಿ.ಶ. ಒಂಬತ್ತನೇ ಶತಮಾನದಲ್ಲಿ ಸ್ಥಾಪಿಸಲ್ಪಟ್ಟಿತು. ಈ ಸಂತತಿಯ ಮೊದಲ ದೊರೆಗಳು ಗೂರ್ಜರ ಪ್ರತೀಹಾರರಿಗೂ ಮತ್ತು ರಾಷ್ಟ್ರಕೂಟರಿಗೂ ನಡೆಯುತ್ತಿದ್ದ ಯುದ್ಧಗಳಲ್ಲಿ ಗೂರ್ಜರರ ಪಕ್ಷವಹಿಸಿ ಯುದ್ಧಗಳಲ್ಲಿ ಭಾಗವಹಿಸುತ್ತಿದ್ದರು. ಪ್ರತೀಹಾರ ಮತ್ತು ರಾಷ್ಟ್ರಕೂಟರ ಅಧಿಕಾರವು ಕ್ರಿ.ಶ. ಹತ್ತನೆ ಶತಮಾನದಲ್ಲಿ ಅವನತಿ ಹೊಂದಲು ಪಾರಮಾರರು ಮಾಳವದಲ್ಲಿ ತಮ್ಮ ಸ್ವಾತಂತ್ರ್ಯವನ್ನು ಎರಡನೆ ಸಿಯಾಕ (948-974)ನ ಕಾಲದಲ್ಲಿ ಘೋಷಿಸಿಕೊಂಡರು. ಅವನ ಉತ್ತರಾಧಿಕಾರಿಯಾದ ಮುಂಜನು (974-995) ಕಲ್ಯಾಣಿಯ ಚಾಳುಕ್ಯರ ದೊರೆಯಾದ ಎರಡನೆ ತೈಲನ ವಿರುದ್ಧ ಪದೇ ಪದೇಯುದ್ಧ ಮಾಡಿದನು. ದಾಹಲದ ಕಾಳಚೂರಿಗಳ ರಾಜನಾದ ಎರಡನೆ ಯುವರಾಜನನ್ನು ಸೋಲಿಸಿದನು. ಮುಂಜನು ಗುಜರಾತಿನ ಚಾಳುಕ್ಯರು, ಮೇವಾರದ ಗುಹಿಲಟರು ಮತ್ತು ನಾದೋಲಿನ ಚೌಹಾಣರೊಂದಿಗೆ ಅನೇಕ ಬಾರಿ ಸೆಣಸಾಡಿದ್ದನು. ಅವನು ಎರಡನೆ ತೈಲನೊಂದಿಗೆ ಮಾಡಿದ ಯುದ್ಧದಲ್ಲಿ ದುರಂತ ರೀತಿಯಲ್ಲಿ ಮರಣ ಹೊಂದಿದನು. ಮುಂಜನು

ವಿದ್ಯಾಭಿಮಾನಿಯಾಗಿದ್ದು ಪಂಡಿತರಿಗೂ ಮತ್ತು ಕವಿಗಳಿಗೂ ಆಶ್ರಯ ನೀಡದ್ದನು. ಪದ್ಮಗುಪ್ತ, ಧನಂಜಯ ಮತ್ತು ಹಲಾಯುಧ ಎಂಬ ಕವಿಗಳು ಅವನ ಆಸ್ಥಾನವನ್ನ ಲಂಕರಿಸಿದ್ದರು.

ಪಾರಮಾರರ ಸಂತತಿಯ ದೊರೆಗಳೆಲ್ಲೆಲ್ಲಾ ಕ್ರಿ.ಶ. (1010-1055)ರವರೆಗೆ ಆಳಿದ ಭೋಜನು ಹೆಚ್ಚು ಪ್ರಸಿದ್ಧನಾದವನು. ಭೋಜನು ಚಾಳುಕ್ಯರು ಮತ್ತು ಕಾಳಚೂರಿಗಳೊಂದಿಗೆ ನಿರಂತರವಾಗಿ ಯುದ್ಧ ಮಾಡಿದನು. ಇವನೂ ಕೂಡ ದುರಂತ ರೀತಿಯಲ್ಲಿ ಸಾವನಪ್ಪಿದನು. ಭೋಜನು ತನ್ನ ರಾಜದಾನಿಯಾಗಿದ್ದ 'ಧಾರ್' (Dhar)ನಲ್ಲಿ ಸಂಸ್ಕೃತ ಕಾಲೇಜೊಂದನ್ನು ಸ್ಥಾಪಿಸಿದ್ದನು. ಅಲ್ಲದೆ ಭೋಜನು ಸ್ವತಃ ಶ್ರೇಷ್ಠ ವಿದ್ವಾಂಸನೂ ಮತ್ತು ಕವಿಯೂ ಆಗಿದ್ದನು. ಭೋಜನು ಮೃತನಾದ ಮೇಲೆ ಪಾರಮಾರರ ಅಧಿಕಾರವು ಅವನತಿ ಹೊಂದಿತು. ಪಾರಮಾರರ ಸಂತತಿಯ ಕೊನೆಯ ಅರಸನನ್ನು ಕ್ರಿ.ಶ. 1310 ಅಲ್ಲಾವುದ್ದೀನ್‌ಖಿಲ್ಜಿಯು ಸೋಲಿಸಿ ಮಾಳವ ರಾಜ್ಯವನ್ನು ತನ್ನ ಸಾಮ್ರಾಜ್ಯಕ್ಕೆ ಸೇರಿಸಿಕೊಂಡನು.

**ಬಂದೇಲ್ ಖಂಡದ ಚಂದೇಲರು**

ಕ್ರಿ.ಶ. ಹತ್ತನೆ ಶತಮಾನದಿಂದ ಚಂದೇಲ ಅಥವ ಚಂದ್ರಾತ್ರೇಯ ಸಂತತಿಯವರು ಜೆಜಭುಕ್ತಿ ಅಥವ ಜೆಜಕ ಭುಕ್ತಿ (ಬಂದೇಲ್ ಖಂಡ, ಉತ್ತರಪ್ರದೇಶ) ಪ್ರಾಂತ್ಯವನ್ನು ಆಳುತ್ತಿದ್ದರು. ಮೊದಲಿಗೆ ಕಾಜುರಾಹೊ ಇವರ ಅಧಿಕಾರದ ಕೇಂದ್ರವಾಗಿತ್ತು. ತರುವಾಯದಲ್ಲಿ ಇವರ ರಾಜಕೀಯ ಅಧಿಕಾರದ ಕೇಂದ್ರವು ಕಾಲಿಂಜರ್, ಅಜಯಘರ್, ಮತ್ತು ಮಹೋಬಗಳಿಗೆ ವರ್ಗಾಯಿಸಲ್ಪಟ್ಟಿತು.

ಚಂದೇಲರು ಮೊದಲಿಗೆ ಗೂರ್ಜರ ಪ್ರತೀಹಾರರ ಸಾಮಂತರಾಗಿದ್ದರೆಂದು ಹೇಳಲಾಗಿದೆ. ಅವರು ಕ್ರಿ.ಶ. ಹತ್ತನೆ ಶತಮಾನದ ಪೂರ್ವಾರ್ಧದಲ್ಲಿ ಸ್ವತಂತ್ರರಾದರು. ಹರ್ಷ ಚಂದೇಲ ಮತ್ತು ಯಶೋವರ್ಮನ್ ಎಂಬವರು ಈ ಸಂತತಿಯ ಮೊದಲ ದೊರೆಗಳಲ್ಲಿ ಹೆಸರುವಾಸಿಯಾದವರು. ಹರ್ಷ ಚಂದೇಲನು ರಾಷ್ಟ್ರಕೂಟರ ದೊರೆ ಇಂದ್ರನ ವಿರುದ್ಧ ಕನೂಜಿನ ರಾಜನಿಗೆ ಸಹಾಯ ಮಾಡುವುದರ ಮೂಲಕವೂ ಮತ್ತು ಚೌಹಾಣ ವಂಶದ ರಾಜಕುಮಾರಿಯನ್ನು ವಿವಾಹವಾಗುವುದರ ಮೂಲಕವೂ ತನ್ನ ವಂಶದ ಕೀರ್ತಿ ಗೌರವಗಳನ್ನು ಹೆಚ್ಚಿಸಿಕೊಂಡನು. ಅವನ ತರುವಾಯ ಅಧಿಕಾರಕ್ಕೆ ಬಂದ ಅವನ ಮಗಯಶೋವರ್ಮನ್ ಪ್ರಖ್ಯಾತ ದಿಗ್ವಿಜಯಿಯಾಗಿದ್ದನು. ಅವನ ದಿಗ್ವಿಜಯಗಳಲ್ಲಿ ಕಾಲಿಂಜರ್ ಕೋಟೆಯನ್ನು ವಶಪಡಿಸಿಕೊಂಡುದುದು ಬಹಳ ಮುಖ್ಯವಾಗಿತ್ತು. ಯಶೋವರ್ಮನ್ ನಂತರ ಅವನ ಮಗನಾದ ದಂಗ ಎಂಬವನು ಸಿಂಹಾಸನಕ್ಕೆ ಬಂದನು.

ಕ್ರಿ.ಶ. 954ರಿಂದ 1002ರವರೆಗೆ ರಾಜ್ಯವಾಳಿದ ದಂಗನು ಈ ಸಂತತಿಯ ಅರಸರಲ್ಲಿ ಒಬ್ಬ ಸಮರ್ಥರಾಜನಾಗಿದ್ದು ಅಲಹಾಬಾದ್, ಕಾಲಿಂಜರ್ ಮತ್ತು ಗ್ವಾಲಿಯರ ಭಾಗಗಳನ್ನೊಳಗೊಂಡ ಪ್ರದೇಶದ ಉತ್ತರಭಾರತದ ಮೇಲೆ ತನ್ನ ಅಧಿಕಾರವನ್ನು ಸ್ಥಾಪಿಸಿದ್ದನು. ಇವನು ಉತ್ತರಬಾರತದಲ್ಲೇ ಅಲ್ಲದೆ ದಖನ್ನಿನ ಕೆಲವು ರಾಜರುಗಳನ್ನು ಸೋಲಿಸಿದ್ದನೆಂದು ಹೇಳಲಾಗಿದೆ. ಕಾಜುರಾಹೊನಲ್ಲಿ ಈತನು ಅನೇಕ

ದೇವಾಲಯಗಳನ್ನು ಕಟ್ಟಿಸಿದನು. ದಂಗನ ನಂತರ ಅವನ ಮಗನಾದ ಗಂಡ ಎಂಬವನು (1002-1019) ಸಿಂಹಾಸನಕ್ಕೆ ಬಂದನು. ಗಂಡನು ತನ್ನ ತಂದೆಯ ಯುದ್ಧ ನೀತಿಯನ್ನೇ ಮುಂದುವರಿಸಿದನು. ಅವನ ತರುವಾಯ ಸಿಂಹಾಸನಕ್ಕೆ ಬಂದ ಅವನ ಮಗ ವಿದ್ಯಾಧರನು ಈ ಸಂತತಿಯ ಅರಸರಲ್ಲಿ ಮತ್ತೊಬ್ಬ ಪ್ರಸಿದ್ಧ ದೊರೆಯೆಂದು ಹೇಳಬಹುದು. ವಿಧ್ಯಾಧರನು ಪ್ರತೀಹಾರ ಸಂತತಿಯ ಕೊನೆಯ ಇರಸನಾದ ರಾಜ್ಯಪಾಲನನ್ನು ಸೋಲಿಸಿಕೊಂದನು. ಘಸ್ನಿಯ ಮಹಮದನ ಅಕ್ರಮಣಗಳ ವಿರುದ್ಧ ಗಂಗಾ ಯಮುನಾ ನದಿಗಳ ಬಯಲು ಪ್ರದೇಶವನ್ನು ರಕ್ಷಿಸುವ ಜವಾಬ್ದಾರಿಯು ಅವನ ಮೇಲೆ ಬಿದ್ದಿತ್ತು. ವಿದ್ಯಾಧರನು ಬದುಕಿರುವವರೆಗೂ ಮಹಮದನು ಚಂದೇಲರ ರಾಜ್ಯದ ಮೇಲೆ ಅಕ್ರಮಣ ಮಾಡುವ ಪ್ರಯತ್ನ ಮಾಡಲಿಲ್ಲ.

ವಿದ್ಯಾಧರನ ತರುವಾಯ ಅಧಿಕಾರಕ್ಕೆ ಬಂದವರು ಅಸಮರ್ಥರಾಗಿದ್ದರು. ಕೆಲವು ಕಾಲದವರೆಗೆ ಚಂದೇಲರ ಅಧಿಕಾರವು ಕಾಳಚೂರಿಗಳ ದೊರೆಯಾದ ಲಕ್ಷ್ಮೀಕರಮನ ವಿಜಯಗಳಿಂದ ಕಳೆಗುಂದಿತ್ತು. ತರುವಾಯ ಕೀರ್ತಿವರ್ಮನ್‌ನ ದಂಡನಾಯಕನಾದಗೋಪಾಲ ಎಂಬವನು ಲಕ್ಷ್ಮೀಕರಣಸಿಗೆ ತೀವ್ರ ಸೋಲನ್ನುಂಟುಮಾಡಿದ ಮೇಲೆ ಚಂದೇಲರ ಅಧಿಕಾರವು ಪುನಃ ಊರ್ಜಿತಗೊಂಡಿತು. ಆದಾಗ್ಯೂ ಕಾಳಚೂರಿ ದೊರೆಯಿಂದ ಚಂದೇಲರು ಅನುಭವಿಸಿದ ಸೋಲಿನಿಂದ ಅವರು ಉತ್ತರಭಾರತದಲ್ಲಿ ಪುನಃ ಹಿಂದಿನ ಸ್ಥಾನಮಾನಗಳನ್ನು ಪಡೆದುಕೊಳ್ಳಲು ಸಾಧ್ಯವಾಗಲಿಲ್ಲ. ಕ್ರಿ.ಶ. 1129ರಿಂದ 1162ವರೆಗೆ ಆಳಿದ ಮದನವರ್ಮನ್ ಎಂಬವನು ಈ ಸಂತತಿಯ ಪ್ರಸಿದ್ಧ ದೊರೆಗಳಲ್ಲಿ ಕಟ್ಟಕಡೆಯವನು. ಇವನು ಮಾಳವದ ಪಾರಮಾರರ ದೊರೆಯನ್ನೂ, ಕಾಳಚೂರಿಗಳ ದೊರೆದಾಹಲನನ್ನೂ ಮತ್ತು ಗುಜರಾತಿನ ಚಾಳುಕ್ಯರ ದೊರೆ ಜಯಸಿಂಹನನ್ನು ಸೋಲಿಸಿದನೆಂದು ಹೇಳಲಾಗಿದೆ. ಗಹಡವಾಲರ ದೊರೆಯು ಇವನ ಸ್ನೇಹಿತನಾಗಿದ್ದನು. ಇವನ ತರುವಾಯ ಇವನ ಮೊಮ್ಮಗ ಪಾರಮಾರ್ದಿ 1162ರಿ 1202ರವರೆಗೆ ರಾಜ್ಯವಾಳಿದನು. ಕ್ರಿ.ಶ. 1202ರಲ್ಲಿ ಕುತ್ಬುದೀನ್ ಐಬಕನು ಕಾಲಿಂಜರ್ ಕೋಟೆಯನ್ನು ವಶಪಡಿಸಿಕೊಂಡು ಪಾರಮಾರ್ದಿಯನ್ನು ಶರಣಾಗತನನ್ನಾಗಿ ಮಾಡಿಕೊಂಡನು. ಪಾರಮಾರ್ದಿಯ ನಂತರ ಅಧಿಕಾರಕ್ಕೆ ಬಂದ ಅವನ ಮಗ ತ್ರೈಲೋಕ್ಯವರ್ಮನ್ (1205-1241) ಮುಸ್ಲಿಮರ ವಿರುದ್ಧ ಹೋರಾಡಿ ಕಾಲಿಂಜರ್ ಅನ್ನು ಪುನಃ ವಶಪಡಿಸಿಕೊಂಡನು. ಚಂದೇಲರ ರಾಜರುಗಳು ಹದಿನಾರನೆ ಶತಮಾನದವರೆಗೂ ಬಂದೇಲ್ ಖಂಡದ ಕೆಲವು ಭಾಗಗಳ ಮೇಲೆ ತಮ್ಮ ಆಳ್ವಿಕೆಯನ್ನು ಮುಂದುವರಿಸಿಕೊಂಡು ಬಂದಿದ್ದರು.

### ಮಧ್ಯಪ್ರಾಂತ್ಯದ ಕಾಳಚೂರಿಗಳು (Central Province)

ಕಾಳಚೂರಿ ಸಂತತಿಯವರು ಇಂದಿನ ಮಧ್ಯಪ್ರದೇಶದ ಜಬ್ಬಲ್‌ಪುರ ಭಾಗದಲ್ಲಿ ದೀರ್ಘಕಾಲ ಆಳ್ವಿಕೆ ನಡೆಸಿದರು. ತ್ರಿಪುರಿ ಎಂಬುದು ಅವರ ಅಧಿಕಾರದ ಕೇಂದ್ರವಾಗುತ್ತು. ಕಾಳಚೂರಿಗಳು ಸಹ ಉತ್ತರ ಭಾರತದ ಇತಿಹಾಸದಲ್ಲಿ ಮಹತ್ತರವಾದ ಪಾತ್ರವಹಿಸಿದ್ದರು. ಈ ಸಂತತಿಯಲ್ಲಿ ಹಲವಾರು ಸಮರ್ಥ ರಾಜರುಗಳು ರಾಜ್ಯವಾಳಿದರು. ಇವರು ರಾಷ್ಟ್ರಕೂಟರು ಮತ್ತು ಚಂದೇಲರೊಂದಿಗೆ ವೈವಹಿಕ ಸಂಬಂಧಗಳನ್ನೂ ಗೊರ್ಜರಪ್ರತೀಹಾರರೊಂದಿಗೆ ಸ್ನೇಹ ಸಂಬಂಧಗಳನ್ನೂ

ಹೊಂದಿದ್ದರು. ಕ್ರಿ.ಶ. ಹತ್ತನೆ ಶತಮಾನದ ಪೂರ್ವಾರ್ಧದಲ್ಲಿ ಆಳಿದ ಲಕ್ಷ್ಮಣರಾಜ ಎಂಬವನು ಬಂಗಾಳ. ಕೋಸಲ ಮತ್ತು ಗುಜರಾತುಗಳ ಮೇಲೆ ಧಾಳಿ ಮಾಡಿದನು. ಲಕ್ಷ್ಮಣರಾಜನ ತರುವಾಯ ಅಧಿಕಾರಕ್ಕೆ ಬಂದ ಎರಡನೆ ಯುವರಾಜನನ್ನು ಪಾರಮಾರರ ದೊರೆ ಮುಂಜನು ಸೋಲಿಸಿದನು. ಕ್ರಿ.ಶ. 1030 ರಿಂದ 1041ರವರೆಗೆ ಆಳಿದ ವಿಕ್ರಮಾದಿತ್ಯನು ಕಾಳಚೂರಿಗಳ ಅಧಿಕಾರವನ್ನು ಪುನಃ ಬಲಗೊಳಿಸಿದನು. ವಿಕ್ರಮಾದಿತ್ಯನು ತನ್ನ ಅಧಿಕಾರವನ್ನು ಉತ್ತರದಲ್ಲಿ ಗಂಗಾನದಿಯವರೆಗೂ ವಿಸ್ತರಿಸಿದ್ದನು. ಆದರೆ ಪಾರಮಾರರ ದೊರೆ ಭೋಜನಿಂದ ಅವನು ಸೋಲನ್ನನುಭವಿಸಿದನು. ಅವನ ಮಗನಾದ ಲಕ್ಷ್ಮೀ ಕರ್ಣನು (1045-1070) ಪ್ರಖ್ಯಾತ ವಿಜಯಿಯಾಗಿದ್ದನು. ಕೆಲವು ಕಾಲದವರೆಗೆ ಇವನು ತನ್ನ ಅಧಿಕಾರವನ್ನು ಪೂರ್ವದಲ್ಲಿ ಹೂಗ್ಲಿ ನದಿಯವರೆಗೂ ಉತ್ತರದಲ್ಲಿ ಗಂಗಾ ಯಮಾನಾ ನದಿಗಳ ಬಯಲಿನಿಂದ ದಕ್ಷಿಣದಲ್ಲಿ ಮಹಾನದಿಯವರೆಗೂ ಸ್ಥಾಪಿಸಿದ್ದನು. ಲಕ್ಷ್ಮೀಕರ್ಣನು ತನ್ನ ಆಳ್ವಿಕೆಯ ಕೊನೆಯ ಬಾಗದಲ್ಲಿ ಬಂಗಾಳದ ಪಾಲರಿಂದಲೇ ಅಲ್ಲದೆ ಚಂದೇಲರು, ಪಾರಮಾರರು ಮತ್ತು ಕಲ್ಯಾಣಿಯ ಚಾಳುಕ್ಯರ ರಾಜರುಗಳಿಂದಲೂ ತೀವ್ರ ಸೋಲನ್ನು ಅನುಭವಿಸಿದನು. ಲಕ್ಷ್ಮೀಕರ್ಣನ ಉತ್ತರಾಧಿಕಾರಿಯಾದ ಯಶ ಕರ್ಣ (1073-1125)ನ ಕಾಲದಲ್ಲಿ ಗಹಡವಾಲರು ಬೆನಾರಿಸ್ಸಿನಿಂದ ಕನೂಜಿನವರೆಗಿನ ಪ್ರದೇಶವನ್ನೆಲ್ಲಾ ವಶಪಡಿಸಿಕೊಂಡಿದ್ದಲ್ಲದೆ ಗಂಗಾ ಯಮುನಾ ನದಿಗಳ ಪ್ರದೇಶದ ಮೇಲೆ ಚಂದೇಲರು ಹೊಂದಿದ್ದ ಅಧಿಕಾರವನ್ನೂ ಕೊನೆಗಾಣಿಸಿದರು. ಯಶಕರ್ಣನ ತರುವಾಯ ಅಧಿಕಾರಕ್ಕೆ ಬಂದ ಗಯಕರ್ಣ (1151)ನನ್ನು ಚಂದೇಲರ ರಾಜನಾದ ಮದನವರ್ಮನು ಸೋಲಿಸಿದನು. ಗಯಕರ್ಣನ ನಂತರ ಆಳಿದ ದೊರೆಗಳ ಬಗ್ಗೆ ಹೆಚ್ಚಿನ ವಿವರಗಳು ತಿಳಿದು ಬಂದಿಲ್ಲವಾದರೂ ಕಾಳಚೂರಿ ಸಂತತಿಯವರು ಹದಿನೈದನೆ ಶತಮಾನದ ಆದಿಭಾಗದಲ್ಲಿ ಜಬ್ಬ ಲ್‌ಪುರ ಪ್ರಾಂತ್ಯದಲ್ಲಿ ಗೊಂಡರ ಅಧಿಕಾರವು ಸ್ಥಾಪಿತವಾಗುವವರೆಗೂ ಆಳುತ್ತಿದ್ದರೆಂದು ಹೇಳಲಾಗಿದೆ.

**ಬೆನಾರಿಸ್ ಮತ್ತು ಕನೂಜಿನ ಗಹಡವಾಲರು**

ಗಹಡವಾಲರು ಬೆನಾರಿಸ್ಸಿನಿಂದ ಹಿಡಿದು ಕನೂಜಿನವರೆಗಿನ ವಿಶಾಲ ಪ್ರದೇಶವನ್ನು ಆಳುತ್ತಿದ್ದರು. ಬೆನಾರಿಸ್ ಅವರ ಅಧಿಕಾರದ ಮುಖ್ಯ ಕೇಂದ್ರವಾಗಿತ್ತು. ಕ್ರಿ.ಶ. ಹನ್ನೊಂದನೆಯ ಶತಮಾನದ ಅಂತ್ಯದಲ್ಲಿ ಚಂದ್ರ ಎಂಬುವನು ಕನೂಜನ್ನು ಗೆದ್ದು ತನ್ನ ರಾಜ್ಯಕ್ಕೆ ಸೇರಿಸಿಕೊಂಡನು. ಇವನ ತರುವಾಯ ಆಳಿದ ಗೋವಿಂದ ಚಂದ್ರ (1114-1154) ಎಂಬವನು ಈ ಸಂತತಿಯ ಅಸರಲ್ಲಿ ಒಬ್ಬ ಪ್ರಬಲ ದೊರೆಯಾಗಿದ್ದು ಪಂಜಾಬಿನ ಯಾಮಿನಿ ಸುಲ್ತಾನರೊಂದಿಗೂ ಬಿಹಾರ ಮತ್ತು ಬಂಗಾಳದ ಪಾಲರು ಮತ್ತು ಸೇನರೊಂದಿಗೂ, ಮತ್ತು ಕಾಳಚೂರಿ ದೊರೆಗಳೊಂದಿಗೂ ಹೋರಾಡಿದನು. ಗೋವಿಂದ ಚಂದ್ರನ ನಂತರ ಅವನ ಮಗನಾದ ವಿಜಯ ಚಂದ್ರನು ಯಾಮಿನಿ ಸುಲ್ತಾನರೊಂದಿಗೆ ಹೋರಾಟವನ್ನು ಮುಂದುವರಿಸಿದನು. ಅವನ ತರುವಾಯ ಆಳಿದ ಜಯಚಂದ್ರ (1170-1194)ನು ಸಂತತಿಯ ದೊರೆಗಳಲ್ಲೆಲ್ಲಾ ಅತ್ಯಂತ ಹೆಚ್ಚು ಪ್ರಸಿದ್ಧನಾದವನು. ಇವನ ಕಾಲದಲ್ಲಿ ಬೆನಾರಿಸ್ಸಿಗೆ ಬದಲಾಗಿ ಕನೂಜ್ ಹೆಚ್ಚಿನ ಪ್ರಾಮುಖ್ಯತೆಯನ್ನು ಪಡೆದುಕೊಂಡಿತು. ಇವನು ಗಂಗಾನದಿ ಕಣಿವೆಯ ಸಾರ್ವಭೌಮನಾಗಿದ್ದು ತನ್ನ ಗೌರವ ಪ್ರತಿಷ್ಠೆಗಳನ್ನು ಹೆಚ್ಚಿಸಿಕೊಂಡಿದ್ದನು. ಅಲ್ಲದೆ

ಹಿಂದೂಸ್ಥಾನದ ರಾಜರೆಲ್ಲರೂ ಅದನ್ನು ಒಪ್ಪಿಕೊಂಡಿದ್ದರು. ಜಯಚಂದ್ರನಿಗೆ ಅತ್ಯಂತ ಸುಂದರಿಯಾದ ಸಂಯುಕ್ತ ಎಂಬ ಮಗಳಿದ್ದಳು. ಚಾಂದ್ ಬರ್ದಾಯ್ ರಚಿಸಿರುವ 'ಪೃಥಿವರಾಜೊರಾಸೋ' ಕೃತಿಯಲ್ಲಿ ಜಯಚಂದ್ರನಿಗೂ ಮತ್ತು ಪೃಥ್ವಿರಾಜನಿಗೂ ಇದ್ದ ವೈಯಕ್ತಿಕ ಬದ್ಧದ್ವೇಷದ ಪ್ರಾಸಂಗಿಕ ಕಥೆಯ ನಿರೂಪಣೆಯಿದೆ. ಎರಡನೆ ತರೈನ್ (1192) ಯುದ್ಧದಲ್ಲಿ ಪೃಥ್ವಿರಾಜನನ್ನು ಸೋಲಿಸಿ ಕೊಂದ ಮಹಮದ್ ಘೋರಿಯು ಅಜ್ಮೀರನ್ನು ವಶಪಡಿಸಿಕೊಂಡು ಅನಂತರ ತನ್ನ ಸಾರ್ವಭೌಮತ್ವವನ್ನು ಒಪ್ಪಿಕೊಂಡ ಪೃಥ್ವಿರಾಜನ ಮಗನಿಗೆ ಅದನ್ನು ಬಿಟ್ಟುಕೊಟ್ಟನು.

ಈ ಒಂದು ಇತಿಹಾಸ ಸುಪ್ರಸಿದ್ಧವಾದ ವಿಜಯದ ನಂತರ ಗಂಗಾನದಿ ಕಣಿವೆಯ ಮೇಲಿನ ಪ್ರದೇಶದಲ್ಲಿ ಹಿಂದೂಗಳ ಅಧಿಕಾರವು ಕಣ್ಮರೆಯಾಯಿತು. ಯುದ್ಧಾನಂತರ ಸುಲ್ತಾನನ ರಾಜ್ಯಪಾಲನಾಗಿ ನೇಮಿಸಲ್ಪಟ್ಟ ಕುತ್ಬುದೀನ್ ಐಬಕನು ದೆಹಲಿಯನ್ನು ವಶಪಡಿಸಿಕೊಂಡು ಅದನ್ನು ತನ್ನ ಅಧಿಕಾರದ ಕೇಂದ್ರವನ್ನಾಗಿ ಮಾಡಿಕೊಂಡನು. ಕ್ರಿ.ಶ. 1193ರಲ್ಲಿ ಸ್ಥಳೀಯ ರಾಜನೊಬ್ಬನಿಂದ ಸ್ಥಾಪಿಸಲ್ಪಟ್ಟಿದ್ದ ದೆಹಲಿಯು ಆಪ್ರಾಂತ್ಯದ ಒಂದು ಸಣ್ಣ ನಗರವಾಗಿತ್ತು. ಕುತ್ಬುದ್ದೀನ್ ಐಬಕನು ಅದನ್ನು ಗೆದ್ದು ವಶಪಡಿಸಿಕೊಂಡು ಅದನ್ನು ರಾಜಧಾನಿಯನ್ನಾಗಿ ಮಾಡಿಕೊಂಡಿದ್ದಲ್ಲದೆ ಅದು ಮುಂದೆ ಭಾರತದಲ್ಲಿ ಮುಸಲ್ಮಾನರ ಅಧಿಕಾರದ ಕೇಂದ್ರವಾಗುವುದಕ್ಕೂ ಕಾರಣವಾದನು. ಕ್ರಿ.ಶ. 1194ರಲ್ಲಿ ಮಹಮದ್ ಘೋರಿಯು ಮತ್ತೊಮ್ಮೆ ಭಾರತದ ಮೇಲೆ ದಂಡೆತ್ತಿ ಬಂದು ಚಂದಾವರ್ ಕದನದಲ್ಲಿ ಜಯಚಂದ್ರನನ್ನು ಸೋಲಿಸಿ ಕೊಂದನು. ಈ ವಿಜಯದಿಂದ ಮೀರತ್‌ನಿಂದ ಬೆನಾರಸ್ಸಿನವರೆಗಿನ ಫಲವತ್ತಾದ ಪ್ರದೇಶವು ಘೋರಿ ಮಹಮ್ಮದನ ವಶಕ್ಕೆ ಬಂದಿತು.

## ಬಂಗಾಳದ ಪಾಲರು ಮತ್ತು ಸೇನರು

ಹರ್ಷ ಚಕ್ರವರ್ತಿಯು ಅಸ್ಸಾಂವರೆಗೆ ಬಂಗಾಳವನ್ನು ಗೆದ್ದು ತನ್ನ ಸಾಮ್ರಾಜ್ಯಕ್ಕೆ ಸೇರಿಸಿಕೊಂಡಿದ್ದನು. ಹರ್ಷನು ಕಾಲವಾದ ಮೇಲೆ ಬಂಗಾಳದಲ್ಲೂ ಇತರ ರಾಜ್ಯಗಳಂತೆ ಅನಾಯಕತ್ವವು ತಲೆದೋರಿ ಸುಮಾರು ಒಂದು ಶತಮಾನದ ಕಾಲ (ಕ್ರಿ.ಶ. 650-760) ಬಂಗಾಳದ ಜನರು ಅವ್ಯವಸ್ಥೆಯಿಂದ ಕೂಡಿದ ಆಡಳಿತಕ್ಕೊಳಗಾಗಿದ್ದರು ಕ್ರಿ.ಶ. ಎಂಟನೇ ಶತಮಾನದ ಮಧ್ಯಭಾಗದಲ್ಲಿ (765) ಅವರು ಗೋಪಾಲ ಎಂಬವನನ್ನು ತಮ್ಮ ರಾಜನನ್ನಾಗಿ ಮಾಡಿಕೊಂಡರು. ಗೋಪಾಲನು ಒಬ್ಬ ಪರಾಕ್ರಮಿಯಾಗಿದ್ದು ಬಂಗಾಳದಲ್ಲಿ ಪಾಲರ ಅಧಿಕಾರಕ್ಕೆ ಭದ್ರವಾದ ಬುನಾದಿಯನ್ನು ಹಾಕಿದ್ದಲ್ಲದೆ ರಾಜ್ಯದಲ್ಲಿ ಶಾಂತಿ ವ್ಯವಸ್ಥೆಯನ್ನೇರ್ಪಡಿಸಿದನು.

ಗೋಪಾಲನ ತರುವಾಯ ಅಧಿಕಾರಕ್ಕೆ ಬಂದ ಅವನ ಮಗ ಧರ್ಮಪಾಲನು (770-810) ಉತ್ತರಭಾರತದ ಬಹುಭಾಗದ ಮೇಲೆ ಪಾಲರ ಅಧಿಕಾರವನ್ನು ವಿಸ್ತರಿಸಿದನು. ಅವನು ಕನೂಜನ್ನು ಗೆದ್ದು ತನ್ನ ಕಡೆಯವನಾದ ಚಕ್ರಾಯುಧ ಎಂಬವನನ್ನು ಅಲ್ಲಿಗೆ ರಾಜನನ್ನಾಗಿ ನೇಮಿಸಿದನು. ಆದರೆ ಧರ್ಮಪಾಲನು ಗೂರ್ಜರ ಪ್ರತೀಹಾರರ ಮತ್ತು ರಾಷ್ಟ್ರಕೂಟರ ಮೇಲೆ ಮಾಡಿದ ಯುದ್ಧಗಳು ಯಶಸ್ವಿಯಾಗಲಿಲ್ಲ. ಅವನು ಪ್ರತೀಹಾರರ ರಾಜನಾದ ವತ್ಸರಾಜನಿಂದ ಸೋಲನ್ನು ಹೊಂದಿದನು. ಇದಾದ ಮೇಲೆ ಪ್ರತೀಹಾರ ಸಂತತಿಯ ನಾಗಭಟನು ಚಕ್ರಾಯುಧನನ್ನು ಕನೂಜಿನಿಂದ ಓಡಿಸಿ

ಆದನ್ನು ವಶಪಡಿಸಿಕೊಂಡನು ಮುತ್ತ ಮೊಂಘೀರ್ ಬಳಿ ಧರ್ಮಪಾಲನನ್ನು ಸೋಲಿಸಿದನು. ಆದರೂ ಈ ಪರಾಭವಗಳಿಂದ ಪಾಲರ ಅಧಿಕಾರವೇನೂ ಕುಂಟಿತಗೊಳ್ಳಲಿಲ್ಲ.

ಧರ್ಮಪಾಲನು ಸಿಂಹಾಸನಕ್ಕೆ ಬಂದ ಮೇಲೆ ಚಿಕ್ಕದಾಗಿದ್ದ ರಾಜ್ಯವನ್ನು ತನ್ನ ಶಕ್ತಿ ಸಾಮರ್ಥ್ಯಗಳಿಂದ ವಿಶಾಲರಾಜ್ಯನನ್ನಾಗಿ ಮಾಡಿದನು. ಇದುವರೆವಿಗೂ ಅನಾಯಕತ್ವಕ್ಕೆ ಒಳಗಾಗಿ ಅವನತಿ ಮಾರ್ಗವನ್ನು ಹಿಡಿದಿದ್ದ ಬಂಗಾಳವನ್ನು ಉತ್ತರ ಭಾರತದಲ್ಲಿ ಒಂದು ಪ್ರಬಲ ರಾಜ್ಯವನ್ನಾಗಿ ಮಾಡಿದನು. ಅವನ ಅಧಿಕಾರವು ಪಂಜಾಬು, ಉತ್ತರ ರಜಪುಟಾಣ, ಮಾಳವ, ಮತ್ತು ಬಿಹಾರಗಳ ಮೇಲೆ ವಿಸ್ತರಿಸಿದ್ದಿತು. ಅವನು ತನ್ನ ಸಾಮ್ರಾಜ್ಯವನ್ನು ಮೂರು ಭಾಗಗಳಾಗಿ ವಿಂಗಡಿಸಿದ್ದನು. ಪೂರ್ವದಲ್ಲಿ ಬಂಗಾಳ ಮತ್ತು ಮಾಳವಗಳನ್ನು ಸಾಮಂತ ರಾಜರುಗಳು ಆಳುತ್ತಿದ್ದರು.

ಧರ್ಮಪಾಲನು ಕ್ರಿ.ಶ. 810ರಲ್ಲಿ ಕಾಲವಾಗಲು ಅವನ ಮಗನಾದ ದೇವ ಪಾಲನು (810-850) ಸಿಂಹಾಸನಕ್ಕೆ ಬಂದನು. ದೇವಪಾಲನು ತನ್ನ ನಲವತು. ಟರ್ಷಗಳ ಆಳ್ವಿಕೆಯ ಅವಧಿಯಲ್ಲಿ ಪಾಲರ ಸಾಮ್ರಾಜ್ಯವನ್ನು ವಿಸ್ತರಿಸಿ ಕೀರ್ತಿಗಳಿಸಿದನು ಪೂರ್ವ ಬಂಗಾಳ ಮತ್ತು ಮಗಧದ ಮೇಲೂ ತನ್ನ ಅಧಿಕಾರವನ್ನು ಸ್ಥಾಪಿಸಿದನು. ಉತ್ಕಲ ಅಥವ ಒರಿಸ್ಸ ರಾಜ್ಯವನ್ನು ಗೆದ್ದು ವಶಪಡಿಸಿಕೊಂಡಿದ್ದನು. ಪ್ರತೀಹಾರರ ದೊರೆಯಾದ ಮಿಹಿರ ಭೋಜನನ್ನು ಮತ್ತು ದಕ್ಷಿಣದಲ್ಲಿ ರಾಷ್ಟ್ರಕೂಟರ ದೊರೆ ಒಂದನೇ ಅಮೋಘವರ್ಷವನ್ನು ಸೋಲಿಸಿದ್ದನು. ಅವನ ಕೀರ್ತಿಯು ಭಾರತದಿಂದಾ ಚೆಗೂ ಹರಡಿದ್ದಿತು. ಸುಮಾತ್ರದ ರಾಜನಾದ ಬಾಲಪುತ್ರದೇವನು ನಳಂದದಲ್ಲಿ ಬೌದ್ಧ ವಿಹಾರವೊಂದನ್ನು ದೇವಪಾಲನ ಕಾಲದಲ್ಲಿ ಕಟ್ಟಿಸಿದನು. ಅವನ ಸೈನ್ಯವು ಪ್ರತೀಹಾರರ ಮತ್ತು ರಾಷ್ಟ್ರಕೂಟರ ಸೈನ್ಯಕ್ಕಿಂತ ಬಲವಾಗಿತ್ತೆಂದು ಸಮಕಾಲೀನ ಅರಬ್ ಬರಹಗಾರ ನೊಬ್ಬನು ಹೇಳುತ್ತಾನೆ.

ದೇವಪಾಲನು ಮರಣವಾದ ಮೇಲೆ ಪಾಲರ ಅಧಿಕಾರವು ಕ್ಷೀಣಿಸತೊಡಗಿತು. ಕ್ರಿ.ಶ. 854 ರಿಂದ 908ರವರೆಗೆ ಆಳಿದ ನಾರಾಯಣಪಾಲನು ರಾಷ್ಟ್ರಕೂಟರ ದೊರೆ ಒಂದನೇ ಅಮೋಘವರ್ಷ ಹಾಗೂ ಪ್ರತೀಹಾರರ ದೊರೆಗಳಾದ ಭೋಜ ಮತ್ತು ಮಹೇಂದ್ರಪಾಲರಿಂದ ಸೋಲನ್ನು ಹೊಂದಿದನು. ಮಗಧ ಮತ್ತು ಉತ್ತರ ಬಂಗಾಳವು ಕೆಲವು ಕಾಲದವರೆಗೆ ಪ್ರತೀಹಾರರ ರಾಜ್ಯದಲ್ಲಿ ಸೇರಿಹೋಗಿದ್ದವು. ಒರಿಸ್ಸವು ಸ್ವಾತಂತ್ರ್ಯವನ್ನು ಘೋಷಿಸಿಕೊಂಡಿತು. ಗೂರ್ಜರ ಪ್ರತೀಹಾರರ ಅವನತಿಯ ನಂತರ ಕಾಲಿಂಜರ್‌ನ ಚಂದೇಲರು ಮತ್ತು ಮಧ್ಯಭಾರತದ ಕಾಳಚೂರಿಗಳು ಪಾಲರ ಪ್ರಾಂತ್ಯಗಳ ಮೇಲೆ ಪದೇ ಪದೇ ಆಕ್ರಮಣ ಮಾಡಿದರು. ಪಾಲರ್ರ ರಾಜ್ಯವು ಆ ಸಂತತಿಯಲ್ಲಿನ ಆಂತರಿಕ ಕಲಹಗಳಿಂದಾಗಿ ಎರಡು ಬಾಗವಾಗಿ ಒಡೆಯಲ್ಪಟ್ಟಿತು. ಪೂರ್ವ ಮತ್ತು ದಕ್ಷಿಣ ಬಂಗಾಳಗಳಲ್ಲಿ ಕೆಲವು ಸ್ವತಂತ್ರ ರಾಜ್ಯಗಳು ಅಸ್ತಿತ್ವಕ್ಕೆ ಬಂದವು.

ಪಾಲರ ಸಂತತಿಯ ಕೊನೆಯ ಅರಸರುಗಳಲ್ಲಿ ಒಂದನೆ ಮಹಿಪಾಲ (988-1038) ಎಂಬವನು ಪ್ರಸಿದ್ಧನಾದವನು. ಮಹಿಪಾಲನು ಪಶ್ಚಿಮದಲ್ಲಿ ತನ್ನ ಅಧಿಕಾರವನ್ನು ವಾರಣಾಸಿಯವರೆಗೂ ಎಸ್ತರಿಸಿದ್ದನು. ಆದರೆ ತನ್ನ ಅಧಿಕಾರವನ್ನು

ಬಂಗಾಳದಾದ್ಯಂತ ಇಟ್ಟುಕೊಳ್ಳುವರಲ್ಲಿ ವಿಫಲನಾದನು. ಕ್ರಿ.ಶ. 1021ರಲ್ಲಿ ಒಂದನೆ ರಾಜೇಂದ್ರ ಚೋಳನ ದಂಡನಾಯಕನೊಬ್ಬನು ಬಂಗಾಳದ ಮೇಲೆ ಆಕ್ರಮಣ ಮಾಡಿದನು. ಆದರೆ ಇದರಿಂದ ಪರಿಣಾಮಕಾರಿಯಾದ ಯಾವ ಬದಲಾವಣೆಯೂ ಆಗಲಿಲ್ಲ. ಅನಂತರ ಮಹಿಪಾಲನು ಕಾಳಚೂರಿಗಳ ದೊರೆ ಗಂಗೇಯ ಎಂಬವನಿಂದ ಸೋಲಿಸಲ್ಪಟ್ಟನು. ಇದಾದನಂತರ ಪಾಲರಿಗೂ ಕಾಳಚೂರಿಗಳಿಗೂ ನಿರಂತರ ಹೋರಾಟಗಳು ನಡೆದವು. ಕ್ರಿ.ಶ. ಹನ್ನೊಂದನೆ ಶತಮಾನದ ಮಧ್ಯಭಾಗದಲ್ಲಿ ಒರಿಸ್ಸದ ರಾಜನಾದ ಮಹಾಶಿವಗುಪ್ತಯಯಾತಿ ಎಂಬವನು ಬಂಗಾಳದ ಮೇಲೆ ಆಕ್ರಮಣ ಮಾಡಿದನು. ಹೀಗೆ ಪಶ್ಚಿಮ ಮತ್ತು ದಕ್ಷಿಣದ ಕಡೆಯಿಂದ ನಡೆಯುತ್ತಿದ್ದ ಆಕ್ರಮಣಗಳಿಂದ ಪಾಲರು ದುರ್ಬಲರಾಗಿ ಪೂರ್ವ, ಪಶ್ಚಿಮ ಮತ್ತು ದಕ್ಷಿಣ ಬಂಗಾಳದ ಮೇಲೆ ತಮ್ಮ ಅಧಿಕಾರವನ್ನು ಕಳೆದುಕೊಂಡರು.

ಎರಡನೆಯ ಮಹಿಪಾಲನ ಆಳ್ವಿಕೆಯಲ್ಲಿ (1071-1075) ದಿವ್ಯ ಎಂಬ ಉನ್ನತ ಅಧಿಕಾರಿಯೊಬ್ಬನು ದಂಗೆಯೆದ್ದು ರಾಜನನ್ನು ಕೊಂದು ಉತ್ತರ ಬಂಗಾಳದಲ್ಲಿ ತನ್ನ ಅಧಿಕಾರವನ್ನು ಸ್ಥಾಪಿಸಿದನು. ಅವನ ತರುವಾಯ ಅಧಿಕಾರಕ್ಕೆ ಬಂದ ಭೀಮ ಎಂಬವನನ್ನು ಮಹಿಪಾಲನ ಕಿರಿಯ ಸಹೋದರನಾದ ರಾಮಪಾಲನನ್ನು ಸೋಲಿಸಿ ಉತ್ತರ ಬಂಗಾಳವನ್ನು ಪುನಃ ಪಡೆದುಕೊಂಡನು. ರಾಮಪಾಲನು ಕೂಡ ಒಬ್ಬ ಸಮರ್ಥ ದೊರೆಯಾಗಿದ್ದನು. ಅವನು ಅಸ್ಸಾಂಅನ್ನು ಗೆದ್ದು ಪುನಃ ಪಾಲರ ರಾಜ್ಯಕ್ಕೆ ಸೇರಿಸಿಕೊಂಡನು. ಒರಿಸ್ಸದ ಮೇಲೆ ಮಾಡಿದ ಆಕ್ರಮಣದಲ್ಲಿ ಸ್ವಲ್ಪ ಮಟ್ಟಿಗೆ ಯಶಸ್ವಿಯಾದನು. ರಾಮ ಪಾಲನ ಮರಣಾನಂತರ ಅಧಿಕಾರಕ್ಕೆ ಬಂದ ರಾಜರುಗಳು ಅಸಮರ್ಥರಾಗಿದ್ದರಿಂದ ರಾಜ್ಯವನ್ನು ಉಳಿಸಿಕೊಳ್ಳಲಾಗಲಿಲ್ಲ. ಕ್ರಿ.ಶ. ಹನ್ನೆರಡನೆ ಶತಮಾನದಲ್ಲಿ ಬಂಗಾಳದಲ್ಲಿ ಸೇನರು ಪಾಲರ ಅಧಿಕಾರವನ್ನು ಕೊನೆಗಾಣಿಸಿದರು. ಪಾಲರು ಕೆಲವು ಕಾಲದವರೆಗೆ ಬಿಹಾರ ರಾಜ್ಯದಲ್ಲಿದ್ದರು ಆದರೆ ತರುವಾಯದಲ್ಲಿ ಮಹಮದ್ ಘೋರಿಯ ಪ್ರತಿನಿಧಿಯಾಗಿದ್ದ ಭಕ್ತಿಯಾರ್ ಖಿಲ್ಜಿಯು ಬಿಹಾರವನ್ನು ಗೆದ್ದು ಪಾಲರ ಅಧಿಕಾರವನ್ನು ಅಲ್ಲಿಯೂ ಕೊನೆಗಾಣಿಸಿದನು.

ಬಂಗಾಳದ ಇತಿಹಾಸದಲ್ಲಿ ಪಾಲರ ಆಳ್ವಿಕೆಯು ವೈಭವದ ಅಧ್ಯಾಯವಾಗಿದೆ. ಪಾಲರು ಇಡೀ ಉತ್ತರ ಭಾರತದ ಮೇಲೆಲ್ಲಾ ತಮ್ಮ ಪ್ರಭಾವವನ್ನು ಬೀರಿದ್ದರು ಪಾಲರ ಆಳ್ವಿಕೆಯ ಕಾಲದಲ್ಲಿ ಬಂಗಾಳದ ಸಂಸ್ಕೃತಿಯು ತನ್ನ ಪರಾಕಾಷ್ಟತೆಯನ್ನು ಮುಟ್ಟಿದ್ದಿತು. ಪಾಲರು ಬೌದ್ಧಮತಾವಲಂಭಿಗಳಾಗಿದ್ದು ಬೌದ್ಧಮತಕ್ಕೆ ಹೆಚ್ಚಿನ ಪ್ರೋತ್ಸಾಹ ಕೊಟ್ಟಿದ್ದರು. ಅವರ ಪ್ರೋತ್ಸಾಹದಿಂದ ಪೂರ್ವಭಾರತದಲ್ಲಿ ಬೌದ್ಧ ಮತವು ಸುಮಾರು ನಾಲ್ಕು ಶತಮಾನಗಳ ಕಾಲ ಪ್ರಬಲವಾಗಿ ಉಳಿದಿದ್ದಿತು. ಗೋಪಾ ಲನು ಬಿಹಾರರದ ಓದಾಂತಪುರಿಯಲ್ಲೂ ಧರ್ಮಪಾಲನು ವಿಕ್ರಮಶೀಲದಲ್ಲೂ ವಿದ್ಯಾಪೀಠಗಳನ್ನು ಕಟ್ಟಿಸಿದರು. ವಿಕ್ರಮಶೀಲ ವಿದ್ಯಾಪೀಠವು ಬೌದ್ಧ ಧರ್ಮದ ಅಧ್ಯಯನದ ಮುಖ್ಯ ಕೇಂದ್ರವಾಗಿತ್ತು. ಪಾಲರ ಕಾಲದಲ್ಲಿ ಬೌದ್ಧಧರ್ಮದ ಸುಪ್ರಸಿದ್ಧ ಪಂಡಿತನಾಗಿದ್ದ ದೀಪಾಂಕರ ಶ್ರೀಜ್ಞಾನ ಅತಿಶ ಎಂಬವನು ಟಿಬೆಟ್ಟಿನಲ್ಲಿ ಬೌದ್ಧಿಮತ ಪ್ರಸಾರ ಮಾಡಿದನು. ಪಾಲರು ಬೌದ್ಧಮತಕ್ಕೆ ಹೆಚ್ಚಿನ ಪ್ರೋತ್ಸಾಹ ಕೊಟ್ಟಿದ್ದರೂ ಅವರು ಅನ್ಯಮತ ದ್ವೇಷಿಗಳಾಗಿರಲಿಲ್ಲ. ಅವರ ಕಾಲದಲ್ಲಿ ಹಿಂದೂಧರ್ಮಕ್ಕೆ

ಯಾವುದೇ ರೀತಿಯ ತೊಂದರೆಯುಂಟಾಗಲಿಲ್ಲ. ಪಾಲರು ವಾಸ್ತುಶಿಲ್ಪ, ಶಿಲ್ಪಕಲೆ ಮತ್ತು ಸಾಹಿತ್ಯದ ಪೋಷಕರೂ ಆಗಿದ್ದರು.

**ಸೇನರು**

ಕ್ರಿ.ಶ. ಹನ್ನೆರಡನೆ ಶತಮಾನದ ಉತ್ತರಾರ್ಧದಲ್ಲಿ ಪಾಲರ ಅಧಿಕಾರವು ಕ್ಷೀಣಿಸಲು ಸೇನರು ಬಂಗಾಳದಲ್ಲಿ ತಮ್ಮ ಅಧಿಕಾರವನ್ನು ಸ್ಥಾಪಿಸಿದರು. ಸೇನರು ಕರ್ಣಾಟಕದ ಬ್ರಾಹ್ಮಣರ ಮೂಲಕ್ಕೆ ಸೇರಿದವರೆಂದು ಹೇಳಲಾಗಿದೆ. ಸಾಮಂತಸೇನ ಎಂಬುವನು ಈ ಸಂತತಿಯ ಸ್ಥಾಪಕ. ಅವನ ಮಗ ಹೇಮಂತಸೇನ ಮತ್ತು ಮೊಮ್ಮಗ ವಿಜಯ ಸೇನನ ಕಾಲದಲ್ಲಿ (1095-1158) ಸೇನರು ಹೆಚ್ಚು ಪ್ರಸಿದ್ಧಿಗೆ ಬಂದರು. ವಿಜಯ ಸೇನನು ಪೂರ್ವ ಮತ್ತು ಉತ್ತರ ಬಂಗಾಳವನ್ನು ವಶಪಡಿಸಿಕೊಂಡು ಕಾಮರೂಪ, ಮಿಥಿಲ ಮತ್ತು ಕಳಿಂಗದ ಮೇಲೂ ಆಕ್ರಮಣ ಮಾಡಿದನು. ವಿಜಯಸೇನನ ನಂತರ ಅವನ ಮಗನಾದ ಬಲ್ಲಾಳಸೇನ (1154-1179)ನು ಅಧಿಕಾರಕ್ಕೆ ಬಂದನು. ಬಲ್ಲಾಳ ಸೇನನು ತನ್ನ ಮಿಲಿಟರಿ ಸಾಧನೆಗಳಿಗಿಂತಲೂ ಹೆಚ್ಚಾಗಿ ತಾನು ರಚಿಸಿದ 'ದಾನಸಾಗರ' ಮತ್ತು 'ಅದ್ಭುತಸಾಗರ' ಎಂಬ ಕೃತಿಗಳಿಂದ ಹೆಚ್ಚು ಪರಿಚಿತನಾಗಿದ್ದಾನೆ. ಇವನು ಹಿಂದೂ ಧರ್ಮಕ್ಕೆ ಹೆಚ್ಚು ಪ್ರೋತ್ಸಾಹ ನೀಡಿದನು. ಹಿಂದೂ ಧರ್ಮ ಪ್ರಚಾರಕರನ್ನು ನೇಪಾಳ ಭೂತಾನ ಮತ್ತು ಅರಕಾನ್ ರಾಜ್ಯಗಳಿಗೆ ಧರ್ಮ ಪ್ರಸಾರಕ್ಕಾಗಿ ಕಳುಹಿಸಿದನು. ಸೇನರ ಕಾಲದಲ್ಲಿ ಬಂಗಾಳದಲ್ಲಿ ಬೌದ್ಧಮತವು ಅವನತಿ ಹೊಂದಿ ಹಿಂದೂ ಧರ್ಮವುಪುನಃ ಪ್ರಾಬಲ್ಯಕ್ಕೆ ಬಂದಿತು.

ಸೇನರ ಸಂತತಿಯ ಕೊನೆಯ ರಾಜರುಗಳಲ್ಲಿ ಬಲ್ಲಾಳಸೇನನ ಮಗನಾದ ಲಕ್ಷ್ಮಣ ಸೇನ ಎಂಬವನು (1179-1205) ಹೆಸರುವಾಸಿಯಾದವನು. ಇವನು ಅಧಿಕಾರಕ್ಕೆ ಬಂದ ತಕ್ಷಣವಲ್ಲೇ ಬೆನಾರಿಸ್ ಮತ್ತು ಅಲಹಾಬಾದ್‌ಗಳ ಮೇಲೆ ದಂಡೆತ್ತಿ ಹೋದನು ಮತ್ತು ಕನೂಜಿನ ಗಹಡವಾಲರ ದೊರೆಯನ್ನು ಸೋಲಿಸಿ ಸೇನರ ಅಧಿಕಾರವನ್ನು ಕನೂಜಿನವರೆಗೂ ವಿಸ್ತರಿಸಿದನು. ಲಕ್ಷ್ಮಣಸೇನನು ವಿದ್ಯಾಭಿಮಾನಿಯಾಗಿದ್ದು ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ ಕೊಟ್ಟಿದ್ದನು. ಅನೇಕ ಸಾಹಿತಿಗಳು ಮತ್ತು ಕವಿಗಳೂ ಇವನ ಆಸ್ಥಾನವನ್ನು ಅಲಂಕರಿಸಿದ್ದರು. ಅವರಲ್ಲಿ 'ಗೀತಗೋವಿಂದ'ವನ್ನು ರಚಿಸಿದ ಜಯದೇವ, ದೋಪಿ, ಸರಣ, ಶ್ರೀಧರದಾಸ್, ಉಮಾಪತಿ ಮತ್ತು ಹಲಾಯುಧ ಮುಖ್ಯರಾದವರು. ಲಕ್ಷ್ಮಣಸೇನನೂ ಕೂಡ ಸ್ವತಃ ಕವಿಯಾಗಿದ್ದು ತನ್ನ ತಂದೆಯಿಂದ ಅಪೂರ್ಣವಾಗಿ ಉಳಿದಿದ್ದ 'ಅದ್ಭುತಸಾಗರ' ಕೃತಿಯನ್ನು ಪೂರ್ಣಗೊಳಿಸಿದನು. ಈತನು ವಿಷ್ಣುವಿನ ಆರಾಧಕನಾಗಿದ್ದನು. ನುದಿಯ ಎಂಬುದು ಇವನ ರಾಜದಾನಿಯಾಗಿತ್ತು. ಲಕ್ಷ್ಮಣ ಸೇನನ ಆಳ್ವಿಕೆಯ ಕೊನೆಯಲ್ಲಿ (1197) ಭಕ್ತಿಯಾರ್ ಖಿಲ್ಜಿಯು ಬಿಹಾರ ರಾಜ್ಯದ ಮೇಲೆ ದಂಡೆತ್ತಿ ಹೋಗಿ ಅದನ್ನು ವಶಪಡಿಸಿಕೊಂಡಿದ್ದಲ್ಲದೆ ಅಲ್ಲಿನ ಸುಪ್ರಸಿದ್ಧ ನಳಂದ ವಿಶ್ವವಿದ್ಯಾಲಯವನ್ನೂ ಮತ್ತು ಅದರ ಗ್ರಂಥಭಂಡಾರವನ್ನು ನಾಶಮಾಡಿದನು. ಇದಾದ ಎರಡು ವರ್ಷಗಳ ನಂತರದಲ್ಲಿ (1199) ಅವನು ನುದಿಯದ ಮೇಲೆ ಆಕ್ರಮಣ ಮಾಡಿ ಅದನ್ನು ವಶಪಡಿಸಿಕೊಂಡನು. ಲಕ್ಷ್ಮಣಸೇನನು ತಲೆತಪ್ಪಿಸಿಕೊಂಡು ಓಡಿಹೋದನು.

ನುದಿಯುವನ್ನು ವಶಪಡಿಸಿಕೊಂಡನಂತರ ಭಕ್ತಿಯಾರ್ ಖಿಲ್ಜಿಯು ಉತ್ತರ ಬಂಗಾಳವನ್ನು ವಶಪಡಿಸಿಕೊಂಡು ಲಕ್ನಾವತಿಯನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ಅಲ್ಲಿ ಮುಸಲ್ಮಾನರ ಆಳ್ವಿಕೆಯನ್ನು ಆರಂಭಿಸಿದನು. ಇವರೊಂದಿಗೆ ಬಂಗಾಳದಲ್ಲಿ ಸೇನರ ಅಧಿಕಾರವೂ ಕೊನೆಗೊಂಡಿತು.

**ರಜಪೂತರ ಸಂಸ್ಕೃತಿ**

ರಜಪೂತರ ಆಡಳಿತ ಮತ್ತು ಸಾಮಾಜಿಕ ವ್ಯವಸ್ಥೆಯು ಊಳಿಗಮಾನ್ಯ ಪದ್ಧತಿಯ ಲಕ್ಷಣಗಳಿಂದ ಕೂಡಿದ್ದಿತು. ರಾಜ್ಯವು ಜಹಗೀರುಗಳಾಗಿ ವಿಬಾಗಿಸಿಲ್ಪಟ್ಟಿದ್ದು ಜಹಗೀರುಗಳ ಮೇಲಿನ ಆಡಳಿತವನ್ನು ಜಹಗೀರುದಾರರುಗಳು ನೋಡಿಕೊಳ್ಳುತ್ತಿದ್ದರು. ಜಹಗೀರುದಾರರೂ ಕೂಡ ಬಹಳಮಟ್ಟಿಗೆ ರಾಜನಂತೆ ಒಂದೇ ವಂಶಕ್ಕೆ ಸೇರಿದವರಾಗಿರುತ್ತದ್ದರು, ರಾಜ್ಯದ ರಕ್ಷಣೆಯು ಅವರ ನಿಷ್ಠಾವಂತ ಸೇವೆಯನ್ನು ಅವಲಂಭಿಸಿತ್ತು. ಭೂಕಂದಾಯವು ಸರ್ಕಾರದ ಮುಖ್ಯ ಆದಾಯವಾಗಿತ್ತು ಅದನ್ನು ಇನ್ನಿತರ ಕರಗಳಿಂದ ವೃದ್ಧಿಗೊಳಿಸಿಕೊಳ್ಳಲಾಗಿತ್ತು. ಜಹಗೀರುದಾರರು ತಮ್ಮ ರಾಜನ ಬಗ್ಗೆ ಹೆಚ್ಚಿನ ಗೌರವವನ್ನು ಇಟ್ಟುಕೊಂಡಿದ್ದರು. ಅವರು ರಾಜನಿಂದ ಕರೆಬಂದಾಗ ಸೈನಿಕ ಸೇವೆಗೆ ಸಿದ್ಧರಿರ ಬೇಕಿತ್ತು ಮತ್ತು ಅವರೂ ಕೂಡ ಯುದ್ಧಭೂಮಿಗೆ ಸಂತೋಷದಿಂದ ಹೋಗುತ್ತಿದ್ದರು. ಯಾವುದೇ ಆಮಿಷವೂ ಅವರನ್ನು ಅವರ ರಾಜನ ಪ್ರೀತಿಯಿಂದ ವಂಚಿತರಾಗುವಂತೆ ಮಾಡುತ್ತಿರಲಿಲ್ಲ.

ರಾಜಪೂತರ ಸರ್ಕಾರ ಪದ್ಧತಿಯಲ್ಲಿ ರಾಜನು ಸರ್ವಶಕ್ತನಾಗಿದ್ದನು. ರಾಜನು ಎಲ್ಲಿಯವರೆಗೆ ಪ್ರಬಲನೂ ಮತ್ತು ದಕ್ಷನೂ ಆಗಿರುತ್ತಿದ್ದನೋ ಅಲ್ಲಿಯವರೆಗೆ ರಾಜ್ಯದ ಆಗುಹೋಗುಗಳು ದಕ್ಷತೆಯಿಂದ ನಿರ್ವಹಿಸಲ್ಪಡುತ್ತಿದ್ದವು. ರಾಜನು ದುರ್ಬಲನಾದರೆ ಅವನನ್ನು ಅಧಿಕಾರದಲ್ಲಿ ಇಲ್ಲದಂತೆ ಮಾಡುತ್ತಿದ್ದರು. ರಾಜ್ಯದ ಆಂತರಿಕ ಶಾಂತಿಯು ಬಹುಮಟ್ಟಿಗೆ ಹೊರಗಿನ ಶತ್ರುಗಳ ಅಪಾಯವನ್ನು ಅವಲಂಬಿಸಿದ್ದಿತು. ಆದರೂ ದುರ್ದೈವದಿಂದ ರಜಪೂತರಲ್ಲಿ ಸದಾ ಒಳಜಗಳಗಳು ಕಂಡುಬರುತ್ತಿದ್ದವು. ಈ ರೀತಿಯ ಒಳಜಗಳಗಳಿಂದಾಗಿ ಅವರು ಭಾರತದ ಮೇಲೆ ಮುಸಲ್ಮಾನರು ಧಾಳಿ ಮಾಡಿದಾಗ ಅವರನ್ನು ಯಶಸ್ವಿಯಾಗಿ ಹಿಮ್ಮೆಟ್ಟಿಸುವುದರಲ್ಲಿ ವಿಫಲರಾದರು.

ರಜಪೂತರ ಸಮಾಜದಲ್ಲೂ ಜಾತಿ ಪದ್ಧತಿಯು ಮುಂದುವರಿದಿದ್ದಿತು. ಬ್ರಾಹ್ಮಣಕ್ಷತ್ರಿಯ, ವೈಶ್ಯ ಮತ್ತು ಶೂದ್ರರಲ್ಲದೆ ಇನ್ನೂ ಅನೇಕ ಉಪಜಾತಿಗಳಿದ್ದವು. ಬ್ರಾಹ್ಮಣರಿಗೆ ಸಮಾಜದಲ್ಲಿ ಉನ್ನತ ಸ್ಥಾನಮಾನಗಳಿದ್ದು ಅವರನ್ನು ಹೆಚ್ಚಿನ ಗೌರವದಿಂದ ಕಾಣಲಾಗುತ್ತಿತ್ತು. ರಾಜರುಗಳೂ ಸಹ ಅವರಿಗೆ ಹೆಚ್ಚಿನ ಮರ್ಯಾದೆ ತೋರಿಸುತ್ತಿದ್ದರು. ರಜಪೂತರು ಧೈರ್ಯಶಾಲಿಗಳೂ ಮತ್ತು ಯುದ್ಧಪ್ರಿಯರೂ ಆಗಿದ್ದರು. ತಮ್ಮ ಕುಲದ ಗೌರವದ ಬಗ್ಗೆ ಹೆಚ್ಚಿನ ಅಭಿಮಾನ ಹೊಂದಿದ್ದರು. ಸೋತ ಶತ್ರುಗಳ ಬಗ್ಗೆ ಔದಾರ್ಯದಿಂದ ವರ್ತಿಸುತ್ತಿದ್ದರು. ಅವರು ಯುದ್ಧದಲ್ಲಿ ಮೋಸ ಮತ್ತು ಕಪಟಗಳನ್ನು ಅನುಸರಿಸುತ್ತಿರಲಿಲ್ಲ. ಸ್ತ್ರೀಯರಿಗೆ ರಜಪೂತರ ಸಮಾಜದಲ್ಲಿ ಹೆಚ್ಚಿನ ಗೌರವವಿದ್ದಿತು. ಮಹೇಂದ್ರಪಾಲ ಮತ್ತು ಅವನ ಮಗ ಮಹೀಪಾಲನ ಆಶ್ರಯ ಪಡೆದಿದ್ದ ರಾಜಶೇಖರ ಕವಿಯ ಕರ್ಪೂರ ಮಂಜರಿಯು ಈ ಕಾಲದ ಸಾಮಾಜಿಕ ಜೀವನದ ಮೇಲೆ ಬೆಳಕನ್ನು ಚೆಲ್ಲುತ್ತದೆ. ರಜಪೂತ

ಸ್ತ್ರೀಯರೂ ಕೂಡ ತಮ್ಮ ಗಂಡಸರಂತೆ ಧೈರ್ಯಶಾಲಿಗಳೂ ಮತ್ತು ವ್ಯವಹಾರ ಚತುರೆಯರೂ ಆಗಿದ್ದರು. ಅವರು ರೂಪಾತಿಶಯಗಳಿಗೆ ಹೆಸರುವಾಸಿಯಾಗಿದ್ದರು. ಸ್ತ್ರೀಯರೂ ವಿದ್ಯಾವಂತೆಯರಾಗಿದ್ದರು. ವರ್ಣ ಚಿತ್ರಗಳನ್ನು ಬರೆಯುತ್ತಿದ್ದರು. ಕೆಲವರು ಕಾವ್ಯಗಳನ್ನು ರಚಿಸಿದ್ದರು. ರಾಜಶೇಖರನ ಪತ್ನಿ ಅವಂತಿಸುಂದರಿಯು ಪ್ರತಿಭಾಸ್ವಿತ ಸ್ತ್ರೀಯಾಗಿದ್ದಳು. ಅರಬ್ ಪ್ರವಾಸಿ ಸುಲೇಮಾನನ ಬರವಣಿಗೆಯಲ್ಲೂ ರಾಜಶೇಖರನ ಅಭಿಪ್ರಾಯಗಳು ಸಮರ್ಥಿತವಾಗಿವೆ. ಸಂಗೀತ, ನೃತ್ಯ, ಮತ್ತು ಸಂಗೀತದ ಉಪಕರಣಗಳನ್ನು ನುಡಿಸುವುದರಲ್ಲಿ ನಿಪುಣೆಯರಾಗಿದ್ದರು. ರಾಜರುಗಳ ಮತ್ತು ಇನ್ನಿತರ ಮುಖಂಡರ ಹೆಣ್ಣುಮಕ್ಕಳು, ಕುದುರೆ ಸವಾರಿ ಮಾಡುವುದು, ಬೇಟೆಯಾಡುವುದು ಈಜುವುದು ಮೊದಲಾದುವನ್ನು ಕಲಿತ್ತಿದ್ದರು. ರಜಪೂತ ಸ್ತ್ರೀಯರು ಆಪತ್ತಿನ ಸನ್ನಿವೇಶಗಳಲ್ಲಿ ಹೆಚ್ಚಿನ ಶೌರ್ಯ ಸಾಹಸಗಳನ್ನು ವ್ಯಕ್ತಪಡಿಸುತ್ತಿದ್ದರು. ಅವರು ತಮ್ಮ ಶೀಲಕ್ಕೆ ಹೆಸರಿವಾಸಿಯಾಗಿದ್ದರು ಮತ್ತು ತಮ್ಮ ಶೀಲವನ್ನು ಕಾಪಾಡಿಕೊಳ್ಳಲು ಚಿತೆಯಲ್ಲಿ ಬಿದ್ದು ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದರು. ಜೋಹರ್ ಅಥವ ಸತಿಸಹಗಮನ ಪದ್ಧತಿ ಅವರಲ್ಲಿ ರೂಢಿಯಲ್ಲಿತ್ತು.

ರಜಪೂತರ ಸಮಾಜದಲ್ಲಿ ಕೆಲವು ದೋಷಗಳೂ ಇದ್ದವು. ಅವರು ಅಸ್ಥಿರ ಮನೋಬಾವನೆಯುಳ್ಳವರಾಗಿದ್ದರು. ಬಹಳ ಜಾಗ್ರತೆ ಉದ್ವೇಗಕ್ಕೊಳಗಾಗುತ್ತಿದ್ದರು. ಅವರು ಅಫೀಮು ಸೇವಕರೂ ಮತ್ತು ಪಾನಾಸಕ್ತರೂ ಆಗಿದ್ದರು. ಅಂತಃಕಲಹಗಳು ಸರ್ವಸಾಮಾನ್ಯವಾಗಿದ್ದು ಆಪತ್ತಿನ ಸಮಯದಲ್ಲಾದರೂ ಒಟ್ಟುಗೂಡಿ ಶತ್ರುಗಳ ವಿರುದ್ಧ ಹೋರಾಡಬೇಕೆಂಬ ಮನೋಭವನೆ ಅವರಲ್ಲಿ ಬೆಳೆದಿರಲಿಲ್ಲ, ಶಿಶುಹತ್ಯೆಮಾಡುವುದು ಅವರಲ್ಲಿ ಸರ್ವಸಾಮಾನ್ಯವಾಗಿತ್ತು. ಹೆಣ್ಣುಮಕ್ಕಳಿಗೆ ಚಿಕ್ಕ ವಯಸ್ಸಿನಲ್ಲಿಯೇ ವಿವಾಹಮಾಡುತ್ತಿದ್ದರು. ವಿಧವಾ ವಿವಾಹವು ರೂಢಿಯಲ್ಲಿರಲಿಲ್ಲ. ಸ್ವಯಂವರ ಪದ್ಧತಿಯು ರೂಢಿಯಲ್ಲಿದ್ದರೂ ಅದನ್ನು ಮೇಲಿಂದ ಮೇಲೆ ನಡೆಸುತ್ತಿರಲಿಲ್ಲ.

ರಜಪೂತರು ವ್ಯವಸಾಯಕ್ಕೆ ಹೆಚ್ಚಿನ ಪ್ರೋತ್ಸಾಹ ಕೊಟ್ಟಿದ್ದರು. ಕೆರೆ ಕಟ್ಟೆ ಮತ್ತು ಕಾಲುವೆಗಳನ್ನು ನಿರ್ಮಿಸಿದ್ದರು. ಕೈಗಾರಿಕೆ ವ್ಯಾಪಾರ ವಾಣಿಜ್ಯಗಳು ಮುಂದುವರಿದಿದ್ದವು. ಮಾಲಿಕ ಶ್ರೇಣಿ, ಕುಂಬಕಾರ ತಾಂಬೂಲಕ ಮೊದಲಾದ ಹೆಸರುಗಳು ಶಾಸನಗಳಲ್ಲಿ ಕಂಡುಬರುತ್ತವೆ. ವಿವಿಧ ಕಸುಬಿನ ಜನರು ವೃತ್ತಿ ಸಂಘಗಳನ್ನು ಸ್ಥಾಪಿಸಿ ಕೊಂಡಿದ್ದರು. ಜನಗಳು ಐಶ್ವರ್ಯವಂತರಾಗಿದ್ದು ತೃಪ್ತಿಕರ ಜೀವನ ನಡೆಸುತ್ತಿದ್ದರು. ಮುಸ್ಲಿಮರ ಆಕ್ರಮಣಕ್ಕೆ ಇವರ ಐಶ್ವರ್ಯವೂ ಕೂಡ ಒಂದು ಕಾರಣವಾಗಿತ್ತು. ರಜ ಪೂತರು ಹಿಂದೂ ಧರ್ಮೀಯರಾಗಿದ್ದು ಶೈವ ಮತ್ತು ವೈಷ್ಣವ ಮತಗಳನ್ನು ಪ್ರೋತ್ಸಾ ಹಿಸಿದ್ದರು. ಅನೇಕ ದೇವಾಲಯಗಳನ್ನು ನಿರ್ಮಿಸಿದ್ದರು. ಚಂದೇಲರ ದೊರೆಗಳು ಕ್ರಿ.ಶ. 1000ದಲ್ಲಿ ಕಟ್ಟಿಸಿದ ಮಧ್ಯಭಾರತದಲ್ಲಿನ ಕಾಜುರಾಹೊ ದೇವಾಲಯ, ಒರಿಸ್ಸದ ಭುವನೇಶ್ವರ ದೇವಾಲಯ ಮತ್ತು ಕೊನಾರಕ್‌ಗಳಲ್ಲಿನ ದೇವಾಲಯಗಳು ಮುಖ್ಯವಾದವುಗಳು. ರಜಪೂತರು ಹಿಂದೂಧರ್ಮಾವಲಂಭಿಗಳಾಗಿದ್ದರೂ ಇತರ ಮತಗಳ ದ್ವೇಷಿಗಳಾಗಿರಲಿಲ್ಲ. ಜೈನ ಮತ್ತು ಬೌದ್ಧ ಮತಗಳಿಗೂ ಪ್ರೋತ್ಸಾಹ ನೀಡಿದ್ದರು.

## ಕಲೆ ಮತ್ತು ಸಾಹಿತ್ಯ

ರಜಪೂತರ ದೊರೆಗಳು ವಾಸ್ತುಶಿಲ್ಪಕ್ಕೂ ಪ್ರೋತ್ಸಾಹ ನೀಡಿದ್ದರು. ವಾಸ್ತುಶಿಲ್ಪಕ್ಕೆ ಸಂಬಂಧಿಸಿದಂತೆ ಈ ಕಾಲದ ಹಿಂದೂಗಳ ಕಾರ್ಯ ಚಟುವಟಿಕೆಗಳು ದೇವಾಲಯಗಳ ಮತ್ತು ಕೋಟೆ ಕೊತ್ತಲಗಳ ನಿರ್ಮಾಣದಲ್ಲಿ ಕಂಡುಬಂದಿದೆ. ರಜಪೂತರ ದೊರೆಗಳು ಅರಮನೆಗಳನ್ನೂ, ಕೋಟೆಗಳನ್ನೂ, ಮತ್ತು ದೇವಾಲಯಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ನಿರ್ಮಿಸಿದರು. ಅವುಗಳಲ್ಲಿ ಚಿತ್ತೂರಿನ ಕೋಟೆ, ರಣತಂಬೂರಿನ ಕೋಟೆ, ಚಾಂದೇರಿ ಕೋಟೆ, ಅಸೀರ್‌ಘರ್ ಕೋಟೆ ಮತ್ತು ಕಾಲಿಂಜರ್ ಕೋಟೆಗಳು ಪ್ರಸಿದ್ಧವಾದವೂಗಳು. ಗ್ವಾಲಿಯರ್‌ನ ರಾಜಾಮಾನಸಿಂಗನ ಅರಮನೆ, ಉದಯಪುರದ ಅರಮನೆ ಚಿತ್ತೂರು ಮತ್ತು ಮೇವಾರಗಳಲ್ಲಿನ ಅರಮನೆಗಳು ರಜಪೂತರ ಕಾಲದ ವಾಸ್ತುಶಿಲ್ಪಕ್ಕೆ ಅತ್ಯುತುಮ ನಿದರ್ಶನಗಳಾಗಿವೆ. ಅಂತೆಯೆ ಈ ಕಾಲದಲ್ಲಿ ಕಟ್ಟಲ್ಪಟ್ಟ ದೇವಾಲಯಗಳಲ್ಲಿ ಬಂದೇಲ್ ಖಂಡದ ಖಾಜುರಾಹೊ ದೇವಾಲಯ, ಗುಜರಾತಿನ ಸೋಮನಾಥಪುರದ ಸೋಮೇಶ್ವರದೇವಾಲಯ ಒರಿಸ್ಸಿದ ಭುವನೇಶ್ವರದಲ್ಲಿನ ಲಿಂಗರಾಜ ದೇವಾಲಯ. ಪುರಿಯ ಜಗನ್ನಾಥ ದೇವಾಲಯ, ಕೊನಾರಕ್‌ನ ಸೂರ್ಯ ದೇವಾಲಯ, ಚಿತ್ತೂರು ಕೋಟೆಯಲ್ಲಿರುವ ಕಾಳಿಕಾ ದೇವಾಲಯ ಉದಯಪುರದ ಸಮೀಪದಲ್ಲಿರುವ ಏಕಲಿಂಗೇಶ್ವರ ದೇವಾಲಯ ಮೌಂಟ್ ಅಬುವಿನಲ್ಲಿರುವ ಜೈನ ದೇವಾಲಯ ಮೊದಲಾದವುಗಳು ಪ್ರಸಿದ್ಧ ದೇವಾಲಯಗಳಾಗಿದ್ದು ರಜಪೂತರ ಕಾಲದ ಅದ್ಭುತ ಸ್ಮಾರಕಗಳಾಗಿವೆ.

ರಜಪೂತರ ದೊರೆಗಳು ಸಾಹಿತ್ಯ ಮತ್ತು ವಿದ್ಯಾಭ್ಯಾಸಕ್ಕೂ ಹೆಚ್ಚಿನ ಪ್ರೋತ್ಸಾಹ ನೀಡಿದ್ದರು. ಕೆಲವು ರಾಜರುಗಳು ನಾಟಕ ಕಲೆಯ ಪೋಷಕರೂ ಆಗಿದ್ದರು. ಈ ಕಾಲದ ಪ್ರಸಿದ್ಧ ನಾಟಕಕಾರರಲ್ಲಿ ಕನೂಜಿನ ದೊರೆ ಯಶೋವರ್ಮನ ಆಸ್ಥಾನದಲ್ಲಿದ್ದಭವಭೂತಿಯು 'ಮಾಲತಿ ಮಾಧವ' ಎಂಬ ಸುಪ್ರಸಿದ್ಧ ನಾಟಕವನ್ನೇ ಅಲ್ಲದೆ 'ಮಹಾವೀರಚರಿತ' 'ಉತ್ತರರಾಮಚರಿತ' ಎಂಬ ಕೃತಿಗಳನ್ನೂ ರಚಿಸಿ ಹೆಸರು ಪಡೆದಿದ್ದನು. ಮಹೇಂದ್ರಪಾಲ ಮತ್ತು ಅವನ ಮಗ ಮಹಿಪಾಲನ ಆಸ್ಥಾನವನ್ನ ಲಂಕರಿಸಿದ್ದ ರಾಜ ಶೇಖರನು. 'ಕರ್ಪೂರ ಮಂಜರಿ' ಮತ್ತಿತರ ಕೃತಿಗಳನ್ನು ರಚಿಸಿದ್ದನು. ಕಾಶ್ಮೀರದ ಸೋಮದೇವ ಎಂಬವನು 'ಕಥಾಸರಿತ್ಸಾಗರ' ಎಂಬ ಕಥಾ ಸಂಕಲನವನ್ನು ರಚಿಸಿದನು. ಅಂತೆಯೆ ಕ್ರಿ.ಶ. ಹನ್ನೆರಡನೆ ಶತಮಾನದಲ್ಲಿ ಕಲ್ಹಣನು 'ರಾಜತರಂಗಿಣಿ' ಎಂಬ ಕೃತಿಯನ್ನು ರಚಿಸಿದನು. ಈ ಕೃತಿಯು ಕಾಶ್ಮೀರದ ಇತಿಹಾಸದ ಮೇಲೆ ಹೆಚ್ಚು ಬೆಳಕನ್ನು ಚೆಲ್ಲುತ್ತದೆ.

ರಾಜಪೂತರ ರಾಜರುಗಳು ಕೇವಲ ಸಾಹಿತ್ಯ ಪೋಷಕರಾಗಿದ್ದುದೇ ಅಲ್ಲದೆ ಕೆಲವು ರಾಜರುಗಳು ಅತ್ಯುತ್ತಮ ಕವಿಗಳೂ ಮತ್ತು ಸಾಹಿತಿಗಳೂ ಆಗಿದ್ದರು. ದಾರಾನಗರದ ಮುಂಜರಾಜನು ಯುದ್ದದಲ್ಲೇ ಅಲ್ಲದೆ ಕಲೆ ಮತ್ತು ಸಾಹಿತ್ಯದಲ್ಲೂ ಪಾಂಡಿತ್ಯ ಪಡೆದಿದ್ದನು. ಅವನ ತರುವಾಯ ಆಳಿದ ಭೋಜರಾಜನು ಶ್ರೇಷ್ಠಮಟ್ಟದ ವಿದ್ವಾಂಸನಾಗಿದ್ದು ಜ್ಯೋತಿಷ್ಯಶಾಸ್ತ್ರ, ಶಿಲ್ಪಶಾಸ್ತ್ರ ಅಲಂಕಾರಶಾಸ್ತ್ರ ಮತ್ತು ವೈದ್ಯಕೀಯಶಾಸ್ತ್ರ ಮೊದಲಾದವುಗಳಲ್ಲಿ ಪಾಂಡಿತ್ಯಗಳಿಸಿದ್ದನು. ಈತನು ಆಯುರ್ವೇದ ಸರ್ವಸ್ವ, ರಾಜಾ ಮೃಣಾಂಕ, ವ್ಯವಹಾರ ಸಮುಚ್ಚಯ, ಶಬ್ದಾನುಶಾಸನ ಮತ್ತು

ಯುಕ್ತಿ ಕಲ್ಪತರು ಮೊದಲಾದ ಕೃತಿಗಳನ್ನು ರಚಿಸಿದ್ದನು. ಪದ್ಮಗುಪ್ತ, ಧನಿಕ, ಹಲಾಯುಧ, ಧನಂಜಯ ಮತ್ತು ಅಮಿತಗತ ಮುಂತಾದ ಕವಿಗಳು ಇವನ ಆಸ್ಥಾನವನ್ನು ಅಲಂಕರಿಸಿದ್ದರು. ಭೋಜನ ಕಾಲದಲ್ಲಿ ಧಾರಾನಗರವು ವಿದ್ಯೆಯ ಕೇಂದ್ರವೂ ಆಗಿದ್ದಿತು. ಭೋಜನು ಧಾರಾನಗರದಲ್ಲಿ ಸ್ಥಾಪಿಸಿದ್ದ ವಿದ್ಯಾಪೀಠಕ್ಕೆ ದೇಶದ ನಾನಾ ಕಡೆಗಳಿಂದ ವಿದ್ಯಾರ್ಥಿಗಳು ಬಂದು ವಿದ್ಯಾಭ್ಯಾಸ ಮಾಡುತ್ತಿದ್ದರು. ಅಜ್ಮೀರದ ಚೌಹಾಣದ ದೊರೆ ನಾಲ್ಕನೆ ವಿಗ್ರಹರಾಜನು ಆಜ್ಮೀರದಲ್ಲಿ ಒಂದು ವಿದ್ಯಾಪೀಠವನ್ನು ಸ್ಥಾಪಿಸಿ ವಿದ್ಯಾಭಿವೃದ್ಧಿಗೆ ಕಾರಣವಾಗಿದ್ದನು.

ಬಂಗಾಳವನ್ನಾಳಿದ ಪಾಲಸಂತತಿಯ ಅರಸರೂ ಕೂಡ ಈ ಕಾಲದ ಭಾರತದ ಇತಿಹಾಸದಲ್ಲಿ ವಿಶಿಷ್ಟ ಸ್ಥಾನವನ್ನು ಗಳಿಸಿಕೊಂಡಿದ್ದಾರೆ. ಇವರ ಕಾಲದಲ್ಲಿ ಭಾರತದ ಸಂಸ್ಕೃತಿಯು ಹೊರ ದೇಶಗಳಲ್ಲೂ ಹರಡಿತು. ಪಾಲ ಸಂತತಿಯ ದೊರೆಗಳು ಓದಾಂತಪುರಿ ವಿಕ್ರಮಶೀಲ ವಿಶ್ವವಿದ್ಯಾನಿಲಯಗಳನ್ನು ಸ್ಥಾಪಿಸಿದ್ದಲ್ಲದೆ ನಳಂದ ವಿಶ್ವವಿದ್ಯಾನಿಲಯವನ್ನು ದುರಸ್ತು ಮಾಡಿಸಿ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ ನೀಡಿದ್ದರು. ಪಾಲರ ನಂತರ ಅಧಿಕಾರಕ್ಕೆ ಬಂದ ಸೇನರೂ ಕೂಡ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ ಕೊಟ್ಟಿದ್ದರು. ಸೇನರ ಸಂತತಿಯ ಅರಸರುಗಳಲ್ಲಿ ಬಲ್ಲಾಳ ಸೇನ ಮತ್ತು ಲಕ್ಷ್ಮಣಸೇನ ಎಂಬವರು ವಿದ್ಯಾಭಿ ಮಾನಿಗಳಾಗಿದ್ದು ಅನೇಕ ಕವಿಗಳಿಗೆ ಆಶ್ರಯ ಕೊಟ್ಟಿದ್ದರು. ಗೀತಗೋವಿಂದ ಕೃತಿಯ ಕರ್ತೃವಾದ ಜಯದೇವ ಕವಿಯು ಲಕ್ಷ್ಮಣಸೇನನ ಆಸ್ಥಾನ ಕವಿಯಾಗಿದ್ದನು. ಇದೇ ಕಾಲದಲ್ಲಿ ಸಂಸ್ಕೃತ ಭಾಷೆಯ ಜೊತೆಗೆ ಹಿಂದಿ, ಗುಜರಾತಿ, ಬಂಗಾಳಿ ಮತ್ತಿತರ ಭಾಷೆಗಳಲ್ಲೂ ವಿಪುಲವಾಗಿ ಸಾಹಿತ್ಯವು ಸೃಷ್ಟಿಯಾಯಿತು. ಪೃಥ್ವಿರಾಜನ ಆಸ್ಥಾನ ಕವಿಯಾದ ಚಾಂದ್‌ಬರ್ದಾಯ್ ಎಂಬವನು 'ಪೃಥ್ವಿರಾಜರಾಸೋ' ಎಂಬ ಕೃತಿಯನ್ನು ಹಿಂದಿ ಭಾಷೆಯಲ್ಲಿ ರಚಿಸಿ ಅದರಲ್ಲಿ ಪೃಥ್ವಿರಾಜನ ದಿಗ್ವಿಜಯಗಳನ್ನು ಉಲ್ಲೇಖಿಸಿದ್ದಾನೆ. ಜೈನ ಸಾಹಿತ್ಯಕ್ಕೆ ಹೇಮಚಂದ್ರಸೂರಿ ಎಂಬವನು ವಿಶೇಷ ಸೇವೆ ಸಲ್ಲಿಸಿದ್ದನು. ಈ ಕಾಲದ ವಿದ್ಯಾಕೇಂದ್ರಗಳಲ್ಲಿ ಧಾರ್ಮಿಕ ವಿಷಯಗಳನ್ನೇ ಅಲ್ಲದೆ ಲೌಕಿಕ ವಿಷಯಗಳನ್ನು ಬೋಧಿಸಲಾಗುತಿತ್ತತ್ತು.

ಭಾರತದ ಇತಿಹಾಸದಲ್ಲಿ ಕ್ರಿ.ಶ. ಹತ್ತನೆ ಶತಮಾನವು ಅತ್ಯಂತ ತೃಪ್ತಿಯ ಕಾಲವಾಗಿತ್ತೆಂದು ಪ್ರೊ.ಸಿ.ವಿ. ವೈದ್ಯರು ಅಭಿಪ್ರಾಯಪಟ್ಟಿರುವರು. ಹರ್ಷಚಕ್ರವರ್ತಿಯ ಆಳ್ವಿಕೆಯ ನಂತರ ವಿಚಿದ್ರಗೊಂಡ ಉತ್ತರ ಭಾರತದಲ್ಲಿ ರಜಪೂತರು ಪ್ರಬಲರಾಗಿ ಹಿಂದೂ ಧರ್ಮ, ಸಾಹಿತ್ಯ ಮತ್ತು ಕಲೆಗಳನ್ನು ರಕ್ಷಿಸಿದ್ದಲ್ಲದೆ ಅದರ ಪ್ರಗತಿಗೂ ಹೆಚ್ಚಿನ ಸೇವೆ ಸಲ್ಲಿಸಿದರು. ಹಿಂದೂಗಳಿಗೆ ರಜಪೂತರ ರಾಜರುಗಳಿಂದ ರಕ್ಷಣೆ ದೊರೆಕಿದ್ದಿತು. ಹಿಂದೂಗಳಲ್ಲಿ ದೇಶಾಭಿಮಾನವು ಅಂಕುರಿಸುವಂತೆ ಮಾಡಿದರು. ರಜಪೂತರ ದೊರೆಗಳು ಧಾರ್ಮಿಕ ವಿಷಯಗಳಲ್ಲಿ ವಿಶಾಲ ಮನೋಭಾವನೆ ಹೊಂದಿದ್ದರು. ಅವರ ಕಾಲದಲ್ಲಿ ಶೈವ, ವೈಷ್ಣವ, ಜೈನ ಮತ್ತು ಬೌದ್ಧ ದೇವಾಲಯಗಳು ಹೆಚ್ಚಿನ ಸಂಖ್ಯೆಯಲ್ಲಿ ನಿರ್ಮಿಸಲ್ಪಟ್ಟವು. ಸಾಹಿತ್ಯ ಕ್ಷೇತ್ರದಲ್ಲಿ ವಿಶೇಷ ಪ್ರಗತಿಯುಂಟಾಯಿತು. ಲಲಿತಕಲೆಗಳೂ ಅಭಿವೃದ್ಧಿ ಹೊಂದಿದವು. 'ರಜಪೂತರ ಚಿತ್ರಕಲೆ' ಎಂಬ ಪ್ರತ್ಯೇಕ ಚಿತ್ರಕಲೆಯ ಅಭಿವೃದ್ಧಿ ಹೊಂದಿತು. ಒಟ್ಟಿನಲ್ಲಿ ರಜಪೂತರು ಭಾರತವನ್ನು ಮುಸ್ಲಿಮರ ಆಕ್ರಮಣಗಳಿಂದ ಕೆಲವು ಶತಮಾನಗಳವರೆಗೆ ರಕ್ಷಿಸಿದ್ದಲ್ಲದೆ ಭಾರತದ ಸಂಸ್ಕೃತಿಯನ್ನು ರಕ್ಷಿಸಿ ಪೋಷಿಸಿ ಅದಕ್ಕೆ ತಮ್ಮದೇ ಆದ ಅತ್ಯಮೂಲ್ಯವಾದ ಕೊಡುಗೆಗಳನ್ನು ಸಲ್ಲಿಸಿ ಅಚ್ಚಳಿಯದ ಸ್ಥಾನವನ್ನು ಪಡೆದುಕೊಂಡಿದ್ದಾರೆ.

## ಅಧ್ಯಾಯ- 17

# ಘಸ್ನಿಯ ಟರ್ಕಿ ದೊರೆಗಳು

ಕ್ರಿ.ಶ. ಏಳನೇ ಶತಮಾನದ ಉತ್ತರಾರ್ಧದಲ್ಲಿ ಅರಬ್ಬರ ಪ್ರಥಮ ಧಾಳಿಗಳು ಪ್ರಾರಂಭವಾದರೂ ಇಸ್ಲಾಂ ಧರ್ಮವು ಭಾರತದಲ್ಲಿ ಹರಡಲು ಸಾಧ್ಯವಾಗಲಿಲ್ಲ. ಭಾರತದ ಮೇಲೆ ಅರಬ್ಬರು ಮಾಡಿದ ಧಾಳಿಗಳು ಕೇವಲ ಆಕಸ್ಮಿಕ ಘಟನೆಗಳಾಗಿದ್ದವು. ಆದರೂ ಈ ಧಾಳಿಗಳು ಬಾರತದ ಇತಿಹಾಸದಲ್ಲಿ ಬಹುಮುಖ್ಯ ಪರಿಣಾಮಗಳಿಂದ ಕೂಡಿದ್ದವು. ಭಾರತ ಮತ್ತು ಅರಬ್ ದೇಶಗಳ ನಡುವೆ ವ್ಯಾಪಾರ ಸಂಪರ್ಕಗಳು ಹೆಚ್ಚಿದ್ದವು. ಅರಬ್ ವರ್ತಕರು ಪೌರ್ವಾತ್ಯ ದೇಶಗಳಿಂದ ಸಂಬಾರ ಪದಾರ್ಥಗಳು ಮತ್ತಿತರ ಬೆಲೆಬಾಳುವ ಭೋಗವಸ್ತುಗಳನ್ನು ಕೊಂಡು ಇಟಲಿಯ ವರ್ತಕರಿಗೆ ಮಾರಿ ಅಪಾರ ಹಣವನ್ನುಗಳಿಸಿದರು. ರಾಜಕೀಯ ದೃಷ್ಟಿಯಲ್ಲಿ ಭಾರತದ ಮೇಲೆ ಅರಬ್ಬರ ಆಕ್ರಮಣವು ಅಪಜಯದ ಘಟನೆಯಾಗಿದ್ದು ಭಾರತದಲ್ಲಿ ಮುಸಲ್ಮಾನರ ಅಧಿಕಾರ ಸ್ಥಾಪನೆಯು ಸದ್ಯಕ್ಕೆ ತಡೆಹಿಡಿಯಲ್ಪಟ್ಟಿದ್ದತು. ಆದರೆ ಈ ಕಾರ್ಯವು ಕ್ರಿ.ಶ. ಹತ್ತನೆ ಶತಮಾನದಲ್ಲಿ ಹೆಚ್ಚಿನ ಉತ್ಸಾಹ ಮತ್ತು ಶ್ರದ್ಧೆಯಿಂದ ಪುನಃ ಟರ್ಕರಿಂದ ಮುಂದುವರಿಯಿತು.

ಕ್ರಿ.ಶ. ಹತ್ತನೆ ಶತಮಾನದ ಅಂತ್ಯ ಭಾಗದಲ್ಲಿ ಅಫ್‌ಘಾನಿಸ್ಥಾನದ ಘಸ್ನಿಯ ಟರ್ಕಿ ಮುಸಲ್ಮಾನರು ಭಾರತದ ಮೇಲೆ ತಮ್ಮ ಧಾಳಿಗಳನ್ನಾರಂಭಿಸಿದರು. ಅವರು ಭಾರತದ ಮೇಲೆ ಪದೇ ಪದೇ ಮಾಡಿದ ಆಕ್ರಮಣಗಳಿಂದಾಗಿ ವಾಯವ್ಯ ಭಾರತದ ಮೇಲೆ ಮುಸ್ಲಿಮರ ಅಧಿಕಾರವು ಸ್ಥಾಪಿತವಾಯಿತು. ಈ ಸಮಯದಲ್ಲಿ ಭಾರತದಲ್ಲಿ ರಾಜಕೀಯ ಏಕತೆಯೆಂಬುದಿರಲಿಲ್ಲ. ಉತ್ತರ ಮತ್ತು ದಕ್ಷಿಣ ಭಾರತದ ವಿವಿಧ ಬಾಗಗಳು ಅನೇಕ ಹಿಂದೂ ರಾಜರುಗಳ ಆಳ್ವಿಕೆಗೆ ಒಳಪಟ್ಟಿದ್ದವು. ಈ ಹಿಂದೂ ದೊರೆಗಳು ಒಟ್ಟುಗೂಡಿ ವಿದೇಶೀಯರನ್ನು ಎದುರಿಸುವುದರ ಅವಶ್ಯಕತೆಯ ಪ್ರಯೋಜನವನ್ನು ಮನಗಾಣದೆ ಹೋದರು. ಉತ್ತರ ಭಾರತದ ಹಿಂದೂ ದೊರೆಗಳು ಒಬ್ಬರಾದ ಮೇಲೊಬ್ಬರಂತೆಮುಸ್ಲಿಮರ ಆಕ್ರಮಣಗಳಿಗೆ ತುತ್ತಾಗಿ ರಾಜ್ಯಗಳನ್ನು ಕಳೆದುಕೊಂಡರೆ ದಕ್ಷಿಣ ಭಾರತದ ದೊರೆಗಳು ತಮ್ಮ ತಮ್ಮಲ್ಲಿಯೆ ಒಳಜಗಳಗಳಲ್ಲಿ ನಿರತರಾಗಿದ್ದರು. ಇದರ ಪರಿಣಾಮವಾಗಿ ಉತ್ತರ ಭಾರತದಲ್ಲಿ ಮುಸ್ಲಿಮರ ಆಳ್ವಿಕೆಯು ಸ್ಥಾಪಿತವಾದ ನೂರು ವರ್ಷಗಳಲ್ಲಿಯೇ ದಕ್ಷಿಣ ಭಾರತದ ರಾಜ್ಯಗಳೂ ಕೂಡ ಮುಸ್ಲಿ ಮರ ಆಳ್ವಿಕೆಗೆ ಒಳಪಡುವಂತಾಯಿತು.

ಕ್ರಿ.ಶ. 750ರಲ್ಲಿ ಉಮ್ಮಾಯಿದ್ ಸಂತತಿಯವರ ಅಧಿಕಾರವು ಅವನತಿ ಹೊಂದಲು ಅವರ ಸ್ಥಾನದಲ್ಲಿ ಅಬಾಸಿದ್ ಸಂತತಿಯವರು ಅಧಿಕಾರಕ್ಕೆ ಬಂದರು. ಇವರ ಕಾಲದಲ್ಲಿ ಖಿಲಾಫತ್ತು ಇಸ್ಲಾಂ ಪ್ರಪಂಚದಲ್ಲಿ ಆಧ್ಯಾತ್ಮಿಕ ನಾಯಕತ್ವವನ್ನು ಕಳೆದುಕೊಂಡಿತು ಮತ್ತು ಅದರ ಅಧಿಕಾರವು ಇತ್ತೀಚೆಗೆ ಪ್ರವರ್ಧಮಾನಕ್ಕೆ ಬಂದಿದ್ದ ಸ್ವತಂತ್ರ ಸಂತತಿಗಳಿಂದ ಮಿತಿಗೊಳಿಸಲ್ಪಟ್ಟಿತು. ಅರಬ್ಬರು ಸ್ವಾರ್ಥಪರರಾಗಿ ಭೋಗಲಾಲಸೆಯ ಜೀವನಕ್ಕಿಳಿದು ಇಸ್ಲಾಮಿನ ಹಿತಾಸಕ್ತಿಗಳಿಗಿಂತ ಹೆಚ್ಚಾಗಿ ಐಶ್ವರ್ಯ ಸಂಪಾದನೆಯಲ್ಲಿ ಹೆಚ್ಚಿನ ಆಸಕ್ತಿ ವಹಿಸಿದರು. ಅಬಾಸಿದ್ ಸಂತತಿಯ ಖಲೀಫರು ಅರಬ್ಬರನ್ನು ಸರ್ಕಾರದ ಹುದ್ದೆಗಳಿಂದ ದೂರವಿಟ್ಟು ಅವರ ಅವನತಿಯನ್ನು ತ್ವರಿತಗೊಳಿಸಿದರು. ಆದರೆ ಕಾಲಾನುಕ್ರಮದಲ್ಲಿ ಅಬಾಸಿದ್ ಸಂತತಿಯ ಖಲೀಫರೂ ದುರ್ಬಲರಾಗಿ ಅವರು ನೇಮಿಸಿಕೊಂಡಿದ್ದ ಟರ್ಕರ ಕೈಗೊಂಬೆಗಳಾಗಿ ಮಾರ್ಪಟ್ಟರು. ಟರ್ಕರು ಕೆಲವು ಕಾಲದಲ್ಲಿಯೆ ಪ್ರಬಲರಾಗಿ ತಮ್ಮದೇ ಆದ ರಾಜ್ಯಗಳನ್ನು ಸ್ಥಾಪಿಸಿಕೊಂಡರು. ಇವರಲ್ಲಿ ಮಹತ್ವಾಕಾಂಕ್ಷೆಯುಳ್ಳ ಕೆಲವರು ತಮ್ಮ ಆಸೆ ಆಕಾಂಕ್ಷೆಗಳನ್ನು ಈಡೇರಿಸಿಕೊಳ್ಳಲು ಭಾರತದ ಕಡೆ ತಮ್ಮ ಗಮನವನ್ನು ಹರಿಸಿದರು. ಅವರಲ್ಲಿ ಅಲಪ್ತಗೀನ್ ಎಂಬವನು ಒಬ್ಬನಾಗಿದ್ದನು. ಇವನು ಕ್ರಿ.ಶ. 963ರಲ್ಲಿ ದಕ್ಷಿಣ ಅಫ್ಘಾನಿಸ್ಥಾನದಲ್ಲಿನ ಘಸ್ನಿ ಪಟ್ಟಣವನ್ನು ವಶಪಡಿಸಿಕೊಂಡು ಅದರ ಸುತ್ತಮುತ್ತಲಿನ ಪ್ರದೇಶಗಳನ್ನೊಳಗೊಂಡ ಟರ್ಕರ ಒಂದು ಸಣ್ಣ ರಾಜ್ಯವನ್ನು ಸ್ಥಾಪಿಸಿದನು. ಅವನ ತರುವಾಯ ಅವನ ಗುಲಾಮನೂ ಮತ್ತು ಅಳಿಯನೂ ಆಗಿದ್ದ ಸಬಕ್ತಗೀನ್ ಎಂಬವನು ಕ್ರಿ.ಶ. 977ರಲ್ಲಿ ಘಸ್ನಿಯ ಸಿಂಹಾಸನವನ್ನೇರಿದನು.

**ಜಯಪಾಲ ಮತ್ತು ಸಬಕ್ತಗೀನ್**

ಸಬಕ್ತಗೀನನು ಬಹಳ ಪರಾಕ್ರಮಶಾಲಿಯಾದ ದೊರೆಯಾಗಿದ್ದನು. ಇವನು ತನ್ನ ಮಾವನಿಂದ ಸ್ಥಾಪಿಸಲ್ಪಟ್ಟಿದ್ದ ಸಣ್ಣ ರಾಜ್ಯದಿಂದ ತೃಪ್ತಿಪಟ್ಟುಕೊಳ್ಳದೆ, ಅಫ್‌ಘನ್ನರನ್ನೆಲ್ಲಾ ಒಂದುಗೂಡಿಸಿ ಅವರ ಸಹಾಯದಿಂದ ವಾಯವ್ಯ ಭಾರತದಲ್ಲಿ ಲಾಮ್‌ಗಾನ್‌ನಿಂದ ಚೀನಾಬ್ ನದಿಯವರೆಗಿನ ಪ್ರದೇಶಕ್ಕೆ ಒಡೆಯನಾಗಿದ್ದ ಹಿಂದೂ ಷಾಹಿ ದೊರೆ ಜಯಪಾಲನ ವಿರುದ್ಧ ದಂಡೆತ್ತಿಬಂದನು. ಜಯಪಾಲನೂ ಒಬ್ಬ ಸಮರ್ಥ ರಾಜನಾಗಿದ್ದನು. ಇವರಿಬ್ಬರಿಗೂ ಘರ್ಷಣೆಗಳು ನಡೆದವು. ಜಯಪಾಲನು ಅಪಾರ ಸೈನ್ಯದೊಂದಿಗೆ ಘಸ್ನಿಯ ಮೇಲೆ ದಂಡೆತ್ತಿಹೋದನು. ಆದರೆ ಅವನ ಸೈನ್ಯವು ಬಿರುಗಾಳಿಗೆ ಸಿಕ್ಕಿ ಅಪಾರ ನಷ್ಟಕ್ಕೊಳಗಾಯಿತು. ಜಯಪಾಲನು ಸಬಕ್ತಗೀನನಿಗೆ ಐವತ್ತು ಆನೆಗಳನ್ನೂ ಅಪಾರ ಹಣವನ್ನು ಮತ್ತು ತನ್ನ ರಾಜ್ಯದ ಗಡಿಯಲ್ಲಿನ ಕೆಲವು ಕೋಟೆಗಳನ್ನು ಮತ್ತು ಕೆಲವು ನಗರಗಳನ್ನು ಬಿಟ್ಟುಕೊಡಲೊಪ್ಪಿಕೊಂಡನು. ಆದರೆ ಜಯಪಾಲನು ತನ್ನ ರಾಜ್ಯಕ್ಕೆ ಹಿಂದಿರುಗಿದ ಮೇಲೆ ಈ ಅಪಮಾನಕರವಾದ ಷರತ್ತುಗಳನ್ನು ಮುರಿದುಹಾಕಿ ಮತ್ತೊಮ್ಮೆ ಘಸ್ನಿಯ ಮೇಲೆ ಅಪಾರ ಸೈನ್ಯದೊಂದಿಗೆ ದಂಡೆತ್ತಿಹೋದನು. ಆದರೆ ಈ ಸಲವೂ ಅವನು ಸೋಲನ್ನು ಹೊಂದಿದನು. ಈಗ ಸಬಕ್ತಗೀನನು ಲಾಮ್‌ಗಾನ್‌ನಿಂದ ಪೆಷಾವರ್‌ವರೆಗಿನ ವಿಶಾಲ ಪ್ರದೇಶವನ್ನು ವಶಪಡಿಸಿಕೊಂಡು ತನ್ನ ರಾಜ್ಯಕ್ಕೆ ಸೇರಿಸಿಕೊಂಡನು ಮತ್ತು ಅಲ್ಲಿನ ಜನರನ್ನು ಇಸ್ಲಾಂ ಧರ್ಮಕ್ಕೆ ಮತಾಂತರಗೊಳಿಸಿದನು. ಈ ರೀತಿಯಲ್ಲಿ ಇಸ್ಲಾಂ ಟರ್ಕರ ಆಕ್ರಮಣದ ಮೂಲಕ ಭಾರತವನ್ನು ಪ್ರವೇಶಿಸಿತು, ಸಬಕ್ತಗೀನನು ಸುಮಾರು ಇಪ್ಪತ್ತು

ವರ್ಷಗಳು ರಾಜ್ಯವಾಳಿ ವಿಶಾಲವಾದ ರಾಜ್ಯವನ್ನು ಸ್ಥಾಪಿಸಿ ಕ್ರಿ.ಶ. 997ರಲ್ಲಿ ಕಾಲವಾದನು.

**ಘಸ್ನಿ ಮಹಮದ್**

ಸಬಕ್ತಗೀನನ ಮರಣಾನಂತರ ಅವನ ಹಿರಿಯ ಮಗನಾದ ಸುಲ್ತಾನ್ ಮಹಮದನು ಕ್ರಿ.ಶ. 998ರಲ್ಲಿ ಘಸ್ನಿಯ ಸಿಂಹಾಸನವನ್ನೇರಿದನು. ಇವನು ಘಸ್ನಿ ಮಹಮದ್ ಎಂದು ಇತಿಹಾಸದಲ್ಲಿ ಹೆಸರುವಾಸಿಯಾಗಿದ್ದಾನೆ. ಮಹಮದನು ಸಿಂಹಾಸನಕ್ಕೆ ಬಂದಾಗ ಅವನಿಗಿನ್ನೂ ಇಪ್ಪತ್ತೇಳು ವರ್ಷ ವಯಸ್ಸಾಗಿತ್ತು. ಬಾಗ್ದಾದಿನ ಖಲೀಫನು ಅವನನ್ನು ಒಬ್ಬ ಸ್ವತಂತ್ರ ರಾಜನೆಂದು ಒಪ್ಪಿಕೊಂಡಿದ್ದನು. ಮಹಮದನು ಸುಮಾರು ಮೂವತ್ತೆರಡು ವರ್ಷಗಳ ಕಾಲ ರಾಜ್ಯವಾಳಿ ಕ್ರಿ.ಶ. 1030ರಲ್ಲಿ ಕಾಲವಾದನು. ಮಹಮದನು ಭಾರತದ ಇತಿಹಾಸದಲ್ಲಿ ತನ್ನ ಲೂಟಿಗಳಿಂದ ಪ್ರಸಿದ್ಧಯಾಗಿದ್ದಾನೆ. ಅವನು ಭಾರತದ ಮೇಲೆ ಹದಿನೇಳು ಬಾರಿ ದಂಡೆತ್ತಿ ಬಂದಿದ್ದನೆಂದು ಹೇಳಲಾಗಿದೆ. ಈ ದಂಡಯಾತ್ರೆಗಳಲ್ಲಿ ಉತ್ತರ ಮತ್ತು ಪಶ್ಚಿಮ ಭಾರತದ ಅನೇಕ ಸಂಪದ್ಭರಿತ ಪಟ್ಟಣಗಳನ್ನೂ ಮತ್ತು ದೇವಾಲಯಗಳನ್ನೂ ನಾಶಮಾಡಿ ಅಪಾರ ಐಶ್ವರ್ಯವನ್ನು ದೋಚಿಕೊಂಡು ಹೋದನು. ಮಹಮದನ ದಂಡಯಾತ್ರೆಗಳನ್ನು ತರ್ಕಿಸಿ ನೋಡಿದಾಗ ಮಹಮದನಿಗೆ ಭಾರತದಲ್ಲಿ ಮುಸ್ಲಿಂ ಸಾಮ್ರಾಜ್ಯವನ್ನು ಸ್ಥಾಪಿಸಬೇಕೆಂಬ ಅಪೇಕ್ಷೆಯು ಇದ್ದಂತೆ ಕಂಡು ಬರುವುದಿಲ್ಲ. ಅವನು ಮುಲ್ತಾನ್ ಮತ್ತು ಪಂಜಾಬುಗಳನ್ನು ಮಾತ್ರ ತನ್ನ ಆಳ್ವಿಕೆಗೆ ಒಳಪಡಿಸಿಕೊಂಡಿದ್ದನು. ಭಾರತದಲ್ಲಿ ಅಪಾರ ಐಶ್ವರ್ಯವನ್ನು ಕೊಳ್ಳೆಹೊಡೆಯುವುದು ಅವನ ಮುಖ್ಯ ಉದ್ದೇಶವಾಗಿತ್ತು. ಆ ಸಮಯದಲ್ಲಿ ಉತ್ತರ ಭಾರತವನ್ನಾಳುತ್ತಿದ್ದ ರಜಪೂತ ಸಂತತಿಗಳು ತಮ್ಮ ಶಕ್ತಿ ಸಾಮರ್ಥ್ಯಗಳನ್ನು ಇನ್ನೂ ಕಳೆದುಕೊಂಡಿರಲಿಲ್ಲ ಮತ್ತು ಮಹಮದನಿಗೆ ಇವರನ್ನು ಸೋಲಿಸುವುದು ಅಷ್ಟು ಸುಲಭದ ಕೆಲಸವಾಗಿರಲಿಲ್ಲ. ಆದಾಗ್ಯೂ ಮಹಮದನು ಪದೇ ಪದೇ ಮಾಡಿದ ದಂಡಯಾತ್ರೆಗಳ ಪರಿಣಾಮವಾಗಿ ಉತ್ತರ ಭಾರತದ ದೊರೆಗಳ ಶಕ್ತಿ ಸಾಮರ್ಥ್ಯಗಳು ಕುಗ್ಗಿ ಮುಂದೆ ಸುಮಾರು ನೂರೈವತ್ತು ವರ್ಷಗಳ ನಂತರದಲ್ಲಿ ಮುಸ್ಲಿಮರು ಟರ್ಕರ ಸಾಮ್ರಾಜ್ಯವನ್ನು ಸ್ಥಾಪಿಸಲು ಅನುಕೂಲವಾಯಿತು.

**ಘಸ್ನಿಮಹಮದನ ದಂಡಯಾತ್ರೆಗಳು**

ಘಸ್ನಿಮಹಮದನು ಭಾರತದ ಮೇಲೆ ತನ್ನ ಪ್ರಥಮ ದಂಡಯಾತ್ರೆಯನ್ನು ಕ್ರಿ.ಶ. 1001ರಲ್ಲಿ ಆರಂಭಿಸಿ ವಾಯುವ್ಯ ಭಾರತದಲ್ಲಿದ್ದ ಷಾಹಿ ರಾಜ್ಯದ ಮೇಲೆ ಆಕ್ರಮಣ ಮಾಡಿ ಅಲ್ಲಿನ ಕೆಲವು ಜಿಲ್ಲೆಗಳನ್ನು ಕೊಳ್ಳೆಹೊಡೆದನು. ಷಾಹಿ ದೊರೆ ಜಯಪಾಲನಿಗೂ ಮತ್ತು ಮಹಮದನಿಗೂ ಭೀಕರ ಹೋರಾಟವು ನಡೆದು ಜಯಪಾಲ ಅವನ ಮಕ್ಕಳು ಹಾಗೂ ಮೊಮ್ಮಕ್ಕಳನ್ನೂ ಸೆರೆಹಿಡಿದನು. ಜಯಪಾಲನು ಅಪಾರ ಹಣವನ್ನು ಕೊಟ್ಟು ಬಂಧನದಿಂದ ಮುಕ್ತನಾದನು. ಮಹಮದನು ಜಯಪಾಲನ ರಾಜಧಾನಿಯಾದ ವೈಹಾಂಡ್ ಮೇಲೂ ಆಕ್ರಮಣಮಾಡಿ ಅದನ್ನೂ ಲೂಟಿಹೊಡೆದನು. ಜಯಪಾಲನು ಈ ಅಪಮಾನವನ್ನು ಸಹಿಸಲಾರದೆ ಬೆಂಕಿಯಲ್ಲಿ ಬಿದ್ದು ಪ್ರಾಣತ್ಯಾಗ ಮಾಡಿದನು. ಜಯಪಾಲನ ಮರಣಾ ನಂತರ ಮಗನಾದ ಆನಂದಪಾಲನು

ಸಿಂಹಾಸನವನ್ನೇರಿದನು. ಕ್ರಿ.ಶ. 1006ರಲ್ಲಿ ಮಹಮದನು ಅವನ ಮೇಲೆ ದಂಡೆತ್ತಿ ಬಂದು ಅವನನ್ನು ಸೋಲಿಸಿದ್ದಲ್ಲದೆ ಅವನು ಕಾಶ್ಮೀರದ ಗುಡ್ಡಗಳ ಕಣಿವೆಯಲ್ಲಿ ರಕ್ಷಣೆ ಪಡೆಯುವಂತೆ ಮಾಡಿದನು. ಆನಂದಪಾಲನು ಕೆಲವು ದಿವಸಗಳಲ್ಲಿಯೆ ಚೇತರಿಸಿಕೊಂಡು ಉಜ್ಜೈನಿ, ಗ್ವಾಲಿಯರ್, ಕಾಲಿಂಜರ್, ಕನೂಜ್, ದೆಹಲಿ ಮತ್ತು ಅಜ್ಮೀರದ ರಾಜರುಗಳ ಸಹಯವನ್ನು ಪಡೆದು ಮಹಮದನನ್ನು ಎದುರಿಸಲು ಪೆಷಾವರ್ ಕಡೆ ಬಂದನು. ಕ್ರಿ.ಶ. 1009ರಲ್ಲಿ ಪುನಃ ಇಬ್ಬರಿಗೂ ವೈಹಾಂಡ್ ಬಳಿ ಯುದ್ಧವು ನಡೆಯಿತು. ಈ ಯುದ್ಧದಲ್ಲೂ ಆನಂದಪಾಲನು ಸೋತನು ಮತ್ತು ಅವನು ರಕ್ಷಣೆಗಾಗಿ ಕಾಂಗ್ರ ಕಣಿವೆಯಲ್ಲಿನ ನಗರಕೋಟೆಗೆ ಓಡಿಹೋದನು. ಮಹಮದನು ಅವನನ್ನು ಬೆನ್ನಟ್ಟಿ ಹೋದನು. ಅಲ್ಲಿ ಅವನು ಹಿಂದುಗಳಿಂದ ತೀವ್ರ ಪ್ರತಿಭಟನೆಯನ್ನು ಎದುರಿಸಬೇಕಾಯಿತು. ಆದರೆ ಕೊನೆಯಲ್ಲಿ ವಿಜಯವು ಅವನದಾಗಿ ನಗರ ಕೋಟೆಯೂ ಸಹ ಅವನ ಕೈವಶವಾಯಿತು. ಇದರಿಂದ ಅಪಾರವಾದ ಬೆಳ್ಳಿ ಬಂಗಾರ ಮತ್ತಿತರ ಬೆಲೆಬಾಳುವ ವಸ್ತುಗಳು ಅವನ ಕೈವಶವಾದುದಲ್ಲದೆ ಸಿಂಧೂ ನದಿಯಿಂದ ನಗರ ಕೋಟೆಯವರೆಗಿನ ಪ್ರದೇಶವೂ ಅವನ ಅಧೀನಕ್ಕೊಳಪಟ್ಟಿತು. ಆನಂದಪಾಲನು ಒಂದಾದ ಮೇಲೊಂದರಂತೆ ಅಪಜಯಗಳನ್ನು ಅನುಭವಿಸಿದರೂ ಅವನು ಧೃತಿಗೆಡಲಿಲ್ಲ. ಅವನು ಉಪ್ಪಿನ ಶ್ರೇಣಿ ಪ್ರದೇಶದಲ್ಲಿ ತನ್ನ ಅಧಿಕಾರವನ್ನು ಸ್ಥಾಪಿಸಿಕೊಂಡು ಮಹಮದನ ವಿರುದ್ಧ ಹೋರಾಡಲು ಹೊಸ ಸಿದ್ಧತೆಗಳನ್ನು ಮಾಡಿಕೊಂಡನು. ಆದರೆ ಈ ಕಾರ್ಯವನ್ನು ಆರಂಭಿಸುವ ಮೊದಲೇ ತೀರಿಕೊಂಡನು.

ಆನಂದಪಾಲನ ಮರಣಾನಂತರ ಅವನ ಮಗನಾದ ತ್ರಿಲೋಚನಪಾಲನು ಕ್ರಿ.ಶ. 1014ರಲ್ಲಿ ಪಟ್ಟಕ್ಕೆ ಬಂದನು. ತ್ರಿಲೋಚನಪಾಲನು ಕಾಶ್ಮೀರದ ರಾಜನಾದ ಸಂಗ್ರಾಮ ರಾಜನ ಸಹಾಯವನ್ನು ಪಡೆದು ಮಹಮದನ ವಿರುದ್ಧ ಕೆಲವು ಕಾಲ ಹೋರಾಡಿ ಸೋತನು. ಮಹಮದನು ತ್ರಿಲೋಚನಪಾಲನನ್ನು ಕಾಶ್ಮೀರದಲ್ಲಿ ಸೋಲಿಸಿದರೂ ಅಲ್ಲಿನ ಪ್ರಾಕೃತಿಕ ಸನ್ನಿವೇಶಗಳಿಂದಾಗಿ ಕಾಶ್ಮೀರದಲ್ಲಿ ತನ್ನ ಅಧಿಕಾರವನ್ನು ಸ್ಥಾಪಿಸಲು ಇಷ್ಟಪಡಲಿಲ್ಲ. ತ್ರಿಲೋಚನಪಾಲನು ಕಾಶ್ಮೀರದಲ್ಲೂ ಸೋಲನ್ನು ಹೊಂದಿದ ಮೇಲೆ ಪಂಜಾಬಿನ ಪೂರ್ವಭಾಗಕ್ಕೆ ಹಿಂದಿರುಗಿ ಬಂದು ಸಿವಾಲಿಕ್ ಗುಡ್ಡಗಳಲ್ಲಿ ಅಧಿಕಾರವನ್ನು ಸ್ಥಾಪಿಸಿಕೊಂಡನು. ಅವನು ಚಂದೇಲರ ಪ್ರಬಲ ದೊರೆಯಾದ ವಿಧ್ಯಾದರನೊಂದಿಗೆ ಸ್ನೇಹ ಮಾಡಿಕೊಂಡು ಮಹಮದನ ವಿರುದ್ಧ ಹೋರಾಡಲು ಸಿದ್ಧನಾದನು. ಆದರೆ ಈ ಸಲವೂ ಅವನು ಮಹಮದನಿಂದ ಸೋಲನ್ನು ಹೊಂದಬೇಕಾಯಿತು. ಮಹಮದನು ಅವನ ವಿರುದ್ಧ ದಂಡೆತ್ತಿ ಬಂದು ಅವನನ್ನು ಸಂಪೂರ್ಣವಾಗಿ ಸೋಲಿಸಿದನು. ಇದಾದ ಸ್ವಲ್ಪ ದಿವಸಗಳಲ್ಲಿಯೆ ತ್ರಿಲೋಚನಪಾಲನು ಕಾಲವಾದನು.

ತ್ರಿಲೋಚನಪಾಲನ ಮರಣಾ ನಂತರ ಕ್ರಿ.ಶ. 1022ರಲ್ಲಿ ಸಿಂಹಾಸನವನ್ನೇರಿದ ಅವನ ಮಗ ಭೀಮಪಾಲನು ಮಹಮದನ ವಿರುದ್ಧ ತನ್ನ ಹೋರಾಟವನ್ನು ಮುಂದುವರಸಿದನು. ಆದರೆ ಅವನ ಪ್ರಯತ್ನವೂ ವಿಫಲವಾಯಿತು. ಅವನು ಕ್ರಿ.ಶ. 1026ರಲ್ಲಿ ಕಾಲವಾದನು. ಅವನ ಮರಣದೊಂದಿಗೆ ಹಿಂದೂಷಾಹಿ ಸಂತತಿಯ ಆಳ್ವಿಕೆಯ ಕೊನೆ ಗೊಂಡಿತು. ಅವರ ರಾಜ್ಯವು ಆಗಲೇ ಮಹಮದನ ಕೈವಶವಾಗಿತ್ತು. ಆದಾಗ್ಯೂ ಜಯಪಾಲ ಮತ್ತು ಅವನ ಉತ್ತರಾಧಿಕಾರಿಗಳು ದೇಶದ ಸ್ವಾತಂತ್ರ್ಯದ

ರಕ್ಷಣೆಗಾಗಿ ದೀರ್ಘಕಾಲ ಮುಸ್ಲಿಮರ ವಿರುದ್ಧ ಹೋರಡಿ, ಬಾರತೀಯರ ಶಕ್ತಿ ಸಾಮರ್ಥ್ಯಗಳನ್ನು ಮುಸ್ಲಿಮರಿಗೆ ಅರಿವು ಮಾಡಿಕೊಟ್ಟಿದ್ದರು.

**ಮುಲ್ತಾನಿನ ಮೇಲೆ ದಂಡಯಾತ್ರೆ:** ಕ್ರಿ.ಶ. 1009ರಲ್ಲಿ ಮಹಮದನು ಪ್ರಸಿದ್ಧವಾದ ಭಟಿಂಡ ಕೋಟೆಯನ್ನು ವಶಪಡಿಸಿಕೊಂಡನು. ಅದು ವಾಯುವ್ಯ ಭಾರತದ ಮೂಲಕ ಸಂಪದ್ಭರಿತವಾದ ಗಂಗಾಕಣಿವೆ ಪ್ರದೇಶದ ಪ್ರವೇಶಕ್ಕೆ ದೊಡ್ಡ ಕಾವಲುಗಾರನಂತಿತ್ತು. ಆದರೆ ಮಹಮದನು ಭಟಿಂಡ ಕೋಟೆಯನ್ನು ವಶಪಡಿಸಿಕೊಳ್ಳುವ ಮೊದಲು ಸಿಂಧ್‌ಗೆ ಉತ್ತರದಲ್ಲಿದ್ದ ಮುಲ್ತಾನ್ ಪ್ರಾಂತ್ಯವನ್ನು ವಶಪಡಿಸಿಕೊಳ್ಳಬೇಕಿತ್ತು. ಮುಲ್ತಾನ್ ಪ್ರಾಂತ್ಯವು ಕಾರಮಾಥಿಯನ್ನುರ ಆಡಳಿತಕ್ಕೊಳಪಟ್ಟಿದ್ದಿತು. ಮುಲ್ತಾನಿನ ಮುಸ್ಲಿಂ ರಾಜನಾದ ದಾವುದನು ಭಟಿಂಡಾಕ್ಕೆ ತನ್ನ ರಾಜ್ಯದ ಮೂಲಕ ಮಹಮದನ ಸೈನ್ಯವು ಹೋಗಲು ಅನುಮತಿ ಕೊಡಲಿಲ್ಲ. ಕ್ರಿ.ಶ. 1009ರಲ್ಲಿ ಮಹಮದನು ಮುಲ್ತಾನಿನ ಮೇಲೆ ದಂಡೆತ್ತಿ ಹೋಗಿ ಅದನ್ನು ವಶಪಡಿಸಿಕೊಂಡನು. ಮುಲ್ತಾನಿನ ಸೈನ್ಯವು ತೀವ್ರ ಪ್ರತಿಭಟನೆಯ ನಂತರ ಶರಣಾಗತವಾಯಿತು. ದಾವುದನು ತಲೆತಪ್ಪಿಸಿಕೊಂಡು ಓಡಿಹೋದನು. ಆದರೆ ಮಹಮದನು ಅವನನ್ನು ಅಷ್ಟಕ್ಕೆ ಬಿಡದೆ ಅವನನ್ನು ಸೇರೆಹಿಡಿದು ಕಾರಾಗೃಹದಲ್ಲಿರಿಸಿದನು. ಮುಲ್ತಾನಿನ ಪ್ರಜೆಗಳು ಮಹಮದನಿಗೆ ಅಪಾರ ಹಣವನ್ನು ಕೊಟ್ಟು ತಮ್ಮ ಪ್ರಾಣವನ್ನು ಉಳಿಸಿಕೊಂಡರು. ಕ್ರಿ.ಶ. 1009ರಲ್ಲಿ ಮಹಮದನು ರಾಜಾಸ್ಥಾನದಲ್ಲಿನ ಪ್ರಸಿದ್ಧ ವ್ಯಾಪಾರ ಕೇಂದ್ರವಾಗಿದ್ದ ನಾರಾಯಣಪುರವನ್ನು ವಶಪಡಿಸಿಕೊಂಡನು. ಅಲ್ಲಿನ ಹಿಂದೂ ರಾಜನು ಅವನ ಅಧೀನನಾದನು.

**ಸ್ಥಾಣೇಶ್ವರದ ಮೇಲೆ ದಂಡಯಾತ್ರೆ**

ಮಹಮದನ ಈ ಎಲ್ಲ ದಂಡಯಾತ್ರೆಗಳಿಗಿಂತ ಕ್ರಿ.ಶ. 1014ರಲ್ಲಿ ಸ್ಥಾಣೇಶ್ಧರದ ಮೇಲೆ ಕೈಗೊಂಡ ದಂಡಯಾತ್ರೆಯು ಬಹುಮುಖ್ಯವಾಗಿತ್ತು. ಸ್ಥಾಣೇಶ್ವರದಲ್ಲಿ ಪ್ರಸಿದ್ಧವಾದ ಚಕ್ರೇಶ್ವರಸ್ವಾಮಿ ದೇವಾಲಯವಿದ್ದಿತು. ಮಹಮದನು ಅದನ್ನು ನಾಶ ಮಾಡುವ ಸಲುವಾಗಿ ಕ್ರಿ.ಶ. 1014ರಲ್ಲಿ ಅದರ ಮೇಲೆ ದಂಡೆತ್ತಿ ಹೋದನು. ಮಹಮದನ ಸೈನ್ಯವನ್ನು ನೋಡಿದ ಅಲ್ಲಿನ ಮುಖಂಡನು ತಪ್ಪಿಸಿಕೊಂಡು ಓಡಿಹೋದನು. ಮಹಮದನು ಅಲ್ಲಿನ ದೇವಾಲಯಗಳನ್ನೆಲ್ಲಾ ನಾಶಮಾಡಿದ್ದಲ್ಲದೆ ಪಟ್ಟಣವನ್ನೆಲ್ಲಾ ಲೂಟಿಮಾಡಿ ಅಪಾರ ಐಶ್ವರ್ಯವನ್ನು ಪಶಪಡಿಸಿಕೊಂಡು ಘಸ್ನಿಗೆ ಹಿಂದಿರುಗಿದನು.

**ಮಥುರ ಮತ್ತು ಕನೂಜಿನ ಮೇಲೆ ದಂಡಯಾತ್ರೆ**

ಮಹಮದನು ಸ್ಥಾಣೇಶ್ವರವನ್ನು ವಶಪಡಿಸಿಕೊಂಡ ಮೇಲೆ ದೋಬ್ ಪ್ರಾಂತ್ಯಕ್ಕೆ ಅವನಿಗೆ ಮಾರ್ಗವು ತೆರವಾಯಿತು. ಅವನು ಕ್ರಿ.ಶ. 1018ರಲ್ಲಿ ಘಸ್ನಿಯಿಂದ ಹೊರಟು ಮಾರ್ಗದಲ್ಲಿ ಅಡ್ಡಲಾಗಿದ್ದ ಮಹಬಾನ್ ಮತ್ತಿತರ ಕೋಟೆಗಳನ್ನು ವಶಪಡಿಸಿಕೊಂಡನು. ಬರಾನ್ ಅಥವ ಬುಲಂದ್‌ಶಹರ್‌ನ ರಾಜನಾದ ಹರದತ್ತನು ತನ್ನ ಹತ್ತು ಸಾವಿರ ಪ್ರಜೆಗಳೊಂದಿಗೆ ಇಸ್ಲಾಂ ಅನ್ನು ಸ್ವೀಕರಿಸಿ ಶರಣಾಗತನಾದನು. ಅನಂತರ ಸುಲ್ತಾನನು ಯಮುನಾ ನದಿಯ ದಡದ ಮೇಲಿದ್ದ ಮಹೋದನ್ ರಾಜ್ಯದ

ಮುಖಂಡನ ಮೇಲೆ ದಂಡೆತ್ತಿಹೋದನು. ಅಲ್ಲಿನ ಹಿಂದುಗಳು ವೀರಾವೇಶದಿಂದ ಹೋರಾಡಿ ಕೊನೆಗೆ ಸೋಲನ್ನು ಹೊಂದಿದರು. ಅವರ ರಾಜನು ಅವಮಾನವನ್ನು ಸಹಿಸಲಾರದೆ ತನ್ನ ಕೈಯಿಂದಲೇ ಪ್ರಾಣವನ್ನು ಕಳೆದುಕೊಂಡನು. ಅಪಾರ ಐಶ್ವರ್ಯವು ಸುಲ್ತಾನನ ಕೈವಶವಾಯಿತು. ಇದಾದನಂತರ ಮಹಮದನು ಹಿಂದುಗಳ ಪ್ರಸಿದ್ಧ ಮತ್ತು ಪವಿತ್ರಯಾತ್ರಾ ಸ್ಥಳವಾದ ಮಥುರ ಪಟ್ಟಣದ ಮೇಲೆ ಆಕ್ರಮಣ ಮಾಡಿದನು. ಮಥುರಾ ಪಟ್ಟಣವು ಅಪಾರ ಜನಸಂದಣಿಯಿಂದಲೂ, ಗುಡಿ ಗೋಪುರಗಳಿಂದಲೂ ಮತ್ತು ಮನ ಮೊಹಕವಾದ ಕಲಾಕೃತಿಗಳಿಂದಲೂ ತುಂಬಿತುಳುಕುತ್ತಿತ್ತು. ವಿಗ್ರಹ ಭಂಜಕರಾದ ಮುಸ್ಲಿಮರ ವಿರುದ್ಧ ದೇವಾಲಯದ ರಕ್ಷಕರ ಪ್ರತಿಭಟನೆಯೇನೂ ಸಾಗದೆ ಸುಲ್ತಾನನ ಆಜ್ಞೆಯ ಮೇರೆಗೆ ಮುಸ್ಲಿಂ ಸೈನಿಕರು ಅಲ್ಲಿನ ದೇವಾಲಯಗಳನ್ನೂ ಮತ್ತು ನಗರವನ್ನೂ ಲೂಟಿ ಹೊಡೆದರು. ಇದಲ್ಲದ ಅಲ್ಲಿನ ಕೆಲವು ಕುಶಲಕಲಾಕಾರರನ್ನು ಬಂಧಿಸಿ ತನ್ನ ರಾಜಧಾನಿಯಾದ ಘಸ್ನಿಯನ್ನು ಕಲಾಕೃತಿಗಳಿಂದ ಸುಂದರಗೊಳಿಸಲು ಅಲ್ಲಿಗೆ ಕಳುಹಿಸಿದನು. ಮಥುರಾಪಟ್ಟಣವನ್ನು ಕೊಳ್ಳೆ ಹೊಡೆದ ನಂತರ ಮಹಮದನು ಕನೂಜಿನ (1019) ಮೇಲೆ ದಂಡೆತ್ತಿಹೋದನು. ಕನೂಜಿನ ಪ್ರತೀಹಾರರ ರಾಜನಾದ ರಾಜ್ಯಪಾಲನು ಮಹಮದನನ್ನು ಎದುರಿಸಲಾರದೆ ತಪ್ಪಿಸಿಕೊಂಡು ಓಡಿಹೋದನು. ಸುಲ್ತಾನನು ಪಟ್ಟಣವನ್ನೆಲ್ಲಾ ಲೂಟಿಮಾಡಿದ್ದಲ್ಲದೆ ದೇವಾಲಯಗಳನ್ನೆಲ್ಲಾ ನೆಲಸಮಮಾಡಿ ಅಪಾರ ಐಶ್ವರ್ಯವನ್ನು ಮತ್ತು ಆನೆಗಳನ್ನೂ ವಶಪಡಿಸಿಕೊಂಡು ಘಸ್ನಿಗೆ ಹಿಂದಿರುಗಿದನು.

ಮಹಮದನು ಕ್ರಿ.ಶ. 1015 ಮತ್ತು 1021ರಲ್ಲಿ ಎರಡು ಸಾರಿ ಕಾಶ್ಮೀರದ ಮೇಲೆ ದಂಡೆತ್ತಿ ಹೋದನು. ಆದರೆ ಅಲ್ಲಿನ ಪರ್ವತಗಳ ಅಡೆತಡೆಗಳಿಂದಾಗಿ ಅವನು ಅಲ್ಲಿ ಯಾವ ಯಶಸ್ಸನ್ನೂ ಗಳಿಸಲಾಗಲಿಲ್ಲ. ಮಹಮದನು ಚಂದೇಲರ ದೊರೆ ವಿದ್ಯಾಧರನೊಂದಿಗೂ ಎರಡು ಸಲ (1019-1022) ಹೋರಾಟ ಮಾಡಬೇಕಾಯಿತು. ವಿದ್ಯಾಧರನು ರಜಪೂತರ ಒಕ್ಕೂಟವನ್ನುನ ನಿರ್ಮಿಸಿ ಮಹಮದನ ವಿರುದ್ಧ ಹೋರಾಡಲು ಸಿದ್ಧತೆ ಮಾಡಿಕೊಂಡನು. ಆದರೆ ಮಹಮದನು ಕ್ರಿ.ಶ. 1019ರಲ್ಲಿ ಅವನ ವಿರುದ್ಧ ದಂಡೆತ್ತಿ ಹೋದಾಗ ಅವನು ಭಯಭ್ರಾಂತನಾಗಿ ಯುದ್ಧಭೂಮಿಯಿಂದ ಓಡಿ ಹೋದನು. ಮಹಮದನ ಸೈನಿಕರು ರಜಪೂತರ ಶಿಬಿರವನ್ನು ಲೂಟಿ ಮಾಡಿ ಅಪಾರ ಐಶ್ವರ್ಯವನ್ನು ವಶಪಡಿಸಿಕೊಂಡು ಘಸ್ನಿಗೆ ಹಿಂದಿರುಗಿದರು. ಮಹಮದನು ಹಿಂದಿರುಗಿ ಹೋದ ಮೇಲೆ ವಿದ್ಯಾಧರನು ಮತ್ತೊಮ್ಮೆ ತನ್ನ ರಾಜ್ಯಕ್ಕೆ ಒಡೆಯನಾದನು. ಮಹಮದನು ಅವನನ್ನು ಶಿಕ್ಷಿಸಲು ಕ್ರಿ.ಶ. 1022ರಲ್ಲಿ ಪುನಃ ದಂಡೆತ್ತಿ ಬಂದನು. ವಿದ್ಯಾಧರನು ಈ ಸಲವೂ ಅವನನ್ನು ಎದುರಿಸುವ ಧೈರ್ಯಮಾಡದೆ ಸುಲ್ತಾನನಿಗೆ ಮುನ್ನೂರು ಆನೆಗಳನ್ನು ಮತ್ತಿತರ ಬೇಲೆಬಾಳುವ ವಸ್ತುಗಳನ್ನೂ ಕೊಟ್ಟು ಶಾಂತಿ ಒಪ್ಪಂದ ಮಾಡಿಕೊಂಡನು. ರುವಾಯ ಮಹಮದನು ಘಸ್ನಿಗೆ ಹಿಂದಿರುಗಿದನು.

**ಸೋಮನಾಥಪುರದ ಮೇಲೆ ದಂಡಯಾತ್ರೆ**

ಮಹಮದನು ತನ್ನ ದಂಡಯಾತ್ರೆಗಳಲ್ಲೆಲ್ಲಾ ಅತ್ಯಂತ ಹೆಸರುವಾಸಿಯಾದ ದಂಡಯಾತ್ರೆಯನ್ನು ಕ್ರಿ.ಶ. 1026ರಲ್ಲಿ ಗುಜರಾತಿನ ಸೋಮನಾಥಪುರದ

ದೇವಾಲಯದ ಮೇಲೆ ಕೈಗೊಂಡನು. ಅಲ್ಲಿನ ಶೈವ ದೇವಾಲಯವು ಅಪಾರ ಐಶ್ವರ್ಯವನ್ನು ಮತ್ತು ವಜ್ರವೈಢೂರ್ಯಗಳನ್ನು ಹೊಂದಿದೆ ಎಂದು ತಿಳಿದಿದ್ದ ಮಹಮದನು ಅದನ್ನು ಲೂಟಿಮಾಡಲು ಅಪಾರ ಸೈನ್ಯದೊಂದಿಗೆ ಮುಲ್ತಾನ್ ಮತ್ತು ಸಿಂಧ್ ಹಾಗೂ ರಜಪುಟಾಣದ ಮರುಭೂಮಿಯ ಮೂಲಕ ಪ್ರಯಾಸಕರವಾದ ಪ್ರಯಾಣ ಮಾಡಿ ಸೋಮನಾಥಪುರವನ್ನು ತನಲುಪಿದನು. ತಮ್ಮನ್ನು ಕಾಪಾಡಿದ ವಿಗ್ರಹವನ್ನು ಕಾಪಾಡಲು ಗುಜರಾತಿನ ಚಾಲುಕ್ಯರ ದೊರೆ ಒಂದೆನ ಭೀಮನು ಸಾಹನ ಪ್ರಯತ್ನ ಮಾಡಿದನು. ಆದರೆ ಮಹ ಮದನ ಸೈನಿಕರ ಸಂಖ್ಯೆಯು ಮುಂದೆ ಅವನ ಸಾಹಸ ಪ್ರಯತ್ನವು ವಿಫಲವಾಯಿತು. ಸುಮಾರು ಸಹಸ್ರಾರು ಹಿಂದುಗಳು ದೇವಾಲಯದ ರಕ್ಷಣೆಯ ಹೋರಾಟದಲ್ಲಿ ಹತರಾದರು. ದೇವಾಯಲದ ಅರ್ಚಕರು ವಿಗ್ರಹನ್ನು ಬಿಟ್ಟುಬಿಡುವಂತೆ ಮಹಮದನನ್ನು ದೈನ್ಯದಿಂದ ಪ್ರಾರ್ಥಿಸಿಕೊಂಡಾಗ್ಯೂ ಮತಭ್ರಾಂತನೂ ಮತ್ತು ನಿರ್ದಯಿಯೂ ಆಗಿದ್ದಸುಲ್ತಾನನ ಮನಸ್ಸಿನ ಮೇಲೆ ಅದು ಯಾವ ಪರಿಣಾಮವನೂ ಉಂಟುಮಾಡಲಿಲ್ಲ, ಮಹಮದನ ಸೈನಿಕರು ಪವಿತ್ರ ಲಿಂಗವನ್ನು ಚೂರು ಚೂರು ಮಾಡಿದರು, ಮಹಮದನು ಬೆಲೆ ಕಟ್ಟಲಾರದಷ್ಟು ವಜ್ರ, ಬೆಳ್ಳಿ, ಬಂಗಾರ ಮುತ್ತು ಮಾಣಿಕ್ಯಗಳನ್ನು ವಶಪಡಿಸಿಕೊಂಡು ಘಸ್ನಿಗೆ ಹಿಂದಿರುಗಿದನು. ಮಹಮದನು ಸೋಮನಾಥಪುರದ ದಂಡಯಾತ್ರೆಯಿಂದ ಹಿಂದಿರುಗಿ ಹೋಗುತ್ತಿದ್ದಾಗ ಅವನ ಸೈನಿಕರು ಉಪ್ಪಿನ ಶ್ರೇಣಿಯ ಜಾತರಿಂದ ಹಿಂಸೆಯನ್ನು ಅನುಭವಿಸಬೇಕಾಯಿತು. ಮಹಮದನು ಅವರನ್ನು ಶಿಕ್ಷಿಸಲು ಕ್ರಿ.ಶ. 1027ರಲ್ಲಿ ದಂಡೆತ್ತಿ ಬಂದನು. ಇದು ಅವನ ಕಟ್ಟಕಡೆಯ ದಂಡಯಾತ್ರೆಯಾಗಿತ್ತು. ಅವನು ಜಾತರಹಳ್ಳಿಗಳಿಗೆ ನುಗ್ಗಿ ಅವರ ಗುಡಿಸಲುಗಳಿಗೆ ಬೆಂಕಿ ಇಡಿಸಿದನು. ಜಾತರ ಗಂಡಸರನ್ನೆಲ್ಲಾ ಕೊಂದು ಅವರ ಹೆಂಡಿರು ಮಕ್ಕಳನ್ನು ಗುಲಾಮರನ್ನಾಗಿ ಮಾಡಿಕೊಂಡನು.

### ಮಹಮದನ ವಿಜಯಕ್ಕೆ ಕಾರಣಗಳು

ಮಹಮದನ ವಿಜಯಕ್ಕೆ ಹಲವಾರು ಕಾರಣಗಳಿದ್ದವು. ಮಹಮದನು ತನ್ನ ಪ್ರತಿಯೊಂದು ದಂಡಯಾತ್ರೆಯಲ್ಲೂ ಅಪಾರ ಐಶ್ವರ್ಯವನ್ನು ಪಡೆಯುತ್ತಿದ್ದುದರಿಂದ ಅವನನ್ನೇ ನಂಬಿ ಬಂದಿದ್ದ ಅವನ ಸೈನಿಕರಲ್ಲೂ ದುರಾಸೆಯು ಹೆಚ್ಚಿ ಅವರು ಅವನ ದಂಡಯಾತ್ರೆಗಳಲ್ಲಿ ಹೆಚ್ಚು ಹೆಚ್ಚು ಉತ್ಸಾಹದಿಂದ ಭಾಗವಹಿಸಿ ಅವನ ಯಶಸ್ಸಿಗೆ ಕಾರಣರಾದರು. ಎರಡನೆಯದಾಗಿ, ಹಿಂದುಗಳಲ್ಲಿದ್ದ ಅನೈಕ್ಯತೆಯು ಅವನ ವಿಜಯಕ್ಕೆ ಮತ್ತೊಂದು ಕಾರಣವಾಗಿತ್ತು. ಹಿಂದುಗಳು ಆಕ್ರಮಣಕಾರರಿಗಿಂತಲೂ ಅಧಿಕ ಸಂಖ್ಯೆಯಲ್ಲಿದ್ದರೂ ಅವರುಗಳಲ್ಲಿದ್ದ ಒಡಕು ಆಕ್ರಮಣಕಾರನ ಕೆಲಸವನ್ನು ಸುಲಭಗೊಳಿಸಿತು. ಮೂರನೆಯದಾಗಿ, ಹಿಂದುಗಳು ರಾಜಕೀಯದಲ್ಲಿ ಆಗುತ್ತಿದ್ದ ಬದಲಾವಣೆಗಳ ಬಗ್ಗೆ ಉದಾಸೀನತೆ ತೋರಿಸಿದುದು ಮತ್ತೊಂದು ಕಾರಣವಾಗಿತ್ತು. ಪ್ರಕ್ಷುಬ್ಧ ಪರಿಸ್ಥಿತಿಯಲ್ಲಿ ಯಾರಾದರೂ ಒಕ್ಕೂಟವನ್ನು ಸ್ಥಾಪಿಸಿ ಹೋರಾಡಲು ಪ್ರಯತ್ನಿಸಿದರೆ, ಕುಲ ಅಥವ ಬಣಗಳ ಗೌರವದ ಸ್ಥಾನಮಾನಗಳ ಯೋಗ್ಯತೆಯ ಪ್ರಶ್ನೆಯು ಉದ್ಭವಿಸಿ ಒಕ್ಕೂಟದ ಸದಸ್ಯರು ತಮ್ಮ ತಮ್ಮಲ್ಲೇ ಕಚ್ಚಾಟವಾಡಿ ಒಕ್ಕೂಟದ ಧ್ಯೇಯೋದ್ದೇಶಗಳನ್ನು ನಿರರ್ಥಕಗೊಳಿಸುತ್ತಿದ್ದರು. ಮೇಲಾಗಿ ದೇಶದ

ಹಿತಾಸಕ್ತಿಗಳಿಗಿಂತಲೂ ಸ್ವಹಿತಾಸಕ್ತಿಗಳು ಅವರಲ್ಲಿ ಪ್ರಧಾನವಾಗಿದ್ದು ಭಾರತದಲ್ಲಿ ಮಹಮದನ ವಿಜಯಕ್ಕೆ ಕಾರಣವಾದವು.

**ಮಹಮದನ ಸಾಮ್ರಾಜ್ಯ**

ಮಹಮದನ ಸಾಮ್ರಾಜ್ಯವು ಪಶ್ಚಿಮದಲ್ಲಿ ಇರಾಕ್ ಮತ್ತು ಕ್ಯಾಸ್ಪಿಯನ್ ಸಮುದ್ರದಿಂದ ಹಿಡಿದು ಪೂರ್ವದಲ್ಲಿ ಸಾಮರ್‌ಖಂಡ್ ಮತ್ತು ಪಂಜಾಬಿನವರೆಗೂ ವಿಸ್ತರಿಸಿದ್ದಿತು. ಇದು ಸುಮಾರು ಪೂರ್ವ ಪಶ್ಚಿಮವಾಗಿ ಎರಡು ಸಾವಿರ ಮೈಲಿ ಉತ್ತರ ದಕ್ಷಿಣವಾಗಿ ಒಂದು ಸಾವಿರದ ನಾನೂರು ಮೈಲಿಗಳ ವಿಸ್ತೀರ್ಣದಿಂದ ಕೂಡಿತ್ತು. ಇಷ್ಟು ವಿಶಾಲವಾದ ಸಾಮ್ರಾಜ್ಯವನ್ನು ಸ್ಥಾಪಿಸಿ ಅದನ್ನು ಕಾಪಾಡಲು ಮಹಮದನು ಪದೇ ಪದೇ ಇರಾಕ್ ಮತ್ತು ಮಧ್ಯ ಏಷ್ಯಾದಲ್ಲಿ ದಂಡಯಾತ್ರೆಗಳನ್ನು ಮಾಡಬೇಕಾಗಿತ್ತು. ಆದ್ದರಿಂದ ಅವನ ಧಾಳಿಗಳ ಪ್ರಭಾವವು ಭಾರತದಲ್ಲೇ ಅಲ್ಲದೆ ಏಷ್ಯಾದ ಇತರ ಭಾಗಗಳಲ್ಲೂ ಉಂಟಾಗಿದ್ದಿತು.

**ಮಹಮದನ ಸಾಧನೆಗಳು**

ಮಧ್ಯಕಾಲೀನ ಯುಗದಲ್ಲಿ ಏಷ್ಯಾದಲ್ಲಿ ರಾಜ್ಯವಾಳಿದ ಪ್ರಬಲ ದೊರೆಗಳಲ್ಲಿ ಮಹಮದನೂ ಒಬ್ಬನಾಗಿದ್ದಾನೆ. ಅವನು ತನ್ನ ಪರಾಕ್ರಮದಿಂದ ಬಹುದೂರದ ರಾಜ್ಯಗಳಲ್ಲಿಯೂ ಹೆಸರುವಾಸಿಯಾಗಿದ್ದನು. ಮಹಮದನು ಸ್ವಭಾವತಃ ಕ್ರೂರಿಯೂ, ದುರಭಿಮಾನಿಯೂ, ಐಶ್ವರ್ಯ ಲಾಲಸೆಯುಳ್ಳವನೂ ಮತ್ತು ಮತಾಂಧನೂ ಆಗಿದ್ದನು. ಇಸ್ಲಾಂ ಧರ್ಮವನ್ನು ದೂರ ದೇಶಗಳಲ್ಲಿ ಹರಡಬೇಕೆಂಬುದು ಅವನ ದಂಡಯಾತ್ರೆಗಳ ಮತ್ತೊಂದು ಮುಖ್ಯ ಉದ್ದೇಶವಾಗಿತ್ತು. ಧರ್ಮವೀರನಲ್ಲಿರಬೇಕಾದ ಗುಣಗಳೆಲ್ಲವನ್ನೂ ಅವನು ಹೊಂದಿದ್ದನು. ಮಹಮದನು ಕೇವಲ ತನ್ನ ಸೈನಿಕ ಶಕ್ತಿಯ ಬಲದಿಂದ ಸಣ್ಣ ರಾಜ್ಯವಾಗಿದ್ದ ಘಸ್ನಿಯನ್ನು ಒಂದು ವಿಶಾಲ ಸಾಮ್ರಾಜ್ಯವನ್ನಾಗಿ ಮಾರ್ಪಡಿಸಿದನು. ಸಮಾನಿದ್ ಸಂತತಿಯವರ ಅವನತಿ, ಹಿಂದೂರಾಜರುಗಳಲ್ಲಿದ್ದ ವೈಮನಸ್ಯ, ಪರ್ಶಿಯಾ ರಾಜ್ಯದ ಪ್ರಾಬಲ್ಯದ ಕ್ಷೀಣತೆ, ಇಸ್ಲಾಂ ಧರ್ಮಕ್ಕೆ ಮತಾಂತರಗೊಳಿಸುವ ಕಾರ್ಯದಲ್ಲಿ ಟರ್ಕರಲ್ಲಿದ್ದ ಆಸಕ್ತಿ ಮೊದಲಾದವುಗಳು ಅವನ ಏಳಿಗೆಗೆ ನುತ್ತು ವಿಜಯಕ್ಕೆ ಕಾರಣಗಳಾಗಿದ್ದವು. ಭಾರತದ ಸ್ಥಿರವಾದ ಗೆಲುವು ಅಸಾಧ್ಯವಾಗಿತ್ತು ಮತ್ತು ಅದು ಅವನ ಉದ್ದೇಶವೂ ಆಗಿರಲಿಲ್ಲ. ಮಹಮದನಿಗೆ ಮುಖ್ಯವಾಗಿ ಬೇಕಾಗಿದ್ದುದು ಭಾರತದ ಅಪಾರ ಐಶ್ವರ್ಯ. ಅದನ್ನು ಪಡೆದ ಮೇಲೆ ಅವನು ಸ್ಥಿರವಾದ ಗೆಲುವಿನ ಆಲೋಚನೆ ಮಾಡದೆ ಘಸ್ನಿಗೆ ಹಿಂದಿರುಗಿದನು. ಮಹಮದನು ಕೈಗೊಂಡ ದಂಡೆಯಾತ್ರೆಗಳು ಅವನ ಬುದ್ಧಿ ಚಾತುರ್ಯವನ್ನೂ ಪ್ರತಿಕೂಲ ಸನ್ನಿವೇಶಗಳ ವಿರುದ್ಧ ಹೋರಾಡಿದ ಧೈರ್ಯೋತ್ಸಾಹಗಳನ್ನು ಎತ್ತಿ ತೋರಿಸುತ್ತವೆ. ಹುಟ್ಟಿನಿಂದಲೇ ಒಳ್ಳೆಯ ಸೇನಾಧಿಪತಿಯ ಗುಣಗಳನ್ನು ಹೊಂದಿದ್ದ ಅವನು ಯುದ್ಧಕ್ಕೆ ಸ್ವಲ್ಪವೂ ಹಿಂಜರಿಯುತ್ತಿರಲಿಲ್ಲ. ಇಸ್ಲಾಂ ಧರ್ಮದ ಪ್ರಗತಿಗಾಗಿ ಹೋರಾಡುತ್ತಿರುವೆನೆಂದು ತಿಳಿದು ಯಾವಾಗಲೂ ಕಾರ್ಯೋನ್ಮುಖನಾಗುತ್ತಿದ್ದನು. ಮಹಮದನು ಎಣಿಕೆಗೆ ಸಾಧ್ಯವಾಗದಷ್ಟು ಹಣವನ್ನು ಮತ್ತು ಐಶ್ವರ್ಯವನ್ನು ಬಿಟ್ಟು ಕ್ರಿ.ಶ.೧೦೩೦ರಲ್ಲಿ ತನ್ನ ಅವರತ್ತೈದನೆ ವಯಸ್ಸಿನಲ್ಲಿ ಕಾಲವಾದನು.

**ಮಹಮದನ ವ್ಯಕ್ತಿತ್ವ**

ಮಹಮದನು ತನ್ನ ದಂಡಯಾತ್ರೆಗಳಿಂದ ಭಾರತದಲ್ಲಿ ಅನೇಕ ನಗರಗಳನ್ನೂ ಮತ್ತು ದೇವಾಲಯಗಳನ್ನೂ ನಾಶಮಾಡಿ ರಕ್ತದ ಕೋಡಿಯನ್ನೇ ಹರಿಸಿದ್ದರೂ ಈ ಒಂದು ಕಾರಣದಿಂದಲೇ ಅವನನ್ನು ಒಬ್ಬ ಅನಾಗರಿಕ ದೊರೆಯೆಂದು ಹೇಳಲಾಗದು. ಏಕೆಂದರೆ ಆ ಕಾಲದ ದಂಡಯಾತ್ರೆಗಳ ಮತ್ತು ಯುದ್ಧಗಳ ಸ್ವರೂಪವೇ ಹಾಗಿದ್ದಿತು. ಮಹಮದನಲ್ಲಿ ಅನೇಕ ಶ್ಲಾಘನೀಯ ಗುಣಗಳೂ ಇದ್ದವು. ಅವನ ಸೈನಿಕ ಪ್ರತಿಭಾಶಕ್ತಿಗಳು ಅಸಮಾನ್ಯವಾಗಿದ್ದವು ಮತ್ತು ಆ ಕಾಲದಲ್ಲಿ ಅವನಷ್ಟು ಸೈನಿಕ ಪ್ರತಿಭಾ ಶಕ್ತಿಗಳನ್ನು ಹೊಂದಿದ್ದವರು ಇರಲಿಲ್ಲವೆಂದೇ ಹೇಳಬಹುದು. ಅವನು ಸಮರ್ಥ ಆಡಳಿತಗಾರನಾಗಿದ್ದು ಆಡಳಿತದ ಎಲ್ಲ ವಿಭಾಗಗಳ ಮೇಲೂ ಕಟ್ಟುನಿಟ್ಟಾದ ಹತೋಟಿಯನ್ನಿಟ್ಟುಕೊಂಡಿದ್ದನು. ಅವನು ತನ್ನ ಪ್ರಜೆಗಳ ಯೋಗಕ್ಷೇಮದ ಬಗ್ಗೆ ವಿಶೇಷ ಆಸಕ್ತಿ ವಹಿಸಿದ್ದನು ನ್ಯಾಯತೀರ್ಮಾನದಲ್ಲಿ ನಿಷ್ಪಕ್ಷಪಾತವಾಗಿ ನಡೆದುಕೊಳ್ಳುತ್ತಿದ್ದನು. ಅವನ ಆಳ್ವಿಕೆಯಲ್ಲಿ ಅವನ ವಿಶಾಲ ಸಾಮ್ರಾಜ್ಯದಲ್ಲಿ ಶಾಂತಿ ವ್ಯವಸ್ಥೆಗಳು ನೆಲೆಸಿದ್ದವು. ಮಹಮದನು ಇಸ್ಲಾಂ ಧರ್ಮದಲ್ಲಿ ಅಚಲ ನಂಬಿಕೆಯುಳ್ಳವನಾಗಿದ್ದರೂ ಹಿಂದೂ ಪ್ರಜೆಗಳನ್ನು ಹತ್ತಿಕ್ಕಲಿಲ್ಲ. ಅವನು ಶತ್ರುಗಳ ರಾಜ್ಯದಲ್ಲಿ ದೇವಾಲಯಗಳನ್ನು ನಾಶಮಾಡಿದರೂ, ಅವನ ಹಿಂದೂ ಪ್ರಜೆಗಳು ಯಾವ ಭೀತಿಯೂ ಇಲ್ಲದೆ ತಮ್ಮ ಧರ್ಮವನ್ನು ಆಚರಿಸಲು ಅವನು ಅಡ್ಡಿಯುಂಟುಮಾಡಿರಲಿಲ್ಲ. ತನ್ನ ರಾಜಧಾನಿಯಾದ ಘಸ್ನಿಯಲ್ಲಿ ಹಿಂದುಗಳಿಗೆ ಪ್ರತ್ಯೇಕ ವಸತಿಗಳನ್ನು ನಿರ್ಮಿಸಿಕೊಟ್ಟಿದ್ದು ಅವರ ಪ್ರತಿಭಾ ಶಕ್ತಿಗಳನ್ನು ಗೌರವಿಸಿದ್ದನು.

ಮಹಮದನು ಕಲಾಭಿಮಾನಿಯಾಗಿದ್ದು ಕಲಾಕೃತಿಗಳನ್ನು ಪ್ರಶಂಸಿಸುವ ಗುಣಗಳನ್ನು ಹೊಂದಿದ್ದನು. ತನ್ನ ರಾಜಧಾನಿಯಾದ ಘಸ್ನಿಯಲ್ಲಿ ಸುಂದರವಾದ ಕಟ್ಟಡಗಳನ್ನು ಮತ್ತು ವಸ್ತುಸಂಗ್ರಹಾಲಯವನ್ನು ನಿರ್ಮಿಸಿ ಅದನ್ನು ಏಷ್ಯಾದ ಸುಂದರ ನಗರಗಳಲ್ಲೊಂದನ್ನಾಗಿ ಮಾಡಿದ್ದನು. ಮಹಮದನು ವಿದ್ಯಾಭ್ಯಾಸಕ್ಕೂ ಮತ್ತು ಕವಿಗಳಿಗೂ ಉದಾರ ಪ್ರೋತ್ಸಾಹನೀಡಿದ್ದನು. ಘಸ್ನಿಯಲ್ಲಿ ವಿಶ್ವವಿದ್ಯಾನಿಲಯವನ್ನು ಸ್ಥಾಪಿಸಿದನು. ಪ್ರಸಿದ್ಧ ವಿದ್ವಾಂಸರುಗಳಾದ ಅಲ್ಬರೂನಿ, ಫಿರ್ದೂಸಿ, ಅನ್ಸಾರಿ, ಫರೂಕಿ, ಅಸ್ಜಾದಿ, ಇತಿಹಾಸಕಾರನಾದ ಉತ್ಬಿ, ತತ್ವಶಾಸ್ತ್ರಜ್ಞನಾದ ಪರಾಭಿ ಮತ್ತು ಕಾದಂಬರಿಕಾರನಾದ ಭಯಾಕಿ ಮೊದಲಾದವರು ಅವನ ಆಸ್ಥಾನವನ್ನು ಅಲಂಕರಿಸಿದ್ದರು.

ಅಲ್ಬರೂನಿಯ ನಿಜವಾದ ಹೆಸರು ಅಬುರಿಹಾನ್ ಎಂದಿದ್ದಿತು. ಇವನು ಮಧ್ಯಏಷ್ಯಾದ ಕೀವಾ ಎಂಬಲ್ಲಿ ಕ್ರಿ.ಶ. 973ರಲ್ಲಿ ಹುಟ್ಟಿದನು. ಗಣಿತಶಾಸ್ತ್ರ ಮತ್ತು ಖಗೋಳ ಶಾಸ್ತ್ರದಲ್ಲಿ ಘನವಿದ್ವಾಂಸನಾಗಿದ್ದನು. ಮಹಮದನು ಕೀವಾವನ್ನು ವಶಪಡಿಸಿಕೊಂಡಾಗ ಅವನನ್ನು ಸೆರೆಹಿಡಿದನು. ತರುವಾಯ ಅಲ್ಬರೂನಿಯು ಮಹಮದನ ಅಪೇಕ್ಷೆಯ ಮೇರೆಗೆ ಅವನ ಜೊತೆಯಲ್ಲಿ ಭಾರತಕ್ಕೆ ಬಂದಿದ್ದನು. ಅವನು ಭಾರತದಲ್ಲಿ ಸಂಸ್ಕೃತ ಸಾಹಿತ್ಯ, ತತ್ವಶಾಸ್ತ್ರ ಮತ್ತು ಗಣಿತಶಾಸ್ತ್ರವನ್ನು ಆಳವಾಗಿ ಅಭ್ಯಸಿಸಿ ಪಾಂಡಿತ್ಯಗಳಿಸಿದನು. ಅಲ್ಬರೂನಿಯು ಬರೆದಿರುವ 'ಅಲ್‌ಹಿಂದ್' ಎಂಬ ಗ್ರಂಥವು ಮಧ್ಯಕಾಲೀನ ಭಾರತದ ಇತಿಹಾಸವನ್ನು ತಿಳಿಯಲು ಮುಖ್ಯ

ಆಧಾರವಾಗಿರುವುದಲ್ಲದೆ ಅಂದಿನ ಸಂಸ್ಕೃತಿಯ ಮೇಲೂ ವಿಶೇಷ ಬೆಳಕನ್ನು ಚೆಲ್ಲುತ್ತದೆ. ಅಲ್ಬರೂನಿಯಷ್ಟೆ ಪ್ರಸಿದ್ಧನಾದ ಫಿರ್ದೂಸಿಯ 'ಶಹನಾಮ' ಎಂಬ ಗ್ರಂಥವನ್ನು ಪರ್ಶಿಯನ್ ಭಾಷೆಯಲ್ಲಿ ರಚಿಸಿರುವನು. ಈ ಗ್ರಂಥವೂ ಕೂಡ ಇತಿಹಾಸ ರಚನೆಗೆ ಒಂದು ಉಪಯುಕ್ತ ಗ್ರಂಥವಾಗಿದೆ ಫಿರ್ದೂಸಿಯು ತನ್ನ ಗ್ರಂಥದಲ್ಲಿ ಮಹಮದನಿಗೆ ಚಿರಂತಸ್ಥಾನವನ್ನು ದೊರಕಿಸಿಕೊಟ್ಟಿದ್ದಾನೆ. ಅವನಕಾಲವು ಸಾಹಿತ್ಯ ಸೃಷ್ಟಿಯ ಕಾಲವಾಗಿತ್ತು. ಮಹಮದನ ಅಸ್ಥಾನದಲ್ಲಿದ್ದ ಕವಿಗಳು ಏಷ್ಯಾದಲ್ಲೆಲ್ಲಾ ತಮ್ಮ ವಿದ್ವತ್ತಿಗೆ ಪ್ರಸಿದ್ಧರಾಗಿದ್ದರು. ಒಟ್ಟಾರೆ ಹೇಳುವುದಾದರೆ ಮಹಮದನು ತನ್ನ ದಂಡಯಾತ್ರೆಗಳ ಮೂಲಕ ಮುಂದಿನ ಶತಮಾನಗಳಲ್ಲಿ ಮುಸಲ್ಮಾನರು ಭಾರತದಲ್ಲಿ ಸಾಮ್ರಾಜ್ಯ ಸ್ಥಾಪನೆ ಮಾಡಲು ಬುನಾದಿಯನ್ನು ಹಾಕಿದನು.

**ಮಹಮದನ ಅಸಮರ್ಥ ಉತ್ತರಾಧಿಕಾರಿಗಳು**

ಘಸ್ನಿಮಹಮದನು ಸದಾಕಾಲವೂ ದಂಡಯಾತ್ರೆಗಳಲ್ಲಿ ನಿರತನಾಗಿದ್ದುದರಿಂದ ಅವನಿಗೆ ಸಾಮ್ರಾಜ್ಯವನ್ನು ಸಂಘಟಿಸಲು ಕಾಲಾವಕಾಶವು ಸಿಗಲಿಲ್ಲ. ಆದ್ದರಿಂದ ಅವನು ಕಾಲವಾದ ಕೆಲವು ವರ್ಷಗಳಲ್ಲಿಯೆ ಅವನ ಸಾಮ್ರಾಜ್ಯದ ಅವನತಿಯು ಅರಂಭವಾಯಿತು. ಮಹಮದನ ನಂತರ ಕ್ರಿ.ಶ. 1031ರಲ್ಲಿ ಅಧಿಕಾರಕ್ಕೆ ಬಂದ ಅವನ ಮಗ ಮಸೂದನು ಧೈರ್ಯಶಾಲಿಯೂ ಮತ್ತು ಯುದ್ಧೋತ್ಸಾಹಿಯೂ ಅಗಿದ್ದನು. ಆದರೆ ಪಾನಾಸಕ್ತನೂ ವಿಷಯ ಲಂಪಟನೂ ಆಗಿದ್ದು ರಾಜ್ಯದ ಅವನತಿಗೆ ಕಾರಣನಾದನು. ಮಸೂದನ ಮರಣಾನಂತರ ಐವರು ಸುಲ್ತಾನರು ಈ ಸಂತತಿಯಲ್ಲಿ ಆಳಿದರು. ಇವರೆಲ್ಲರೂ ಅಸಮರ್ಥ ದೊರೆಗಳಾಗಿದ್ದರು. ಇವರ ಆಳ್ವಿಕೆಯ ಕಾಲದಲ್ಲಿ ಅವರ ಅಧಿಕಾರವು ಘಸ್ನಿಸಾಮ್ರಾಜ್ಯದ ಪೂರ್ವಭಾಗಕ್ಕೆ ಪಂಜಾಬು ಸೇರಿದಂತೆ ಒಳಗೊಂಡಿತ್ತು. ರಾವಿ ನದಿಯ ಪಶ್ಚಿಮ ಭಾಗದಲ್ಲಿ ಹಿಂದೂ ರಾಜರುಗಳು ಪುನಃ ಪ್ರಬಲರಾದರು ಟರ್ಕರ ಮತ್ತೊಂದು ಪಂಗಡಕ್ಕೆ ಸೇರಿದ ಸೆಲ್ಜುಕ್ ಟರ್ಕರೆಂಬವರು ಪ್ರಬಲರಾಗಿ ಘಸ್ನಿ ಸಾಮ್ರಾಜ್ಯದ ವಿವಿಧ ಭಾಗಗಳನ್ನು ಆಕ್ರಮಿಸಿದರು. ಇದಲ್ಲದೆ ಮಹಮದನು ಭಾರತದಿಂದ ದೋಚಿಕೊಂಡು ಹೋಗಿದ್ದ ಐಶ್ವರ್ಯವು ಅವರನ್ನು ಭೋಗ ವಿಲಾಸ ಜೀವನದಲ್ಲಿ ತೊಡಗುವಂತೆ ಮಾಡಿ ದುರ್ಬಲಗೊಳಿಸಿತು. ಮೇಲಾಗಿ ಇದೇ ಸಮಯದಲ್ಲಿ ಘಸ್ನಿ ಮತ್ತು ಹೀರತ್‌ಗಳ ನಡುವಿನ ಪ್ರದೇಶದಲ್ಲಿ ಒಂದು ಸಣ್ಣ ರಾಜ್ಯವನ್ನು ಸ್ಥಾಪಿಸಿಕೊಂಡಿದ್ದ ಟರ್ಕರನ್ನು ಮಹಮದನು ಹಿಂದೆ ಗೆದ್ದು ಅವರನ್ನು ಸಾಮಂತರನ್ನಾಗಿ ಮಾಡಿಕೊಂಡಿದ್ದನು. ಅವರು ಘಸ್ನಿಯವರ ಅಧಿಕಾರವು ಕ್ಷೀಣಿಸಿದ ಹಾಗೆಲ್ಲ ತಮ್ಮ ಅಧಿಕಾರವನ್ನು ಹೆಚ್ಚಿಸಿಕೊಳ್ಳುತ್ತಾ ಬಂದರು. ಕ್ರಿ.ಶ. 1151ರಲ್ಲಿ ಘೋರ್ ಎಂಬ ರಾಜ್ಯದ ರಾಜನಾಗಿದ್ದ ಘಿಯಾಸ್ ಉದ್ದೀನನು ಘಸ್ನಿಯನ್ನು ವಶಪಡಿಸಿಕೊಂಡನು. ಇದಾದ ನಂತರ ಘಸ್ನಿ ಸಂತತಿಯವರು ಪಂಜಾಬಿಗೆ ಬಂದು ಲಾಹೋರನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ಆಳುತ್ತಿದ್ದರು. ಅವರ ಅಧಿಕಾರವನ್ನು ಕ್ರಿ.ಶ. 1186ರಲ್ಲಿ ಮಹಮದ್ ಘೋರಿಯು ಕೊನೆಗಾಣಿಸಿ ಘೋರಿ ಸಂತತಿಯವರ ಆಳ್ವಿಕೆಯನ್ನು ಆರಂಭಿಸಿದನು.

**ಘೋರಿ ಮಹಮದ್**

ಕ್ರಿ.ಶ. ಹನ್ನೆರಡನೆ ಶತಮಾನದಲ್ಲಿ ಘಸ್ನಿ ಮತ್ತು ಹೀರತ್‌ಗಳ ನಡುವೆ

ಇದ್ದ ಸಣ್ಣ ರಾಜ್ಯವಾಗಿದ್ದ ಘೋರ್ ರಾಜ್ಯದ ಟರ್ಕರು ಹಂತ ಹಂತವಾಗಿ ಪ್ರಬಲರಾಗ ತೊಡಗಿ ಆ ಶತಮಾನದ ಉತ್ತರಾರ್ಧದಲ್ಲಿ ಪ್ರವರ್ಧಮಾನಕ್ಕೆ ಒಂದು ಘಸ್ನಿಯ ಮೇಲೆ ತಮ್ಮ ಒಡೆತನ ಸ್ಥಾಪಿಸಿದರು. ಘಿಯಾಸ್-ಉದ್ದೀನ್ ಎಂಬವನು ಆ ರಾಜ್ಯದ ದೊರೆಯಾಗಿದ್ದನು. ಅವನ ತರುವಾಯ ಅವನ ಕಿರಿಯ ಸಹೋದರನಾಗಿದ್ದ ಮುಯಿಜ್-ಉದ್ದಿನ್ ಅಥವ ಘೋರಿ ಮಹಮದನು ಸಿಂಹಾಸವನ್ನೇರಿದನು. ಘೋರಿಮಹಮದನು ಭಾರತದಲ್ಲಿ ಟರ್ಕರ ಆಳ್ವಿಕೆಯನ್ನು ಆರಂಭಿಸಿದನು. ಭಾರತದಲ್ಲಿ ಅವನು ಹಿಂದುಗಳ ವಿರುದ್ಧ ಕೈಗೊಂಡ ದಂಡಯಾತ್ರೆಗಳಲ್ಲಿ ದಂಡನಾಯಕನಾಗಿ ತನ್ನ ಪ್ರತಿಭಾ ಸಾಮರ್ಥ್ಯಗಳನ್ನು ಪ್ರದರ್ಶಿಸಿದರೂ ಘಸ್ನಿ ಮಹಮದನಲ್ಲಿದ್ದಂತಹ ಸೈನಿಕ ಪ್ರತಿಭಾ ಸಾಮರ್ಥ್ಯಗಳನ್ನು ಅವನು ಹೊಂದಿರಲಿಲ್ಲ. ಅವನು ತನ್ನ ಉದ್ದೇಶಗಳನ್ನು ಈಡೇರಿಸಿಕೊಳ್ಳುವುದರಲ್ಲಿ ತನಗೆ ಸರಿಯೆಂದು ಕಂಡುಬಂದ ಯಾವ ಮಾರ್ಗವಾದರೂ ಸರಿ ಅದನ್ನು ಅನುಸರಿಸುತ್ತಿದ್ದನು. ಘೋರಿಮಹಮದನು ಕೇವಲ ಲೂಟಿ ಹೊಡೆಯುವುದರಿಂದಲೇ ತೃಪ್ತಿಪಟ್ಟು ಕೊಳ್ಳುವವನಾಗಿರಲಿಲ್ಲ. ಅವನು ಭಾರತದಲ್ಲಿ ಸ್ಥಿರವಾದ ಮುಸ್ಲಿಂ ಸಾಮ್ರಾಜ್ಯವನ್ನು ಸ್ಥಾಪಿಸಬೇಕೆಂಬ ಅಪೇಕ್ಷೆಯುಳ್ಳವನಾಗಿದ್ದನು ಮತ್ತು ಅವನು ತನ್ನ ಈ ಪ್ರಯತ್ನದಲ್ಲಿ ಯಶಸ್ಸನ್ನು ಗಳಿಸಿದನು. ಘಸ್ನಿಮಹಮದನು ಭಾರತದ ಮೇಲೆ ಪದೇ ಪದೇ ಮಾಡಿದ ಧಾಳಿಗಳಿಂದಲೂ ಮತ್ತು ತಮ್ಮಲ್ಲಿದ್ದ ದ್ವೇಷಾಸೂಯೆಗಳಿಂದಲೂ ಉತ್ತರ ಭಾರತದ ಹಿಂದೂ ರಾಜರುಗಳು ಶಕ್ತಿಹೀನರಾಗಿದ್ದರು. ಈ ದುರ್ಬಲ ಅಂಶಗಳು ಮುಸ್ಲಿಂ ರಾಜ್ಯ ಸ್ಥಾಪನೆಯ ಪ್ರಯತ್ನದಲ್ಲಿ ಘೋರಿಮಹಮದನ ಕಾರ್ಯವನ್ನು ಸುಲಭಗೊಳಿಸಿದವು.

ಕ್ರಿ.ಶ. 1175ರಲ್ಲಿ ಘೋರಿಮಹಮದನು ಮುಲ್ತಾನಿನ ಮೇಲೆ ಆಕ್ರಮಣಮಾಡಿ ಆದನ್ನು ವಶಪಡಿಸಿಕೊಂಡನು. ಅನಂತರ 1178ರಲ್ಲಿ ಗುಜರಾತಿನ ಮೇಲೆ ದಂಡೆತ್ತಿ ಬಂದನು. ಆದರೆ ಚಾಳುಕ್ಯರ ದೊರೆ ಎರಡನೇ ಭೀಮನು ಅವನನ್ನು ಸೋಲಿಸಿ ಹಿಂದಿರುಗಿ ಹೋಗುವಂತೆ ಮಾಡಿದನು.

ಕ್ರಿ.ಶ. 1179ರಲ್ಲಿ ನೆಹರ್‌ವಾಲದ ರಾಜನಾಗಿದ್ದ ಭೀಮದೇವನಿಂದ ಪೆಷಾವರ್‌ಅನ್ನು ವಶಪಡಿಸಿಕೊಂಡನು. 1187ರಲ್ಲಿ ಸಿಂಧ್ ಮೇಲೆ ತನ್ನ ಅಧಿಕಾರವನ್ನು ಸ್ಥಾಪಿಸಿದನು. ಕ್ರಿ.ಶ. 1185-86ರಲ್ಲಿ ಖುಸ್ರುಮಲ್ಲಿಕ್‌ನನ್ನು ಸೋಲಿಸಿ ಲಾಹೋರ್ ಮತ್ತು ಸಿಯಾಲ್ ಕೋಟೆಗಳನ್ನು ವಶಪಡಿಸಿಕೊಂಡನು.

ಸಿಂಧ್ ಮತ್ತು ಪಂಜಾಬ್‌ಗಳನ್ನು ವಶಪಡಿಸಿಕೊಂಡ ಮೇಲೆ ಮಹಮದನು ಉತ್ತರ ಭಾರತದ ರಜಪೂತರ ರಾಜರುಗಳ ವಿರುದ್ಧ ಹೋರಾಟವನ್ನು ಆರಂಭಿಸಿದನು. ಆಗ ಉತ್ತರ ಭಾರತದಲ್ಲಿ ಅತ್ಯಂತ ಪ್ರಬಲವಾಗಿದ್ದ ರಜಪೂತರ ಮುಖಂಡರೆಂದರೆ ದೆಹಲಿ ಮತ್ತು ಅಜ್ಮೀರದ ಚೌಹಾಣರು, ಕನೂಜಿನ ಗಹಡವಾಲರು, ಬಂದೇಲ್ ಖಂಡದ ಚಂದೇಲರು, ಬಿಹಾರ್ ಮತ್ತು ಬಂಗಾಳದ ಪಾಲರು ಮತ್ತು ಸೇನರು ಹಾಗೂ ಗುಜರಾತಿನ ಚಾಳುಕ್ಯರು ಇವರಲ್ಲೆಲ್ಲಾ ದೆಹಲಿ ಮತ್ತು ಅಜ್ಮೀರದ ಮೂರನೆ ಪೃಥ್ವಿರಾಜನೂ ಮತ್ತು ಕನೂಜಿನ ಜಯಚಂದ್ರನೂ ಅತ್ಯಂತ ಪ್ರಬಲರಾಗಿದ್ದರು. ಆದರೆ ಅವರಿಬ್ಬರೂ ಬದ್ಧ ವೈರಿಗಳಾಗಿದ್ದು ಮುಸ್ಲಿಮರ ಆಕ್ರಮಣಗಳನ್ನು ತಡೆಗಟ್ಟುವುದರಲ್ಲಿ ವಿಫಲರಾದುದಲ್ಲದೆ ತಮ್ಮ ರಾಜ್ಯಗಳನ್ನೂ ಕಳೆದುಕೊಂಡರು.

## ಪೃಥ್ವಿರಾಜನ ಸೋಲು

ದೆಹಲಿ ಮತ್ತು ಅಜ್ಮೀರ ರಾಜ್ಯಗಳ ದೊರೆಯಾಗಿದ್ದ ಪೃಥ್ವಿರಾಜನು ತನ್ನ ಶೌರ್ಯ ಸಾಹಸಗಳಿಗೆ ಹೆಸರುವಾಸಿಯಾಗಿದ್ದನು. ಅವನ ರಾಜ್ಯದ ಭೌಗೋಳಿಕ ಸ್ಥಾನಮಾನಗಳಿಂದಾಗಿ ಅದನ್ನು ಮುಸಲ್ಮಾನರು ವಶಪಡಿಸಿಕೊಳ್ಳದ ಹೊರತು ಗಂಗಾನದಿ ಬಯಲಿಗೆ ಪ್ರವೇಶಿಸಲು ಸಾಧ್ಯವಿರಲಿಲ್ಲ. ಉತ್ತರ ಭಾರತದ ಹಿಂದೂ ರಾಜರುಗಳೆಲ್ಲರೂ ಘೋರಿಮಹಮದನ ಆಕ್ರಮಣವನ್ನು ಎದುರಿಸಲು ಒಟ್ಟುಗೂಡಿದ್ದ ಪಕ್ಷದಲ್ಲಿ ಆಕ್ರಮಣ ಕಾರನಾದ ಮಹಮದನಿಗೆ ಪಂಜಾಬಿನಿಂದ ಈಚೆಗೆ ಪ್ರವೇಶಿಸುವುದು ಬಹಳ ಕಷ್ಟವಾಗುತ್ತಿತ್ತು. ದೇಶಕ್ಕೆ ಒದಗಿದ್ದ ಇಂತಹ ವಿಪತ್ತಿನ ಸಮಯದಲ್ಲೂ ಹಿಂದುಗಳ ರಾಜರುಗಳು ಒಟ್ಟುಗೂಡಿ ಹೋರಾಡಿ ದೇಶದ ಸ್ವಾತಂತ್ರ್ಯವನ್ನು ಉಳಿಸಿಕೊಳ್ಳಬೇಕೆಂಬ ಅರಿವಿನ ಪ್ರಾಮುಖ್ಯತೆಯನ್ನು ಮನಗಾಣದೆ ಹೋದರು. ಪೃಥ್ವಿರಾಜನು ಜಯಚಂದ್ರನ ಮಗಳಾದ ಸಂಯುಕ್ತೆಯನ್ನು ಅಪಹರಿಸಿಕೊಂಡು ಹೋಗಿ ಅವಳನ್ನು ವಿವಾಹವಾಗಿದ್ದನು. ಇದರಿಂದ ತನಗೆ ಅವಮಾನವಾಯಿತೆಂದು ಜಯಚಂದ್ರನು ಮಹಮದನ ವಿರುದ್ಧ ಪೃಥ್ವಿರಾಜನಿಗೆ ಸಹಾಯ ಮಾಡದೆ ತನ್ನ ಸೇಡನ್ನು ತೀರಿಸಿಕೊಳ್ಳಲು ಬಯಸಿದನು. ಘೋರಿಮಹಮದನು ಕ್ರಿ.ಶ. 1191ರಲ್ಲಿ ಪೃಥ್ವಿರಾಜನ ವಿರುದ್ಧ ದಂಡೆತ್ತಿ ಬಂದನು. ಆದರೆ ಪೃಥ್ವಿರಾಜನು ಸ್ಥಾಣೇಶ್ವರಕ್ಕೆ ಹದಿನಾಲ್ಕು ಮೈಲಿಗಳ ದೂರದಲ್ಲಿ ತರೈನ್ ಎಂಬ ಹಳ್ಳಿಯ ಬಳಿ ಅವನನ್ನು ಸೋಲಿಸಿ ಅವನು ಹಿಮ್ಮೆಟ್ಟುವಂತೆ ಮಾಡಿದನು. ಪೃಥ್ವಿರಾಜನ ಸಹೋದರನಾದ ಗೋವಿಂದರಾಜನು ಸುಲ್ತಾನನನ್ನು ಬಲವಾಗಿ ಗಾಯಗೊಳಿಸಿದನು. ಅದೃಷ್ಟವಶಾತ್ ಸುಲ್ತಾನನನ್ನು ನಂಬಿಕಸ್ತನಾದ ಅವನ ಸೈನಿಕನೊಬ್ಬನು ಯುದ್ಧರಂಗದಿಂದ ಹೊತ್ತುಕೊಂಡು ಹೋಗಿ ಅವನನ್ನು ರಕ್ಷಿಸಿದನು. ಈ ಅನರ್ಥವು ಮುಸ್ಲಿಮರಲ್ಲಿ ತೀವ್ರ ಭಯವನ್ನುಂಟು ಮಾಡಿ ಅವರು ದಿಕ್ಕುಪಾಲಾಗಿ ಓಡಿಹೋದರು. ಹಿಂದುಗಳ ಕೈಯಿಂದ ಇಂತಹ ಭಯಂಕರ ಸೋಲನ್ನು ಮುಸ್ಲಿಮರು ಹಿಂದೆ ಯಾವಾಗಲೂ ಅನುಭವಿಸಿರಲಿಲ್ಲ.

ಘಸ್ನಿಗೆ ಹಿಂದಿರುಗಿದ ಮಹಮದನು ರಜಪೂತರ ಕೈಯಿಂದ ತನಗುಂಟಾದ ಸೋಲಿನ ಅಪಮಾನವನ್ನು ತೊಡೆದುಹಾಕಲು ಮಾರನೆವರ್ಷ (1192) ಅಪಾರ ಸೈನ್ಯವನ್ನು ಸಜ್ಜುಗೊಳಿಸಿಕೊಂಡು ಪುನಃ ಪೃಥ್ವಿರಾಜನ ವಿರುದ್ಧ ದಂಡೆತ್ತಿ ಬಂದನು. ಅವನು ಲಾಹೋರನ್ನು ತಲುಪಿದ ಮೇಲೆ ತನ್ನ ಸೈನ್ಯದ ಸಿದ್ಧತೆಯನ್ನು ಮತ್ತೊಮ್ಮೆ ಪರಿಶೀಲಿಸಿದನು ಮತ್ತು ಇನ್ನಷ್ಟು ಸಿದ್ಧತೆಗಳನ್ನು ಮಾಡಿಕೊಳ್ಳಲು ಸಮಯವನ್ನು ಪಡೆದುಕೊಳ್ಳುವುದಕ್ಕಾಗಿ ಪೃಥ್ವಿರಾಜನ ಬಳಿಗೆ ಅವನನ್ನು ಶರಣಾಗುವಂತೆ ಕೇಳಲು ಪತ್ರ ಬರೆದು ತನ್ನ ಕಡೆಯವನೊಬ್ಬನನ್ನು ಕಳುಹಿಸಿದನು. ಪೃಥ್ವಿರಾಜನು ಅದಕ್ಕೆ ಉತ್ತರವಾಗಿ ಹಾಗೆ ಶರಣಾಗುವುದು ರಜಪೂತರ ಕುಲಕ್ಕೆ ಅಗೌರವ ತರುವಂತಹುದೆಂದೂ ಮತ್ತು ಅವರು ಪ್ರಾಣದ ಹಂಗನ್ನು ತೊರೆದು ಹೋರಾಡುವರೆಂದು ತಿಳಿಸಿದನು. ಅಷ್ಟರಲ್ಲಿ ಮಹಮದನು ತರೈನ್ ಹತ್ತಿರ ಬಂದು ಬೀಡುಬಿಟ್ಟಿದ್ದನು. ಪೃಥ್ವಿರಾಜನು ಅವನ ವಿರುದ್ಧ ಸೈನ್ಯ ಸಮೇತನಾಗಿ ಹೋದನು. ಎರಡು ಕಡೆಯವರಿಗೂ ನಡೆದ ಭೀಕರ ಹೋರಾಟದಲ್ಲಿ ಪೃಥ್ವಿರಾಜನು ಸೋತು ಕೊಲ್ಲಲ್ಪಟ್ಟನು. ಚೌಹಾಣರ ರಾಜ್ಯವು ಮಹಮದನ ಅಧೀನಕ್ಕೊಳಪಟ್ಟಿತು. ತರೈನ್ ಯುದ್ಧವು

ಮಧ್ಯಕಾಲೀನ ಭಾರತದ ಇತಿಹಾಸದಲ್ಲಿ ಒಂದು ಬಹುಮುಖ್ಯ ಘಟನೆ. ಈ ಯುದ್ಧವು ಉತ್ತರ ಭಾರತದಲ್ಲಿ ಹಿಂದುಗಳ ಆಳ್ವಿಕೆಗೆ ಬದಲಾಗಿ ಮುಸ್ಲಿಮರ ಆಳ್ವಿಕೆಗೆ ದಾರಿಮಾಡಿಕೊಟ್ಟು ಭಾರತದ ಇತಿಹಾಸದ ಗತಿಯನ್ನು ಬದಲಾಯಿಸಿತು.

ಪೃಥ್ವಿರಾಜನ ಸೋಲಿನಿಂದ ರಾಜಪೂತರ ಅಧಿಕಾರಕ್ಕೆ ಮತ್ತು ಧೈರ್ಯಕ್ಕೆ ತೀವ್ರಪೆಟ್ಟುಬಿದ್ದಂತಾಯಿತು. ಪೃಥ್ವಿರಾಜನನ್ನು ಸೋಲಿಸಿದ ಕೆಲವು ವರ್ಷಗಳೊಳಗಾಗಿಯೆ ಮುಸ್ಲಿಮರು ಸಿಂಧ್‌ನಿಂದ ಬಂಗಾಳದವರೆಗೂ ತಮ್ಮ ಅಧಿಕಾರವನ್ನು ಸ್ಥಾಪಿಸಿದರು.

ತರೈನ್ ಯುದ್ಧದನಂತರ ಘೋರಿಮಹಮದನು ಭಾರತದಲ್ಲಿ ಮಾಡಿದ ಯುದ್ಧಗಳಲ್ಲಿ ಕ್ರಿ.ಶ. 1194ರಲ್ಲಿ ಚಂದಾವರ್ ಬಳಿ ಮಾಡಿದ ಯುದ್ಧವು ಮತ್ತೊಂದು ಮುಖ್ಯ ಯುದ್ಧವಾಗಿತ್ತು. ಈ ಮಧ್ಯೆ ಮಹಮದನ ಪ್ರತಿನಿಧಿಯಾಗಿದ್ದ ಕುತ್ಬುದೀನನು ದೆಹಲಿ, ಅಜ್ಮೀರ್, ಮೀರತ್, ಅಲಿಘರ್‌ಗಳನ್ನು ವಶಪಡಿಸಿಕೊಂಡು ದೆಹಲಿಯನ್ನು ತನ್ನ ಅಧಿಕಾರದ ಕೇಂದ್ರವನ್ನಾಗಿ ಮಾಡಿಕೊಂಡಿದ್ದನು. ದೆಹಲಿಯಿಂದ ಆಚೆ ದೋಬ್ ಪ್ರದೇಶದಲ್ಲಿ ಗಹಡವಾಲರ ರಾಜಧಾನಿಯಾಗಿದ್ದ ಕನೂಜ್ ಇದ್ದಿತು. ಇದು ಭಾರತದಲ್ಲೆಲ್ಲಾ ಸೇನಾನಿಗಳನ್ನು ಮತ್ತು ರಾಜತಂತ್ರಜ್ಞರನ್ನು ಪೋಷಿಸುವ ಸ್ಥಳವೆಂದು ಪ್ರಸಿದ್ಧಿ ಪಡೆದಿತ್ತು. ಮಹಮದ್‌ಘೋರಿಯು ಅದನ್ನು ಗೆಲ್ಲಬೇಕೆಂದು ಮೊದಲೇ ಮನಸ್ಸು ಮಾಡಿದ್ದನು. ಕ್ರಿ.ಶ. 1193ರಲ್ಲಿ ಐಬಕನನ್ನು ಕನೂಜಿನ ಮೇಲೆ ಆಕ್ರಮಣ ಮಾಡಲು ಸಮಾಲೋಚನೆ ಮಾಡುವುದಕ್ಕಾಗಿ ಘಸ್ನಿಗೆ ಕರೆಸಿಕೊಂಡು ಅವನನ್ನು ಅನಂತರ ಭಾರತಕ್ಕೆ ಕಳುಹಿಸಿಕೊಟ್ಟನು. ಕುತ್ಬುದೀನನನ್ನು ಮುಂದೆ ಕಳುಹಿಸಿ ತಾನೂ ಹಿಂದೆ ಅಪಾರ ಸೈನ್ಯದೊಂದಿಗೆ ಜಯಚಂದ್ರನ ವಿರುದ್ಧ ದಂಡೆತ್ತಿ ಬಂದನು. ಎರಡು ಸೈನ್ಯಗಳಿಗೂ ಚಂದಾವರ್ ಬಳಿ (1194) ನಡೆದ ಭೀಕರ ಹೋರಾಟದಲ್ಲಿ ಮಹಮದನ ಸೈನ್ಯವು ರಜಪೂತರ ಸೈನ್ಯವನ್ನು ಸಂಪೂರ್ಣವಾಗಿ ಸೋಲಿಸಿತು. ಜಯಚಂದ್ರನ ಕಣ್ಣಿಗೆ ಬಾಣವು ತಗುಲಿ ಅವನು ಯುದ್ಧಭೂಮಿಯಲ್ಲೇ ಮಡಿದನು. ಪರಾಜಿತರಾದ ರಜಪೂತರು ರಜಪುಟಾಣಕ್ಕೆ ಬಂದು ಅಲ್ಲಿ ಜೋಧ್‌ಪುರ ರಾಜ್ಯವನ್ನು ಸ್ಥಾಪಿಸಿಕೊಂಡರು. ತರುವಾಯ ಮಹಮದನು ಬೆನಾರಿಸ್ಸಿನ ಮೇಲೆ ದಂಡೆತ್ತಿ ಹೋಗಿ ಅದನ್ನು ವಶಪಡಿಸಿಕೊಂಡನು. ಮತ್ತು ಅಲ್ಲಿನ ದೇವಾಲಯಗಳನ್ನು ನಾಶಮಾಡಿ ಅವುಗಳ ಸ್ಥಾನದಲ್ಲಿ ಮಸೀದಿಗಳನ್ನು ನಿರ್ಮಿಸುವಂತೆ ಅಪ್ಪಣೆ ಮಾಡಿದನು. ಈ ವಿಜಯಗಳ ನಂತರ ಮಹಮದನು ತಾನು ಭಾರತದಲ್ಲಿ ಗೆದ್ದು ವಶಪಡಿಸಿಕೊಂಡಿದ್ದ ಪ್ರದೇಶಗಳ ಮೇಲ್ವಿಚಾರಣೆಯನ್ನು ನೋಡಿಕೊಳ್ಳಲು ಕುತ್ಬುದೀನನನ್ನು ನೇಮಿಸಿಕೊಳ್ಳೆ ಹೊಡೆದ ಅಪಾರ ಐಶ್ವರ್ಯದೊಂದಿಗೆ ಘಸ್ನಿಗೆ ಹಿಂದಿರುಗಿ ಹೋದನು. ಕುತ್ಬುದೀನನು 1195 ಮತ್ತು 1198ರಲ್ಲಿ ಗುಜರಾತಿನ ಮೇಲೆ ದಂಡೆತ್ತಿ ಹೋಗಿ ಚಾಳುಕ್ಯರ ರಾಜಧಾನಿಯಾಗಿದ್ದ ಅನ್ಹಿಲವಾಡವನ್ನು ಕೊಳ್ಳೆಹೊಡೆದನು. ಅಂತೆಯೆ 1202ರಲ್ಲಿ ಕಾಲಿಂಜರ್ ಮೇಲೆ ದಂಡೆತ್ತಿ ಹೋಗಿ ಅಲ್ಲಿನ ಕೋಟೆಯನ್ನು ವಶಪಡಿಸಿಕೊಂಡನು.

**ಬಿಹಾರ ಮತ್ತು ಬಂಗಾಳಗಳನ್ನು ವಶಪಡಿಸಿಕೊಂಡುದುದು**

ಮಹಮದ್‌ಘೋರಿಯ ಅಧಿಕಾರವನ್ನು ಕುತ್ಬುದ್ದೀನ್ ಐಬಕನು ಉತ್ತರ ಭಾರತದ ಮೇಲೆ ಸ್ಥಾಪಿಸುತ್ತಿದ್ದ ಸಮಯದಲ್ಲಿಯೆ ಅವನ ಮತ್ತೊಬ್ಬ ದಂಡನಾಯಕನಾಗಿದ್ದ ಇಕ್ತಿಯಾರ್ ಉದ್ದೀನ್ ಭಕ್ತಿಯಾರ್ ಖಿಲ್ಜಿ ಎಂಬವನು ಬಿಹಾರ

ಮತ್ತು ಪಶ್ಚಿಮ ಬಂಗಾಳವನ್ನು ಗೆದ್ದು ಮಹಮದನ ಸಾಮ್ರಾಜ್ಯಕ್ಕೆ ಸೇರಿಸಿದನು. ಭಕ್ತಿಯಾರ್ ಖಿಲ್ಜಿಯು ಕ್ರಿ.ಶ. 1197ರಲ್ಲಿ ಬಿಹಾರ್ ಪ್ರಾಂತ್ಯದ ಮೇಲೆ ಸೈನ್ಯ ಸಮೇತನಾಗಿ ಹೋಗಿ ಸ್ವಲ್ಪವೂ ವಿಳಂಬ ಮಾಡದೆ ಅದರ ಮುಖ್ಯ ಮಾರ್ಗಗಳನ್ನು ವಶಪಡಿಸಿಕೊಂಡನು. ಅನಂತರ ಅವನು ಬೌದ್ಧರ ವಿದ್ಯಾಕೇಂದ್ರವಾಗಿದ್ದ ಓದಾಂತಪುರಿಗೆ ಮುತ್ತಿಗೆಹಾಕಿ ಅಲ್ಲಿದ್ದ ಬೌದ್ಧ ವಿಹಾರಗಳನ್ನು ನೆಲಸಮ ಮಾಡಿ ಸಹಸ್ರಾರು ಬೌದ್ಧ ಭಿಕ್ಷುಗಳನ್ನು ಕೊಂದುಹಾಕಿದನು. ಇದಲ್ಲದೆ ಅಲ್ಲಿದ್ದ ಗ್ರಂಥ ಭಂಡಾರವನ್ನು ವಶಪಡಿಸಿಕೊಂಡು ಗ್ರಂಥಗಳನ್ನೆಲ್ಲ ಸುಟ್ಟುಹಾಕಿದನು. ಇದೇ ಕಾಲದಲ್ಲಿ ಅವನು ನಳಂದ ಮತ್ತು ವಿಕ್ರಮಶೀಲ ವಿಶ್ವವಿದ್ಯಾಲಯಗಳನ್ನು ನಾಶಮಾಡಿದನೆಂದು ಡಾ|| ತಾರಾನಾಥರು ಅಭಿಪ್ರಾಯಪಡುತ್ತಾರೆ. ಇಲ್ಲಿಯೂ ಸಹ ಸಹಸ್ರಾರು ಬೌದ್ಧ ಭಿಕ್ಷುಗಳು ಕೊಲ್ಲಲ್ಪಟ್ಟರು ಮತ್ತೆ ಕೆಲವರು ಟಿಬೆಟ್ಟಿಗೆ ಓಡಿ ಹೋದರು. ಭಕ್ತಿಯಾರ್ ಖಿಲ್ಜಿಯು ಬಿಹಾರಿನಲ್ಲಿ ಎಸಗಿದ ಕ್ರೂರ ಕೃತ್ಯಗಳಿಂದ ಬೌದ್ಧಮತವು ಅಲ್ಲಿ ಪುನಃ ತಲೆಯೆತ್ತಲಾಗಲಿಲ್ಲ.

ಬಿಹಾರನ್ನು ವಶಪಡಿಸಿಕೊಂಡ ನಂತರ ಭಕ್ತಿಯಾರ್ ಖಿಲ್ಜಿಯು ಬಂಗಾಳದ ರಾಜನಾದ ಲಕ್ಷ್ಮಣಸೇನನ ರಾಜಧಾನಿಯಾದ ನುದಿಯದ ಮೇಲೆ ಆಕ್ರಮಣ ಮಾಡಿದನು. ಅವನ ಆಕ್ರಮಣದ ಸುದ್ದಿಯನ್ನು ತಿಳಿದ ವಯೋವೃದ್ಧನಾದ ರಾಜನು ಅರಮನೆಯಿಂದ ತಪ್ಪಿಸಿಕೊಂಡು ಹೋಗಿ ವಿಕ್ರಮಪುರದಲ್ಲಿ ರಕ್ಷಣೆ ಪಡೆದನು. ಭಕ್ತಿಯಾರ್ ಖಿಲ್ಜಿಯು ನುದಿಯ ಪಟ್ಟಣವನ್ನು ಹಾಳುಮಾಡಿ ಲಕ್ನಾವತಿಯನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡನು. ಸುಲ್ತಾನನ ಹೆಸರಿನಲ್ಲಿ ಕುತ್ಬಾವನ್ನು ಓದಿಸಿದನು ಮತ್ತು ಅವನ ಹೆಸರಿನಲ್ಲಿ ನಾಣ್ಯಗಳನ್ನು ಟಂಕಿಸಿದನು. ಅಲ್ಲದೆ ಅವನು ವಶಪಡಿಸಿಕೊಂಡಿದ್ದ ಅಪಾರ ಐಶ್ವರ್ಯದ ಬಹುಭಾಗವನ್ನು ಕುತ್ಬುದ್ದೀನನಿಗೆ ಕಳುಹಿಸಿಕೊಟ್ಟನು.

### ಚಂದೇಲರ ವಿರುದ್ಧ ಯುದ್ಧ (1202-3)

ಕುತ್ಬುದ್ದೀನನು ಕ್ರಿ.ಶ. 1202 ರಲ್ಲಿ ಬುಂದೇಲ್‌ಖಂಡದ ಚಂದೇಲರ ದೊರೆಯಾದ ಪಾರಮಾರ್ಥಿಯ ಮೇಲೆ ದಂಡೆತ್ತಿ ಹೋದನು. ಪಾರಮಾರ್ಥಿಗೆ ಮುಸ್ಲಿಮರನ್ನು ಎದುರಿಸುವುದು ಕಷ್ಟವೆಂದು ತಿಳಿದುಬರಲು ಅವನು ಐಬಕನೊಂದಿಗೆ ಶಾಂತಿ ಒಪ್ಪಂದದ ಮಾತುಕತೆಗಳನ್ನು ಪ್ರಾರಂಭಿಸಿದನು. ಆದರೆ ಈ ಮಾತುಕತೆಗಳು ಮುಗಿಯುವುದಕ್ಕೆ ಮೊದಲೇ ಅವನು ತೀರಿಕೊಂಡನು. ಅವನ ಮಂತ್ರಿಯಾದ ಅಜಯದೇವನು ಶಾಂತಿ ಒಪ್ಪಂದದ ಮಾತುಕತೆಗಳನ್ನು ಉಲ್ಲಂಘಿಸಿ ಯುದ್ಧವನ್ನು ಆರಂಭಿಸಿದನು. ಆದರೆ ಅವನ ಪ್ರಯತ್ನವು ವಿಫಲವಾಯಿತು. ಕುತ್ಬುದ್ದೀನನು ಚಂದೇಲರ ಪ್ರಬಲ ಕೋಟೆಯಾದ ಕಾಲಿಂಜರ್ ಕೋಟೆಯನ್ನು ವಶಪಡಿಸಿಕೊಂಡನು. ಅನಂತರ ಕಲ್ಪಿ, ಬದಾವನ್. ಕಾಜುರಾಹೊ ಮತ್ತು ಮಹೋಬ ಕೋಟೆಗಳನ್ನು ವಶಪಡಿಸಿಕೊಂಡು ಆ ಪ್ರಾಂತ್ಯಕ್ಕೆ ಹಸನ್ ಆರ್ನಾಲ್ ಎಂಬವನನ್ನು ರಾಜ್ಯಪಾಲನನ್ನಾಗಿ ನೇಮಿಸಿದನು. ಹೀಗೆ ಉತ್ತರ ಭಾರತದ ಮುಖ್ಯ ಸ್ಥಳಗಳೆಲ್ಲವೂ ಕುತ್ಬುದ್ದೀನನಿಂದ ಮಹಮದ್ ಘೋರಿಯ ಅಧೀನಕ್ಕೊಳಪಟ್ಟವು.

ಮಹಮದ್ ಘೋರಿಯು ಭಾರತದಲ್ಲಿ ವಶಪಡಿಸಿಕೊಂಡ ರಾಜ್ಯಗಳಿಂದಲೇ

ತೃಪ್ತನಾಗದೆ ಹಿಂದೆ ಘಸ್ನಿಮಹಮದನು ತನ್ನ ರಾಜ್ಯಕ್ಕೆ ಸೇರಿಸಿಕೊಳ್ಳಬೇಕೆಂದು ಪ್ರಯತ್ನ ಪಟ್ಟು ವಿಫಲನಾಗಿದ್ದ ಆಕ್ಸಸ್ ಪ್ರದೇಶಗಳನ್ನು ಗೆದ್ದು ವಶಪಡಿಸಿಕೊಳ್ಳಲು ಪ್ರಯತ್ನಿಸಿದನು. ಮಹಮದನು ಕ್ರಿ.ಶ. 1204ರಲ್ಲಿ ಅಪಾರ ಸೈನ್ಯದೊಂದಿಗೆ ಕ್ವಾರಿಜಮ್‌ಗೆ ಮುತ್ತಿಗೆ ಹಾಕಿದನು. ಆದರೆ ಘೋರಿಯ ಸೈನ್ಯವು ಕ್ವಾರಿಜಮ್‌ನ ಷಹನಿಂದ ಸದೆ ಬಡಿಯಲ್ಪಟ್ಟು ಸಂಪೂರ್ಣವಾಗಿ ಸೋತಿತು. ಅಲ್ಲದೆ ಸುಲ್ತಾನನು ಬಹಳ ಕಷ್ಟದಿಂದ ತನ್ನ ಪ್ರಾಣವನ್ನು ಉಳಿಸಿಕೊಂಡನು. ಈ ಸೋಲಿನ ಸುದ್ದಿಯು ಹೊರಗಡೆ ತಿಳಿದ ತಕ್ಷಣದಲ್ಲೇ ಸಾಮ್ರಾಜ್ಯದ ವಿವಿಧ ಭಾಗಗಳಲ್ಲಿ ಗೊಂದಲವುಂಟಾಯಿತು. ಪಂಜಾಬ್ ಪ್ರಾಂತ್ಯದಲ್ಲಿ ಅವಿಧೇಯರಾಗಿದ್ದ ಕೊಕ್ಕಾರರು ದಂಗೆ ಎದ್ದು ಪಂಜಾಬಿನ ಗೆಲವು ಜಿಲ್ಲೆಗಳನ್ನು ಕೊಳ್ಳೆಹೊಡೆದರು. ಸುಲ್ತಾನನು ಅವರನ್ನು ಶಿಕ್ಷಿಸಲು ದಂಡೆತ್ತಿ ಬಂದು ಜೀಲಂ ನದಿಯ ಹತ್ತಿರ ಅವರನ್ನು ಸೋಲಿಸಿದನು. ಘೋರಿ ಮಹಮದನು ಕೊಕ್ಕಾರರನ್ನು ಸೋಲಿಸಿದನೇ ಹೊರತು ಅವರನ್ನು ಪೂರ್ಣವಾಗಿ ಹತ್ತಿಕ್ಕಲು ಅವನಿಂದ ಸಾಧ್ಯವಾಗಲಿಲ್ಲ. ಕೊಕ್ಕಾರರ ಮುಖಂಡರು ಅವನ ಪ್ರಾಣವನ್ನು ತೆಗೆದುಕೊಳ್ಳಲು ನಿರ್ಧರಿಸಿದರು. ಸುಲ್ತಾನನು ಲಾಹೋರಿನಿಂದ ಘಸ್ನಿಗೆ ಹೋಗುವ ಮಾರ್ಗದಲ್ಲಿ ದಮ್‌ಯಕ್ ಎಂಬಲ್ಲಿ ಬೀಡು ಬಿಟ್ಟಿದ್ದನು. ಅಲ್ಲಿ ಅವನನ್ನು ಕ್ರಿ.ಶ. 1206ರ ಮಾರ್ಚಿಯಲ್ಲಿ ಕೊಲೆಪಾತಕ ನೊಬ್ಬನು ಚೂರಿಯಿಂದ ಇರಿದು ಕೊಂದುಹಾಕಿದನು.

**ಘೋರಿ ಮಹಮದನ ಸಾಧನೆಗಳು**

ಘೋರಿಮಹಮದನು ಸಾಮ್ರಾಜ್ಯ ನಿರ್ಮಾಪಕನಾಗಿ ಏಷ್ಯಾದ ಇತಿಹಾಸದಲ್ಲಿ ಬಹುಮುಖ್ಯವಾದ ಸ್ಥಾನವನ್ನು ಗಳಿಸಿಕೊಂಡಿದ್ದಾನೆ. ಭಾರತದಂತಹ ವಿಶಾಲ ದೇಶವನ್ನು ತನ್ನ ಸಣ್ಣರಾಜ್ಯವಾಗಿದ್ದ ಘೋರ್ ರಾಜ್ಯದ ಸಾಧನ ಸಂಪತ್ತುಗಳಿಂದಲೇ ಗೆದ್ದು ಅದರ ಮೇಲೆ ತನ್ನ ಅಧಿಕಾರವನ್ನು ಸ್ಥಾಪಿಸಿದುದು ಅವನ ಅಸಾಮಾನ್ಯ ಧೈರ್ಯ ಸಾಹಸಗಳನ್ನು ಮತ್ತು ಮಹತ್ವಾಕಾಂಕ್ಷೆಯನ್ನು ವ್ಯಕ್ತಪಡಿಸುತ್ತದೆ. ಅವನು ಒಂದನೆ ತರೈನ್ ಯುದ್ಧದಲ್ಲಿ ಅಪಜಯ ಹೊಂದಿದರೂ ಅದರಿಂದ ಧೃತಿಗೆಡಲಿಲ್ಲ.

ಅವನು ತನ್ನ ಧ್ಯೇಯಸಾಧನೆಯಲ್ಲಿ ಅತಿಯಾದ ಧೈರ್ಯಸಾಹಸಗಳನ್ನು ವ್ಯಕ್ತಪಡಿಸಿ ಅನೇಕ ಯುದ್ಧಗಳನ್ನು ಮಾಡಿ ಉತ್ತರಭಾರತದ ಮೇಲೆ ತನ್ನ ಅಧಿಕಾರವನ್ನು ಭದ್ರವಾಗಿ ಸ್ಥಾಪಿಸಿದನು.

ಘೋರಿಮಹಮದನು ತನ್ನ ಕಾರ್ಯದಲ್ಲಿ ಧೃಡ ವಿಶ್ವಾಸವುಳ್ಳವನಾಗಿದ್ದನು. ಘಸ್ನಿಮಹಮದ್ ಅಥವ ಅಲ್ಲಾವುದ್ದೀನ್ ಖಿಲ್ಜಿಗಾಗಲೀ ಅವನನ್ನು ಹೋಲಿಸಿದರೆ ಅವನು ಅವರಷ್ಟು ದಕ್ಷ ನಾಯಕನಾಗಿರಲಿಲ್ಲ. ಆದರೆ ಅವನು ತನ್ನ ಪ್ರಯತ್ನದಲ್ಲಿ ವಿಶ್ವಾಸವುಳ್ಳವನಾಗಿದ್ದನು. ಪ್ರಪ್ರಥಮ ಬಾರಿಗೆ ಭಾರತದಲ್ಲಿ ಮುಸ್ಲಿಂ ಸಾಮ್ರಾಜ್ಯವನ್ನು ಸ್ಥಾಪಿಸಿದ ಕೀರ್ತಿಯು ಅವನದಾಗಿದೆ. ಭಾರತದಲ್ಲಿ ಹದಗೆಟ್ಟಿದ್ದ ಆಗಿನ ರಾಜಕೀಯ ಪರಿಸ್ಥಿತಿಯೂ ಕೂಡ ಅವನ ಸಾಮ್ರಾಜ್ಯ ಸ್ಥಾಪನೆಗೆ ಅನುಕೂಲವಾಗಿತ್ತು. ಹಿಂದೆ ಅರಬ್ಬರು ಸಿಂಧ್ ಮೇಲೆ ಮಾಡಿದ ಆಕ್ರಮಣವು ಪ್ರತೀಕಾರ ಕೈಗೊಳ್ಳಲು ಮಾಡಿದುದಾಗಿತ್ತು. ಘಸ್ನಿಮಹಮದನ ದಂಡಯಾತ್ರೆಗಳು ಭಾರತದ ಅಪಾರ ಐಶ್ವರ್ಯವನ್ನು ದೋಚಿಕೊಂಡು ಹೋಗುವುದರಲ್ಲಿ ಪರ್ಯಾವಸಾನವಾದವು. ಅವನಿಗೆ

ಭಾರತದಲ್ಲಿ ರಾಜ್ಯಸ್ಥಾಪನೆ ಮಾಡಬೇಕೆಂಬ ಅಪೇಕ್ಷೆಯೂ ಇರಲಿಲ್ಲ. ಅವನು ಬಿರುಗಾಳಿಯಂತೆ ಬಂದು ಅಪಾರ ಐಶ್ವರ್ಯವನ್ನು ಕೊಳ್ಳೆಹೊಡೆದು ಅದರೊಂದಿಗೆ ಸ್ವದೇಶಕ್ಕೆ ಹಿಂದಿರುಗುತ್ತಿದ್ದನು. ಐಶ್ವರ್ಯವನ್ನು ದೋಚುವುದು ಮತ್ತು ವಿಗ್ರಹಗಳನ್ನು ಒಡೆದುಹಾಕುವುದು ಅವನ ದಂಡಯಾತ್ರೆಗಳ ಮುಖ್ಯ ಉದ್ದೇಶವಾಗಿತ್ತು. ಆದರೆ ಘೋರಿಮಹಮದನು ಭಾರತವನ್ನು ಗೆದ್ದು ಮುಸ್ಲಿಂ ಸಾಮ್ರಾಜ್ಯವನ್ನು ಸ್ಥಾಪಿಸಬೇಕೆಂಬ ದೊಡ್ಡ ಗುರಿಯನ್ನಿಟ್ಟುಕೊಂಡಿದ್ದನು. ಘಸ್ನಿಮಹಮದನಂತೆ ಭಾರತದಲ್ಲಿ ಐಶ್ವರ್ಯವನ್ನು ಕೊಳ್ಳೆ ಹೊಡೆದರೂ ಅದನ್ನು ಪಡೆಯುವುದೇ ಆತನ ಮುಖ್ಯ ಉದ್ದೇಶವಾಗಿರದೆ ರಾಜ್ಯ ಸ್ಥಾಪನೆ ಮಾಡುವುದು ಅವನ ದಂಡಯಾತ್ರೆಯ ಮುಖ್ಯ ಉದ್ದೇಶವಾಗಿತ್ತು. ಆದ್ದರಿಂದ ಅವನು ಭಾರತದಲ್ಲಿ ಗೆದ್ದು ವಶಪಡಿಸಿಕೊಂಡ ಪ್ರದೇಶಗಳಿಗೆ ತನ್ನ ಕಡೆಯ ನಿಷ್ಠಾವಂತ ಗೌವರ್ನರುಗಳನ್ನು ನೇಮಿಸಿ ಅವರಿಗೆ ಸಹಾಯ ಮಾಡುತ್ತಾ ಬಂದನು. ಘೋರಿಮಹಮದನಿಗೆ ಮಕ್ಕಳಿರಲಿಲ್ಲವಾದ್ದರಿಂದ ಭಾರತದಲ್ಲಿ ಸ್ಥಾಪಿಸಿದ ಅವನ ಸಾಮ್ರಾಜ್ಯದ ಭಾಗಕ್ಕೆ ಅವನ ಗುಲಾಮನಾಗಿದ್ದ ಕುತ್ಬುದೀನನು ಉತ್ತರಾಧಿಕಾರಿಯಾದನು.

ಅಧ್ಯಾಯ-18

# ದೆಹಲಿಯ ಸುಲ್ತಾನರು: ಗುಲಾಮಿ ಸಂತತಿ (ಕ್ರಿ.ಶ. 1206-1290)

ಘೋರಿಮಹಮದನು ಕ್ರಿ.ಶ. 1207ರಲ್ಲಿ ಕಾಲವಾದನು. ಇವನಿಗೆ ಗಂಡು ಮಕ್ಕಳಿರಲಿಲ್ಲ. ಒಂದು ಸಂದರ್ಭದಲ್ಲಿ ಸುಲ್ತಾನನ ವಿಶ್ವಾಸ ಪಾತ್ರನಾದವನೊಬ್ಬನು ನಿಮ್ಮ ತರುವಾಯ ಅಧಿಕಾರಕ್ಕೆ ಬರಲು ಗಂಡುಮಕ್ಕಳಿಲ್ಲವಲ್ಲ ಎಂದು ಕೇಳಿದನಂತೆ? ಆದಕ್ಕೆ ಸುಲ್ತಾನನು ಉತ್ತರವಾಗಿ "ಇತರ ರಾಜರುಗಳಿಗೆ ಒಬ್ಬ ಅಥವಾ ಇಬ್ಬರು ಗಂಡು ಮಕ್ಕಳಿರಬಹುದು. ನನಗಾದರೋ ಸಹಸ್ರಾರು ಮಕ್ಕಳಿದ್ದಾರೆ. ಅವರೆಂದರೆ ಟರ್ಕಿಯ ಗುಲಾಮರು. ಅವರು ನನ್ನ ಸಾಮ್ರಾಜ್ಯದ ಉತ್ತರಾಧಿಕಾರಿಗಳಾಗುವರು."ಮಹಮದನು ಕಾಲವಾದ ಮೇಲೆ ಅವನ ಸಾಮ್ರಾಜ್ಯವು ಅನೇಕ ಭಾಗಗಳಾಗಿ ಒಡೆಯಲ್ಪಟ್ಟಿತು. ಘೋರ್ ಪ್ರಾಂತ್ಯಕ್ಕೆ ಅವನ ಅಣ್ಣನ ಮಕ್ಕಳಲ್ಲೊಬ್ಬನು ಉತ್ತರಾಧಿಕಾರಿಯಾದನು. ಸಿಂಧ್ ಭಾಗಕ್ಕೆ ನಾಸಿರುದ್ದೀನ್ ಎಂಬ ಮತ್ತೊಬ್ಬ ಗುಲಾಮನು ಒಡೆಯನಾದನು. ಮಹಮದನ ಗುಲಾಮರಲ್ಲೆಲ್ಲಾ ಅತ್ಯಂತ ಪ್ರಬಲನಾದ ಕುತ್ಬುದೀನ್ ಐಬಕನು ದೆಹಲಿಯಲ್ಲಿ ಪ್ರತಿಷ್ಠಿತನಾದನು. ಘೋರಿ ಮಹಮದನ ಮರಣಾನಂತರ ದೆಹಲಿಯು ಭಾರತದಲ್ಲಿ ಮುಸ್ಲಿಮರ ಅಧಿಕಾರದ ಕೇಂದ್ರವಾಯಿತು ಮತ್ತು ಭಾರತದಲ್ಲಿ ಸುಲ್ತಾನರ ಆಳ್ವಿಕೆಯು ಪ್ರಾರಂಭವಾಯಿತು. ಕ್ರಿ.ಶ. ಹದಿಮೂರನೆ ಶತಮಾನದಲ್ಲಿ ಭಾರತವನ್ನಾಳಿದ ಟರ್ಕಿ ಸುಲ್ತಾನರುಗಳಲ್ಲಿ ಕುತ್ಬುದೀನ್ ಐಬಕ್, ಇಲ್ತಮಷ್ ಮತ್ತು ಘಿಯಾಸುದ್ದೀನ್ ಬಲ್ಬನ್ನರು ಮೊದಲಿಗೆ ಗುಲಾಮರಾಗಿದ್ದುದರಿಂದ ಈ ಸಂತತಿಯವರಿಗೆ ಗುಲಾಮಿಸಂತತಿ ಎಂಬ ಹೆಸರು ಬಂದಿತು.

**ಕುತ್ಬುದ್ದೀನ್ ಐಬಕ್** (ಕ್ರಿ.ಶ. 1206-1210)

ಘೋರಿಮಹಮದನು ಕಾಲವಾದ ಮೇಲೆ ಕುತ್ಬುದ್ದೀನನು ಸ್ವತಂತ್ರರಾಜನಾಗಿ ನಾಲ್ಕು ವರ್ಷಗಳ ಕಾಲ ಭಾರತದಲ್ಲಿ ರಾಜ್ಯವಾಳಿದನು. ಕುತ್ಬುದ್ದೀನನ ಚಿಕ್ಕಂದಿನ ಜೀವನವು ಕಷ್ಟದಾಯಕವಾಗಿತ್ತು. ಅವನ ತಂದೆ ತಾಯಿಗಳು ತುರ್ಕಿಸ್ತಾನದ ನಿವಾಸಿಗಳಾಗಿದ್ದರು. ಅವನನ್ನು ನಿಶಾಪುರದ ಖಾಜಿಫಕ್ರುದ್ದೀನ್ ಅಬ್ದುಲ್ ಆಜೀಜ್ ಎಂಬವನು ಕೊಂಡುಕೊಂಡಿದ್ದನು. ಕುತ್ಬುದ್ದೀನನ ಬುದ್ಧಿವಂತಿಕೆ ಮತ್ತು ಒಳ್ಳೆಯ ನಡತೆಗಳನ್ನು ಮೆಚ್ಚಿಕೊಂಡ ಖಾಜಿಯು ಅವನಿಗೆ ವಿದ್ಯಾಭ್ಯಾಸ ಕೊಡಿಸಿದನು. ತರುವಾಯ ಖಾಜಿಯು ಅವನನ್ನು ಘೋರಿಮಹಮದನಿಗೆ ಮಾರಿದನು. ಕುತ್ಬುದ್ದೀನನು

ಅಸಾಮಾನ್ಯ ಧೈರ್ಯಶಾಲಿಯಾಗಿದ್ದನು. ಇದರಿಂದಾಗಿ ಅವನು ಮಹಮದನ ಪ್ರೀತಿ ವಿಶ್ವಾಸಗಳಿಗೆ ಬಹುಜಾಗ್ರತೆ ಪಾತ್ರನಾಗಿ ಅಧಿಕಾರದ ಮೆಟ್ಟಲೇರಿದನು. ಮಹಮದನು ಮೊದಲಿಗೆ ಅವನನ್ನು ಕುದುರೆಲಾಯದ ಮುಖ್ಯಾಧಿಕಾರಿಯನ್ನಾಗಿ ನೇಮಿಸಿದನು. ಘೋರಿಮಹಮದನು ಭಾರತದ ಮೇಲೆ ಕೈಗೊಂಡ ದಂಡಯಾತ್ರೆಗಳಲ್ಲಿ ಕುತ್ಬುದೀನನು ನಿಷ್ಠೆಯಿಂದ ಸೇವೆಸಲ್ಲಿಸಿದನು. ಕುತ್ಬುದ್ದೀನನ ಸೇವೆಯನ್ನು ಮೆಚ್ಚಿಕೊಂಡ ಮಹಮದನು ತಾನು ಭಾರತದಲ್ಲಿ ಗೆದ್ದು ವಶಪಡಿಸಿಕೊಂಡಿದ್ದ ಪ್ರದೇಶಗಳಿಗೆಲ್ಲಾ ಅವನನ್ನೇ ತನ್ನ ಪ್ರತಿನಿಧಿಯನ್ನಾಗಿ ನೇಮಿಸಿದನು. ಅವನು ಭಾರತದಲ್ಲಿ ರಾಜ್ಯಪಾಲನಾಗಿ ನೇಮಕಗೊಂಡ ಮೇಲೆ ಕೆಲವು ವಿಜಯಗಳನ್ನು ಗಳಿಸಿ ರಾಜ್ಯವನ್ನು ವಿಸ್ತರಿಸಿದನು. ವೈವಾಹಿಕ ಸಂಬಂಧಗಳಿಂದ ತನ್ನ ಸ್ಥಾನವನ್ನು ಬಲಪಡಿಸಿಕೊಂಡನು. ತಾಜುದ್ದೀನ್‌ನ ಮಗಳನ್ನು ವಿವಾಹವಾದನು. ತನ್ನ ಸಹೋದರಿಯನ್ನು ನಾಸಿರುದ್ದೀನ್‌ನಿಗೆ ಕೊಟ್ಟು ವಿವಾಹ ಮಾಡಿದನು. ಅಂತೆಯೆ ತನ್ನ ಗುಲಾಮರಲ್ಲೊಬ್ಬನಾಗಿದ್ದ ಇಲ್ತಮಷ್‌ನಿಗೆ ತನ್ನ ಮಗಳನ್ನು ಕೊಟ್ಟು ವಿವಾಹಮಾಡಿದನು.

**ಕುತ್ಬುದ್ದೀನನ ವಿಜಯಗಳು**

ಕುತ್ಬುದ್ದೀನನು ರಾಜ್ಯಪಾಲನಾಗಿ ಮತ್ತು ಸುಲ್ತಾನನಾಗಿ ಭಾರತದಲ್ಲಿ ಕೆಲವು ವಿಜಯಗಳನ್ನು ಗಳಿಸಿ ಮುಸ್ಲಿಂ ರಾಜ್ಯಸ್ಥಾಪನೆಗೆ ಕಾರಣನಾದನು. ಹನ್ಸಿ, ಮೀರತ್, ದೆಹಲಿ, ರಣ್ಥಂಬೂರು ಮತ್ತು ಕೋಲ್ ಅಲೀಘರ್‌ಗಳನ್ನು ಗೆದ್ದು ವಶಪಡಿಸಿಕೊಂಡು ಬೆನಾರಿಸ್ಸಿನವರೆಗೂ ರಾಜ್ಯವನ್ನು ವಿಸ್ತರಿಸಿದನು. 1202ರಲ್ಲಿ ಕಾಲಿಂಜರ್ ಕೋಟೆಯ ಮೇಲೆ ದಂಡೆತ್ತಿ ಹೋಗಿ ಅದನ್ನು ವಶಪಡಿಸಿಕೊಂಡನು ಮತ್ತು ಅಲ್ಲಿದ್ದ ಅಪಾರ ಐಶ್ವರ್ಯವು ಅವನ ಕೈಸೇರಿತು. ಅನಂತರ ಮಹೋಬವನ್ನು ವಶಪಡಿಸಿಕೊಂಡನು. ಬಿಹಾರ ಮತ್ತು ಬಂಗಾಳಗಳನ್ನು ಇಕ್ತಿಯಾರ್ ಉದ್ದೀನ್ ಭಕ್ತಿಯಾರ್ ಖಿಲ್ಜಿಯು ವಶಪಡಿಸಿಕೊಂಡಿದ್ದು ಕುತ್ಬುದ್ದೀನನನ ಪರಮಾಧಿಕಾರವನ್ನು ಒಪ್ಪಿಕೊಂಡಿದ್ದನು. ಕುತ್ಬುದ್ದೀನನು ಅತ್ಯಲ್ಪಕಾಲ ರಾಜ್ಯವಾಳಿದರೂ ಅವನು ಸಾಯುವ ವೇಳೆಗೆ ತನ್ನ ಅಧಿಕಾರದ ಪ್ರಭಾವವನ್ನು ಸಿಂಧ್ ಮತ್ತು ಪಂಜಾಬುಗಳಿಂದ ಹಿಡಿದು ಪಶ್ಚಿಮ ಬಂಗಾಳದವರೆಗೂ ವಿಸ್ತರಿಸಿದ್ದನು.

ಕುತ್ಬುದ್ದೀನನು ಉದಾರತೆಗೂ ಮತ್ತು ದಾನಧರ್ಮಕ್ಕೂ ಹೆಸರುವಾಸಿಯಾಗಿದ್ದನು. ಅವನನ್ನು ಲಕ್‌ಭಕ್ಷ (Lakh baksh) ಅಥವ ಲಕ್ಷವನ್ನು ಕೊಡುವವನು ಎಂದು ಅನೇಕರು ಪ್ರಶಂಸೆ ಮಾಡಿದ್ದಾರೆ. ಕುತ್ಬುದ್ದೀನನು ಕಟ್ಟಡಗಳ ನಿರ್ಮಾಣದಲ್ಲೂ ಆಸಕ್ತಿ ಹೊಂದಿದ್ದನು. ದೆಹಲಿಯಲ್ಲಿರುವ ಇತಿಹಾಸ ಪ್ರಸಿದ್ಧ ಕುತುಬ್‌ಮಿನಾರ್ ಕಟ್ಟಡದ ನಿರ್ಮಾಣಕಾರ್ಯವು ಇವನ ಕಾಲದಲ್ಲಿ ಪ್ರಾರಂಭವಾಯಿತು. ಈ ಕಟ್ಟಡವು ಆ ಕಾಲದ ಪ್ರಸಿದ್ಧ ಮುಸ್ಲಿಂಸಂತನಾಗಿದ್ದ ಖವಾಜ ಕುತ್ಬುದ್ದೀನನ ಜ್ಞಾಪಕಾರ್ಥವಾಗಿ ನಿರ್ಮಿಸಿದುದಾಗಿತ್ತು. ಈ ಕಟ್ಟಡವೇ ಅಲ್ಲದೆ ಕುತ್ಬುದ್ದೀನನು ದೆಹಲಿ ಮತ್ತು ಅಜ್ಮೀರ್‌ಗಳಲ್ಲಿ ಎರಡು ಮಸೀದಿಗಳನ್ನು ಕಟ್ಟಿಸಿದನು.

ಕುತ್ಬುದ್ದೀನನು ಒಳ್ಳೆಯ ಆಡಳಿತಗಾರನೂ ಆಗಿದ್ದನು. ರಾಜ್ಯದಲ್ಲಿ ಶಾಂತಿ ವ್ಯವಸ್ಥೆಗಳನ್ನೇರ್ಪಡಿಸಲು ಬಹಳವಾಗಿ ಶ್ರಮಿಸಿದನು. ರಾಜಮಾರ್ಗದಲ್ಲಿ ನಡೆಯುತ್ತಿದ್ದ ದರೋಡೆಗಳನ್ನು ನಿಲ್ಲಿಸಲು ಕ್ರಮ ಕೈಗೊಂಡಿದ್ದನು. ಯುದ್ಧದಲ್ಲಿ ಸೆರೆಹಿಡಿಯಲ್ಪಟ್ಟ

ಸಹಸ್ರಾರು ಹಿಂದುಗಳನ್ನು ಗುಲಾಮರನ್ನಾಗಿ ಮಾಡಿದನು. ನ್ಯಾಯ ವಿಚಕ್ಷಣೆಯಲ್ಲಿ ಪಕ್ಷಪಾತವಿಲ್ಲದೆ ನಡೆದುಕೊಳ್ಳುತ್ತಿದ್ದನು. ಕುತ್ಬುದ್ದೀನನು ಒಳ್ಳೆಯ ಕುದುರೆಸವಾರನೂ ಮತ್ತು ಸೈನ್ಯದ ಸಮರ್ಥ ನಾಯಕನೂ ಆಗಿದ್ದನು. ಭಾರತದಲ್ಲಿ ಮುಸಲ್ಮಾನರ ರಾಜ್ಯ ಸ್ಥಾಪನೆಗೆ ಘೋರಿ ಮಹಮದನು ಕಾರಣನಾಗಿದ್ದರೂ ಅದಕ್ಕೆ ಒಂದು ವ್ಯವಸ್ಥಿತರೂಪ ಕೊಟ್ಟವನು ಕುತ್ಬುದ್ದೀನ್ ಐಬಕ್ ಎಂದು ಸರ್ ವೋಲ್ಸೆಹೇಗ್ ಮತ್ತು ಪ್ರೊ. ಹಬೀಬುಲ್ಲಾರವರು ಅಭಿಪ್ರಾಯಪಟ್ಟಿದ್ದಾರೆ. ಕುತ್ಬುದ್ದೀನನು ತನ್ನ ಧರ್ಮದಲ್ಲಿ ಹೆಚ್ಚಿನ ನಿಷ್ಠೆಯುಳ್ಳವನಾಗಿದ್ದನು. ಕುತ್ಬುದ್ದೀನನು ಪೋಲೊ ಆಟವಾಡುತ್ತಿದ್ದಾಗ ಕುದುರೆ ಮೇಲಿಂದ ಬಿದ್ದು ಕ್ರಿ.ಶ. 1210ರಲ್ಲಿ ಕಾಲವಾದನು. ಕುತ್ಬುದ್ದೀನನು ಕಾಲವಾದ ಮೇಲೆ ಅವನ ಮಗನಾದ ಅರಮ್‌ಷಹನು ಕೆಲವು ದಿವಸಗಳು ರಾಜ್ಯವಾಳಿದನು. ಆದರೆ ಅವನನ್ನು ಇಲ್ತಮಷ್‌ನು ಪದಚ್ಯುತಗೊಳಿಸಿ ಕ್ರಿ.ಶ. 1211ರಲ್ಲಿ ದೆಹಲಿಯ ಸಿಂಹಾಸನವನ್ನೇರಿದನು.

**ಇಲ್ತಮಷ್** (ಕ್ರಿ.ಶ. 1211-1236)

ಇಲ್ತಮಷ್‌ನು ಟರ್ಕರ ಒಂದು ಶ್ರೇಷ್ಠ ಬಣವಾಗಿದ್ದ ಇಲ್ಬರಿ ಬಣಕ್ಕೆ ಸೇರಿದವನು. ಇವನು ರೂಪವಂತನೂ ಮತ್ತು ದಕ್ಷನೂ ಆಗಿದ್ದು ಅವನ ತಂದೆಯ ಪ್ರೀತಿ ಪಾತ್ರ ಮಗನಾಗಿದ್ದನು. ಆದರೆ ಅವನ ಸೋದರರು ಅವನ ಬಗ್ಗೆ ಹೊಟ್ಟೆಕಿಚ್ಚುಪಟ್ಟು ಅವನನ್ನು ಗುಲಾಮನನ್ನಾಗಿ ವ್ಯಾಪಾರಿಯೊಬ್ಬನಿಗೆ ಮಾರಿದರು. ತರುವಾಯ ಅವನನ್ನು ಕುತ್ಬುದ್ದೀನನು ಕೊಂಡುಕೊಂಡನು. ಇಲ್ತಮಷ್‌ನು ಕೆಲವು ದಿವಸಗಳಲ್ಲಿಯೆ ತನ್ನ ಪ್ರತಿಭೆ ಮತ್ತು ಸಾಮರ್ಥ್ಯಗಳಿಂದ ತನ್ನ ಒಡೆಯನ ನಂಬಿಕೆ ಮತ್ತು ವಿಶ್ವಾಸಕ್ಕೆ ಪಾತ್ರನಾದನು. ಕುತ್ಬುದ್ದೀನನು ಸುಲ್ತಾನನಾದ ಮೇಲೆ ಅವನನ್ನು ಬದಾವನ್ ಪ್ರಾಂತ್ಯಕ್ಕೆ ರಾಜ್ಯಪಾಲನನ್ನಾಗಿ ನೇಮಿಸಿದನು ಮತ್ತು ಅವನಿಗೆ ತನ್ನ ಮಗಳನ್ನು ಕೊಟ್ಟು ವಿವಾಹಮಾಡಿದನು. ಬದಾವನ್‌ನಿನ ರಾಜ್ಯಪಾಲನಾಗಿ ಗಹಡವಾಲರು ಮೊದಲಾದವರೊಂದಿಗೆ ಮಾಡಿದ ಹೋರಾಟಗಳಲ್ಲಿ ತನ್ನ ಶೌರ್ಯ ಸಾಹಸಗಳನ್ನು ಪ್ರದರ್ಶಿಸಿ ದಹಲಿಯ ನೋಬಲ್ಲರ ಮೆಚ್ಚಿಗೆ ಗಳಿಸಿಕೊಂಡನು ಮತ್ತು ಅವರು ಅವನನ್ನು ಕುತ್ಬುದ್ದೀನನ ಉತ್ತರಾಧಿಕಾರಿಯಾಗಿ ನೇಮಿಸಬೇಕೆಂದು ನಿರ್ಧರಿಸಿದರು. ಅಂತೆಯೆ ಕುತ್ಬುದ್ದೀನನ ಮರಣಾನಂತರ ದೆಹಲಿಯ ಸಿಂಹಾಸನವನ್ನೇರಲು ಎಲ್ಲ ರೀತಿಯ ಸಹಕಾರವನ್ನೂ ನೀಡಿದರು. ಅವರ ನಿರ್ಧಾರವು ಸರಿಯಾಗಿದ್ದಿತು.

ಕುತ್ಬುದ್ದೀನನ ಮರಣಾನಂತರ ದೆಹಲಿಯ ಸಿಂಹಾಸನವನ್ನೇರಿದ ಇಲ್ಲಮಷ್‌ನಿಗೆ ದೆಹಲಿಯ ಸಿಂಹಾಸನವು ಹೂವಿನ ಸುಪ್ಪತ್ತಿಗೆಯಾಗಿರಲಿಲ್ಲ. ಅವನು ಹಲವಾರು ಭೀಕರ ಸಮಸ್ಯೆಗಳನ್ನು ಎದುರಿಸಬೇಕಾಗಿತ್ತು. ಅವನು ಬದಾವನ್‌ನಿಂದ ದೆಹಲಿಗೆ ಹಿಂದಿರುಗಿ ಬಂದಮೇಲೆ ಗಹಡವಾಲರು ಪುನಃ ದಂಗೆಯೆದ್ದರು. ಅಂತೆಯೆ ದೆಹಲಿಯಲ್ಲಿನ ಕೆಲವು ಟರ್ಕಿ ಅಮೀರರು ಅವನನ್ನು ಸುಲ್ತಾನನನ್ನಾಗಿ ಒಪ್ಪಿಕೊಳ್ಳಲು ಸಿದ್ಧರಿರಲಿಲ್ಲ. ಸಾಮ್ರಾಜ್ಯದ ಪೂರ್ವ ಪಶ್ಚಿಮ ಮತ್ತು ದಕ್ಷಿಣದಲ್ಲಿ ಕೆಲವು ಭಾಗಗಳು ದೆಹಲಿಯ ಅಧಿಕಾರವನ್ನು ಅಲಕ್ಷಿಸಿದ್ದವು. ನಾಸಿರುದ್ದೀನನು ಸಿಂಧ್‌ನಲ್ಲಿ ದಂಗೆಯೆದ್ದು ಪಂಜಾಬನ್ನು ವಶಪಡಿಸಿಕೊಳ್ಳಲು ಸೈನ್ಯಸಮೇತ ಲಾಹೋರಿಗೆ ಬಂದನು. ಕ್ರಿ.ಶ.

1212ರಲ್ಲಿ ಇಲ್ತುಮಷನು ಅವನ ವಿರುದ್ಧ ದಂಡೆತ್ತಿ ಹೋಗಿ ಅವನನ್ನು ಲಾಹೋರಿನಿಂದ ಓಡಿಸಿದನು. ಘಸ್ನಿಯ ರಾಜನಾಗಿದ್ದ ತಾಜುದ್ದೀನನು ಭಾರತದಲ್ಲಿ ಟರ್ಕರು ಸ್ಥಾಪಿಸಿದ್ದ ರಾಜ್ಯಕ್ಕೆ ತಾನು ಸಾರ್ವಭೌಮನಾಗಬೇಕೆಂದು ಬಯಸಿ ಪಂಜಾಬಿನ ಮೇಲೆ ದಂಡೆತ್ತಿ ಬಂದು ಅದನ್ನು ವಶಪಡಿಸಿಕೊಂಡನು. ಕ್ರಿ.ಶ. 1216ರಲ್ಲಿ ಇಲ್ತುಮಷ್‌ನು ಅವನನ್ನು ಸೋಲಿಸಿ ಸೆರೆಮನೆಯಲ್ಲಿಟ್ಟನು. ಗ್ವಾಲಿಯರ್ ಮತ್ತು ರಣತಂಬೂರ್ ಕೋಟೆಗಳನ್ನು ಅಲ್ಲಿನ ಹಿಂದೂ ಮುಖಂಡರುಗಳು ಪುನಃ ವಶಪಡಿಸಿಕೊಂಡಿದ್ದರು. ಇದೇ ರೀತಿಯಲ್ಲಿ ಬಿಹಾರ ಮತ್ತು ಬಂಗಾಳ ಪ್ರಾಂತ್ಯಕ್ಕೆ ರಾಜ್ಯಪಾಲನಾಗಿದ್ದ ಅಲಿಮರ್ದನ್ ಎಂಬವನು ಸ್ವತಂತ್ರ ರಾಜನೆಂದು ಘೋಷಿಸಿಕೊಂಡು ದೆಹಲಿಯ ಅಧಿಕಾರವನ್ನು ಧಿಕ್ಕರಿಸಿದನು. ಇವುಗಳಲ್ಲದೆ ಇಲ್ತುಮಷ್‌ನು ಕೆಲವು ವೈಯಕ್ತಿಕ ಸಮಸ್ಯೆಗಳನ್ನೂ ಎದುರಿಸಬೇಕಾಗಿತ್ತು. ಗುಲಾಮನ ಗುಲಾಮನಾಗಿದ್ದ ಇಲ್ತುಮಷ್‌ನಿಗೆ ಸ್ವತಂತ್ರ ಪ್ರಜೆಗಳಾಗಿ ಹುಟ್ಟಿದ ಕೆಲವು ಟರ್ಕರು ವಿದೇಯತೆ ತೋರಿಸುವುದು ತಮಗೆ ಅಪಮಾನವೆಂದು ಭಾವಿಸಿ ಅಗೌರವ ತೋರಿಸುತ್ತಿದ್ದರು. ಇದಲ್ಲದೆ ಅವರಲ್ಲಿ ಕೆಲವರು ಅಂತಸ್ತಿನಲ್ಲಿ ಅವನಿಗೆ ಸಮನಾಗಿದ್ದರು. ಇವರೆಲ್ಲರನ್ನೂ ತನ್ನ ಅಧಿಕಾಞಕ್ಕೆ ಒಳಪಡಿಸಿಕೊಳ್ಳುವುದು ಇಲ್ತುಮಷ್‌ನಿಗೆ ಬಹಳ ಸಾಹಸದ ಕೆಲಸವೇ ಆಗಿತ್ತು. ಈ ಎಲ್ಲ ಪರಿಸ್ಥಿತಿಯನ್ನು ಸೂಕ್ಷ್ಮವಾಗಿ ವಿಮರ್ಶಿಸಿದಾಗ ಕುತ್ಬುದ್ದೀನನ ಮರಣಾನಂತರ ಟರ್ಕರ ಸಾಮ್ರಾಜ್ಯವು ಪೂರ್ಣವಾಗಿ ಒಡೆದು ಹೋಗುವುದರಲ್ಲಿತ್ತೆಂಬುದು ಸ್ಪಷ್ಟವಾಗುತ್ತದೆ. ಆದರೆ ಅದೃಷ್ಟವಶಾತ್ ಇಲ್ತುಮಷ್‌ನಲ್ಲಿ ಅಸಮಾನ್ಯ ಧೈರ್ಯಸ್ಥೈರ್ಯಗಳೂ, ರಾಜಕೀಯ ಚಾಣಾಕ್ಷತನವೂ ಮತ್ತು ಬುದ್ಧಿವಂತಿಕೆಯೂ ಇದ್ದುದರಿಂದ ಸಮಸ್ಯೆಗಳೆಲ್ಲವನ್ನೂ ಎದುರಿಸಿ ದೆಹಲಿಯಲ್ಲಿ ಸುಲ್ತಾನರ ಆಳ್ವಿಕೆಯನ್ನು ಭದ್ರಪಡಿಸಿದನು.

**ದಂಗೆಗಳನ್ನು ಅಡಗಿಸಿದುದು**

ಇಲ್ತುಮಷ್‌ನು ಮೊದಲಿಗೆ ದೆಹಲಿ ಮತ್ತು ಅದರ ಸುತ್ತಮುತ್ತಲೂ ಇದ್ದ ತನ್ನ ವಿರೋಧಿಗಳಾದ ಟರ್ಕರ ಮತ್ತು ಹಿಂದುಗಳ ಮುಖಂಡರನ್ನು ಸೋಲಿಸಿ ಅವರನ್ನು ತನ್ನ ಅಂಕೆಗೊಳಪಡಿಸಿಕೊಂಡನು. ಅನಂತರ ಅವನು ತನ್ನ ಇತರ ಶತ್ರುಗಳ ಕಡೆ ಗಮನವನ್ನು ಹರಿಸಿದನು. ಘೋರಿಮಹಮದನ ಮರಣಾನಂತರ ಘಸ್ನಿ ರಾಜ್ಯಕ್ಕೆ ರಾಜನಾಗಿದ್ದ ತಾಜುದ್ದೀನನು ದೆಹಲಿಗೂ ತಾನು ರಾಜನಾಗಬೇಕೆಂದು ಬಯಸಿ ಕ್ರಿ.ಶ. 1216ರಲ್ಲಿ ದಂಡೆತ್ತಿ ಬಂದು ಪಂಜಾಬನ್ನು ವಶಪಡಿಸಿಕೊಂಡನು. ತನ್ನ ಸಾಮ್ರಾಜ್ಯದ ಪಶ್ಚಿಮದ ಗಡಿಗೆ ಸಮೀಪದಲ್ಲಿ ಪ್ರಬಲ ಪ್ರತಿಸ್ಪರ್ಧಿಯೊಬ್ಬನು ಅಧಿಕಾರವನ್ನು ಹೊಂದಿರುವುದು ತನಗೆ ಅಪಾಯವೆಂದು ತಿಳಿದ ಇಲ್ತುಮಷ್‌ನು ಅವನ ಮೇಲೆ ದಂಡೆತ್ತಿ ಹೋಗಿ ಕ್ರಿ.ಶ. 1216ರಲ್ಲಿ ಅವನನ್ನು ಸೋಲಿಸಿ ಸೆರೆಮನೆಯಲ್ಲಿಟ್ಟು ಕೊಲ್ಲಿಸಿದನು. ಅನಂತರ ಘೋರಿ ಮಹಮದನ ಮತ್ತೊಬ್ಬ ಗುಲಾಮನೂ ಮತ್ತು ಸಿಂಧ್‌ನ ರಾಜ್ಯಪಾಲನೂ ಆಗಿದ್ದ ನಾಸಿರುದ್ದೀನನು ಪಂಜಾಬನ್ನು ವಶಪಡಿಸಿಕೊಳ್ಳಲು ಪ್ರಯತ್ನಿಸಿದನು. ನಾಸಿರುದ್ದೀನನು ಸೂಕ್ಷ್ಮಮತಿಯಾಗಿದ್ದನು. ಅವನನ್ನು ಘೋರಿ ಮಹಮದನು ಉಚ್ಛದ ರಾಜ್ಯಪಾಲನನ್ನಾಗಿ ನೇಮಿಸಿದ್ದನು. ಅವನು ಅಲ್ಲಿನ ವ್ಯವಹಾರಗಳನ್ನು ಉತ್ತಮ ರೀತಿಯಲ್ಲಿ ನಿರ್ವಹಿಸಿ ಕೆಲವು ಕಾಲದಲ್ಲಿಯೆ ಸರ್ ಹಿಂದ್, ಖುರ್ರಾಮ್ ಮತ್ತು ಸಿರ್‌ಸುಟಿಗಳನ್ನು ಗೆದ್ದು ಸಿಂಧ್ ಪ್ರಾಂತ್ಯಕ್ಕೆ

ಸೇರಿಸಿಕೊಂಡು ತನ್ನ ಅಧಿಕಾರವನ್ನು ವಿಸ್ತರಿಸಿಕೊಂಡನು. ಕುತ್ಬುದ್ದೀನನ ಮರಣಾನಂತರ ಅವನು ಪಂಜಾಬನ್ನು ವಶಪಡಿಸಿಕೊಳ್ಳಲು ಪ್ರಯತ್ನಿಸಿದಾಗ ಇಲ್ತಮಿಷ್‌ನು ಅವನನ್ನು ಸೋಲಿಸಿ ಸಿಂಧ್‌ಗೆ ಹಿಮ್ಮೆಟ್ಟಿಸಿದನು. ಆದರೆ ಕ್ರಿ.ಶ. 1227ರಲ್ಲಿ ನಾಸಿರುದ್ದೀನನು ಪುನಃ ಪಂಜಾಬನ್ನು ವಶಪಡಿಸಿಕೊಳ್ಳಲು ಪ್ರಯತ್ನಿಸಿಬಂದನು. ಇದನ್ನು ತಿಳಿದ ಇಲ್ತಮಷ್‌ನು ಅವನ ವಿರುದ್ಧ ದಂಡೆತ್ತಿ ಹೋದನು. ನಾಸಿರುದ್ದೀನನು ಬಕ್ಕಾರ್ ಕೋಟೆಗೆ ಓಡಿಹೋಗಿ ರಕ್ಷಣೆ ಪಡೆದನು. ಇಲ್ತಮಷ್‌ನು ಬಕ್ಕಾರ್ ಕೋಟೆಯನ್ನು ವಶಪಡಿಸಿಕೊಳ್ಳಲು ಜುನ್ಯೆದಿ ಎಂಬುವನ ನೇತೃತ್ವದಲ್ಲಿ ತನ್ನ ಸೈನ್ಯವನ್ನು ಕಳುಹಿಸಿದನು. ಬಕ್ಕಾರ್ ಕೋಟೆಯಲ್ಲಿದ್ದ ನಾಸಿರುದ್ದೀನನು ಶಾಂತಿ ಒಪ್ಪಂದ ಮಾಡಿಕೊಳ್ಳಲು ಬಯಸಿದನು. ಆದರೆ ಇಲ್ತಮಷ್‌ನು ಅದನ್ನು ನಿರಾಕರಿಸಿದನು. ಇದರಿಂದ ಭೀತಿಗೊಂಡ ನಾಸಿರುದ್ದೀನನು ತನ್ನ ಅಪಾರ ಐಶ್ವರ್ಯದೊಂದಿಗೆ ಪ್ರಾಣವನ್ನುಳಿಸಿಕೊಳ್ಳಲು ಸಿಂಧೂನದಿಯನ್ನು ದೋಣಿಯಲ್ಲಿ ದಾಟುತ್ತಿದ್ದಾಗ ದೋಣಿಯು ಮುಳುಗಿ ಜಲಸಮಾಧಿಯಾದನು. ಸಿಂಧ್ ಪ್ರಾಂತ್ಯವು ದೆಹಲಿ ಸಾಮ್ರಾಜ್ಯದ ಒಂದು ಭಾಗವಾಯಿತು. ಇಲ್ತಮಷ್‌ನು ಅಲ್ಲಿನ ಆಡಳಿತದ ಮೇಲ್ವಿಚಾರಣೆಗೆ ಜುನ್ಯೆದಿಯನ್ನು ನೇಮಿಸಿ ದೆಹಲಿಗೆ ಹಿಂದಿರುಗಿದನು.

**ಬಂಗಾಳದ ವಿಜಯ (1225-1230)**

ಕುತ್ಬುದ್ದೀನನು ಕಾಲವಾದ ಮಾರನೆ ವರ್ಷವೆ ಬಂಗಾಳದ ರಾಜನಾಗಿದ್ದ ಅಲಿಮರ್ದನ್ ತನ್ನ ಸ್ವಾತಂತ್ರ್ಯವನ್ನು ಘೋಷಿಸಿಕೊಂಡನು. ಅವನ ತರುವಾಯ ಘಿಯಾಸುದ್ದೀನ್ ಎಂಬುವನು ಬಂಗಾಳದ ರಾಜನಾದನು. ಕ್ರಿ.ಶ. 1225ರಲ್ಲಿ ಇಲ್ತಮಷ್‌ನು ಬಿಹಾರದ ಮೇಲೆ ಆಕ್ರಮಣ ಮಾಡಿದಾಗ ಘಿಯಾಸುದ್ದೀನನು ಅವನಿಗೆ ಶರಣಾಗತನಾದನು ಮತ್ತು ಅವನಿಗೆ ಅಪಾರ ಹಣವನ್ನು ಕೊಟ್ಟು ಕಳುಹಿಸಿದನು. ಆದರೆ ಇಲ್ತಮಷ್‌ನು ದೆಹಲಿಗೆ ಹಿಂದಿರುಗಿದ ತಕ್ಷಣದಲ್ಲೇ ಘಿಯಾಸುದ್ದೀನನು ಪುನಃ ದಂಗೆಯೆದ್ದು ಬಿಹಾರವನ್ನು ವಶಪಡಿಸಿಕೊಂಡನು. ಇಲ್ತಮಷ್‌ನು ತನ್ನ ಮಗನೂ ಮತ್ತು ಔದ್‌ಪ್ರಾಂತ್ಯದ ರಾಜ್ಯಪಾಲನೂ ಆಗಿದ್ದ ನಾಸಿರುದ್ದೀನ್ ಮಹಮದನನ್ನು ಅವನ ದಂಗೆಯನ್ನಡಗಿಸಲು ಕಳುಹಿಸಿದನು. ನಾಸಿರುದ್ದೀನ್ ಮಹಮದನು ಕ್ರಿ.ಶ. 1227ರಲ್ಲಿ ಸೋಲಿಸಿ ಕೊಂದನು. ತರುವಾಯ ನಾಸಿರುದ್ದೀನನು ಲಕ್ನಾವತಿಯನ್ನು ತನ್ನ ಅಧಿಕಾರದ ಕೇಂದ್ರವನ್ನಾಗಿ ಮಾಡಿಕೊಂಡು ಬಂಗಾಳ ಮತ್ತು ಔಧ್ ಪ್ರಾಂತ್ಯಗಳೆರಡಕ್ಕೂ ರಾಜ್ಯಪಾಲನಾಗಿ ಆಡಳಿತ ನಡೆಸಲಾರಂಭಿಸಿದನು. ಆದರೆ ನಾಸಿರುದ್ದೀನನು ಕ್ರಿ.ಶ. 1229ರಲ್ಲಿ ಹಠಾತ್ತನೆ ಕಾಲವಾದನು. ಅವನು ಕಾಲವಾದ ಮೇಲೆ ಅಲ್ಲಿಯ ಖಿಲ್ಜಿಗಳ ಮುಖಂಡನಾಗಿದ್ದ ಇಕ್ತಿಯಾರ್-ಉದ್ದೀನ್-ಖಿಲ್ಜಿ ಎಂಬವನು ಬಂಗಾಳವನ್ನು ವಶಪಡಿಸಿಕೊಂಡನು. ಇಲ್ತಮಷ್‌ನು ಕ್ರಿ.ಶ. 1230ರಲ್ಲಿ ಸ್ವತಃ ಅಪಾರ ಸೈನ್ಯದೊಂದಿಗೆ ಬಂಗಾಳದ ಮೇಲೆ ದಂಡೆತ್ತಿ ಹೋಗಿ ಅವನನ್ನು ಸೋಲಿಸಿ ಕೊಂದನು. ಇಲ್ತಮಷ್‌ನು ಅಲ್ಲಾವುದ್ದೀನ್ ಜಾನಿ ಎಂಬವನನ್ನು ಬಂಗಾಳದ ರಾಜ್ಯಪಾಲನನ್ನಾಗಿ ನೇಮಿಸಿ ದೆಹಲಿಗೆ ಹಿಂದಿರುಗಿದನು. ಆದರೆ ಕೆಲವು ದಿವಸಗಳಲ್ಲಿಯೆ ಅವನನ್ನು ಅಧಿಕಾರದಿಂದಿಳಿಸಿ ಸೈಪುದ್ದೀನ್ ಎಂಬವನನ್ನು ಬಂಗಾಳದ ರಾಜ್ಯಪಾಲನನ್ನಾಗಿ ನೇಮಿಸಿದನು.

## ಮಗೋಲರ ಧಾಳಿಯ ಭೀತಿ

ಇಲ್ತಮಷ್‌ನು ದೆಹಲಿಯ ಸುಲ್ತಾನನಾಗಿದ್ದಾಗ ಭಾರತದ ಮೇಲೆ ಮಂಗೋಲರ ಪ್ರಥಮ ಧಾಳಿಯು ಆರಂಭವಾಯಿತು. ಇಲ್ತಮಷ್‌ನು ಆಂತರಿಕ ದಂಗೆಗಳನ್ನು ಸಂಪೂರ್ಣವಾಗಿ ಅಡಗಿಸುವಷ್ಟರಲ್ಲಿಯೇ ಅವನು ಮತ್ತೊಂದು ಗಂಡಾಂತರ ಪರಿಸ್ಥಿತಿಯನ್ನು ಎದುರಿಸಬೇಕಾಗಿ ಬಂದಿತು. ಅದೆಂದರೆ ವಾಯುವ್ಯ ಭಾರತದ ಮೇಲೆ ಮಂಗೋಲರ ಧಾಳಿಯ ಬೆದರಿಕೆ. ಮಧ್ಯಏಷ್ಯಾದ ಸ್ಟೆಪ್ಪೀಸ್ ಹುಲ್ಲುಗಾವಲು ಪ್ರದೇಶಗಳಲ್ಲಿದ್ದ ಮಂಗೋಲರ ಬಹಳ ಕ್ರೂರಿಗಳಾಗಿದ್ದರು. ಅವರು ತಮ್ಮ ನಾಯಕ ಚೆಂಗೇಸ್‌ಖಾನನ ನೇತೃತ್ವದಲ್ಲಿ ಪಶ್ಚಿಮ ಏಷ್ಯಾದ ಮುಸಲ್ಮಾನರ ರಾಜ್ಯಗಳನ್ನು ನಾಶಮಾಡಿ ಕ್ರಿ.ಶ.೧೨೨೧ರಲ್ಲಿ ಸಿಂಧ್ ಹತ್ತಿರ ಬಂದರು. ಅವರ ಧಾಳಿಗಳಿಂದ ಸಾಮರ್‌ಖಂಡ್, ಬೋಕಾರ ಮತ್ತು ಬಾಲ್ಕ್ ರಾಜ್ಯಗಳಲ್ಲಿನ ಅನೇಕ ಸುಂದರ ನಗರಗಳು ಹಾಳಾದವು. ಚೆಂಗೇಸ್‌ಖಾನನ ವಿರುದ್ಧ ಹೋರಾಡಲು ಪ್ರಯತ್ನಿಸಿ ವಿಫಲನಾದ ಕೀವ್‌ನ ರಾಜನಾಗಿದ್ದ ಜಲಾಲುದ್ದೀನನು ಪಂಜಾಬಿಗೆ ಓಡಿಬಂದು ಇಲ್ಲಮಷ್‌ನ ಆಶ್ರಯ ಕೇಳಿದನು. ಆದರೆ ಇಲ್ತಮಷ್‌ನು ಅವನಿಗೆ ಆಶ್ರಯ ಕೊಡುವುದರ ಮೂಲಕ ಮಂಗೋಲರಿಂದ ಉಂಟಾಗಬಹುದಾದ ತೊಂದರೆಯನ್ನು ಮನಗಂಡು ಕುಂಟು ನೆಪ ಹೇಳಿ ತಪ್ಪಿಸಿಕೊಂಡನು. ಜಲಾಲುದ್ದೀನನು ಪರ್ಶಿಯಾಕ್ಕೆ ಓಡಿಹೋದನು. ಆದರೆ ಅವನು ಅಲ್ಲಿ ಕೊಲ್ಲಲ್ಪಟ್ಟನು. ಚೆಂಗೇಸ್‌ಖಾನನು ಸಿಂಧ್ ಅನ್ನು ಕೊಳ್ಳೆಹೊಡೆದು ಪರ್ಶಿಯಾದ ಕಡೆ ಹಿಂದಿರುಗಿಹೋದನು. ಹೀಗೆ ಭಾರತಕ್ಕೆ ಮಂಗೋಲರಿಂದ ಒದಗಿಬಂದಿದ್ದ ಮಹಾವಿಪತ್ತನ್ನು ಇಲ್ತಮಷ್‌ನು ತನ್ನ ರಾಜಕೀಯ ಚಾಣಾಕ್ಷತನದಿಂದ ಸದ್ಯಕ್ಕೆ ತಪ್ಪಿಸಿ ಟರ್ಕರ ಅಧಿಕಾರವನ್ನು ಭಾರತದಲ್ಲಿ ರಕ್ಷಿಸಿದನು.

## ಸಾಮ್ರಾಜ್ಯ ವಿಸ್ತರಣೆ

ಇಲ್ತಮಷ್‌ನು ಮಂಗೋಲರ ಧಾಳಿಯ ಅಪಾಯದಿಂದ ಪಾರಾದ ನಂತರ ತನ್ನ ಆಂತರಿಕ ಶತ್ರುಗಳನ್ನು ಅಡಗಿಸಿ ಸಾಮ್ರಾಜ್ಯ ವಿಸ್ತರಣೆಯ ಕಡೆ ತನ್ನ ಗಮನಹರಿಸಿದನು. ಅವನು 1226ರಲ್ಲಿ ರಣತಂಬೂರಿನ ಮೇಲೂ 1227ರಲ್ಲಿ ಮಂಡೋರ್ ಮೇಲೂ ಆಕ್ರಮಣ ಮಾಡಿ ಅವುಗಳನ್ನು ವಶಪಡಿಸಿಕೊಂಡನು. ತರುವಾಯ ಜಾಲೋರ್, ಅಜ್ಮೀರ್, ಬಯಾನ ಮತ್ತು ಸಂಬಾರ್‌ಗಳನ್ನು ಗೆದ್ದುವಶಪಡಿಸಿಕೊಂಡನು. 1231ರಲ್ಲಿ ಗ್ವಾಲಿಯರ್‌ಗೆ ಮುತ್ತಿಗೆ ಹಾಕಿ ಅದನ್ನು ವಶಪಡಿಸಿಕೊಂಡನು. 1234ರಲ್ಲಿ ಮಾಳವದ ಮೇಲೆ ದಂಡೆತ್ತಿಹೋಗಿ ಭಿಲ್ಸ ಮತ್ತು ಉಜ್ಜೈನಿಗಳನ್ನು ತನ್ನ ಅಧೀನಕ್ಕೊಳಪಡಿಸಿ ಕೊಂಡನು. ಉಪ್ಪಿನ ಶ್ರೇಣಿ ಪ್ರದೇಶದಲ್ಲಿ ಮಾಡಿದ ದಂಡಯಾತ್ರೆಯು ಅವನ ಕಟ್ಟಕಡೆಯ ದಂಡಯಾತ್ರೆಗಿತ್ತು.

## ಖಲೀಫನಿಂದ ಮನ್ನಣೆ

ಇಲ್ತಮಷ್‌ನು ಹಲವಾರು ಯುದ್ಧಗಳನ್ನು ಮಾಡಿ ಭಾರತದಲ್ಲಿ ಮುಲ್ಮಾನರ ಅಧಿಕಾರವನ್ನು ಭದ್ರವಾಗಿ ನೆಲೆಗೊಳಿಸಿದರೂ ಕೆಲವು ಸಂಪ್ರದಾಯ ಶರಣ ಮುಸ್ಲಿಮರು ಅವನನ್ನು ತಮ್ಮ ಸುಲ್ತಾನನೆಂದು ಒಪ್ಪಿಕೊಳ್ಳಲು ನಿರಾಕರಿಸಿದ್ದರು. ಮುಸ್ಲಿಂ ಪ್ರಪಂಚಕ್ಕೆ ಖಲೀಫನಲ್ಲದೆ ಬೇರೆ ಯಾರೂ ಮುಖ್ಯಸ್ಥನಲ್ಲವೆಂದು ಭಾವಿಸಿದ್ದ ಅವರು ಖಲೀಫನಿಂದ

ಮನ್ನಣೆ ಪಡೆಯದ ಯಾವ ವ್ಯಕ್ತಿಗೂ ರಾಜ್ಯವಾಳಲು ಹಕ್ಕಿಲ್ಲವೆಂದು ಹೇಳುತ್ತಿದ್ದರು. ಕ್ರಿ.ಶ. 1228ರಲ್ಲಿ ಬಾಗ್ದಾದಿನ ಖಲೀಫನೂ ಮತ್ತು ಇಸ್ಲಾಂ ಧರ್ಮದ ಮುಖ್ಯಗುರುವೂ ಆಗಿದ್ದ ಅಲ್-ಮುಸ್ತಾನ್‌ಸಿರ್ ಬಿಲ್ಲಾನು, ಇಲ್ಲಮಷ್‌ನ ಅಧಿಕಾರಕ್ಕೆ ಅಧಿಕೃತಮನ್ನಣೆ ನೀಡಿ ಉಡುಗೊರೆಗಳೊಂದಿಗೆ ತನ್ನ ರಾಯಭಾರಿಯೊಬ್ಬನನ್ನು ಕಳುಹಿಸಿಕೊಟ್ಟನು. ಈ ಮನ್ನಣೆಯು ಇಲ್ತಮಷ್‌ನ ಅಧಿಕಾರವನ್ನು ನ್ಯಾಯಬದ್ಧಗೊಳಿಸಿತ್ತು ಮತ್ತು ಅವನ ಹುಟ್ಟನ್ನು ಕುರಿತಂತೆ ಸಿಂಹಾಸನಕ್ಕೆ ಅವನಿಗಿರುವ ಹಕ್ಕನ್ನು ಕುರಿತು ಪ್ರಶ್ನಿಸುತ್ತಿದ್ದವರನ್ನು ಬಾಯಿಮುಚ್ಚಿಕೊಳ್ಳುವಂತೆ ಮಾಡಿತು. ಇಲ್ತಮಷ್‌ನು ಚಲಾವಣೆಗೆ ತಂದ ನಾಣ್ಯಗಳ ಮೇಲೆ ಖಲೀಫನ ಹೆಸರನ್ನು ಅಚ್ಚುಹಾಕಿಸಿದನು. ಭಾರತದಲ್ಲಿ ಅವನ ಸಾಧನೆಗಳನ್ನು ಮೆಚ್ಚಿಕೊಂಡ ಖಲೀಫನು ಅವನನ್ನು ದೆಹಲಿಯ ಸುಲ್ತಾನನೆಂದು ಘೋಷಿಸಿ ಅವನಿಗೆ ನಾಸಿರ್-ಅಮೀರ್-ಉಲ್-ಮೊಮಿನಿನ್ (ಧರ್ಮದ ನಾಯಕನಿಗೆ ಸಹಾಯ ಮಾಡಿದವನು) ಎಂಬ ಬಿರುದನ್ನು ನೀಡಿದನು. ಇದರಿಂದ ಇಲ್ತಮಷ್‌ನ ಗೌರವ ಪ್ರತಿಷ್ಠೆಗಳು ಮತ್ತಷ್ಟು ಹೆಚ್ಚಿದವು. ಇಲ್ತಮಷ್‌ನು ಖಲೀಫನಿಂದ ಸುಲ್ತಾನನೆಂದು ಅಧಿಕೃತವಾಗಿ ಮನ್ನಣೆ ಪಡೆದಿದ್ದರಿಂದ ಅವನು ದೆಹಲಿಯ ಸುಲ್ತಾನರ ಆಳ್ವಿಕೆಯ ನಿಜವಾದ ಸ್ಥಾಪಕನೆಂದು ಪರಿಗಣಿಸಲ್ಪಟ್ಟನು.

ಇಲ್ತಮಷ್ ಸುಲ್ತಾನನಾದ ಮೇಲೆ ತನ್ನ ಸ್ಥಾನಮಾನಗಳನ್ನು ಭದ್ರಪಡಿಸಿ ಕೊಳ್ಳಲು ಇನ್ನೂ ಕೆಲವು ಕ್ರಮಗಳನ್ನು ಕೈಗೊಂಡನು. ಅವನು ಅಧಿಕೃತವಾಗಿ ಸಿಂಹಾಸನವನ್ನೇರಿದ ಮೇಲೂ ಕುತ್ಬಿ ಮತ್ತು ಮುಯಿಜಿ ಅಮೀರರಲ್ಲನೇಕರು ತನ್ನ ಅಧಿಕಾರವನ್ನು ಒಪ್ಪಿಕೊಳ್ಳಲು ಸಿದ್ಧರಿಲ್ಲವೆಂದು ಮನಗಂಡನು. ಅವರ ವಿರುದ್ಧ ಕ್ರಮಗಳನ್ನು ಕೈಗೊಂಡನು. ಅವನು ತನ್ನ ಕಡೆಯವರಿಗೆ ಸರ್ಕಾರದ ಹುದ್ದೆಗಳನ್ನು ಕೊಟ್ಟು ಅವರನ್ನು ತನಗೆ ಸಂಪೂರ್ಣವಾಗಿ ವಿಧೇಯರನ್ನಾಗಿ ಮಾಡಿಕೊಂಡು ತನಗೆ ವಿರೋಧಿಗಳಾದ ಕುತ್ಬಿ ಮತ್ತು ಮುಯಿಜಿ ಅಮೀರರನ್ನು ಅಧಿಕಾರಗಳಿಂದ ತೆಗೆದುಹಾಕಿ ಅವರ ಮುಖಂಡರನ್ನು ಕೊಲ್ಲಿಸಿದನು. ಅವನು ಕೈಗೊಂಡ ಈ ಕ್ರಮದಿಂದ ಇತರ ನೋಬಲ್ಲರು ತಾವಾಗಿಯೇ ಅವನಿಗೆ ಶರಣಾಗತರಾದ್ದರು. ಇಲ್ತಮಷ್‌ನು ತನ್ನ ಕಡೆಯವರಿಗೆ ಬಹು ಜಾಗ್ರತೆ ಬಡ್ತಿ ನೀಡುವ ವ್ಯವಸ್ಥೆ ಮಾಡಿ ಅವರ ಪ್ರೀತ್ಯಾದರಗಳನ್ನು ಗಳಿಸಿಕೊಂಡನು. ಇಲ್ತಮಷ್‌ನು ನಲವತ್ತು ನೋಬಲ್ಲರುಗಳ ಗುಂಪಿನಿಂದ ಕೂಡಿದ ಒಂದು ಹೊಸ ವ್ಯವಸ್ಥೆಯನ್ನು ಮೊದಲ ಬಾರಿಗೆ ಜಾರಿಗೆ ತಂದನು. ಈ ನೋಬಲ್ಲರುಗಳು ಮುಂದೆ ಭಾರತವನ್ನಾಳಿದ ಮುಸಲ್ಮಾನರ ವಿವಿಧ ಸಂತತಿಗಳ ಆಳ್ವಿಕೆಯಲ್ಲಿ ಪ್ರಮುಖ ಪಾತ್ರ ವಹಿಸಿದರು. ಇಲ್ತಮಷ್‌ನು ಸರ್ಕಾರದಲ್ಲಿ ಇನ್ನೂ ಹೆಚ್ಚಿನ ದಕ್ಷತೆಯನ್ನು ಉಂಟು ಮಾಡಲು ಅಧಿಕಾರದ ಹುದ್ದೆಗಳಿಗೆ ದಕ್ಷತೆಯುಳ್ಳ ವಿದೇಶೀಯರನ್ನೂ ಮತ್ತು ಸ್ಥಳೀಯರನ್ನೂ ನೇಮಿಸುವ ವ್ಯವಸ್ಥೆ ಜಾರಿಗೆ ತಂದನು. ಇಲ್ತಮಷ್‌ನು ನ್ಯಾಯ ವಿಚಕ್ಷಣೆಗೂ ಗಮನ ನೀಡಿದ್ದನು. ನ್ಯಾಯ ತೀರ್ಮಾನಕ್ಕಾಗಿ ದೆಹಲಿಯಲ್ಲಿ ಖಾಜಿಗಳೆಂಬ ಅಧಿಕಾರಿಗಳನ್ನೂ ಮತ್ತು ರಾಜ್ಯದ ಇತರ ಮುಖ್ಯ ಪಟ್ಟಣಗಳಲ್ಲಿ ಅಮೀರ್ ದಾದ್ಸ್ ಎಂಬ ನ್ಯಾಯಾಧಿಕಾರಿಗಳನ್ನು ನೇಮಿಸಿದ್ದನು. ಕೆಳಗಿನ ನ್ಯಾಯಾಲಯಗಳಿಂದ ಬಂದ ದೂರುಗಳನ್ನು ಸುಲ್ತಾನನೂ ಮತ್ತು ಮುಖ್ಯ ಖಾಜಿಯು ವಿಚಾರಿಸುತ್ತಿದ್ದರು. ಇಲ್ತಮಷ್‌ನು ಹಣಕಾಸಿನ ವ್ಯವಸ್ಥೆಯನ್ನು

ಪುನರ್ರಚಿಸಿದನು. 175ಗ್ರೈನ್‌ಗಳ ತೂಕವುಳ್ಳ ಚಿನ್ನ ಬೆಳ್ಳಿಯ ನಾಣ್ಯಗಳನ್ನು ಜಾರಿಗೆ ತಂದನು.

### ಇಲ್ತುಮಿಷ್‌ನ ಮರಣ

ಇಲ್ತುಮಿಷ್‌ನು 1234ರಲ್ಲಿ ಮಾಳವದ ಮೇಲೆ ದಂಡೆತ್ತಿ ಹೋಗಿ ಬಿಲ್ಸಾ ಕೋಟೆಯನ್ನು ವಶಪಡಿಸಿಕೊಂಡನು. ಅನಂತರ ಅವನು ತನ್ನ ದಂಡಯಾತ್ರೆಯನ್ನು ಮುಂದುವರಿಸಿ ಉಜ್ಜೈನಿಗೆ ಮುತ್ತಿಗೆ ಹಾಕಿ ಆ ನಗರದಲ್ಲಿದ್ದ ಮಹಾಕಾಳಿ ದೇವಾಲಯವನ್ನು ನೆಲಸಮ ಮಾಡಿ ಅಪಾರ ಐಶ್ವರ್ಯವನ್ನು ವಶಪಡಿಸಿಕೊಂಡನು. 1236ರಲ್ಲಿ ಅವನು ಉಪ್ಪಿನ ಶ್ರೇಣಿಯ ಕೊಕ್ಕಾರರ ವಿರುದ್ಧ ದಂಡಯಾತ್ರೆಯನ್ನು ನಿಯೋಜಿಸಿದನು. ಆದರೆ ಈ ದಂಡಯಾತ್ರೆಯನ್ನು ತನ್ನ ಅನಾರೋಗ್ಯದ ಪ್ರಯುಕ್ತ ಕೈಬಿಡಬೇಕಾಯಿತು. ಅವನ ಆರೋಗ್ಯವು ಪೂರ್ಣವಾಗಿ ಹದಗೆಟ್ಟು ಅವನು ಅದೇ ವರ್ಷ ಕಾಲವಾದನು.

### ಇಲ್ತುಮಿಷ್‌ನ ಸಾಧನೆಗಳು ಮತ್ತು ವ್ಯಕ್ತಿತ್ವ

ಗುಲಾಮಿ ಸಂತತಿಯ ದೊರೆಗಳಲ್ಲೆಲ್ಲಾ ಇಲ್ತುಮಿಷ್‌ನು ಅತ್ಯಂತ ಶ್ರೇಷ್ಠನೆಂದು ಪರಿಗಣಿಸಲ್ಪಟ್ಟಿರುವನು. ದೆಹಲಿಯ ಸುಲ್ತಾನರ ಸಾಮ್ರಾಜ್ಯ ಸ್ಥಾಪನೆಯ ಕಾರ್ಯದಲ್ಲಿ ಇವನು ವಹಿಸಿದ್ದ ಪಾತ್ರವು ಮಹತ್ವಪೂರ್ಣವಾಗಿದ್ದಿತು. ಇಲ್ತುಮಿಷ್‌ನು ಘೋರಿ ಮಹಮದ್ ಮತ್ತು ಕುತ್ಬುದ್ದೀನನ ದಂಡಯಾತ್ರೆಗಳೆಲ್ಲವನ್ನೂ ಸಂಘಟಿಸಿ ಮುಸಲ್ಮಾನರ ಒಂದು ಸಂಘಟಿತ ಸಾಮ್ರಾಜ್ಯವನ್ನು ನಿರ್ಮಿಸಿದನು. ಇಲ್ತುಮಿಷ್‌ನಿಗಿಂತ ಮೊದಲು ಆಳಿದ ಕುತ್ಬುದ್ದೀನನು ಅತ್ಯಲ್ಪ ವರ್ಷಗಳು ರಾಜ್ಯವಾಳಿದುದರಿಂದ ಈ ಕೆಲಸವು ಅವನಿಂದ ಸಾಧ್ಯವಾಗಿರಲಿಲ್ಲ. ಭಾರತದಲ್ಲಿ ಮುಸಲ್ಮಾನರ ಸಂಘಟಿತ ಸಾಮ್ರಾಜ್ಯ ಸ್ಥಾಪನೆಯ ಕೆಲಸವು ಇಲ್ತುಮಿಷ್‌ನಿಂದಲೂ ಸಾಧ್ಯವಾಗದಿದ್ದ ಪಕ್ಷದಲ್ಲಿ, ಭಾರತದಲ್ಲಿ ಏಕತೆಯಿಂದ ಕೂಡಿದ ಟರ್ಕರ ಸಾಮ್ರಾಜ್ಯವೊಂದು ಸ್ಥಾಪಿತವಾಗುವುದು ಕಷ್ಟವಾಗುತ್ತಿತ್ತು. ಇಲ್ತುಮಿಷ್‌ನೇನಾದರೂ ಅಸಮರ್ಥ ಸುಲ್ತಾನನಾಗಿದ್ದ ಪಕ್ಷದಲ್ಲಿ ಟರ್ಕರು ಗೆದ್ದುಕೊಂಡಿದ್ದ ಪ್ರದೇಶಗಳೆಲ್ಲವೂ ಸ್ವತಂತ್ರ ರಾಜ್ಯಗಳಾಗಿ ಮಾರ್ಪಟ್ಟು ಬೇರೆ ಬೇರೆ ರಾಜರುಗಳ ಆಳ್ವಿಕೆಗೆ ಒಳಪಡುತ್ತಿದ್ದವು. ಈ ದೃಷ್ಟಿಯಿಂದ ಇಲ್ತುಮಿಷ್‌ನನ್ನು ದೆಹಲಿಯ ಸುಲ್ತಾನರ ಅಧಿಕಾರದ ನಿಜವಾದ ಸ್ಥಾಪಕನೆಂದು ಹೇಳಬಹುದು. ಇಲ್ತುಮಿಷ್‌ನು ರಾಜಕೀಯದಲ್ಲಿ ವಿಶೇಷವಾದ ದಕ್ಷತೆ ಮತ್ತು ಧೈರ್ಯಸಾಹಸಗಳನ್ನು ಪ್ರದರ್ಶಿಸಿದರೂ, ಆಡಳಿತ ಕ್ಷೇತ್ರದಲ್ಲಿ ಷೇರ್‌ಷಹ ಅಥವ ಅಕ್ಬರನಂತೆ ವಿಶೇಷವಾದ ಸಾಧನೆಗಳನ್ನೇನೂ ಸಾಧಿಸಲಿಲ್ಲ. ಅವನು ಧರ್ಮದಲ್ಲಿ ಹೆಚ್ಚು ನಿಷ್ಠೆಯುಳ್ಳವನಾಗಿದ್ದನು. ಕುತ್ಬುದ್ದೀನನ ಕಾಲದಲ್ಲಿ ಆರಂಭವಾಗಿದ್ದ ಕುತುಬ್‌ಮಿನಾರ್ ಕಟ್ಟಡದ ನಿರ್ಮಾಣ ಕಾರ್ಯವು ಇವನ ಕಾಲದಲ್ಲಿ ಪೂರ್ಣಗೊಂಡಿತು. ಅಜ್ಮೀರದಲ್ಲಿ ಒಂದು ಮಸೀದಿಯನ್ನು ನಿರ್ಮಿಸಿದನು. ಇಲ್ತುಮಿಷನು ವಿದ್ವಾಂಸರಿಗೂ ಉದಾರ ಪ್ರೋತ್ಸಾಹ ನೀಡಿದ್ದನು ಮತ್ತು ದೆಹಲಿಯನ್ನು ಮುಸ್ಲಿಂ ಪ್ರಪಂಚದ ನಾಗರಿಕ ಕೇಂದ್ರಗಳಲ್ಲೊಂದನ್ನಾಗಿ ಮಾರ್ಪಡಿಸಿದನು.

ಇಲ್ತುಮಿಷ್‌ನು ಸ್ಥಾಪಿಸಿದ್ದ ಸಾಮ್ರಾಜ್ಯವನ್ನಾಳಲು ತನ್ನ ಗಂಡುಮಕ್ಕಳಲ್ಲಿಯಾರಿಗೂ ಯೋಗ್ಯತೆ ಇಲ್ಲವೆಂದು ಮನಗಂಡಿದ್ದನು. ಏಕೆಂದರೆ ಅವರು

ತುಂಬಾ ಅಸಮರ್ಥರಾಗಿದ್ದರು. ಆದ್ದರಿಂದ ಅವನು ತಾನು ಸಾಯುವುದಕ್ಕೆ ಮುಂಚೆಯೆ ತನ್ನಮಗಳು ರಜಿಯಳಲ್ಲಿದ್ದ ಪ್ರತಿಭಾ ಸಾಮರ್ಥ್ಯಗಳನ್ನು ಗುರುತಿಸಿ ಅವಳನ್ನು ತನ್ನ ಉತ್ತರಾಧಿಕಾರಿಯನ್ನಾಗಿ ನೇಮಿಸಿದ್ದನು. ಆದರೆ ಕೆಲವು ನೋಬಲ್ಲರು ಹೆಂಗಸೊಬ್ಬಳು ಸಿಂಹಾಸನಕ್ಕೆ ಬರುವುದನ್ನು ಸಹಿಸಲಾರದೆ, ಭೋಗಾಸಕ್ತ ಜೀವನಕ್ಕೆ ಮಾರುಹೋಗಿದ್ದ ಇಲ್ತಮಷ್‌ನ ಮಗನಾದ ರುಕುನ್-ಉದ್ದೀನ್ ಫಿರೋಜ್ ಎಂಬುವನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿದರು. ಆದರೆ ಅವರು ಸ್ವಲ್ಪದಿವಸಗಳಲ್ಲಿಯೆ ಅವನ ವಿಷಯ ಲಂಪಟತನದಿಂದ ಬೇಸರಗೊಂಡು ಅವನನ್ನು ಸಿಂಹಾಸನದಿಂದಿಳಿಸಿ ಸೆರೆಮನೆಯಲ್ಲಿಡಿಸಿದರು. ಅನಂತರ ರಜಿಯಳನ್ನು ಸುಲ್ತಾನಳೆಂದು ಒಪ್ಪಿಕೊಂಡು ಸಿಂಹಾಸನದ ಮೇಲೆ ಕುಳ್ಳಿರಿಸಿದರು.

**ಸುಲ್ತಾನ್ ರಜಿಯ (1236-1240)**

ಭಾರತದಲ್ಲಿ ಟರ್ಕರ ಸಾಮ್ರಾಜ್ಯವನ್ನಾಳಿದ ಸುಲ್ತಾನರುಗಳಲ್ಲಿ ರಜಿಯ ಸುಲ್ತಾನಳ ಪಾತ್ರವೂ ಶ್ಲಾಘನೀಯವಾಗಿದೆ. ಇಲ್ತಮಷ್‌ನಿಂದ ಸಂಘಟಿಸಲ್ಪಟ್ಟಿದ್ದ ಟರ್ಕರ ಸಾಮ್ರಾಜ್ಯವನ್ನು ಉಳಿಸಿಕೊಳ್ಳಲು ಆ ಸಂದರ್ಭದಲ್ಲಿ ರಜಿಯಳನ್ನು ಬಿಟ್ಟರೆ ಯಾರೂ ಇರಲಿಲ್ಲ. ಅವಳು ತನ್ನ ತಂದೆಯೊಂದಿಗೆ ಆಡಳಿತದಲ್ಲಿ ಭಾಗವಹಿಸಿ ಸಾಕಷ್ಟು ಆಡಳಿತದ ಅನುಭವ ಪಡೆದಿದ್ದಳು. ರಜಿಯಳು ಧೈರ್ಯ ಸಾಹಸಗಳಲ್ಲಿ ಯಾರಿಗೂ ಕಡಿಮೆಯಿರಲಿಲ್ಲ. ಆದ್ದರಿಂದ ಇಲ್ತಮಷ್‌ನು ಅವಳನ್ನು ಸಿಂಹಾಸನಕ್ಕೆ ತನ್ನ ಉತ್ತರಾಧಿಕಾರಿಯನ್ನಾಗಿ ನೇಮಿಸಿದ್ದುದು ಸಹಜವಾಗಿದ್ದಿತು.

ಸುಲ್ತಾನ್ ರಜಿಯಳು ತನ್ನ ತಂದೆಯಿಂದಲೇ ಸಿಂಹಾಸನಕ್ಕೆ ಉತ್ತರಾಧಿಕಾರಿಯಾಗಿ ನೇಮಕಗೊಂಡಿದ್ದರೂ ಅವಳು ಅಲಂಕರಿಸಿದ್ದ ಸಿಂಹಾಸನವು ಮುಳ್ಳಿನ ಸಿಂಹಾಸನವಾಗಿತ್ತು. ಸುಲ್ತಾನನ ಸಚಿವರು ಹಾಗೂ ಮತ್ತಿತರ ಪ್ರಮುಖರು ಹೆಂಗಸೊಬ್ಬಳು ರಾಜನ ಅಂತಸ್ತಿಗೆ ಏರಿದುದನ್ನು ಸಹಿಸಲಿಲ್ಲ. ಅವರು ಹಿಂದೆಯೆ ಸುಲ್ತಾನನಿಗೆ ಈ ವ್ಯವಸ್ಥೆಯು ನ್ಯಾಯಬಾಹಿರವಾದುದೆಂದು ತಿಳಿಸಿದಾಗ ಸುಲ್ತಾನನು ಅವರಿಗೆ ಹೀಗೆ ಉತ್ತರ ಹೇಳಿದ್ದನು. ನನ್ನ ಗಂಡುಮಕ್ಕಳೆಲ್ಲರೂ ಸುಖಲೋಲುಪ್ತ ಜೀವನದಲ್ಲಿ ತಲ್ಲೀನರಾಗಿರುವುದರಿಂದ ಅವರಲ್ಲಿ ಯಾರೊಬ್ಬನೂ ರಾಜ್ಯಾಡಳಿತವನ್ನು ನಿರ್ವಹಿಸುವ ಸಾಮರ್ಥ್ಯವನ್ನು ಹೊಂದಿಲ್ಲ. ನಾನು ಸತ್ತಮೇಲೆ ನನ್ನ ಮಗಳಿಗಿಂತ ಬೇರೆ ಯಾರೊಬ್ಬರೂ ಯೋಗ್ಯರಲ್ಲವೆಂಬುದನ್ನು ನೀವೇ ನೋಡುತ್ತೀರಿ'' ಎಂದು ಹೇಳಿದ್ದನು. ಅವನು ಹೇಳಿದ್ದು ನಿಜವೂ ಆಯಿತು.

ಸಾಮ್ರಾಜ್ಯದ ವಜೀರನಾಗಿದ್ದ ಮಹಮದ್ ಜುನ್ಯೆದಿಯು ಸಿಂಹಾಸನಕ್ಕೆ ರಜಿಯಳಿಗೆ ಇರುವ ಹಕ್ಕನ್ನು ಮಾನ್ಯ ಮಾಡಲಿಲ್ಲ. ಅಂತೆಯೆ ಮುಲ್ತಾನ್, ಹನ್ಸಿ, ಲಾಹೋರ್ ಮತ್ತು ಬದಾವನ್‌ಗಳ ರಾಜ್ಯಪಾಲರುಗಳೂ ಸಹ ವಿರೋಧವನ್ನು ವ್ಯಕ್ತಪಡಿಸಿದರು. ಆದರೆ ರಾಜಕಾರಣದಲ್ಲಿ ನಿಪುಣೆಯಾಗಿದ್ದ ರಜಿಯಳು ಈ ಎಲ್ಲ ವಿರೋಧಿಗಳನ್ನು ಹತ್ತಿಕ್ಕಿ ಸಾಮ್ರಾಜ್ಯದಲ್ಲಿ ಶಾಂತಿ ವ್ಯವಸ್ಥೆಗಳನ್ನೇರ್ಪಡಿಸಿದಳು. ''ಬಂಗಾಳದಿಂದ ಅರಬ್ಬೀ ಸಮುದ್ರದ ದೇಬಾಲ್ ಬಂದರಿನವರೆಗಿದ್ದ ಎಲ್ಲಾ ಮಲ್ಲಿಕರನ್ನು ಮತ್ತು ಅಮೀರರನ್ನು ಅವಳ ತನ್ನ ಅಧಿಕಾರಕ್ಕೆ ತಲೆಬಾಗಿಸಿದ್ದಳೆಂದು ಸಮಕಾಲೀನ ಇತಿಹಾಸಕಾರನೊಬ್ಬನು ಹೇಳುತ್ತಾನೆ.''

ಸುಲ್ತಾನ್‌ರಜಿಯಳು ಪ್ರತಿಭಾವಂತ ಸ್ತ್ರೀಯಾಗಿದ್ದಳು. ಅವಳು ಕೊರಾನ್ ಗ್ರಂಥವನ್ನು ಸುಸ್ಪಷ್ಟವಾಗಿ ಓದುತ್ತಿದ್ದಳು. ಸಮಕಾಲೀನ ಇತಿಹಾಸಕಾರನಾದ ಮಿನಾಜ್ ಅವಳಲ್ಲಿದ್ದ ಗುಣಾಮಗುಣಗಳನ್ನು ಈ ಕೆಳಕಂಡ ಮಾತುಗಳಲ್ಲಿ ಹೇಳಿರುವನು. 'ರಜಿಯಳು ಸಾರ್ವಭೌಮಳೂ ರಾಜಕಾರಣ ಚತುರಳೂ, ನಿಷ್ಪಕ್ಷಪಾತಳೂ, ಉಪಕಾರಿಯೂ ವಿದ್ವಜ್ಜನರಿಗೆ ಆಶ್ರಯದಾತಳೂ, ಪ್ರಜೆಗಳ ಹಿತಚಿಂತಕಳೂ ಹಾಗೂ ಯುದ್ಧ ಕೌಶಲವುಳ್ಳವಳೂ ಆಗಿದ್ದು ರಾಜನಿಗಿರಬೇಕಾಗಿದ್ದ ಎಲ್ಲ ಗುಣಗಳನ್ನೂ ಹೊಂದಿದ್ದಳು.'' ಅವಳು ರಾಜನಂತೆಯೆ ನಡೆದುಕೊಳ್ಳಲು ಸರ್ವ ಪ್ರಯತ್ನ ಮಾಡಿದಳು. ಅವಳು ಸ್ತ್ರೀಯ ಉಡುಪನ್ನು ತ್ಯಜಿಸಿದಳು. ಜನಾನದ ಪ್ರತ್ಯೇಕತೆಯನ್ನು ತೊರೆದು ಗಂಡಸಿನ ತಲೆಯುಡಿಗೆಯನ್ನು ಧರಿಸಿಕೊಂಡು ಬಹಿರಂಗವಾಗಿ ದರ್ಬಾರನ್ನು ಏರ್ಪಡಿಸಿ ಆಡಳಿತ ವ್ಯವಹಾರಗಳನ್ನು ನಿರ್ವಹಿಸಿದಳು. ಅವಳು ದಂಗೆಯೆದ್ದಿದ್ದ ಹಿಂದುಗಳ ಮತ್ತು ಮುಸಲ್ಮಾನರ ಮುಖಂಡರ ದಂಗೆಗಳನ್ನು ಅಡಗಿಸುವುದರಲ್ಲಿ ತನ್ನ ಧೈರ್ಯ ಸಾಹಸಗಳನ್ನು ವ್ಯಕ್ತಪಡಿಸಿದ್ದಳು. ಅವಳ ವಿರುದ್ಧ ದಂಗೆಯೆದ್ದಿದ್ದ ಲಾಹೋರಿನ ರಾಜ್ಯಪಾಲನ ವಿರುದ್ಧ ತಾನೇ ಸೈನ್ಯದೊಂದಿಗೆ ಹೋಗಿ ಅವನಿಗೆ ಬುದ್ಧಿ ಕಲಿಸಿ ತನ್ನ ಅಧಿಕಾರವನ್ನು ಒಪ್ಪಿಕೊಳ್ಳುವಂತೆ ಮಾಡಿದಳು. ಆದರೆ ರಜಿಯಳಲ್ಲಿದ್ದ ಒಂದೇ ಒಂದು ದೌರ್ಬಲ್ಯವೆಂದರೆ ಅವಳು ಹೆಂಗಸಾಗಿದ್ದುದು. ಅವಳ ಈ ಸ್ತ್ರೀತನದ ಸಹಜವಾದ ದೌರ್ಬಲ್ಯವನ್ನು ಮುಚ್ಚಲು ಅವಳಲ್ಲಿದ್ದ ಪ್ರತಿಭಾ ಸಾಮರ್ಥ್ಯಗಳು ಎಳ್ಳಷ್ಟು ಸಾಕಾಗಲಿಲ್ಲ. ಮೇಲಾಗಿ ಅವಳ ಕುದುರೆಲಾಯದ ಒಡೆಯನಾಗಿದ್ದ ಜಮಾಲ್-ಉದ್ದೀನ್-ಯಾಕುತ್ ಎಂಬ ಅಬಿಸೀನಿಯನ್ ಗುಲಾಮನೊಬ್ಬನಿಗೆ ಅವಳು ಅತಿಯಾಗಿ ತೋರಿಸಿದ ಆದರವು ಟರ್ಕಿ ನೋಬಲ್ಲರ ಅಸಂತೋಷಕ್ಕೆ ಕಾರಣವಾಯಿತು. ಟರ್ಕಿ ನೋಬಲ್ಲರು ತಮ್ಮನ್ನು ಅಲಕ್ಷಿಸಿ ಗುಲಾಮನೊಬ್ಬನಿಗೆ ಆದ್ಯತೆ ತೋರಿಸುತ್ತಿದ್ದ ಸುಲ್ತಾನಳ ಬಗ್ಗೆ ಬೇಸರಗೊಂಡರು. ಅಲ್ಲದೆ ಅವಳು ಬಹಿರಂಗವಾಗಿ ಕಾಣಿಸಿಕೊಳ್ಳುತ್ತಿದ್ದುದು ಸಂಪ್ರದಾಯ ಶರಣರಾದ ಮುಸ್ಲಿಮರಿಗೆ ಆಘಾತವನ್ನುಂಟುಮಾಡಿ ಅವರೆಲ್ಲರೂ ಅವಳನ್ನು ದ್ವೇಷಿಸತೊಡಗಿದ್ದರು.

**ಅಲ್ತೂನಿಯನ್ನನ ದಂಗೆ**

ಸುಲ್ತಾನ್ ರಜಿಯಳ ವಿರುದ್ಧ ದಂಗೆಯೆದ್ದವರಲ್ಲಿ ಸರ್‌ಹಿಂಧ್‌ನ ರಾಜ್ಯಪಾಲನಾಗಿದ್ದ ಅಲ್ತೂನಿಯಾ ಎಂಬವನು ಮುಖ್ಯನಾದವನು. ಅವನ ದಂಗೆಯನ್ನಡಗಿಸಲು ರಜಿಯಳೇ ದೆಹಲಿಯಿಂದ ಹೋದಳು. ಆದರೆ ಅವಳು ತಬರ್ ಹಿಂದ್ ಅನ್ನ ತಲುಪಿದಾಗ ಟರ್ಕಿ ಅಮೀರರು ಅವಳ ವಿಶ್ವಾಸಪಾತ್ರನಾಗಿದ್ದ ಯಾಕುತ್‌ನನ್ನು ಕೊಂದುಹಾಕಿದರು ಮತ್ತು ಅಲ್ತೂನಿಯಾನು ರಜಿಯಳನ್ನು ಬಂಧಿಸಿ ಕಾರಗೃಹದಲ್ಲಿರಿಸಿದನು. ಆದರೆ ರಜಿಯಳು ಅವನಿಗಿಂತಲೂ ಚತುರಳೆಂಬುದನ್ನು ತೋರಿಸಿಕೊಟ್ಟಳು. ಅವಳು ಅಲ್ತೂನಿಯನನ್ನು ವಿವಾಹವಾಗುವುದಾಗಿ ತಿಳಿಸಿ ಅವನನ್ನು ತನ್ನ ಬಲೆಗೆ ಹಾಕಿಕೊಂಡಳು. ಅವಳು ಅವನನ್ನು ವಿವಾಹವಾಗಿ ಅವನ ಸಹಾಯದಿಂದ ಪುನಃ ದೆಹಲಿಯ ಸಿಂಹಾಸನವನ್ನು ಪಡೆದುಕೊಳ್ಳಲು ದೆಹಲಿಗೆ ಹಿಂದಿರುಗಿ ಬಂದಳು. ಆದರೆ ಈ ವೇಳೆಗಾಗಲೇ ಇಲ್ತುಮಿಷ್‌ನ ಮೂರನೆಯ ಮಗನಾಗಿದ್ದ ಮುಯಿಜ್-ಉದ್ದೀನ್ ಬಹ್ರಾಮ್‌ಷಹನು ಸಿಂಹಾಸನವನ್ನು ಆಕ್ರಮಿಸಿಕೊಂಡಿದ್ದನು. ಬಹ್ರಾಮ್‌ಷಹನು ರಜಿಯ ಮತ್ತು ಅವಳ ಗಂಡನ ವಿರುದ್ಧ ಸೈನ್ಯದೊಂದಿಗೆ ಹೋಗಿ

ಅವರನ್ನು ಸೋಲಿಸಿ ಸೆರೆಮನೆಗೆ ತಳ್ಳಿಸಿದನು ಮತ್ತು 1240ರಲ್ಲಿ ಇಬ್ಬರನ್ನೂ ಕೊಲ್ಲಿಸಿದನು.

**ರಜಿಯಳ ವ್ಯಕ್ತಿತ್ವ**

ಹದಿಮೂರನೆಯ ಶತಮಾನದಲ್ಲಿ ಭಾರತವನ್ನಾಳಿದ ಟರ್ಕಿ ಸುಲ್ತಾನರಲ್ಲಿ ಸುಲ್ತಾನ್ ರಜಿಯಳು ಕೂಡ ಉನ್ನತ ಸ್ಥಾನವನ್ನು ಪಡೆದುಕೊಂಡಿದ್ದಾಳೆ. ಮಧ್ಯಕಾಲೀನ ಯುಗದಲ್ಲಿ ದೆಹಲಿಯ ಸಿಂಹಾಸನವನ್ನೇರಿ ಅತ್ಯಂತ ದಕ್ಷತೆಯಿಂದ ರಾಜ್ಯವಾಳಿದ ಏಕೈಕ ಸ್ತ್ರೀರಜಿಯ ಸುಲ್ತಾನ್ ಆಗಿದ್ದಳು. ಅವಳು ನಾಲ್ಕು ವರ್ಷಗಳೂ ಕೂಡ ಪೂರ್ಣವಾಗಿ ರಾಜ್ಯವಾಳಲಿಲ್ಲ. ಆದಾಗ್ಯೂ ಅವಳ ಸಾಧನೆಗಳು ಮಹತ್ವಪೂರ್ಣವಾಗಿದ್ದವು. ಇಲ್ತಮಷ್‌ನ ಉತ್ತರಾಧಿಕಾರಿಗಳಲ್ಲಿ ಅವಳು ಅತ್ಯಂತ ಸಮರ್ಥಗಳಾಗಿದ್ದಳು ಮತ್ತು ಸಾಮ್ರಾಜ್ಯದ ಉನ್ನತ ಹುದ್ದೆಯನ್ನು ಅಲಂಕರಿಸಲು ಇರಬೇಕಾದ ಎಲ್ಲಾ ಯೋಗ್ಯತೆಗಳನ್ನು ಹೊಂದಿದ್ದಳು. ರುಕುನ್-ಉದ್ದೀನನ ಆಳ್ವಿಕೆಯಿಂದ ಸಾಮ್ರಾಜ್ಯದಲ್ಲಿ ತಲೆದೋರಿದ ಅರಾಜಕತೆಯ ಪರಿಸ್ಥಿತಿಯನ್ನು ಸುಧಾರಿಸಿ ಶಾಂತಿ ವ್ಯವಸ್ಥೆಗಳನ್ನು ನೆಲೆಗೊಳಿಸಿದಳು. ಅವಳು ಬಹಳ ಧೈರ್ಯದಿಂದ ತನಗಿದ್ದ ವಿರೋಧವನ್ನೆಲ್ಲಾ ಎದುರಿಸಿ ತನ್ನ ಸ್ಥಾನವನ್ನು ಭದ್ರ ಪಡಿಸಿಕೊಂಡಿದ್ದಳು. ಅವಳು ಹೆಂಗಸು ಎಂಬ ಒಂದು ಕಾರಣದಿಂದ ಅವಳ ವಿರೋಧಿಗಳು ಅವಳ ಬಗ್ಗೆ ದ್ವೇಷಗೊಂಡು ಅವಳನ್ನು ಕೊಲೆಮಾಡಿಸಿದರು. ಅವಳು ಒಂದು ವೇಳೆ ಗಂಡಸಾಗಿ ಹುಟ್ಟಿದ್ದ ಪಕ್ಷದಲ್ಲಿ ಅವಳು ಇನ್ನೂ ಹೆಚ್ಚು ಯಶಸ್ವಿಯಾಗಬಹುದಿತ್ತು. ಆಗ ಅವಳಿಗೆ ವಜೀರನಿಂದಾಗಲೀ ಅಥವ ಮುಸ್ಲಿಂ ನೋಬಲ್ಲರಿಂದಾಗಲೀ ವಿರೋಧವು ವ್ಯಕ್ತಪಡಲು ಸಾಧ್ಯವಾಗುತ್ತಿರಲಿಲ್ಲ ಮತ್ತು ಯಾಕುತ್‌ನೊಂದಿಗೆ ಇದ್ದಂತ ನಿಕಟ ಸಂಬಂಧವನ್ನೇ ನೆಪಮಾಡಿಕೊಂಡು ಒಳಸಂಚು ನಡೆಸುವುದಕ್ಕೂ ಆಗುತ್ತಿರಲಿಲ್ಲ. ಅವಳು ಟರ್ಕಿನೋಬಲ್ಲರ ಪ್ರಭಾವವನ್ನು ಮೊಟಕುಗೊಳಿಸಿ ಮತ್ತೊಂದು ಪಕ್ಷವನ್ನು ಕಟ್ಟಿ ಆಳ್ವಿಕೆ ನಡೆಸುತ್ತಿದ್ದಳು. ಆದರೆ ಅವಳ ಆಳ್ವಿಕೆಯು ಬಹಳ ಬೇಗ ಅಂತ್ಯಗೊಂಡಿತು ಮತ್ತು ಅವಳ ಯಶಸ್ಸು ಅಪರಿಪೂರ್ಣವಾಯಿತು. 1238ರವರೆಗೆ ಅವಳು ಕೈಗೊಂಡ ಎಲ್ಲ ಪ್ರಯತ್ನಗಳಲ್ಲೂ ಯಶಸ್ವಿಯಾದಳು. ಆದರೆ 1239ರಿಂದ ಅವಳಿಗೆ ವಿರೋಧವು ಹೆಚ್ಚುತ್ತಾ ಬಂದು ಅವಳು ಆ ವಿರೋಧದಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಯಾವ ನೋಬಲ್ಲರು ಅವಳಿಗೆ ಬೆಂಬಲ ಕೊಟ್ಟು ಸಿಂಹಾಸನಕ್ಕೆ ತಂದಿದ್ದರೋ ಅವರೇ ಕೊನೆಗೆ ಅವಳಿಗೆ ವಿರೋಧಿಗಳಾಗಿ ಅವಳ ಪತನಕ್ಕೆ ಕಾರಣರಾದರು.

**ನಾಸಿರ್-ಉದ್ದೀಸ್-ಮಹಮದ್ (1246-1266)**

ಸುಲ್ತಾನ್ ರಜಿಯಳ ಆಳ್ವಿಕೆಯು ದುರಂತ ರೀತಿಯಲ್ಲಿ ಕೊನೆಗೊಂಡ ಮೇಲೆ ಸಾಮ್ರಾಜ್ಯದಲ್ಲಿ ಕೆಲವು ವರ್ಷಗಳ ಕಾಲ ಅರಾಜಕತೆ ಪರಿಸ್ಥಿತಿಯು ಏರ್ಪಟ್ಟಿದ್ದಿತು. ಇಲ್ತಮಷ್‌ನ ಮಗನಾಗಿದ್ದ ಮುಯಿಜ್-ಉದ್ದೀನ್-ಬಹ್ರಾಮ್‌ಷಹನು ಮತ್ತು ಮೊಮ್ಮಗನಾಗಿದ್ದ ಅಲ್ಲಾವುದ್ದೀನ್-ಮಸೂದ್‌ಷಹನು ಕ್ರಮವಾಗಿ ಆರು ವರ್ಷಗಳ ಕಾಲ ರಾಜ್ಯವಾಳಿದರು. ಆದರೆ ಅವರ ಆಳ್ವಿಕೆಯಿಂದ ಅತೃಪ್ತಗೊಂಡ ಕೆಲವು ನೋಬಲ್ಲರು ಅವರ ವಿರುದ್ಧ ಒಳಸಂಚುಗಳನ್ನು ನಡೆಸಿ ಅವರನ್ನು ಕೊಲೆಮಾಡಿಸಿದರು. ಅನಂತರ ನೋಬಲ್ಲರು ಇಲ್ತಮಷ್‌ನ ಕಿರಿಯ ಮಗನಾಗಿದ್ದ ನಾಸಿರುದ್ದೀನ್-

ಮಹಮದನನ್ನು ಸಿಂಹಾಸನಕ್ಕೆ ತಂದರು. ಇವನು ಧಾರ್ಮಿಕ ವಿಷಯಗಳಲ್ಲಿ ಹೆಚ್ಚು ಆಸಕ್ತಿಯುಳ್ಳವನಾಗಿದ್ದು ರಾಜ್ಯದ ಆಡಳಿತದ ವ್ಯವಹಾರಗಳೆಲ್ಲವನ್ನೂ ತನ್ನ ಮಂತ್ರಿಗಳಿಗೆ ಒಪ್ಪಿಸಿದ್ದನು. ನಾರಿಸುದ್ದೀನನು ವಿದ್ಯಾಭಿಮಾನಿಯಾಗಿದ್ದು ವಿದ್ವಾಂಸರಿಗೆ ಆಶ್ರಯ ನೀಡಿದ್ದನು. ಅವನ ಮುಖ್ಯ ಖಾಜಿಯಾಗಿದ್ದ ಮಿನಾಜ್‌ನು 'ತಬಾಖತ್-ಇ-ನಾಸಿರಿ ಎಂಬ ಗ್ರಂಥವನ್ನು ಸುಲ್ತಾನನ ಹೆಸರಿನಲ್ಲಿ ರಚಿಸಿದನು. ಬಡವರ ಬಗ್ಗೆ ಸಹಾನುಭೂತಿಯುಳ್ಳವನಾಗಿದ್ದನು. ನಾಸಿರುದ್ದೀನನು ಒಂದು ರೀತಿಯ ವಿರಕ್ತ ಜೀವನವನ್ನು ನಡೆಸಿದನು. ರಾಜನ ವೈಭವ ವಿಲಾಸ ಜೀವನವನ್ನು ತ್ಯಜಿಸಿ ಕೊರಾನಿನ ಶ್ಲೋಕಗಳನ್ನು ಪ್ರತಿಮಾಡುವುದರಲ್ಲಿಯೆ ತನ್ನ ಕಾಲವನ್ನೆಲ್ಲಾ ಕಳೆಯುತ್ತಿದ್ದನು. ರಾಜ್ಯದಲ್ಲಿ ಒಳಸಂಚುಗಳು, ಹಿಂದುಗಳ ದಂಗೆಗಳು ಮತ್ತು ಮಂಗೋಲರ ಧಾಳಿಗಳು ಸರ್ವಸಾಮಾನ್ಯವಾಗಿದ್ದಾಗ ನಾಸಿರುದ್ದೀನನ ಗುಣ ಸ್ವಭಾವಗಳು ಅವನನ್ನು ದೆಹಲಿ ರಾಜ್ಯವನ್ನಾಳಲು ಅನರ್ಹನನ್ನಾಗಿ ಮಾಡಿದ್ದವು. ಆದರೆ ನಾಸಿರುದ್ದೀನ್ ಅದೃಷ್ಟವಶಾತ್ ಬಲ್ಬನ್ ಎಂಬ ಸಮರ್ಥ ಮಂತ್ರಿಯನ್ನು ಹೊಂದಿದ್ದನು. ಬಲ್ಬನ್ನನು ತನ್ನ ಒಡೆಯನ ಆಳ್ವಿಕೆಯ ಕೊನೆಯ ತನಕವೂ ರಾಜ್ಯದ ಆಂತರಿಕ ಹಾಗೂ ವಿದೇಶ ವ್ಯವಹಾರಗಳನ್ನು ಸಮರ್ಥವಾಗಿ ನಿರ್ದೇಶಿಸಿದನು.

ನಾಸಿರುದ್ದೀನನ ಆಳ್ವಿಕೆಯ ವರ್ಷಗಳು ಪ್ರಕ್ಷುಬ್ಧ ವಾತಾವರಣದಿಂದ ಕೂಡಿದ್ದವು. ಆದರೆ ಬಲ್ಬನ್ನನ ವ್ಯವಹಾರ ಕೌಶಲದಿಂದ ನಾಸಿರುದ್ದೀನನು ದೆಹಲಿಯ ಸಾಮ್ರಾಜ್ಯವನ್ನು ರಕ್ಷಿಸಿಕೊಳ್ಳಲು ಸಮರ್ಥನಾದುದೇ ಅಲ್ಲದೆ ಟರ್ಕಿ ನೋಬಲ್ಲರ ಮತ್ತು ಹಿಂದುಗಳ ವಿರೋಧವನ್ನೂ ಹಾಗೂ ಮಂಗೋಲರ ಧಾಳಿಯನ್ನು ಎದುರಿಸುವುದರಲ್ಲಿ ಯಶಸ್ವಿಯಾದನು. ನಾಸಿರುದ್ದೀನನು 1266ರಲ್ಲಿ ಕಾಲವಾದನು. ನಾಸಿರುದ್ದೀನನಿಗೆ ಗಂಡುಮಕ್ಕಳಿರಲಿಲ್ಲವಾದ್ದರಿಂದ ಅವನು ತನ್ನ ಮಾವನೂ ಮತ್ತು ಸಚಿವನೂ ಆಗಿದ್ದ ಬಲ್ಬನ್ನನನ್ನು ತನ್ನ ಉತ್ತರಾಧಿಕಾರಿಯನ್ನಾಗಿ ನೇಮಿಸಿದನು. ನಾಸಿರುದ್ದೀನನ ಮರಣದೊಂದಿಗೆ ಮೊದಲನೇ ಇಲ್ಬರಿ ಸಂತತಿಯವರ ಆಳ್ವಿಕೆಯು ಕೊನೆಗಂಡು ಬಲ್ಬನ್ನನು ಸಿಂಹಾಸನವನ್ನೇರಿದ ಮೇಲೆ ಎರಡನೇ ಇಲ್ಬರಿ ಸಂತತಿಯವರ ಆಳ್ವಿಕೆಯು ಪ್ರಾರಂಭವಾಯಿತು.

### ಘಿಯಾಸುದ್ದೀನ್ ಬಲ್ಬನ್ (1266-1287)

ಬಲ್ಬನ್ನನು ಇಲ್ಬರಿ ಪಂಗಡಕ್ಕೆ ಸೇರಿದ ಟರ್ಕನಾಗಿದ್ದನು. ಅವನ ತಂದೆಯು ಹತ್ತುಸಾವಿರ ಇಲ್ಬರಿ ಕುಟುಂಬಗಳಿಗೆ ಮುಖಂಡನಾಗಿದ್ದನು. ಬಲ್ಬನ್ನನು ಇನ್ನು ಚಿಕ್ಕವನಾಗಿದ್ದಾಗ ಮಂಗೋಲರಿಂದ ಸೆರೆಹಿಡಿಯಲ್ಪಟ್ಟು ಅವರು ಅವನನ್ನು ಬಾಸ್ರಾದ ಖವಾಜ ಜಮಾಲುದ್ದೀನ್ ಎಂಬವನಿಗೆ ಮಾರಿದರು. ಜಮಾಲುದ್ದೀನನು ಅವನಿಗೆ ವಿದ್ಯಾಭ್ಯಾಸವನ್ನು ಕೊಡಿಸಿ ಅವನು ಮುಂದೆ ಒಬ್ಬ ಪ್ರಮುಖ ವ್ಯಕ್ತಿಯಾಗುವಂತೆ ಮಾಡಿದನು. ಅನಂತರ ಅವನನ್ನು ದೆಹಲಿಗೆ ಕರೆದುಕೊಂಡು ಬಂದನು. ದೆಹಲಿಯಲ್ಲಿ ಅವನನ್ನು 1237ರಲ್ಲಿ ಇಲ್ತಮಷ್‌ನು ಕೊಂಡುಕೊಂಡನು. ಬಲ್ಬನ್ನನು ಮೊದಲು ಸಣ್ಣ ಹುದ್ದೆಗೆ ನೇಮಿಸಲ್ಪಟ್ಟು ಅನಂತರ ತನ್ನ ಪ್ರತಿಭಾ ಸಾಮರ್ಥ್ಯಗಳಿಂದ ಉನ್ನತ ಸ್ಥಾನಕ್ಕೇರಿದನು. ಇಲ್ತಮಷ್‌ನು ರೂಪಿಸಿದ್ದ ನಲವತ್ತು ಪ್ರಮುಖ ನೋಬಲ್ಲರುಗಳ ಗುಂಪಿನಲ್ಲಿ ಇವನೂ ಒಬ್ಬನಾಗಿದ್ದನು. ರಜಿಯಳ ಕಾಲದಲ್ಲಿ ಅಮೀರ್-ಇ-ಷಿಕಾರ್

ಹುದ್ದೆಗೆ ನೇಮಿಸಲ್ಪಟ್ಟನು. ರಜಿಯಳ ವಿರುದ್ಧ ಒಳಸಂಚು ನಡೆಸಿದ ನೋಬಲ್ಲರಿಗೆ ಇವನು ಸಹಾಯಮಾಡಿದನು. ರಜಿಯಳ ನಂತರ ಸುಲ್ತಾನನಾದ ಬಹ್ರಾಮ್‌ಷಹನು ಅವನಿಗೆ ಬಡ್ತಿನೀಡಿ ಅಮೀರ್-ಇ-ಅಖುರ್ ಎಂಬ ಹುದ್ದೆಗೆ ನೇಮಿಸಿ ಅವನ ಸ್ಥಾನವನ್ನು ಮತ್ತಷ್ಟು ಹೆಚ್ಚಿಸಿದನು. ಇದಲ್ಲದೆ ಬಲ್ಬನ್ನನು ಹನ್ಸಿ ಮತ್ತು ರಿವಾರಿಗಳ ಮೇಲಿನ ಜಹಗೀರಿಯನ್ನು ಹೊಂದಿದ್ದನು. ಬಲ್ಬನ್ನನು 1246ರಲ್ಲಿ ನಾಸಿರುದ್ದೀನನ ಪರವಾಗಿ ಮಸೂದನ ವಿರುದ್ಧ ನಡೆಸಿದ ಒಳಸಂಚಿನಲ್ಲಿ ಪ್ರಮುಖ ಪಾತ್ರವಹಿಸಿದ್ದನು. ಇದರಿಂದ ಅವನು ನಾಸಿರುದ್ದೀನನ ವಿಶ್ವಾಸಕ್ಕೆ ಪಾತ್ರನಾದನು. ನಾಸಿರುದ್ದೀನನು ಸುಲ್ತಾನನಾದ ಮೇಲೆ ಬಲ್ಬನ್ನನು ತನ್ನ ಪ್ರಧಾನಮಂತ್ರಿಯನ್ನಾಗಿ ನೇಮಿಸಿಕೊಂಡನು. ಬಲ್ಬನ್ನನು ಮಹತ್ವಾಕಾಂಕ್ಷೆಯುಳ್ಳ ವ್ಯಕ್ತಿಯಾಗಿದ್ದನು. ಇಲ್ತಮಷ್‌ನು ಕಾಲವಾದ ಮೇಲೆ ಅವನು ಸರ್ಕಾರದಲ್ಲಿ ಆದಷ್ಟು ಉನ್ನತ ಹುದ್ದೆಯನ್ನು ಪಡೆದುಕೊಳ್ಳಲು ಸಾಧ್ಯವಾದ ಮಾರ್ಗಗಳನ್ನೆಲ್ಲಾ ಅನುಸರಿಸಿದನು. ಬಲ್ಬನ್ನನು ತನ್ನ ಉನ್ನತಿಗಾಗಿ ಪದೇ ಪದೇ ಪಕ್ಷಾಂತರಗೊಳ್ಳುತ್ತಿದ್ದನು. ನಾಸಿರುದ್ದೀನನು ಸುಲ್ತಾನನಾದ ಮೇಲೆ ಬಲ್ಬನ್ನನು ಅವನಿಗೆ ತೋರಿಸುತ್ತಿದ್ದ ಸ್ವಾಮಿನಿಷ್ಠೆಯೊಂದಿಗೆ ತನ್ನ ಸ್ವಹಿತವನ್ನೂ ಸೇರಿಸಿದ್ದನು. ಆದರೆ ಅವನ ನಿಷ್ಠೆಯಲ್ಲಿ ಯಾವ ಕಪಟತನವೂ ಇರಲಿಲ್ಲ. ನಾಸಿರುದ್ದೀನನು ಸರ್ಕಾರದಲ್ಲಿ ಉನ್ನತ ಹುದ್ದೆಯನ್ನು ಕೊಟ್ಟು ಅವನನ್ನು ಒಬ್ಬ ಗೌರವಾನ್ವಿತ ವ್ಯಕ್ತಿಯನ್ನಾಗಿ ಮಾಡಿದನು. 1249ರಲ್ಲಿ ಸುಲ್ತಾನ್ ನಾಸಿರುದ್ದೀನನು ಬಲ್ಬನ್ನನ ಮಗಳನ್ನು ವಿವಾಹವಾದನು. ಅಲ್ಲದೆ ಅವನು ಮತ್ತೊಬ್ಬ ಹೆಂಡತಿಯ ಹೊಟ್ಟೆಯಲ್ಲಿ ಹುಟ್ಟಿದ ಮಗಳನ್ನು ಬಲ್ಬನ್ನನ ಎರಡನೆ ಮಗನಾದ ಬುಗ್ರಾಖಾನನಿಗೆ ನಿಶ್ಚಿತಾರ್ಥ ಮಾಡಿದನು. ಸಹಜವಾಗಿ ಈ ಸಂಬಂಧಗಳಿಂದ ಆಸ್ಥಾನದಲ್ಲಿ ಬಲ್ಬನ್ನನ ಸ್ಥಾನಮಾನಗಳು ಹೆಚ್ಚಿದವು. ಅಲ್ಲದೆ ನಾಸಿರುದ್ದೀನನು ಕಾಲವಾದಮೇಲೆ ಬಲ್ಬನ್ನನಿಗೆ ಸಿಂಹಾಸನಕ್ಕೆ ಬರಲು ಕಷ್ಟವೂ ಆಗಲಿಲ್ಲ ಮತ್ತು ನಾಸಿರುದ್ದೀನನೂ ಸಹ ತನಗೆ ಗಂಡು ಮಕ್ಕಳಿರಲಿಲ್ಲವಾದ್ದರಿಂದ ಅವನು ತನ್ನ ಮಾವನನ್ನೇ ತನ್ನ ಉತ್ತರಾಧಿಕಾರಿಯನ್ನಾಗಿ ನೇಮಿಸಿದನು.

ಬಲ್ಬನ್ನನು ದೆಹಲಿಯ ಸುಲ್ತಾನನಾಗಿ ನೇಮಕಗೊಳ್ಳುವುದಕ್ಕೆ ಮುಂಚೆ ಹಲವಾರು ಮಿಲಿಟರಿ ಸಾಧನೆಗಳನ್ನು ಸಾಧಿಸಿ ಖ್ಯಾತಿಗಳಿಸಿದ್ದನು. 1245ರಲ್ಲಿ ಮಂಗೋಲರು ಮಂಗು ಎಂಬವನ ನಾಯಕತ್ವದಲ್ಲಿ ಸಿಂಧ್ ಮೇಲೆ ಆಕ್ರಮಣಮಾಡಿ ಉಚ್ಛಕೋಟೆಗೆ ಮುತ್ತಿಗೆ ಹಾಕಿದಾಗ ಬಲ್ಬನ್ನನು ಅವರನ್ನು ಸೋಲಿಸಿ ಹಿಮ್ಮೆಟ್ಟಿಸಿದನು. 1246ರಲ್ಲಿ ನಾಸಿರುದ್ದೀನನು ಸಿಂಹಾಸನಕ್ಕೆ ಬಂದಾಗ ಬಲ್ಬನ್ನನು ಪ್ರಧಾನ ಮಂತ್ರಿಯಾಗಿ ನೇಮಕಗೊಂಡನು ಮತ್ತು ಅದೇ ವರ್ಷ ಬಲ್ಬನ್ನನು ರಾವಿ ನದಿಯನ್ನು ದಾಟಿ ಬೆಟ್ಟಗುಡ್ಡಗಳಲ್ಲಿದ್ದ ಕೊಕ್ಕಾರ್ ಮತ್ತಿತರ ಬಣಗಳ ಜನರ ದಂಗೆಗಳನ್ನು ಅಡಗಿಸಿದನು. ದೋಬ್ ಪ್ರಾಂತ್ಯದಲ್ಲಿದ್ದ ಅವಿಧೇಯ ಹಿಂದೂ ರಾಜರುಗಳನ್ನು ಶಿಕ್ಷಿಸಿ ಅವರನ್ನು ಸುಲ್ತಾನನ ಅಧೀನರನ್ನಾಗಿ ಮಾಡಿದನು. ಮೇವಾರ್ ಮತ್ತು ರಣತಂಬೂರ್ ಕೋಟೆಗಳಿಗೆ ಮುತ್ತಿಗೆ ಹಾಕಿ ಅಪಾರ ಐಶ್ವರ್ಯವನ್ನು ವಶಪಡಿಸಿಕೊಂಡನು. ದಂಗೆಕೋರರಾದ ಮುಸಲ್ಮಾನ್ ಗೌವರ್ನರ್‌ಗಳನ್ನು ನಿಗ್ರಹಿಸಿದನು. ಗ್ವಾಲಿಯರ್, ಚಾಂದೇರಿ, ಮಾಳವ ಮತ್ತು ಮಾರ್‍ವಾರಗಳನ್ನು ಸುಲ್ತಾನನ ಅಧೀನಕ್ಕೊಳಪಡಿಸಿದನು.

ಸುಲ್ತಾನ್ ನಾಸಿರುದ್ದೀನನ ಆಳ್ವಿಕೆಯ ಕಾಲದಲ್ಲಿ ರಾಜ್ಯದ ಆಡಳಿತ ಸೂತ್ರಗಳೆಲ್ಲವೂ ಬಲ್ಬನ್ನನ ಕೈಯಲ್ಲೇ ಇದ್ದವು. ಬಲ್ಬನ್ನನು ಹೆಚ್ಚು ಕಡಿಮೆ

ಸರ್ವಾಧಿಕಾರಿಯಾಗಿದ್ದನು. ಇವನ ಅಧಿಕಾರ ಮತ್ತು ಸ್ಥಾನಮಾನಗಳಿಂದ ಹೊಟ್ಟೆಕಿಚ್ಚು ಪಟ್ಟುಕೊಂಡಿದ್ದ ಕೆಲವು ಟರ್ಕಿ ನೋಬಲ್ಲರು ಬಲ್ಬನ್ನನು ಮುಲ್ತಾನಿನ ಮೇಲೆ ದಂಡೆತ್ತಿಹೋಗಿದ್ದಾಗ ಅವನ ವಿರುದ್ಧ ಸುಲ್ತಾನನ ಕಿವಿಯಲ್ಲಿ ವಿಷ ಬೀಜವನ್ನು ಬಿತ್ತಿದರು. ಇಮ್ಮದ್-ಉದ್-ರಿಹಾನ್ ಎಂಬುವನು ಇವರ ನಾಯಕನಾಗಿದ್ದನು. ಇದನ್ನು ನಂಬಿದ ಸುಲ್ತಾನ್ ನಾಸಿರುದ್ದೀನನು 1253ರಲ್ಲಿ ಬಲ್ಬನನ್ನು ಅಧಿಕಾರದಿಂದ ತೆಗೆದುಹಾಕಿದನು ಇಮ್ಮದ್-ಉದ್-ರಿಹಾನನು ಆಡಳಿತ ಸೂತ್ರವನ್ನು ವಹಿಸಿಕೊಂಡನು.

ಇಮ್ಮದ್-ಉದ್-ರಿಹಾನನು ಎರಡು ವರ್ಷಗಳಕಾಲ ಅಧಿಕಾರದಲ್ಲಿದ್ದನು. ಆದರೆ ಅಧಿಕಾರಕ್ಕೆ ಬಂದ ಕೆಲವು ದಿವಸಗಳಲ್ಲಿಯೆ ಇವನು ದುರಂಹಕಾರಿಯಾಗಿ ವರ್ತಿಸತೊಡಗಿದನು. ಇಂತಹ ನಡವಳಿಕೆಯಿಂದ ಟರ್ಕಿ ನೋಬಲ್ಲರು ಅಸಮಧಾನಗೊಂಡರು. ಇದಲ್ಲದೆ ಆಡಳಿತದಲ್ಲಿ ಮಂದಗತಿಯು ಕಂಡುಬಂದಿತು. ದಂಗೆಗಳು ಅಲ್ಲಲ್ಲಿ ಕಂಡುಬಂದವು. ಹೀಗಾಗಿ ರಾಜ್ಯದಲ್ಲಿ ಅರಾಜಕತೆಯ ಪರಿಸ್ಥಿತಿಯು ಕಂಡುಬಂದಿತು. ಇಮ್ಮದ್ ಉದ್ದೀನ್ ರಿಹಾನ್‌ನನ್ನು ಅಧಿಕಾರದಿಂದ ನಿವೃತ್ತಿಗೊಳಿಸಬೇಕೆಂದು ಸುಲ್ತಾನನಿಗೆ ಬೇಡಿಕೆಗಳು ಬಂದವು. ಆ ಮೇರೆಗೆ ಸುಲ್ತಾನನು ಅವನನ್ನು ನಿವೃತ್ತಿಗೊಳಿಸಿ ಬದಾವನ್‌ಗೆ ರಾಜ್ಯಪಾಲನನ್ನಾಗಿ ನೇಮಿಸಿ ಕಳುಹಿಸಿದನು. ಅನಂತರ ನಾಸಿರುದ್ದೀನನು ಬಲ್ಬನ್ನನನ್ನು ಹಿಂದಕ್ಕೆ ಕರೆಸಿಕೊಂಡು ಪುನಃ ಅವನನ್ನು ತನ್ನ ಪ್ರಧಾನ ಮಂತ್ರಿಯನ್ನಾಗಿ ಮಾಡಿಕೊಂಡನು.

**ಬಲ್ಬನ್ನನ ಸಿಂಹಾಸನಾರೋಹಣ**

ಸುಲ್ತಾನ್ ನಾಸಿರುದ್ದೀನ್ ಮಹಮದನು 1266ರಲ್ಲಿ ಕಾಲವಾದ ನಂತರ ಬಲ್ಬನ್ನನು ಘಿಯಾಸುದ್ದೀನ್ ಎಂಬ ಬಿರುದಿನಿಂದ ಸಿಂಹಾಸನವನ್ನೇರಿದನು. ಇವನ ಸಿಂಹಾಸನಾರೋಹಣದೊಂದಿಗೆ ದೆಹಲಿಯಲ್ಲಿ ಎರಡನೆ ಇಲ್ಬರಿ ಸಂತತಿಯವರ ಆಳ್ವಿಕೆಯ ಆರಂಭವಾಯಿತು. ಬಲ್ಬನ್ನನು ಸಿಂಹಾಸನವನ್ನೇರಿದಾಗ ಅವನಿಗೆ ರಾಜಕೀಯ ಕ್ಷೇತ್ರದಲ್ಲಿ ಅಪಾರವಾದ ಅನುಭವವಿತ್ತು. ಅವನು ಸುಲ್ತಾನನಾಗಿ ಅಧಿಕಾರರೂಢನಾದ ತಕ್ಷಣವೇ ರಾಜ್ಯದ ಸುಗಮವಾದ ಆಡಳಿತಕ್ಕೆ ಕಂಟಕ ಪ್ರಾಯರೂ ಮತ್ತು ಸ್ವಹಿತಸಾಧಕರೂ ಆಗಿದ್ದ ನೋಬಲ್ಲರನ್ನು ಹತ್ತಿಕ್ಕಲು ಕಠಿಣ ಕ್ರಮಗಳನ್ನು ಕೈಗೊಂಡನು. ನೋಬಲ್ಲರ ಚಲನವಲನಗಳನ್ನು ತಿಳಿದು ತನಗೆ ವರದಿಯೊಪ್ಪಿಸಲು ಗೂಢಾಚಾರರನ್ನು ನೇಮಿಸಿಕೊಂಡನು. ಸುಲ್ತಾನನ ವಿರುದ್ಧ ಒಳಸಂಚು ನಡೆಸುತ್ತಿರುವನೆಂದು ತಿಳಿದು ಬಂದನೋಬಲ್ಲರನ್ನು ನಿರ್ದಯೆಯಿಂದ ಶಿಕ್ಷಿಸಿದನು. ಕೆಲವು ವೇಳೆ ಸಂಶಯಕ್ಕೊಳಗಾದ ನೋಬಲ್ಲರನ್ನು ಗುಪ್ತವಾಗಿ ಕೊಲೆಮಾಡಿಸಿದನು. ಯಾವ ಅಧಿಕಾರಿಯಾಗಲೀ ಅಥವ ನೋಬಲ್ಲನಾಗಲೀ ಪ್ರಜೆಗಳಿಗೆ ಕಿರುಕುಳ ಕೊಡುತ್ತಿರುವನೆಂಬುದಾಗಿ ತಿಳಿದು ಬಂದರೆ ಅವರ ಸ್ಥಾನಮಾನಗಳೇನೇ ಇದ್ದರೂ ನಿರ್ದಾಕ್ಷಣ್ಯವಾಗಿ ಶಿಕ್ಷಿಸುತ್ತಿದ್ದನು. ಬಲ್ಬನ್ನನು ನಿಷ್ಪಕ್ಷಪಾತಿಯಾದ ದೊರೆಯಾಗಿದ್ದನು. ಅವನು ಒಂದಲ್ಲ ಒಂದು ನೆಪದಿಂದ ನೋಬಲ್ಲರ ಆಸ್ತಿಪಾಸ್ತಿಗಳನ್ನು ಮುಟ್ಟುಗೋಲು ಹಾಕಿಕೊಂಡು ಅವರ ಅಧಿಕಾರ ಮತ್ತು ಪ್ರಭಾವಗಳನ್ನು ಹತ್ತಿಕ್ಕಿದನು.

ಬಲ್ಬನ್ನನು ಅಧಿಕಾರ ವಹಿಸಿಕೊಂಡ ಸಮಯದಲ್ಲಿ ರಾಜ್ಯದ ಪರಿಸ್ಥಿತಿಯು ಹೇಗಿದ್ದಿತೆಂಬುದನ್ನು ಇತಿಹಾಸಕಾರ ಭರಣಿಯು ಸ್ವಾರಸ್ಯಕರವಾಗಿ ವರ್ಣಿಸಿರುವನು

"ಒಳ್ಳೆಯ ಸರ್ಕಾರಕ್ಕೆ ಮತ್ತು ರಾಜ್ಯದ ಘನತೆಗೌರವಗಳಿಗೆ ಮುಖ್ಯ ಅಂಶವಾಗಿದ್ದ ಅಧಿಕಾರದ ಭೀತಿಯು ಜನಗಳ ಹೃದಯದಿಂದ ಕಣ್ಮರೆಯಾಗಿತ್ತು. ದೇಶದಲ್ಲಿ ಅವ್ಯವಸ್ಥೆಯು ತುಂಬಿ ತುಳುಕುತ್ತಿತ್ತು. ರಾಜ್ಯಾಡಳಿತದಲ್ಲಿ ಮೇಧಾವಿಯೂ ಮತ್ತು ಆಡಳಿತದಲ್ಲಿ ಮಹಾ ಅನುಭವಿಯೂ ಆಗಿದ್ದ ಬಲ್ಬನ್ನನು ಜನಗಳ ಹೃದಯದಲ್ಲಿ ಅಧಿಕಾರದ ಭೀತಿಯನ್ನುಂಟುಮಾಡಿ ಅವರು ಸುಲ್ತಾನನಿಗೆ ವಿಧೇಯರಾಗಿರುವಂತೆ ಬುದ್ಧಿಕಲಿಸುವುದರಲ್ಲಿ ಯಶಸ್ವಿಯಾದನು." ನಿರ್ದಯೆಯಿಂದ ಉಗ್ರಕ್ರಮಗಳನ್ನು ಕೈಗೊಂಡು ರಾಜ್ಯದಲ್ಲಿನ ಅವ್ಯವಸ್ಥೆಗೆ ಕಾರಣವಾಗಿದ್ದ ದುಷ್ಟಶಕ್ತಿಗಳೆಲ್ಲವನ್ನೂ ಅಡಗಿಸಿದನು.

**ಸುಲ್ತಾನನ ಅಂತಸ್ತಿನ ಹೆಚ್ಚಳ**

ಬಲ್ಬನ್ನನು ಸುಲ್ತಾನನಾದ ಮೇಲೆ ಸುಲ್ತಾನನಿಗೂ ಮತ್ತು ನೋಬಲ್ಲರಿಗೂ ಇರುವ ರಾಜಕೀಯ ಮತ್ತು ಸಾಮಾಜಿಕ ಸ್ಥಾನಮಾನಗಳ ಅಂತರವನ್ನು ಸ್ಪಷ್ಟಪಡಿಸಲು ಅನೇಕ ಕ್ರಮಗಳನ್ನು ಕೈಗೊಂಡನು. ಕಳೆದ ಮೂವತ್ತು ವರ್ಷಗಳಿಂದಲೂ ಸಂಭವಿಸುತ್ತಿದ್ದ ದೊಂಬಿಗಲಭೆಗಳಿಗೆ ಸುಲ್ತಾನನ ದೌರ್ಬಲ್ಯವೆ, ಕಾರಣವೆಂದು ಅವನ ಮನಗಂಡಿದ್ದನು. ಬಲ್ಬನ್ನನನ್ನು ತಮಗಿಂತಲೂ ಕೀಳೆಂದು ಕೆಲವು ಷಾಂಷಿ ನೋಬಲ್ಲರುಗಳು ಅವನ ಬಗ್ಗೆ ಅಗೌರವ ಹೊಂದಿದ್ದರು. ಆದ್ದರಿಂದ ಬಲ್ಬನ್ನನಿಗೆ ತನ್ನ ಸ್ಥಾನಮಾನಗಳನ್ನೂ ಸುಲ್ತಾನನ ಅಂತಸ್ತನ್ನು ಹೆಚ್ಚಿಸಿಕೊಳ್ಳಲು ಕ್ರಮಗಳನ್ನು ಕೈಗೊಳ್ಳುವುದು ಅನಿವಾರ್ಯವಾಗಿತ್ತು. ಪ್ರವಾದಿ ಮಹಮದನನ್ನು ಬಿಟ್ಟರೆ ಸುಲ್ತಾನನ ಅಂತಸ್ತು ಮತ್ತು ದೇವರ ಕೃಪೆಗ ಪಾತ್ರನಾದವನು ಮಾತ್ರ ಆ ಸ್ಥಾನವನ್ನು ಪಡೆಯುತ್ತಾನೆಂದು ಸ್ಪಷ್ಟಪಡಿಸಿದನು. ಅಲ್ಲದೆ ಸುಲ್ತಾನನಾಗುವ ಅಧಿಕಾರವನ್ನು ಉತ್ತಮ ಕುಲದಲ್ಲಿ ಜನಿಸಿದವನಿಗೆ ಮಾತ್ರ ದೇವರು ಕೊಟ್ಟಿರುವನೆಂದು ತಿಳಿಸಿದನು.

ಬಲ್ಬನ್ನನು ಪುರಾತನ ಅಫ್ರಿಸಿಯಾಬ್ ನಾಯಕನ ವಂಶಕ್ಕೆ ತಾನು ಸೇರಿದವನೆಂದು ಹೇಳಿಕೊಂಡನು. ಪ್ರಾಚೀನ ಸಾರ್ವಭೌಮರುಗಳ ಹೆಸರುಗಳನ್ನು ಅನುಕರಣೆಮಾಡಿ ತನ್ನ ಮೊಮ್ಮಕ್ಕಳಿಗೆ ಕೈಖುಸ್ರು ಮತ್ತು ಕೈಕುಬಾದ್ ಎಂಬ ಹೆಸರುಗಳನ್ನಿಟ್ಟನು. ಸರ್ಕಾರದ ಹುದ್ದೆಗಳಿಗೆ ನೇಮಕ ಮಾಡುವಾಗ ಹುಟ್ಟಿನ ಅರ್ಹತೆಯ ಮೇಲೆ ನೇಮಕ ಮಾಡುತ್ತಿದ್ದನು. ಒಮ್ಮೆ ದೆಹಲಿಯ ಶ್ರೀಮಂತನೊಬ್ಬನು ಸುಲ್ತಾನನಿಗೆ ಹೆಚ್ಚು ಬೆಲೆ ಬಾಳುವ ಉಡುಗೊರೆಗಳನ್ನು ಒಪ್ಪಿಸಲು ಹೋದಾಗ ಸುಲ್ತಾನನು ಅವನು ಕೀಳುಜಾತಿಗೆ ಸೇರಿದವನೆಂದು ಅದನ್ನು ನಿರಾಕರಿಸಿದನು. ಬಲ್ಬನ್ನನು ತನ್ನ ಆಸ್ಥಾನವನ್ನು ಪರ್ಶಿಯನ್ ಮಾದರಿಯಲ್ಲಿ ವ್ಯವಸ್ಥೆಗೊಳಿಸಿ ಪರ್ಶಿಯನ್ ಸಂಪ್ರದಾಯಗಳನ್ನು ಜಾರಿಗೆ ತಂದನು. ಸುಲ್ತಾನನ ಅಂಗರಕ್ಷಕರೂ ಕೂಡ ಶೋಭಾಯಮಾನವಾದ ಉಡುಗೆಗಳನ್ನು ತೊಟ್ಟು ಸಿಂಹಾಸನದ ಹಿಂದೆ ಆಯುಧಧಾರಿಗಳಾಗಿ ನಿಂತಿರಬೇಕಿತ್ತು. ದರ್ಬಾರಿಗೆ ಸುಲ್ತಾನನ ಆಗಮನವನ್ನೂ ಮತ್ತು ನಿರ್ಗಮನವನ್ನೂ ಅಧಿಕಾರಿಗಳು ಸಭ್ಯ ರೀತಿಯಲ್ಲಿ ಪ್ರಚುರಪಡಿಸಬೇಕಾಗಿತ್ತು. ಇದರಿಂದ ಆಸ್ಥಾನದಲ್ಲಿ ಒಂದು ರೀತಿಯ ಗಂಭೀರ ವಾತಾವಣವು ಏರ್ಪಟ್ಟಿತು. ದರ್ಬಾರು ನಡೆಯುತ್ತಿದ್ದ ಸಮಯದಲ್ಲಿ ಯಾರೇ ಆಗಲಿ ಲಘುವಾಗಿ ಮಾತುಗಳನ್ನಾಡುವುದಕ್ಕಾಗಲೀ, ಪಿಸುಗುಟ್ಟುವುದಕ್ಕಾಗಲೀ ಅವಕಾಶವಿರಲಿಲ್ಲ.

ಮಧ್ಯಪಾನೀಯಗಳನ್ನು ಸೇವಿಸಿ ಆಸ್ಥಾನವನ್ನು ಪ್ರವೇಶಿಸುವುದನ್ನು ನಿಷೇಧಿಸಿದನು. ಇಂತಹ ಹಲವಾರು ಕ್ರಮಗಳಿಂದ ಬಲ್ಬನ್ನನು ಸುಲ್ತಾನನ ಬಗ್ಗೆ ಗೌರವವೂ ಮತ್ತು ಭಯಭೀತಿಯೂ ಜನರಲ್ಲಿ ಬೆಳೆಯುವಂತೆ ಮಾಡಿ ಸುಲ್ತಾನನ ಸ್ಥಾನಮಾನಗಳನ್ನು ಹೆಚ್ಚಿಸಿದನು.

**ಸೈನಿಕ ಸುಧಾರಣೆ**

ಬಲ್ಬನ್ನನು ತನ್ನ ಆಸ್ಥಾನದಲ್ಲಿನ ಟರ್ಕಿನೋಬಲ್ಲರ ಸ್ಥಾನಮಾನಗಳನ್ನು ಮತ್ತು ಅಧಿಕಾರಗಳನ್ನು ಕಡಿಮೆಮಾಡುವುದರಿಂದಲೇ ದೆಹಲಿಯ ಸುಲ್ತಾನರ ರಾಜ್ಯವು ಸುರಕ್ಷಿತವಾಗಿರಲಾರದೆಂದು ಮನಗಂಡಿದ್ದನು. ರಾಜ್ಯದಲ್ಲಿನ ಆಂತರಿಕ ದಂಗೆಗಳನ್ನು ಅಡಗಿಸುವುದಕ್ಕೂ ಮತ್ತು ಮಂಗೋಲರ ಧಾಳಿಗಳನ್ನು ಎದುರಿಸುವುದಕ್ಕೂ ದಕ್ಷವಾದ ಸೈನ್ಯವಿರುವುದು ಅತ್ಯವಶ್ಯಕವೆಂದು ತಿಳಿದು ಸೈನ್ಯಾಡಳಿತದಲ್ಲಿ ಅನೇಕ ಸುಧಾರಣೆಗಳನ್ನು ಜಾರಿಗೆ ತಂದನು. ಇಲ್ತಮಷ್‌ನು ದೋಬ್ ಪ್ರಾಂತ್ಯದಲ್ಲಿ ಸೈನಿಕರಿಗೆ ಅವರ ಸೇವೆಗೆ ಪ್ರತಿಫಲವಾಗಿ ಭೂಮಿಯನ್ನು ಉಂಬಳಿಯಾಗಿ ಕೊಟ್ಟಿದ್ದನು. ಈ ಸೈನಿಕರ ವಂಶಸ್ತರು ಆ ಜಹಗೀರುಗಳಿಗೆ ಉತ್ತರಾಧಿಕಾರಿಗಳಾಗಿ ಸರ್ಕಾರಕ್ಕೆ ಯಾವ ರೀತಿಯ ಸೇವೆಯನ್ನು ಸಲ್ಲಿಸದೆ ವಿಲಾಸಯುತ ಜೀವನ ನಡೆಸುತ್ತಿದ್ದರು. ಇಂತಹವರ ಸಂಖ್ಯೆಯು ಸುಮಾರು ಎರಡು ಸಾವಿರಕ್ಕೂ ಹೆಚ್ಚಾಗಿದ್ದಿತು. ಬಲ್ಬನ್ನನು ಸುಲ್ತಾನನಾದ ಮೇಲೆ ಈ ಪರಿಸ್ಥಿತಿಯನ್ನು ಸುಧಾರಿಸಲು ಪ್ರಯತ್ನಿಸಿದನು. ಅವನು ಸೈನಿಕರ ನೇಮಕ ಮತ್ತು ಸೇವೆಯ ನಿಯಮಗಳ ಬಗ್ಗೆ ವಿಚಾರಣೆ ಮಾಡಲು ಆಜ್ಞೆಯೊಂದನ್ನು ಹೊರಡಿಸಿ ಉಂಬಳಿಗಳನ್ನು ಪುಕ್ಕಟೆಯಾಗಿ ಹೊಂದಿದ್ದವರ ಪಟ್ಟಿಯೊಂದನ್ನು ಸಿದ್ಧಗೊಳಿಸಿ ಕ್ರಮ ಕೈಗೊಂಡನು. ಸುಲ್ತಾನನ ಈ ಕ್ರಮಗಳಿಂದ ಕಳವಳಗೊಂಡ ವೃದ್ಧ ಸೈನಿಕರು ಮತ್ತಿತರ ಅನಾಥರು ಸುಲ್ತಾನನೊಂದಿಗೆ ನಿಕಟ ಪರಿಚಯವನ್ನು ಹೊಂದಿದ್ದ ದೆಹಲಿಯ ಕೊತ್ವಾಲನಾಗಿದ್ದ ಫಕ್ರುದ್ದೀನನ ಮೊರೆಹೊಕ್ಕು ತಮಗೆ ಸಹಾಯ ಮಾಡಬೇಕೆಂದು ಕೇಳಿಕೊಂಡರು. ಕೊತ್ವಾಲನು ಅವರ ಬಗ್ಗೆ ಕರುಣೆ ತೋರಬೇಕೆಂದು ಸುಲ್ತಾನನನ್ನು ಪ್ರಾರ್ಥಿಸಿ ಕೊಂಡನು. ಸುಲ್ತಾನನು ಅವರ ಬಗ್ಗೆ ಕನಿಕರಗೊಂಡು ಉಂಬಳಿಗಳನ್ನು ವಶಪಡಿಸಿಕೊಳ್ಳುವ ಪ್ರಯತ್ನವನ್ನು ಕೈಬಿಟ್ಟನು. ಆದರೂ ಸುಲ್ತಾನನು ತನ್ನ ಸೈನ್ಯದ ಮೇಲ್ವಿಚಾರಣೆಯನ್ನು ನೋಡಿಕೊಳ್ಳಲು ನಂಬಿಕಸ್ತರೂ ಮತ್ತು ಅನುಭವಸ್ತರೂ ಆದ ಅಧಿಕಾರಿಗಳನ್ನು ನೇಮಿಸಿ ಸೈನ್ಯವನ್ನು ದಕ್ಷವಾಗಿರಿಸಿದನು.

**ಆಂತರಿಕ ದಂಗೆಗಳನ್ನು ಹತ್ತಿಕ್ಕುದುದು**

ಬಲ್ಬನ್ನನು ತನ್ನ ಸ್ಥಾನವನ್ನು ಬಲಗೊಳಿಸಿಕೊಂಡ ಮೇಲೆ ರಾಜ್ಯದ ಶಾಂತಿಗೆ ಭಂಗವನ್ನುಂಟುಮಾಡುತ್ತಿದ್ದ ದಂಗೆಕೋರರನ್ನು ಹತ್ತಿಕ್ಕಲು ಕಠಿಣವಾದ ಕ್ರಮಗಳನ್ನು ಕೈಗೊಂಡನು. ದಂಗೆಕೋರ ಮೇವಾಟರನ್ನು ಹತ್ತಿಕ್ಕಿದನು. ದೆಹಲಿಯ ಸುತ್ತಮುತ್ತ ಅವರ ಹಾವಳಿಯು ಹೆಚ್ಚಾಗಿದ್ದಿತು. ಮೇವಾಟರು ರಾತ್ರಿ ವೇಳೆಯಲ್ಲಿ ರಾಜಧಾನಿಯ ಸುತ್ತಮುತ್ತ ದರೋಡೆ ಮೊದಲಾದ ಕೃತ್ಯಗಳಲ್ಲಿ ತೊಡಗಿದ್ದರು. ಅವರ ಉಪಟಳವನ್ನು ಸಹಿಸುವುದು ಜನರಿಗೆ ಬಹುಕಷ್ಟವಾಗಿದ್ದಿತು. ಬಲ್ಬನ್ನನು ದರೋಡೆಕಾರರಿಗೆ ರಕ್ಷಣಾ ಸ್ಥಳಗಳಾಗಿದ್ದ ಕಾಡುಗಳೆಲ್ಲವನ್ನೂ ಕಡಿಸಿಹಾಕಿ ಅವರನ್ನು ಸಂಪೂರ್ಣವಾಗಿ ಅಡಗಿಸಿದನು. ರಾಜಧಾನಿಯ ರಕ್ಷಣೆಗಾಗಿ ಸೈನಿಕ ಠಾಣೆಗಳನ್ನು ನಿರ್ಮಿಸಿ ಅವುಗಳಲ್ಲಿ ದಕ್ಷ ಆಫ್ಘನ್

ಸೈನಿಕರನ್ನಿರಿಸಿದನು. ದೋಬ್ ಪ್ರಾಂತ್ಯದಲ್ಲಿಯೂ ಸಹ ಇಂತಹದೇ ಪರಿಸ್ಥಿತಿಯಿದ್ದಿತು. ಅಲ್ಲಿನ ಹಿಂದುಗಳು ದರೋಡೆಯನ್ನು ತಮ್ಮ ಕಸುಬನ್ನಾಗಿ ಮಾಡಿಕೊಂಡು ದೆಹಲಿ ಮತ್ತು ಬಂಗಾಳಗಳ ಹೆದ್ದಾರಿಯನ್ನು ಹೆಚ್ಚು ಕಡಿಮೆ ಪ್ರಯಾಣಿಕರಿಗೆ ಮುಚ್ಚಿಬಿಟ್ಟಿದ್ದರು. ಹೀಗಾಗಿ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಸರಕುಗಳನ್ನು ಸಾಗಿಸುವುದು ಬಹಳ ಕಷ್ಟವಾಗಿತ್ತು. ಬಲ್ಬನ್ನನು ಇವರ ವಿರುದ್ಧ ಸೈನಿಕ ಕಾರ್ಯಾಚರಣೆಗಳನ್ನಾರಂಭಿಸಿ ಅವರ ಹುಟ್ಟನ್ನು ಅಡಗಿಸಿ ಪ್ರಯಾಣಿಕರು ಮತ್ತು ವ್ಯಾಪಾರಿಗಳು ಭೀತಿಯಿಲ್ಲದೆ ರಸ್ತೆಗಳಲ್ಲಿ ಸಂಚರಿಸಲು ಅನುಕೂಲ ಮಾಡಿಕೊಟ್ಟನು. ಅವರ ಹಳ್ಳಿಗಳಿಗೆ ಬೆಂಕಿ ಇಡಿಸಿದನು. ಗಂಡಸರನ್ನು ಸೆರೆಹಿಡಿದು ಕೊಲ್ಲಿಸಿದನು ಮತ್ತು ಅವರ ಹೆಂಗಸರು ಮತ್ತು ಮಕ್ಕಳನ್ನು ಗುಲಾಮರನ್ನಾಗಿ ಮಾಡಿದನು. ಅಂತೆಯೆ ಕಾಥೇಹಾರ್ (ಉತ್ತರ ಪ್ರದೇಶದ ರೋಹಿಲ್‌ಖಂಡ)ನಲ್ಲಿ ದಂಗೆಯೆದ್ದಿದ ಹಿಂದುಗಳನ್ನು ನಿರ್ದಯೆಯಿಂದ ಶಿಕ್ಷಿಸಿದನು. ಹೀಗೆ ಸುಲ್ತಾನನು ಉಗ್ರಕ್ರಮಗಳನ್ನು ಕೈಗೊಂಡು ಮೀವಾಟ್, ದೋಬ್ ಮತ್ತು ಕಾಥೇಹಾರ್‌ಗಳಲ್ಲಿನ ದಂಗೆಗಳನ್ನು ಅಡಗಿಸಿ ರಾಜ್ಯದಲ್ಲಿ ಶಾಂತಿ ಮತ್ತು ಶಿಸ್ತು ನೆಲೆಸುವಂತೆ ಮಾಡಿದನು.

ಬಲ್ಬನ್ನನು ಆಂತರಿಕ ಆಡಳಿತ ವ್ಯವಸ್ಥೆಯಲ್ಲಿ ದಕ್ಷತೆಯನ್ನುಂಟುಮಾಡಿದನು. ಅದರಲ್ಲಿ ಅರ್ಧಭಾಗವು ಸೈನ್ಯಾಡಳಿತಕ್ಕೆ ಸಂಬಂಧಿಸಿದುದಾದರೆ ಉಳಿದರ್ಧ ಭಾಗವು ನಾಗರಿಕ ಆಡಳಿತಕ್ಕೆ ಸಂಬಂಧ ಪಟ್ಟಿದ್ದಿತು. ಬಲ್ಬನ್ನನು ಆಡಳಿತಾಧಿಕಾರವನ್ನೆಲ್ಲಾ ತನ್ನ ಕೈಯಲ್ಲೆ ಕೇಂದ್ರಿಕರಿಸಿಕೊಂಡಿದ್ದನು. ಅವನು ಆಜ್ಞೆಗಳನ್ನು ಕಟ್ಟುನಿಟ್ಟಾಗಿ ಜಾರಿಗೆ ಕೊಡುತ್ತಿದ್ದನು. ಬಹುಮುಖ್ಯ ಪ್ರಾಂತ್ಯಗಳ ಮೇಲೆ ಅಧಿಕಾರವನ್ನು ಹೊಂದಿದ್ದ ಅವನ ಮಕ್ಕಳೂ ಕೂಡ ಸ್ವತಂತ್ರವಾಗಿ ವರ್ತಿಸುವಂತಿರಲಿಲ್ಲ. ನ್ಯಾಯ ತೀರ್ಮಾನದಲ್ಲಿ ಪಕ್ಷಪಾತವಿಲ್ಲದೆ ನಡೆದು ಕೊಳ್ಳುತ್ತಿದ್ದನು. ಅವನ ಸಂಬಂಧಿಕರಾಗಿದ್ದರೂ ಸರಿಯೆ ಅವರೇನಾದರೂ ಅನ್ಯಾಯ ವೆಸಗಿದ್ದರೆ ತೊಂದರೆಗೊಳಗಾದವರಿಗೆ ಸೂಕ್ತ ಪರಿಹಾರ ನೀಡುತ್ತಿದ್ದನು. ಸುಲ್ತಾನನ ನ್ಯಾಯನಿಷ್ಠೆ ಎಷ್ಟಿತ್ತೆಂದರೆ ಯಾರೊಬ್ಬರೂ ತಮ್ಮ ಸೇವಕರನ್ನು ಕೀಳಾಗಿ ಕಾಣುವಂತಿರಲಿಲ್ಲ. ಬದಾವನ್ ರಾಜ್ಯಪಾಲನಾಗಿದ್ದ ಮಲ್ಲಿಕ್ ಬಾಕ್ ಬಾಕ್ ಎಂಬುವನು ತನ್ನ ಸೇವಕನೊಬ್ಬನನ್ನು ಚಾವಟಿಯಿಂದ ಹೊಡೆದು ಸಾಯಿಸಿದನೆಂಬ ಕಾರಣದಿಂದ ಅವನನ್ನು ಬದಾವನ್‌ನ ಗೇಟಿನ ಬಳಿ ನೇಣು ಹಾಕಿಸಿದನು. ಇಂತಹದೇ ಮತ್ತೊಂದು ಘಟನೆಯು ಔಧ್‌ನ ರಾಜ್ಯಪಾಲನಾಗಿದ್ದ ಹೈಬತ್‌ಖಾನನಿಗೆ ಸಂಬಂಧಿಸಿದುದಾಗಿತ್ತು. ಹೈಬತ್‌ಖಾನನು ಕುಡಿತದ ಅಮಲಿನಲ್ಲಿ ತನ್ನ ಸೈನಿಕನೊಬ್ಬನನ್ನು ಹೊಡೆದು ಸಾಯಿಸಿದ್ದಕ್ಕಾಗಿ ಸುಲ್ತಾನನು ಅವನಿಗೆ ಛಡಿಯಿಂದ ಹೊಡೆಸಿ ಆ ವಿಧವೆಗೆ ಶರಣಾಗುವಂತೆ ಮಾಡಿದನು. ದಂಗೆಕೋರರಿಂದ ಸೋತು ಹಿಂದಿರುಗಿ ಬಂದ ದಂಡನಾಯಕರುಗಳನ್ನು ಸಹ ಜೀವಸಹಿತ ಕೊಲ್ಲಿಸಿದನೆಂದು ಪ್ರತೀತಿಯಿದೆ. ತುಗ್ರಿಲ್ ಖಾನನ ದಂಗೆಯನ್ನು ಅಡಗಿಸುವುದರಲ್ಲಿ ವಿಫಲನಾದ ಅಮೀನ್ ಖಾನ್‌ನನ್ನು ಸಹ ಕೊಲ್ಲಿಸಿದನು. ಬಲ್ಬನ್ನನು ಅಧಿಕಾರಿಗಳ ವರ್ತನೆಗಳನ್ನು ತಿಳಿದು ತನಗೆ ತಿಳಿಸಲು ಗೂಢಾಚಾರ ಪಡೆಯೊಂದನ್ನು ಇಟ್ಟುಕೊಂಡಿದ್ದನು. ಗೂಢಾಚಾರರೇನಾದರೂ ದಾಕ್ಷಿಣ್ಯಕ್ಕೊಳಗಾಗಿ ನಿಜಾಂಶವನ್ನು ಬಚ್ಚಿಟ್ಟಿದ್ದ ಪಕ್ಷದಲ್ಲಿ ಅವರಿಗೂ ಮರಣ ದಂಡನೆಯ ಶಿಕ್ಷೆಯು ಕಾದಿರುತ್ತಿತ್ತು. ಒಟ್ಟಿನಲ್ಲಿ ಬಲ್ಬನ್ನನು ಅಧಿಕಾರಿಗಳ ದೌರ್ಜನ್ಯಗಳಿಂದ ಪ್ರಜೆಗಳ ಆಸ್ತಿಪಾಸ್ತಿಗಳ ಮತ್ತು ಪ್ರಾಣವನ್ನು ಕಾಪಾಡುವುದರಲ್ಲಿ ಹೆಚ್ಚಿನ ಆಸ್ಥೆವಹಿಸಿದ್ದನು.

**ತುಗ್ರಿಲ್ ಖಾನನ - ದಂಗೆ**

ಬಲ್ಬನನ ಆಳ್ವಿಕೆಯಲ್ಲಿ ಸಂಭವಿಸಿದ ದಂಗೆಗಳಲ್ಲೆಲ್ಲಾ ಅತ್ಯಂತ ಭೀಕರವಾದ ದಂಗೆಯು ಬಂಗಾಳದ ರಾಜ್ಯಪಾಲನಾಗಿದ್ದ ತುಗ್ರಿಲ್ ಖಾನನ ದಂಗೆಯಾಗಿದ್ದಿತು. ಬಂಗಾಳವು ರಾಜಧಾನಿಯಾದ ದೆಹಲಿಯಿಂದ ಬಹಳ ದೂರದಲ್ಲಿದ್ದುದರಿಂದ ಅಲ್ಲಿನ ರಾಜ್ಯಪಾಲರುಗಳು ಸುಲ್ತಾನರ ಅಧಿಕಾರವನ್ನು ಧಿಕ್ಕರಿಸಿ ತಮ್ಮ ಸ್ವಾತಂತ್ರ್ಯವನ್ನು ಘೋಷಿಸಿ ಕೊಳ್ಳಲು ತಮಗೆ ಒದಗಿ ಬಂದ ಎಲ್ಲಾ ಅವಕಾಶಗಳನ್ನೂ ಉಪಯೋಗಿಸಿಕೊಳ್ಳುತ್ತಿದ್ದರು. ಬಲ್ಬನ್ನನ ಕಾಲದಲ್ಲಿ ಬಂಗಾಳದ ರಾಜ್ಯಪಾಲನಾಗಿದ್ದ ಮುಘಿಸ್-ಉದ್ದೀನ್ ತುಗ್ರಿಲ್ ಖಾನನು (1268-1281) ತನ್ನ ಹಿಂದಿನ ರಾಜ್ಯಪಾಲರ ನಿದರ್ಶನವನ್ನು ಅನುಸರಿಸಿದಂಗೆಯೆದ್ದು ತನ್ನ ಸ್ವಾತಂತ್ರ್ಯವನ್ನು ಘೋಷಿಸಿಕೊಂಡು ನಾಣ್ಯಗಳನ್ನು ತನ್ನ ಹೆಸರಿನಲ್ಲಿ ಅಚ್ಚು ಹಾಕಿಸಿ ಜಾರಿಗೆ ತಂದನು. ಬಲ್ಬನ್ನನು ಔಧ್‌ನ ಇಬ್ಬರು ರಾಜ್ಯಪಾಲರುಗಳನ್ನು ಒಬ್ಬರಾದಮೇಲೊಬ್ಬರಂತೆ ಅವನ ದಂಗೆಯನ್ನು ಅಡಗಿಸಲು ಕಳುಹಿಸಿದನು. ಆದರೆ ಅವರಿಬ್ಬರೂ ದಂಗೆಯನ್ನು ಅಡಗಿಸುವುದರಲ್ಲಿ ವಿಫಲರಾಗಿ ಹಿಂದಿರುಗಿದರು. ಆನಂತರ ಬಲ್ಬನ್ನನು ತನ್ನ ಮಗ ಬುಗ್ರಾಖಾನನೊಂದಿಗೆ ತುಗ್ರಿಲ್‌ಖಾನನ ವಿರುದ್ಧ ಅಪಾರ ಸೈನ್ಯದೊಂದಿಗೆ ಹೋಗಿ ಅವನನ್ನು ಸೋನಾರ್‌ಗಾವನ್ (ಡಕ್ಕಾದ ಹತ್ತಿರ) ಎಂಬಲ್ಲಿ ಸೋಲಿಸಿ ಕೊಂದನು. ಆನಂತರ ಬಲ್ಬನ್ನನು ಲಕ್ನಾವತಿಗೆ ಹಿಂದಿರುಗಿ ಬಂದು ತುಗ್ರಿಲ್‌ಖಾನನ ಹಿಂಬಾಲಕರೆಲ್ಲರನ್ನೂ ಕ್ರೂರವಾಗಿ ಶಿಕ್ಷಿಸಿದನು. ಲಕ್ನಾವತಿ ನಗರದ ಮಾರುಕಟ್ಟೆಯ ಪ್ರಮುಖ ಬೀದಿಯ ಇಕ್ಕೆಲಗಳಲ್ಲೂ ನೇಣುಗಂಬಗಳನ್ನು ನೆಡಿಸಿ ತುಗ್ರಿಲ್ ಖಾನನ ಕುಟುಂಬದವರನ್ನೂ ಮತ್ತು ಅವನ ಅನುಯಾಯಿಗಳನ್ನು ನೇಣುಹಾಕಿಸಿದನು. ಆನಂತರ ಬುಗ್ರಾಖಾನನನ್ನು ಬಂಗಾಳದ ರಾಜ್ಯಪಾಲನನ್ನಾಗಿ ನೇಮಿಸಿ ದೆಹಲಿಗೆ ಹಿಂದಿರುಗಿದನು. ಆದರೆ ಬಲ್ಬನ್ನನು ಲಕ್ನಾವತಿಯನ್ನು ಬಿಡುವುದಕ್ಕೆ ಮುಂಚೆ ತನ್ನ ಮಗನಿಗೆ ಎಚ್ಚರಿಕೆಯ ಮಾತನ್ನು ಹೇಳುವುದನ್ನು ಮರೆಯಲಿಲ್ಲ. ''ನನ್ನನ್ನು ಚೆನ್ನಾಗಿ ತಿಳಿದುಕೊ ಮತ್ತು ಮರೆಯದಿರು, ಹಿಂದ್ ಅಥವ ಸಿಂದ್ ಮಾಳವ, ಅಥವಾ ಗುಜರಾತ್ ಅಥವ ಲಕ್ನಾವತಿ ಯಾವುದೇ ಪ್ರಾಂತ್ಯದ ರಾಜ್ಯಪಾಲನಾಗಲೀ ದೆಹಲಿಯ ಸಿಂಹಾಸನದ ವಿರುದ್ಧ ದಂಗೆಯೆದ್ದ ಪಕ್ಷದಲ್ಲಿ ತುಗ್ರಿಲ್‌ಖಾನನ ಗತಿಯೇ ಅವರಿಗೂ ಆಗುತ್ತದೆ'' ಈ ರೀತಿಯ ಕ್ರೂರ ಶಿಕ್ಷೆಗಳಿಂದ ಬಲ್ಬನ್ನನ ರಾಜ್ಯಾಡಳಿತ ನೀತಿಯು ಹೇಗಿದ್ದಿತೆಂಬುದನ್ನೂ ತಿಳಿಯಬಹುದಾಗಿದೆ. ಇಂತಹ ಕ್ರೂರ ಶಿಕ್ಷೆಗಳನ್ನು ತಾವೆಂದೂ ಕಂಡಿರಲಿಲ್ಲವೆಂದೂ ಮತ್ತು ಕೇಳಿರಲಿಲ್ಲವೆಂದು ಕೆಲವು ವೃದ್ಧರು ಹೇಳಿದುದನ್ನು ತಾನು ಕೇಳಿದನೆಂದು ಇತಿಹಾಸಕಾರ ಭರಣಿಯು ಹೇಳುತ್ತಾನೆ.

**ಮಂಗೋಲರ ಧಾಳಿ**

ಬಲ್ಬನ್ನನು ಕೇವಲ ರಾಜ್ಯದೊಳಗೆ ಶಾಂತಿ ವ್ಯವಸ್ಥೆಗಳನ್ನು ಏರ್ಪಡಿಸುವುದರಲ್ಲಿಯೇ ಸಮಾಧಾನಪಟ್ಟುಕೊಳ್ಳುವವನಾಗಿರಲಿಲ್ಲ. ರಾಜ್ಯದ ವಾಯುವ್ಯಗಡಿಯ ಮೇಲೆ ಆಗಾಗ್ಗೆ ಧಾಳಿ ಮಾಡುತ್ತಿದ್ದ ಮಂಗೋಲರ ಬಗ್ಗೆಯೂ ಎಚ್ಚರಿಕೆ ವಹಿಸಿದ್ದನು. ಒಂದು ಸಂದರ್ಭದಲ್ಲಿ ಅವನ ಆಸ್ಥಾನಿಕರು ಮಾಳವ ಮತ್ತು ಗುಜರಾತುಗಳನ್ನು ಗೆದ್ದು ವಶಪಡಿಸಿಕೊಳ್ಳುವಂತೆ ಸುಲ್ತಾನನ್ನು ಒತ್ತಾಯಿಸಿದರು. ಆದರೆ ...ನು ರಾಜ್ಯಕ್ಕೆ ಅಂದು ಒಳಗಿನ ಮತ್ತು ಹೊರಗಿನ ಶತ್ರುಗಳಿಂದ ಒದಗಿದ್ದ ...ನ ಪರಿಸ್ಥಿತಿಯನ್ನು ಅರಿತುಕೊಂಡು ರಾಜ್ಯ ವಿಸ್ತರಣೆ ಬದಲಾಗಿ ರಾಜ್ಯ

ಸಂಘಟನೆಗೆ ಮತ್ತು ಭದ್ರತೆಗೆ ಆದ್ಯಗಮನ ಕೊಟ್ಟನು. ಅಲ್ಲದೆ ಬಲ್ಬನ್ನನು ತನ್ನ ಆಸ್ಥಾನಿಕರಿಗೆ ಈ ರೀತಿ ಉತ್ತರ ಹೇಳಿದನು. ಮಂಗೋಲರಿಂದ ಖಲೀಫನ ರಾಜಧಾನಿಯಾಗಿದ್ದ ಬಾಗ್ದಾದಿಗೆ ಒದಗಿದ್ದ ದುರ್ಗತಿಯು ದೆಹಲಿಗೂ ಒದಗುವುದು ತನಗಿಷ್ಟವಿಲ್ಲವೆಂದು ತಿಳಿಸಿದನು. ಅವನು ಹೊಸ ದಂಡಯಾತ್ರೆಗಳಿಗಿಂತಲೂ ಹೆಚ್ಚಾಗಿ ಮಂಗೋಲರ ಧಾಳಿಗಳಿಂದ ರಾಜ್ಯದಗಡಿಯನ್ನು ರಕ್ಷಿಸುವುದು ಬಹಳ ಮುಖ್ಯವೆಂದು ತಿಳಿದು ಅಲ್ಲಿ ಕಾವಲು ಪಡೆಯನ್ನಿರಿಸಿದನು.

ಗಡಿನಾಡಿನ ಬಹುಮುಖ್ಯ ಪ್ರಾಂತ್ಯವಾಗಿದ್ದ ಮಲ್ತಾನ್-ದೀಪಾಲ್‌ಪುರವನ್ನು ಮೊದಲಿಗೆ ಬಲ್ಬನ್ನನ ಸಂಬಂಧಿಯಾಗಿದ್ದ ಷೇರ್‌ಖಾನ್ ಎಂಬವನು ಆಳುತ್ತಿದ್ದನು. ಅವನು ಕಾಲವಾದ ಮೇಲೆ ಬಲ್ಬನ್ನನು ತನ್ನ ಹಿರಿಯ ಮಗ ಮಹಮದ್‌ಖಾನನನ್ನು ಅಲ್ಲಿಗೆ ನೇಮಿಸಿದನು. ಮಹಮದ್‌ಖಾನನು ಸಮರ್ಥ ಯೋಧನಾಗಿದ್ದುದಲ್ಲದೆ ವಿದ್ಯಾಭಿಮಾನಿಯೂ ಆಗಿದ್ದು ವಿದ್ವಾಂಸರಿಗೆ ಆಶ್ರಯ ನೀಡಿದ್ದನು. ಅಮೀರ್‌ಖುಸ್ರು ಮತ್ತು ಅಮೀರ್‌ಹುಸೇನ್‌ರು ತಮ್ಮ ಸಾಹಿತ್ಯ ಜೀವನವನ್ನು ಅವನ ಉದಾರಾಶ್ರಯದಲ್ಲಿ ಆರಂಭಿಸಿದರು. ಮಹಮದ್‌ಖಾನನು ಭಾರತಕ್ಕೆ ಭೇಟಿಕೊಡಬೇಕೆಂದು ಸುಪ್ರಸಿದ್ಧ ಪರ್ಶಿಯನ್ ಕವಿಯಾಗಿದ್ದ ಸಾದಿಗೆ ಆಮಂತ್ರಣ ನೀಡಿದ್ದನು. ಆದರೆ ಈ ಕವಿಯು ತನ್ನ ಮುಪ್ಪಿನಿಂದಾಗಿ ಅವನ ಆಹ್ವಾನವನ್ನು ನಿರಾಕರಿಸಬೇಕಾಯಿತು. ಗಡಿನಾಡಿನ ಜಿಲ್ಲೆಯಾದ ಸಮಾನಕ್ಕೆ ತನ್ನ ಮತ್ತೊಬ್ಬ ಮಗನಾಗಿದ್ದ ಬುಗ್ರಾಖಾನನನ್ನು ಅಧಿಕಾರಿಯನ್ನಾಗಿ ನೇಮಿಸಿದ್ದನು. ಮಂಗೋಲರ ವಿರುದ್ಧ ಇವರಿಬ್ಬರ ಸೈನಿಕ ಕಾರ್ಯಾಚರಣೆಗಳಿಂದ ಮಂಗೋಲರ ಧಾಳಿಯು ಸದ್ಯಕ್ಕೆ ತಪ್ಪಿತು. ಆದರೆ ಮಹಮದ್‌ಖಾನನು 1885ರಲ್ಲಿ ಮಂಗೋಲರ ವಿರುದ್ಧ ಹೋರಾಡುತ್ತಿದ್ದಾಗ ಕೊಲ್ಲಲ್ಪಟ್ಟನು. ಇದು ಬಲ್ಬನ್ನನಿಗೆ ತುಂಬಲಾಗದ ನಷ್ಟವಾಗಿತ್ತು ಮತ್ತು ಆಗಲೇ ವೃದ್ಧನಾಗಿದ್ದ ಬಲ್ಬನ್ನನು ತನ್ನ ಮಗನ ಸಾವಿನ ಕೊರಗಿನಿಂದ ಚೇತರಿಸಿಕೊಳ್ಳಲಾಗದೆ 1286ರಲ್ಲಿ ಕಾಲವಾದನು. ಬಲ್ಬನ್ನನು ಭಾರತವನ್ನು ಮಂಗೋಲರ ಧಾಳಿಯಿಂದ ಸದ್ಯಕ್ಕೆ ತಪ್ಪಿಸಿದನು. ಆದರೂ ಪಂಜಾಬಿನ ಮೇಲೆ ಮಂಗೋಲರ ಧಾಳಿಗಳು ನಿರಂತರವಾಗಿದ್ದು ಬಲ್ಬನ್ನನು ಕಾಲವಾದ ಮೇಲೂ ಅವರ ಆಕ್ರಮಣಗಳು ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಮುಂದುವರಿದವು.

## ಬಲ್ಬನ್ನನ ವ್ಯಕ್ತಿತ್ವ

ದೆಹಲಿಯ ಟರ್ಕಿ ಸುಲ್ತಾನರುಗಳಲ್ಲಿ ಬಲ್ಬನ್ನನು ಒಬ್ಬ ಪ್ರಸಿದ್ಧ ವ್ಯಕ್ತಿಯಾಗಿದ್ದಾನೆ. ಇವನು ನಲವತ್ತು ವರ್ಷಗಳ ಕಾಲ ರಾಜ್ಯವಾಳಿದನು. ಇದರಲ್ಲಿ ಇಪ್ಪತ್ತು ವರ್ಷಗಳು ಸುಲ್ತಾನ್ ನಾಸಿರುದ್ದೀನನ ಪ್ರಧಾನ ಮಂತ್ರಿಯಾಗಿಯೂ ಇನ್ನುಳಿದ ಇಪ್ಪತ್ತು ವರ್ಷಗಳು ಸುಲ್ತಾನನಾಗಿಯೂ ಬಹಳ ದಕ್ಷತೆಯಿಂದ ರಾಜ್ಯವಾಳಿ ಹೆಸರುಗಳಿಸಿ ಕೊಂಡಿದ್ದಾನೆ. ಭಾರತದಲ್ಲಿ ಟರ್ಕರ ಸಾಮ್ರಾಜ್ಯವನ್ನು ಬಲ್ಬನ್ನನು ಸರ್ವಾಧಿಕಾರತ್ವದ ನೀತಿಯಿಂದ ಆಳಿ ಅದನ್ನು ಒಂದು ಸಂಘಟಿತ ಸಾಮ್ರಾಜ್ಯವನ್ನಾಗಿ ಮಾಡಿದ ಕೀರ್ತಿಯು ಅವನದಾಗಿದೆ. ಮಂಗೋಲರ ಧಾಳಿಗಳನ್ನು ತಡೆಗಟ್ಟಿದುದಲ್ಲದೆ ಆಂತರಿಕ ದಂಗೆಗಳನ್ನು ಮತ್ತು ಆಸ್ಥಾನದಲ್ಲಿ ಟರ್ಕಿನೋಬಲ್ಲರ ಗುಂಪುಗುಳಿತನದ ಪ್ರಭಾವವನ್ನು ಹತ್ತಿಕ್ಕಿ ದೆಹಲಿಯ ಸುಲ್ತಾನರ ಪ್ರಭುತ್ವಕ್ಕೆ ಭದ್ರವಾದ ಬುನಾದಿ ಹಾಕಿದನು. ಅವನು ರಾಜ್ಯದ ಐಶ್ವರ್ಯವನ್ನು ಮತ್ತು ತನ್ನ ಶಕ್ತಿ ಸಾಮರ್ಥ್ಯಗಳನ್ನು ರಾಜ್ಯ ವಿಸ್ತರಣೆ

ಮಾಡಲು ವಿನಿಯೋಗಿಸುವುದಕ್ಕೆ ಬದಲಾಗಿ ಆಗಲೇ ಟರ್ಕರ ಅಧೀನಕ್ಕೊಳಪಟ್ಟಿದ್ದ ಪ್ರದೇಶಗಳನ್ನು ಸಂಘಟಿಸಲು ಉಪಯೋಗಿಸಿದನು. ಈ ದೃಷ್ಟಿಯಲ್ಲಿ ಅವನ ರಾಜಕೀಯ ಪ್ರಜ್ಞೆಯು ಬಹಳ ದೂರ ದೃಷ್ಟಿಯಿಂದ ಕೂಡಿದ್ದಿತೆಂದು ಹೇಳಬಹುದು. ದೆಹಲಿಯ ಸುಲ್ತಾನರ ಅಧಿಕಾರಕ್ಕೆ ಇದ್ದ ಹಲವಾರು ಅಡಚಣೆಗಳನ್ನು ತೆಗೆದು ಹಾಕುವುದರಲ್ಲಿ ಅವನು ಬಹಳ ಮಟ್ಟಿಗೆ ಯಶಸ್ವಿಯಾದನು. ಟರ್ಕರ ಸಾಮ್ರಾಜ್ಯದ ರಕ್ಷಣೆ ಮತ್ತು ರಾಜ್ಯದಲ್ಲಿ ಆಂತರಿಕ ಶಾಂತಿ ವ್ಯವಸ್ಥೆಗಳನ್ನು ಕಾಪಾಡುವುದು ಸುಲ್ತಾನನ ಗುಣಸ್ವಭಾವಗಳನ್ನು ಅವಲಂಭಿಸಿತ್ತು. ಬಲ್ಬನ್ನನು ತನ್ನ ಕಟ್ಟುನಿಟ್ಟಾದ ಆಡಳಿತ ಕ್ರಮಗಳಿಂದ ದೇಶದಲ್ಲಿ ಶಾಂತಿ ವ್ಯವಸ್ಥೆಗಳನ್ನು ಏರ್ಪಡಿಸಿದನು. ಪ್ರಜೆಗಳಿಗೆ ತಂದೆಯಂತಿದ್ದ ಬಲ್ಬನ್ನನು ಕಾಲವಾದ ಮೇಲೆ ಅವರ ಪ್ರಾಣಕ್ಕೆ ಮತ್ತು ಆಸ್ತಿಪಾಸ್ತಿಗಳಿಗೆ ರಕ್ಷಣೆಯಲ್ಲಿದಂತಾಯಿತೆಂದು ಸಮಕಾಲೀನ ಇತಿಹಾಸಕಾರನೊಬ್ಬನು ಹೇಳುತ್ತಾನೆ.

ಬಲ್ಬನ್ನನು ಒಬ್ಬ ದರ್ಷಿಷ್ಟ ಪ್ರಭುವಾಗಿದ್ದನು. ಅವನು ಉಕ್ಕಿನಷ್ಟು ಕಟುವಾದ ನೀತಿಯನ್ನು ಅನುಸರಿಸಿ ದೇಶದಲ್ಲಿ ಶಾಂತಿ ವ್ಯವಸ್ಥೆಯನ್ನು ನೆಲೆಗೊಳಿಸಿದನು. ಅವನು ಶಿಸ್ತಿಗೆ ಹೆಚ್ಚು ಬೆಲೆಕೊಟ್ಟಿದ್ದನು. ಅವನಿಗೆ ಶಿಸ್ತಿನ ಪ್ರಜ್ಞೆ ಎಷ್ಟಿತ್ತೆಂದರೆ ಅವನು ತನ್ನ ಖಾಸಗಿ ಸೇವಕರಿಗೆ ಕಾಣಿಸಿಕೊಳ್ಳಬೇಕಾದರೂ ಸಹ ರಾಜನ ಉಡುಪಿನಲ್ಲೇ ಕಾಣಿಸಿಕೊಳ್ಳುತ್ತಿದ್ದನು. ಅವನು ಕೀಳು ವ್ಯಕ್ತಿಗಳ ಸಹವಾಸದಿಂದ ದೂರವಿರುತ್ತಿದ್ದನು ಮತ್ತು ತನ್ನ ಆಪ್ತರೊಂದಿಗೂ ಕೂಡ ಅನಾವಶ್ಯಕವಾದ ಮಾತುಗಳಲ್ಲಿ ತೊಡಗುತ್ತಿರಲಿಲ್ಲ. ಬಲ್ಬನ್ನನು ಚಿಕ್ಕವಯಸ್ಸಿನಲ್ಲಿ ಮಧ್ಯಪಾನ ಮಾಡುತ್ತಿದ್ದನು ಆದರೆ ಸುಲ್ತಾನನಾದ ಮೇಲೆ ಆದನ್ನು ಬಿಟ್ಟುಬಿಟ್ಟನು. ಬೇಟೆಯಾಡುವುದನ್ನು ಹೆಚ್ಚಾಗಿ ಪ್ರೀತಿಸುತ್ತಿದ್ದನು. ಬಲ್ಬನ್ನನು ತನ್ನ ಖಾಸಗಿ ಜೀವನದಲ್ಲಿ ಬಹಳ ಉದಾರಿಯೂ ಮತ್ತು ದಯಾಳುವೂ ಆಗಿದ್ದನು. ಅವನು ತನ್ನ ಬಂಧು ಬಳಗವನ್ನು ಹೆಚ್ಚಾಗಿ ಪ್ರೀತಿಸುತ್ತಿದ್ದನು. ಅವನ ಆಸ್ಥಾನಕ್ಕೆ ಆಶ್ರಯಕ್ಕಾಗಿ ಬಂದವರ ಬಗ್ಗೆ ಬಹಳ ಉದಾರವಾಗಿ ನಡೆದುಕೊಳ್ಳುತ್ತಿದ್ದನು. ಬಲ್ಬನ್ನನು ವಿದ್ಯಾಭಿಮಾನಿಯಾಗಿದ್ದು ವಿದ್ವಾಂಸರಿಗೆ ಆಶ್ರಯ ನೀಡಿದನು. ಮಧ್ಯಕಾಲೀನ ಯುಗದ ಭಾರತದ ಪ್ರಸಿದ್ಧ ಕವಿಗಳಲ್ಲೊಬ್ಬನಾಗಿದ್ದ ಅಮೀರ್ ಖುಸ್ರುವು ಬಲ್ಬನ್ನನ ಆಳ್ವಿಕೆಯಲ್ಲಿ ತನ್ನ ಕವಿತಾ ಜೀವನವನ್ನಾರಂಭಿಸಿದನು. ಬಲ್ಬನ್ನನು ನಿಷ್ಠಾವಂತ ಸುನ್ನಿಯಾಗಿದ್ದು ತನ್ನ ಧರ್ಮದ ನಿಯಮ ಮತ್ತು ಸಂಪ್ರದಾಯಗಳನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಿದ್ದನು. ಉಲೇಮಾಗಳು ಸ್ವಾರ್ಥಪರರೆಂದು ಅವನಿಗೆ ಗೊತ್ತಿದ್ದರೂ ಅವರ ವಿಚಾರದಲ್ಲಿ ಗೌರವದಿಂದ ನಡೆದುಕೊಳ್ಳುತ್ತಿದ್ದನು. ಆದರೆ ಅವರು ರಾಜ್ಯದ ಶಾಂತಿಗೆ ಧಕ್ಕೆ ತಂದಾಗ ಅವರಿಗೆ ಕಠಿಣ ಶಿಕ್ಷೆಗಳನ್ನು ವಿಧಿಸಲು ಹಿಂಜರಿಯುತ್ತಿರಲಿಲ್ಲ. ಮಂಗೋಲರ ಕ್ರೂರವಾದ ಆಳ್ವಿಕೆಯನ್ನು ಸಹಿಸಲಾರದೆ ಮಧ್ಯಏಷ್ಯಾದಿಂದ ರಕ್ಷಣೆಗಾಗಿ ಬಂದ ರಾಜರುಗಳು ನೋಬಲ್ಲರುಗಳು ಮತ್ತು ವಿದ್ವಾಂಸರೇ ಮೊದಲಾದ ಪ್ರತಿಭಾನ್ವಿತ ವ್ಯಕ್ತಿಗಳಿಗೆ ಆಶ್ರಯಕೊಟ್ಟು ಆಡಳಿತದಲ್ಲಿ ಅವರ ಪ್ರತಿಭಾಶಕ್ತಿಗಳನ್ನು ಉಪಯೋಗಿಸಿಕೊಂಡನು. ಆಂತರಿಕ ಧಾಳಿಗಳ ಹಾಗೂ ಮಂಗೋಲರ ಆಕ್ರಮಣಗಳ ವಿರುದ್ಧ ರಕ್ಷಣೆಗಾಗಿ ಸೈನ್ಯವನ್ನು ಸಜ್ಜುಗೊಳಿಸಿ ಆದನ್ನು ದಕ್ಷ ಸೈನ್ಯಾಧಿಕಾರಿಗಳ ಅಧೀನದಲ್ಲಿರಿಸಿದ್ದನು. ಸೈನ್ಯದಲ್ಲಿ ದಕ್ಷತೆ, ಶಿಸ್ತು ಮತ್ತು ನಿಷ್ಠೆಯನ್ನುಂಟುಮಾಡಲು ಅನೇಕ ನಿಯಮಗಳನ್ನು ರೂಪಿಸಿದನು. ಅವನ ಅಧಿಕಾರಕ್ಕೆ ಭೀತಿಯು ಮುಖ್ಯವಾಗಿತ್ತು. ಬಲ್ಬನ್ನನ ಪೀನಲ್ ಕಾಯಿದೆಗಳು ಬಹಳ

ಕಠಿಣವಾಗಿದ್ದವು. ಅವನ ರಕ್ತ ಸಂಬಂಧಿಗಳೂ ಕೂಡ ಶಿಕ್ಷೆಗಳಿಂದ ತಪ್ಪಿಸಿಕೊಳ್ಳಲು ಸಾಧ್ಯವಿರಲಿಲ್ಲ. ನಿಷ್ಪಕ್ಷಪಾತವಾದ ನ್ಯಾಯವೂ ಮತ್ತು ಗೂಢಾಚಾರ ಪದ್ಧತಿಯೂ ಅವನ ಸರ್ವಾಧಿಕಾರಕ್ಕೆ ಮುಖ್ಯ ಸಾಧನಗಳಾಗಿದ್ದವು. ಇಂತಹ ಹಲವಾರು ಕ್ರಮಗಳಿಂದ ಬಲ್ಬನ್ನನು ದೆಹಲಿಯ ಸುಲ್ತಾನರ ಅಧಿಕಾರವನ್ನು ಸುಭದ್ರಗೊಳಿಸಿದನು. ಪ್ರತಿಭೆ, ಅನುಭವ, ರಾಜಕೀಯ ಕೌಶಲ ಮತ್ತು ದೃಢನಿರ್ಧಾರಗಳಿಂದ ಕೂಡಿದ ಬಲ್ಬನ್ನನಂತಹ ವ್ಯಕ್ತಿಯು ದೆಹಲಿಯ ಸುಲ್ತಾನನಾಗಿಲ್ಲದಿದ್ದ ಪಕ್ಷದಲ್ಲಿ ದೆಹಲಿಯ ಸುಲ್ತಾನತ್ವವು ಮರಳಿನಿಂದ ಕಟ್ಟಿದ ಸೌಧದಂತಾಗುತ್ತಿದ್ದು ದೆಂಬುದರಲ್ಲಿ ಸಂಶಯವಿಲ್ಲ. ಈ ಎಲ್ಲ ಸಾಧನೆಗಳಿಂದ ಬಲ್ಬನ್ನನನ್ನು ಹದಿಮೂರನೆ ಶತಮಾನದ ದೆಹಲಿಯ ಸುಲ್ತಾನರಲ್ಲಿ ಒಬ್ಬ ಶ್ರೇಷ್ಠ ವ್ಯಕ್ತಿಯೆಂದು ನಿಸ್ಸಂದೇಹವಾಗಿ ಹೇಳಬಹುದು. ಕೊನೆಯದಾಗಿ ಬಲ್ಬನ್ನನು ಮುಂದೆ ಭಾರತವನ್ನಾಳಿದ ಖಿಲ್ಜಿಸಂತತಿಯ ಅಲ್ಲಾವುದ್ದೀನ್ ಖಿಲ್ಜಿಯ ನಿರಂಕುಶಾಧಿಕಾರಕ್ಕೆ ತಳಹದಿ ಹಾಕಿದನು.

**ಗುಲಾಮಿ ಸಂತತಿಯ ಅವನತಿ**

ಬಲ್ಬನ್ನನು ಕಾಲವಾದ ಮೇಲೆ ಬಂಗಾಳದ ರಾಜ್ಯಪಾಲನಾಗಿದ್ದ ಬುಗ್ರಾಖಾನನ ಮಗನೂ ಮತ್ತು ಬಲ್ಬನ್ನನ ಮೊಮ್ಮಗನೂ ಆಗಿದ್ದ ಕೈಕುಬಾದ್ ಎಂಬವನು ದೆಹಲಿಯ ಸಿಂಹಾಸನವನ್ನೇರಿ ಮೂರು ವರ್ಷಗಳ ಕಾಲ (1287-1290) ರಾಜ್ಯವಾಳಿದನು. ಇವನು ನಿಜಾಮುದ್ದೀನ್ ಎಂಬ ಅಧಿಕಾರಿಯ ಕೈಗೊಂಬೆಯಾಗಿದ್ದು ರಾಜ್ಯವಾಳಲು ಅಸಮರ್ಥನಾಗಿದ್ದನು. ಮೇಲಾಗಿ ಕೈಕುಬಾದನು ದೊಡ್ಡ ಸಾಮ್ರಾಜ್ಯಕ್ಕೆ ಸುಲ್ತಾನನಾದ ಮೇಲೆ ಎಲ್ಲಾ ರೀತಿಯ ದುಶ್ಚಟಗಳನ್ನು ಕಲಿತು ಬಲ್ಬನ್ನನ ಸಾಧನೆಗಳೆಲ್ಲವನ್ನೂ ಗಾಳಿಗೆ ತೂರಿಬಿಟ್ಟನು. ಇವನ ದುಶ್ಚಟಗಳಿಂದಾಗಿ ಇವನಿಗೆ ಪಾರ್ಶ್ವವಾಯು ಬಡಿಯಿತು. ಇದರಿಂದ ಇವನು ಹಾಸಿಗೆ ಹಿಡಿದನು. ಅನಂತರ ಅವನ ಮಗ ಅಪ್ರಾಪ್ತ ವಯಸ್ಸಿನ ಕಾಯುಮಾರ್ಸ್ ಎಂಬವನು ಸಿಂಹಾಸನವನ್ನೇರಿದನು. ಸಾಮ್ರಾಜ್ಯದಲ್ಲಿ ಅರಾಜಕತೆಯುಂಟಾಯಿತು. ದೆಹಲಿಯ ಸಿಂಹಾಸನದ ಈ ದುರ್ಬಲತೆಯನ್ನು ಉಪಯೋಗಿಸಿಕೊಂಡು ಜಲಾಲುದ್ದೀನ್ ಖಿಲ್ಜಿ ಎಂಬ ದಂಡನಾಯಕನು ದೆಹಲಿಯ ಮೇಲೆ ದಂಡೆತ್ತಿ ಬಂದು ಕೈಕುಬಾದನನ್ನು ಕೊಂದು ದೆಹಲಿಯ ಸಿಂಹಾಸನವನ್ನೇರಿದನು. ಕಾಯುಮಾರ್ಸ್ ನನ್ನು ಸೆರೆಮನೆಗೆ ತಳ್ಳಿಸಿದನು ಮತ್ತು ಅವನು ಅಲ್ಲಿಯೆ ಕೆಲವು ದಿವಸಗಳ ನಂತರದಲ್ಲಿ ಕಾಲವಾದನು. ಇದರೊಂದಿಗೆ ಗುಲಾಮಿ ಸಂತತಿಯವರ ಆಳ್ವಿಕೆಯು ಕೊನೆಗಂಡು ಖಿಲ್ಜಿ ಸಂತತಿಯವರ ಆಳ್ವಿಕೆಯು ಆರಂಭವಾಯಿತು.

## ಅಧ್ಯಾಯ-19

# ಖಿಲ್ಜಿಯವರ ಪ್ರಭುತ್ವ (1290-1320)

ಖಿಲ್ಜಿಗಳು ಮೂಲತಃ ಟರ್ಕರ ಬುಡಕಟ್ಟಿಗೆ ಸೇರಿದವರಾಗಿದ್ದರು. ಆದರೆ ಅವರು ಬಹಳಕಾಲ ಆಫ್ಘಾನಿಸ್ಥಾನದಲ್ಲಿ ನೆಲಸಿದ್ದು ಅಫ್ಘನ್ನರ ನಡೆನುಡಿಗಳನ್ನು ಮತ್ತು ಸಂಪ್ರದಾಯಗಳನ್ನು ಅನುಸರಿಸಿದ್ದರಿಂದ ಅವರು ಅಫ್ಘನ್ನರೆಂದು ಪರಿಗಣಿಸಲ್ಪಟ್ಟರು.

### ಜಲಾಲುದ್ದೀನ್ ಖಿಲ್ಜಿ (1290-1296)

ಖಿಲ್ಜಿ ಸಂತತಿಯ ಸ್ಥಾಪಕನಾದ ಜಲಾಲುದ್ದೀನ್ ಖಿಲ್ಜಿಯು ಕ್ರಿ.ಶ. 1290ರಲ್ಲಿ ದೆಹಲಿಯ ಸಿಂಹಾಸನವನ್ನೇರಿದನು. ಇವನು ಸಿಂಹಾಸನಕ್ಕೆ ಬಂದಾಗ ಇವನಿಗೆ ಆಗಲೆ ಎಪ್ಪತ್ತು ವರ್ಷ ವಯಸ್ಸಾಗಿತ್ತು. ಇವನ ಕಿರೀಟ ಧಾರಣೆಯ ಸಮಾರಂಭವು ಕಿಲುಘರಿಎಂಬಲ್ಲಿ ನಡೆಯಿತು. ಜಲಾಲುದ್ದೀನ್ ಖಿಲ್ಜಿಯು ಬಹಳ ಮೃದುಸ್ವಭಾವದವನಾಗಿದ್ದನು. ಯುದ್ಧಗಳನ್ನು ಮತ್ತು ರಕ್ತಪಾತಗಳನ್ನು ವಿರೋಧಿಸುತ್ತಿದ್ದನು. ಸುಲ್ತಾನನ ಮೃದು ಸ್ವಭಾವದ ಅನುಕೂಲವನ್ನು ಪಡೆದುಕೊಂಡು ರಾಜ್ಯದಲ್ಲಿ ಒಳಸಂಚು ಮತ್ತು ದಂಗೆಗಳು ಸರ್ವಸಾಮಾನ್ಯವಾಗ ತೊಡಗಿದವು. ಅವನ ಎರಡನೆ ವರ್ಷದ ಆಳ್ವಿಕೆಯಲ್ಲಿ ಕಾರಾಪ್ರಾಂತ್ಯದ ಜಹಗೀರನ್ನು ಹೊಂದಿದ್ದ ಬಲ್ಬನ್ನನ ಸೋದರನ ಮಗನಾಗಿದ್ದ ಮಲ್ಲಿಕ್‌ಚಜ್ಜು ಎಂಬವನು ದಂಗೆಯೆದ್ದಾಗ ಸುಲ್ತಾನನು ಅವನನ್ನು ಕ್ಷಮಿಸಿ ಕಾರಾ ಪ್ರಾಂತ್ಯದ ಮೇಲ್ವಿಚಾರಣೆಯನ್ನು ತನ್ನ ಸೋದರನ ಮಗನೂ ಮತ್ತು ಅಳಿಯನೂ ಆದ ಅಲ್ಲಾವುದ್ದೀನ್ ಖಿಲ್ಜಿಗೆ ವಹಿಸಿದನು.

ಜಲಾಲುದ್ದೀನ್ ಖಿಲ್ಜಿಯ ವಿದೇಶಾಂಗ ನೀತಿಯೂ ಅವನ ಆಂತರಿಕ ನೀತಿಯಂತೆಯೆ ದುರ್ಬಲವಾಗಿತ್ತು. ರಣತಂಬೂರಿನ ಮೇಲೆ ಕೈಗೊಂಡ ಸೈನಿಕ ಕಾರ್ಯಾಚರಣೆಯಲ್ಲಿ ಅವನ ಸೈನ್ಯವು ಸೋತು ನಿರಾಸೆಯಿಂದ ರಾಜಧಾನಿಗೆ ಹಿಂದಿರುಗಿತು. 1292ರಲ್ಲಿ ಮಂಗೋಲರು ಹಲಕು ಎಂಬವನ ನಾಯಕತ್ವದಲ್ಲಿ ಭಾರತದ ಮೇಲೆ ಧಾಳಿಮಾಡಿದಾಗ ಅವರನ್ನು ಸೋಲಿಸಿ ಹಿಮ್ಮೆಟ್ಟಿಸಿದನು. ಮೂರು ಸಾವಿರಕ್ಕೂ ಹೆಚ್ಚು ಮಂಗೋಲರು ಶರಣಾಗತರಾಗಿ ಇಸ್ಲಾಂ ಧರ್ಮವನ್ನು ಅವಲಂಭಿಸಿದರು. ಸುಲ್ತಾನನು ಅವರಿಗೆ ದೆಹಲಿಯ ಹತ್ತಿರ ನೆಲಸಲು ಅನುಮತಿ ನೀಡಿದನು. ಅವರನ್ನು ಹೊಸ ಮುಸಲ್ಮಾನರೆಂದು ಕರೆಯಲಾಯಿತು ಮತ್ತು ಅವರು ನೆಲಸಿದ ಪ್ರದೇಶಕ್ಕೆ ಮುಗಲ್ಪುರ ಎಂಬ ಹೆಸರು ಬಂದಿತು. ಆದರೆ ಇದು ಮುಂದೆ

ಅತೃಪ್ತ ಜನಗಳ ಒಳಸಂಚಿನ ಕೇಂದ್ರವಾಗಿ ಮಾರ್ಪಟ್ಟು ದೆಹಲಿಯ ಸುಲ್ತಾನರಿಗೆ ಒಂದು ದೊಡ್ಡ ಸಮಸ್ಯೆಯಾಗಿ ಪರಿಣಮಿಸಿತು.

## ದಖನ್ನಿನ ಮೇಲೆ ಮುಸ್ಲಿಮರ ದಂಡಯಾತ್ರೆ 1294

ದಖನ್ನಿನ ಮೇಲೆ ಮುಸ್ಲಿಮರ ಪ್ರಥಮ ದಂಡಯಾತ್ರೆಯು ಜಲಾಲುದ್ದೀನ್ ಖಿಲ್ಜಿಯ ಆಳ್ವಿಕೆಯ ಕಾಲದ ಮತ್ತೊಂದು ಪ್ರಮುಖ ಘಟನೆಯಾಗಿರುತ್ತದೆ. ಈ ದಂಡೆಯಾತ್ರೆಯನ್ನು ಅವನ ಅಳಿಯನಾಗಿದ್ದ ಅಲ್ಲಾವುದ್ದೀನ್‌ಖಿಲ್ಜಿಯು 1294ರಲ್ಲಿ ಸುಲ್ತಾನನ ಅನುಮತಿಯನ್ನು ಪಡೆಯದೆ ಕೈಗೊಂಡನು. ಅಲ್ಲಾವುದ್ದೀನನು ಮಹತ್ವಾಕಾಂಕ್ಷಿಯಾದ ವ್ಯಕ್ತಿಯಾಗಿದ್ದನು. ಅವನು ಮಾಳವದ ಮೇಲೆ ಧಾಳಿಮಾಡಿ ಭಿಲ್ಸಾವನ್ನು ಲೂಟಿಮಾಡಿದನು. ಬಿಲ್ಸಾದಲ್ಲಿದ್ದಾಗ ಯಾದವರ ರಾಜಧಾನಿಯಾಗಿದ್ದ ದೇವಗಿರಿಯ ಐಶ್ವರ್ಯದ ಬಗ್ಗೆ ಕೇಳಿದ್ದ ಅಲ್ಲಾವುದ್ದೀನ್ ಖಿಲ್ಜಿಯು ಅಲ್ಲಿನ ಅಪಾರ ಐಶ್ವರ್ಯವನ್ನು ವಶಪಡಿಸಿಕೊಳ್ಳಬೇಕೆಂದು ಬಯಸಿ ದೇವಗಿರಿಯ ಮೇಲೆ 1294ರಲ್ಲಿ ದಂಡೆತ್ತಿ ಬಂದನು. ಅವನ ಈ ದಂಡಯಾತ್ರೆಯು ಅತ್ಯಂತ ಸಾಹಸದ ಕೆಲಸವಾಗಿತ್ತು. ಏಕೆಂದರೆ ಇದುವರೆಗೆ ಯಾವ ಮುಸ್ಲಿಂರಾಜನಾಗಲೀ ಅಥವ ಸೇನಾಧಿಪತಿಯಾಗಲೀ ವಿಂಧ್ಯ ಪರ್ವತ ಶ್ರೇಣಿಯನ್ನು ದಾಟಿ ದಖನ್ನಿನ ಮೇಲೆ ಆಕ್ರಮಣ ಮಾಡುವ ಸಾಹಸ ಮಾಡಿರಲಿಲ್ಲ. ಅಲ್ಲಾವುದ್ದೀನನು ಎಂಟು ಸಾವಿರ ಅಶ್ವಾರೋಹಿ ಸೈನ್ಯದೊಂದಿಗೆ ಕಾರಾದಿಂದ ಹೊರಟು ದೇವಗಿರಿಯನ್ನು ತಲುಪಿದನು. ಯಾದವ ರಾಮಚಂದ್ರನು ಮುಸ್ಲಿಮರನ್ನು ಎದುರಿಸಲು ತೀವ್ರವಾಗಿ ಹೋರಾಡಿದನು. ಆದರೆ ನುರಿತ ಅಲ್ಲಾವುದ್ದೀನನ ಸೈನ್ಯದ ಮುಂದೆ ಅವನ ಶಕ್ತಿ ಸಾಮರ್ಥ್ಯಗಳೇನೂ ಸಾಲದಾದವು. ಅಲ್ಲಾವುದ್ದೀನನ ಸೈನ್ಯವು ರಾಜಧಾನಿಯನ್ನು ಮುತ್ತಿ ಲೂಟಿಮಾಡಿತು. ರಾಮಚಂದ್ರನು ಸೋತು ಶರಣಾಗತನಾಗಿ ಅಲ್ಲಾವುದ್ದೀನನೊಂದಿಗೆ ಶಾಂತಿ ಒಪ್ಪಂದವನ್ನು ಮಾಡಿಕೊಂಡನು. ಈ ಒಪ್ಪಂದದ ಪ್ರಕಾರ ಐವತ್ತು ಮಣ ಚಿನ್ನವನ್ನೂ, ಏಳು ಮಣ ಮುತ್ತುರತ್ನಗಳನ್ನೂ, ನಲವತ್ತು ಆನೆಗಳನ್ನೂ ಮತ್ತು ಕೆಲವು ಸಾವಿರ ಕುದುರೆಗಳನ್ನೂ ಅಲ್ಲಾವುದ್ದೀನನಿಗೆ ಕೊಡಲೊಪ್ಪಿದನು. ಅಲ್ಲದೆ ಅಲ್ಲಾವುದ್ದೀನನು ಬಿಟ್ಟುಹೋಗಬೇಕೆಂದಿದ್ದ ಸೈನ್ಯದ ವೆಚ್ಚಕ್ಕಾಗಿ ಎಲಿಚಪುರವನ್ನು ಬಿಟ್ಟು ಕೊಡುವುದಕ್ಕೂ ಒಪ್ಪಿದನು. ಅನಂತರ ಅಲ್ಲಾವುದ್ದೀನನು ಅಪಾರ ಐಶ್ವರ್ಯದೊಂದಿಗೆ ಕಾರಾಕ್ಕೆ ಹಿಂದಿರುಗಿದನು.

## ಜಲಾಲುದ್ದೀನ್ ಖಿಲ್ಜಿಯ ಕೊಲೆ

ದೇವಗಿರಿಯಿಂದ ಕಾರಾಕ್ಕೆ ಹಿಂದಿರುಗಿದ ಅಲ್ಲಾವುದ್ದೀನ್ ಖಿಲ್ಜಿಯು ಜಲಾಲುದ್ದೀನ್ ಖಿಲ್ಜಿಯನ್ನು ಮುಗಿಸಲು ನಿರ್ಧರಿಸಿ ಅದಕ್ಕೆ ತಕ್ಕ ಏರ್ಪಾಟುಗಳನ್ನು ಮಾಡಿಕೊಂಡನು. ತಾನು ಸುಲ್ತಾನನ ಅಪ್ಪಣೆಯಿಲ್ಲದೆ ದೇವಗಿರಿಯ ಮೇಲೆ ದಂಡಯಾತ್ರೆ ಮಾಡಿದುದರಿಂದ ಸುಲ್ತಾನನನ್ನು ಭೇಟಿ ಮಾಡಲು ಹೆದರಿಕೆಯಾಗುವುದೆಂದೂ, ಆದರೆ ತಾನು ದೇವಗಿರಿಯಿಂದ ದೋಚಿಕೊಂಡು ಬಂದಿರುವ ಅಪಾರ ಐಶ್ವರ್ಯವನ್ನು ಸುಲ್ತಾನ ನಿಗೊಪ್ಪಿಸಿ ಅವನಿಂದ ಉಡುಗೊರೆ ಮೊದಲಾದ ಪುರಸ್ಕಾರಗಳನ್ನು ಪಡೆಯಲಿಚ್ಛಿಸಿರುವುದಾಗಿಯೂ ಸುದ್ದಿಹುಟ್ಟಿಸಿದನು. ಅಲ್ಲಾವುದ್ದೀನ್ ಖಿಲ್ಜಿಯನ್ನು ತನ್ನ ಮಗನಂತೆ ಪ್ರೀತಿ ಸುತ್ತಿದ್ದ ಕಪಟವನ್ನರಿಯದ

ಜಲಾಲುದ್ದೀನ್ ಖಿಲ್ಜಿಯು ತನ್ನ ಸಂತೋಷವನ್ನು ವ್ಯಕ್ತಪಡಿಸಲು ಅಲ್ಪ ಪರಿವಾರದೊಂದಿಗೆ ಕಾರಾಕ್ಕೆ ಬಂದನು. ಆದರೆ ಅಲ್ಲಿ ಅವನಿಗೆ ದುರಂತವು ಕಾದಿತ್ತು. ವಯೋವೃದ್ಧನಾದ ಸುಲ್ತಾನನು ಅಲ್ಲಾವುದ್ದೀನನನ್ನು ಆಲಂಗಿಸಿಕೊಳ್ಳಲು ಬರುತ್ತಿರುವಾಗ ಅಲ್ಲಾವುದ್ದೀನನ ಕಡೆಯವರು ಅವನನ್ನು ಚೂರಿಯಿಂದ ಇರಿದುಕೊಂದರು. ಸುಲ್ತಾನನಪರಿವಾರದವರು ಕತ್ತಿಗೆ ಬಲಿಯಾದರು. ಅಲ್ಲಾವುದ್ದೀನನು ದೆಹಲಿಯಸುಲ್ತಾನನೆಂದು ಜುಲೈ, 1296ರಲ್ಲಿ ಘೋಷಿಸಲ್ಪಟ್ಟನು.

**ಅಲ್ಲಾವುದ್ದೀನನ ಸಿಂಹಾಸನಾರೋಹಣ (1296-1316)**

ಅಲ್ಲಾವುದ್ದೀನ್ ಖಿಲ್ಜಿಯು ಸುಲ್ತಾನನೆಂದು ಘೋಷಿಸಿಕೊಂಡರೂ ಅವನು ಇನ್ನೂ ಅನೇಕ ತೊಂದರೆಗಳನ್ನು ಎದುರಿಸಬೇಕಾಗಿತ್ತು. ಜಲಾಲುದ್ದೀನ್ ಖಿಲ್ಜಿಗೆ ಅರ್ಕಲಿಖಾನ್ ಮತ್ತು ಖಾದರ್‌ಖಾನ್ ಎಂಬ ಇಬ್ಬರು ಗಂಡುಮಕ್ಕಳಿದ್ದರು. ಅರ್ಕಲಿ ಖಾನನು ಮುಲ್ತಾನಿನಲ್ಲಿದ್ದನು. ಸುಲ್ತಾನನ ವಿಧವಾರಾಣಿ ಮಲ್ಲಿಕ್‌ಜಾನಳು ತನ್ನ ಇಬ್ಬರು ಮಕ್ಕಳಲ್ಲಿ ಯಾರಾದರೂ ಒಬ್ಬನನ್ನು ಸುಲ್ತಾನನನ್ನಾಗಿ ಮಾಡಬೇಕೆಂದು ಬಯಸಿ ಸಿಂಹಾಸನವನ್ನು ಖಾಲಿಬಿಡದಂತೆ ತನ್ನ ಹತ್ತಿರವಿದ್ದ ಖಾದರ್‌ಖಾನ್‌ನನ್ನು ರುಕುನ್-ಉದ್ದೀನ್ ಇಬ್ರಾಹಿಂ ಎಂಬ ಬಿರುದಿನಿಂದ ಸಿಂಹಾಸನದ ಮೇಲೆ ಕುಳ್ಳಿರಿಸಿದಳು. ಅನಂತರ ಮುಲ್ತಾನಿನಲ್ಲಿದ್ದ ತನ್ನ ಹಿರಿಯಮಗ ಅರ್ಕಲಿಖಾನನಿಗೆ ಸುದ್ದಿಯನ್ನು ಕಳುಸಿಹಿ ಕೂಡಲೆ ದೆಹಲಿಗೆ ಬರುವಂತೆ ಹೇಳಿ ಕಳುಹಿಸಿದಳು. ಆದರೆ ಅರ್ಕಲಿಖಾನನು ತನ್ನ ತಂದೆಯ ಬೆಂಬಲಿಗರಾಗಿದ್ದ ನೋಬಲ್ಲರು ಆಗಲೇ ಪಕ್ಷವನ್ನು ತ್ಯಜಿಸಿರುವುದಾಗಿ ತಿಳಿದು ಅಧಿಕಾರವನ್ನು ಪುನಃ ಪಡೆದುಕೊಳ್ಳುವುದು ಅಸಾಧ್ಯದ ಕೆಲಸವೆಂದು ಮುಲ್ತಾನಿನಲ್ಲೇ ಉಳಿದನು. ಈ ನಡುವೆ ಅಲ್ಲಾವುದ್ದೀನ್‌ಖಿಲ್ಜಿಯು ತನ್ನ ಸೇನೆಯೊಡನೆ ದೆಹಲಿ ಕಡೆಧಾವಿಸಿ ಬಂದನು. ಅವನು ರಾಜಧಾನಿಯ ಹತ್ತಿರ ಬಂದಾಗ ರುಕುನ್-ಉದ್ದೀನ್ ಇಬ್ರಾಹಿಂ ಅವನನ್ನು ಎದುರಿಸಲು ಬಂದನು. ಆದರೆ ರಾತ್ರಿಯಲ್ಲಿ ಅವನ ಸೈನ್ಯದಲ್ಲಿ ಕೆಲವರು ಅಲ್ಲಾವುದ್ದೀನನ ಪಕ್ಷಕ್ಕೆ ಪಕ್ಷಾಂತರಗೊಂಡರು. ರಾಜಕುಮಾರ ಇಬ್ರಾಹಿಮನು ಹೋರಾಡುವುದರಿಂದ ಇನ್ನು ಏನೂ ಪ್ರಯೋಜನವಿಲ್ಲವೆಂದು ತಿಳಿದು ಕೆಲವು ಚೀಲದ ತುಂಬ ಚಿನ್ನದ ನಾಣ್ಯಗಳನ್ನು ಮತ್ತು ಲಾಯದಿಂದ ಕೆಲವು ಕುದುರೆಗಳನ್ನು ತೆಗೆದುಕೊಂಡು ತಪ್ಪಿಸಿಕೊಂಡು ಮುಲ್ತಾನಿಗೆ ಹೋದನು. ಅಲ್ಲಾವುದ್ದೀನನು ವಿಜಯದೊಂದಿಗೆ ರಾಜಧಾನಿಯನ್ನು ಪ್ರವೇಶಿಸಿ ಅಕ್ಟೋಬರ್ 1296ರಲ್ಲಿ ಬಲ್ಬನ್ನನ ಅರಮನೆಯಲ್ಲಿ ಸಿಂಹಾಸನವನ್ನೇರಿದನು. ಇತಿಹಾಸಕಾರ ಭರಣಿಯು ಈ ಸನ್ನಿವೇಶವನ್ನು ಈ ಕೆಳಕಂಡ ಮಾತುಗಳಲ್ಲಿ ವರ್ಣಿಸಿರುವನು. "ಸಿಂಹಾಸನವು ಅಲ್ಲಾವುದ್ದೀನನಿಗೆ ಈಗ ಸುರಕ್ಷಿತವಾಗಿತ್ತು. ಸರ್ಕಾರದ ಅಧಿಕಾರಿಗಳು ತಮ್ಮ ಲೆಕ್ಕಪತ್ರಗಳೊಂದಿಗೂ, ಆನೆಗಳ ಮೇಲ್ವಿಚಾರಕರು ತಮ್ಮ ಆನೆಗಳೊಂದಿಗೂ, ಕೊತ್ವಾಲರು ಕೋಟೆಗಳ ಬೀಗದ ಕೈಗಳೊಂದಿಗೂ, ನಗರದ ನ್ಯಾಯಾಧೀಶರುಗಳು ಮತ್ತು ನಗರದ ಮುಖ್ಯಸ್ಥರು ಹಾಗೂ ರೆವಿನ್ಯೂ ಅಧಿಕಾರಿಗಳು ಅರಮನೆಗೆ ಬಂದು ತಮ್ಮ ಹೊಸ ಸುಲ್ತಾನನಿಗೆ ಪ್ರಣಾಮಸಲ್ಲಿಸಿದರು". ಕುತ್ಬಾವನ್ನು ಅವನ ಹೆಸರಿನಲ್ಲಿ ಓದಿಸಲಾಯಿತು. ಅಲ್ಲಾವುದ್ದೀನನು ತನಗೆ ಸಹಾಯ ಮಾಡಿದವರೆಲ್ಲರಿಗೂ ಬೆಲೆ ಬಾಳುವ ಉಡುಗೊರೆಗಳನ್ನಿತ್ತು ಅವರ ಬೆಂಬಲವನ್ನು ಪಡೆದುಕೊಂಡನು. ಉಲಗ್‌ಖಾನನ ನೇತೃತ್ವದಲ್ಲಿ ಮುಲ್ತಾನಿನ ಮೇಲೆ ಒಂದು

ದೊಡ್ಡ ಸೈನ್ಯವನ್ನು ಕಳುಹಿಸಿದನು. ಅವನು ಮುಲ್ತಾನನ್ನು ವಶಪಡಿಸಿಕೊಂಡು ಸುಲ್ತಾನನ ಇಬ್ಬರು ಮಕ್ಕಳನ್ನು ಸೆರೆಹಿಡಿದು ಅವರ ಕಣ್ಣುಗಳನ್ನು ಕೀಳಿಸಿಹಾಕಿದನು. ದೆಹಲಿಯಲ್ಲಿ ಸುಲ್ತಾನನ ವಿಧವಾರಾಣಿಯನ್ನು ಸೆರೆಮನೆಯಲ್ಲಿಟ್ಟುಕೊಲ್ಲಿಸಿದನು. ಚಿನ್ನದ ಮೇಲಿನ ಆಸೆಗಾಗಿ ಅವಳ ಪಕ್ಷವನ್ನು ವಹಿಸಿದ್ದ ನೋಬಲ್ಲರೆಲ್ಲರನ್ನೂ ಕಠಿಣವಾಗಿ ಶಿಕ್ಷಿಸಿದನು.

**ರಾಜ್ಯವಿಸ್ತರಣೆ: ಉತ್ತರ ಭಾರತದ ಗೆಲವು**

ಅಲ್ಲಾವುದ್ದೀನನು ಮಹತ್ವಾಕಾಂಕ್ಷೆಯುಳ್ಳ ಸುಲ್ತಾನನಾಗಿದ್ದನು. ಸಮರ್ಥಯೋಧನೂ, ಸೇನಾನಿಯೂ ಮತ್ತು ಮಹಾದಿಗ್ವಿಜಯಿಯೂ ಆಗಿದ್ದ ಅಲೆಗ್ಸಾಂಡರ್ ಮಹಾಶಯನಂತೆ ಇಡೀ ವಿಶ್ವವನ್ನು ಗೆಲ್ಲಬೇಕೆಂಬ ಅಪೇಕ್ಷೆಯುಳ್ಳವನಾಗಿದ್ದನು. ಆದರೆ ಅಲ್ಲಾವುದ್ದೀನನು ರಾಜಕೀಯದಲ್ಲಿ ವಾಸ್ತವಿಕ ದೃಷ್ಟಿಯುಳ್ಳವನಾಗಿದ್ದು ತನ್ನ ಇತಿಮಿತಿಗಳೇನೆಂಬುದನ್ನು ಚೆನ್ನಾಗಿ ಮನಗಂಡಿದ್ದನು. ಆದ್ದರಿಂದ ಅವನು ಭಾರತದಿಂದಾಚೆ ದಂಡಯಾತ್ರೆಗಳನ್ನು ಕೈಗೊಳ್ಳುವ ಗೋಜಿಗೆ ಹೋಗದೆ ಭಾರತದಲ್ಲಿ ಹಿಂದೂ ರಾಜ್ಯಗಳನ್ನು ಗೆದ್ದು ವಶಪಡಿಸಿಕೊಳ್ಳಲು ತನ್ನ ಶಕ್ತಿ ಸಾಮರ್ಥ್ಯಗಳನ್ನು ಮತ್ತು ಸಾಧನ ಸಂಪತ್ತುಗಳನ್ನೂ ಕೇಂದ್ರೀಕರಿಸಿದನು. ಇಲ್ತುಮಿಷ್‌ನು ಕಾಲವಾದ ಮೇಲೆ ಪೂರ್ಣವಾಗಿ ಕೈಬಿಡಲಾಗಿದ್ದ ರಾಜ್ಯವಿಸ್ತರಣೆಯ ಕಾರ್ಯವನ್ನು ಈಗ ಅಲ್ಲಾವುದ್ದೀನನು ಮುಂದುವರಿಸಿ ವಿಶಾಲ ಸಾಮ್ರಾಜ್ಯವನ್ನು ಸ್ಥಾಪಿಸಿದನು.

ಭಾರತದಲ್ಲಿ ವಿಶಾಲವಾದ ಸಾಮ್ರಾಜ್ಯವನ್ನು ಸ್ಥಾಪಿಸಿದ ಮುಸಲ್ಮಾನ ದೊರೆಗಳಲ್ಲಿ ಅಲ್ಲಾವುದ್ದೀನನು ಮೊದಲಿಗನಾಗಿದ್ದಾನೆ. ಇವನ ಇಪ್ಪತ್ತು ವರ್ಷಗಳ ಆಳ್ವಿಕೆಯಲ್ಲಿ ಹೆಚ್ಚು ಕಡಿಮೆ ಇಡೀ ಭಾರತವು ಪ್ರತ್ಯಕ್ಷವಾಗಿ ಇಲ್ಲವೇ ಅಪ್ರತ್ಯಕ್ಷವಾಗಿ ಇವನ ಹತೋಟಿಗೆ ಒಳಪಟ್ಟಿದ್ದಿತು. ಅಲ್ಲಾವುದ್ದೀನನು ಮೊದಲು ಉತ್ತರ ಭಾರತವನ್ನು ಗೆದ್ದು ವಶಪಡಿಸಿಕೊಳ್ಳಲು ಪ್ರಯತ್ನಪಟ್ಟು ಅದರಲ್ಲಿ ಯಶಸ್ವಿಯಾದ ಅವನು ಅನಂತರ ದಕ್ಷಿಣ ಭಾರತದ ಕಡೆ ತನ್ನ ಗಮನವನ್ನು ಹರಿಸಿದನು. ಆದರೆ ಎರಡು ಭಾಗಗಳಲ್ಲೂ ಅವನು ಏಕರೀತಿಯ ನಿಯಮವನ್ನು ಅನುಸರಿಸಲಿಲ್ಲ. ಉತ್ತರ ಭಾರತದ ರಾಜ್ಯಗಳನ್ನು ಗೆದ್ದು ವಶಪಡಿಸಿಕೊಂಡು ಅವುಗಳ ಆಡಳಿತದ ಮೇಲ್ವಿಚಾರಣೆಗೆ ತನ್ನ ಕಡೆಯವರನ್ನು ರಾಜ್ಯಪಾಲರುಗಳನ್ನಾಗಿ ನೇಮಿಸಿದನು. ದಕ್ಷಿಣ ಭಾರತದ ರಾಜ್ಯಗಳನ್ನು ಗೆದ್ದರೂ ಸುಲ್ತಾನನು ಅವುಗಳನ್ನು ತನ್ನ ನೇರವಾದ ಆಡಳಿತಕ್ಕೊಳಪಡಿಸಿಕೊಳ್ಳದೆ ಅವುಗಳ ಆಡಳಿತವನ್ನು ಸ್ಥಳೀಯ ರಾಜರುಗಳ ವಶದಲ್ಲಿಯೆ ಬಿಟ್ಟು ಅವರಿಂದ ವಾರ್ಷಿಕ ಪೊಗದಿಯನ್ನು ಪಡೆದುಕೊಂಡು ಅವರ ಮೇಲೆ ತನ್ನ ಅಧಿಕಾರವನ್ನು ಹೊಂದಿದ್ದನು.

**ಗುಜರಾತಿನ ವಿಜಯ (1297)**

ಗುಜರಾತು ಒಂದು ಸ್ವತಂತ್ರವಾದ ಹಿಂದೂ ರಾಜ್ಯವಾಗಿತ್ತು ಮತ್ತು ಅದು ಬಹಳ ಶ್ರೀಮಂತ ರಾಜ್ಯವಾಗಿತ್ತು. ಚಾಳುಕ್ಯಸಂತತಿಯ ಬಾಗೇಲರ ಶಾಖೆಗೆ ಸೇರಿದ ಕರ್ಣದೇವನು ಅದರ ರಾಜನಾಗಿದ್ದನು. ಅಲ್ಲಾವುದ್ದೀನನು 1297ರಲ್ಲಿ ಗುಜರಾತನ್ನು ಗೆಲ್ಲಲು ಉಲುಗ್‌ಖಾನ್ ಮತ್ತು ನಸರತ್‌ಖಾನ್ ನೇತೃತ್ವದಲ್ಲಿ ದೊಡ್ಡ ಸೈನ್ಯವೊಂದನ್ನು ಕಳುಹಿಸಿದನು. ಕರ್ಣದೇವನು ಸೋತು ತನ್ನ ಮಗಳು ದೇವಲದೇವಿಯೊಂದಿಗೆ ರಾಜ್ಯ ಬಿಟ್ಟು ಓಡಿಹೋಗಿ ದೇವಗಿರಿಯ ರಾಜನಾದ ಯಾದವರ ರಾಮಚಂದ್ರನಲ್ಲಿ ರಕ್ಷಣೆ

ಪಡೆದನು. ಗುಜರಾತು ಅಲ್ಲಾವುದ್ದೀನನ ವಶವಾಯಿತು. ರಾಣಿ ಕಮಲಾದೇವಿಯು ಸೆರೆಹಿಡಿಯಲ್ಪಟ್ಟು ದೆಹಲಿಯ ಅಂತಃಪುರಕ್ಕೆ ಕಳುಹಿಸಲ್ಪಟ್ಟಳು.

**ರಜಪುಟಾಣದ ವಿಜಯ (1299-1301)**

ಗುಜರಾತಿನ ವಿಜಯದ ನಂತರ ಅಲ್ಲಾವುದ್ದೀನನು ರಜಪುಟಾಣವನ್ನು ಗೆಲ್ಲಲು ತನ್ನ ಗಮನವನ್ನು ಹರಿಸಿದನು. ಎಲ್ಲಿಯವರೆಗೆ ರಜಪುಟಾಣದ ದುರ್ಗಮವಾದ ಕೋಟೆಗಳು ರಜಪೂತರ ವಶದಲ್ಲಿರುವವೋ ಅಲ್ಲಿಯವರೆಗೆ ದೆಹಲಿಯಲ್ಲಿ ಮುಸಲ್ಮಾನರ ಆಳ್ವಿಕೆಗೆ ಭದ್ರತೆಯಿಲ್ಲವೆಂದು ಅಲ್ಲಾವುದ್ದೀನನು ಮನಗಂಡಿದ್ದನು. ಸಾಹಸಿಗಳಾಗಿದ್ದ ರಜಪೂತರು ಯಾವ ಸಮಯದಲ್ಲಾದರೂ ದೆಹಲಿ ಮತ್ತು ಆದರ ನೆರೆಹೊರೆಯ ಪ್ರದೇಶಗಳ ಮೇಲೆ ಆಕ್ರಮಣ ಮಾಡಬಹುದೆಂಬ ಭೀತಿಯು ಅಲ್ಲಾವುದ್ದೀನನಿಗಿದ್ದಿತು. ಮೇಲಾಗಿ ರಜಪುಟಾಣವನ್ನು ವಶಪಡಿಸಿಕೊಳ್ಳದ ಹೊರತು ಗುಜರಾತಿನೊಂದಿಗೆ ದೆಹಲಿಯು ಸಂಪರ್ಕವನ್ನಿಟ್ಟುಕೊಳುಳವುದು ಬಹಳ ಕಷ್ಟವೆಂಬುದಾಗಿ ತಿಳಿದನು. ಈ ಕಾರಣಗಳಿಂದಾಗಿ ಅಲ್ಲಾವುದ್ದೀನನು ರಣತಂಬೂರು ಮತ್ತು ಚಿತ್ತೂರ್‌ಗಳನ್ನು ಗೆದ್ದು ವಶಪಡಿಕೊಳ್ಳಲು ನಿರ್ಧರಿಸಿದನು.

ಅಲ್ಲಾವುದ್ದೀನನಿಗಿಂತ ಮುಂಚೆ ಮುಸ್ಲಿಮರು ರಣತಂಬೂರನ್ನು ಗೆದ್ದು ವಶಪಡಿಸಿಕೊಂಡಿದ್ದರೂ ಆದನ್ನು ಸ್ಥಿರವಾಗಿ ತಮ್ಮ ಆಧೀನಕ್ಕೆ ತಂದುಕೊಳ್ಳುವುದರಲ್ಲಿ ವಿಫಲರಾಗಿದ್ದರು. ಚೌಹಾನರ ದೊರೆ ರಾಣಾಹಮ್ಮೀರನು ಇದರ ದೊರೆಯಾಗಿದ್ದನು. ಇವನು ಅಲ್ಲಾವುದ್ದೀನನ ಶತ್ರುಗಳಾಗಿದ್ದ ಕೆಲವು ಹೊಸ ಮುಸಲ್ಮಾನರಿಗೆ ಆಶ್ರಯ ಕೊಟ್ಟಿದ್ದು ಸುಲ್ತಾನನ ಅಸಮಾಧಾನಕ್ಕೆ ಕಾರಣನಾಗಿದ್ದನು. 1299ರಲ್ಲಿ ಅಲ್ಲಾವುದ್ದೀನನು ಪ್ರಖ್ಯಾತವಾದ ರಣತಂಬೂರ್ ಕೋಟೆಯನ್ನು ವಶಪಡಿಸಿಕೊಳ್ಳಲು ಉಲುಗ್‌ಖಾನ್ ಮತ್ತು ನಸರತ್‌ಖಾನನನ್ನು ಅಪಾರ ಸೈನ್ಯದೊಂದಿಗೆ ಕಳುಹಿಸಿದನು. ಅವರು ಜಯಿನ್ (Jhain) ಕೋಟೆಯನ್ನು ವಶಪಡಿಸಿಕೊಂಡು ಆನಂತರ ರಣತಂಬೂರಿಗೆ ಮುತ್ತಿಗೆ ಹಾಕಿದರು. ಆದರೆ ಈ ಮುತ್ತಿಗೆಯಲ್ಲಿ ನಸರತ್‌ಖಾನನು ಕೊಲ್ಲಲ್ಪಟ್ಟನು. ರಾಣಾ ಹಮ್ಮೀರನು ಮುಸ್ಲಿಂ ಸೈನ್ಯದೊಂದಿಗೆ ಭೀಕರವಾಗಿ ಹೋರಾಡಿ ಅಪಾರ ನಷ್ಟದೊಂದಿಗೆ ಉಲುಗ್‌ಖಾನನನ್ನು ಜಯಿನ್ ಕೋಟೆಗೆ ಹಿಂದಿರುಗುವಂತೆ ಮಾಡಿದನು. ಈ ಆನಾಹುತದ ಸುದ್ದಿಯನ್ನು ತಿಳಿದ ಸುಲ್ತಾನನ ತಾನೇ ರಣತಂಬೂರಿನ ಮೇಲೆ ದಂಡೆತ್ತಿ ಹೊರಟನು. ಸುಮಾರು ಒಂದು ವರ್ಷ ನಡೆದ ಸತತ ಹೋರಾಟದ ನಂತರ ರಾಣಾಹಮ್ಮೀರನ ಮಂತ್ರಿಯಾಗಿದ್ದ ರಾಣಾಮಹಲ್‌ನ ದ್ರೋಹದಿಂದಾಗಿ ಕೋಟೆಯು 1301ರಲ್ಲಿ ಅಲ್ಲಾವುದ್ದೀನನ ಕೈವಶವಾಯಿತು. ರಾಣಾಹಮ್ಮೀರನನ್ನೂ ಮತ್ತು ಅವನ ಪರಿವಾರದವರನ್ನು ಕೊಲ್ಲಲಾಯಿತು. ಇದೇ ರೀತಿಯಲ್ಲಿ ತಮ್ಮ ನಾಯಕನಿಗಾಗಿ ಕೊನೆಯವರೆಗೂ ವೀರಾವೇಶದಿಂದ ಹೋರಾಡಿದ ಸೈನಿಕರೂ ಸಾವಿಗೀಡಾದರು. ರಾಣಾಮಹಲ್‌ನು ಸುಲ್ತಾನನಿಂದ ಬಹುಮಾನವನ್ನು ಪಡೆಯುವುದಕ್ಕೆ ಬದಲಾಗಿ ತಾನೆಸಗಿದ ಸ್ವಾಮಿ ದ್ರೋಹಕ್ಕಾಗಿ ಸಾವಿನ ಶಿಕ್ಷೆಯನ್ನು ಪಡೆದನು. ರಣತಂಬೂರ್ ಮತ್ತು ಜಯಿನ್ ಕೋಟೆಗಳ ಮೇಲ್ವಿಚಾರಣೆಯನ್ನು ಉಲುಗ್‌ಖಾನನಿಗೆ ವಹಿಸಿ ಅಲ್ಲಾವುದ್ದೀನನು ಅಪಾರ ಐಶ್ವರ್ಯದೊಂದಿಗೆ ದೆಹಲಿಗೆ ಹಿಂದಿರುಗಿದನು.

**ಚಿತ್ತೂರಿನ ವಿಜಯ (1303)**

ರಣತಂಬೂರಿನ ವಿಜಯದ ನಂತರ ಅಲ್ಲಾವುದ್ದೀನನು 1303ರಲ್ಲಿ ಮೇವಾರ ರಾಜ್ಯದ ಮೇಲೆ ದಂಡೆತ್ತಿ ಹೊರಟನು. ಚಿತ್ತೂರು ಇದರ ರಾಜಧಾನಿಯಾಗಿತ್ತು. ಮೇವಾರ ರಾಜ್ಯವು ಬೆಟ್ಟಗುಡ್ಡಗಳ ಶ್ರೇಣಿಯಿಂದಲೂ ಮತ್ತು ದಟ್ಟವಾದ ಕಾಡುಗಳಿಂದಲೂ ಕೂಡಿದ್ದು ಪ್ರಕೃತಿಯೇ ಅದಕ್ಕೆ ರಕ್ಷಣೆಯನ್ನೊದಗಿಸಿದಂತಿತ್ತು. ಮೇವಾರ ರಾಜ್ಯವನ್ನು ಪ್ರವೇಶಿಸಲು ಇದುವರೆಗೂ ಯಾವ ಮುಸಲ್ಮಾನ ದೊರೆಯೂ ಪ್ರಯತ್ನಿಸಿರಲಿಲ್ಲ. ಮೇವಾರ ರಾಜ್ಯದ ಪ್ರಾಕೃತಿಕ ಲಕ್ಷಣಗಳು ಆಕ್ರಮಣಕಾರರು ಅದನ್ನು ಅಧೀನಕ್ಕೊಳಪಡಿಸಿಕೊಳ್ಳುವುದನ್ನು ಕಷ್ಟಸಾಧ್ಯವನ್ನಾಗಿ ಮಾಡಿದ್ದವು. ಪ್ರಾಕೃತಿಕವಾಗಿದ್ದ ಚಿತ್ತೂರಿನ ಕೋಟೆಯು ಬೆಟ್ಟದ ನೆತ್ತಿಯ ಮೇಲಿದ್ದು ಯಾವಾಗಲೂ ಪರಕೀಯರ ಧಾಳಿಗಳನ್ನು ಪ್ರತಿಭಟಿಸುತ್ತಿತ್ತು. ಬೃಹತ್ತಾದ ಬಂಡೆಗಳಿಂದ ಕೂಡಿದ್ದ ಈ ಕೋಟೆಯು ಹಿಂದೂ ಮುಸ್ಲಿಮರ ಸೈನ್ಯಗಳು ಸಾವಿನ ಹೋರಾಟದಲ್ಲಿ ಕಾರ್ಯೋನ್ಮುಖರಾಗುವ ಎದುರಿಗಿದ್ದ ವಿಶಾಲ ಬಯಲು ಪ್ರದೇಶವನ್ನು ಘನಗಾಂಬೀರ್ಯದಿಂದ ನೋಡುತ್ತಿತ್ತು.

ಅಲ್ಲಾವುದ್ದೀನನು ಚಿತ್ತೂರಿನ ಮೇಲೆ ದಂಡಯಾತ್ರೆ ಕೈಗೊಂಡ ಸಮಯದಲ್ಲಿ ರಾಣಾ ರತನ್‌ಸಿಂಗ್ ಎಂಬವನು ಅದರ ರಾಜನಾಗಿದ್ದನು. ಸೌಂದರ್ಯಕ್ಕೆ ಹೆಸರುವಾಸಿಯಾಗಿದ್ದ ರಾಣಾ ರತನ್‌ಸಿಂಗನ ರಾಣಿ ಪದ್ಮಿನಿಯನ್ನು ಪಡೆಯಬೇಕೆಂದು ಅಲ್ಲಾವುದ್ದೀನನು ಈ ದಂಡಯಾತ್ರೆಯನ್ನು ಕೈಗೊಂಡಿದ್ದನೆಂದು ಇತಿಹಾಸಕಾರ ಕರ್ನಲ್ ಟಾಡ್ ಅಭಿಪ್ರಾಯ ಪಟ್ಟಿರುವರು. ಆದರೆ ಇದೊಂದು ಕಾಲ್ಪನಿಕ ಕಥೆಯೇ ಹೊರತು ಐತಿಹಾಸಿಕ ಸಂಗತಿಯಲ್ಲವೆಂದು ಇತ್ತೀಚಿನ ಸಂಶೋಧಕರು ಅಭಿಪ್ರಾಯಪಟ್ಟಿರುವರು. ರಜಪೂತರು ಘೋರಾ ಮತ್ತು ಬದಲ್ ಎಂಬ ವೀರ ನಾಯಕರ ನೈತೃತ್ವದಲ್ಲಿ ವೀರಾವೇಶದಿಂದ ಹೋರಾಡಿದರು. ಆದರೆ ಕೊನೆಯಲ್ಲಿ ಅವರ ಶಕ್ತಿ ಸಾಮರ್ಥ್ಯಗಳು ವ್ಯರ್ಥವಾದವು. ಚಿತ್ತೂರು ಕೋಟೆಯು 1303ರಲ್ಲಿ ಅಲ್ಲಾವುದ್ದೀನನ ವಶವಾಯಿತು. ರಜಪೂತರ ಸ್ತ್ರೀಯರು ತಮ್ಮ ಕುಲದ ಗೌರವಕ್ಕೆ ತಕ್ಕಂತೆ ಭಯಾನಕ ಕೃತ್ಯವಾದ ಜೋಹರ್ ಪದ್ಧತಿಯನ್ನು ಅನುಸರಿಸಿ ಬೆಂಕಿಯಲ್ಲಿ ಬಿದ್ದು ಪ್ರಾಣಾರ್ಪಣೆ ಮಾಡಿದರು. ರಜಪೂತರ ಪ್ರತಿಭಟನೆಯಿಂದ ರೋಷಗೊಂಡ ಸುಲ್ತಾನನು ಅಲ್ಲಿನ ನಿವಾಸಿಗಳೆಲ್ಲರನ್ನೂ ಕೊಲ್ಲುವಂತೆ ಆಜ್ಞೆ ಮಾಡಿದನು. ಅಲ್ಲಾವುದ್ದೀನನು ಚಿತ್ತೂರ್ ಕೋಟೆಯ ಮೇಲ್ವಿಚಾರಣೆಗಾಗಿ ತನ್ನ ಮತ್ತೊಬ್ಬ ಮಗ ಖಿಜರ್‌ಖಾನ್‌ನನ್ನು ನೇಮಿಸಿ ದೆಹಲಿಗೆ ಹಿಂದಿರುಗಿದನು. ಚಿತ್ತೂರಿಗೆ ಖಿಜರ್‌ಖಾನನ ಹೆಸರನ್ನಿಟ್ಟು ಅದನ್ನು ಖಿಜರಾಬಾದ್ ಎಂದು ಕರೆಯಲಾಯಿತು. ಖಿಜರ್‌ಖಾನನು ಚಿತ್ತೂರಿನಲ್ಲಿ ಕೆಲವು ವರ್ಷಗಳು ಮಾತ್ರ ಇದ್ದನು. ಅವನು 1311ರಲ್ಲಿ ರಜಪೂತರ ಪ್ರತಿಭಟನೆಯಿಂದಾಗಿ ಅಲ್ಲಿಂದ ಕಾಲ್ತೆಗೆಯಬೇಕಾಯಿತು. ಅನಂತರ ಅಲ್ಲಾವುದ್ದೀನನು ಅದರ ಮೇಲ್ವಿಚಾರಣೆಯನ್ನು ರಜಪೂತರ ಮುಖಂಡನಾದ ಮಲದೇವನಿಗೆ ವಹಿಸಿದನು. ಮಲದೇವನು ಸುಮಾರು ಏಳು ವರ್ಷಗಳ ಕಾಲ ಅಧಿಕಾರದಲ್ಲಿ ಮುಂದುವರಿದನು. ಬಹುಷಃ ಅಲ್ಲಾವುದ್ದೀನನು ಕಾಲವಾದ ಮೇಲೆ ಗುಹಿಲಟ ಸಂತತಿಯ ರಾಣಾಹಮ್ಮೀರನು ಅದನ್ನು ಪುನಃ ವಶಪಡಿಸಿಕೊಂಡನು. ಚಿತ್ತೂರು ಮತ್ತೊಮ್ಮೆ ಹಿಂದಿನ ವೈಭವವನ್ನು ಪಡೆದುಕೊಂಡು ರಜಪುಟಾಣದ ಪ್ರಮುಖ ರಾಜ್ಯಗಳಲ್ಲೊಂದಾಗಿ ಮುಂದುವರಿಯಿತು.

**ಮಾಳವದ ವಿಜಯ (1305-06)**

ರಣತಂಬೂರ್ ಮತ್ತು ಚಿತ್ತೂರ್ ಕೋಟೆಗಳನ್ನು ವಶಪಡಿಸಿಕೊಂಡನಂತರ ಅಲ್ಲಾವುದ್ದೀನನು ಅವುಗಳ ನೆರೆಯರಾಜ್ಯವಾದ ಮಾಳವವನ್ನು ವಶಪಡಿಸಿಕೊಳ್ಳಲು ನಿರ್ಧರಿಸಿ 1305ರಲ್ಲಿ ಐಯಿನ್-ಉಲ್-ಮುಲ್ಕ್-ಮುಲ್ತಾನಿ ಎಂಬವನನ್ನು ಹತ್ತು ಸಾವಿರ ಸೈನ್ಯದೊಂದಿಗೆ ಅದರ ಮೇಲೆ ಕಳುಹಿಸಿದನು. ಅಲ್ಲಾವುದ್ದೀನನು ಈ ಹಿಂದೆ ತಾನು ಸಿಂಹಾಸನಕ್ಕೆ ಬರುವುದಕ್ಕೆ ಮುಂತೆಯೆ ಭಿಲ್ಸಾನಗರವನ್ನು ಲೂಟಿ ಮಾಡಿದ್ದನು. ಮಾಳವದ ರಾಜನ ಹೋರಾಟವು ಸೋಲಿನಲ್ಲಿ ಪರ್ಯಾವಸಾನವಾಯಿತು. ಮುಲ್ತಾನಿಯು ಮಾಳವದ ಮುಖ್ಯ ನಗರಗಳಾದ ಮಂಡು, ಉಜ್ಜೈನಿ, ಧಾರ್, ಮತ್ತು ಚಾಂದೇರಿಗಳನ್ನು ವಶಪಡಿಸಿಕೊಂಡನು. ಮಾಳವವು ದೆಹಲಿ ಸಾಮ್ರಾಜ್ಯದ ಒಂದು ಭಾಗವಾಯಿತು ಮತ್ತು ಐಯಿನ್-ಉಲ್-ಮುಲ್ಕನು ಅದರ ರಾಜ್ಯಪಾಲನಾಗಿ ನೇಮಿಸಲ್ಪಟ್ಟನು.

**ಸಿವಾನದ ವಿಜಯ (1308)**

ಮಾಳವದ ವಿಜಯದನಂತರ ಅಲ್ಲಾವುದ್ದೀನನು ಸಿವಾನದ ರಾಜನಾದ ಶಿತಾಲ ದೇವನ ಮೇಲೆ ದಂಡಯಾತ್ರೆಯನ್ನು ನಿಯೋಜಿಸಿ ಕಳುಹಿಸಿದನು. ಅಲ್ಲಿನ ರಾಜಪೂತರು ಮುಸ್ಲಿಮರ ವಿರುದ್ಧ ಅನೇಕ ತಿಂಗಳುಗಳ ಕಾಲ ಹೋರಾಡಿ ಕೊನೆಗೆ ಸೋಲನ್ನು ಹೊಂದಿದರು. ಅವರ ರಾಜ್ಯವನ್ನು ಸಾಮ್ರಾಜ್ಯಕ್ಕೆ ಸೇರಿಸಿಕೊಳ್ಳಲಾಯಿತು. ಮಲ್ಲಿಕ್ ಕಮಲುದ್ದೀನ್ ಎಂಬವನನ್ನು ಅಲ್ಲಿಗೆ ರಾಜ್ಯಪಾಲನನ್ನಾಗಿ ನೇಮಿಸಿದನು.

**ಜಾಲೋರ್ ವಿಜಯ (1311)**

ಜಾಲೋರಿನ ಜೌಹಾಣರ ದೊರೆ ಕನ್ಹರದೇವನ ವಿರುದ್ಧ ಕೈಗೊಂಡ ದಂಡಯಾತ್ರೆಯು ಉತ್ತರ ಭಾರತದಲ್ಲಿ ಅಲ್ಲಾವುದ್ದೀನ್ ಖಿಲ್ಜಿಯು ಕೈಗೊಂಡ ಯಾತ್ರೆಗಳಲ್ಲಿ ಕಟ್ಟಕಡೆಯದಾಗಿತ್ತು. ಕನ್ಹರದೇವನು ಅಲ್ಲಾವುದ್ದೀನನ ಸಾರ್ವಭೌಮತ್ವವನ್ನು ಹಿಂದೆ ಒಪ್ಪಿಕೊಂಡಿದ್ದರೂ ಅವನ ವರ್ತನೆಯಿಂದ ಸುಲ್ತಾನನು ಅಸಮಾಧಾನಗೊಂಡಿದ್ದನು. ಆದ್ದರಿಂದ 1311ರಲ್ಲಿ ಅವನ ವಿರುದ್ಧ ಸೈನ್ಯವೊಂದನ್ನು ಕಳುಹಿಸಿದನು. ಕನ್ಹರದೇವನು ಸೋತು ಶರಣಾಗತನಾದನು ಮತ್ತು ಅವನ ರಾಜ್ಯವನ್ನು ದೆಹಲಿ ಸಾಮ್ರಾಜ್ಯಕ್ಕೆ ಸೇರಿಸಿಕೊಳ್ಳಲಾಯಿತು. ಅಲ್ಲಾವುದ್ದೀನನ ಈ ವಿಜಯದಲ್ಲಿ ಕನ್ಹರದೇವನ ಸಹೋದರನಾದ ಮಲದೇವನು ಸುಲ್ತಾನನಿಗೆ ಮಾಡಿದ ಉಪಕಾರಕ್ಕಾಗಿ ಅವನನ್ನು 1311ರಲ್ಲಿ ಚಿತ್ತೂರಿಗೆ ರಾಜ್ಯಪಾಲನನ್ನಾಗಿ ನೇಮಿಸಿ ಕಳುಹಿಸಿದನು. ಈ ರೀತಿಯಲ್ಲಿ ಕಾಶ್ಮೀರ, ನೇಪಾಳ ಮತ್ತು ಅಸ್ಸಾಂಗಳನ್ನುಳಿದು ಇಡೀ ಉತ್ತರ ಭಾರತವೆಲ್ಲವೂ ಅಲ್ಲಾವುದ್ದೀನನ ಅಧೀನಕ್ಕೊಳಪಟ್ಟು ಅವನು ಉತ್ತರ ಭಾರತದ ಸಾರ್ವಭೌಮನಾದನು.

**ದಕ್ಷಿಣ ಭಾರತದ ದಂಡಯಾತ್ರೆ**

ಉತ್ತರ ಭಾರತವನ್ನು ಗೆದ್ದು ವಶಪಡಿಸಿಕೊಂಡು ಸಾಮ್ರಾಜ್ಯವನ್ನು ವಿಸ್ತರಿಸಿದ ಅಲ್ಲಾವುದ್ದೀನ್ ಖಿಲ್ಜಿಯು ದಕ್ಷಿಣ ಭಾರತದ ಮೇಲೂ ತನ್ನ ಅಧಿಕಾರವನ್ನು

ಸ್ಥಾಪಿಸಬೇಕೆಂಬ ಆಸೆಯಿಂದ ನಾಲ್ಕು ದಂಡಯಾತ್ರೆಗಳನ್ನು ನಿಯೋಜಿಸಿ ಕಳುಹಿಸಿದನು. ಈ ಕಾಲದಲ್ಲಿ ದಖನ್ನಿನಲ್ಲಿ ನಾಲ್ಕು ಪ್ರಮುಖ ರಾಜ್ಯಗಳಿದ್ದವು. ವಿಂಧ್ಯ ಪರ್ವತಗಳ ದಕ್ಷಿಣಕ್ಕೆ ಈಗಿನ ಮಹಾರಾಷ್ಟ್ರ ಭಾಗದಲ್ಲಿ ಯಾದವರ ರಾಜ್ಯವಿದ್ದು ದೇವಗಿರಿಯು ಆದರ ರಾಜಧಾನಿಯಾಗಿತ್ತು. ಯಾದವರು ಕೃಷ್ಣನದಿಯವರೆಗಿನ ಪ್ರದೇಶವನ್ನೆಲ್ಲಾ ತಮ್ಮ ಆಧೀನಕ್ಕೊಳಪಡಿಸಿಕೊಂಡಿದ್ದರು. ಯಾದವರ ರಾಜನಾಗಿದ್ದ ರಾಮಚಂದ್ರನು ತನ್ನಲ್ಲಿದ್ದ ಅಪಾರ ಐಶ್ವರ್ಯದಿಂದ ಉತ್ತರ ಭಾರತದಲ್ಲೂ ಹೆಸರುವಾಸಿಯಾಗಿದ್ದನು. ಯಾದವರ ರಾಜ್ಯಕ್ಕೆ ಆಗ್ನೇಯ ಭಾಗದಲ್ಲಿ ಕಾಕತೀಯರ ರಾಜ್ಯವಿದ್ದಿತು. ವಾರಂಗಲ್ ಪಟ್ಟಣವು ಇವರ ರಾಜಧಾನಿಯಾಗಿತ್ತು ಮತ್ತು ಆ ಪಟ್ಟಣವು ದಖನ್ನಿನಲ್ಲೇ ಅತ್ಯಂತ ಸಂಪದ್ಭರಿತ ಪಟ್ಟಣವೆಂದು ಹೆಸರು ಪಡೆದಿತ್ತು. ಆದರ ರಾಜನು ಲಾಭದಾಯಕವಾದ ವಿದೇಶೀ ವ್ಯಾಪಾರದಿಂದ ಅಪಾರ ಐಶ್ವರ್ಯವನ್ನು ಕೂಡಿಟ್ಟಿದ್ದನು. ದೇವಗಿರಿಯ ದಕ್ಷಿಣಕ್ಕೂ ಮತ್ತು ಮಶ್ಚಿಮಕ್ಕೂ ಹಾಗೂ ಕಾಕತೀಯರ ರಾಜ್ಯದ ನೈರುತ್ಯ ದಿಕ್ಕಿಗೂ ಹೊಯ್ಸಳರ ರಾಜ್ಯವಿದ್ದಿತು. ದ್ವಾರಸಮುದ್ರವು ಆವರ ರಾಜದಾನಿಯಾಗಿತ್ತು ಹೊಯ್ಸಳರು ಉತ್ತರದಲ್ಲಿ ಯಾದವರೊಂದಿಗೂ ದಕ್ಷಿಣದಲ್ಲಿ ಚೋಳರೊಂದಿಗೂ ನಿರಂತರವಾದ ಯುದ್ಧಗಳಲ್ಲಿ ತೊಡಗಿದ್ದರು. ದ್ವಾರಸಮುದ್ರದ ದಕ್ಷಿಣಕ್ಕೆ ಪಾಂಡ್ಯರ ರಾಜ್ಯವಿದ್ದಿತು. ಮಧುರೆಯು ಅವರ ರಾಜಧಾನಿಯಾಗಿತ್ತು. ಉತ್ತರಭಾರತದ ರಾಜ್ಯಗಳಂತೆ ದಕ್ಷಿಣ ಭಾರತದ ರಾಜ್ಯಗಳೂ ಸಹ ಪರಸ್ಪರ ಯುದ್ಧಗಳಲ್ಲಿ ತೊಡಗಿದ್ದವು. ಅವುಗಳೂ ಕೂಡ ತಮ್ಮ ಗಡಿಗಳ ರಕ್ಷಣೆಯ ಬಗ್ಗೆ ಗಮನ ಕೊಟ್ಟಿರಲಿಲ್ಲ. ಆದ್ದರಿಂದ ಅಲ್ಲಾವುದ್ದೀನನಿಗೆ ಅವುಗಳ ಮೇಲೆ ಆಕ್ರಮಣ ಮಾಡುವುದು ಸುಲಭವಾಗಿತ್ತು. ಈ ರಾಜ್ಯಗಳ ಖಜಾನೆಗಳು ಬೆಳ್ಳಿ ಬಂಗಾರ ಮತ್ತು ವಜ್ರ ವೈಡೂರ್ಯಗಳಿಂದ ತುಂಬಿ ತುಳುಕುತ್ತಿದ್ದವು ಮತ್ತು ಇಲ್ಲಿನ ವರ್ತಕರು ಕೂಡ ಶ್ರೀಮಂತರಾಗಿದ್ದರು. ಇವರ ದೇವಾಲಯಗಳಲ್ಲೂ ಅಪಾರ ಐಶ್ವರ್ಯವಿದ್ದಿತು. ಆದ್ದರಿಂದ ಈ ರಾಜ್ಯಗಳ ಮೇಲೆ ಆಕ್ರಮಣ ಮಾಡುವ ಆಸೆಯು ಸುಲ್ತಾನನಿಗೆ ಬಂದುದು ಸಹಜವೇ ಆಗಿದ್ದು ಸುಲ್ತಾನನು, ತನ್ನ ಸಮರ್ಥ ದಂಡನಾಯಕನಾದ ಮಲ್ಲಿಕ್ ಕಪೂರನನ್ನು ಸೈನ್ಯದೊಂದಿಗೆ ಇವುಗಳ ವಿರುದ್ಧ ಕಳುಹಿಸಿದನು. ಮಲ್ಲಿಕ್ ಕಪೂರನು ಒಬ್ಬ ಗುಲಾಮ, ಮೂಲತಃ ಇವನು ಹಿಂದುವಾಗಿದ್ದನು. ಹಿಂದೆ ನಸರತ್‌ಖಾನನು ಗುಜರಾತಿನ ಮೇಲೆ ದಂಡಯಾತ್ರೆ ಕೈಗೊಂಡಿದ್ದಾಗ ಇವನನ್ನು ಕೊಂಡಿದ್ದನು. ಆನಂತರ ಕಾಪರನು ತನ್ನ ಅಸಾಮಾನ್ಯ ಪ್ರತಿಭಾ ಸಾಮರ್ಥ್ಯಗಳಿಂದ ಸುಲ್ತಾನನ ವಿಶ್ವಾಸಕ್ಕೆ ಪಾತ್ರನಾಗಿ ಉನ್ನತ ಹುದ್ದೆಗೇರಿದನು. ಕಪೂರನು ಕನ್ಯಾಕುಮಾರಿಯವರೆಗೂ ಮುಸ್ಲಿಮರ ವಿಜಯ ಪತಾಕೆಯನ್ನು ಕೊಂಡೊಯ್ದನು. ದಖನ್ನಿನ ಮೇಲೂ ಮುಸಲ್ಮಾನರ ಸಾರ್ವಭೌಮಾಧಿಕಾರವನ್ನು ಸ್ಥಾಪಿಸಿದುದು ಅಲ್ಲಾವುದ್ದೀನನ ಬಹುಮುಖ್ಯ ಸಾಧನೆಯಾಗಿತ್ತು. ಬಹಳ ಕಾಲದ ನಂತರ ಉತ್ತರ ಮತ್ತು ದಕ್ಷಿಣಭಾರತಗಳೆರಡೂ ಅಲ್ಲಾವುದ್ದೀನನ ದಂಡಯಾತ್ರೆಗಳಿಂದ ಒಂದುಗೂಡಿಸಲ್ಪಟ್ಟು ಭಾರತವು ಮತ್ತೊಮ್ಮೆ ರಾಜಕೀಯ ಏಕತೆಯನ್ನು ಕಾಣುವಂತಾಯಿತು.

**ದೇವಗಿರಿಯ ಮೇಲೆ ಕಪೂರನ ಪ್ರಥಮ ಧಾಳಿ**

ದೇವಗಿರಿಯ ಯಾದವರ ದೊರೆ ರಾಮಚಂದ್ರನು ಹಿಂದೆ 1294ರಲ್ಲಿ

ಅಲ್ಲಾವುದ್ದೀನ್ ಖಿಲ್ಜಿಗೆ ಶರಣಾಗತನಾಗಿದ್ದನು. ಆದರೆ ಅಲ್ಲಾವುದ್ದೀನನು ದೇವಗಿರಿಯನ್ನು ಬಿಟ್ಟುಹೋದ ಮೇಲೆ ತಾನು ಅವನಿಗೆ ಕೊಡಲೊಪ್ಪಿದ್ದ ಕಪ್ಪಕಾಣಿಕೆಗಳನ್ನು ನಿಲ್ಲಿಸಿ ಬಿಟ್ಟಿದ್ದನು. ಮೇಲಾಗಿ ರಾಮಚಂದ್ರನು, ಗುಜರಾತಿನ ಬಾಗೇಲರ ದೊರೆ ಕರ್ಣದೇವನಿಗೆ ಆಶ್ರಯಕೊಟ್ಟು ಅಲ್ಲಾವುದ್ದೀನನ ಕೋಪಕ್ಕೆ ಪಾತ್ರನಾಗಿದ್ದನು. ಆದುದರಿಂದ 1307ರಲ್ಲಿ ಮಲ್ಲಿಕ್ ಕಪೂರನನ್ನು ಮೂವತ್ತು ಸಾವಿರ ಸೈನ್ಯದೊಂದಿಗೆ ದೇವಗಿರಿಯ ಮೇಲೆ ಕಳುಹಿಸಿದನು. ಕಪೂರನು ದೇವಗಿರಿಗೆ ಬರುವ ಮಾರ್ಗದಲ್ಲಿ ಮಾಳವ ಮತ್ತು ಗುಜರಾತುಗಳ ಮೂಲಕ ಪ್ರಯಾಣ ಮಾಡಿ ಗುಜರಾತಿನ ದೊರೆ ಕರ್ಣದೇವನನ್ನು ಸಂಪೂರ್ಣವಾಗಿ ಸೋಲಿಸಿ ಶರಣಾಗತನನ್ನಾಗಿ ಮಾಡಿಕೊಂಡನು. ಕರ್ಣದೇವನ ಮಗಳಾದ ದೇವಲದೇವಿಯನ್ನು ಸೆರೆಹಿಡಿದು ಸುಲ್ತಾನನ ರಾಣೀವಾಸಕ್ಕೆ ಕಳುಹಿಸಿದನು. ತರುವಾಯ ಅವಳನ್ನು ಅಲ್ಲಾವುದ್ದೀನನ ಮಗನಾದ ಖಿಜರ್ ಖಾನನಿಗೆ ಕೊಟ್ಟು ವಿವಾಹ ಮಾಡಲಾಯಿತು. ಅನಂತರ ಕಪೂರನು ದೇವಗಿರಿಯ ಕಡೆ ಮುಂದುವರಿದನು ರಾಮಚಂದ್ರನು ಸ್ವಲ್ಪವೂ ಪ್ರತಿಭಟಿಸದೆ ಶರಣಾಗತನಾದುದಲ್ಲದೆ ಅವನು ದೆಹಲಿಗೆ ಹೋಗಿ ಸುಲ್ತಾನನಿಗೆ ಕಪ್ಪಕಾಣಿಕೆಗಳನ್ನೊಪ್ಪಿಸಿ ಅವನನ್ನು ತೃಪ್ತಿಪಡಿಸಿದನು ಮತ್ತು ಅವನ ಸಾಮಂತನಾಗಿರಲು ಒಪ್ಪಿಕೊಂಡನು.

**ವಾರಂಗಲ್ಲಿನ ವಿಜಯ (1309)**

ದೇವಗಿರಿಯ ಯಾದವರು ಅನುಭವಿಸಿದ ಸೋಲು ದಕ್ಷಿಣದ ಇತರ ಹಿಂದೂ ರಾಜರುಗಳ ಸೋಲಿಗೆ ದಾರಿಮಾಡಿಕೊಟ್ಟಿತ್ತು. 1309ರಲ್ಲಿ ಅಲ್ಲಾವುದ್ದೀನನು ಕಪೂರನನ್ನು ಕಾಕತೀಯರ ರಾಜ್ಯದ ಮೇಲೆ ಕಳುಹಿಸಿದನು. ಕಪೂರನು ಬಹಳ ಕಷ್ಟಕರವಾದ ಪ್ರಯಾಣ ಮಾಡಿ ಕಾಕತೀಯರ ರಾಜಧಾನಿಯಾಗಿದ್ದ ವಾರಂಗಲ್ ಅನ್ನು ತಲುಪಿದನು. ಕಾಕತೀಯರ ರಾಜನಾದ ಪ್ರತಾಪರುದ್ರದೇವನು ಕಲವು ದಿವಸಗಳ ತೀವ್ರ ಪ್ರತಿಭಟನೆಯ ನಂತರ ಸೋತು ಶರಣಾಗತನಾದನು ಮತ್ತು ಪ್ರತಿವರ್ಷವೂ ತಪ್ಪದೆ ಕಪ್ಪಕಾಣಿಕೆಗಳನ್ನು ಸಲ್ಲಿಸುವುದಾಗಿ ತಿಳಿಸಿದನು, ಅಲ್ಲದೆ ತಾನು ಶರಣಾಗತನಾಗಿರುವನೆಂಬುದರ ಸಂಕೇತವಾಗಿ ತನ್ನ ಕಂಠಾಭರಣಗಳನ್ನೂ ಮತ್ತು ಬಂಗಾರದ ತನ್ನ ಪ್ರತಿಮೆಯನ್ನು ಸುಲ್ತಾನನಿಗೆ ಒಪ್ಪಿಸಿದನು. ಕಪೂರನು ವಿಜಯದೊಂದಿಗೆ ವಾರಂಗಲ್ಲನ್ನು ಬಿಟ್ಟು ದೆಹಲಿಗೆ ಅಪಾರ ಐಶ್ವರ್ಯದೊಂದಿಗೆ 1310ರಲ್ಲಿ ಹಿಂದಿರುಗಿ ಹೋದನು. ತನ್ನ ದಳಪತಿಯ ವಿಜಯದಿಂದ ಸಂತೋಷಗೊಂಡ ಅಲ್ಲಾವುದ್ದೀನನು ಕಪೂರನಿಗೆ ಉಡುಗೊರೆಗಳನ್ನಿತ್ತು ಗೌರವಿಸಿದನು.

**ದ್ವಾರಸಮುದ್ರದ ಮೇಲೆ ಆಕ್ರಮಣ (1310)**

ಮಲ್ಲಿಕ್ ಕಪೂರನ ವಿಜಯಗಳಿಂದ ಉತ್ತೇಜಿತನಾದ ಅಲ್ಲಾವುದ್ದೀನನು 1310ರಲ್ಲಿ ಅವನನ್ನು ದ್ವಾರಸಮುದ್ರದ ಮೇಲೆ ದಂಡಿನೊಂದಿಗೆ ಕಳುಹಿಸಿದನು. ಈ ಕಾಲದಲ್ಲಿ ಮೂರನೆ ಬಲ್ಲಾಳನು ಹೊಯ್ಸಳರ ರಾಜನಾಗಿದ್ದನು. ವೀರಬಲ್ಲಾಳನು ಸಮರ್ಥ ದೊರೆಯಾಗಿದ್ದರೂ ಯಾದವರಿಗೂ ಹೊಯ್ಸಳರಿಗೂ ಧೀರ್ಘಕಾಲದಿಂದ ನಡೆಯುತ್ತಿದ್ದ ಹೋರಾಟಗಳಿಂದಾಗಿ ಅವನ ಶಕ್ತಿ ಸಾಮರ್ಥ್ಯಗಳು ಉಡುಗೆಹೋಗಿದ್ದವು ಆದ್ದರಿಂದ ಅವನು ಮಲ್ಲಿಕ್ ಕಪೂರನಿಗೆ ಸುಲಭವಾಗಿ ಸೋತು ಶರಣಾಗತನಾದನು.

ಕಪೂರನು ಅಲ್ಲಿನ ದೇವಾಲಯನ್ನು ಲೂಟಿ ಮಾಡಿ ಅಪಾರ ಐಶ್ವರ್ಯವನ್ನು ವಶಪಡಿಸಿಕೊಂಡನು. ಆದರೆ ಕಪೂರನು ಅಷ್ಟರಿಂದಲೇ ತೃಪ್ತನಾಗದೆ ಬಲ್ಲಾಳನಿಗೆ ಇಸ್ಲಾಂ ಧರ್ಮವನ್ನು ಅವಲಂಬಿಸಬೇಕು ಇಲ್ಲವಾದರೆ ಜಿಮ್ಮಿಯಾಗಿರಲು ಒಪ್ಪಿಕೊಳ್ಳಬೇಕೆಂದು ಬಲಾತ್ಕರಿಸಿದನು. ಬಲ್ಲಾಳನು ಜಿಮ್ಮಿಯಾಗಿರಲು ಒಪ್ಪಿಕೊಂಡು ದೆಹಲಿಗೆ ಹೋಗಿ ಸುಲ್ತಾನನಿಗೆ ಕಪ್ಪಕಾಣಿಕೆಗಳನ್ನೊಪ್ಪಿಸಿ ಅವನ ಸಾಮಂತನಾಗಿರಲು ಒಪ್ಪಿಕೊಂಡನು. ದೆಹಲಿಯಲ್ಲಿ ಸುಲ್ತಾನನು ಅವನನ್ನು ಯಾದವರ ರಾಜನಂತೆ ಆದರಿದಿಂದ ಬರಮಾಡಿಕೊಂಡು ಗೌರವಿಸಿಕಳುಹಿಸಿಕೊಟ್ಟನು.

**ಮಧುರೆಯ ಮೇಲೆ ಆಕ್ರಮಣ (1311)**

ದ್ವಾರಸಮುದ್ರದ ವಿಜಯದ ನಂತರ ಕಪೂರನು ಪಾಂಡ್ಯರ ರಾಜ್ಯದ ಮೇಲೆ ದಂಡೆತ್ತಿ ಹೋದನು. ಪಾಂಡ್ಯರ ರಾಜ್ಯದಲ್ಲಿ ಸಿಂಹಾಸನಕ್ಕಾಗಿ ಸುಂದರ ಪಾಂಡ್ಯ ಮತ್ತು ವೀರಪಾಂಡ್ಯರಲ್ಲಿ ಅಂತಃಕಲಹವು ಏರ್ಪಟ್ಟಿದ್ದಿತು. 1311ರಲ್ಲಿ ಕಪೂರನು ಮಧುರೆಯನ್ನು ತಲುಪಿ ಅಲ್ಲಿನ ದೇವಾಲಯಗಳೆಲ್ಲವನ್ನೂ ನಾಶಮಾಡಿ ಎಣಿಕೆಗೂ ಮಿಗಿಲಾದ ಐಶ್ವರ್ಯವನ್ನು ವಶಪಡಿಸಿಕೊಂಡನು. ಅನಂತರ ಕಪೂರನು ಹಿಂದುಗಳ ಪವಿತ್ರ ಯಾತ್ರಾ ಸ್ಥಳವಾದ ರಾಮೇಶ್ವರದ ಮೇಲೂ ಧಾಳಿಮಾಡಿ ಅಲ್ಲಿನ ದೇವಾಲಯವನ್ನೂ ಲೂಟಿ ಮಾಡಿ 1311ರ ಅಂತ್ಯದಲ್ಲಿ ದೆಹಲಿಗೆ ಹಿಂದಿರುಗಿದನು. ಸುಲ್ತಾನನು ದೆಹಲಿಯಲ್ಲಿ ಅವನಿಗೆ ಅತ್ಯಂತ ಆದರದ ಸ್ವಾಗತವನ್ನು ಕೋರಿ ಅವನ ಗೆಲುವನ್ನು ವೇದಿಕೆಯ ಮೇಲಿಂದಮೇಲೆ ಘೋಷಿಸಿ ಈ ವಿಜಯಕ್ಕೆ ಕಾರಣರಾದವರೆಲ್ಲರಿಗೂ ಬಹುಮಾನಗಳನ್ನು ಕೊಟ್ಟು ತನ್ನ ಸಂತೋಷವನ್ನು ವ್ಯಕ್ತಪಡಿಸಿದನು.

**ದೇವಗಿರಿಯ ಮೇಲೆ ಕೊನೆಯ ಆಕ್ರಮಣ (1312)**

ದೇವಗಿರಿಯ ರಾಜನಾಗಿದ್ದ ರಾಮಚಂದ್ರನು ಈ ಮಧ್ಯೆ ಕಾಲವಾಗಿದ್ದನು. ಅವನು ಕಾಲವಾದ ಮೇಲೆ ಸಿಂಹಾಸನವನ್ನೇರಿದ ಅವನ ಮಗ ಶಂಕರದೇವನು ದೆಹಲಿಯ ಸುಲ್ತಾನನಿಗೆ ವಿಧೇಯನಾಗಿರುವುದನ್ನು ವಿರೋಧಿಸಿ ಪೊಗದಿ ಕೊಡುವುದನ್ನು ನಿಲ್ಲಿಸಿ ಬಿಟ್ಟನು. ಇದಲ್ಲದೆ ಕಪೂರನು ಹೊಯ್ಸಳರ ಮೇಲೆ ದಂಡೆತ್ತಿ ಹೋದಾಗ ತನ್ನ ತಂದೆಯ ಮಾತಿನಂತೆ ಕಪೂರನಿಗೆ ಮಾಡಬೇಕಾಗಿದ್ದ ಸಹಾಯವನ್ನು ಅವನು ಮಾಡಲಿಲ್ಲ. ಇದರಿಂದ ಕೋಪಗೊಂಡ ಸುಲ್ತಾನನು ಅವನನ್ನು ಶಿಕ್ಷಿಸಲು 1312ರಲ್ಲಿ ಕಪೂರನನ್ನು ಮತ್ತೊಮ್ಮೆ ದೇವಗಿರಿಯ ಮೇಲೆ ಕಳುಹಿಸಿದನು. ಶಂಕರದೇವನು ಸೋತು ಶಿರಚ್ಛೇದನ ಮಾಡಲ್ಪಟ್ಟನು. ಅನಂತರ ಕಪೂರನು ಹರಪಾಲದೇವನನ್ನು ಸಿಂಹಾಸನದ ಮೇಲೆ ಕೂರಿಸಿ ದೆಹಲಿಗೆ ಹಿಂದಿರುಗಿದನು. ಈ ಎಲ್ಲ ವಿಜಯಗಳಿಂದ ಅಲ್ಲಾವುದ್ದೀನನ ಸಾರ್ವಭೌಮತ್ವವು ದಕ್ಷಿಣ ಭಾರತದ ಮೇಲೂ ಸ್ಥಾಪಿತವಾಯಿತು. ದೆಹಲಿಯ ಸುಲ್ತಾನರ ಅಧಿಕಾರವು ಪರಾಕಾಷ್ಠತೆಯನ್ನು ಮುಟ್ಟಿತು.

**ಅಲ್ಲಾವುದ್ದೀನನ ದಖ್ಖನ್ನಿನ ನೀತಿಯ ತುಲನೆ**

ದಕ್ಷಿಣ ಭಾರತವನ್ನು ಗೆಲ್ಲಲು ಪ್ರಯತ್ನಿಸಿದ ಮುಸಲ್ಮಾನ ದೊರೆಗಳಲ್ಲಿ ಅಲ್ಲಾವುದ್ದೀನನು ಮೊದಲಿಗನು. ಅವನು 1294ರಲ್ಲಿ ದಕ್ಷಿಣ ಭಾರತದ ಮೇಲೆ

ದಂಡೆತ್ತಿ ಬರುವುದಕ್ಕೆ ಇಲ್ಲಿನ ಐಶ್ವರ್ಯವು ಮುಖ್ಯಕಾರಣವಾಗಿತ್ತು. ಅಂತಹ ಐಶ್ವರ್ಯವನ್ನು ಅವನು ಬೇರೆಕಡೆಯಲ್ಲೂ ಪಡೆಯಬಹುದಿತ್ತು. ಆದರೆ ಹೆಚ್ಚಿನ ಪ್ರಮಾಣದ ಐಶ್ವರ್ಯವನ್ನು ದಖನ್ನಿನಲ್ಲಿ ಬಹು ಸುಲಭವಾಗಿ ಪಡೆಯಬಹುದಿತ್ತು. ಏಕೆಂದರೆ ಇಲ್ಲಿನ ರಾಜರುಗಳು ಅನೇಕ ತಲೆಮಾರುಗಳಿಂದಲೂ ಕೂಡಿಟ್ಟಿದ್ದ ಐಶ್ವರ್ಯವನ್ನು ಹೊಂದಿದ್ದರು. ಇದಲ್ಲದೆ ದಖನ್ನಿನ ದೇವಾಲಯಗಳು ಐಶ್ವರ್ಯದ ಗಣಿಗಳಾಗಿದ್ದವು. ಆದುದರಿಂದ ಅಲ್ಲಾವುದ್ದೀನ್ ಖಿಲ್ಜಿಯು ಸುಲ್ತಾನ್ ಜಲಾಲುದ್ದೀನ್ ಖಿಲ್ಜಿಯ ಅನುಮತಿಯನ್ನು ಪಡೆಯದೆ ದೇವಗಿರಿಯ ಮೇಲೆ ದಂಡೆತ್ತಿ ಬಂದು ಅಪಾರ ಐಶ್ವರ್ಯವನ್ನು ವಶಪಡಿಸಿ ಕೊಂಡನು. ಅವನು ದೇವಗಿರಿಯಲ್ಲಿ ದಖನ್ನಿನ ಇತರ ರಾಜ್ಯಗಳೂ ದೇವಗಿರಿಯಷ್ಟೇ ಅಪಾರ ಐಶ್ವರ್ಯವನ್ನು ಹೊಂದಿರುವುದಾಗಿ ತಿಳಿದನು. ಇದಲ್ಲದೆ ದಖನ್ನಿನ ರಾಜ್ಯಗಳಲ್ಲಿನ ಆಂತರಿಕ ಜಗಳಗಳು ದಕ್ಷಿಣಭಾರತದಲ್ಲಿನ ಅವನ ವಿಜಯಕ್ಕೆ ಕಾರಣವಾಗಿದ್ದವು. ಅಲ್ಲಾವುದ್ದೀನ್ ಖಿಲ್ಜಿಯು ಸುಲ್ತಾನನಾದ ಮೇಲೆ 1307ರಿಂದ 1312ರ ಅವಧಿಯಲ್ಲಿ ದಖನ್ನಿನ ಮೇಲೆ ನಾಲ್ಕುಸಾರಿ ದಂಡಯಾತ್ರೆಗಳನ್ನು ನಿಯೋಜಿಸಿ ಕಪೂರನನ್ನು ಕಳುಹಿಸಿಕೊಟ್ಟನು. ಆದರೆ ಈ ದಂಡಯಾತ್ರೆಗಳಲ್ಲಿ ಅಲ್ಲಾವುದ್ದೀನ್ ಖಿಲ್ಜಿಯು ಅಸಾಧ್ಯವಾದುದನ್ನು ಸಾಧಿಸುವ ಗೋಜಿಗೆ ಹೋಗದೆ ಕೇವಲ ಐಶ್ವರ್ಯವನ್ನು ಪಡೆದುಕೊಳ್ಳುವುದರ ಕಡೆ ತನ್ನ ಗಮನವನ್ನು ಹರಿಸಿದನು. ಆದ್ದರಿಂದ ಅವನು ತನ್ನ ದಖನ್ನಿನ ನೀತಿಯಲ್ಲಿ ಯಶಸ್ಸುಗಳಿಸಿದನು.

ಅಲ್ಲಾವುದ್ದೀನನು ದಕ್ಷಿಣ ಭಾರತದಲ್ಲಿ ಅನುಸರಿಸಿದ ನೀತಿಯು ಉತ್ತರಭಾರತದಲ್ಲಿ ಅನುಸರಿಸಿದ ನೀತಿಗಿಂತ ಭಿನ್ನವಾಗಿತ್ತು. ಉತ್ತರಭಾರತವನ್ನು ಗೆದ್ದು ಅದನ್ನು ತನ್ನ ನೇರವಾದ ಆಳ್ವಿಕೆಗೆ ಒಳಪಡಿಸಿಕೊಂಡನು. ಆದರೆ ದಕ್ಷಿಣ ರಾಜ್ಯಗಳು ದೆಹಲಿಗೆ ಬಹಳ ದೂರದಲ್ಲಿದ್ದುದರಿಂದ ಅವುಗಳನ್ನು ತನ್ನ ನೇರವಾದ ಆಡಳಿತಕ್ಕೊಳಪಡಿಸಿ ಕೊಂಡು ಆಳುವುದು ಕಷ್ಟವೆಂದು ಮನಗಂಡು ಅವುಗಳನ್ನು ತನ್ನ ಸಾಮಂತ ರಾಜ್ಯಗಳನ್ನಾಗಿ ಮಾಡಿಕೊಂಡು ಅವುಗಳಿಂದ ಪೊಗದಿಯನ್ನು ಪಡೆದುಕೊಂಡು ವಾಸ್ತವಿಕ ನೀತಿಯನ್ನು ಅನುಸರಿಸಿದನು. ಅವನು ದಕ್ಷಿಣದ ರಾಜರುಗಳನ್ನು ಗೌರವದಿಂದ ಕಂಡು ದಕ್ಷಿಣ ಭಾರತದಲ್ಲಿ ಸಾಧ್ಯವಾದಷ್ಟು ಅವನ ವಿರುದ್ಧ ದಂಗೆಗಳಾಗದಂತೆ ನೋಡಿಕೊಂಡನು. ದೇವಗಿರಿಯ ರಾಮಚಂದ್ರನನ್ನು ತನ್ನ ಮಿತ್ರನನ್ನಾಗಿ ಮಾಡಿಕೊಂಡು ದಖನ್ನಿನ ಮುಂದಿನ ವಿಜಯಗಳಿಗೆ ಅವನ ಸಹಾಯವನ್ನು ಪಡೆದುಕೊಂಡನು. 1312ರಲ್ಲಿ ತನ್ನ ಮಗ ಖಿಜರ್‌ಖಾನನ ವಿವಾಹಕ್ಕೂ ಅವನನ್ನು ಆಹ್ವಾನಿಸಿದ್ದನು. ಇದೇ ರೀತಿಯಲ್ಲಿ ಮೂರನೆ ಬಲ್ಲಾಳನಿಗೂ ಗೌರವ ತೋರಿಸಿ ಅವನ ಸಹಾಯವನ್ನು ಪಡೆದುಕೊಂಡಿದ್ದನು. ಇದರಿಂದ ಅಲ್ಲಾವುದ್ದೀನನು ಉನ್ನತ ಮಟ್ಟದ ರಾಜಕೀಯ ದೃಷ್ಟಿಯನ್ನು ಹೊಂದಿದ್ದ ವ್ಯಕ್ತಿಯಾಗಿದ್ದನೆಂದು ಹೇಳಬಹುದಾಗಿದೆ.

ಅಲ್ಲಾವುದ್ದೀನನು ದಖನ್ನಿನ ಮೇಲೆ ಕೈಗೊಂಡ ದಂಡಯಾತ್ರೆಗಳಿಂದ ದಖನ್ನಿನಿಂದ ಉತ್ತರ ಭಾರತಕ್ಕೆ ಅಪಾರ ಐಶ್ವರ್ಯವು ಹರಿದುಹೋಯಿತು. ಇದರಿಂದ ಸುಲ್ತಾನನಿಗೆ ಮತ್ತು ಅವನ ಉತ್ತರಾಧಿಕಾರಿಗಳಿಗೆ ಹಣದ ಕೊರತೆಯು ಇಲ್ಲದಂತಾಯಿತು. ಸುಲ್ತಾನನ ಸಾರ್ವಭೌಮತ್ವವನ್ನು ಒಪ್ಪಿಕೊಂಡು ದೆಹಲಿಗೆ ರಾಮಚಂದ್ರ ಮತ್ತು ಬಲ್ಲಾಳನು ನೀಡಿದ ಭೇಟಿಯಿಂದ ಸುಲ್ತಾನನ ಗೌರವ ಪ್ರತಿಷ್ಠೆಗಳು

ಮತ್ತಷ್ಟು ಹೆಚ್ಚಿದವು. ಕಪೂರನ ದಂಡಯಾತ್ರೆಗಳಿಂದ ಉಂಟಾದ ದುಷ್ಪರಿಣಾಮಗಳೆಂದರೆ ದಖನ್ನಿನ ರಾಜರುಗಳೇ ಅಲ್ಲದೆ ಪ್ರಜೆಗಳೂ ಅಪಾರ ಕಷ್ಟನಷ್ಟಗಳಿಗೊಳಗಾದರು. ರಾಜರುಗಳ ಖಜಾನೆಗಳು ಬರಿದಾಗಿ ಅವರು ಸುಲ್ತಾನನಿಗೆ ಕಪ್ಪಕೊಡುವುದಕ್ಕೂ ಮತ್ತು ದಿನನಿತ್ಯದ ಆಡಳಿತ ನಿರ್ವಹಣೆಗೂ ಹಣವನ್ನು ಪಡೆಯಲು ಪ್ರಜೆಗಳ ಮೇಲೆ ಹೆಚ್ಚು ಹೆಚ್ಚು ತೆರಿಗೆಗಳನ್ನು ವಿಧಿಸಿ ಅವರ ಜೀವನವು ದುರ್ಬಲವಾಗುವಂತೆ ಮಾಡಿದರು. ಕೊನೆಯದಾಗಿ ಈ ದಂಡಯಾತ್ರೆಗಳಿಂದ ಮುಸ್ಲಿಮರ ಸಂಸ್ಕೃತಿಯು ಭಾರತದಲ್ಲಿ ಇನ್ನೂ ವ್ಯಾಪಕವಾಗಿ ಹರಡುವಂತಾಯಿತು.

**ದಂಗೆ ಮತ್ತು ಪಿತೂರಿಗಳ ದಮನ**

ಅಲ್ಲಾವುದ್ದೀನನ ಆಳ್ವಿಕೆಯು ದಂಗೆ ಮತ್ತು ಪಿತೂರಿಗಳಿಂದ ಹೊರತಾಗಿರಲಿಲ್ಲ. ಅವನು ಉತ್ತರ ಮತ್ತು ದಕ್ಷಿಣ ಭಾರತದ ಮೇಲೆ ತನ್ನ ರಾಜ್ಯ ವಿಸ್ತರಣೆ ಮಾಡುವುದರಲ್ಲಿಯೇ ನಿರತನಾಗಿರದೆ ರಾಜ್ಯದೊಳಗೆ ತನ್ನ ವಿರುದ್ಧ ನಡೆಯುತ್ತಿದ್ದ ಪಿತೂರಿ ಮತ್ತು ದಂಗೆಗಳ ಕಡೆಗೂ ತನ್ನ ಗಮನವನ್ನು ಹರಿಸಿದ್ದನು. ಅಲ್ಲಾವುದ್ದೀನನು ಹಿಂದೆ ರಣತಂಬೂರ್ ಕೋಟೆಯ ಮೇಲೆ ದಂಡೆತ್ತಿ ಹೋಗಿದ್ದಾಗ ಅವನ ಸೋದರ ಸಂಬಂಧಿಯಾಗಿದ್ದ ಅಖತ್‌ಖಾನ್ ಎಂಬವನು ಅವನನ್ನು ಕೊಲ್ಲಲು ಪ್ರಯತ್ನಿಸಿ ವಿಫಲನಾದನು ಮತ್ತು ಅಖತ್‌ಖಾನನನ್ನು ಸೆರೆಹಿಡಿದು ಕೊಲ್ಲಿಸಿದನು. ಅಂತೆಯೆ ಸುಲ್ತಾನನನ್ನು ಪದಚ್ಯುತಗೊಳಿಸಲು ಇನ್ನೂ ಅನೇಕ ಪಿತೂರಿಗಳು ನಡೆದವು. ಅಲ್ಲಾವುದ್ದೀನನು ದೆಹಲಿಯಲ್ಲಿ ಇಲ್ಲದಿದ್ದ ಒಂದು ಸಮಯದಲ್ಲಿ ಹಾಜಿ ಮೌಲ ಎಂಬ ಅತೃಪ್ತ ಅಧಿಕಾರಿಯೊಬ್ಬನು ಸಿಂಹಾಸನವನ್ನು ತನ್ನ ಕಡೆಯವರಿಗೆ ಪಡೆದುಕೊಳ್ಳಬೇಕೆಂದು ಬಯಸಿ ದಂಗೆಯೆದ್ದನು. ಅಲ್ಲಾವುದ್ದೀನನಿಗೆ ಈ ವರ್ತಮಾನವು ತಲುಪಲು ಅವನು ದಂಗೆಯನ್ನಡಗಿಸಲು ಉಲುಗ್‌ಖಾನ್‌ನನ್ನು ಕಳುಹಿಸಿದನು. ಉಲುಗ್‌ಖಾನನು ದೆಹಲಿಯನ್ನು ತಲುಪುವ ಮೊದಲೇ ಹಾಜಿ ಮೌಲನು ಸುಲ್ತಾನನ ಕಡೆಯ ನಿಷ್ಠಾವಂತ ಅಧಿಕಾರಿಯೊಬ್ಬನಿಂದ ಕೊಲೆಮಾಡಲ್ಪಟ್ಟಿದ್ದನು. ಉಲುಗ್‌ಖಾನನು ದೆಹಲಿಯನ್ನು ತಲುಪಿದ ಮೇಲೆ ಅವನ ಕುಟುಂಬದ ಇತರರನ್ನು ಹಿಡಿದುತರಿಸಿ ಕೊಲ್ಲಿಸಿದನು. ಅಲ್ಲಾವುದ್ದೀನನು ರಣತಂಬೂರಿನ ವಿಜಯದಿಂದ ಹಿಂದಿರುಗಿದ ಮೇಲೆ ಅವನು ಈ ದಂಗೆಗಳಿಗೆ ಕಾರಣಗಳನ್ನು ಕುರಿತು ಆಲೋಚಿಸತೊಡಗಿದನು. ಅವನು ಈ ದಿಶೆಯಲ್ಲಿ ದೀರ್ಘವಾಗಿ ಆಲೋಚಿಸಿದ ನಂತರ ದಂಗೆಗಳು ಮುಖ್ಯವಾಗಿ ನಾಲ್ಕು ಕಾರಣಗಳಿಂದ ಸಂಭವಿಸುತ್ತವೆ ಎಂಬ ತೀರ್ಮಾನಕ್ಕೆ ಬಂದು ಅವುಗಳನ್ನು ಹತ್ತಿಕ್ಕಲು ಉಕ್ಕಿನಷ್ಟು ಕಠಿಣವಾದ ಕ್ರಮಗಳನ್ನು ಕೈಗೊಂಡನು. ದಂಗೆಗಳು ಮತ್ತು ಪಿತೂರಿಗಳು ಸಾಮಾನ್ಯವಾಗಿ ನಾಲ್ಕು ಕಾರಣಗಳಿಂದ ಸಂಭವಿಸುತ್ತವೆ. (1) ರಾಜ್ಯದಲ್ಲಿನ ಆಗುಹೋಗುಗಳ ಬಗ್ಗೆ ಸುಲ್ತಾನನ ಅಸಡ್ಡೆ. (2) ನೋಬಲ್ಲರುಗಳು ಮಿತಿ ಮೀರಿ ಮಾದಕ ಪಾನೀಯಗಳನ್ನು ಸೇವಿಸುವುದು. (3) ಸಾಮ್ರಾಜ್ಯದಲ್ಲಿ ಮಲ್ಲಿಕರು ಮತ್ತು ಅಮೀರರು ಹಾಗೂ ಮತ್ತಿತರ ಪ್ರಮುಖ ವ್ಯಕ್ತಿಗಳು ಆಗಾಗ್ಗೆ ಔತಣಕೂಟಗಳಲ್ಲಿ ಭಾಗವಹಿಸುವುದು. (4) ಕೆಲವು ವ್ಯಕ್ತಿಗಳಲ್ಲಿ ಸಂಗ್ರಹಿತವಾಗಿರುವ ಅಪಾರ ಐಶ್ವರ್ಯ ಇವುಗಳು ಪಿತೂರಿಗಳಿಗೆ ಆಸ್ಪದ ಕೊಡುತ್ತವೆ ಎಂದು ತಿಳಿದು ಅವುಗಳ ವಿರುದ್ಧ ಕ್ರಮಗಳನ್ನು ಕೈಗೊಂಡನು.

ಈ ದಿಶೆಯಲ್ಲಿ ಸುಲ್ತಾನನು ಕೈಗೊಂಡ ಕ್ರಮಗಳು ಹಲವಾರು. ತನ್ನ ರಾಜ್ಯದ ಯಾವುದೇ ಬಾಗದಲ್ಲಿ ಏನು ನಡೆದರೂ ಅದನ್ನು ಸುಲ್ತಾನನ ಗಮನಕ್ಕೆ ತಕ್ಷಣವೇ ತರುವುದಕ್ಕೆ ಗೂಢಾಚಾರರ ಪಡೆಯನ್ನು ನೇಮಿಸಿದನು. ಗೂಢಾಚಾರರು ನೋಬಲ್ಲರ ಮತ್ತು ಅಧಿಕಾರಿಗಳ ವರ್ತನೆಗಳನ್ನು ತಿಳಿದು ಸುಲ್ತಾನನಿಗೆ ವರದಿ ಮಾಡುತ್ತಿದ್ದರು. ಈ ಕ್ರಮದಿಂದ ನೋಬಲ್ಲರು ಯಾವುದೇ ಸ್ಥಳದಲ್ಲೂ ಸುಲ್ತಾನನ ವಿರುದ್ಧ ಗಟ್ಟಿಯಾಗಿ ಮಾತನಾಡುವುದಕ್ಕೆ ಹೆದರಿ ಕೇವಲ ಸನ್ನೆ ಮಾಡುವುದರ ಮೂಲಕ ತಮ್ಮ ಇಂಗಿತವನ್ನು ಇತರರಿಗೆ ತಿಳಿಸುವಂತಾಯಿತು. ಮತ್ತು ಬರಿಸುವ ಮಾಧಕ ಪಾನೀಯಗಳ ಸೇವನೆಯನ್ನು ರದ್ದುಗೊಳಿಸಿದನು ಮತ್ತು ಸುಲ್ತಾನನೇ ಕುಡಿಯುವ ಹವ್ಯಾಸವನ್ನು ಬಿಟ್ಟು ಇತರರಿಗೆ ನಿದರ್ಶನ ಹಾಕಿಕೊಟ್ಟನು. ಆದರೆ ಈ ಶಾಸನದಿಂದ ಬಹಳ ಜನಗಳಿಗೆ ತೊಂದರೆಯಾಯಿತು. ಮಾದಕ ಪಾನೀಯಗಳನ್ನು ಕಳ್ಳತನದಿಂದ ಒದಗಿಸುವ ವ್ಯವಸ್ಥೆಯು ಕಂಡುಬಂದಿತು. ಆಗ ಸುಲ್ತಾನನು ನಿಯಮವನ್ನು ಸ್ವಲ್ಪ ಸಡಿಲಿಸಿ ನೋಬಲ್ಲರು ತಮ್ಮ ಮನೆಗಳಲ್ಲಿ ಪಾನೀಯಗಳನ್ನು ಸೇವಿಸಲು ಅನುಮತಿಯಿತ್ತನು. ಆದರೆ ಸಾರ್ವಜನಿಕ ಸಮಾರಂಭಗಳಲ್ಲಿ ಅದನ್ನು ಸೇವಿಸುವುದನ್ನು ಸಂಪೂರ್ಣವಾಗಿ ನಿಷೇಧಿಸಿದನು. ಸುಲ್ತಾನನು ಪಿತೂರಿಗಳನ್ನು ತಡೆಗಟ್ಟಲು ಕೈಗೊಂಡ ಮೂರನೆ ಕ್ರಮವೆಂದರೆ ಔತಣ ಕೂಟಗಳ ನಿಷೇಧ. ನೋಬಲ್ಲರು, ಮಲ್ಲಿಕರು ವಿವಾಹ ಮತ್ತಿತರ ಸಂತೋಷ ಸಮಾರಂಭಗಳನ್ನು ಏರ್ಪಡಿಸುವ ಮೊದಲು ಸರ್ಕಾರದ ಅನುಮತಿಪಡೆಯಬೇಕೆಂದು ಆಜ್ಞೆ ಹೊರಡಿಸಿದನು. ಇದರಿಂದ ರಾಜಧಾನಿಯಲ್ಲಿ ಮೋಜಿನ ವಾತಾವರಣ ಮಾಯವಾಯಿತು. ನೋಬಲ್ಲರನ್ನು ಹತ್ತಿಕ್ಕಲು ಅವರ ಆಸ್ತಿಪಾಸ್ತಿಗಳನ್ನು ಸರ್ಕಾರದ ಹತೋಟಿಗೊಳಪಡಿಸಿದನು. ಎಲ್ಲ ರೀತಿಯ ಬಕ್ಷೀಸು, ಬಹುಮಾನಗಳನ್ನು ಹಾಗೂ ವಿರಾಮ ವೇತನಗಳನ್ನು ನೀಡುವುದನ್ನು ನಿಷೇಧಿಸಿದನು. ಒಟ್ಟಿನಲ್ಲಿ ಸುಲ್ತಾನನು ಜಾರಿಗೆ ತಂದ ಕಾನೂನುಗಳು ಬಹಳ ಕಠಿಣವಾಗಿದ್ದು ಅವುಗಳನ್ನು ವಿರೋಧಿಸುವ ಧೈರ್ಯವು ಯಾರಿಗೂ ಇರಲಿಲ್ಲ.

**ಮಂಗೋಲರ ಧಾಳಿಗಳು**

ಭಾರತದ ಮೇಲೆ ಮಂಗೋಲರ ಧಾಳಿಗಳು ಬಲ್ಬನ್ನನ ಆಳ್ವಿಕೆಯೊಂದಿಗೆ ಮುಗಿಯದೆ ಅಲ್ಲಾವುದ್ದೀನನ ಕಾಲದಲ್ಲೂ ಮುಂದುವರಿದವು. ಅಲ್ಲಾವುದ್ದೀನನ ಕಾಲದಲ್ಲಿ ಮಂಗೋಲರು ಆರು ಸಲ ಧಾಳಿಮಾಡಿದರು. ಅಲ್ಲಾವುದ್ದೀನನ ಆಳ್ವಿಕೆಯ ಮೊದಲ ವರ್ಷಗಳಲ್ಲಿ ವಾಯುವ್ಯ ಗಡಿಯ ರಕ್ಷಣೆಯ ಉಸ್ತುವಾರಿಯನ್ನು ಅವನ ಸಮರ್ಥ ಅಧಿಕಾರಿಯಾದ ಜಫಾರ್‌ಖಾನನು ನೋಡಿಕೊಂಡಿದ್ದನು ಜಫಾರ್‌ಖಾನನು ಬಹಳ ಪರಾಕ್ರಮಿಯಾಗಿದ್ದು ಮಂಗೋಲರನ್ನು ಪ್ರತಿ ಸಲವೂ ಸೋಲಿಸಿ ಹಿಮ್ಮೆಟ್ಟಿಸಿದ್ದನು. ಅವನು ಎಷ್ಟು ಪರಾಕ್ರಮಶಾಲಿಯಾಗಿದ್ದನೆಂದರೆ ಜಫಾರ್‌ಖಾನನು ಕಾಲವಾದ ಮೇಲೂ ಅವನ ಹೆಸರನ್ನು ಯಾರಾದರು ಎತ್ತಿದರೆ ಮಂಗೋಲರು ನಡಗುತ್ತಿದ್ದರು. ಜಫಾರ್‌ಖಾನನು ಕಾಲವಾದ ಮೇಲೆ 1303ರಲ್ಲಿ ಮಂಗೋಲರು ಅನಿರೀಕ್ಷಿತವಾಗಿ ಪುನಃ ದಂಡೆತ್ತಿ ಬಂದು ದೆಹಲಿಯ ಮೇಲೆ ಆಕ್ರಮಣ ಮಾಡಿದರು. ಅಲ್ಲಾವುದ್ದೀನನು ಈ ಅನಿರೀಕ್ಷಿತ ಧಾಳಿಯನ್ನು ಎದುರಿಸಲು ದಿಕ್ಕು ಕಾಣದೆ ಕೆಲವು ದಿವಸಗಳು 'ಸಿರಿ' ಕೋಟೆಯಲ್ಲಿ ರಕ್ಷಣೆ ಪಡೆದನು. ಆದರೆ ಭಾರತದ ಹವಾಮಾನವು ಹಿಡಿಸದ ಮಂಗೋಲರು ಭಾರತದಲ್ಲಿ ನೆಲಸುವ ಆಲೋಚನೆಯನ್ನು ಬಿಟ್ಟು

ಹಿಂದಿರುಗಿಹೋದರು. ಸುಲ್ತಾನನಿಗೆ ಅವರ ಧಾಳಿಯ ಭೀಕರ ಪರಿಣಾಮವು ಗೊತ್ತಾಯಿತು. ಆವನು ಮುಂದೆ ಅವರ ಧಾಳಿಗಳಿಂದ ತನ್ನ ರಾಜ್ಯವನ್ನು ಕಾಪಾಡಿಕೊಳ್ಳಲು ಅನೇಕ ಕ್ರಮಗಳನ್ನು ಕೈಗೊಂಡನು. ಮಂಗೋಲರ ಧಾಳಿಗಳಿಂದ ಹಾಳಾಗಿದ್ದ ಹಳೆಯ ಕೋಟೆಗಳೆಲ್ಲವನ್ನೂ ದುರಸ್ತುಮಾಡಿಸಿದನು. ಮತ್ತೆ ಕೆಲವು ಹೊಸಕೋಟೆಗಳನ್ನು ನಿರ್ಮಿಸಿದನು. ಗಡಿನಾಡಿನ ಪ್ರಮುಖ ಸ್ಥಳಗಳಾದ ಸಮಾನ ಮತ್ತು ದೀಪಾಲ್‌ಪುರಗಳಲ್ಲಿ ಸೈನ್ಯವನ್ನಿಟ್ಟು ಅವುಗಳನ್ನು ರಕ್ಷಣಾ ಭದ್ರತೆಯ ಸ್ಥಳಗಳನ್ನಾಗಿ ಮಾಡಿದನು. ಗಡಿನಾಡಿನ ಮೇಲ್ವಿಚಾರಣೆಯನ್ನು ನೋಡಿಕೊಳ್ಳಲು ಸಮರ್ಥ ದಂಡನಾಯಕನಾದ ಘಾಜಿಮಲ್ಲಿಕ್‌ನನ್ನು ನೇಮಿಸಿದನು. ಮಂಗೋಲರ ಧಾಳಿಗಳನ್ನು ಎದುರಿಸಲು ರಾಜ್ಯದ ಕಾರ್ಯಾಗಾರಗಳಲ್ಲಿ ಎಲ್ಲ ಬಗೆಯ ಶಸ್ತ್ರಾಸ್ತ್ರಗಳನ್ನು ತಯಾರಿಸಲು ಎಂಜಿನಿಯರುಗಳನ್ನು ನೇಮಿಸಿಕೊಂಡನು. ಮಂಗೋಲರು 1308ರವರೆಗೂ ಪಂಜಾಬಿನ ಮೇಲೆ ಪದೇ ಪದೇ ಧಾಳಿ ಮಾಡಿದರು ಆದರೆ ಅವರನ್ನು ಘಾಜಿಮಲ್ಲಿಕನು ಸೋಲಿಸಿ ಅವರು ಹಿಂದಿರುಗಿ ಹೋಗುವಂತೆ ಮಾಡಿದನು. ಇದಾದ ನಂತರ ಮಂಗೋಲರು ಅಲ್ಲಾವುದ್ದೀನನ ಆಳ್ವಿಕೆಯು ಮುಗಿಯುವವರೆಗೂ ಭಾರತದ ಮೇಲೆ ಧಾಳಿ ಮಾಡಲಿಲ್ಲ.

ಜಲಾಲುದ್ದೀನ್ ಖಿಲ್ಜಿಯ ಆಳ್ವಿಕೆಯಲ್ಲಿ ಇಸ್ಲಾಂ ಧರ್ಮಕ್ಕೆ ಮತಾಂತರಗೊಂಡು ಹೊಸ ಮುಸಲ್ಮಾನರೆಂದು ಕರೆಯಲ್ಪಟ್ಟ ಮಂಗೋಲರು ಸಹಸ್ರಾರು ಸಂಖ್ಯೆಯಲ್ಲಿ ದೆಹಲಿ ಮತ್ತು ಅದರ ಸುತ್ತಮುತ್ತ ವಾಸಿಸುತ್ತಿದ್ದರು. ಅಲ್ಲಾವುದ್ದೀನನ ಆಳ್ವಿಕೆಯಲ್ಲಿ ಅವರು ಸುಲ್ತಾನನನ್ನು ಕೊಲ್ಲಲು ಮಾಡಿದ ಪಿತೂರಿಯೊಂದು ಹೇಗೋ ಬೆಳಕಿಗೆ ಬಂದಿತು. ಸುಲ್ತಾನನು ಈ ಹೊಸ ಮುಸಲ್ಮಾನರೆಲ್ಲರನ್ನೂ ಕೊಂದು ಹಾಕುವಂತೆ ಆಜ್ಞೆ ಮಾಡಿದನು. ತತ್ಪರಿಣಾಮವಾಗಿ ಮೂವತ್ತು ಸಾವಿರ ಹೊಸ ಮುಸಲ್ಮಾನರು ಕೊಲೆಮಾಡಲ್ಪಟ್ಟರು.

**ಸೈನಿಕ ಸುಧಾರಣೆ**

ಅಲ್ಲಾವುದ್ದೀನನು ದಕ್ಷ ಸೈನ್ಯವಿಲ್ಲದೆ ತನ್ನ ಸಾಮ್ರಾಜ್ಯವು ಉಳಿಯಲಾರದೆಂದು ಮನಗಂಡಿದ್ದನು. ಆದ್ದರಿಂದ ಅವನು ತನ್ನ ಸೈನಿಕ ವ್ಯವಸ್ಥೆಯಲ್ಲಿ ಅನೇಕ ಸುಧಾರಣೆಗಳನ್ನು ಜಾರಿಗೆ ತಂದನು. ನೋಬಲ್ಲರು ಪೂರೈಕೆ ಮಾಡುತ್ತಿದ್ದ ಸೈನಿಕರ ಮೇಲೆ ಅವಲಂಬನವಾಗುವ ಕ್ರಮವನ್ನು ಬಿಟ್ಟುಬಿಟ್ಟು ತಾನೇ ಒಂದು ದೊಡ್ಡ ಸೈನ್ಯವನ್ನು ನಿರ್ಮಿಸಿದನು. ಸೈನಿಕರಿಗೆ ಸರ್ಕಾರದ ಖಜಾನೆಯಿಂದ ಸಂಬಳ ಕೊಡುವ ಪದ್ಧತಿಯನ್ನು ಜಾರಿಗೆ ತಂದನು. ಅಲ್ಲಾವುದ್ದೀನನ ಈ ಕ್ರಮವು ಒಂದು ಹೊಸ ಪ್ರಯೋಗವೇ ಆಗಿದ್ದಿತು. ಏಕೆಂದರೆ ಹಿಂದಿನ ಸುಲ್ತಾನರು ಸೈನಿಕರ ಸೇವೆಗೆ ಪ್ರತಿಫಲವಾಗಿ ಭೂಮಿಯನ್ನು ಉಂಬಳಿಯಾಗಿ ಕೊಡುವ ಪದ್ಧತಿಯಿತ್ತು. ಈ ವ್ಯವಸ್ಥೆಯಲ್ಲಿದ್ದ ಹಲವಾರು ನ್ಯೂನತೆಗಳನ್ನು ಗಮನಿಸಿದ್ದ ಬಲ್ಬನ್ನನು ಕೆಲವು ಸುಧಾರಣೆಗಳನ್ನು ಮಾಡಲು ಬಯಸಿ ಅಲ್ಪ ಸ್ವಲ್ಪ ಯಶಸ್ಸುಗಳಿಸಿದನು. ಅಲ್ಲಾವುದ್ದೀನನು ಅದನ್ನು ಮುಂದುವರಿಸಿ ಸೈನ್ಯದಲ್ಲಿ ಕ್ರಮ ಬದ್ಧತೆಯನ್ನೇರ್ಪಡಿಸಿದನು. ಪ್ರತಿಯೊಬ್ಬ ಕುದುರೆಸವಾರನಿಗೂ 234 ಟಂಕಗಳನ್ನು ಮತ್ತು ಆವನಿಗಿಂತ ಕೆಳಗಿನವನಿಗೆ 78 ಟಂಕಗಳನ್ನು ಸಂಬಳವಾಗಿ ನಿಗಧಿಪಡಿಸಿದನು. ಸೈನಿಕರ ಬಗ್ಗೆ ಎಲ್ಲ ವಿವರ

ದಾಖಲೆಗಳನ್ನಿಡುವ ವ್ಯವಸ್ಥೆಯನ್ನು ಜಾರಿಗೆ ತಂದನು. ಸೈನ್ಯದ ಅಶ್ವದಳದಲ್ಲಿ ಮೋಸ ವಂಚನೆಗಳಿದ್ದುದರಿಂದ ಕುದುರೆಗಳಿಗೆ ಸರ್ಕಾರದ ಮುದ್ರೆಯೊತ್ತುವ ಕ್ರಮವನ್ನು ಜಾರಿಗೆ ತಂದನು. ಮೇಲಾಗಿ ಸೈನಿಕರು ಅತಿಹೆಚ್ಚು ಮತ್ತು ಅತಿಕಡಿಮೆಯೂ ಇಲ್ಲದೆ ಪಡೆಯುತ್ತಿದ್ದ ವೇತನದಿಂದ ತಮ್ಮ ಜೀವನವನ್ನು ಸಾಗಿಸಲು ಅನುಕೂಲವಾಗುವಂತೆ ಮಾಡಲು ಮಾರುಕಟ್ಟೆಯಲ್ಲಿ ಜೀವನದ ಅವಶ್ಯಕ ವಸ್ತುಗಳ ಬೆಲೆಗಳನ್ನು ನಿಯಂತ್ರಿಸಲು ಕ್ರಮಗಳನ್ನು ಕೈಗೊಂಡನು. ಈ ಕ್ರಮದಿಂದ ಕಡಿಮೆ ಖರ್ಚಿನಲ್ಲಿ ದೊಡ್ಡ ಸೈನ್ಯವನ್ನಿಟ್ಟುಕೊಳ್ಳಲು ಅವನಿಗೆ ಸಾಧ್ಯವಾಯಿತು.

**ಆರ್ಥಿಕ ಕ್ರಮಗಳು - ಬೆಲೆಗಳ ನಿಯಂತ್ರಣ**

ಅಲ್ಲಾವುದ್ದೀನನು ಆರ್ಥಿಕ ತಜ್ಞನೂ ಆಗಿದ್ದನು ಆಹಾರ ಪದಾರ್ಥಗಳ ಬೆಲೆಗಳನ್ನು ನಿಯಂತ್ರಿಸಿದುದು ಅಲ್ಲಾವುದ್ದೀನನು. ರಾಜಕೀಯ ಅರ್ಥಶಾಸ್ತ್ರದಲ್ಲಿ ನಡೆಸಿದ ಒಂದು ವಿಶೇಷ ಪ್ರಯೋಗವಾಗಿತ್ತೆಂದು ಹೇಳಬಹುದು. ಅಲ್ಲಾವುದ್ದೀನನಿಗೆ ತನ್ನ ಸ್ವಸಾಮರ್ಥ್ಯದಿಂದ ನಿರ್ಮಿಸಿದ್ದ ವಿಶಾಲ ಸಾಮ್ರಾಜ್ಯವನ್ನು ಆಂತರಿಕ ದಂಗೆಗಳಿಂದಲೂ ಮತ್ತು ಮಂಗೋಲರ ಧಾಳಿಗಳಿಂದಲೂ ರಕ್ಷಿಸಿಕೊಳ್ಳಲು ಅಪಾರ ಸೈನ್ಯವನ್ನಿಟ್ಟುಕೊಳ್ಳುವುದನ್ನು ಅತ್ಯಾವಶ್ಯಕವಾಗಿಸಿದ್ದಿತು. ಆದರೆ ಈ ಬೃಹತ್ ಸೈನ್ಯವನ್ನು ಹೇಗೆ ಸಲಹುದೆಂಬದು ಅವನಿಗೆ ಒಂದು ಮುಖ್ಯ ಸಮಸ್ಯೆಯಾಗಿ ಮಾರ್ಪಟ್ಟು ಕೊನೆಗೆ ಸುಲ್ತಾನನು ತನ್ನದೇ ಆದ ಪರಿಹಾರಮಾರ್ಗವನ್ನು ಕಂಡುಕೊಂಡನು. ಅದೆಂದರೆ ಪದಾರ್ಥಗಳ ಬೆಲೆಗಳನ್ನು ನಿಯಂತ್ರಿಸುವುದಾಗಿತ್ತು. ಸೈನಿಕರು ತಮಗೆ ಬರುತ್ತಿದ್ದ ಅಲ್ಪ ಸಂಬಳದಲ್ಲೆ ತೊಂದರೆಯಾಗದಂತೆ ಜೀವನ ನಡೆಸಲು ಅನುಕೂಲವಾಗುವಂತೆ ದಿನಬಳಕೆಯ ಆಹಾರ ಪದಾರ್ಥಗಳನ್ನು ಸರ್ಕಾರವು ನಿಗದಿಪಡಿಸಿದ ಬೆಲೆಗೆ ಮಾರಬೇಕೆಂದು ಆಜ್ಞೆ ಹೊರಡಿಸಿದನು. ಜೀವನದ ಅವಶ್ಯಕ ಪದಾರ್ಥಗಳಾದ ಗೋಧಿ, ಬಾರ್ಲಿ, ಅಕ್ಕಿ, ಸಕ್ಕರೆ, ಬಟ್ಟೆ, ತುಪ್ಪ 'ಎಣ್ಣೆ' ಉಪ್ಪು ಮೊದಲಾದ ಆಹಾರಪದಾರ್ಥಗಳ ಬೆಲೆಗಳನ್ನೇ ಅಲ್ಲದೆ ಕುದುರೆ, ಹಸು, ಆಡು, ಮೇಕೆ ಮೊದಲಾದ ಪ್ರಾಣಿಗಳನ್ನು ಸರ್ಕಾರವು ನಿಗದಿಪಡಿಸಿದ ಬೆಲೆಗೆ ಮಾರುವಂತೆ ಕ್ರಮಗಳನ್ನು ಕೈಗೊಂಡನು. ವರ್ತಕರು ಸರ್ಕಾರವು ನಿಗದಪಡಿಸಿದ ಬೆಲೆಗಳಿಗಿಂತ ಹೆಚ್ಚಾಗಿ ಮಾರದಂತೆ ನೋಡಿಕೊಳ್ಳಲು ಕ್ರಮಗಳನ್ನು ಕೈಗೊಳ್ಳಲಾಗಿತ್ತು. ವರ್ತಕರು ಗಿರಾಕಿಗೆ ತೂಕ ಮತ್ತು ಅಳತೆಗಳಲ್ಲಿ ಮೋಸ ಮಾಡಿದುದು ಕಂಡುಬಂದರೆ ಅಷ್ಟೇ ಪ್ರಮಾಣದ ಮಾಂಸವನ್ನು ಅವನ ಶರೀರದಿಂದ ತೆಗೆದು ಅದನ್ನು ಸರಿದೂಗಿಸುವಷ್ಟರಮಟ್ಟಿಗೂ ಶಿಕ್ಷೆಯನ್ನು ಸುಲ್ತಾನನು ಕೊಡುತ್ತಿದ್ದನು. ಸುಲ್ತಾನನು ತನ್ನ ಆಜ್ಞೆಗಳನ್ನು ಕಟ್ಟುನಿಟ್ಟಾಗಿ ಜಾರಿಗೆ ತರಲು ಷಹನಾ-ಇ-ಮಂಡಿ (ಮಾರುಕಟ್ಟೆಯ ಮೇಲ್ವಿಚಾರಕರು) ಎಂಬ ಪ್ರತ್ಯೇಕ ಅಧಿಕಾರಿಗಳನ್ನು ನೇಮಿಸಿದನು. ಇವರುಗಳು ತಮ್ಮ ಕೆಳಗಿನ ಅಧಿಕಾರಿಗಳ ಸಹಾಯದಿಂದ ಸುಲ್ತಾನನ ಆಜ್ಞೆಗಳನ್ನು ಕಟ್ಟುನಿಟ್ಟಾಗಿ ಜಾರಿಗೆ ಕೊಡುತ್ತಿದ್ದರು ಇಷ್ಟೇ ಅಲ್ಲದೆ ಸುಲ್ತಾನನು ಅಭಾವ ಪರಿಸ್ಥಿತಿಯನ್ನು ಎದುರಿಸಲೂ ತಕ್ಕ ವ್ಯವಸ್ಥೆ ಮಾಡಿದ್ದನು. ದೆಹಲಿಯ ಸುತ್ತಮುತ್ತಲ ಪ್ರದೇಶದಲ್ಲಿ ಕಂದಾಯವನ್ನು ಧಾನ್ಯದ ರೂಪದಲ್ಲಿ ಸಂಗ್ರಹಿಸಿ ಅದನ್ನು ಜೋಪಾನವಾಗಿ ಸರ್ಕಾರದ ಉಗ್ರಾಣಗಳಲ್ಲಿ ಇಡಲು ವ್ಯವಸ್ಥೆ ಮಾಡಿದನು. ಇದರಿಂದ ಸರ್ಕಾರವು ಎಂತಹ ಭೀಕರ ಪರಿಸ್ಥಿತಿಯನ್ನು ಎದುರಿಸಲು ಶಕ್ತವಾಗಿತ್ತು. ಸಮಕಾಲೀನ ಇತಿಹಾಸಕಾರನಾದ ಜಿಯಾವುದ್ದೀನ್ ಭರಣಿಯು ಕ್ಷಾಮಪರಿಸ್ಥಿತಿಯಲ್ಲೂ ಆಹಾರ

ಧಾನ್ಯಗಳ ಕೊರತೆಯು ಇರಲಿಲ್ಲವೆಂದು ಹೇಳುತ್ತಾನೆ. ಅಲ್ಲಾವುದ್ದೀನನ ಬೆಲೆಗಳ ನಿಯಂತ್ರಣ ಕ್ರಮವು ಶ್ಲಾಘನೀಯವಾದುದಾಗಿದ್ದರೂ ಅದರ ಯಶಸ್ಸು ದೆಹಲಿ ಮತ್ತು ಅದರ ಸುತ್ತಮುತ್ತಲಿನ ಭಾಗಗಳಲ್ಲಿ ಮಾತ್ರ ಕಂಡುಬಂದಿತು. ಸಾಮ್ರಾಜ್ಯದ ದೂರದ ಪ್ರಾಂತ್ಯಗಳಲ್ಲಿ ಅದು ಕಟ್ಟುನಿಟ್ಟಾಗಿ ಜಾರಿಗೆ ಬರಲಿಲ್ಲ. ಮೇಲಾಗಿ ಈ ಕ್ರಮದಿಂದ ರೈತರ ಹಾಗೂ ಮತ್ತಿತರ ಕಸುಬಿನವರು ಅಪಾರ ನಷ್ಟಕ್ಕೊಳಗಾದರು. ಏಕೆಂದರೆ ಅವರ ಪದಾರ್ಥಗಳಿಗೆ ನ್ಯಾಯವಾಗಿ ದೊರೆಯಬೇಕಾಗಿದ್ದ ಬೆಲೆಗಳಿಗಿಂತಲೂ ಕಡಿಮೆ ಬೆಲೆಯನ್ನು ಸರ್ಕಾರವು ನಿಗದಿಪಡಿಸುತ್ತಿತ್ತು.

**ರೆವಿನ್ಯೂ ಸುಧಾರಣೆ**

ಅಲ್ಲಾವುದ್ದೀನನು ಕಂದಾಯ ಪದ್ಧತಿಯನ್ನು ವ್ಯವಸ್ಥೆಗೊಳಿಸುವುದರ ಕಡೆಗೂ ತನ್ನ ಗಮನವನ್ನು ಹರಿಸಿದನು. ಸಾಧ್ಯವಾದಷ್ಟು ಹಣವನ್ನು ವಸೂಲಿಮಾಡಿ ಸರ್ಕಾರದ ಖಜಾನೆಯನ್ನು ಭರ್ತಿಮಾಡಿಕೊಳ್ಳುವುದು ಅವನ ಕಂದಾಯ ನೀತಿಯ ಮುಖ್ಯ ಉದ್ದೇಶವಾಗಿತ್ತು. ರಾಜ್ಯದಲ್ಲಿ ನಡೆಯುತ್ತಿದ್ದ ಪಿತೂರಿಗಳಿಗೆ ಮತ್ತು ದಂಗೆಗಳಿಗೆ ಜನರಲ್ಲಿದ್ದ ಅಪಾರ ಹಣವು ಕಾರಣವೆಂದು ಅವನು ತಿಳಿದಿದ್ದನು. ಆದ್ದರಿಂದ ಆ ಹಣವನ್ನು ಪಡೆದುಕೊಳ್ಳಲು ಕ್ರಮಗಳನ್ನು ಕೈಗೊಂಡನು. ನೋಬಲ್ಲರು ಹೊಂದಿದ್ದ ಎಲ್ಲ ಜಹಗೀರುಗಳನ್ನು ಸರ್ಕಾರದ ವಶಕ್ಕೆ ತೆಗೆದುಕೊಂಡನು. ಅಲ್ಲಾವುದ್ದೀನನ ಕಂದಾಯ ನೀತಿಯು ವಿಶೇಷವಾಗಿ ಹಿಂದೂಗಳಿಗೆ ಕರಾಳ ರೂಪವಾಗಿತ್ತು. ಅವರು ತಮ್ಮ ಒಟ್ಟು ಉತ್ಪಾದನೆಯಲ್ಲಿ ಅರ್ಧಭಾಗವನ್ನು ಸರ್ಕಾರಕ್ಕೆ ಕೊಡಬೇಕಾಗಿತ್ತು. ಇದಲ್ಲದೆ ಮನೆಗಂದಾಯ ಮತ್ತು ಹುಲ್ಲುಗಾವಲಿನ ಮೇಲೂ ಕಂದಾಯವನ್ನು ವಿಧಿಸಲಾಗಿತ್ತು. ಭೂಮಿಯನ್ನು ಅಳತೆ ಮಾಡಿಸಿ ಕಂದಾಯವನ್ನು ವಿಧಿಸುವ ಕ್ರಮವನ್ನು ಜಾರಿಗೆ ತಂದ ಮುಸಲ್ಮಾನ ದೊರೆಗಳಲ್ಲಿ ಅಲ್ಲಾವುದ್ದೀನನು ಮೊದಲಿಗನು. ಇವನು ಜಾರಿಗೆ ತಂದ ಕಂದಾಯ ಪದ್ಧತಿಯನ್ನು ಇತಿಹಾಸಕಾರ ಭರಣಿಯು ಪ್ರಶಂಸೆಮಾಡಿದ್ದಾನೆ. ಕಂದಾಯವನ್ನು ನಿಗದಿಮಾಡಿ ವಸೂಲಿಮಾಡುವ ಕ್ರಮದಲ್ಲಿ ಇಡೀ ರಾಜ್ಯವು ಒಂದು ಗ್ರಾಮವೆಂಬ ರೀತಿಯಲ್ಲಿ ಒಂದೇ ವ್ಯವಸ್ಥೆಗೆ ಒಳಪಟ್ಟಿದ್ದಿತೆಂದು ಅವನು ಹೇಳುತ್ತಾನೆ. ಕಂದಾಯ ವಸೂಲಿಯಲ್ಲಿ ಸ್ವಲ್ಪವೂ ದಯೆದಾಕ್ಷಿಣ್ಯವಿರಕೂಡದೆಂದು ಸುಲ್ತಾನನು ತನ್ನ ರೆವಿನ್ಯೂ ಅಧಿಕಾರಿಗಳಿಗೆ ಅಪ್ಪಣೆ ಮಾಡಿದ್ದನು. ಈ ಅಧಿಕಾರಿಗಳು ಕಂದಾಯ ವಸೂಲಿಯಲ್ಲಿ ಎಷ್ಟರಮಟ್ಟಿಗೆ ನಿಷ್ಕರುಣೆಗಳಾಗಿದ್ದರೆಂದರೆ ಅವರನ್ನು ಸಾರ್ವಜನಿಕರು ಮಾನವೀಯತೆಯಿಲ್ಲದ ದರೋಡೆಕಾರ ದುಷ್ಟ ಅಧಿಕಾರಿಗಳೆಂದು ಪರಿಗಣಿಸಿದ್ದರು. ಅಲ್ಲದೆ ಈ ರೆವಿನ್ಯೂ ಅಧಿಕಾರಿಗಳಿಗೆ ಯಾರೊಬ್ಬರೂ ಹೆಣ್ಣನ್ನು ಕೊಟ್ಟು ಮದುವೆ ಮಾಡಲು ಮುಂದೆ ಬರುತ್ತಿರಲಿಲ್ಲವೆಂದು ಭರಣಿಯು ಹೇಳುತ್ತಾನೆ. ಒಟ್ಟಾರೆ ಹೇಳುವುದಾದರೆ ಅಲ್ಲಾವುದ್ದೀನನ ಕಂದಾಯ ನೀತಿಯು ಹಿಂದುಗಳನ್ನು ಬಡತನದ ಬೇನೆಗೆ ತಳ್ಳುವುದಾಗಿತ್ತು. ಹಿಂದೂ ಭೂಮಾಲೀಕರು ಕುದುರೆಯ ಮೇಲೆ ಸವಾರಿಮಾಡುವುದಕ್ಕಾಗಲೀ ಶಸ್ತ್ರಾಸ್ತ್ರಗಳನ್ನು ಹೊಂದಿರುವುದಕ್ಕಾಗಲೀ, ಒಳ್ಳೆಯ ಉಡುಪನ್ನು ಧರಿಸುವುದಕ್ಕಾಗಲೀ ಮತ್ತು ಎಲೆ ಅಡಿಕೆ ಹಾಕಿಕೊಂಡು ಮೋಜು ಮಾಡುವುದಕ್ಕೂ ಅವಕಾಶವಿಲ್ಲದಂತೆ ಮಾಡಿದ್ದನು.

## ಅಲ್ಲಾವುದ್ದೀನನ ರಾಜತ್ವದ ಕಲ್ಪನೆ

ಅಲ್ಲಾವುದ್ದೀನನು ದರ್ಷಿಷ್ಟ ಪ್ರಭುವಾಗಿದ್ದನು. ಅವನು ಶೀಘ್ರವಾಗಿ ಗಳಿಸಿದ ವಿಜಯಗಳಿಂದ ಮದೋನ್ಮತ್ತನೂ ಮತ್ತು ಅಹಂಕಾರಿಯೂ ಆದನು. ಅಲೆಗ್ಸಾಂಡರ್ ಮಹಾಶಯನಂತೆ ವಿಶ್ವವನ್ನು ಗೆಲ್ಲಬೇಕೆಂಬ ಅಪೇಕ್ಷೆಯುಳ್ಳವನಾಗಿದ್ದನು. ಇಷ್ಟೆ ಅಲ್ಲದೆ ಪ್ರವಾದಿ ಮಹಮದನಂತೆ ತಾನೂ ಒಂದು ಹೊಸ ಧರ್ಮವನ್ನು ಸ್ಥಾಪಿಸಿ ತನ್ನ ಹೆಸರನ್ನು ಚಿರಸ್ಥಾಯಿಗೊಳಿಸಿಕೊಳ್ಳಬೇಕೆಂಬ ಆಲೋಚನೆಯನ್ನೂ ಮಾಡಿದ್ದನು. ಅವನು ತನ್ನ ಈ ಅಭಿಪ್ರಾಯಗಳನ್ನು ಕುರಿತು ದೆಹಲಿಯ ಖಾಜಿಅಲಾ-ಉಲ್-ಮುಲ್ಕನೊಂದಿಗೆ ಸಮಾಲೋಚನೆ ಮಾಡಿದನು. ಅಲಾ-ಉಲ್-ಮುಲ್ಕನು ಅವನ ಅಭಿಪ್ರಾಯಗಳನ್ನು ಸಾವಧಾನದಿಂದ ಕೇಳಿ ಅವನ ಆಲೋಚನೆಗಳೆಲ್ಲವೂ ಅಸಂಬದ್ಧವಾದವುಗಳೆಂದು ಧೈರ್ಯದಿಂದ ಹೇಳಿ ಈ ವಿಷಯಗಳಲ್ಲಿ ಸುಲ್ತಾನನ ಇತಿಮಿತಿಗಳೇನೆಂಬುದರ ಬಗ್ಗೆ ತಿಳುವಳಿಕೆ ನೀಡಿದನು. ಸುಲ್ತಾನನು ಸ್ಥಾಪಿಸಬೇಕೆಂದಿದ್ದ ಹೊಸ ಧರ್ಮದ ಬಗ್ಗೆ ಖಾಜಿಯು ಈ ರೀತಿ ತಿಳಿಸಿದನು. ಹೊಸಧರ್ಮವನ್ನು ಸ್ಥಾಪಿಸುವುದು ಪ್ರವಾದಿಗಳಿಗೆ ಸೇರಿರುತ್ತದೆ. ಪಾಶವೀ ಶಕ್ತಿಯ ಪ್ರದರ್ಶನದಿಂದ ಯಾವ ಧರ್ಮವನ್ನೂ ಸ್ಥಾಪಿಸಲೂ ಸಾಧ್ಯವಿಲ್ಲ. ಧರ್ಮಸ್ಥಾಪನೆಗೆ ದೈವ ಪ್ರೇರಣೆಯಿರಬೇಕು. ಇದಲ್ಲದೆ ರಾಜನಾದವನ ಕರ್ತವ್ಯವು ರಾಜ್ಯವಾಳುವುದೇ ಹೊರತು ಧಾರ್ಮಿಕ ವಿಷಯಗಳಲ್ಲಿ ವಿನೋದಮಾಡುವುದಲ್ಲ ಎಂದು ಹೇಳಿದನು. ಖಾಜಿಯು ಇನ್ನೂ ಮುಂದುವರಿದು ಅಲ್ಲಾವುದ್ದೀನನ ವಿಶ್ವದ ದಿಗ್ವಿಜಯದ ಆಲೋಚನೆಯ ಬಗ್ಗೆ ಈ ರೀತಿ ವಿವೇಕ ಹೇಳಿದನು. ಪ್ರಪಂಚವನ್ನೆಲ್ಲಾ ತಮ್ಮ ಅಧೀನಕ್ಕೆ ತಂದುಕೊಳ್ಳಬೇಕೆಂದು ಪ್ರಯತ್ನಿಸುವುದು ಎಲ್ಲಾ ಪ್ರಭುಗಳ ಆಶಯವಾಗಿರುತ್ತದೆ. ಆದರಂತೆ ನಿನ್ನ ಅಭೀಷ್ಟವೂ ಅದೇ ಆಗಿರುತ್ತದೆ. ಆದರೆ ಅಲೆಗ್ಸಾಂಡರನ ಕಾಲಕ್ಕೂ ಈ ಕಾಲಕ್ಕೂ ಪ್ರಪಂಚವು ಸಾಕಷ್ಟು ಬದಲಾವಣೆಗೊಂಡಿದೆ. ಭಾರತವನ್ನೆಲ್ಲಾ ಗೆದ್ದು ವಶಪಡಿಸಿಕೊಳ್ಳುವ ಮೊದಲು ಪ್ರಪಂಚವನ್ನು ಗೆಲ್ಲಲು ಯೋಜನೆಗಳನ್ನು ರೂಪಿಸುವುದು ಅಸಂಬದ್ಧವಾದ ಯೋಜನೆಯಾಗುತ್ತದೆ. ಖಾಜಿಯ ಈ ಮಾತುಗಳನ್ನು ಕೇಳಿದ ಸುಲ್ತಾನನಿಗೆ ವಿವೇಕವುಂಟಾಗಿ ಅವನು ಈ ರೀತಿ ಹೇಳಿದನು. ನಾನು ಪ್ರಪಂಚವನ್ನು ಗೆಲ್ಲುವ ಪ್ರಯತ್ನವನ್ನಾಗಲೀ ಮತ್ತು ಹೊಸ ಧರ್ಮವನ್ನು ಸ್ಥಾಪಿಸುವ ಗೋಜಿಗಾಗಲೀ ಹೋಗುವುದಿಲ್ಲ. ಆದರೆ ರಾಜಕೀಯವನ್ನೂ ಧರ್ಮವನ್ನೂ ಪ್ರತ್ಯೇಕವಾಗಿಟ್ಟು ಜಾತ್ಯಾತೀತ ರಾಷ್ಟ್ರವನ್ನು ನಿರ್ಮಿಸಲು ಪ್ರಯತ್ನಿಸುತ್ತೇನೆ ಎಂದು ಹೇಳಿದನು. ಇಂತಹ ಅಭಿಪ್ರಾಯವನ್ನು ಹೊಂದಿದ್ದ ಸುಲ್ತಾನನು ತನ್ನದೇ ಆದ ರಾಜಕೀಯ ಸಿದ್ಧಾಂತವನ್ನು ಜಾರಿಗೆ ತಂದನು. ರಾಜ್ಯಾಡಳಿತದಲ್ಲಿ ಇದುವರೆವಿಗೂ ಪ್ರಭಾವ ಬೀರಿದ ಇಸ್ಲಾಮಿನ ಕಾನೂನುಗಳ ಮತ್ತು ಉಲೇಮಾಗಳ ಪ್ರಭಾವವನ್ನು ಕಡಿಮೆಮಾಡಿದನು. ರಾಜ್ಯಾಡಳಿತದಲ್ಲಿ ಲೌಕಿಕ ವಿಷಯಗಳೊಂದಿಗೆ ಧಾರ್ಮಿಕ ವಿಷಯಗಳನ್ನು ಬೆರಸ್ಪದೆ ಅವೆರಡನ್ನೂ ಪ್ರತ್ಯೇಕವಾಗಿಸಬೇಕೆಂಬುದು ಅವನ ಅಭಿಪ್ರಾಯವಾಗಿತ್ತು. ಸುಲ್ತಾನನು ತನ್ನ ಅಭಿಪ್ರಾಯಗಳನ್ನು ಖಾಜಿಗೆ ಈ ರೀತಿ ಹೇಳಿದನು. "ಇದು ಕಾನೂನುಬದ್ಧವೊ ಅಥವ ಕಾನೂನಿಗೆ ವಿರುದ್ಧವೋ ನನಗೆ ತಿಳಿಯದು. ಅಂದರೆ ಇಸ್ಲಾಮಿನ ಕಾನೂನಿನಲ್ಲಿ ಇದಕ್ಕೆ ಅನುಮತಿಯಿದೆಯೋ ಇಲ್ಲವೋ ತಿಳಿಯದು. ರಾಜ್ಯದ ಹಿತದೃಷ್ಟಿಯಿಂದ ಯಾವುದು ಒಳ್ಳೆಯದೆಂದು ನನಗೆ ಕಂಡುಬರುತ್ತದೆಯೋ ಅಥವ ಜರೂರು ಪರಿಸ್ಥಿತಿಗೆ

ಯಾವುದು ಸೂಕ್ತವೆಂದು ಕಂಡುಬರುವುದೋ ಅಂತಹ ಕಾನೂನನ್ನು ಜಾರಿಮಾಡುತ್ತೇನೆ. ಅಂತಿಮ ವಿಚಾರಣೆಯದಿನ ಇದರಿಂದ ನನಗೆ ಏನು ಸಂಭವಿಸುತ್ತದೊ ಅದೂ ಕೂಡ ನನಗೆ ಗೊತ್ತಿಲ್ಲ'' ಎಂದು ತಿಳಿಸಿದನು. ಈ ಅಭಿಪ್ರಾಯಗಳು ಅಲ್ಲಾವುದ್ದೀನನು ರಾಜತ್ವದ ಬಗ್ಗೆ ಹೊಂದಿದ್ದ ಹೊಸ ದೃಷ್ಟಿಕೋನವನ್ನು ತೋರಿಸುತ್ತದೆ. ಇಂತಹ ಅಭಿಪ್ರಾಯಗಳನ್ನು ಹೊಂದಿದ ಸುಲ್ತಾನನು ರಾಜಕೀಯವನ್ನು ಇಸ್ಲಾಂ ಧರ್ಮದ ನಿಯಮಗಳೊಂದಿಗೆ ಬೆರಸದೆ, ರಾಜ್ಯಾಡಳಿತದ ನಿರ್ವಹಣೆಯಲ್ಲಿ ತನ್ನದೇ ಆದ ನೀತಿಯನ್ನು ಅನುಸರಿಸಿ ಹೊಸ ಮಾರ್ಗ ಹಿಡಿದನು. ಅವನ ಈ ಮಾರ್ಗವನ್ನು ಮುಂದೆ ಮಹಮದ್‌ಬಿನ್ ತೊಘ್ಲಕನು ಅನುಸರಿಸಿದನು. ಅಲ್ಲಾವುದ್ದೀನನು ರಾಜ್ಯಾಡಳಿತದಲ್ಲಿ ಉಲೇಮಾಗಳ ಪ್ರಭಾವದಿಂದ ಸ್ವತಂತ್ರನಾದರೂ ಹಿಂದುಗಳ ಬಗ್ಗೆ ಅವನು ಉದಾರ ನೀತಿಯನ್ನು ಅನುಸರಿಸಲಿಲ್ಲ. ಆದ್ದರಿಂದ ಅವನು ಸ್ಥಾಪಿಸಬೇಕೆಂದಿದ್ದ ಜಾತ್ಯಾತೀತ ರಾಜ್ಯವು ಅಸ್ತಿತ್ವಕ್ಕೆ ಬರಲಿಲ್ಲ ಮತ್ತು ಜಾತ್ಯಾತೀತ ರಾಜ್ಯಸ್ಥಾಪನೆಗೆ ಕಾಲವೂಕೂಡ ಇನ್ನೂ ಪಕ್ವವಾಗಿರಲಿಲ್ಲ.

**ಅಲ್ಲಾವುದ್ದೀನನ ಕೊನೆಯ ದಿದಗಳು**

ಅಲ್ಲಾವುದ್ದೀನನ ಕೊನೆಯ ದಿವಸಗಳು ಸಂತೋಷದಾಯಕವಾಗಿರಲಿಲ್ಲ. ಅವನ ಆರೋಗ್ಯವು ಕೆಟ್ಟಿತು. ಅವನ ಹೆಂಡತಿ ಮಕ್ಕಳೂ ಕೂಡ ಅವನನ್ನು ಉದಾಸೀನದಿಂದ ಕಾಣಲಾರಂಭಿಸಿದರು. ರಾಜ್ಯದ ಆಡಳಿತದಲ್ಲಿ ಮಲ್ಲಿಕ್ ಕಪೂರನ ಪ್ರಭಾವವು ಹೆಚ್ಚಿ ಅಲ್ಲಾವುದ್ದೀನನು ಅವನ ಕೈಗೊಂಬೆಯಾದನು. ಅಲ್ಲದೆ ಮಲ್ಲಿಕ್ ಕಪೂರನ ಪಿತೂರಿಗಳಿಂದಾಗಿ ಅಂತಃಪುರದಲ್ಲಿ ಅಶಾಂತಿ ವಾತಾವರಣ ಉಂಟಾಯಿತು. ಖಿಜರ್ ಖಾನ್‌ನನ್ನು ಗ್ವಾಲಿಯರ್‌ನಲ್ಲಿ ಸೆರೆಮನೆಯಲ್ಲಿಡಲಾಯಿತು. ಖಿಜರ್‌ಖಾನ್‌ನ ಪಕ್ಷಕ್ಕೆ ಸೇರಿದವನೆಂಬ ಕಾರಣದಿಂದ ಗುಜರಾತಿನ ರಾಜ್ಯಪಾಲನನ್ನು ಕೊಲೆಮಾಡಿಸಲಾಯಿತು. ಇದರಿಂದ ಅಲ್ಲಿದಂಗೆಯುಂಟಾಯಿತು. ದೇವಗಿರಿಯಲ್ಲಿ ರಾಮಚಂದ್ರನ ಅಳಿಯನಾದ ಹರಪಾಲನು ದಂಗೆಯೆದ್ದು ತನ್ನ ಸ್ವಾತಂತ್ರ್ಯವನ್ನು ಘೋಷಿಸಿಕೊಂಡನು. ನಿಶ್ಯಕ್ತನಾಗಿದ್ದ ಅಲ್ಲಾವುದ್ದೀನನು ಈ ದಂಗೆಗಳನ್ನು ಅಡಗಿಸಲು ಯಾವ ಕ್ರಮಗಳನ್ನು ಕೈಗೊಳ್ಳಲಾರದವನಾಗಿದ್ದನು. ಅಲ್ಲಾವುದ್ದೀನ್ ಖಿಲ್ಜಿಯು ಜನವರಿ 1316ರಲ್ಲಿ ಕಾಲವಾದನು. ಮಲ್ಲಿಕ್ ಕಪೂರನೇ ಅವನಿಗೆ ವಿಷಹಾಕಿ ಸಾಯಿಸಿದನೆಂದು ಕೆಲವು ಇತಿಹಾಸಕಾರರು ಅಭಿಪ್ರಾಯಪಟ್ಟಿರುವರು.

ಅಲ್ಲಾವುದ್ದೀನನು ಕ್ರೂರಿಯೂ ಮತ್ತು ನಿರಂಕುಶ ಪ್ರಭುವೂ ಆಗಿದ್ದರೂ ಅವನು ಸುಸಂಸ್ಕೃತ ವ್ಯಕ್ತಿಯಾಗಿದ್ದನು. ಅವನ ವ್ಯಕ್ತಿತ್ವದಲ್ಲಿ ಕ್ರೂರತನ ಮತ್ತು ಕಠಿಣತೆ ಹೆಚ್ಚಾಗಿ ಕಂಡುಬರುವುದಾದರೂ ಅವನಲ್ಲಿ ಕೆಲವು ಶ್ಲಾಘನೀಯ ಗುಣಗಳೂ ಇದ್ದವು. ರಾಜ್ಯದ ಒಳಗಡೆ ಒಳಸಂಚು, ದಂಗೆ ಮತ್ತು ಪಿತೂರಿಗಳೂ ಮತ್ತು ಹೆಚ್ಚು ಹೆಚ್ಚಾಗಿ ಹೊರಗಿನಿಂದ ಮಂಗೋಲರ ಆಕ್ರಮಣಗಳು ನಡೆಯುತ್ತಿದ್ದ ಆ ಕಾಲದಲ್ಲಿ ಅವನು ಅವುಗಳ ವಿರುದ್ಧ ಕ್ರೂರಿಯಾಗಿ ವರ್ತಿಸಿದುದರಲ್ಲಿ ತಪ್ಪೇನಿರಲಿಲ್ಲ. ಇಲ್ಲದಿದ್ದಲ್ಲಿ ಅವನು ಭಾರತದಲ್ಲಿ ತನಗಿದ್ದ ವಿರೋಧಗಳನ್ನೆಲ್ಲಾ ಹತ್ತಿಕ್ಕಿ ಮುಸ್ಲಿಂ ಸಾಮ್ರಾಜ್ಯವನ್ನೂ ಹಾಗೂ ಖಿಲ್ಜಿಯವರ ಪ್ರಭುತ್ವವನ್ನೂ ಸ್ಥಾಪಿಸುವುದು ಬಹುಶಃ ಕಷ್ಟವಾಗುತ್ತಿತ್ತು. ಅಲ್ಲಾವುದ್ದೀನನು ಅವಿದ್ಯಾವಂತನಾಗಿದ್ದನು. ಆದರೂ ಅವನು

ಸಾಹಿತ್ಯಾಭಿಮಾನಿಯಾಗಿದ್ದನು. ಪರ್ಶಿಯನ್ ಭಾಷೆಯಲ್ಲಿ ಸುಪ್ರಸಿದ್ಧ ಕವಿಯಾಗಿದ್ದ ಅಮೀರ್‌ಖುಸ್ರುವು ಅವನ ಆಸ್ಥಾನವನ್ನು ಅಲಂಕರಿಸಿದ್ದನು ಮತ್ತು ಅಲ್ಲಾವುದ್ದೀನನ ಆಳ್ವಿಕೆಯಲ್ಲಿ ಅವನು ತನ್ನ ಅತ್ಯುತ್ತಮ ಕೃತಿಗಳನ್ನು ರಚಿಸಿದನು. ಖುಸ್ರುವಿನ ಕೆಲವು ಕೃತಿಗಳಲ್ಲಿ ಚಿತ್ತೂರು ಮತ್ತು ದಖನ್ನಿನ ಮೇಲೆ ಅಲ್ಲಾವುದ್ದೀನನ ದಂಡಯಾತ್ರೆಗಳಿಗೆ ಸಂಬಂಧಿಸಿದ ಘಟನೆಗಳ ಬಗ್ಗೆ ವಿವರಗಳು ದೊರೆಯುತ್ತವೆ. ಮುಸ್ಲಿಂ ಸಂತನಾದ ನಿಜಾಮ್-ಉದ್ದೀನ್-ಔಲಿಯನು ಈ ಕಾಲದಲ್ಲಿದ್ದನು ಮತ್ತು ಅಮೀರ್ ಖುಸ್ರು ಅವನ ಶಿಷ್ಯನಾಗಿದ್ದನು.

ಅಲ್ಲಾವುದ್ದೀನನು ಕಟ್ಟಡಗಳ ನಿರ್ಮಾಣದಲ್ಲೂ ಆಸಕ್ತಿ ಹೊಂದಿದ್ದು ಅನೇಕ ಕಟ್ಟಡಗಳನ್ನು ನಿರ್ಮಿಸಿದನು. ದೆಹಲಿಯಲ್ಲಿ ಪೃಥ್ವಿರಾಜನು ನಿರ್ಮಿಸಿದ್ದ ಕೋಟೆಗೆ ಆಗ್ನೇಯ ದಿಕ್ಕಿನಲ್ಲಿ 'ಸಿರಿ' ಎಂಬ ಹೊಸಪಟ್ಟಣವನ್ನು ನಿರ್ಮಿಸಿದ್ದನು. ಕಲ್ಲಿನ ಕೋಟೆಯ ಒಳಗಿದ್ದ ಈ ಪಟ್ಟಣದ ನುಧ್ಯೆ ಒಂದು ಸುಂದರವಾದ ಅರಮನೆಯಿದ್ದಿತು. ಆದರೆ ಈಗ ಆದರ ಮಸೀದಿಗೆ ಅಲೈದರ್ವಾಜ ಎಂಬ ಒಂದು ದೊಡ್ಡ ಹೆಬ್ಬಾಗಿಲನ್ನು ನಿರ್ಮಿಸಿದನು ಹೀಗೆ ಅಲ್ಲಾವುದ್ದೀನನು ಸಾಹಿತ್ಯ ಮತ್ತು ಕಲೆಯ ಪೋಷಕನೂ ಆಗಿದ್ದು ಅವನಲ್ಲಿ ಔದಾರ್ಯಗುಣವೂ ಇದ್ದಿತೆಂಬುದನ್ನು ಗಮನಿಸದೆ ಇರುವಂತಿಲ್ಲ.

### ಅವನ ಆಳ್ವಿಕೆಯ ಮಹತ್ವ

ಅಲ್ಲಾವುದ್ದೀನನನ್ನು ಸ್ವಭಾವದಲ್ಲಿ ಕ್ರೂರಿಯೂ, ಹಟಮಾರಿಯೂ ಮತ್ತು ನಿರ್ದಯಿಯೂ ಆಗಿದ್ದನು. ಸ್ನೇಹಿತರಾಗಲೀ ಶತ್ರುಗಳಾಗಲೀ ಅವನಿಂದ ಅನುಕಂಪವನ್ನು ನಿರೀಕ್ಷಿಸುವುದು ಸಾಧ್ಯವಿರಲಿಲ್ಲ. ಪಿತೂರಿಗಳು ದಂಗೆಗಳು ಮೊದಲಾದುವುಗಳು ಸರ್ವಸಾಮಾನ್ಯವಾಗಿದ್ದ ಆ ಕಾಲದಲ್ಲಿ ಅಲ್ಲಾವುದ್ದೀನನು ಹಾಗೆ ವರ್ತಿಸಿದುದಲ್ಲಿ ಅಹಸಜತೆಯೇನೂ ಇರಲಿಲ್ಲ. ಆಫ್ರಿಕಾದ ಪ್ರವಾಸಿಗನಾದ ಇಬಾನ್‌ಬಟೂಟನು ಅಲ್ಲಾವುದ್ದೀನ್ ಖಿಲ್ಜಿಯನ್ನು ಮುಸಲ್ಮಾನ್ ದೊರೆಗಳಲ್ಲಿ ಅತ್ಯಂತ ಪ್ರಸಿದ್ಧನಾದವನೆಂದು ಹೇಳಿರುವನು. ಅವನ ಆಳ್ವಿಕೆಯ ಕಾಲವು ಮಧ್ಯಕಾಲೀನ ಭಾರತದ ಇತಿಹಾಸದಲ್ಲಿ ಬಹುಮುಖ್ಯವಾದ ಅಧ್ಯಾಯವಾಗಿದೆ. ಅಕ್ಬರನಿಗಿಂತ ಮುಂಚೆ ಬಹುದೊಡ್ಡ ಸಾಮ್ರಾಜ್ಯವನ್ನಾಳಿದ ದೆಹಲಿಯ ಮುಸಲ್ಮಾನ ದೊರೆಗಳಲ್ಲಿ ಅಲ್ಲಾವುದ್ದೀನನು ಮೊದಲಿಗನಾಗಿದ್ದಾನೆ. ಹಲವಾರು ಶತಮಾನಗಳ ಅನೈಕ್ಯತೆಯ ನಂತರ ಭಾರತವು ಅಲ್ಲಾವುದ್ದೀನನ ಆಳ್ವಿಕೆಯಲ್ಲಿ ರಾಜಕೀಯ ಏಕತೆಯನ್ನು ಕಂಡಿತು. ಉತ್ತರ ಮತ್ತು ದಕ್ಷಿಣ ಭಾರತಗಳ ನಡುವೆ ಸಂಪರ್ಕವೇರ್ಪಟ್ಟಿತು. ಅಲ್ಲಾವುದ್ದೀನನು ಬಹುಮನಿ ರಾಜ್ಯಸ್ಥಾಪನೆಗೆ ಬುನಾದಿ ಹಾಕಿದನು ಮತ್ತು ಇದು ಮುಂದೆ ದಖನ್ನಿನಲ್ಲಿ ಮೊಗಲರ ಆಳ್ವಿಕೆಗೆ ಸಹಕಾರಿಯಾಯಿತು. ಮೇಲಾಗಿ ಅಲ್ಲಾವುದ್ದೀನನು ಸೈನಿಕ ಉಂಬಳಿಯಂತಿದ್ದ ಟರ್ಕರ ಸಾಮ್ರಾಜ್ಯಕ್ಕೆ ಒಂದು ರೀತಿಯ ಆಡಳಿತ ಏಕತೆಯನ್ನು ತಂದುಕೊಟ್ಟನು. ಅವನು ಒಬ್ಬ ನಿಜವಾದ ಸಾಮ್ರಾಜ್ಯ ನಿರ್ಮಾಪಕ. ಅವನು ತನ್ನ ಸಾಮ್ರಾಜ್ಯ ನಿರ್ಮಾಣಕಾರ್ಯದಲ್ಲಿ ಕೇವಲ ಸೈನಿಕ ವ್ಯವಹಾರಗಳಿಗೆ ತನ್ನ ಗಮನವನ್ನು ಕೊಟ್ಟಿರಲಿಲ್ಲ. ಸಾಮ್ರಾಜ್ಯದ ಆಡಳಿತವನ್ನು ಇಸ್ಲಾಂಧರ್ಮದ ಕಾನೂನುಗಳ ಪ್ರಭಾವದಿಂದ ಸ್ವತಂತ್ರಗೊಳಿಸಿ ರಾಜ್ಯಾಡಳಿತಕ್ಕೆ ಹೊಸ ಮಾರ್ಗದರ್ಶನ ಮಾಡಿದನು. ಕಲೆ ಮತ್ತು ಸಾಹಿತ್ಯಕ್ಕೆ ಕೊಟ್ಟ ಪ್ರೋತ್ಸಾಹದಿಂದ ಅವನು ಪೌರಾತ್ಯ ರಾಜ್ಯಗಳ ಒಳ್ಳೆಯ ದೊರೆಗಳ ಉತ್ತಮ ಸಂಪ್ರದಾಯಗಳನ್ನು ಮುಂದುವರಿಸಿಕೊಂಡು ಬಂದನು.

## ಖಿಲ್ಜಿ ಸಂತತಿಯ ಅವನತಿ

ಅಲ್ಲಾವುದ್ದೀನನು ಕಾಲವಾದಮೇಲೆ ಸಿಂಹಾಸನಕ್ಕಾಗಿ ಪ್ರತಿಪಕ್ಷಗಳ ನಡುವೆ ಹೋರಾಟವು ಆರಂಭವಾಯಿತು. ಈ ವೇಳೆಗಾಗಲೇ ಮಲ್ಲಿಕ್‌ಕಪೂರನು ಅತ್ಯಂತ ಪ್ರಭಾವ ಶಾಲಿಯಾಗಿದ್ದು ಅವನು ಮುಬಾರಕ್‌ಷಹನನ್ನುಳಿದು ಸುಲ್ತಾನನ ಕಡೆಯವರಲ್ಲರನ್ನೂ ಕೊಲೆ ಮಾಡಿಸಿದನು. ಮಲ್ಲಿಕ್‌ಕಪೂರನು ತನ್ನ ಮಗನನ್ನು ಸುಲ್ತಾನನು ಸಿಂಹಾಸನಕ್ಕೆ ಉತ್ತರಾಧಿಕಾರಿಯೆಂದು ನೇಮಿಸಿರುವುದಾಗಿ ಸುಲ್ತಾನನು ಸಹಿಹಾಕಿದ ಕಪಟ ಪತ್ರವೊಂದನ್ನು ಪ್ರಕಟಿಸಿದನು. ಆದರೆ ತನ್ನ ಮಗ ಉಮರ್‌ಖಾನನು ಇನ್ನೂ ಚಿಕ್ಕವನಾಗಿದ್ದರಿಂದ ಅವನ ಪ್ರತಿನಿಧಿಯಾಗಿ ತಾನೇ ಆಡಳಿತವನ್ನೆಲ್ಲಾ ನೋಡಿಕೊಳ್ಳಲು ಪ್ರಾರಂಭಿಸಿದನು. ಮಲ್ಲಿಕ್‌ಕಪೂರನ ಈ ನೀಚ ಕೃತ್ಯಗಳಿಂದ ಜುಗುಪ್ಸೆಗೊಂಡ ನೋಬಲ್ಲರು ಅವನ ವಿರುದ್ಧ ಸಂಚು ನಡೆಸಿ ಕೆಲವೇ ತಿಂಗಳುಗಳಲ್ಲಿ ಮಲ್ಲಿಕ್‌ಕಪೂರ್ ಮತ್ತು ಅವನ ಕಡೆಯವರನ್ನು ಕೊಲ್ಲಿಸಿದರು.

## ಮುಬಾರಕ್‌ಷಹಾ (1316-1320)

ಮಲ್ಲಿಕ್‌ಕಪೂರನನ್ನು ಮತ್ತು ಅವನ ಕಡೆಯವರನ್ನು ಮುಗಿಸಿದ ನಂತರ ನೋಬಲ್ಲರು ಅಲ್ಲಾವುದ್ದೀನನ ಮತ್ತೊಬ್ಬ ಮಗನಾಗಿದ್ದ ಮುಬಾರಕ್‌ಷಹನನ್ನು ಸಿಂಹಾಸನಕ್ಕೆ ತಂದರು. ಇವನು ತನ್ನ ಆಡಳಿತವನ್ನು ಚೆನ್ನಾಗಿಯೆ ಪ್ರಾರಂಭಿಸಿದನು. ರಾಜಕೀಯ ಖೈದಿಗಳನ್ನೆಲ್ಲಾ ಬಿಡುಗಡೆ ಮಾಡಿದನು. ಅಲ್ಲಾವುದ್ದೀನನು ಜಾರಿಗೆ ತಂದಿದ್ದ ಕ್ರೂರ ಶಾಸನಗಳನ್ನು ರದ್ದುಗೊಳಿಸಿ ಅಲ್ಲಾವುದ್ಧೀನನ ಸಾಧನೆಗಳೆಲ್ಲವನ್ನೂ ಗಾಳಿಗೆ ತೂರಿಬಿಟ್ಟನು. ಜಹಗೀರುದಾರರಿಂದ ಕಿತ್ತುಕೊಳ್ಳಲಾಗಿದ್ದ ಭೂಮಿಗಳನ್ನು ಮತ್ತಿತರ ಉಂಬಳಿಗಳನ್ನು ಅವರಿಗೆ ಹಿಂದಕ್ಕೆ ಕೊಡಿಸಿದನು. ಬೆಲೆಗಳ ನಿಯಂತ್ರಣ ಕ್ರಮವನ್ನು ರದ್ದುಗೊಳಿಸಿದನು. 1316ರಲ್ಲಿ ದೇವಗಿರಿಯಲ್ಲಿ ಸಂಭವಿಸಿದ ಹರಪಾಲದೇವನ ದಂಗೆಯನ್ನು ಬಿಟ್ಟರೆ ಇವನ ಕಾಲದಲ್ಲಿ ಬೇರೆ ಯಾವ ದಂಗೆಗಳೂ ಸಂಭವಿಸಲಿಲ್ಲ. ಮುಬಾರಕನೇ ದೇವಗಿರಿಯ ಮೇಲೆ ದಂಡೆತ್ತಿಹೋಗಿ ಹರಪಾಲನನ್ನು ಸೋಲಿಸಿ ಅವನನ್ನು ಕೊಲ್ಲಿಸಿದನು. ದೇವಗಿರಿಯಿಂದ ರಾಜಧಾನಿಗೆ ಹಿಂದಿರುಗಿ ಬಂದಮೇಲೆ ಮುಬಾರಕ್ ಷಹನು ದುರಂಹಂಕಾರಿಯಾಗಿ ವರ್ತಿಸತೊಡಗಿದನು. ಅಲ್ಲದೆ ಎಲ್ಲಾ ರೀತಿಯ ದುಶ್ಚಟಗಳಿಗೆ ಬಲಿಯಾದನು. ಕೀಳುಜಾತಿಯ ಹಿಂದುವಾಗಿದ್ದು ಇಸ್ಲಾಂಗೆ ಮತಾಂತರಗೊಂಡಿದ್ದ ಖುಸ್ರು ಎಂಬವನ ಕೈಗೊಂಬೆಯಾದನು. ಮುಬಾರಕನು ಹಿಂದಿನಿಂದಲೂ ಸೇವೆಸಲ್ಲಿಸಿ ಸುಲ್ತಾನನ ಗೌರವಕ್ಕೆ ಪಾತ್ರರಾಗಿದ್ದ ನೋಬಲ್ಲರನ್ನು ತುಚ್ಛವಾಗಿ ಕಾಣತೊಡಗಿದನು. ಆಸ್ಥಾನದಲ್ಲಿ ಖುಸ್ರುವಿನ ಪ್ರಭಾವವು ದಿನೇ ದಿನೇ ಹೆಚ್ಚಿ ಅವನು ಮುಬಾರಕ್‌ಷಹನ ಕೊಲೆಗೆ ಒಳಸಂಚು ನಡೆಸತೊಡಗಿದನು. ಸುಲ್ತಾನನ ಹಿತೈಷಿಗಳು ಖುಸ್ರುವಿನ ಈ ಕೆಟ್ಟ ಮನೋಗತವನ್ನು ಅವನಿಗೆ ತಿಳಿಸಿದರೂ ಅವನು ಅದಕ್ಕೆ ಗಮನ ಕೊಡಲಿಲ್ಲ. ಪಿತೂರಿಗಾರರು ಒಂದು ರಾತ್ರಿ ಅರಮನೆಯನ್ನು ಪ್ರವೇಶಿಸಿ ಮುಬಾರಕ್‌ಷಹನನ್ನು ಕೊಲೆಮಾಡಿದರು.

## ನಾಸಿರುದ್ದೀನ್ ಖುಸ್ರು

ಸುಲ್ತಾನ್ ಮುಬಾರಕ್‌ಷಹನನ್ನು ಕೊಲೆ ಮಾಡಿಸಿದ ಖುಸ್ರುವು 1320ರಲ್ಲಿ

ನಾಸಿರುದ್ದೀನ್ ಖುಸ್ರುಷಹ ಎಂಬ ಬಿರುದಿನಿಂದ ಸಿಂಹಾಸನವನ್ನೇರಿದನು. ಖುಸ್ರುವು ತನ್ನ ಅಧಿಕಾರಕ್ಕೆ ಬೆಂಬಲ ಪಡೆದುಕೊಳ್ಳುವುದಕ್ಕಾಗಿ ತನ್ನ ಕಡೆಯವರಿಗೆ ಹೇರಳವಾಗಿ ಬಹುಮಾನಗಳನ್ನು ಕೊಟ್ಟನು. ಹಿಂದಿನ ನೋಬಲ್ಲರುಗಳು ಮತ್ತು ಅಧಿಕಾರಿಗಳು ಖುಸ್ರುವಿನ ಕಡೆಯವರಿಗೆ ತಮ್ಮ ಸ್ಥಾನಮಾನಗಳನ್ನು ಬಿಟ್ಟುಕೊಡಬೇಕಾಯಿತು. ಅವರು ರಾಜ್ಯಕ್ಕೊದಗಿದ ದುಃಸ್ಥಿತಿಯನ್ನು ಕಂಡು ದುಃಖಿಸಿದರು ಮತ್ತು ಖುಸ್ರುವನ್ನು ಸಿಂಹಾಸನದಿಂದಳಿಸಲು ಪ್ರಯತ್ನಿಸಿದರು. ಅವರು ಮುಲ್ತಾನ್ ಮತ್ತು ದೀಪಾಲ್‌ಪುರಗಳ ರಾಜ್ಯಪಾಲನೂ ಮತ್ತು ಗಡಿನಾಡಿನ ರಕ್ಷಕನೂ ಆಗಿದ್ದ ಘಾಜಿಮಲ್ಲಿಕ್‌ನನ್ನು ದೆಹಲಿಗೆ ಸೈನ್ಯಸಮೇತ ಬರುವಂತೆ ಆಮಂತ್ರಿಸಿದರು. ಘಾಜಿಮಲ್ಲಿಕನು ಪರಿಸ್ಥಿತಿಯನ್ನರಿತು ಕೂಡಲೆ ದೆಹಲಿಯತ್ತ ಬಂದನು. ಖುಸ್ರುವು ಘಾಜಿಮಲ್ಲಿಕನನ್ನು ಸೋಲಿಸಲು ವಿಶೇಷ ಪ್ರಯತ್ನ ಮಾಡಿದನು. ಆದರೆ ಕೊನೆಯಲ್ಲಿ ಸೋತು ಓಡಿಹೋದನು. ಅವನನ್ನು ಹಿಡಿದು ಕೊಲ್ಲಲಾಯಿತು. ಘಾಜಿಮಲ್ಲಿಕನಿಗೆ ದೆಹಲಿಯ ಹಳೆಯ ನೋಬಲ್ಲರುಗಳು ತಮ್ಮ ಪ್ರಣಾಮಗಳನ್ನು ಸಲ್ಲಿಸಿದರು. ಅವನು ಅಲ್ಲಾವುದ್ದೀನನ ವಂಶಸ್ಥರು ಯಾರಾದರೂ ಇದ್ದರೆ ಅವರಿಗೆ ಕಿರೀಟವನ್ನು ಒಪ್ಪಿಸುವುದಾಗಿ ತಿಳಿಸಿದನು. ಆದರೆ ಯಾರೂ ಇಲ್ಲವೆಂದು ತಿಳಿದಮೇಲೆ ಘಾಜಿಮಲ್ಲಿಕನು ಸಿಂಹಾಸನವನ್ನೇರಲು ಸಮ್ಮತಿಸಿದನು. ಅಂತೆಯೆ ಅವನು 1321ರಲ್ಲಿ ಘಿಯಾಸುದ್ದೀನ್ ತುಘಲಕ್‌ಷಹಾ ಎಂಬ ಬಿರುದಿನಿಂದ ಸಿಂಹಾಸನವನ್ನೇರಿದನು. ಇದರೊಂದಿಗೆ ಖಿಲ್ಜಿ ಸಂತತಿಯವರ ಆಳ್ವಿಕೆಯು ಕೊನೆಗಂಡು ತುಘಲಕ್ ಸಂತತಿಯವರ ಆಳ್ವಿಕೆಯು ಪ್ರಾರಂಭವಾಯಿತು.

# ಅಧ್ಯಾಯ-20

## (ತುಘಲಕ್ ಸಂತತಿ 1320-1412)

### ಘಿಯಾಸುದ್ದೀನ್ ತುಘಲಕ್ (1320-1325)

ತುಘಲಕ್ ಸಂತಿಯ ಸ್ಥಾಪಕನಾದ ಘಿಯಾಸುದ್ದೀನ್ ತುಘಲಕನು ಒಂದು ಸಾಮಾನ್ಯ ಕುಟುಂಬಕ್ಕೆ ಸೇರಿದವನು. ಇವನ ಮೊದಲ ಹೆಸರು ಘಾಜಿಮಲ್ಲಿಕ್ ಎಂದಿದ್ದಿತು. ಇವನ ತಂದೆಯು ಕುತಾನ್ ಟರ್ಕರ ಪಂಗಡಕ್ಕೂ ತಾಯಿಯು ಪಂಜಾಬಿನ ಹಿಂದೂ ಜಾಟರ ಜನಾಂಗಕ್ಕೂ ಸೇರಿದವರಾಗಿದ್ದರು. ಘಾಜಿಮಲ್ಲಿಕ್ ತನ್ನ ಸಾಮರ್ಥ್ಯದಿಂದಲೂ ಮತ್ತು ರಾಜನಿಷ್ಠೆಯಿಂದಲೂ ಉನ್ನತ ಪದವಿಗೇರಿದನು. ಅಲ್ಲಾವುದ್ದೀನ್ ಖಿಲ್ಜಿಯ ಕಾಲದಲ್ಲಿ ಮಂಗೋಲರ ವಿರುದ್ಧ ಮಾಡಿದ ಯುದ್ಧಗಳಲ್ಲಿ ಪ್ರಮುಖ ಪಾತ್ರವಹಿಸಿ ಹೆಚ್ಚು ಪ್ರಸಿದ್ಧಿಗೆ ಬಂದನು. ಅನಂತರ ಘಾಜಿಮಲ್ಲಿಕ್ ದೀಪಾಲ್‌ಪುರದ ರಾಜ್ಯಪಾಲನಾಗಿ ನೇಮಕಗೊಂಡು ಮಂಗೋಲರ ಆಕ್ರಮಣಗಳನ್ನು ತಡೆಗಟ್ಟಿ ದೆಹಲಿ ಸಾಮ್ರಾಜ್ಯವನ್ನು ರಕ್ಷಿಸಿದನು. ಅಲ್ಲಾವುದ್ದೀನ್ ಖಿಲ್ಜಿಯ ನಂತರ ಸಿಂಹಾಸನವನ್ನೇರಿದ ಮುಬಾರಕ್‌ಷಹನು ಕೊಲೆಮಾಡಲ್ಪಟ್ಟ ಮೇಲೆ ದೆಹಲಿಯಲ್ಲಿ ಅರಾಜಕತೆಯುಂಟಾಯಿತು. ಈ ಅರಾಜಕತೆಗೆ ಕಾರಣನಾಗಿದ್ದ ಖುಸ್ರುವಿನ ಆಡಳಿತದಿಂದ ಬೇಸತ್ತ ನೋಬಲ್ಲರು ಅವನನ್ನು ಸಿಂಹಾಸನದಿಂದ ಇಳಿಸಲು ತೀರ್ಮಾನಿಸಿ ಘಾಜಿಮಲ್ಲಿಕ್‌ನನ್ನು ಸೈನ್ಯಸಮೇತ ದೆಹಲಿಗೆ ಬರುವಂತೆ ಆಮಂತ್ರಿಸಿದರು. ದೆಹಲಿಯಲ್ಲಿ ಘಾಜಿಮಲ್ಲಿಕ್‌ನ ಕಡೆಯವರಿಗೂ ಮತ್ತು ಖುಸ್ರುವಿನ ಕಡೆಯವರೆಗೂ ನಡೆದ ಹೋರಾಟದಲ್ಲಿ ಖುಸ್ರುವು ಸೋತು ಓಡಿಹೋಗುತ್ತಿದ್ದಾಗ ಅವನನ್ನು ಸೆರೆಹಿಡಿದು ಕೊಲ್ಲಲಾಯಿತು. ಖಿಲ್ಜಿ ಸಂತತಿಯವರಾರೂ ಇಲ್ಲದಿದ್ದರಿಂದ ನೋಬಲ್ಲರ ಅಪೇಕ್ಷೆಯ ಮೇರೆಗೆ ಘಾಜಿಮಲ್ಲಿಕ್ ಅಧಿಕಾರವನ್ನು ವಹಿಸಿಕೊಂಡು ಘಿಯಾಸುದ್ದೀನ್ ತುಘಲಕ್ ಎಂಬ ಬಿರುದಿನಿಂದ ಸಿಂಹಾಸನವನ್ನೇರಿದನು.

ಘಿಯಾಸುದ್ದೀನ್ ತುಘಲಕನು 1320ರಲ್ಲಿ ಸಿಂಹಾಸನವನ್ನೇರಿದಾಗ ಸಾಮ್ರಾಜ್ಯದ ಸ್ಥಿತಿಗತಿಗಳು ತುಂಬಾ ಹದಗೆಟ್ಟಿದ್ದವು. ಅವನು ವಿವೇಕದಿಂದ ಮತ್ತು ಚತುರತೆಯಿಂದ ರಾಜ್ಯದ ಆಡಳಿತವನ್ನು ಕೆಲವು ದಿವಸಗಳಲ್ಲಿಯೇ ವ್ಯವಸ್ಥೆಗೊಳಿಸಿದನು. ಅಲ್ಲಾವುದ್ದೀನನು ಕಾಲವಾದಮೇಲೆ ದಕ್ಷಿಣಭಾರತದಲ್ಲಿ ಅವನ ಅಧೀನಕ್ಕೊಳಪಟ್ಟಿದ್ದ ಕೆಲವು ರಾಜರುಗಳು ತಮ್ಮ ಸ್ವಾತಂತ್ರ್ಯವನ್ನು ಘೋಷಿಸಿಕೊಂಡಿದ್ದರು. ಅವರಲ್ಲಿ ವಾರಂಗಲ್ಲಿನ ಎರಡನೆ ಪ್ರತಾಪರುದ್ರನು ಒಬ್ಬನಾಗಿದ್ದನು. ಘಿಯಾಸುದ್ದೀನ್ ತುಘಲಕನು

ದೆಹಲಿಯಲ್ಲಿ ಶಾಂತಿ ವ್ಯವಸ್ಥೆಗಳನ್ನೇರ್ಪಡಿಸಿದ ನಂತರ ತನ್ನ ಗಮನವನ್ನು ದಕ್ಷಿಣದ ಕಡೆ ಹರಿಸಿದನು. ಅವನು ತನ್ನ ಹಿರಿಯಮಗ ಜುನಾಖಾನ್‌ನನ್ನು ತೆಲಂಗಾಣದ ಮೇಲೆ ದಂಡಿನೊಂದಿಗೆ ಕಳುಹಿಸಿದನು. ಜುನಾಖಾನನು ತೆಲಂಗಾಣದ ವಿರುದ್ಧ ಕೈಗೊಂಡ ದಂಡಯಾತ್ರೆಯಲ್ಲಿ ಮೊದಲಸಲ ವಿಫಲನಾದರೂ ಎರಡನೆ ದಂಡಯಾತ್ರೆಯಲ್ಲಿ ಪ್ರತಾಪರುದ್ರನನ್ನು ಸೋಲಿಸಿ ಅವನನ್ನು ಶರಣಾಗತನನ್ನಾಗಿ ಮಾಡಿದನು ಮತ್ತು ಅವನನ್ನು ದೆಹಲಿಗೆ ಕಳುಹಿಸಲಾಯಿತು. ತೆಲಂಗಾಣ ರಾಜ್ಯದ ಮೇಲ್ವಿಚಾರಣೆಯನ್ನು ಮುಸ್ಲಿಂ ರಾಜ್ಯಪಾಲನೊಬ್ಬನಿಗೆ ವಹಿಸಲಾಯಿತು. ಇದರೊಂದಿಗೆ ತೆಲಂಗಾಣದ ಕಾಕತೀಯರ ಆಳ್ವಿಕೆಯ ವೈಭವ ಮತ್ತು ಖ್ಯಾತಿಯು ಕೊನೆಗಂಡಿತು ಮತ್ತು ದಕ್ಷಿಣಭಾರತದಲ್ಲಿ ಯಾದವರ ನಂತರ ಮತ್ತೊಂದು ಹಿಂದೂ ರಾಜ್ಯವು ಮುಸ್ಲಿಮರ ನೇರ ಆಡಳಿತಕ್ಕೊಳಪಟ್ಟಿತು.

ಇದೇ ಅವಧಿಯಲ್ಲಿ ಬಂಗಾಳದಲ್ಲೂ ದಂಗೆಯು ಸಂಭವಿಸಿತು. ಈ ದಂಗೆಯನ್ನು ಅಡಗಿಸಲು ಸುಲ್ತಾನನೇ 1324ರಲ್ಲಿ ಅಪಾರ ಸೈನ್ಯದೊಂದಿಗೆ ಹೋದನು. ದಂಗೆಕೋರರನ್ನು ಹತ್ತಿಕ್ಕಲಾಯಿತು. ಬಂಗಾಳದಲ್ಲಿ ತನ್ನ ಅಧಿಕಾರವನ್ನು ಭದ್ರಪಡಿಸಿ ನಂತರ ಸುಲ್ತಾನನು ದೆಹಲಿಗೆ ಹಿಂದಿರುಗಿದನು. ಆದರೆ ಸುಲ್ತಾನನು ದೆಹಲಿಯನ್ನು ತಲುಪುವ ಮೊದಲೇ ಅವನನ್ನು ಎದುರುಗೊಳ್ಳಲು ಅವನ ಮಗ ಜುನಾಖಾನನು ರಾಜಧಾನಿಗೆ ಸಮೀಪದಲ್ಲಿ ನಿರ್ಮಿಸಿದ್ದ ವೇದಿಕೆಯು ಮುರಿದುಬಿದ್ದು ಅವನು 1325ರಲ್ಲಿ ಮರಣ ಹೊಂದಿದನು. ಅವನ ಈ ಆಕಸ್ಮಿಕ ಮರಣಕ್ಕೆ ಅವನ ಮಗನ ಒಳಸಂಚು ಕಾರಣವಾಗಿತ್ತೆಂದು ಕೆಲವು ಇತಿಹಾಸಕಾರರು ಅಭಿಪ್ರಾಯಪಟ್ಟಿರುವರು.

ಘಿಯಾಸುದ್ದೀನ್ ತುಘಲಕನು ಒಳ್ಳೆಯ ಆಡಳಿತಗಾರನಾಗಿದ್ದನು. ಅವನು ಆಡಳಿತದಲ್ಲಿ ಮಿತವ್ಯಯ ನೀತಿಯನ್ನು ಅನುಸರಿಸಿದ್ದನು. ಭೂಕಂದಾಯವನ್ನು ವ್ಯವಸ್ಥೆಗೊಳಿಸಿದನು. ಜಹಗೀರು ಪದ್ಧತಿಯನ್ನು ಮುಂದುವರಿಸಿದನು. ಹಣಕಾಸಿನ ಪರಿಸ್ಥಿತಿಯನ್ನು ಸುಧಾರಿಸಿದನು. ರೈತರಿಗೆ ಅಧಿಕಾರಿಗಳಿಂದ ಕಿರುಕುಳವುಂಟಾಗದಂತೆ ನೋಡಿಕೊಂಡನು ಮತ್ತು ತಪ್ಪಿತಸ್ಥ ಅಧಿಕಾರಿಗಳನ್ನು ಕಠಿಣವಾಗಿ ಶಿಕ್ಷಿಸುತ್ತಿದ್ದನು. ನ್ಯಾಯಾಂಗ ಮತ್ತು ಆರಕ್ಷಕ ಇಲಾಖೆಗಳು ಉತ್ತಮವಾಗಿ ಕೆಲಸ ನಿರ್ವಹಿಸುವಂತೆ ಮಾಡಿದನು. ಸೈನ್ಯದಲ್ಲಿ ಶಿಸ್ತನ್ನೇರ್ಪಡಿಸಿ ದಕ್ಷತೆಯನ್ನುಂಟುಮಾಡಿದನು. ಸೈನಿಕರನ್ನು ಕರುಣೆಯಿಂದ ಮತ್ತು ಔದಾರ್ಯದಿಂದ ನೋಡಿಕೊಳ್ಳುತ್ತಿದ್ದನು. ಈ ರೀತಿಯ ಕೆಲವು ಸುಧಾರಣೆಗಳಿಂದ ಅವನು ಸಾಮ್ರಾಜ್ಯದಲ್ಲಿ ಶಾಂತಿ ನೆಲಸುವಂತೆ ಮಾಡಿದನು.

ಘಿಯಾಸುದ್ದೀನನು ಮೃದು ಸ್ವಭಾವವುಳ್ಳವನೂ ಮತ್ತು ಉಪಕಾರಿಯೂ ಆಗಿದ್ದನು. ಅವನು ಸರಳತೆಯನ್ನು ಪ್ರೀತಿಸುತ್ತಿದ್ದನು, ಶಾಂತಿಪ್ರಿಯನಾಗಿದ್ದನು. ತನ್ನ ಧರ್ಮದಲ್ಲಿ ನಿಷ್ಠೆಯುಳ್ಳವನಾಗಿದ್ದು ಧರ್ಮದ ನೀತಿನಿಯಮಗಳನ್ನು ಕಟ್ಟುನಿಟ್ಟಾಗಿ ಆಚರಿಸುತ್ತಿದ್ದನು. ಅವನು ಇತರ ಮುಸಲ್ಮಾನ ದೊರೆಗಳಂತಲ್ಲದೆ ಸ್ವಚ್ಛವಾದ ಜೀವನ ನಡೆಸಿ ಯಾವುದೇ ರೀತಿಯ ವೈಭವ ವಿಲಾಸದ ಜೀವನಕ್ಕೆ ಆಸ್ಪದಕೊಟ್ಟಿರಲಿಲ್ಲ. ಘಿಯಾಸುದ್ದೀನ್ ತುಘಲಕನು ಬದುಕಿರುವವರೆಗೂ ತನ್ನ ಪ್ರಜೆಗಳ ಒಳಿತಿಗಾಗಿ ದುಡಿದನು ಮತ್ತು ಅಷ್ಟೇ ದಕ್ಷತೆಯಿಂದ ರಾಜ್ಯವಾಳಿದನು. ಖಿಲ್ಜಿ ದೊರೆಗಳಾದ ಮುಬಾರಕ್‌ಷಹ ಮತ್ತು ಖುಸ್ರುವಿನ ಆಳ್ವಿಕೆಯಿಂದ ಹದಗೆಟ್ಟು ಹೋಗಿದ್ದ ಆಡಳಿತಕ್ಕೆ

ಹೊಸ ಚೇತನವನ್ನು ದೊರಕಿಸಿ ಕೊಟ್ಟನು. ಸುಲ್ತಾನನ ಉತ್ತಮ ಆಡಳಿತವನ್ನು ಕುರಿತು ಅಮೀರ್‌ಖುಸ್ರುವು ಪ್ರಶಂಸೆ ಮಾಡಿದ್ದಾನೆ.

**ಮಹಮದ್-ಬಿನ್-ತುಘಲಕ್** (1325-1351)

ಘಿಯಾಸುದ್ದೀನ್ ತುಘಲಕನ ಮರಣಾನಂತರ ಅವನ ಹಿರಿಯ ಮಗನಾದ ಜುನಾಖಾನನು ಮಹಮದ್-ಬಿನ್-ತುಘಲಕ್ ಎಂಬ ಹೆಸರಿನಿಂದ ದೆಹಲಿಯ ಸಿಂಹಾಸನವನ್ನೇರಿದನು. ಇವನ ವೈಯಕ್ತಿಕ ಸ್ವಭಾವ ಮತ್ತು ನಡವಳಿಕೆಗಳ ಬಗ್ಗೆ ಇತಿಹಾಸಕಾರರು ವಿವಿಧ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಅವನೊಂದಿಗೆ ನಿಕಟ ಪರಿಚಯ ಹೊಂದಿದ್ದ ಇತಿಹಾಸಕಾರ ಭಾರಣಿಯು ಸುಲ್ತಾನನನ್ನು ಕುರಿತು ಈ ರೀತಿ ಬರೆಯುತ್ತಾನೆ. ''ಸುಲ್ತಾನ್ ಮಹಮದ್‌ನು ಸೃಷ್ಟಿಯ ಆಶ್ಚರ್ಯಗಳಲ್ಲಿ ಒಬ್ಬನೆಂದು ನನಗೆ ಹೇಳದೆ ವಿಧಿಯಿಲ್ಲ. ಸಾಮಾನ್ಯ ಜ್ಞಾನ ಮಟ್ಟವನ್ನು ಹೊಂದಿದ್ದವರು ಅವನಲ್ಲಿದ್ದ ವಿಚಿತ್ರ ಗುಣಸ್ವಭಾವಗಳನ್ನು ತಿಳಿದುಕೊಳ್ಳುವುದು ಬಹಳ ಕಷ್ಟ.'' ಮಹಮದನು ಒಳ್ಳೆಯ ಬೇಟೆಗಾರನಾಗಿದ್ದನು. ಸಮರ್ಥಯೋಧನಾಗಿದ್ದನು. ಅವನು ಧಾರಾಳತನಕ್ಕೆ ಹೆಸರು ವಾಸಿಯಾಗಿದ್ದನು. ಹಿತೀಮ್ ಮತ್ತಿತರರು ಒಂದು ವರ್ಷದಲ್ಲಿ ಎಷ್ಟು ದಾನ ಮಾಡಿದ್ದರೋ ಅದನ್ನು ಮಹಮದ್-ಬಿನ್-ತುಘಲಕನು ಒಂದು ಸಾರಿ ದಾನಮಾಡಿದನೆಂದು ಭರಣಿಯು ಹೇಳುತ್ತಾನೆ. ಕುಡಿತ ಮತ್ತು ವಿಷಯಲಂಪಟತನದಿಂದ ದೂರವಿದ್ದು ಸ್ವಚ್ಛಜೀವನ ನಡೆಸಿದನು. ಅವನು ತನ್ನ ಧರ್ಮದಲ್ಲಿ ಹೆಚ್ಚಿನ ನಿಷ್ಠೆಯನ್ನಿಟ್ಟುಕೊಂಡಿದ್ದನು. ಮಹಮದ್-ಬಿನ್-ತುಘಲಕನು ಘನವಿದ್ವಾಂಸನಾಗಿದ್ದನು. ಇವನಷ್ಟು ಪಾಂಡಿತ್ಯ ಪಡೆದಿದ್ದ ವ್ಯಕ್ತಿಯು ದೆಹಲಿಯ ಸಿಂಹಾಸನವನ್ನು ಇದುವರೆಗೂ ಏರಿರಲಿಲ್ಲ ಮತ್ತೆ ಮುಂದೆಯೂ ಏರಲಿಲ್ಲ. ಖಗೋಳಶಾಸ್ತ್ರ, ಗಣಿತ, ತರ್ಕಶಾಸ್ತ್ರ, ವಿಜ್ಞಾನ ಮತ್ತಿತರ ವಿಷಯಗಳಲ್ಲಿ ಇವನ ಪ್ರತಿಭೆ ಮತ್ತು ಪಾಂಡಿತ್ಯಗಳು ಅಸಾಮಾನ್ಯವಾಗಿದ್ದವು. ಇವನು ಒಳ್ಳೆಯ ಸಾಹಿತಿಯಾಗಿದ್ದು ಪರ್ಶಿಯನ್ ಭಾಷೆಯಲ್ಲಿ ಬಹು ಸೊಗಸಾದ ಕವನಗಳನ್ನು ರಚಿಸಿದ್ದನು. ಅವನಿಗೆ ಅಂದವಾಗಿ ಬರವಣಿಗೆ ಮಾಡುವುದು ಹಸ್ತಗತವಾಗಿತ್ತು. ದೆಹಲಿಯನ್ನಾಳಿದ ಬೇರೆ ಯಾವ ಟರ್ಕಿ ಸುಲ್ತಾನನು ಇಷ್ಟು ಪಾಂಡಿತ್ಯ ಪ್ರತಿಭೆಯನ್ನು ಹೊಂದಿರಲಿಲ್ಲ. ಆದಾಗ್ಯೂ ಮಹಮದ್-ಬಿನ್-ತುಘಲಕನು ತನ್ನ ಸ್ವಭಾವದಲ್ಲಿದ್ದ ಕೆಲವು ಅಸಹಜ ಗುಣಗಳಿಂದ ಸುಲ್ತಾನನಾಗಿ ವಿಫಲತೆ ಹೊಂದಿದನು. ಅನೇಕ ವೇಳೆ ಅವನು ತನ್ನ ಪ್ರಜೆಗಳ ಬಗ್ಗೆ ಬಹಳ ಕ್ರೂರವಾಗಿ ವರ್ತಿಸುವುದಕ್ಕೂ ಹಿಂಜರಿಯುತ್ತಿರಲಿಲ್ಲ. ಅವನು ಪೂರ್ವಾಲೋಚನೆ ಇಲ್ಲದೆ ಕೈಗೊಂಡ ಕ್ರಮಗಳಿಂದ ಉಂಟಾಗಬಹುದಾದ ಪರಿಣಾಮಗಳ ಬಗ್ಗೆ ಎಳ್ಳಷ್ಟು ಆಲೋಚಿಸದೆ ಕ್ರಮಗಳನ್ನು ಕೈಗೊಳ್ಳುತ್ತಿದ್ದನು. ಅವನು ತನ್ನ ಅಭಿಪ್ರಾಯಗಳನ್ನು ವಿರೋಧಿಸಿದವರ ಬಗ್ಗೆ ಬಹಳ ಕಠಿಣವಾಗಿ ನಡೆದುಕೊಳ್ಳುತ್ತಿದ್ದನು. ಇಂತಹ ವಿಚಿತ್ರ ಗುಣಗಳನ್ನು ಹೊಂದಿದ್ದ ಅವನನ್ನು ಕೆಲವು ಇತಿಹಾಸಕಾರರು 'ಹುಚ್ಚುದೊರೆ' 'ವೈಪರೀತ್ಯಗಳ' ಮಿಶ್ರಣ ಎಂದು ಪರಿಗಣಿಸಿರುವರು. ದೇವಗಿರಿಯಲ್ಲಿ ಹೊಸ ರಾಜಧಾನಿಯನ್ನು ಸ್ಥಾಪಿಸಿದುದು, ಖೊರಾಸನ್ ಮತ್ತು ಇರಾಕ್‌ಗಳನ್ನು ಗೆಲ್ಲಲು ಯೋಜನೆ ಹಾಕಿದುದು, ತಾಮ್ರ ಹಾಗೂ ಚರ್ಮದ ನಾಣ್ಯಗಳನ್ನು ಚಲಾವಣೆಗೆ ತಂದುದು ಅವನ ಐಲುತನಕ್ಕೆ ನಿದರ್ಶನಗಳಾಗಿವೆ.

ಬುದ್ಧಿವಂತ ದೊರೆಗೆ ಇರಬೇಕಾಗಿದ್ದ ವ್ಯಾವಹಾರಿಕ ಜ್ಞಾನವು ಅವನಲ್ಲಿರಲಿಲ್ಲ. ಔಚಿತ್ಯವಿಲ್ಲದೆ ಅವನು ಕೈಗೊಂಡ ಕ್ರಮಗಳು ಭಾರತದಲ್ಲಿ ಟರ್ಕರ ಸಾಮ್ರಾಜ್ಯದ ಅವನತಿಯನ್ನು ತ್ವರಿತಗೊಳಿಸಿದವು. ಎರಡೂವರೆ ದಶಕಗಳ ಕಾಲದ ಅವನ ಆಳ್ವಿಕೆಯಿಂದುಂಟಾದ ದುಷ್ಪರಿಣಾಮಗಳು ಅವನ ಗುಣ ಸ್ವಭಾವಗಳಲ್ಲಿಯೆ ಅಂತರ್ಗತವಾಗಿದ್ದವು.

**ಆಡಳಿತ ಕ್ರಮ: ಕಂದಾಯ ಸುಧಾರಣೆ**

ಮಹಮದ್-ಬಿನ್-ತುಘಲಕನು ಕಷ್ಟಪಟ್ಟು ದುಡಿಯುವ ಸ್ವಭಾವದವನಾಗಿದ್ದನು. ರಾಜ್ಯಾಡಳಿತದಲ್ಲಿ ಕೆಲವು ಹೊಸ ಸುಧಾರಣೆಗಳನ್ನು ಜಾರಿಗೆ ತರಲು ಪ್ರಯತ್ನಿಸಿದನು. ಆದರೆ ಆತನು ಸುಧಾರಣೆ ಹೆಸರಿನಲ್ಲಿ ಕೈಗೊಂಡ ಕ್ರಮಗಳು ವಿಷರ್ಯಾಸವಾಗಿ ಮುಕ್ತಾಯಗೊಂಡು ಪ್ರಜೆಗಳಿಗೆ ಅವುಗಳಿಂದ ತೊಂದರೆಯಾಯಿತೇ ಹೊರತು ಯಾವ ಅನುಕೂಲವೂ ಆಗಲಿಲ್ಲ. ಅವನ ಈ ವಿಫಲತೆಗೆ ಆಡಳಿತಗಾರನಿಗೆ ಇರಬೇಕಾಗಿದ್ದ ಸಾಮಾನ್ಯ ಪ್ರಜ್ಞೆಯ ಕೊರತೆಯು ಮತ್ತು ತಾನು ಕೈಗೊಂಡ ಕ್ರಮಗಳನ್ನು ಜಾರಿಗೆ ತರುವುದರಲ್ಲಿ ತಾಳ್ಮೆಯಿಲ್ಲದೆ ಹೋದುದೂ ಕಾರಣವಾಗಿತ್ತು. ಮಹಮದ್-ಬಿನ್-ತುಘಲಕನು ಸಿಂಹಾಸನವನ್ನೇರಿದ ತಕ್ಷಣವೇ ಕೈಗೊಂಡ ಸುಧಾರಣೆಯೆಂದರೆ ಕಂದಾಯ ಪದ್ಧತಿಯನ್ನು ವ್ಯವಸ್ಥೆ ಗೊಳಿಸುವುದಾಗಿತ್ತು. ಮಹಮದ್-ಬಿನ್-ತುಘಲಕನು ಅಲ್ಲಾವುದ್ದೀನ್ ಖಿಲ್ಜಿಯಂತೆ ಸಾಮ್ರಾಜ್ಯದಲ್ಲಿ ಆಗಾಗ್ಗೆ ನಡೆಯುತ್ತಿದ್ದ ದಂಗೆ ಮತ್ತು ಪಿತೂರಿಗಳಿಗೆ ಜನರ ಶ್ರೀಮಂತಿಕೆಯು ಕಾರಣವೆಂಬುದಾಗಿ ಭಾವಿಸಿದ್ದುದಾಗಿ ಕಂಡುಬರುತ್ತದೆ. ಭೂಕಂದಾಯದ ಬಗ್ಗೆ ಎಲ್ಲ ವಿವರಗಳನ್ನೂ ತಿಳಿಸುವ ದಾಖಲಾತಿಗಳನ್ನು ಸಿದ್ಧಪಡಿಸುವಂತೆ ತನ್ನ ಅಧಿಕಾರಿಗಳಿಗೆ ಮತ್ತು ಪ್ರಾಂತ್ಯಾಧಿಕಾರಿಗಳಿಗೆ ನಿರೂಪ ಕಳುಹಿಸಿದನು. ಕಂದಾಯ ವಸೂಲಿಯಲ್ಲಿದ್ದ ಭ್ರಷ್ಟಾಚಾರ ಮತ್ತು ಲಂಚಗುಳಿತನವನ್ನು ತಡೆಹಿಡಿಯುವುದೂ ಮತ್ತು ರಾಜ್ಯದ ಕಂದಾಯವನ್ನು ಹೆಚ್ಚಿಸುವುದು ಅವನ ಕಂದಾಯ ಸುಧಾರಣೆಯ ಮುಖ್ಯ ಉದ್ದೇಶವಾಗಿತ್ತು. ಈ ಉದ್ದೇಶಗಳನ್ನು ಹೊಂದಿದ್ದ ಸುಲ್ತಾನನು 1327ರಲ್ಲಿ ದೋಬ್ ಪ್ರಾಂತ್ಯದಲ್ಲಿ ಭೂಕಂದಾಯದ ದರವನ್ನು ಹೆಚ್ಚಿಸಿದನು ಮತ್ತು ಕಂದಾಯವನ್ನು ಕಟ್ಟುನಿಟ್ಟಾಗಿ ವಸೂಲಿಮಾಡುವಂತೆ ತನ್ನ ಅಧಿಕಾರಿಗಳಿಗೆ ಆಜ್ಞೆಯಿತ್ತನು. ರಾಜ್ಯದ ಆದಾಯವನ್ನು ಹೆಚ್ಚಿಸಿಕೊಳ್ಳಲು ಕಂದಾಯವನ್ನು ಹೆಚ್ಚಿಸುವುದರಲ್ಲಿ ತಪ್ಪೇನಿಲ್ಲ. ಆದರೆ ಆ ಸಮಯದಲ್ಲಿದೋಬ್ ಪ್ರಾಂತ್ಯದಲ್ಲಿ ದುರಾದೃಷ್ಟವಶಾತ್ ಕ್ಷಾಮವು ತಲೆದೋರಿ ಜನರು ಬಹಳ ಕಷ್ಟಕರವಾದ ಜೀವನ ನಡೆಸುತ್ತಿದ್ದರು. ಮಹಮದ್-ಬಿನ್-ತುಘಲಕನು ಇದಾವುದನ್ನೂ ಗಣನೆಗೆ ತೆಗುದುಕೊಳ್ಳದೆ ಕಂದಾಯವನ್ನು ಈ ಸನ್ನಿವೇಶದಲ್ಲಿ ಹೆಚ್ಚಿಸಿದುದು ಅನುಚಿತವಾಗಿತ್ತು. ಬರಗಾಲದ ಬೇನೆಯಿಂದ ಕಂಗೆಟ್ಟಿದ್ದ ಕೆಲವು ಜನಗಳು ಹೆಚ್ಚಳ ಕಂದಾಯವನ್ನು ಕೊಡಲಾರದೆ ದಂಗೆಯೆದ್ದರು ಮತ್ತೆ ಕೆಲವರು ತಮ್ಮ ಭೂಮಿಗಳನ್ನು ಬಿಟ್ಟು ಕಾಡಿಗೆ ಹೋದರು. ಇದರಿಂದ ಕೋಪಗೊಂಡ ಸುಲ್ತಾನನು ದಂಗೆಗಳನ್ನು ಅಡಗಿಸುವುದಕ್ಕೂ ಮತ್ತು ಕಾಡಿಗೆ ಹೋಗಿದ್ದ ರೈತರನ್ನು ಪುನಃ ಬಂದು ನೆಲಸುವಂತೆ ಮಾಡುವುದಕ್ಕೂ ಸೈನ್ಯವನ್ನು ಕಳುಹಿಸಿದನು. ಈ ಸೈನ್ಯವು ಮುಗ್ಧ ಜನಗಳ ಮೇಲೆ ಬಹಳ ಕ್ರೂರವಾಗಿ ವರ್ತಿಸಿತು. ಇದರಿಂದ ಸುಲ್ತಾನನ

ಜನಪ್ರಿಯತೆ ಕಡಿಮೆಯಾಯಿತು. ಸುಲ್ತಾನನು ಆದಾಗ್ಯೂ ಬಹಳ ತಡವಾಗಿಯಾದರೂ ಕ್ಷಾಮನಿವಾರಣೆಗೆ ಕೆಲವು ಕ್ರಮಗಳನ್ನು ಕೈಗೊಂಡನು. ಕ್ಷಾಮಪರಿಹಾರ ಕ್ರಮವಾಗಿ ಸುಲ್ತಾನನು ರೈತರಿಗೆ ಸರ್ಕಾರದಿಂದ ಮುಂಗಡ ಸಾಲಕೊಡಿಸಿ ಬಾವಿಗಳನ್ನು ತೋಡಿಕೊಳ್ಳಲು ಸಹಾಯ ಮಾಡಿದನು. ಆದರೆ ಈ ಪರಿಹಾರವು ಬಹಳ ತಡವಾಗಿ ಬಂದಿತು. ಭೂಮಿಯ ಆಗಲೇ ಪಾಳು ಬಿದ್ದಿದ್ದಿತು. ಆದ್ದರಿಂದ ಜನರಿಗೆ ಇದರಿಂದ ಏನೂ ಪ್ರಯೋಜನವಾಗಲಿಲ್ಲ. ಸುಲ್ತಾನನ ಅಪ್ರಿಯತೆಯು ಹೆಚ್ಚಾಯಿತು.

**ರಾಜಧಾನಿಯ ವರ್ಗಾವಣೆ**

ಮಹಮದ್-ಬಿನ್-ತುಘಲಕನು ಕೈಗೊಂಡ ಹಲವಾರು ಅಸಂಬದ್ಧ ಮತ್ತು ಅನುಪಯುಕ್ತ ಕ್ರಮಗಳಲ್ಲಿ ರಾಜಧಾನಿಯ ವರ್ಗಾವಣೆಯೂ ಒಂದಾಗಿದ್ದಿತು. ಅವನ ಈ ಕ್ರಮದಿಂದ ಪ್ರಜೆಗಳಿಗೆ ಅನುಕೂಲಕ್ಕಿಂತ ಅನಾನುಕೂಲವೇ ಹೆಚ್ಚಾಯಿತು. ದೆಹಲಿಗೆ ಬದಲಾಗಿ ದೇವಗಿರಿಯನ್ನು ತನ್ನ ಸಾಮ್ರಾಜ್ಯದ ರಾಜಧಾನಿಯನ್ನಾಗಿ ಮಾಡಿಕೊಳ್ಳಬೇಕೆಂದು ಬಯಸಿ ಸುಲ್ತಾನನು ರಾಜಧಾನಿಯನ್ನು ವರ್ಗಾಯಿಸಿದನು. ಅವನು ತನ್ನ ನೂತನ ರಾಜಧಾನಿಗೆ ದೌಲತಾಬಾದ್ ಎಂದು ಹೆಸರಿಟ್ಟನು. ಸಾಮ್ರಾಜ್ಯದ ರಾಜಧಾನಿಯನ್ನು ಬದಲಾಯಿಸಲು ಎರಡು ಮುಖ್ಯ ಕಾರಣಗಳಿದ್ದವು. ಈ ವೇಳೆಗಾಗಲೇ ದೆಹಲಿಯ ಸಾಮ್ರಾಜ್ಯವು ವಿಶಾಲವಾಗಿ ಬೆಳೆದಿದ್ದಿತು. ಸಾಮ್ರಾಜ್ಯವು ಉತ್ತರದಲ್ಲಿ ದೋಬ್ ಪ್ರಾಂತ್ಯವನ್ನೂ ಪಶ್ಚಿಮದಲ್ಲಿ ಲಾಹೋರ್ ಮತ್ತು ಪಂಜಾಬಿನ ಮೈದಾನಗಳು ಹಾಗೂ ಸಿಂಧೂ ನದಿಯಿಂದ ಗುಜರಾತಿನ ತೀರ ಪ್ರದೇಶದವರೆಗೂ ಪೂರ್ವದಲ್ಲಿ ಬಂಗಾಳವನ್ನೂ ಮಧ್ಯಭಾಗದಲ್ಲಿ ಮಾಳವ, ಉಜ್ಜೈನಿ, ಮಹೋಬ ಮತ್ತು ಧಾರ್ ರಾಜ್ಯಗಳನ್ನು ಒಳಗೊಂಡಿತ್ತು. ದಕ್ಷಿಣ ಭಾರತದಲ್ಲಿ ಪ್ರಮುಖ ಹಿಂದೂ ರಾಜ್ಯಗಳೆಲ್ಲವೂ ದೆಹಲಿಯ ಸಾರ್ವಭೌಮತ್ವವನ್ನು ಒಪ್ಪಿಕೊಂಡಿದ್ದವು. ಸಾಮ್ರಾಜ್ಯದ ಆಡಳಿತ ಕೇಂದ್ರವಾಗಿದ್ದ ದೆಹಲಿಯಿಂದ ವಿಶಾಲ ಸಾಮ್ರಾಜ್ಯದ ಮೇಲೆ ಹತೋಟಿಯನ್ನಿಟ್ಟುಕೊಳ್ಳುವುದು ಕಷ್ಟವೆಂದು ತಿಳಿದ ಸುಲ್ತಾನನು ಸಾಮ್ರಾಜ್ಯದ ಮಧ್ಯಭಾಗದಲ್ಲಿದ್ದ ದೌಲತಾಬಾದಿಗೆ ರಾಜಧಾನಿಯನ್ನು ವರ್ಗಾಯಿಸಲು ನಿರ್ಧರಿಸಿದನು. ಇತಿಹಾಸಕಾರ ಭರಣಿಯು ಹೊಸ ರಾಜಧಾನಿಯಾದ ದೌಲತಾಬಾದ್ ಪಟ್ಟಣವು ದೆಹಲಿ ಗುಜರಾತ್, ಲಕ್ನಾವತಿ, ಸತ್‌ಗೋವನ್, ಸೋನಾರ್‌ಗಾಮ್, ತೆಲಂಗಾಣ, ಕಂಪಿಲ, ದೋರಸಮುದ್ರ ಮತ್ತು ಮಾಬರ್ ರಾಜ್ಯಗಳಿಗೆ ಸಮದೂರದಲ್ಲಿತ್ತೆಂದು ತಿಳಿಸುತ್ತಾನೆ. ದೆಹಲಿ ಮತ್ತು ಅದರ ಸುತ್ತಮುತ್ತಲಿನ ಪ್ರದೇಶಗಳ ಮೇಲೆ ಮಂಗೋಲರು ಆಗಾಗ್ಗೆ ಧಾಳಿಮಾಡುತ್ತಿದ್ದುದರಿಂದ ಜನರ ಆಸ್ತಿ ಪಾಸ್ತಿಗಳಿಗೆ ಮತ್ತು ಪ್ರಾಣಕ್ಕೆ ಯಾವಾಗಲೂ ಗಂಡಾಂತರ ಉಂಟಾಗುತ್ತಿದ್ದುದರಿಂದ ರಾಜಧಾನಿಯನ್ನು ವರ್ಗಾಯಿಸಲು ನಿರ್ಧರಿಸಿದನು. ರಾಜಧಾನಿಯ ಈ ವರ್ಗಾವಣೆಯ ಕೆಲಸವು ಸದುದ್ದೇಶದಿಂದ ಕೂಡಿದ್ದಿತು. ಸುಲ್ತಾನನು ದೇವಗಿರಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡರೆ ತನ್ನ ಅಧಿಕಾರವನ್ನು ಉತ್ತರ ಭಾರತದ ಮೇಲೆ ಅಲ್ಲದೆ ದಕ್ಷಿಣ ಭಾರತದಲ್ಲಿದ್ದ ತನ್ನ ಅಧೀನ ರಾಜ್ಯಗಳ ಮೇಲೂ ಹೊಂದಿರಲು ಸಾಧ್ಯವೆಂದು ತಿಳಿದಿದ್ದನು.

ಸುಲ್ತಾನನು ಕೇವಲ ಸರ್ಕಾರದ ಇಲಾಖೆಗಳನ್ನು ವರ್ಗಾಯಿಸುವುದರಲ್ಲಿ ತೃಪ್ತನಾಗಿದ್ದರೆ ಹೆಚ್ಚಿನ ತೊಂದರೆಯಿಲ್ಲದೆ ತನ್ನ ಯೋಜನೆಯನ್ನು ಕಾರ್ಯಗತಮಾಡಬಹುದಾಗಿತ್ತು. ಆದರೆ ಅವನು ದೆಹಲಿಯ ಸಮಸ್ತ ಜನರೂ ದೌಲತಾಬಾದಿಗೆ ಹೋಗುವಂತೆ ಆಜ್ಞೆಮಾಡಿದುದು ಅವನು ಮಾಡಿದ ದೊಡ್ಡ ಅವಿವೇಕದ ಕೆಲಸವಾಗಿತ್ತು. ಜನಗಳ ಪ್ರಯಾಣಕ್ಕೆ ಎಲ್ಲ ರೀತಿಯ ಅನುಕೂಲಗಳನ್ನು ಕಲ್ಪಿಸಿಕೊಟ್ಟನು. ದೆಹಲಿಯಿಂದ ದೌಲತಾಬಾದಿಗೆ ರಸ್ತೆಯನ್ನು ನಿರ್ಮಿಸಿದನು. ಪ್ರಯಾಣ ಕಾಲದಲ್ಲಿ ಜನರಿಗೆ ಪುಕ್ಕಟೆ ಆಹಾರ ಮತ್ತು ವಸತಿಗೆ ಅನುಕೂಲಗಳನ್ನು ಮಾಡಿದನು. ಪ್ರಯಾಣಕಾಲದಲ್ಲೂ ಮತ್ತು ಅವರು ದೌಲತಾಬಾದನ್ನು ತಲುಪಿದ ಮೇಲೂ ಅವರಿಗೆ ಅನುಕೂಲಗಳನ್ನು ಕಲ್ಪಿಸಿ ಕೊಡುವುದರಲ್ಲಿ ಬಹಳ ಔದಾರ್ಯ ತೋರಿಸಿದನು. ಆದರೆ ಇವೆಲ್ಲವೂ ನಿಷ್ಪ್ರಯೋಜಕಗಳಾದವು. ಅನೇಕ ತಲೆಮಾರುಗಳಿಂದ ದೆಹಲಿಯಲ್ಲಿ ನೆಲೆಸಿದ್ದ ಜನಗಳು ತಮ್ಮ ಅನೇಕ ಸಂಬಂಧಗಳಿಂದ ಅವರ ಪ್ರೀತಿಗೆ ಪಾತ್ರವಾಗಿದ್ದ ಆ ಪಟ್ಟಣವನ್ನು ಬಿಡಲಾರದ ಮನಸ್ಸಿನಿಂದ ಬಿಟ್ಟುಹೊರಟರು. ಸುಮಾರು ಏಳುನೂರು ಮೈಲಿಗಳ ದೂರದ ಪ್ರಯಾಣದಲ್ಲಿ ಅವರು ಅನುಭವಿಸಿದ ಕಷ್ಟಗಳು ವರ್ಣನಾತೀತವಾಗಿದ್ದವು. ಮನೆಮಠಗಳನ್ನು ಬಿಟ್ಟು ಬಂದ ವೇದನೆಯಿಂದಲೂ ದಣಿವು ಮೊದಲಾದವುಗಳಿಂದಲೂ ಮಾರ್ಗಮಧ್ಯದಲ್ಲೇ ಕೆಲವರು ಅಸುನೀಗಿದರು. ದೌಲತಾಬಾದನ್ನು ತಲುಪಿದ ಕೆಲವರು ಅಪರಿಚಿತವಾದ ಆ ಪ್ರದೇಶದಲ್ಲಿ ಗಡೀಪಾರು ಮಾಡಲ್ಪಟ್ಟವರಂತೆ ಕಷ್ಟವನ್ನು ಅನುಭವಿಸಿ ಅಸುನೀಗಿದರು. ರಾಜಧಾನಿಯ ವರ್ಗಾವಣೆಯ ಬಗ್ಗೆ ಇಬನ್‌ಬಟೂಟನು ಹೇಳಿರುವ ಮಾತು ಸುಲ್ತಾನನ ಸ್ವಭಾವದ ಬಗ್ಗೆ ಉತ್ಪ್ರೇಕ್ಷೆ ಮಾಡಿ ಹೇಳಿದಂತಿದೆ. ದೆಹಲಿಯ ನಿವಾಸಿಗಳಲ್ಲಿ ಯಾರಾದರೂ ಮನೆಗಳಲ್ಲಿ ಉಳಿದುಕೊಂಡಿದ್ದಾರೋ ಎಂದು ಹುಡುಕಲಾರಂಭಿಸಿದಾಗ ಒಬ್ಬ ಕುಂಟ ಮತ್ತು ಕುರುಡನನ್ನು ಪತ್ತೆಮಾಡಿ ಅವರು ದೌಲತಾಬಾದಿಗೆ ಹೋಗಲು ನಿರಾಕರಿಸಲು ಕುರುಡನನ್ನು ಅಲ್ಲೆ ಕೊಲ್ಲಲಾಯಿತೆಂದು ಮತ್ತು ಕುಂಟನನ್ನು ಆನೆಯ ಕಾಲಿಗೆ ಕಟ್ಟಿ ಎಳೆಸಿಕೊಂಡು ಹೋಗಲು ಸುಲ್ತಾನನು ಆಜ್ಞೆಮಾಡಿದನೆಂದು ಅವನು ಹೇಳುತ್ತಾನೆ. ಸುಲ್ತಾನನು ತನ್ನ ಆಜ್ಞೆಗಳನ್ನು ಕಠಿಣವಾಗಿ ಜಾರಿಗೆ ತಂದುದು ನಿಜ. ಆದರೆ ಸುಲ್ತಾನನು ಜನರಿಗೆ ಕೊನೆಮೊದಲಿಲ್ಲದಷ್ಟು ತೊಂದರೆಗಳನ್ನು ಕೊಡಬೇಕೆಂಬ ಉದ್ದೇಶವನ್ನು ಹೊಂದಿದ್ದು ಹೀಗೆ ಮಾಡಿದನೆಂದು ಅವನ ಮೇಲೆ ಅಪವಾದ ಹೊರಿಸುವುದು ಸಮಂಜಸವಲ್ಲ. ಅವನ ಯೋಜನೆಗಳನ್ನು ಕಾರ್ಯ ರೂಪಕ್ಕೆ ತರುವುದು ಕಷ್ಟವೆಂದು ತಿಳಿದಮೇಲೆ ಸುಲ್ತಾನನು ನಿವಾಸಿಗಳನ್ನು ದೆಹಲಿಗೆ ಹಿಂದಿರುಗುವಂತೆ ಆಜ್ಞೆಮಾಡಿದನು. ಈ ಸಮಯಕ್ಕಾಗಲೇ ಕೆಲವು ವರ್ಷಗಳು ಉರುಳಿದ್ದವು. ದೌಲತಾಬಾದಿನಿಂದ ಹಿಂದಿರುಗಿದ ಜನರು ಬದಲಾಯಿಸಿದ ಸನ್ನಿವೇಶಗಳಿಗೆ ಹೊಂದಿಕೊಳ್ಳುವುದರಲ್ಲಿ ಅನೇಕ ಕಷ್ಟಗಳನ್ನು ಎದುರಿಸಬೇಕಾಯಿತು. ದೆಹಲಿಯು ನಿರ್ಜನ ಪ್ರದೇಶವಾಗಿತ್ತು ಮತ್ತು ಅದನ್ನು ಪುನಃ ಜನಭರಿತನಗರವನ್ನಾಗಿ ಮಾಡಲು ಸುಲ್ತಾನನು ಸಾಮ್ರಾಜ್ಯದ ವಿವಿಧ ಬಾಗಗಳಿಂದ ವಿದ್ವಾಂಸರನ್ನು, ವರ್ತಕರನ್ನು, ಭೂಮಾಲೀಕರನ್ನು ಮತ್ತಿತರರನ್ನು ಅಲ್ಲಿಗೆ ಬಂದು ನೆಲಸುವಂತೆ ಆಹ್ವಾನಿಸಿದನು ಆದರೆ ದೆಹಲಿಯು ಹಿಂದಿನ ಶೋಭೆಯನ್ನು ಪುನಃ ಪಡೆಯಲಿಲ್ಲವೆಂದು ಮತ್ತು ದೆಹಲಿಯ ಕೆಲವು ಭಾಗಗಳಲ್ಲಿ ಜನಗಳಿಲ್ಲದಿದ್ದನ್ನು ತಾನು ನೋಡಿದೆನೆಂದು ಇಬನ್‌ಬಟೂಟನು ಹೇಳುತ್ತಾನೆ.

ದೌಲತಾಬದ್ ತೊಗಲಕನ ಅವಿವೇಕತನದ ನೀತಿಯ ಸ್ಮಾರಕವಾಗಿ ಉಳಿಯಿತು ಎಂದು ಆಂಗ್ಲ ಇತಿಹಾಸಕಾರ ಲೇನ್‌ಪೂಲ್ ಹೇಳುತ್ತಾನೆ. ರಾಜಧಾನಿಯ ವರ್ಗಾವಣೆಯ ಯೋಜನೆಯು ಸಂಪೂರ್ಣವಾಗಿ ವಿಫಲವಾಯಿತು. ಈ ಯೋಜನೆಯುಯಶಸ್ವಿಯಾಗಿದ್ದರೆ ಸುಲ್ತಾನನು ಸಾಮ್ರಾಜ್ಯದ ದೂರದ ಪ್ರಾಂತ್ಯಗಳ ಮೇಲೆ ತನ್ನ ಅಧಿಕಾರರವನ್ನಿಟ್ಟುಕೊಳ್ಳಲು ಸಾಧ್ಯವಾಗುತ್ತಿತ್ತು ಎನ್ನುವುದು ವಿವಾದಾಸ್ಪದ ವಿಷಯ. ಆವನ ಸಾಮ್ರಾಜ್ಯದ ಉತ್ತರದ ಗಡಿಗೆ ದೌಲತಾಬಾದ್ ಬಹಳ ದೂರದಲ್ಲಿತ್ತೆಂಬುದನ್ನು ಸುಲ್ತಾನನು ಮನಗಾಣಲಿಲ್ಲ. ಹಿಂದುಗಳ ದಂಗೆಗಳು ಮತ್ತು ಮಂಗೋಲರ ಆಕ್ರಮಣಗಳು ಆವನ ಅಧಿಕಾರವನ್ನು ಉತ್ತರಭ್ಹಾರತದಲ್ಲಿ ಯಾವಾಗಲಾದರೂ ವಿಪತ್ತಿಗೊಳಗು ಮಾಡಬಹುದೆಂಬುದನ್ನು ಆವನು ಗಮನಿಸಲಿಲ್ಲ. ಅಂತೆಯೆ ದೌಲತಾಬಾದಿಗೆ ಬಹಳ ದೂರವಿದ್ದ ಬಂಗಾಳದ ಮೇಲೆ ಅಧಿಕಾರವನ್ನು ಹೊಂದಿರುವುದು ಕಷ್ಟವೆಂಬುದನ್ನು ಅವನು ಆಲೋಚಿಸಿದಂತೆ ಕಾಣುವುದಿಲ್ಲ. ಮೇಲಾಗಿ ದಖನ್ನಿನಲ್ಲಿ ಹಿಂದು ರಾಜ್ಯಗಳ ಮಧ್ಯೆ ಮುಸ್ಲಿಮರ ರಾಜಧಾನಿಯೊಂದನ್ನು ಸ್ಥಾಪಿಸಲು ಮಾಡಿದ ಪ್ರಯತ್ನವು ವಿವೇಕ ರಹಿತ ಕೆಲಸವಾಗಿತ್ತು. ಹೀಗೆ ಮಹಮದ್-ಬಿನ್-ತುಘಲಕನು ರಾಜಧಾನಿಯನ್ನು ಅಲ್ಲಿಂದಿಲ್ಲಿಗೆ ವರ್ಗಾಯಿಸಿ ಏನನ್ನೂ ಸಾಧಿಸಿದೆ 'ಹುಚ್ಚುದೊರೆ' ಎಂಬ ಅಪಹಾಸ್ಯಕ್ಕೀಡಾದನು.

### ಮಂಗೋಲರ ಧಾಳಿ

ಮಹಮದ್-ಬಿನ್-ತುಘಲಕನು ದೆಹಲಿಯಿಂದ ದೇವಗಿರಿಗೆ ರಾಜಧಾನಿಯನ್ನು ಬದಲಾಯಿಸಿದ ಕೆಲವು ದಿವಸಗಳಲ್ಲಿಯೆ ಮಂಗೋಲರು ಪಂಜಾಬಿನ ಮೇಲೆ ಧಾಳಿಮಾಡಿ ದೆಹಲಿಯವರೆಗೂ (1328-29) ಮುನ್ನುಗ್ಗಿ ಬಂದರು. ಮಹಮದನು ಗಡಿನಾಡಿನ ರಕ್ಷಣೆಗೆ ಬಿಗಿಯಾದ ಯಾವ ಕ್ರಮಗಳನ್ನೂ ಕೈಗೊಂಡಿರಲಿಲ್ಲ. ಆದ್ದರಿಂದ ಅವನು ಮಂಗೋಲರಿಗೆ ಅಪಾರ ಹಣವನ್ನು ಕೊಟ್ಟು ಅವರು ಹಿಂದಿರುಗಿ ಹೋಗುವಂತೆ ಮಾಡಿದನು. ಅವನ ಈ ನೀತಿಯು ಬಲ್ಬನ್ ಮತ್ತು ಅಲ್ಲಾವುದ್ದೀನ್ ಖಿಲ್ಜಿಯು ಮಂಗೋಲರನ್ನು. ಹೊಡೆದೋಡಿಸಲು ಕೈಗೊಂಡಿದ್ದ ಯಶಸ್ವಿಯುತ ಸಾಹಸದ ನೀತಿಗೆ ವಿರುದ್ಧವಾಗಿತ್ತು. ಮಹಮದನು ಸಮರ್ಥವಾಗಿ ಮಂಗೋಲರ ವಿರುದ್ಧ ಹೋರಾಡುವುದಕ್ಕೆ ಬದಲಾಗಿ ಲಂಚಕೊಟ್ಟು ಅವರನ್ನು ಹಿಂದಕ್ಕೆ ಕಳುಹಿಸುವುದರ ಮೂಲಕ ತನ್ನ ಅಸಾಮರ್ಥ್ಯವನ್ನು ತೋರ್ಪಡಿಸಿಕೊಂಡನು.

### ನಾಣ್ಯ ಸುದಾರಣೆ

ಮಹಮದನು ಮಂಗೋಲರ ಧಾಳಿಯ ನಂತರ ಹೊಸ ನಾಣ್ಯಗಳನ್ನು ಚಲಾವಣೆಗೆ ತಂದನು. ಆವನು ಇದುವರೆಗೂ ಜಾರಿಯಲ್ಲಿದ್ದ ಚಿನ್ನ ಮತ್ತು ಬೆಳ್ಳಿಯ ನಾಣ್ಯಗಳಿಗೆ ಬದಲಾಗಿ ತಾಮ್ರ ಹಿತ್ತಾಳೆ ಮತ್ತು ಚರ್ಮದ ನಾಣ್ಯಗಳನ್ನು ಜಾರಿಗೆ ತಂದನು. ಇಂತಹ ಒಂದು ಪ್ರಯೋಗಕ್ಕೆ ಪ್ರಬಲ ಕಾರಣವೂ ಇದ್ದಿತು. ರಾಜಧಾನಿಯ ವರ್ಗಾವಣೆ, ಮಂಗೋಲರಿಗೆ ಅಪಾರ ಹಣವನ್ನು ಕೊಟ್ಟು ಅವರನ್ನು ಹಿಂದಕ್ಕೆ ಕಳುಹಿಸಿದುದು ಮತ್ತು ಬಹಳ ಉದಾರವಾಗಿ ದಾನಧರ್ಮಗಳನ್ನು ಮಾಡುತ್ತಿದ್ದುದು ದಿನೇ ದಿನೇ ಹೆಚ್ಚುತ್ತಿದ್ದಸೈನ್ಯ, ದಖರ್ಚು ವೊದಲಾದವುಗಳಿಂದಾಗಿ ರಾಜ್ಯದ ಖಜಾನೆಯು ಹಣಕಾಸಿನ ದುರವಸ್ಥೆಗೀಡಾಗಿಸುಲ್ತಾನನು ಹೊಸ ನಾಣ್ಯಗಳನ್ನು ಜಾರಿಗೆ

ತರಬೇಕಾಯಿತೆಂದು ಭರಣಿಯು ತಿಳಿಸುತ್ತಾನೆ. ತಾಮ್ರ ಹಿತ್ತಾಳೆ ಮತ್ತು ಚರ್ಮದ ನಾಣ್ಯಗಳ ಜೊತೆಗೆ ಸುಲ್ತಾನನು ಕಾಗದದ ನೋಟುಗಳನ್ನು ಜಾರಿಗೆ ತಂದನು. ಈ ಕಾಲದಲ್ಲಿ ಚೀನಾದಲ್ಲಿಯೂ ಕಾಗದದ ನೋಟುಗಳು ಜಾರಿಗೆ ಬಂದಿದ್ದವು. ಇದರಿಂದ ಬಹುಶಃ ಸುಲ್ತಾನನೂ ಪ್ರಭಾವಿತನಾಗಿ ಕಾಗದದ ನೋಟುಗಳನ್ನು ಜಾರಿಗೆ ತಂದಿರಬಹುದೆಂದು ಅಭಿಪ್ರಾಯಪಡಲಾಗಿದೆ. ಸುಲ್ತಾನನು ಹೊಸ ನಾಣ್ಯಗಳನ್ನು ಜಾರಿಗೆ ತರಲು ಕಾರಣ ಯಾವುದೇ ಇದ್ದರು, ಹಣಕಾಸಿನ ದೃಷ್ಟಿಯಿಂದ ಅವನು ಕೈಗೊಂಡ ಕ್ರಮವು ಪೂರ್ಣವಾಗಿ ಅಸಮಂಜಸವಾಗಿರಲಿಲ್ಲ. ಆದರೆ ಸುಲ್ತಾನನು ಈ ಕ್ರಮವು ವ್ಯಾವಹಾರಿಕತೆಯಲಿ್ಲ ಪೂರ್ಣವಾಗಿ ಯಶಸ್ವಿಯಾಗಲು ಸೂಕ್ತವಾದ ಕ್ರಮಗಳನ್ನು ಕೈಗೊಳ್ಳಲಿಲ್ಲ. ಇದರಿಂದಾಗಿ ಅನೇಕ ಜನಗಳು ಕೃತಕ ನಾಣ್ಯಗಳನ್ನು ಚಲಾವಣೆಗೆ ತಂದು ಶ್ರೀಮಂತರಾದರು. ಸರ್ಕಾರದ ನಾಣ್ಯಗಳಿಗೂ ಕೃತಕ ನಾಣ್ಯಗಳಿಗೂ ವ್ಯತ್ಯಾಸವೇ ಇಲ್ಲದಂತಾಗಿ ಹಣಕ್ಕೆ ಬೆಲೆಯೇ ಇಲ್ಲದಂತಾಯಿತು ಪ್ರತಿಯೊಬ್ಬ ಹಿಂದುವಿನ ಮನೆಯೂ ಟಂಕಸಾಲೆಯಾಗಿದ್ದತೆಂದು ಭರಣಿಯು ಪಕ್ಷಪಾತವಾದ ಹೇಳಿಕೆಯನ್ನಿತ್ತಿರುವನು. ಏನೇ ಆಗಲಿ ಮಹಮದನ ನಾಣ್ಯ ಸುಧಾರಣೆಯ ಒಟ್ಟು ಪರಿಣಾಮವೆಂದರೆ ವಿದೇಶೀ ವರ್ತಕರು ತಮ್ಮ ಪದಾರ್ಥಗಳಿಗೆ ಈ ಹೊಸ ನಾಣ್ಯಗಳ ಬೆಲೆಗಳು ಸರಿಸಮವೆಂದು ಒಪ್ಪಿಕೊಳ್ಳಲು ನಿರಾಕರಿಸಿದರು. ಇದರಿಂದ ವ್ಯಾಪಾರವು ಸ್ಥಗಿತಗೊಂಡು ಆರ್ಥಿಕ ಜೀವನವು ಅಸ್ತವ್ಯಸ್ತಗೊಂಡಿತು. ಸಾಮ್ರಾಜ್ಯದಲ್ಲಿ ಗೊಂದಲ ವೇರ್ಪಟ್ಟಿತು. ಸುಲ್ತಾನನು ತನ್ನ ಯೋಜನೆಯು ವಿಫಲವಾದುದನ್ನು ಮನಗಂಡು ಹೊಸ ನಾಣ್ಯಗಳನ್ನು ಹಿಂದಕ್ಕೆ ತೆಗೆದುಕೊಂಡು ಅವುಗಳಿಗೆ ಬದಲಾಗಿ ಚಿನ್ನ ಮತ್ತು ಬೆಳ್ಳಿಯ ನಾಣ್ಯಗಳನ್ನು ಚಲಾವಣೆಗೆ ಕೊಟ್ಟನು. ಸುಲ್ತಾನನ ಅವಿವೇಕತನವು ಇದರಿಂದ ಮತ್ತಷ್ಟು ಬಯಲಾಯಿತು.

### ರಾಜ್ಯವಿಸ್ತರಣೆ

ಮಹಮದ್-ಬಿನ್-ತುಘಲಕನು ಅಲ್ಲಾವುದ್ದೀನ್‌ಖಿಲ್ಜಿಯಂತೆ ಸಾಮ್ರಾಜ್ಯ ವಿಸ್ತರಣೆಕಾಂಕ್ಷಿಯಾಗಿದ್ದನು. ಆದರೆ ಅಲ್ಲಾವುದ್ದೀನ್‌ಖಿಲ್ಜಿಯಲ್ಲಿದ್ದ ವ್ಯಾವಹಾರಿಕ ಜ್ಞಾನವು ಇವನಲ್ಲಿರಲಿಲ್ಲವಾದ್ದರಿಂದ ರಾಜ್ಯ ವಿಸ್ತರಣೆಯ ಯೋಜನೆಯು ಸಂಪೂರ್ಣವಾಗಿ ವಿಫಲವಾಯಿತು ಮತ್ತು ಇವರಿಂದ ದೆಹಲಿಯ ಸುಲ್ತಾನತ್ವಕ್ಕೆ ಕೊಡಲಿಯ ಪೆಟ್ಟು ಬಿದ್ದತು. ಮಹಮದನು 1337 ರಲ್ಲಿ ಪಂಜಾಬಿನ ಕಾಂಗ್ರಾ ಜಿಲ್ಲೆಯ ನಗರ ಕೋಟೆಯ ಮೇಲೆ ದಂಡೆತ್ತಿ ಹೋಗಿ ಅದನ್ನು ವಶಪಡಿಸಿಕೊಂಡನು. ಅಲ್ಲಿನ ರಾಜನು ಸೋತು ಸುಲ್ತಾನನ ಸಾರ್ವಭೌಮತ್ವವನ್ನು ಒಪ್ಪಿಕೊಂಡನು. ಇದರಿಂದ ತೃಪ್ತನಾದ ಸುಲ್ತಾನನು ಸ್ನೇಹ ಸೂಚಕವಾಗಿ ಆ ಕೋಟೆಯನ್ನು ಅವನಿಗೇ ಕೊಟ್ಟು ಅಲ್ಲಿನ ಪ್ರಸಿದ್ಧ ಜಾಲಾ ಮುಖಿ ದೇವಾಲಯವನ್ನು ಅಪವಿತ್ರಗೊಳಿಸದೆ ಬಂದನು. ನಗರ ಕೋಟೆಯ ಗೆಲುವಿನ ನಂತರ ಸುಲ್ತಾನನು (1337-38) ಹಿಮಾಲಯ ಪರ್ವತ ಶ್ರೇಣಿಗಳಲ್ಲಿನ ಕೊರಾಜಲ್ ಅನ್ನು ಗೆದ್ದನು. ಕೊರಾಜಲ್ ಮೇಲೆ ಕೈಗೊಂಡ ದಂಡಯಾತ್ರೆಯು ಸುಲ್ತಾನನು ಚೀನಾ ಮತ್ತು ಟಿಬೆಟ್‌ಗಳನ್ನು ಗೆಲ್ಲಲು ಆಲೋಚಿಸಿದ್ದ ಮಹಾಯೋಜನೆಯ ಮೊದಲ ಹೆಜ್ಜೆಯಾಗಿತ್ತೆಂದು ಕೆಲವು ಇತಿಹಾಸಕಾರರು ಅಭಿಪ್ರಾಯಪಟ್ಟಿರುವರು. ಆದರೆ ಈ ಅಭಿಪ್ರಾಯವನ್ನು ಸಮರ್ಥಿಸಲು ಸಾಕಷ್ಟು ಆಧಾರಗಳಿಲ್ಲ. ಕೊರಾಜಲ್ ಮೇಲಿನ ಆಕ್ರಮಣಕಾಲದಲ್ಲಿ ಸುಲ್ತಾನನ ಸೈನ್ಯವು ಬೌದ್ಧ

ವಿಹಾರಗಳನ್ನು ನಾಶ ಮಾಡಿತು. ಈ ವಿಹಾರಗಳನ್ನು ದುರಸ್ತುಗೊಳಿಸಲು ಸುಲ್ತಾನನ ಅನುಮತಿ ಪಡೆಯಲು ಚೀನಾದ ಮಂಗೋಲ್ ಚಕ್ರವರ್ತಿ ತೋಗನ್ ತೈಮೂರನು ಅವನ ಆಸ್ಥಾನಕ್ಕೆ ಒಬ್ಬ ರಾಯಭಾರಿಯನ್ನು ಕಳುಹಿಸಿದನು. ಇದಕ್ಕೆ ಉತ್ತರವಾಗಿ ಸುಲ್ತಾನನು ಜೆಸಿಯಾ ಕಂದಾಯವನ್ನು ಕೊಡಲೊಪ್ಪದ ಅನ್ಯಧರ್ಮೀಯರಿಗೆ ದೇವಾಲಯಗಳನ್ನು ದುರಸ್ತು ಮಾಡುವುದಕ್ಕಾಗಲೀ ಅಥವ ಕಟ್ಟುವುದಕ್ಕಾಗಲೀ ಅನುಮತಿ ಕೊಡುವುದು ಇಸ್ಲಾಂ ಧರ್ಮಕ್ಕೆ ವಿರುದ್ಧವಾದುದೆಂದು ತಿಳಿಸಲು ಇಬನ್ ಬಟೂಟನನ್ನು 1342ರ ಚೀನಾಕ್ಕೆ ಕಳುಹಿಸಿಕೊಟ್ಟನು.

ಮಹಮದ್-ಬಿನ್-ತುಘಲಕನು ಕೊರಾಸನ್ ಮತ್ತು ಇರಾಕ್‌ಗಳನ್ನು ಗೆಲ್ಲಬೇಕೆಂದು ಕಟ್ಟಿಕೊಂಡಿದ್ದ ಕನಸು ಕೂಡ ವಿಫಲತೆಯಲ್ಲಿ ಪರ್ಯಾವಸಾನಗೊಂಡಿತು. ಮಂಗೋಲರ ಆಕ್ರಮಣದಿಂದಾಗಿ ದೇಶಬಿಟ್ಟು ಓಡಿಬಂದಿದ್ದ ಕೆಲವು ಕೊರಾಸಾನಿ ನೋಬಲ್ಲರು ಕೊರಾಸನ್ ಮತ್ತು ಇರಾಕ್‌ಗಳನ್ನು ಗೆಲ್ಲುವಂತೆ ಸುಲ್ತಾನನನ್ನು ಪ್ರಚೋದಿಸಿದರು. ಸುಲ್ತಾನನು ಸ್ವಲ್ಪವೂ ಆಲೋಚಿಸದೆ ಆ ರಾಜ್ಯಗಳನ್ನು ಗೆಲ್ಲಲು ಸುಮಾರು ನಾಲ್ಕು ಲಕ್ಷ ಸೈನಿಕರಿಂದ ಕೂಡಿದ ದೊಡ್ಡ ಸೈನ್ಯನವನ್ನು ಸಂಘಟಿಸಿದನು. ಆದರೆ ಈ ಸೈನ್ಯವು ದೆಹಲಿಯನ್ನು ಬಿಟ್ಟು ಹೊರಡಲಿಲ್ಲ. ಬಹುಶಃ ಮಹಮದನು ಈ ಯೋಜನೆಗೆ ಇದ್ದ ಭೌಗೋಳಿಕ ಅಡ್ಡಿ ಆತಂಕಗಳನ್ನು ಮೊದಲಿಗೆ ಅರಿಯಲಿಲ್ಲ. ಅಲ್ಲದೆ ಈ ಯೋಜನೆಗೆ ಅವನಲ್ಲಿ ಸಾಕಷ್ಟು ಹಣವೂ ಇರಲಿಲ್ಲ. ಸೈನಿಕರಿಗೆ ಒಂದು ವರ್ಷಕಾಲ ಪುಕ್ಕಟ್ಟೆ ಸಂಬಳಕೊಟ್ಟು ಪೋಷಿಸಿ ತನ್ನ ಯೋಜನೆಯು ಸುಲಭವಾಗಿ ಕಾರ್ಯಗತವಾಗುವುದಿಲ್ಲವೆಂದು ತಿಳಿದ ಮೇಲೆ ಆ ಸೈನ್ಯವನ್ನು ವಿಸರ್ಜಿಸಿದನು. ಹೀಗಾಗಿ ಅವನು ಮುಂದಾಲೋಚನೆಯಿಲ್ಲದೆ ಕೈಗೊಂಡ ಯೋಜನೆಗಳೆಲ್ಲವೂ ನಿರರ್ಥಕಗೊಂಡು ಅವನೊಬ್ಬ ಅವಿವೇಕದ ರಾಜ ಕಾರಣಿ ಎಂದು ಪರಿಗಣಿಸುವಂತೆ ಮಾಡಿದವು.

**ದಂಗೆಗಳು**

ಮಹಮದ್-ಬಿನ್-ತುಘಲಕನು ತನ್ನ ಆಳ್ವಿಕೆಯ ಪ್ರಾರಂಭದ ಮೊದಲ ವರ್ಷಗಳಲ್ಲಿಯೆ ಅನೇಕ ತೊಂದರೆಗಳನ್ನು ಎದುರಿಸಬೇಕಾಯಿತು. ಅಂತಹ ತೊಂದರೆಗಳಲ್ಲಿ ದಂಗೆಗಳೂ ಸೇರಿದ್ದವು. ಅವನ ಸೋದರಿಯ ಮಗನಾದ ಬಹಾವುದ್ದೀನ್ ಗೂರ್‌ಸ್ಪಫ್ ಎಂಬವನು 1326ರಲ್ಲಿ ದಂಗೆಯೆದ್ದನು. ಗೂರ್ಷಪ್ ಮೊದಲಿಗೆ ಸಾಗರ್ ಮತ್ತು ಸಮಾನಾಗಳಲ್ಲಿ ರಾಜ್ಯಪಾಲನಾಗಿದ್ದನು. ಇವನೊಬ್ಬ ಸಮರ್ಥ ದಂಡನಾಯಕನೂ ಆಗಿದ್ದನು. ಗೂರ್ಷಫ್‌ನ ಸಾಮರ್ಥ್ಯಗಳನ್ನು ಮನಗಂಡಿದ್ದ ಸುಲ್ತಾನನು ತೆಲಂಗಾಣದ ವಿರುದ್ಧ ಕೈಗೊಂಡ ದಂಡಯಾತ್ರೆಯ ನೇತಾರನನ್ನಾಗಿ ಇವನನ್ನು ಕಳುಹಿಸಿದನು. ತೆಲಂಗಾಣವು ಸುಲ್ತಾನನ ಆಳ್ವಿಕೆಗೆ ಒಳಪಟ್ಟ ಮೇಲೆ ಅವನನ್ನು ಸುಲ್ತಾನನು ಅಲ್ಲಿನ ರಾಜ್ಯ ಪಾಲನನ್ನಾಗಿ ನೇಮಿಸದನು. ಬಹಾವುದ್ದೀನ್ ಗೂರ್ಷಫನು ಕೆಲವು ಸ್ಥಳೀಯ ನೋಬಲ್ಲರ ಸಹಾಯದಿಂದ ದಂಗೆಯೆದ್ದು ದಖನ್ನಿನಲ್ಲಿ ತನ್ನದೇ ಆದ ಸ್ವತಂತ್ರ ರಾಜ್ಯವನ್ನು ಸ್ಥಾಪಿಸಿಕೊಳ್ಳಲು ಪ್ರಯತ್ನಿಸಿದನು. ಮಹಮದ್-ಬಿನ್-ತುಘಲಕನು ಅವನ ವಿರುದ್ಧ ಗುಜರಾತಿನ ಖವಾಜ ಜೆಹಾನನ್ನು ಸೈನ್ಯದೊಂದಿಗೆ ಕಳುಹಿಸಿದನು ಅನಂತರ ತಾನೂ ಅವನ್ನು ಶಿಕ್ಷಿಸಲು ತೆಲಂಗಾಣಕ್ಕೆ ಹೋದನು.

ಗೂರ್ಷಘನು ಖವಾಜ ಜೆಹಾನನಿಂದ ಸೋತು ಓಡಿ ಹೋಗಿ ಕಂಪಿಲದ ರಾಜನಲ್ಲಿ ರಕ್ಷಣೆಪಡೆದನು. ಕಂಪಿಲದ ರಾಜನು ಅವನ ಪರವಾಗಿ ಹೋರಾಡಿ ಕೊನೆಗೆ ತಾನೂ ಸೋತನು. ಅವನ ಕುಟುಂಬವರಲ್ಲಿ ಅನೇಕರು ಕೊಲ್ಲಲ್ಪಟ್ಟರು ಮತ್ತೆ ಕೆಲವರು ಸೆರೆಹಿಡಿಯಲ್ಪಟ್ಟರು. ಆದರೆ ಕಂಪಿಲದ ರಾಜನು ಗೂರ್ಷಪನನ್ನು ವೀರಬಲ್ಲಾಳನ ಆಸ್ಥಾನಕ್ಕೆ ರಕ್ಷಣೆಗಾಗಿ ಕಳುಹಿಸಿದನು. ಈ ಮಧ್ಯೆ ಸುಲ್ತಾನನು ದೇವಗಿರಿಯನ್ನು ತಲುಪಿದ್ದನು. ಇದನ್ನು ತಿಳಿದ ವೀರ ಬಲ್ಲಾಳನು ಗೂರ್ಷಪನ ಪರವಾಗಿ ಹೋರಾಡುವುದನ್ನು ಬಿಟ್ಟು ಅವನನ್ನು ಖವಾಜ ಜೆಹಾನನಿಗೊಪ್ಪಿಸಿ ಸುಲ್ತಾನನಿಗೆ ತನ್ನ ನಿಷ್ಠೆಯನ್ನು ವ್ಯಕ್ತಪಡಿಸಿದನು. ಸುಲ್ತಾನನ ಆಜ್ಞೆಯ ಮೇರೆಗೆ ಅವನನ್ನು ಜೀವಂತ ಸುಡಿಸಲಾಯಿತು. ಸುಲ್ತಾನನು ತನ್ನ ಈ ಕ್ರಮದಿಂದ ಇತರರು ಎಚ್ಚರಗೊಳ್ಳುವರೆಂದು ಭಾವಿಸಿದನು. ಆದರೆ ಅದು ತಪ್ಪಾಯಿತು. ಮುಲ್ತಾನಿನ ರಾಜ್ಯಪಾಲನಾಗಿದ್ದ ಖಿಸ್ಲುಕಾನನು 1328ರಲ್ಲಿ ದಂಗೆಯದ್ದನು. ಆಗ ದೇವಗಿರಿಯಲ್ಲಿದ್ದ ಸುಲ್ತಾನನು ಅವನ ವಿರುದ್ಧ ದಂಡೆತ್ತಿ ಹೋಗಿ ಅವನನ್ನು ಮತ್ತು ಅವನ ಬೆಂಬಲಿಗರನ್ನು ಸೆರೆಹಿಡಿದು ಕೊಲ್ಲಿಸಿದನು. ಖಿಸ್ಲುಖಾನನ ತಲೆಯನ್ನು ಕಡಿಸಿ ಸುಲ್ತಾನನ ಶಿಬಿರದದ್ವಾರದ ಮುಂದೆ ನೇತುಹಾಕಿಸಿದನು. 1330ರಲ್ಲಿ ಬಂಗಾಳದಲ್ಲಿ ದಂಗೆ ಎದ್ದ ಘಿಯಾ ಸಂದ್ದೀನ್ ಬಹದ್ದೂರ್‌ನ ದಂಗೆಯನ್ನೂ ಮತ್ತು ಸಿಂದ್‌ನಲ್ಲಿ ಕೆಲವು ಪಿತೂರಿಗಾರರ ದಂಗೆಯನ್ನು ಅಡಗಿಸಿದನು.

ಈ ದಂಗೆಗಳಿಗಿಂತಲೂ ಭೀಕರವಾದ ದಂಗೆಯು 1335ರಲ್ಲಿ ಮಾಬರ್ ರಾಜ್ಯದಲ್ಲಿ ಸಂಭವಿಸಿತು. ಜಲಾಲುದ್ದೀನ್ ಅಶನ್ ಎಂಬವನು ಇಲ್ಲಿನ ರಾಜ್ಯಪಾಲನಾಗಿದ್ದನು. ಇವನ ದಂಗೆಯನ್ನು ಅಡಗಿಸಲು ಸುಲ್ತಾನನೇ ಮಾಬರ್ ರಾಜ್ಯದ ಮೇಲೆ ಸೈನ್ಯದೊಂದಿಗೆ ಬಂದನು. ಆದರೆ ಸುಲ್ತಾನನ ಸೈನ್ಯವು ತೆಲಂಗಾಣವನ್ನು ತಲುಪಿದ ಮೇಲೆ ಸೈನ್ಯದಲ್ಲಿ ಕಾಲರಾ ಜಾಡ್ಯವು ತಲೆದೋರಿ ಸಹಸ್ರಾರು ಸೈನಿಕರು ಸತ್ತರು. ಸುಲ್ತಾನನು ಕೂಡ ಈ ಪಿಡುಗಿಗೆ ಒಳಗಾಗಿ ದಂಡಯಾತ್ರೆಯನ್ನು ಮುಂದುವರಿಸಲಾರದೆ ದೆಹಲಿಗೆ ಹಿಂತಿರುಗಿದನು. ತತ್ಪರಿಣಾಮವಾಗಿ 1335ರಲ್ಲಿ ಮಧುರೆಯಲ್ಲಿ ಸ್ವತಂತ್ರವಾದ ಮುಸ್ಲಿಂ ರಾಜ್ಯವೊಂದು ಅಸ್ತಿತ್ವಕ್ಕೆ ಬಂದಿತು. ಇದೇ ರೀತಿಯಲ್ಲಿ ಲಾಹೋರಿನಲ್ಲಿ ದಂಗೆಯೆದ್ದಿದ ಅಮೀರ್ ಹಲಾಜುರ್ನ್‌ನ ದಂಗೆಯನ್ನು ಅಡಿಗಿಸಿದನು. 1338ರ ಬಂಗಾಳದ ರಾಜ್ಯಪಾಲನಾದ ಮಲ್ಲಿಕ್ ಪ್ರಕ್ರುದ್ದೀನನು ದಂಗೆಯೆದ್ದು ತನ್ನ ಸ್ವಾತಂತ್ರ್ಯವನ್ನು ಘೋಷಿಸಿಕೊಂಡನು. 1340ರಲ್ಲಿ ಔಧ್‌ನ ರಾಜ್ಯಪಾಲನಾಗಿದ್ದ ಐನ್-ಉಲ್ ಮುಲ್ಕ್‌ನು ದಂಗೆಯೆದ್ದನು. ಇವನೊಬ್ಬ ಪ್ರತಿಭಾವಂತ ವ್ಯಕ್ತಿಯಾಗಿದ್ದನು. ಇವನ ಪ್ರತಿಭಾಸಾಮರ್ಥ್ಯಗಳನ್ನಾ ಮನಗಂಡಿದ್ದ ಸುಲ್ತಾನನು 1340ರ ದೌಲತಾಬಾದಿಗೆ ಇವನನ್ನು ವರ್ಗಯಿಸಿರುವನೆಂದು ತಪ್ಪು ತಿಳಿದುಕೊಂಡು ದಂಗೆಯೆದ್ದನು. ಅವನ ದಂಗೆಯನ್ನು ಹತ್ತಿಕ್ಕಿದ್ದಲ್ಲದೆ ಅವನನ್ನು ಸೆರೆಹಿಡಿಯಲಾಯಿತು. ಆದರೆ ಸುಲ್ತಾನನು ಅವನು ಹಿಂದೆ ರಾಜ್ಯಕ್ಕೆ ಸಲ್ಲಿಸಿದ್ದ ಸೇವೆಯುನ್ನು ಗೌರವಿಸಿ ಅವನನ್ನು ಕ್ಷಮಿಸಿದನು.

ಇಷ್ಟಾದರೂ ನತದೃಷ್ಟ ಸುಲ್ತಾನನಿಗೆ ದಂಗೆಗಳಿಂದ ಬಿಡುವು ಸಿಗಲಿಲ್ಲ. ರಾಜ್ಯದ ಒಂದು ಬಾಗದಲ್ಲಿ ದಂಗೆಯನ್ನು ಹತ್ತಿಕ್ಕಿದ ತಕ್ಷಣದಲ್ಲೇ ಮತ್ತೊಂದು ಭಾಗದಲ್ಲಿ ದಂಗೆಯು ತಲೆದೋರುತ್ತಿತ್ತು. ದಖನ್ ಪ್ರದೇಶವೂ ಕೂಡ ಇದರಿಂದ

ಹೊರತಾಗಲಿಲ್ಲ. ಮುಹಮದ್-ಬಿನ್-ತುಘಲಕನು ತನ್ನ ಆಳ್ವಿಕೆಯ ಮೊದಲ ಭಾಗದಲ್ಲಿ ದಖನ್ನಿನ ಪ್ರಮುಖ ರಾಜ್ಯಗಳಾಗಿದ್ದ ದೇವಗಿರಿ, ವಾರಂಗಲ್, ದೋರಸಮುದ್ರ ಮತ್ತು ಮಾಬರ್ ರಾಜ್ಯಗಳ ಮೇಲೆ ತನ್ನ ಸಾರ್ವಭೌಮಾಧಿಕಾರವನ್ನು ಹೇರಿದ್ದನು. ಆದರೆ 1335ರಲ್ಲಿ ಮಾಬರ್ ರಾಜ್ಯವು ಸ್ವತಂತ್ರವಾಯಿತು. ಕ್ರಿ.ಶ. 1334ರಲ್ಲಿ ಕಾಕತೀಯರ ದೊರೆ ಎರಡನೆ ಪ್ರತಾಪರುದ್ರದೇವನ ಮಗನಾದ ಕೃಷ್ಣನಾಯಕನು ದಕ್ಷಿಣದ ಹಿಂದೂ ರಾಜರುಗಳ ಒಕ್ಕೂಟವೊಂದನ್ನು ಏರ್ಪಡಿಸಿದನು. ಈ ಒಕ್ಕೂಟದಲ್ಲಿ ವಿರೂಪಾಕ್ಷಬಲ್ಲಾಳ, ಹರಿಹರ ಮತ್ತು ಬುಕ್ಕ ಹಾಗೂ ಕಂಪಿಲಿಯ ದೊರೆಗಳು ಸೇರಿದ್ದರು. ದಖನ್ನಿನ ಇತಿಹಾಸದಲ್ಲಿ ಇದೊಂದು ಪ್ರಮುಖ ಘಟನೆಯಾಗಿತ್ತು. ವಾರಂಗಲ್, ದೋರ ಸಮುದ್ರ ಮತ್ತು ಕಂಪಿಲ ರಾಜ್ಯಗಳಲ್ಲಿ ಮುಸ್ಲಿಮರ ಅಧಿಕಾರವು ಕೊನೆಗಂಡು ಅದು ಅಂತ್ಯದಲ್ಲಿ 1336ರಲ್ಲಿ ವಿಜಯನಗರ ರಾಜ್ಯಸ್ಥಾಪನೆಗೆ ಅಂಕುರಾರ್ಪಣೆ ಮಾಡುವುದರಲ್ಲಿ ಪರ್ಯಾವಸಾನವಾಯಿತು. 1346ರಲ್ಲಿ ಹೊಯ್ಸಳರ ಅಧಿಕಾರವು ಕೊನೆಗೊಳ್ಳಲು ಹರಿ ಹರನು ಹೊಯ್ಸಳ ಸಾಮ್ರಾಜ್ಯದ ಉತ್ತರಾಧಿಕಾರಿಯಾಗಿ ತನ್ನ ಅಧಿಕಾರವನ್ನು ಭದ್ರ ಪಡಿಸಿಕೊಂಡನು. ಅನಂತರ ವಿಜಯನಗರವು ದಕ್ಷಿಣದಲ್ಲಿ ಪ್ರಧಾನ ರಾಜ್ಯವಾಗಿ ಬೆಳೆದು ಉತ್ತರದಿಂದ ಮುಸ್ಲಿಮರ ಆಕ್ರಮಣಗಳನ್ನು ತಡೆಗಟ್ಟುವ ಮಹತ್ತರ ಜವಾಬ್ದಾರಿಯನ್ನು ವಹಿಸಿಕೊಂಡಿತು. ಇದೇ ಸಮಯದಲ್ಲಿ ದೇವಗಿರಿಯಲ್ಲೂ ದಂಗೆಯು ಸಂಭವಿಸಿತು. ದೇವಗಿರಿಯಲ್ಲಿದ್ದ ವಿದೇಶಿ ಮುಸ್ಲಿಂ ನೋಬಲ್ಲರು (ಅಮೀರನ-ಇ-ಸಾದಹ್) ದಂಗೆಯೆದ್ದು 1347ರಲ್ಲಿ ಅಲ್ಲಾವುದ್ದೀನ್ ಬಹಮಾನ್‌ಷಹ ಎಂಬುವನ ನೇತೃತ್ವದಲ್ಲಿ ಬಹಮನಿ ರಾಜ್ಯವನ್ನು ಸ್ಥಾಪಿಸಿದರು. ಇದೇ ರೀತಿಯಲ್ಲಿ ಗುಜರಾತಿನಲ್ಲಿ ತಾಘಿ ಎಂಬವನು ದಂಗೆಯೆದ್ದನು. ಅವನ ದಂಗೆಯನ್ನಡಗಿಸಲು ಸುಲ್ತಾನನು ಸೈನ್ಯಸಮೇತ ಹೋಗಲು ಅವನು ಸ್ಥಳದಿಂದ ಸ್ಥಳಕ್ಕೆ ತಪ್ಪಿಸಿಕೊಂಡುಹೋಗಿ ಕೊನೆಗೆ ಸಿಂದ್‌ನಲ್ಲಿ ಥಟ್ಟಾವನ್ನು ತಲುಪಲು ಇನ್ನೂ ಮೂರು ನಾಲ್ಕು ದಿವಸಗಳಿದ್ದಾಗಲೇ ಜ್ವರಪೀಡಿತನಾಗಿ ಮಾರ್ಚಿ 351ರಲ್ಲಿ ಕಾಲವಾದನು. ಇದರೊಂದಿಗೆ ಮುಹಮದ್-ಬಿನ್-ತುಘ ಲಕನ ಇಪ್ಪತ್ತೈದು ವರ್ಷಗಳ ಆಳ್ವಿಕೆಯು ಕೊನೆಗಂಡಿತು. ಸುಲ್ತಾನನು ಪ್ರಜೆಗಳಿಂದಲೂ ಪ್ರಜೆಗಳು ಸುಲ್ತಾನನಿಂದಲೂ ಪರಸ್ಪರ ಬಿಡುಗಡೆ ಹೊಂದಿದರೆಂದು ಇತಿಹಾಸಕಾರ ಬದೌನಿಯು ಬರೆಯುತ್ತಾನೆ.

### ಮಹಮದ್ ಬಿನ್ ತುಘಲಕನ ವ್ಯಕ್ತಿತ್ವ

ಮಹಮದ್ ಬಿನ್ ತುಘಲಕನು ಮಧ್ಯಕಾಲೀನ ಯುಗದಲ್ಲಿ ಭಾರತವನ್ನಾಳಿದ ಮುಸಲ್ಮಾನ್ ದೊರೆಗಳಲ್ಲಿ ಗೌರವಯುತವಾದ ಸ್ಥಾನವನ್ನು ಪಡೆದುಕೊಂಡಿದ್ದಾನೆ. ಅವನು ತನ್ನ ಇಡೀ ಜೀವಮಾನವನ್ನೆಲ್ಲಾ ವಿಪತ್ತುಗಳನ್ನೆ ದುರಿಸುವುದರಲ್ಲಿಯೇ ಕಳೆದನು ಮತ್ತು ಅವನು ಎಷ್ಟೇ ನಿರಾಶೆಯ ಸನ್ನಿವೇಶದಲ್ಲೂ ಕಾರ್ಯ ವಿಮುಕ್ತನಾಗಲಿಲ್ಲ. ಅವನು ತಾನು ಕೈಗೊಂಡ ಯೋಜನೆಗಳ ಪೂರ್ವಾಪರಗಳ ಬಗ್ಗೆ ಸಾಕಷ್ಟು ಯೋಚಿಸದೆ ಅವುಗಳ ಉದ್ದೇಶ ಸಾಧನೆಯ ಪ್ರಯತ್ನದಲ್ಲಿ ವಿಫಲನಾದುದು ನಿಜ. ಆದರೆ ಅನೇಕ ವೇಳೆ ಅವನ ಪರಾಜಯಗಳು ಹೆಚ್ಚಾಗಿ ಅವನ ಕೈಗೆ ಮೀರಿದ ಸನ್ನಿವೇಶಗಳಿಂದ ಉಂಟಾಗಿದ್ದವು. ಸಾಮ್ರಾಜ್ಯದ ವಿವಿಧ ಬಾಗಗಳಲ್ಲಿ ಆದರಲ್ಲೂ ಮುಖ್ಯವಾಗಿ ದೋಬ್ ಪ್ರದೇಶದಲ್ಲಿ ಒಂದು ದಶಕಕ್ಕೂ ಕಾಲ ಆಗಾಗ್ಗೆ

ಸಂಭವಿಸಿದ ಕ್ಷಾಮಪರಿಸ್ಥಿತಿಯು ಅವನ ಆಡಳಿತದ ವೈಭವಕ್ಕೆ ದೊಡಡಿ ಸವಾಲಾಗಿದ್ದು ಪ್ರಜೆಗಳು ದಂಗೆ ಏಳುವಂತೆ ಮಾಡಿತು. ಆದರೆ ಅವನು ಕ್ಷಾಮನಿವಾರಣೆಗಾಗಿ ಕೈಗೊಂಡ ಕ್ರಮಗಳು ಶ್ಲಾಘನೀಯವಾಗಿದ್ದವು. ಸುಲ್ತಾನನು ತೆರಿಗೆಯ ಭಾರವನ್ನು ಕಡಿಮೆ ಮಾಡಿದನು. ರಾಜಧಾನಿಯಲ್ಲಿ ಗಂಜಿಕೇಂದ್ರಗಳನ್ನು ತೆರೆದನು. ಕ್ಷಾಮ ಪರಿಹಾರ ಕ್ರಮಗಳನ್ನು ಕೈಗೊಂಡನು. ರೈತರಿಗೆ ಸರ್ಕಾರದಿಂದ ಸಾಲ ಕೊಡಿಸಿದನು. ಆದರೆ ಅವನು ಕೈಗೊಂಡ ಈ ಕೆಲವು ಸುಧಾರಣಾ ಕಾರ್ಯಗಳು ತನ್ನೊಂದಿಗೆ ಸರಿಯಾಗಿ ಸಹಕರಿಸದಿದ್ದ ಅಧಿಕಾರಿಗಳಿಂದಾಗಿ ಪ್ರಜೆಗಳಿಗೆ ಸಾಕಷ್ಟು ಫಲವು ದೊರೆಯಲಿಲ್ಲ.

ರಾಜ್ಯಾಡಳಿತದಲ್ಲಿ ಸುಲ್ತಾನನು ಉದಾರ ನೀತಿಯನ್ನು ಅನುಸರಿಸಿದನು. ಆಡಳಿತದಲ್ಲಿ ಉಲೇಮಾಗಳ ಪ್ರಭಾವವನ್ನು ತಡೆಗಟ್ಟಿದನು. ಹಿಂದುಗಳ ದಾರ್ಮಿಕ ವಿಚಾರಗಳಲ್ಲಿ ಬಹಳ ಗೌರವದಿಂದ ನಡೆದುಕೊಂಡನು ಮತ್ತು ಕ್ಷಾಮಕಾಲದಲ್ಲಿ ಅವರ ಸಂಕಷ್ಟಗಳನ್ನು ಪರಿಹರಿಸಲು ಪ್ರಾಮಾಣಿಕ ಪ್ರಯತ್ನ ಮಾಡಿದನು. ಆದರೆ ಹಿಂದೂ ದಂಗೆ ಕೋರರ ಬಗ್ಗೆ ಬಹಳ ಕಠಿಣವಾಗಿ ನಡೆದುಕೊಂಡನು. ಸುಲ್ತಾನನು ಔದಾರ್ಯಕ್ಕೆ ಬಹಳ ಹೆಸರುವಾಸಿಯಾಗಿದ್ದನು ಮತ್ತು ಅವನು ಮಾಡುತ್ತಿದ್ದ ಧಾನ ಧರ್ಮಗಳಿಂದ ಎಷ್ಟೋ ಜನ ಶ್ರೀಮಂತರೂ ಆಗಿದ್ದರು. ನ್ಯಾಯವಿತರಣೆಯಲ್ಲಿ ಸುಲ್ತಾನನು ನಿಷ್ಪಕ್ಷ ಪಾತವಾಗಿ ನಡೆದುಕೊಳ್ಳುತ್ತಿದ್ದನು. ರಾಜದ್ರೋಹದ ಅಪಾದನೆಗಳಿಗೆ ಒಳಗಾದವರಿಗೆ ಅವರ ಸ್ಥಾನಮಾನಗಳಾವುದನ್ನೂ ಲೆಕ್ಕಿಸದೆ ಕಠಿಣ ಶಿಕ್ಷೆ ವಿಧಿಸುತ್ತಿದ್ದನು. ಸರ್ಕಾರದ ಉನ್ನತ ಹುದ್ದೆಗಳಿಗೆ ಪ್ರತಿಭಾನ್ವಿತ ವಿದೇಶಿ ಮುಸ್ಲಿಮರನ್ನೇ ಅಲ್ಲದೆ ಹಿಂದುಗಳನ್ನೂ ನೇಮಿಸಿಕೊಂಡಿದ್ದನು. ರತನ್ ಎಂಬ ಹಿಂದುವೊಬ್ಬನು ಸಿಂಧನಲ್ಲಿ ಬಹುಮುಖ್ಯ ಹುದ್ದೆಯನ್ನು ಹೊಂದಿದ್ದನು ಮುತ್ತು ಸುಲ್ತಾನನು ಅವನಿಗೆ ಅಜಿಮ್-ಅಸ್-ಸಿಂಧ್ ಎಂಬ ಬಿರುದನ್ನು ನೀಡಿದ್ದನು. ಭೈರೂನ್ ಎಂಬವನು ಗುಲ್ಬರ್ಗ ಭಾಗಕ್ಕೆ ಮೇಲ್ವಿ ಚಾರಕನಾಗಿದ್ದನು. ಕುತ್ಲುಗ್‌ಖಾನನನ್ನು ದಖನ್ನಿನಿಂದ ಹಿಂದಕ್ಕೆ ಕರೆಸಿಕೊಂಡ ಮೇಲೆ ಧಾರಾಧರ್ ಎಂಬ ಹಿಂದುವನ್ನು ದೇವಗಿರಿಯಲ್ಲಿ ಹಣಕಾಸಿನ ಸಚಿವನನ್ನಾಗಿ ನೇಮಿಸಿದ್ದನು. ಕ್ಷಾಮನಿವಾರಣೆಯ ಬಗ್ಗೆ ಪರಿಹಾರ ಮತ್ತು ವ್ಯೆಯವಸಾಯ ಸುಧಾರಣೆ ಕಾರ್ಯಗಳು ಹಿಂದುಗಳ ಒಳತಿನ ಬಗ್ಗೆ ಅವನು ಹೊಂದಿದ್ದ ಆಸಕ್ತಿಯನ್ನು ತೋರಿಸುತ್ತವೆ. ಅವನ ಆಳ್ವಿಕೆಯ ಕಾಲದಲ್ಲಿ ಹಿಂದುಗಳು ತೊಂದರೆ ಅನುಭವಿಸಿದುದು ಸುಲ್ತಾನನ ಧಾರ್ಮಿಕ ನೀತಿಯಿಂದಾಗಿರದೆ ಅವರ ರಾಜಕೀಯ ಅಪರಾಧಗಳಿಂದಾಗಿದ್ದಿತು ಮಹ ಮದ್ ಬಿನ್ ತುಘಲಕನು ಮುಂದೆ ಭಾರತವನ್ನಾಳಿದ ಅಕ್ಬರ್ ಚಕ್ರವರ್ತಿಯ ಕಾಲದಲ್ಲಿ ನಿಷೇಧಿಸಲ್ಪಟ್ಟ ಭಯಂಕರವಾದ 'ಸತಿ ಪದ್ಧತಿ'ಯನ್ನು ನಿಲ್ಲಿಸುವುದಕ್ಕೂ ಪ್ರಯತ್ನಿಸಿದ್ದನು.

ಸುಲ್ತಾನನು ತನ್ನ ವೈಯಕ್ತಿಕ ಜೀವನದಲ್ಲೂ ಪರಿಶುದ್ಧವಾಗಿದ್ದನು. ಇವನು ಮದ್ಯಪಾನ ಸೇವನೆ. ವ್ಯಭಿಚಾರ, ಸುಖಲೋಲುಪ್ತ ಜೀವನ ಮೊದಲಾದವುಗಳಿಂದ ದೂರವಿದ್ದನು. ಅವನಿಗೆ ಒಬ್ಬಳೇ ಪತ್ನಿಯಿದ್ದಳೆಂದು ಹೇಳಲಾಗಿದೆ. ಅವನ ವಿದ್ವತ್ತು ಅಪಾರವಾಗಿತ್ತು. ಕರುಣೆ ಮತ್ತು ದಯಾ ಗುಣಗಳಲ್ಲಿ ಅವನಿಗೆ ಸರಿಸಮನಾದವರು ಮಧ್ಯಕಾಲೀನ ಯುಗದಲ್ಲಿ ದೊರೆಯುವುದು ಅತಿ ವಿರಳವೆಂದೇ ಹೇಳಬಹುದು. ಆದರೆ ಇತಿಹಾಸಕಾರರಾದ ಭರಣಿ ಮತ್ತು ಬದೌನಿ ಮೊದಲಾದವರು ಪ್ರಾಸಂಗಿಕ ವಿಷಯಗಳನ್ನು ಐತಿಹಾಸಿಕ ಸಂಗತಿಗಳೊಂದಿಗೆ ಬೆರಸಿ ತುಘಲಕನ ವ್ಯಕ್ತಿತ್ವಕ್ಕೆ ಸ್ವಲ್ಪ

ಕಳಂಕ ತಂದಿದ್ದಾರೆ. ಸುಲ್ತಾನನು ಕೈಗೊಂಡಿದ್ದ ಕೆಲವು ಯೋಜನೆಗಳು ವಿಫಲವಾದುದು ನಿಜ. ಆದರೂ ಅಂದಿನ ಪರಿಸ್ಥಿತಿಗಳನ್ನು ಕಾಲಧರ್ಮದ ಚೌಕಟ್ಟಿನೊಳಗೆ ನೋಡಿದಾಗ ಅವನನ್ನು ಹುಚ್ಚುದೊರೆ ಅಥವ ಐಲುದೊರೆ ಎಂದು ಪರಿಗಣಿಸಲು ಯಾವ ಸಕಾರಣಗಳೂ ದೊರೆಯುವುದಿಲ್ಲ. ಬಟ್ಟಾರೆ ಹೇಳುವುದಾದರೆ ಮಹಮದ್ ಬಿನ್ ತುಘಲಕನಲ್ಲಿದ್ದ, ಪ್ರತಿಭೆ, ಸಾಮರ್ಥ್ಯ, ಪ್ರಯೋಗ, ಶೀಲಸ್ವಭಾವ, ಮತ್ತು ತಾನೆಸಗಿದ ತಪ್ಪನ್ನು ಅರಿತಾಗ ಅದನ್ನು ತಿದ್ದಿಕೊಳ್ಳುವ ಗುಣ, ಪಾಂಡಿತ್ಯ, ಮತಸಹಿಷ್ಣುತೆ ಮೊದಲಾದ ಗುಣಗಳನ್ನು ಕುರಿತು ವಿವೇಚಿಸಿದಾಗ ಅವನನ್ನು ತುಘಲಕ್ ಸಂತತಿಯಲ್ಲಿ ಒಬ್ಬ ಶ್ರೇಷ್ಠ ದೊರೆಯೆಂದು ಪರಿಗಣಿಸುವುದರಲ್ಲಿ ಏನೂ ತಪ್ಪಿಲ್ಲ.

**ಇಬನ್ ಬಟೂಟ**

ಮಧ್ಯಕಾಲೀನ ಯುಗದಲ್ಲಿ ಭಾರತಕ್ಕೆ ಪ್ರವಾಸಿಗಳಾಗಿ ಬಂದಿದ್ದ ಪ್ರವಾಸಿಗರಲ್ಲಿ ಇಬನ್ ಬಟೂಟನೂ ಒಬ್ಬ ಪ್ರಸಿದ್ಧ ವ್ಯಕ್ತಿಯಾಗಿದ್ದಾನೆ. ಇವನು ಆಫ್ರಿಕದ ಮೊರಾಕ್ಕೊ ರಾಜ್ಯಕ್ಕೆ ಸೇರಿದವನು. ಕ್ರಿ.ಶ. 304ರಲ್ಲಿ ಟ್ಯಾಂಜಿಯರ್ಸ್ ಎಂಬಲ್ಲಿ ಹುಟ್ಟಿದ ಇವನು ಚಿಕ್ಕಂದಿನಿಂದಲೂ ಪ್ರವಾಸದಲ್ಲಿ ಹೆಚ್ಚು ಆಸಕ್ತಿಯುಳ್ಳವನಾಗಿದ್ದನು. ತನ್ನ ಇಪ್ಪತ್ತೊಂದನೆ ವಯಸ್ಸಿನಲ್ಲಿ ಪ್ರವಾಸವನ್ನು ಕೈಗೊಂಡು ಈಜಿಪ್ಟ್, ಟರ್ಕಿ, ಸಿರಿಯ ಮತ್ತು ಅಫ್ಘಾನಿಸ್ಥಾನಗಳಲ್ಲಿ ಪ್ರವಾಸಮಾಡಿ 1333ರಲ್ಲಿ ಭಾರತಕ್ಕೆ ಬಂದನು. ಮಹಮದ್ ಬಿನ್ ತುಘಲಕನು ಅವನನ್ನು ಬಹಳ ಗೌರವದಿಂದ ಬರಮಾಡಿಕೊಂಡನು ಮತ್ತು ತರುವಾಯದಲ್ಲಿ ಅವನನ್ನು ದೆಹಲಿಯ ಮುಖ್ಯ ಖಾಜಿಯನ್ನಾಗಿ ನೇಮಿಸಿದನು. ಬಟೂಟನು ಸುಮಾರು ಎಂಟು ವರ್ಷಗಳ ಕಾಲ ಈ ಉನ್ನತ ಹುದ್ದೆಯನ್ನು ಅಲಂಕರಿಸಿ ಸೇವೆಸಲ್ಲಿಸಿದನು. ಅನಂತರ ಸುಲ್ತಾನನು ಅವನನ್ನು ಚೀನಾಕ್ಕೆ ತನ್ನ ರಾಯಭಾರಿಯನ್ನಾಗಿ ನೇಮಿಸಿ ಕಳುಹಿಸಿದನು. ಅವನು ಬಂಗಾಳದ ಮೂಲಕ ಚೀನಾಕ್ಕೆ ಹೋದನು. ಬಟೂಟನು ತನ್ನ ಪ್ರವಾಸದ ಅನುಭವಗಳನ್ನು ಕುರಿತು ರಚಿಸಿರುವ 'ಸಫರ್‌ನಾಮ' ಎಂಬ ಗ್ರಂಥವು ಮಹಮದ್ ಬಿನ್ ತುಘಲಕನ ಆಳ್ವಿಕೆಯ ಬಗ್ಗೆ ಹಲವಾರು ಉಪಯುಕ್ತ ಮಾಹಿತಿಗಳನ್ನೊಳಗೊಂಡಿದೆ. ಇಬನ್ ಬಟೂನು ಕೆಲವು ಮೇಳೆ ಪ್ರಾಸಂಗಿಕ ವಿಷಯಗಳನ್ನು ಇತಿಹಾಸದ ಸಂಗತಿಗಳೊಂದಿಗೆ ಬೆರೆಸಿದ್ದರೂ ಅವನು ನಿಷ್ಪಕ್ಷಪಾತವಾದ ಅಭಿಪ್ರಾಯಗಳನ್ನು ವ್ಯಕ್ತ ಪಡಿಸಿರುವನು. ಮಹಮದ್-ಬಿನ್-ತುಘಲಕನ ಆಳ್ವಿಕೆಗೆ ಸಂಬಂಧಪಟ್ಟ ಕೆಲವು ಅಸ್ಪಷ್ಟ ಘಟನೆಗಳ ಬಗ್ಗೆಯೇ ಅಲ್ಲದೆ ಅಂದಿನ ಪರಿಸ್ಥಿತಿಯ ಬಗ್ಗೆಯೂ ಅವನ ಗ್ರಂಥವು ಸಾಕಷ್ಟು ಬೆಳಕನ್ನು ಚೆಲ್ಲುತ್ತದೆ.

**ಫಿರೋಜ್ ಷಾ ತುಘಲಕ್** (1351-1388)

ಮಹಮದ್ ಬಿನ್ ತುಘಲಕನು ಥಟ್ಟಾದಲ್ಲಿ ಅನಿರೀಕ್ಷಿತವಾಗಿ ಕಾಲವಾದ ಮೇಲೆ ಅವನ ಚಿಕ್ಕಪ್ಪನ ಮಗನಾದ ಫಿರೋಜ್ ತುಘಲಕನು ದೆಹಲಿಯ ಸಿಂಹಾಸನವನ್ನೇರಿದನು ಮಹಮದ್ ಬಿನ್ ತುಘಲಕನು ಇವನನ್ನು ಹಿಂದೆಯೆ ತನ್ನ ಉತ್ತರಾಧಿಕಾರಿಯೆಂದು ಘೋಷಿಸಿದ್ದನು. ಫಿರೋಜನು 1351 ರಿಂದ 1388 ರವರೆಗೆ ರಾಜ್ಯವಾಳಿದನು. ಫಿರೋಜನು ಮಹಮದ್ ಬಿನ್ ತುಘಲಕನ ಆಳ್ವಿಕೆಯ ಕಾಲದಲ್ಲಿ ಆಡಳಿತದಲ್ಲಿ ಭಾಗವಹಿಸಿ ಸಾಕಷ್ಟು ಅನುಭವ ಪಡೆದಿದ್ದನು. ಆದರೆ ಅವನು ಧಾರ್ಮಿಕ

ವಿಷಯಗಳಲ್ಲಿ ಹೆಚ್ಚಿನ ಆಸಕ್ತಿ ಹೊಂದಿದ್ದನು. ಆದಾಗ್ಯೂ ಫಿರೋಜನು ಸಾಮ್ರಾಜ್ಯದ ಪ್ರಮುಖ ನೋಬಲ್ಲರ ಮತ್ತು ಉಲೇಮಗಳ ಒತ್ತಾಯಕ್ಕೆ ಮಣಿದು ಸಿಂಹಾಸನವನ್ನೇರಲು ಸಮ್ಮತಿಸಿದನು. ಫಿರೋಜನು ಶಾಂತಿಪ್ರಿಯ ದೊರೆಯಾಗಿದ್ದನು. ಇವನು ಅನಾವಶ್ಯಕವಾಗಿಯುದ್ಧಗಳನ್ನು ಮಾಡಿರಕ್ತ ಸುರಿಸುವುದನ್ನು ಇಷ್ಟಪಡುತ್ತಿರಲಿಲ್ಲ. ಇಂತಹ ಅಭಿಪ್ರಾಯಗಳನ್ನು ಹೊಂದಿದ್ದ ಸುಲ್ತಾನನು ರಾಜ್ಯವಿಸ್ತರಣೆ ಮಾಡುವ ಗೋಜಿಗೆ ಹೋಗದೆ ಪ್ರಜೆಗಳ ಹಿತಾಸಕ್ತಿಗಳನ್ನು ಕಾಪಾಡಲು ಬಹಳವಾಗಿ ಶ್ರಮಿಸಿ ರಾಜ್ಯದಲ್ಲಿ ಸಂಪತ್ಸಮೃದ್ಧಿಗಳನ್ನು ಹೆಚ್ಚಿಸಿ ಶಾಂತಿಯು ನೆಲಸುವಂತೆ ಮಾಡಿದನು.

ಫಿರೋಜನು ಅಧಿಕಾರ ರೂಢನಾದ ಮೇಲೆ ಹಲವಾರು ತೊಂದರೆಗಳನ್ನು ಎದುರಿಸಬೇಕಾಗಿತ್ತು. ದೆಹಲಿಯಲ್ಲಿ ಖವಾಜ ಜೆಹಾನನು ಮಹಮದ್ ಬಿನ್ ತುಘಲಕನ ಮಗನೆಂದು ಒಬ್ಬ ಅನಾಮಧೇಯನನ್ನು ದೆಹಲಿಯ ಸಿಂಹಾಸನಕ್ಕೆ ಉತ್ತರಾಧಿಕಾರಿಯೆಂದು ಘೋಷಿಸಿ ಹಕ್ಕು ಚಲಾಯಿಸುತ್ತಿದ್ದುನ್ನು ಎದುರಿಸಬೇಕಾಯಿತು. ಆದರೆ ಮಹಮದ್‌ಬಿನ್ ತುಘಲಕನಿಗೆ ಗುಂಡುಮಕ್ಕಳಿಲಿಲ್ಲವೆಂದು ಖಚಿತಗೊಂಡ ಮೇಲೆ ಖವಾಜನು ತನ್ನ ಪ್ರಯತ್ನ ಕೈಬಿಟ್ಟನು. ಇದರಿಂದ ಫಿರೋಜನಿಗೆ ಸಿಂಹಾಸನಕ್ಕೆ ಇದ್ದ ವಿರೋಧವು ತಪ್ಪಿ ಅವನು ಇತರ ವಿಷಯಗಳ ಕಡೆ ಗಮನ ಕೊಡಲು ಸಾಧ್ಯವಾಯಿತು. ಎರಡನೆಯದಾಗಿ, ಹಿಂದೆ ಮಹಮದ್ ಬಿನ್ ತುಘಲಕನು ಕೈಗೊಂಡ ಯೋಜನೆಗಳ ಪರಿಣಾಮವಾಗಿ ದೇಶದಲ್ಲಿ ಅತೃಪ್ತಿ ವಾತಾವರಣವು ಏರ್ಪಟ್ಟಿದ್ದಿತು ದೇಶವು ಆರ್ಥಿಕ ಸಂದಿಗ್ಧಸ್ಥಿತಿಗೆ ಸಿಲುಕಿದ್ದಿತು. ಗತಿಸಿದ ಸುಲ್ತಾನನ ಅತಿಯಾದ ದಾರಾಳತನ, ಅವನು ಕೈಗೊಂಡಯೋಜನೆಗಳ ವಿಫಲತೆ, ಸಾಮ್ರಾಜ್ಯದಲ್ಲಿ ದಿನೇ ದಿನೇ ಪ್ರಬಲವಾಗುತ್ತಿದ್ದ ವಿಚಿದ್ರಕಾರಕ ಶಕ್ತಿಗಳು ಮತ್ತು ಆಗಾಗ್ಗೆ ಸಂಭವಿಸುತ್ತಿದ್ದ ಕ್ಷಾಮಡಾಮರಗಳು ಮೊದಲಾದವುಗಳಿಂದಾಗಿ ರಾಜ್ಯದ ಖಜಾನೆಯಲ್ಲಿದ್ದ ಹಣವೆಲ್ಲ ಖರ್ಚಾಗಿದ್ದಿತು, ಅಲ್ಪ ಸ್ವಲ್ಪ ಉಳಿದಿದ್ದ ಹಣವನ್ನು ಖವಾಜ ಜೆಹಾನನು ಸಿಂಹಾಸನಕ್ಕೆ ತನ್ನ ಕಡೆಯವನ ಹಕ್ಕು ಭಾಧ್ಯತೆಗಳನ್ನು ಬಲಪಡಿಸಿಕೊಳ್ಳಲು ವ್ಯಯ ಮಾಡಿದ್ದನು. ಆದ್ದರಿಂದ ಹಣಕಾಸಿನ ಪರಿಸ್ಥಿತಿಯನ್ನು ಸುಧಾರಿಸುವುದು ಫಿರೋಜನು ಎದುರಿಸಬೇಕಾಗಿದ್ದ ಮತ್ತೊಂದು ಪ್ರಮುಖ ಸಮಸ್ಯೆಯಾಗಿತ್ತು. ಮೂರನೆಯದಾಗಿ, ಮಹಮದ್ ಬಿನ್ ತುಘಲಕನು ನೋಬಲ್ಲರ ವಿಶೇಷ ಹಕ್ಕುಬಾಧ್ಯತೆಗಳನ್ನು ಮತ್ತು ಸೌಲಭ್ಯಗಳನ್ನು ತೆಗೆದುಹಾಕಿ ಅವರನ್ನು ಸುಲ್ತಾನನ ವಿರೋಧಿಗಳನ್ನಾಗಿ ಮಾಡಿಕೊಂಡಿದ್ದನು. ಈಗ ಫಿರೋಜನ ಅವರ ಸಹಕಾರ ಮತ್ತು ನಿಷ್ಠೆಗಳನ್ನು ಪಡೆದುಕೊಳ್ಳಬೇಕಿತ್ತು. ಅಂತೆಯೆ ಉಲೇಮಾಗಳು ಮಹಮದನು ಅವರ ಬಗ್ಗೆ ಅನುಸರಿಸಿದ ನೀತಿಯಿಂದ ಅವರು ಸುಲ್ತಾನನ ವಿರೋಧಿಗಳಾಗಿದ್ದರು. ಫಿರೋಜನು ಅವರ ವಿರೋಧವನ್ನು ತಪ್ಪಿಸಿ ಅವರ ಬೆಂಬಲವನ್ನು ಪಡೆದುಕೊಳ್ಳಬೇಕಾಗಿತ್ತು. ನಾಲ್ಕನೆಯದಾಗಿ, ದಂಗೆಯೆದ್ದಿದ್ದ ಪ್ರಾಂತ್ಯಗಳ ಬಗ್ಗೆ ಫಿರೋಜನು ಒಂದು ನಿಶ್ಚಿತ ನೀತಿಯನ್ನು ರೂಪಿಸಿಕೊಳ್ಳಬೇಕಾಗಿತ್ತು. ಫಿರೋಜನು ಅವುಗಳ ಸ್ವಾತಂತ್ರವನ್ನು ಒಪ್ಪಿಕೊಳ್ಳಬೇಕಿತ್ತು ಇಲ್ಲವೆ ಅವುಗಳನ್ನು ದೆಹಲಿಯ ಸಾರ್ವಭೌಮತ್ವಕ್ಕೆ ಒಳಪಡಿಸಿಕೊಳ್ಳಲು ಅವುಗಳ ವಿರುದ್ಧ ಯುದ್ಧ ಮಾಡಬೇಕಾಗಿತ್ತು. ಆದರೆ ಫಿರೋಜನ ಮೃದು ಸ್ವಭಾವದ ವ್ಯಕ್ತಿಯಾಗಿದ್ದನು. ಅವನು ಎದುರಿಸಬೇಕಾಗಿದ್ದ ಸಮಸ್ಯೆಗಳ ಪ್ರಮಾಣವನ್ನು ನೋಡಿದಾಗ, ಅಲ್ಲಾವುದ್ದೀನನಲ್ಲಿದ್ದ ಸೈನಿಕ ಸಾಮರ್ಥ್ಯವೂ ಮತ್ತು

ಮಹಮದ್ ಬಿನ್ ತುಘಲಕನಲ್ಲಿದ್ದ ದೃಢನಿರ್ಧಾರವೂ ಅವನಿಗೆ ಅತ್ಯಾವಶ್ಯಕವಾಗಿರಬೇಕಾಗಿತ್ತು. ಆದರೆ ಈ ಗುಣಗಳು ಅವನಲ್ಲಿ ಎಳ್ಳಷ್ಟೂ ಇರಲಿಲ್ಲ. ಆದಾಗ್ಯೂ ಫಿರೋಜನು ತಾನು ಎದುರಿಸಬೇಕಾಗಿದ್ದ ಸಮಸ್ಯೆಗಳಿಗೆಲ್ಲಾ ತನ್ನದೇ ಆದ ನೀತಿಯನ್ನು ರೂಪಿಸಿಕೊಂಡು ಶಾಂತಿಯತಾವಾಗಿ ಮುವತ್ತೇಳು ವರ್ಷಗಳ ಕಾಲ ರಾಜ್ಯವಾಳಿದನು.

ಫಿರೋಜ್ ತುಘಲಕ್ ನಿಷ್ಠಾವಂತ ಮುಸಲ್ಮಾನನಾಗಿದ್ದು ಇಸ್ಲಾಮಿನ ಕಾನೂನುಗಳಿಗನುಸಾರವಾಗಿ ಧಾರ್ಮಿಕ ಪ್ರಭುತ್ವವನ್ನು ಸ್ಥಾಪಿಸಲು ಪ್ರಯತ್ನಿಸಿದನು. ಬಹಳ ಮಟ್ಟಿಗೆ ಮುಸ್ಲಿಂ ಇತಿಹಾಸಕಾರರೆಲ್ಲರೂ ಅವನಲ್ಲಿದ್ದ ದಯೆ ಮತ್ತು ಔದಾರ್ಯ ಗುಣಗಳನ್ನು ಶ್ಲಾಘಿಸಿದ್ದಾರೆ. ಆದರೆ ಈ ಗುಣಗಳು ಅವವ ಸ್ವಜಾತಿಯವರಿಗೆ ಅನ್ವಯಿಸುತ್ತಿದ್ದುವೇ ಹೊರತು ಅನ್ಯ ಜಾತಿಯವರಿಗಲ್ಲ. ಧಾರ್ಮಿಕವಾಗಿ ಹಿಂದುಗಳನ್ನು ಅವನು ಹಿಂಸಿಸಿದನು. ಸಾರ್ವತ್ರಿಕ ಪೂಜೆಗಳನ್ನು ನಿಷೇಧಿಸಿದನು. ಜೆಸಿಯ ಕಂದಾಯವನ್ನು ವಿಧಿಸಿದನು ಮತ್ತು ಹಿಂದುಗಳ ದೇವಾಲಯಗಳನ್ನು ಭಗ್ನಗೊಳಿಸಿದನು. ಇದರ ಪರಿಣಾಮವಾಗಿ ಹಿಂದುಗಳು ಅವನ ವಿರೋಧಿಗಳಾದರು. ಇವನು ದುರ್ಬಲ ಮನಸ್ಸಿ ನವನೂ ಮತ್ತು ಚಂಚಲಚಿತ್ತನೂ ಆಗಿದ್ದು ಕಟ್ಟುನಿಟ್ಟಾಗಿ ಆಡಳಿತ ಮಾಡಲು ಅಸಮರ್ಥನಾಗಿದ್ದನು. ಫಿರೋಜನ ವಿದೇಶಾಂಗ ನೀತಿಯಲ್ಲಿ ದಿಟ್ಟತನವೆಂಬುದಿರಲಿಲ್ಲ. ಇದಲ್ಲದೆ ಅವನು ಅಂತಃಪುರದವರ ಕೆಟ್ಟಪ್ರಭಾವಕ್ಕೊಳಗಾಗಿ ಆಡಳಿತವನ್ನು ಅಲಕ್ಷಿಸಿ ಸಾಮ್ರಾಜ್ಯವನ್ನು ಉಳಿಸಿಕೊಳ್ಳುದರಲ್ಲಿ ವಿಫಲನಾದನು. ಆದಾಗ್ಯೂ ಫಿರೋಜ್ ತುಘಲಕನ ಆಳ್ವಿಕೆಯು ಬಹಳ ಕಾಲದಿಂದಲೂ ಬಂದಿದ್ದ ಟರ್ಕರ ಸಂತತಿಗಳ ದರ್ಪಿಷ್ಟ ಹಾಗೂ ಕ್ರೂರತನದಿಂದ ಕೂಡಿದ ಆಳ್ವಿಕೆಯಲ್ಲಿ ಒಂದು ಮುಖ್ಯ ಬದಲಾವಣೆಯನ್ನು ತಂದಿತೆಂದು ಹಾವೆಲ್ ಅಭಿಪ್ರಾಯಪಡುತ್ತಾನೆ. ಇತಿಹಾಸಕಾರ ಲೇನ್‌ಪೂಲ್ ಫಿರೋಜನ ಕರುಣೆ, ದಯೆ ಮತ್ತು ಮಾನವ ಅನುಕಂಪದ ಗುಣಗಳನ್ನು ಶ್ಲಾಘಿಸಿದ್ದಾನೆ. ಸುಲ್ತಾನನು ತನ್ನ ಪ್ರಜೆಗಳ ಕಷ್ಟಗಳನ್ನು ಪರಿಹರಿಸಲು ಉದಾರ ನೀತಿಯನ್ನು ಅನುಸರಿಸಿದ್ದನು. ಬಡವರಿಗೆ ಮತ್ತು ನಿರುದ್ಯೋಗಿಗಳಿಗೆ ಬಹಳ ಉದಾರವಾಗಿ ಸಹಾಯ ಮಾಡಿದನು. ಕಠಿಣ ಶಿಕ್ಷೆಗಳನ್ನು ರದ್ದುಗೊಳಿಸಿದನು. ವಿದ್ವಾಂಸರಿಗೆ ಉದಾರ ಪ್ರೋತ್ಸಾಹ ನೀಡಿದನು. ಅವನು ಪ್ರಜೆಗಳ ಹಿತಾಸಕ್ತಿಯಲ್ಲಿ ಹೆಚ್ಚಿನ ಆಸಕ್ತಿ ವಹಿಸಿದ್ದನು.

**ಆಡಳಿತ**

ಫಿರೋಜನ ಆಂತರಿಕ ನೀತಿಯು ಮುಖ್ಯವಾಗಿ ಮೂರು ಅಂಶಗಳ ಗುರಿಸಾಧನೆಯಿಂದ ಕೂಡಿದ್ದಿತು. ಪರಿಹಾರ, ಸುಧಾರಣೆ ಮತ್ತು ಹೊಂದಾಣಿಕೆ ಆ ಮೂರು ಅಂಶಗಳಾಗಿದ್ದವು. ಫಿರೋಜನು ಮಹಮದ್‌ಬಿನ್ ತುಘಲಕನ ಆಳ್ವಿಕೆಯಲ್ಲಿ ಜನಗಳಿಗೆ ಉಂಟಾಗಿದ್ದ ತೊಂದರೆಗಳನ್ನು ನಿವಾರಿಸುವುದಕ್ಕೂ ಮತ್ತು ಆಡಳಿತದಲ್ಲಿ ಹಲವಾರು ಸೂಕ್ತ ಸುಧಾರಣೆಗಳನ್ನು ಮಾಡಿ ತನ್ನ ಆಡಳಿತಕ್ಕೆ ಬೆಂಬಲವನ್ನು ಪಡೆದುಕೊಳ್ಳಲು ಪ್ರಯತ್ನಿಸಿದನು.

ಫಿರೋಜನ ಆಳ್ವಿಕೆಯಲ್ಲಿ ಭಾರತವು ತೀವ್ರಜ್ವರದಿಂದ ಸಂಕಟಪಡುತ್ತಿದ್ದ ಒಬ್ಬ ಕಾಯಿಲೆ ಮನುಷ್ಯನು ಸುಧಾರಿಸಿಕೊಂಡತೆ ಸುಧಾರಿಸಿಕೊಂಡಿತೆಂದು ಲೇನ್‌ಪೂಲ್

ಬರೆಯುತ್ತಾನೆ. ಫಿರೋಜನ ತನ್ನ ಪ್ರಜೆಗಳ ಕುಂದುಕೊರತೆಗಳನ್ನು ನಿವಾರಿಸಲು ಉದಾರವಾದ ಕ್ರಮಗಳನ್ನು ಕೈಗೊಳ್ಳುವುದರ ಮೂಲಕ ತನ್ನ ಆಳ್ವಿಕೆಯನ್ನು ಆರಂಭಿಸಿದನು. ಹಿಂದಿನ ಆಡಳಿತದಲ್ಲಿ ಅವರಿಗಾಗಿದ್ದ ನಷ್ಟಗಳಿಗೆ ಪರಿಹಾರ ಕ್ರಮಗಳನ್ನು ಕೈಗೊಂಡನು. ಕಂದಾಯದ ದರವನ್ನು ಕಡಿಮೆ ಮಾಡಿದನು. ರೈತರಿಂದ ಸರ್ಕಾರಕ್ಕೆ ಬರಬೇಕಾಗಿದ್ದ ಸಾಲದ ಬಾಕಿಯನ್ನು ವಜಾ ಮಾಡಿದನು. ಕೊರಾನಿನಿಂದ ಅನುಮೋದಿಸಲ್ಪಟ್ಟಿದ್ದ ನಾಲ್ಕು ತೆರಿಗೆಗಳನ್ನು (ಜೆಸಿಯ, ಜಕತ್, ಖರಾಜ್ ಮತ್ತು ಕುಮ್ಸ್) ಬಿಟ್ಟು ಉಳಿದ ತೆರಿಗೆಗಳೆಲ್ಲವನ್ನೂ ರದ್ದುಗೊಳಿಸಿದನು. ಸುಲ್ತಾನನು ಮಾನವೀಯ ದೃಷ್ಟಿಯುಳ್ಳವನಾಗಿದ್ದು ಅಂಗಚ್ಛೇದನ ಮೊದಲಾದ ಕ್ರೂರ ಶಿಕ್ಷೆಗಳನ್ನು ತೆಗೆದುಹಾಕಿದನು. ಪ್ರಜೆಗಳ ಕಲ್ಯಾಣದಲ್ಲಿ ಆಸಕ್ತಿಯನ್ನು ಹೊಂದಿದ್ದ ಸುಲ್ತಾನನು ದೆಹಲಿಯಲ್ಲಿ ಆಸ್ಪತ್ರೆಯೊಂದನ್ನು ನಿರ್ಮಿಸಿದನು. ಮತ್ತು ಅಲ್ಲಿ ಉಚಿತವಾಗಿ ಔಷಧೋಪಚಾರಗಳು ದೊರೆಯುವಂತೆ ಮಾಡಿದನು. ಧರ್ಮಛತ್ರಗಳನ್ನು ನಿರ್ಮಿಸಿ ಅನಾಥರಿಗೆ ದೀನದಲಿತರಿಗೆ ಆಶ್ರಯ ಕಲ್ಪಿಸಿಕೊಟ್ಟನು. ನಿರುದ್ಯೋಗಿಗಳಿಗೆ ಉದ್ಯೋಗವಕಾಶಗಳನ್ನು ಕಲ್ಪಿಸಲು ಉದ್ಯೋಗ ಇಲಾಖೆಯೊಂದನ್ನು ತೆರೆದನು. ಬಡವರಾದ ಹೆಣ್ಣು ಮಕ್ಕಳ ವಿವಾಹಕ್ಕಾಗಿ ಬೇಕಾದ ಹಣವನ್ನು ಸರ್ಕಾರದಿಂದ ಕೊಡಲು ವ್ಯವಸ್ಥೆ ಮಾಡಿದನು.

ಫಿರೋಜನು ವ್ಯವಸಾಯವನ್ನು ಅಭಿವೃದ್ಧಿಪಡಿಸಲು ಅನೇಕ ಕ್ರಮಗಳನ್ನು ಕೈಗೊಂಡನು. ಕೆರೆಕಟ್ಟೆಗಳನ್ನು ಕಟ್ಟಿಸಿದ್ದಲ್ಲದೆ ಕಾಲುವೆಗಳನ್ನು ತೋಡಿಸಿ ನೀರಾವರಿ ವ್ಯವಸಾಯವನ್ನು ವೃದ್ಧಿಗೊಳಿಸಿದನು. ಇವನ ಕಾಲದಲ್ಲಿ ಪಂಜಾಬಿನಲ್ಲಿ ಸಟ್ಲೆಜ್ ನದಿಗೆ ತೋಡಲ್ಪಟ್ಟ ರಾಜಾಬ್ ಮತ್ತು ಉಲುಗ್‌ಖಾನಿ ಎಂಬ ಎರಡು ಕಾಲುವೆಗಳು ನೂರ ಅರವತ್ತು ಮೈಲಿ ಉದ್ದವಿದ್ದು ಸಹಸ್ರಾರು ಎಕರೆ ಭೂಮಿಯು ನೀರಾವರಿ ಸೌಲಭ್ಯವನ್ನು ಪಡೆಯಿತು. ಕಾಲುವೆಗಳ ಇಕ್ಕೆಲಗಳಲ್ಲೂ ರೈತರ ಹೊಸ ನೆಲಸುಗಳು ಅಸ್ತಿತ್ವಕ್ಕೆ ಬಂದವು. ಈ ಕ್ರಮಗಳಿಂದ ಭೂಉತ್ಪನ್ನವು ಜಾಸ್ತಿಯಾದುದೇ ಅಲ್ಲದೆ ಸರ್ಕಾರದ ವರಮಾನವೂ ಹೆಚ್ಚಿತು. ಸುಲ್ತಾನನು ಉಲೇಮಾಗಳ ಸಲಹೆಯ ಮೇಲೆ ಭೂಕಂದಾಯದ ಜೊತೆಗೆ ಶೇ. ಪತ್ತರಷ್ಟು ನೀರಾವರಿ ತೆರಿಗೆಯನ್ನು ವಿಧಿಸಿದನು. ರೈತರು. ಉತ್ತಮ ಬೆಳೆಗಳನ್ನು ಬೆಳೆಯಲು ಪ್ರೋತ್ಸಾಹಿಸಿದನು. ಪಾಳು ಬಿದ್ದಿದ್ದ ಭೂಮಿಯನ್ನು ವ್ಯವಸಾಯಯೋಗ್ಯವನ್ನಾಗಿ ಮಾಡಿದನು. ಉದ್ಯಾನವನಗಳ ನಿರ್ಮಾಣದಲ್ಲಿ ಆಸಕ್ತಹೊಂದಿದ್ದು ಫಲಪುಷ್ಪ ತೋಟಗಳನ್ನು ನಿರ್ಮಿಸಿದನು. ಸುಲ್ತಾನನು ಕೈಗೊಂಡ ಈ ಎಲ್ಲ ಕ್ರಮಗಳಿಂದ ದೇಶದ ಆರ್ಥಿಕ ಪರಿಸ್ಥಿತಿಯು ಸುಧಾರಿಸಿತು. ಪ್ರತಿಯೊಬ್ಬ ರೈತನ ಮನೆಯಲ್ಲೂ ದವಸಧಾನ್ಯಗಳು ತುಂಬಿತುಳುಕುತ್ತಿದ್ದುವೆಂದೂ, ಪ್ರತಿಯೊಬ್ಬರೂ ಸಾಕಷ್ಟು ಚಿನ್ನ ಬೆಳ್ಳಿಯನ್ನು ಹೊಂದಿದ್ದರೆಂದು, ಮತ್ತು ಆಭರಣಗಳನ್ನು ಇಟ್ಟುಕೊಳ್ಳದಿದ್ದ ಸ್ತ್ರೀಯರು ಯಾರೂ ಇರಲಿಲ್ಲವೆಂದೂ ಹಾಗೂ ಪ್ರತಿಯೊಂದು ಮನೆಯಲ್ಲೂ ವೈಭವದ ವಾತಾವರಣವು ಕಂಡುಬರುತ್ತಿತ್ತೆಂದು ಷಾಮ್ಸ್-ಇ-ಸಿರಾಜ್ ಅಫೀಫ್ ಹೇಳುತ್ತಾನೆ. ಇವನ ಹೇಳಿಕೆಯಲ್ಲಿ ಅಲ್ಪಸ್ವಲ್ಪ ಅತಿಶಯೋಕ್ತಿ ಇರುವುದಾದರೂ, ಜನಗಳ ಆರ್ಥಿಕಸ್ಥಿತಿಗಳಲ್ಲಿ ಸಾಕಷ್ಟು ಪ್ರಗತಿಯುಂಟಾಗಿದ್ದಿತೆಂಬುದರಲ್ಲಿ ಸಂಶಯವಿಲ್ಲ. ಈ ಸುಭಿಕ್ಷವಾತಾವರಣದಲ್ಲಿ ಸುಲ್ತಾನನು ನಾಣ್ಯ ಪದ್ಧತಿಯನ್ನು ಪುನರ್‌ವ್ಯವಸ್ಥೆಗೊಳಿಸಿ ಹೆಚ್ಚಿನ ಸಂಖ್ಯೆಯಲ್ಲಿ ಚಿನ್ನದ ನಾಣ್ಯಗಳನ್ನು ಜಾರಿಗೆ ತಂದನು.

ಫಿರೋಜನು ವಿದ್ಯಾಭಿಮಾನಿಯೂ ಆಗಿದ್ದನು. ಆವನು ಅಷ್ಟೇನು ವಿದ್ಯಾವಂತ ನಲ್ಲದಿದ್ದರೂ ವಿದ್ಯೆ ಮತ್ತು ಕಲೆಗೆ ಹೆಚ್ಚಿನ ಪ್ರೋತ್ಸಾಹ ನೀಡಿದನು. ಆವನು ಸುಮಾರು ಮೂವತ್ತು ಕಾಲೇಜುಗಳನ್ನು ಕಟ್ಟಿಸಿದ್ದನೆಂದು ಹೇಳಲಾಗಿದೆ. ಇವುಗಳಲ್ಲಿ ಮುಸ್ಲಿಂ ಧರ್ಮಶಾಸ್ತ್ರ ಮತ್ತು ಕಾನೂನುಗಳನ್ನು ಕುರಿತು ಹೇಳಿಕೊಡಲಾಗುತ್ತಿತ್ತು. ಪರ್ಶಿಯನ್ ಭಾಷೆಗೆ ಕೆಲವು ಉತ್ತಮ ಭಾರತೀಯ ಕೃತಿಗಳನ್ನು ಭಾಷಾಂತರಿಸಲು ಪ್ರೋತ್ಸಾಹ ನೀಡಿದನು. ಜಿಯಾಉದ್ದೀನ್ ಭರಣಿ ಮತ್ತು ಷಾಮ್ಸ್-ಇ-ಸಿರಾಜ್ ಈ ಕಾಲದ ಪ್ರಸಿದ್ಧ ಇತಿಹಾಸಕಾರರಾಗಿದ್ದರು. ಸುಲ್ತಾನನು ಕಟ್ಟಡಗಳ ನಿರ್ಮಾಣದಲ್ಲೂ ಆಸಕ್ತಿ ಹೊಂದಿದ್ದನು. ಇವನ ಕಾಲದಲ್ಲಿ ಹಲವಾರು ಸಾರ್ವಜನಿಕ ಕಟ್ಟಡಗಳು ಕಟ್ಟಲ್ಪಟ್ಟವು. ಆವುಗಳಲ್ಲಿ ಮುಖ್ಯವಾದವೂಗಳೆಂದರೆ ಕೋಟೆಗಳು, ಬತೇರಿಗಳು, ಮಸೀದಿಗಳು, ಕಾಲೇಜುಗಳು, ಆಸ್ಪತ್ರೆಗಳು, ಇವುಗಳಲ್ಲದೆ ಫಿರೋಜಾಬಾದ್, ಫಿರೋಜ್‌ಪುರ್, ಫತೇಹಬಾದ್ ಮತ್ತು ಜಾನ್ಪುರ್ ಎಂಬ ಹೊಸ ಪಟ್ಟಣಗಳನ್ನು ನಿರ್ಮಿಸಿದನು. ದೆಹಲಿ ಬಳಿ ಕಟ್ಟಲಾಗಿದ್ದ ಫಿರೋಜಾಬಾದ್ ನಗರಕ್ಕೆ ನೀರು ಪೂರೈಸಲು ಯಮುನಾ ನದಿಯಿಂದ ದೊಡ್ಡ ಕಾಲುವೆಯನ್ನು ನಿರ್ಮಿಸಿದನು. ಫಿರೋಜನು ಪ್ರಾಚೀನ ಸ್ಮಾರಕಗಳನ್ನು ಕಾಪಾಡುವುದರಲ್ಲಿಯೂ ಆಸಕ್ತಿ ಹೊಂದಿದ್ದನು. ಅಶೋಕನ ಎರಡು ಶಿಲಾಸ್ಥಂಭಗಳನ್ನು ದೆಹಲಿಗೆಸಾಗಿಸಿ ಅವುಗಳನ್ನು ಅಲ್ಲಿ ನೆಲೆಗೊಳಿಸಿದನು. ಕುತುಬ್‌ಮಿನಾರ್ ಕಟ್ಟಡವನ್ನು ದುರಸ್ತುಗೊಳಿಸಿದನು. ಸುಲ್ತಾನನ ಈ ಕ್ರಮಗಳಿಂದ ಜನಗಳಿಗೆ ಬಹಳಷ್ಟು ಒಳ್ಳೆಯದೇ ಆಯಿತು.

**ಸೈನಿಕ ಸುಧಾರಣೆ**

ಫಿರೋಜನು ಕೈಗೊಂಡ ಸುಧಾರಣೆಗಳಲ್ಲಿ ಕೆಲವು ಸುಧಾರಣೆಗಳು ಶ್ಲಾಘನೀಯವಾಗಿದ್ದರೂ ಮತ್ತೆ ಕೆಲವು ಸುಧಾರಣೆಗಳು ದೋಷದಿಂದ ಕೂಡಿದ್ದು ದೆಹಲಿ ಸುಲ್ತಾನರ ಅಧಿಕಾರದ ಅವನತಿಗೆ ಕಾರಣವಾದವು. ಆವನು ತನ್ನ ಸೈನ್ಯವನ್ನು ಊಳಿಗ ಮಾನ್ಯ ಪದ್ಧತಿಯ ರೀತಿಯಲ್ಲಿ ಪುನರ್‌ವ್ಯವಸ್ಥೆಗೊಳಿಸಿದನು, ಆದರೆ ಅವನ ನೀತಿಯಿಂದ ಸೈನ್ಯದಲ್ಲಿಶಿಸ್ತು ದಕ್ಷತೆಗಳು ಮಾಯವಾಗಿ ಅದೊಂದು ಆಶ್ರಿತಜನಗಳ ಪಡೆಯಾಯಿತು. ಸುಲ್ತಾನನು ಸೈನಿಕರ ಬಗ್ಗೆ ಅತಿಯಾದ ಧಾರಾಳತನವನ್ನು ತೋರಿಸಿದನು. ಇದರಿಂದ ಸೈನ್ಯದ ದಕ್ಷತೆಯು ಕುಂಠಿತಗೊಂಡು ಸೈನ್ಯದಲ್ಲಿ ಮುದುಕರು ಮತ್ತು ಅಶಕ್ತರೂ ಉಳಿಯುವಂತೆ ಮಾಡಿತು. ಸುಲ್ತಾನನು ಹೊಸ ಕಾನೂನೊಂದನ್ನು ಜಾರಿ ಮಾಡಿಸಿಪಾಯಿಯು ತನ್ನ ವಯಸ್ಸಿನಿಂದಾಗಿ ಸೇವೆ ಸಲ್ಲಿಸಲು ಅಸಮರ್ಥವೆಂದು ಕಂಡುಬಂದರೆ ಅವನು ತನಗೆ ಬದಲಾಗಿ ತನ್ನ ಮಗನನ್ನಾಗಲೀ ಅಥವ ಅಳಿಯನನ್ನಾಗಲೀ ಸೇವೆಗೆ ಕಳುಹಿಸಲು ಅವಕಾಶ ಕಲ್ಪಿಸಿಕೊಡಲಾಯಿತು. ಇದರಿಂದ ಸೈನಿಕ ಹುದ್ದೆಗಳು ವಂಶಾನುಗತವಾಗಿ ಸೈನ್ಯವು ದಕ್ಷತೆಯನ್ನು ಕಳೆದುಕೊಳ್ಳುವಂತಾಯಿತು.

ಫಿರೋಜನ ಜಾರಿಗೆ ತಂದ ಅವಿವೇಕದ ಸುಧಾರಣೆಯೆಂದರೆ ಜಹಗೀರು ಪದ್ಧತಿಯನ್ನು ಪುನಃ ಜಾರಿಗೆ ತಂದುದು. ಹಿಂದೆ ಅಲ್ಲಾವುದ್ದೀನ್ ಮತ್ತು ಮಹಮದ್ ಬಿನ್‌ತುಘಲಕರು ರದ್ದುಪಡಿಸಿದ್ದ ಜಹಗೀರು ಪದ್ಧತಿಯನ್ನು ಪುನಃ ಜಾರಿಗೆ ತಂದನು. ಸೈನಿಕರಿಗೆ ಸಂಬಳ ಕೊಡುವುದಕ್ಕೆ ಬದಲಾಗಿ ಜಹಗೀರುಗಳನ್ನು ಕೊಟ್ಟು ಆದರಿಂದ ಮುಂದೆ ಸಾಮ್ರಾಜ್ಯಕ್ಕೆ ಕೆಡಕುಂಟಾಗುವಂತೆ ಮಾಡಿಕೊಂಡನು. ಇಂತಹದೇ ಮತ್ತೊಂದು

ಕೆಲಸವೆಂದರೆ ಅಪಾರ ಸಂಖ್ಯೆಯಲ್ಲಿ ಗುಲಾಮರನ್ನು ನೇಮಿಸಿಕೊಂಡಿದುದು ಸಾಮ್ರಾಜ್ಯದ ನಾನಾಭಾಗಗಳಿಂದ ರಾಜ್ಯಪಾಲರುಗಳು ಯುದ್ಧ ಸಮಯದಲ್ಲಿ ಸಾಧ್ಯವಾದಷ್ಟು ಜನರನ್ನು ಹಿಡಿದು ಅವರನ್ನು ಗುಲಾಮರನ್ನಾಗಿ ಸೇವೆಸಲ್ಲಿಸಲು ದೆಹಲಿಗೆ ಕಳುಹಿಸಿಕೊಡುತ್ತಿದ್ದರು. ಸುಲ್ತಾನನು ಅವರಿಗೆ ವಿದ್ಯಾಭ್ಯಾಸ ಮತ್ತು ತರಬೇತಿಯನ್ನು ಕೊಡಿಸಿ ಸರ್ಕಾರದ ಸೇವೆಯಲ್ಲಿ ನೇಮಿಸುವ ವ್ಯವಸ್ಥೆ ಮಾಡಿದ್ದನು. ಆದರೆ ಸುಲ್ತಾನನು ಅವರ ಬಗ್ಗೆ ಬಹಳ ಔದಾರ್ಯದಿಂದ ನಡೆದುಕೊಡು ಕೆಲವು ವರ್ಷಗಳಲ್ಲಿಯೆ ಅವರ ಸಂಖ್ಯೆಯು 180,೦೦೦ಕ್ಕೆ ಏರಿತು. ಗುಲಾಮರ ಮೇಲ್ವಿಚಾರಣೆಯನ್ನು ನೋಡಿಕೊಳ್ಳಲು ಪ್ರತ್ಯೇಕ ಇಲಾಖೆಯೊಂದನ್ನು ಸ್ಥಾಪಿಸಿದನು. ಆದರೆ ಈ ಪದ್ಧತಿಯು ದಿನಗಳುರುಳಿದಂತೆ ಸರ್ಕಾರದ ಖಜಾನೆಯ ಮೇಲೆ ತೀವ್ರ ಪರಿಣಾಮವನ್ನು ಮಾಡಿತು. ಆಡಳಿತದಲ್ಲಿ ಅದಕ್ಷತೆ ಮತ್ತು ಭ್ರಷ್ಟಾಚಾರವು ಹೆಚ್ಚಿತು. ಸುಲ್ತಾನನು ಗುಲಾಮರ ಬಗ್ಗೆ ಹೆಚ್ಚಿನ ಆಸಕ್ತಿ ವಹಿಸಿಲು ಅವರನ್ನು ಇಸ್ಲಾಂ ಧರ್ಮಕ್ಕೆ ಮತಾಂತರಗೊಳಿಸುವ ಉದ್ದೇಶವೂ ಕೂಡಿದ್ದಿ ತೆಂದು ಕೆಲವು ಇತಿಹಾಸಕಾರರು ಅಭಿಪ್ರಾಯಪಟ್ಟಿರುವರು.

**ಸೈನಿಕ ಕಾರ್ಯಚರಣೆಗಳು**

ಫಿರೋಜ್‌ತುಘಲಕನು ಸಿಂಹಾಸನವನ್ನೇರಿದ ಕೆಲವು ದಿವಸಗಳಲ್ಲಿಯೇ ಸಾಮ್ರಾಜ.ದ ವಿವಿಧ ಭಾಗಗಳಲ್ಲಿನ ದಂಗೆಗಳನ್ನು ಹತ್ತಿಕ್ಕಿ ಅವುಗಗಳನ್ನು ತನ್ನ ಅಧೀನಕ್ಕೆ ತಂದುಕೊಳ್ಳಲು ಸೈನಿಕ ಕ್ರಮಗಳನ್ನು ಕೈಗೊಂಡನು. ಆದರೆ ಈ ಕ್ರಮಗಳು ಅವನ ಅನಿರ್ಧಾರ ಮತ್ತು ಅಸಮರ್ಥತೆಗಳಿಂದ ವಿಫಲವಾದವು. ತತ್ಪರಿಣಾಮವಾಗಿ ಸಾಮ್ರಾಜ್ಯದಿಂದ ಕೈಬಿಟ್ಟುಹೋಗಿದ್ದ ಅನೇಕ ರಾಜ್ಯಗಳನ್ನು ಪುನಃ ವಶಪಡಿಸಿಕೊಳ್ಳುವುದರಲ್ಲಿ ವಿಫಲನಾದನು. ಬಂಗಾಳದಲ್ಲಿ ಷಾಮ್ಸ್-ಉದ್ದೀನ್ ಇಲಿಯಾಸ್ ಷಾ ಎಂಬುವನು ದಂಗೆಯೆದ್ದು ತನ್ನ ಸ್ವಾತಂತ್ರ್ಯವನ್ನು ಘೋಷಿಸಿಕೊಂಡಿದ್ದನು. ಸುಲ್ತಾನನ್ನು 1353ರಲ್ಲಿ ಅವನ ವಿರುದ್ಧ ಅಪಾರ ಸೈನ್ಯದೊಂದಿಗೆ ದಂಡೆತ್ತಿಹೋದನು. ಇಲಿಯಾಸ್‌ನು ಪ್ರಬಲ ಕೋಟೆಯಾಗಿದ್ದ ಇಕ್ದಾಲ ಕೋಟೆಯಲ್ಲಿ ರಕ್ಷಣೆ ಪಡೆದನು. ಸುಲ್ತಾನನ್ನು ಅವನನ್ನು ಅಷ್ಟಕ್ಕೆ ಬಿಟ್ಟು ದೆಹಲಿಗೆ ಹಿಂದಿರುಗಿದನು. ಇಲಿಯಾಸ್‌ನು ಕಾಲವಾದ ಮೇಲೆ ಅವನ ಮಗ ಸಿಕಂದರ್ ಎಂಬವನು ಬಂಗಾಳದ ರಾಜನಾದನು. ಫಿರೋಜನು 1359ರಲ್ಲಿ ಅವನವಿರುದ್ಧ ಬಂಗಾಳದ ಮೇಲೆ ಎರಡನೆ ದಂಡಯಾತ್ರೆ ಕೈಗೊಂಡನು. ಈ ದಂಡಯಾತ್ರೆಯಲ್ಲಿ ಸ್ವಲ್ಪವೂ ಚುರುಕಿರಲಿಲ್ಲ. ಹೀಗಾಗಿ ಸುಲ್ತಾನನ ಸೈನ್ಯವು ಬಹಳ ನಿಧಾನವಾಗಿ ಮುಂದುವರಿದು ಬಂಗಾಳವನ್ನು ತಲುಪಿತು. ಸಿಕಂದರನು ತನ್ನ ತಂದೆಯಂತೆಯೆ ಇಕ್ದಾಲ ಕೋಟೆಯಲ್ಲಿ ರಕ್ಷಣೆ ಪಡೆದುಕೊಂಡು ಹೋರಾಟವನ್ನಾರಂಭಿಸಿದನು. ಈ ಹೋರಾಟವು ಕೆಲವು ತಿಂಗಳುಗಳ ಕಾಲ ಮುಂದುವರಿದು ಕೊನೆಗೆ ಸುಲ್ತಾನನು ಸಿಕಂದರನೊಂದಿಗೆ ಒಪ್ಪಂದವನ್ನು ಮಾಡಿಕೊಂಡು ಹಿಂದಿರುಗಿದನು. ಆದರೆ ಬಂಗಾಳವು ಹೆಸರಿಗೆ ಮಾತ್ರ ದೆಹಲಿಯ ಪ್ರಭುತ್ವಕ್ಕೊಳಪಟ್ಟಿದ್ದು ವಾಸ್ತವಿಕ ದೃಷ್ಟಿಯಲ್ಲಿ ಸ್ವತಂತ್ರ ರಾಜ್ಯವಾಗಿ ಮುಂದುವರಿಯಿತು. ಬಂಗಾಳದಿಂದ ಹಿಂದಿರುಗಿದನಂತರ ಸುಲ್ತಾನನು 1360ರಲ್ಲಿ ಒರಿಸ್ಸದ ಮೇಲೆ ದಂಡಯಾತ್ರೆ ಕೈಗೊಂಡನು. ಸುಲ್ತಾನನ ಸೈನ್ಯವು ಕಟಕ್ ಮೇಲೆ ಆಕ್ರಮಣಮಾಡಿ ಅಲ್ಲಿನ ಪ್ರಜೆಗಳಿಗೆ ಅಪಾರ ನಷ್ಟವನ್ನುಂಟುಮಾಡಿತು. ಇದಲ್ಲದೆ ಹಿಂದುಗಳ ಪವಿತ್ರ ಯಾತ್ರಾಸ್ಥಳವಾದ 'ಪುರಿ'ಯನ್ನು ಲೂಟಿಮಾಡಿ ಅಲ್ಲಿನ

ಪ್ರಸಿದ್ಧ ಜಗನ್ನಾಥ ದೇವಾಲಯವನ್ನು ನೆಲಸಮ ಮಾಡಿತು. ಸುಲ್ತಾನನ ಸೈನ್ಯವು ಗಂಡಸರು ಮತ್ತು ಹೆಂಗಸರು ಎಂಬ ಭೇದವಿಲ್ಲದೆ ಸಹಸ್ರಾರು ಜನರನ್ನು ಕಗ್ಗೊಲೆಗೈದಿತು. ಹೆಂಗಸರನ್ನು ಸೆರೆಹಿಡಿದು ಸೈನಿಕರ ಮನೆಗಳಲ್ಲಿ ಗುಲಾಮರಾಗಿ ಕೆಲಸ ಮಾಡಿಲು ದೆಹಲಿಗೆ ಕಳುಹಿಸಲಾಯಿತು. ಒರಿಸ್ಸದ ರಾಜನು ಶರಣಾಗತನಾಗಿ ಸುಲ್ತಾನನಿಗೆ ಕಪ್ಪಕೊಡಲು ಒಪ್ಪಿದ ಮೇಲೆ ಸುಲ್ತಾನನು ದೆಹಲಿಗೆ ಹಿಂದಿರುಗಿದನು. ಒರಿಸ್ಸದಲ್ಲಿ ಸುಲ್ತಾನನು ನಿರಪರಾಧಿ ಜನಗಳ ಮೇಲೆ ನಡೆಸಿದ ಕ್ರೂರಕೃತ್ಯಗಳು ಮತ್ತು ಅಮಾನುಷ ಕೊಲೆಗಳು ಅವನ ಮತೀಯ ವಿಷಯಗಳಲ್ಲಿ ಕ್ರೂರಿಯೂ ಮತ್ತು ಮತಾಂಧನೂ ಆಗಿದ್ದನೆಂದು ತಿಳಿಸುತ್ತವೆ. ಒಟ್ಟಾರೆ ಹೇಳುವುದಾದರೆ ಒರಿಸ್ಸದ ಮೇಲೆ ಸುಲ್ತಾನನು ಕೈಗೊಂಡ ದಂಡಯಾತ್ರೆಯು ಅಲ್ಲಿ ಅವನು ತನ್ನ ಅಧಿಕಾರ ಪ್ರಬಾವವನ್ನು ಸ್ಥಾಪಿಸುವುದರಲ್ಲಿ ಯಶಸ್ವಿಯಾಯಿತು.

ದೆಹಲಿ ಸಾಮ್ರಾಜ್ಯದ ಪಶ್ಚಿಮಬಾಗದಲ್ಲೂ ಬಹಳ ಕಾಲದಿಂದಲೂ ದಂಗೆಗಳು ಸಂಭವಿಸುತ್ತಲೇ ಇದ್ದವು. ಮಹಮದ್ ಬಿನ್ ತುಘಲಕನು ಇಲ್ಲಿನದಂಗೆಗಳನ್ನು ಅಡಗಿಸಲು ಪ್ರಯತ್ನಿಸಿ ವಿಫಲನಾಗಿದ್ದನು. ಫಿರೋಜನು 1361ರಲ್ಲಿ ನಗರ ಕೋಟೆಯನ್ನು ಪುನಃ ವಶಪಡಿಸಿಕೊಳ್ಳುವ ಸಲುವಾಗಿ ಆದರ ಮೇಲೆ ದಂಡೆತ್ತಿಹೋದನು. ಸುಲ್ತಾನನ ಸೈನ್ಯವು ನಗರ ಕೋಟೆಯನ್ನು ತಲುಪುವುದರಲ್ಲಿಯೇ ಅಲ್ಲಿನ ದಂಗೆಕೋರರ ಮುಖಂಡನು ಶರಣಾಗತನಾಗಿ ಪೊಗದಿ ಕೊಡಲೊಪ್ಪಿದನು. ಮಾರನೆ ವರ್ಷ ಸುಲ್ತಾನನು ಸಿಂಧ್ ಮೇಲೆ ದಂಡೆತ್ತಿಹೋಗಿ ಅದರ ರಾಜಧಾನಿಯಾಗಿದ್ದ ಥಟ್ಟಾಕ್ಕೆ ಮುತ್ತಿಗೆ ಹಾಕಿದನು. ಅಲ್ಲಿನ ದೊರೆ ಜಾಮ್ ಬಾಬಿನಿಯನು ಸಾಹಸದಿಂದ ಹೋರಾಡಿ ಫಿರೋಜನ ಸೈನ್ಯಕ್ಕೆ ಅಪಾರ ಹಾನಿಯನ್ನು ಂಟುಮಾಡಿದನು. ಈ ನಡುವೆ ಸುಲ್ತಾನನ ಶಿಬಿರದಲ್ಲಿ ಕಾಲರಾಜಾಡ್ಯವು ತಲೆದೋರಿತು. ಸಾಲ್ತಾನನು ಇನ್ನೂ ಹಚ್ಚಿನ ಸೈನಿಕ ನಷ್ಟವನ್ನಿಚ್ಚಿಸದೆ ಗುಜರಾತಿಗೆ ಹಿಂದಿರುಗಿದನು. ಸೈನ್ಯವು ಗುಜರಾತನ್ನು ತಲುಪುವುದಕ್ಕೆ ಮುಂಚೆ ಅಹಾರದ ಅಭಾವದಿಂದಾಗಿ ಮತ್ತಷ್ಟು ಕಷ್ಟವನ್ನು ಅನುಭವಿಸಿತು. ಗುಜರಾತಿನ ರಾಜ್ಯಪಾಲನಾಗಿದ್ದ ನಿಜಾಮ್-ಉಲ್ಕ್‌ನು ಸಕಾಲದಲ್ಲಿ ಸುಲ್ತಾನನಿಗೆ ಸಹಾಯವನ್ನು ಕಳುಹಿಸಲಿಲ್ಲವೆಂಬ ಕಾರಣಕ್ಕಾಗಿ ಅವನನ್ನು ನಿವೃತ್ತಿಗೊಳಿಸಿ ಅವನ ಆಸ್ಥಾನದಲ್ಲಿ ಜಫಾರ್ ಖಾನ್‌ನ್ನು ನೇಮಿಸಿದನು. ಸುಲ್ತಾನನು ಗುಜರಾತಿನಲ್ಲಿ ಪುನಃ ಸೈನ್ಯವನ್ನು ಸಜ್ಜು ಗೊಳಿಸಿಕೊಂಡು ಸಿಂಧ್ ಮೇಲೆ ಹೋಗಿ ಥಟ್ಟಾದ ಮುತ್ತಿಗೆಯನ್ನು ಮುಂದುವರಿಸಿದನು. ಈಗ ಜಾಮ್ ಬಾಬಿನಿಯನು ಶಾಂತಿಒಪ್ಪಂದವನ್ನು ಮಾಡಿಕೊಂಡು ಶರಣಾಗತನಾದನು. ಅವನು ತಪ್ಪದೆ ಪೊಗದಿಕೊಡಲು ಒಪ್ಪಿಕೊಂಡ ಷರತ್ತಿನ ಮೇರೆಗೆ ಅವನನ್ನು ಅಧಿಕಾರದಲ್ಲಿ ಮುಂದುವರಿಯಲು ಅನುಮತಿ ನೀಡಿ ಸುಲ್ತಾನನು ದೆಹಲಿಗೆ ಹಿಂದಿರುಗಿದನು. ದಕ್ಷಿಣ ಭಾರತದ ಮೇಲೆ ದಂಡಯಾತ್ರೆಗಳನ್ನು ಕೈಗೊಳ್ಳುವಂತೆ ನೋಬಲ್ಲರು ನೀಡಿದ ಸಲಹೆಗಳನ್ನು ತಳ್ಳಿಹಾಕಿದನು. ಸುಲ್ತಾನನಿಗೆ ಮುಸ್ಲಿಂ ಸೈನಿಕರ ರಕ್ತವನ್ನು ಹರಿಸಲು ಇಷ್ಟ ವಿಲ್ಲದಿದ್ದುದೂ ಮತ್ತು ದೆಹಲಿಗೆ ಬಹಳ ದೂರದಲ್ಲಿದ್ದ ದಕ್ಷಿಣದ ರಾಜ್ಯಗಳನ್ನು ಸದಾ ಕಾಲವೂ ದೆಹಲಿಯ ಅಧೀನದಲ್ಲಿಟ್ಟುಕೊಳ್ಳುವುದು ಅಸಾಧ್ಯವೆಂದು ಮನಗಂಡಿದ್ದ ಸುಲ್ತಾನನು ದಕ್ಷಿಣಭಾರತದ ಮೇಲೆ ದಂಡಯಾತ್ರೆ ಮಾಡುವ ಪ್ರಯತ್ನವನ್ನು ಕೈಬಿಟ್ಟನು.

**ಫಿರೋಜನ ಕೊನೆಯ ದಿನಗಳು**

ಫಿರೋಜನ ಕೊನೆಯ ದಿನಗಳು ಪಿತೂರಿ, ಒಳಸಂಚು ಮತ್ತು ದೊಂಬಿಗಲಭೆಗಳಿಂದ ಕೂಡಿದ್ದವು. ಇಂತಹ ಒಂದು ಪರಿಸ್ಥಿತಿಗೆ ಫಿರೋಜನೆ ಕಾರಣನಾಗಿದ್ದನು. ಅವನು ತನ್ನ ಮುವತ್ತೇಳು ವರ್ಷಗಳ ಕಾಲದ ದೀರ್ಘ ಆಳ್ವಿಕೆಯ ನಂತರ 1388ರಲ್ಲಿ ಕಾಲವಾದನು. ಫಿರೋಜ್ ತುಘಲಕನ ಮರಣಾನಂತರ ದೆಹಲಿ ಸಾಮ್ರಾಜ್ಯವು ವಿಸ್ತಾರದಲ್ಲಿ ಒಂದು ಸಣ್ಣ ಪ್ರಾಂತ್ಯದಷ್ಟಾಗಿ ಮಾರ್ಪಟ್ಟು ಪ್ರಾಮುಖ್ಯತೆಯನ್ನು ಬಹು ಬೇಗ ಕಳೆದುಕೊಂಡಿತು. ಮಹಮದ್ ಬಿನ್ ತುಘಲಕನ ಆಳ್ವಿಕೆಯ ಕಾಲದಲ್ಲಿ ಸಂಭವಿಸಿದ ದಂಗೆಗಳ ಪರಿಣಾಮವಾಗಿ ಸ್ವಾತಂತ್ರ್ಯವನ್ನು ಘೋಷಿಸಿಕೊಂಡ ಪ್ರಾಂತ್ಯಗಳನ್ನು ಪುನಃ ವಶಪಡಿಸಿಕೊಳ್ಳಲು ಫಿರೋಜನು ಹೆಚ್ಚಿನ ಶ್ರಮವಹಿಸಲಿಲ್ಲ. ಅಲ್ಲದೆ ಫಿರೋಜನ ಮಂದಗಾಮಿ ಆಡಳಿತ ನೀತಿಯ ಪರಿಣಾಮವಾಗಿ ವಿಚ್ಛಿದ್ರ ಶಕ್ತಿಗಳು ಕಾರ್ಯಾಚರಣೆಯಲ್ಲಿ ತೊಡಗಿ ಒಂದಾದ ಮೇಲೊಂದು ಪ್ರಾಂತ್ಯಗಳು ಸುಲ್ತಾನನ ಕೈಬಿಟ್ಟುಹೋದವು. ಮಹತ್ವಾಕಾಂಕ್ಷಿಗಳಾದ ಪ್ರಾಂತ್ಯಾಧಿಕಾರಿಗಳು ಮತ್ತಿತರ ಪ್ರಮುಖರು ಸುಲ್ತಾನನ ಅಧಿಕಾರವನ್ನು ಕಡೆಗಣಿಸಿ ಸ್ವಾತಂತ್ರ್ಯವನ್ನು ಘೋಷಿಸಿಕೊಂಡರು. ಸುಲ್ತಾನನು ತನ್ನ ಅಧಿಕಾರವನ್ನು ಸಮರ್ಥಿಸಿಕೊಳ್ಳುವುದರಲ್ಲಿ ಅಸಮರ್ಥನಾದನು. ಸರ್ಕಾರದ ಅಧಿಕಾರಿಗಳು ದುಂಡಾಪ್ರವೃತ್ತಿಗಳಲ್ಲಿ ತೊಡಗಿದರು. ಪ್ರಜೆಗಳು ಸುಲ್ತಾನನನ್ನು ಅವನು ಜನೋಪಯಕ್ತ ಕಾರ್ಯಗಳಿಗಾಗಿ ಪ್ರೀತಿಸುತ್ತಿದ್ದರೇ ಹೊರತು ಅವನ ಅಧಿಕಾರಕ್ಕೆ ಹೆದರುತ್ತಿರಲಿಲ್ಲ. ಮುಸ್ಲಿಂ ನೋಬಲ್ಲರು ಮತ್ತು ಸೈನಿಕರು ಸುಲ್ತಾನನು ಅವರಿಗೆ ಕಲ್ಪಿಸಿಕೊಟ್ಟಿದ್ದ ಸೌಲಭ್ಯಗಳಿಂದ ಆಡಂಬರ ಜೀವನಕ್ಕೆ ತುತ್ತಾಗಿ ಅವರು ಹಿಂದಿನ ಪೌರುಷ ಶಕ್ತಿಗಳನ್ನು ಕಳೆದುಕೊಂಡು ಅವರಿಂದ ಸಾಮ್ರಾಜ್ಯಕ್ಕೆ ಯಾವ ಲಾಭದಾಯಕ ಸೇವೆಯು ಸಲ್ಲದಂತಾಯಿತು. ಸುಲ್ತಾನನು ಪುನಃ ಜಾರಿಗೆ ತಂದ ಜಹಗೀರು ಪದ್ಧತಿಯು ಮುಂದೆ ದುರುಪ ಯೋಗಪಡಿಸಿಕೊಳ್ಳಲ್ಪಟ್ಟು ಅನೇಕ ಜಹಗೀರುದಾರರು ಯಾವ ರಾಜನಿಗೂ ಕಡಿಮೆಯಿಲ್ಲದಂತೆ ವರ್ತಿಸಿತೊಡಗಿದರು. ಗುಲಾಮರ ಬಗ್ಗೆ ಫಿರೋಜನು ಅನುಸರಿಸಿದ ನೀತಿಯೂ ಸಹ ಸಾಮ್ರಾಜ್ಯದ ಹಿತದೃಷ್ಟಿಯಿಂದ ಒಳ್ಳೆಯದಾಗಿರಲಿಲ್ಲ. ಗುಲಾಮರು ಬಲ್ಬನ್ ಮತ್ತು ಅಲ್ಲಾವುದ್ದೀನ್ ಖಿಲ್ಜಿಯ ಕಾಲದಲ್ಲಿ ತಮ್ಮ ಪೂರ್ವಿಕರಂತೆ ವಿಧೇಯರೂ ಮತ್ತು ಸಮರ್ಥರೂ ಆಗಿರದೆ ಅವರು ಒಳಸಂಚು ಮತ್ತು ಪಿತೂರಿ ಮೊದಲಾದ ಹೀನಕೃತ್ಯಗಳನ್ನೆಸಗುವುದರಲ್ಲಿ ಮಗ್ನರಾಗಿ ಸಾಮ್ರಾಜ್ಯದ ಅವನತಿಗೆ ಕಾರಣರಾದರು. ಫಿರೋಜನ ತರುವಾಯ ಸಿಂಹಾಸನವನ್ನೇರಿದ ಸುಲ್ತಾನರುಗಳು ತುಂಬಾ ಅಸಮರ್ಥರಾಗಿದ್ದರು. ದೋಭ್ ಮೊದಲಾದ ಕಡೆಗಳಲ್ಲಿ ಹಿಂದುಗಳು ದಂಗೆಯೆದ್ದರು ಮತ್ತು ಜಮೀನ್ದಾರರು ತಾವುಸಲ್ಲಿಸುತ್ತಿದ್ದ ಕಂದಾಯ ತೆರಿಗೆಗಳನ್ನು ನಿಲ್ಲಿಸಿ ಸಣ್ಣ ಪ್ರಭುಗಳಂತೆ ವರ್ತಿಸಲಾರಂಭಿಸಿದರು. ಭೂಕಂದಾಯವನ್ನು ವಸೂಲಿ ಮಾಡುವುದರಲ್ಲಿ ಅನಾದರಣೆ ತೋರಿಸಲಾಯಿತು. ಹೀಗಾಗಿ ಆಡಳಿತವು ಅಸ್ತವ್ಯಸ್ತಗೊಂಡಿತು. ಮೇಲಾಗಿ ಸೈನ್ಯವನ್ನೇ ಅವಲಂಬಿಸಿಕೊಂಡಿದ್ದ ರಾಜ್ಯವು ಸೈನ್ಯದಲ್ಲಿ ದಕ್ಷತೆಯು ಕಣ್ಮರೆಯಾದ ಕೂಡಲೆ ಸಾಮ್ರಾಜ್ಯವು ಮಕ್ಕಳು ನಿರ್ಮಿಸಿದ ಮರಳಿನ ಮನೆಯಂತೆ ಬಿದ್ದುಹೋಯಿತು. ಈ ಎಲ್ಲ ಅವ್ಯವಸ್ಥೆಗಳ ನಡುವೆ ಸುಲ್ತಾನನು ಕಾಲವಾದನು. ಅವನ ತರವಾಯ ಫಿರೋಜನ ಮೊಮ್ಮಗನೂ ಮತ್ತು ಫತೆಖಾನನ

ಮಗನೂ ಆಗಿದ್ದ ಎರಡನೇ ತುಘಲಕ್‌ಷಹನು ಸುಲ್ತಾನನಾದನು. ದಿನೇ ದಿನೇ ಹದಗೆಡುತ್ತಿದ್ದ ಪರಿಸ್ಥಿತಿಯನ್ನು ಸುಧಾರಿಸಲು ಅವನಿಂದಲೂ ಸಾಧ್ಯವಾಗಲಿಲ್ಲ. ಅವನಾದ ಮೇಲೆ ಅಬುಬಾಕರ್ (1389) ನಾಸಿರುದ್ದೀನ್ ಮಹಮದ್‌ಷಹ (1390-94) ಮತ್ತು ಮಹಮದ್‌ಷಹ (1394-1412) ಒಬ್ಬರಾದ ಮೇಲೊಬ್ಬರಂತೆ ಅಧಿಕಾರಕ್ಕೆ ಬಂದರು. ಇಂತಹ ಅಸಹಾಯಕ ಪರಿಸ್ಥಿತಿಯ ನಡುವೆ 1398ರಲ್ಲಿ ತೈಮೂರನು ಭಾರತದ ಮೇಲೆ ಧಾಳಿಮಾಡಿದನು. ತೈಮೂರನ ಧಾಳಿಯೊಂದಿಗೆ ತುಘಲಕ್ ಸಂತತಿಯವರ ಹೆಚ್ಚು ಕಡಿಮೆ ಒಂದು ಶತಮಾನದ ಕಾಲದ ಆಳ್ವಿಕೆಯು ಕೊನೆಗಂಡಿತು.

### ತೈಮೂರನ ಧಾಳಿ

ತೈಮೂರನು ಬರ್ಲಾಸ್ ಟರ್ಕರ ಬುಡಕಟ್ಟಿಗೆ ಸೇರಿದವನು. ಇವನು ತನ್ನ ಸ್ವಸಾಮರ್ಥ್ಯದಿಂದ 1369ರಲ್ಲಿ ಸಾಮರ್‌ಖಂಡ್‌ಗೆ ರಾಜನಾದನು. ಆಕ್ರಮಣ ಮಾಡುವುದು ಮತ್ತು ಕೊಳ್ಳೆಹೊಡೆಯುವುದು ಅವನಲ್ಲಿ ರಕ್ತಗತ ಸ್ವಭಾವವಾಗಿತ್ತು. ತೈಮೂರನು. ಅಧಿಕಾರಲಾಲಸೆಯುಳ್ಳವನಾಗಿದ್ದನು. ಅವನ ಈ ಮಹತ್ವಾಕಾಂಕ್ಷೆಗೆ ಅಂದಿನ ಭಾರತದ ರಾಜಕೀಯ ಪರಿಸ್ಥಿತಿಯು ಅನುಕೂಲವಾಗಿತ್ತು.

ತೈಮೂರನು ಮತಭ್ರಾಂತನಾಗಿದ್ದನು. ವಿಗ್ರಹಾರಧಕರ ದೇಶವಾದ ಭಾರತದಲ್ಲಿ ಇಸ್ಲಾಮ್ ಧರ್ಮವನ್ನು ಹೆಚ್ಚು ಬಲಗೊಳಿಸಿ 'ಘಾಜಿ' ಎನಿಸಿಕೊಳ್ಳಬೇಕೆಂಬ ಅಪೇಕ್ಷೆಯನ್ನು ಹೊಂದಿದ್ದನು. ಇವನು ರಕ್ತಪಾತ ಮತ್ತು ಕ್ರೂರತನದಲ್ಲಿ ಚಂಗೇಸ್‌ಖಾನನನ್ನು ಮೀರಿಸಿದ್ದನು. ಇಸ್ಲಾಂ ಧರ್ಮಕ್ಕೆ ಮತಾಂತರಗೊಳಿಸುವುದು ಮತ್ತು ಭಾರತದ ಐಶ್ವರ್ಯವನ್ನು ಕೊಳ್ಳೆಹೊಡೆಯುವುದು ಇವನ ಧಾಳಿಯ ಮುಖ್ಯ ಉದ್ದೇಶಗಳಾಗಿದ್ದವು. ಈ ಉದ್ದೇಶಗಳನ್ನು ಹೊಂದಿದ್ದ ತೈಮೂರನು ೧೩೯೭ರಲ್ಲಿ ತನ್ನ ಮೊಮ್ಮಗಪೀರ್ ಮಹಮದನನ್ನು ದಂಡಿನೊಂದಿಗೆ ಬಾರತದ ಮೇಲೆ ಕಳುಹಿಸಿದನು. ಪೀರ್ ಮಹಮದನು ಸಿಂಧೂ ನದಿಯನ್ನು ದಾಟಿ ಮುಲ್ತಾನಿಗೆ ಮುತ್ತಿಗೆ ಹಾಕಿದನು. ಈ ಸಮಯದಲ್ಲಿ ಸಾರಂಗ್‌ಖಾನ್ ಎಂಬವನು ಮುಲ್ತಾನನ್ನು ಆಳುತ್ತಿದ್ದನು. ಸಾರಂಗ್‌ಖಾನನು ಶೌರ್ಯ ಸಾಹಸಗಳಿಂದ ಹೋರಾಡಿ ಪೀರ್ ಮಹಮದನಿಗೆ ಅಪಾರ ನಷ್ಟವನ್ನುಂಟುಮಾಡಿದನು. ಈ ನಷ್ಟದ ಸುದ್ದಿಯನ್ನು ತಿಳಿದ ತೈಮೂರನಿಗೆ ಕೋಪವು ನೆತ್ತಿಗೇರಿತು. ಇವನು ಒಂದು ಲಕ್ಷಕ್ಕೂ ಹೆಚ್ಚು ಸೈನ್ಯವನ್ನು ಸಜ್ಜುಗೊಳಿಸಿಕೊಂಡು ತಾನೇ 1398ರಲ್ಲಿ ಭಾರತದ ಮೇಲೆ ದಂಡೆತ್ತಿ ಬಂದನು.

ತೈಮೂರನು ಏಪ್ರಿಲ್ 1398ರಲ್ಲಿ ಸಾಮರ್ ಖಂಡ್‌ನಿಂದ ಹೊರಟು ಸೆಪ್ಟೆಂಬರ್ ತಿಂಗಳಲ್ಲಿ ಸಿಂಧೂ ನದಿಯ ದಡವನ್ನು ತಲುಪಿದನು. ಈ ಮಧ್ಯೆ ಮೇ 1398ರಲ್ಲಿ ಸಾರಂಗ್‌ಖಾನನನ್ನು ಪುನಃ ಸೋಲಿಸಿ ಮುಲ್ತಾನ್ ಮತ್ತು ಉಚ್ಚಕೋಟೆಗಳನ್ನು ವಶ ಪಡಿಸಿಕೊಂಡಿದ್ದನು. ತೈಮೂರನು ತನ್ನ ರಾಜಧಾನಿಯೊಂದಿಗೆ ನಿರಂತರ ಸಂಪರ್ಕದ ವ್ಯವಸ್ಥೆಯನ್ನು ಮಾಡಿಕೊಂಡು ಸಿಂಧೂ ನದಿಯನ್ನು ದಾಟಿ ಅಲ್ಲಿನ ಸ್ಥಳೀಯ ರಾಜನಾದ ಶಿಹಾಬುದ್ದೀನ್ ಮುಬಾರಕ್ ಷಹನನ್ನು ಸೋಲಿಸಿ ಜೀಲಂ ನದಿಯನ್ನು ದಾಟಿ ಮುಂದುವರೆದನು. ಅನಂತರ ಅವನು ತಲಂಬ ನಗರವನ್ನು ತಲುಪಿ ಅದನ್ನು ಲೂಟಿ ಹೊಡೆದನು. ಅಲ್ಲಿನ ಪ್ರಜೆಗಳು ತಮ್ಮಲ್ಲಿದ್ದ ಅಪಾರ

ಐಶ್ವರ್ಯವನ್ನು ಕೊಡುವುದರ ಮೂಲಕ ತಮ್ಮ ಪ್ರಾಣಗಳನ್ನು ಉಳಿಸಿಕೊಂಡರು. ಆದರೆ ದ್ರವ್ಯವನ್ನು ಕೊಡುವುದರಲ್ಲಿ ಅಲ್ಪ ಸ್ವಲ್ಪ ಘರ್ಷಣೆಗಳಾದವು. ತೈಮೂರನು ಇದನ್ನೇ ಒಂದು ನೆಪಮಾಡಿಕೊಂಡು ಸಾರ್ವತ್ರಿಕ ಕೊಲೆಗೆ ಆಜ್ಞೆ ಮಾಡಿದನು. ಆನಂತರ ಅವನು ಕೊಕ್ಕಾರ ಜನಗಳನ್ನು ಹತ್ತಿಕ್ಕಿ ಬಹು ಶೀಘ್ರವಾಗಿ ಮುಂದುವರಿದು ಸೆಪ್ಟೆಂಬರ್ ತಿಂಗಳಲ್ಲಿ ದೆಹಲಿಯನ್ನು ತಲುಪಿದನು. ಅವನು ದೆಹಲಿಗೆ ಬರುವ ಮಾರ್ಗದಲ್ಲಿದ್ದ ಪ್ರಮುಖ ನಗರಗಳೆಲ್ಲವನ್ನೂ ಲೂಟಿ ಹೊಡೆದನು. ನಗರಗಳ ಮೇಲೆ ಆಕ್ರಮಣ ಮಾಡಿ ಜನಗಳಲ್ಲಿ ಭೀತಿ ಹುಟ್ಟಿಸುವುದು ಅವನ ಕಾರ್ಯಕ್ರಮಗಳಾಗಿದ್ದವು. ಅವನು ದೆಹಲಿಯನ್ನು ತಲುಪಿದ ಮೇಲೆ ಲೋನಿಯನ್ನು ವಶಪಡಿಸಿಕೊಂಡು ಅಲ್ಲಿನ ಹಿಂದೂಗಳೆಲ್ಲರನ್ನೂ ಕಗ್ಗೊಲೆಗೆಯ್ಯಲು ಆಜ್ಞೆ ಮಾಡಿದನು. ಡಿಸೆಂಬರ್ ತಿಂಗಳಲ್ಲಿ ಅವನ ಮತ್ತು ಅವನ ಮೊಮ್ಮಗನ ಒಟ್ಟುಗೂಡಿದ ಸೈನ್ಯವು ದೆಹಲಿಯ ಸುಲ್ತಾನನ ಸೈನ್ಯದ ವಿರುದ್ಧ ಹೋರಾಟಕ್ಕಿಳಿದವು. ತುಘಲಕ್ ಸಂತತಿಯ ಸುಲ್ತಾನ್ ಮಹಮದ್ ಷಹನು ಗುಜರಾತಿಗೆ ಓಡಿಹೋದನು. ರಾಜ ಪ್ರತಿನಿಧಿ ಮಲ್ಲುಕಾನನು ಬರಾನ್‌ಗೆ ಪಲಾಯನ ಮಾಡಿದನು. ತೈಮೂರನ ಸೈನ್ಯವು ಕೆಲವು ದಿನಗಳ ಕಾಲ ಒಂದೇಸಮನೆ ರಾಜದಾನಿಯನ್ನು ಲೂಟಿ ಹೊಡೆಯಿತು. ಹೆಂಗಸರ ಮೇಲೆ ಸೈನಿಕರು ಎಸಗಿದ ಅತ್ಯಾಚಾರಗಳಂತೂ ವರ್ಣಿಸಲು ಅಸಾಧ್ಯವಾಗಿದ್ದವು. ಸಿರಿ, ಜಹಾನ್‌ಷಾನಹ್ ಮತ್ತು ಹಳೆ ದೆಹಲಿಗಳಂತೂ ನಿರ್ಜನ ಪ್ರದೇಶಗಳಾದವು. ಎಲ್ಲಿ ನೋಡಿದರೂ ಸತ್ತವರ ರುಂಡಗಳ ರಾಸಿಯು ಗೋಪುರಗಳಂತೆ ಕಂಡುಬರುತ್ತಿದ್ದವು. ಕುಶಲ ಕೆಲಸಗಾರರು ಮಾತ್ರ ಈ ಕಗ್ಗೊಲೆಯಿಂದ ಪಾರಾದರು. ಅವರನ್ನು ಸೆರೆಹಿಡಿದು ತನ್ನ ರಾಜದಾನಿಯಾದ ಸಾಮರ್‌ಖಂಡ್ ಅನ್ನು ಸುಂದರಗೊಳಿಸಲು ಕಳುಹಿಸಿದನು.

ದೆಹಲಿಯ ಲೂಟಿಯಿಂದ ಅಪಾರ ಐಶ್ವರ್ಯವು ತೈಮೂರನ ಕೈವಶವಾಯಿತು. ಆನಂತರ ಅವನು ಫಿರೋಜಬಾದ್, ವಜೀರಬಾದ್, ಮೀರತ್, ಹರಿದ್ವಾರ, ಜಮ್ಮುಗಳ ಮೂಲಕ ತನ್ನ ಮರು ಪ್ರಯಾಣ ಮಾಡಿ ಮಾರ್ಚಿ 1399ರಲ್ಲಿ ಲಾಹೋರನ್ನು ತಲುಪಿದನು. ಇಲ್ಲಿಯೂ ಸಹಸ್ರಾರು ಸಂಖ್ಯೆಯಲ್ಲಿ ಜನರನ್ನು ಕೊಲೆಗೈದನು. ಲಾಹೋರನ್ನು ತಲುಪಿದ ಮೇಲೆ ದರ್ಬಾರು ಸಭೆಯೆಂದನ್ನು ಕರೆದು ಖಿಜರ್‌ಖಾನ್ ಸೈಯದ್‌ನನ್ನು ಲಾಹೋರ್, ಮುಲ್ತಾನ್ ಮತ್ತು ದೀಪಾಲ್‌ಪುರಗಳಿಗೆ ರಾಜ್ಯಪಾಲನನ್ನಾಗಿ ನೇಮಿಸಿ ಸಾಮರ್‌ಖಂಡಿಗೆಹೋದನು.

**ತೈಮೂರನ ಧಾಳಿಯ ಪರಿಣಾಮಗಳು**

ತೈಮೂರನ ಧಾಳಿಗೊಳಗಾದ ಪ್ರದೇಶಗಳಲ್ಲಿ ಎಲ್ಲವೂ ನಾಶವಾಗಿ ಜನಗಳ ಜೀವನವು ಪೂರ್ಣವಾಗಿ ಅಸ್ತವ್ಯಸ್ತಗೊಂಡಿತು. ದೆಹಲಿಯಲ್ಲಿ ಒಡೆಯರಿಲ್ಲವಾದರು. ಅಲ್ಲಿನ ಪ್ರಖ್ಯಾತ ಸ್ಮಾರಕಗಳು ಮತ್ತು ಭವ್ಯಕಟ್ಟಡಗಳು ಭಗ್ನವಾಗಿ ಅದೊಂದು ಪಾಳು ಬಿದ್ದ ನಗರವಾಗಿ ಮಾರ್ಪಟ್ಟಿತು. ನಗರದಲ್ಲಿ ರಾಶಿರಾಶಿಯಾಗಿ ಬಿದ್ದಿದ್ದ ಹೆಣಗಳಿಂದ ಅಂಟು ಜಾಡ್ಯಗಳು ತಲೆದೋರಿದವು. ತೈಮೂರನು ತನ್ನ ಧಾಳಿಯ ಕಾಲದಲ್ಲಿ ಐಶ್ವರ್ಯವನ್ನು ದೋಚಿಕೊಂಡು ಹೋದುದಲ್ಲದೆ ದವಸ ಧಾನ್ಯಗಳನ್ನು ದೋಚಿಕೊಂಡು ಹೋದನು ಮತ್ತು ಪೈರುಪಚ್ಚೆಗಳಿಂದ ಕೂಡಿದ್ದ ಹೊಲ ಗದ್ದೆಗಳಿಗೆ ಬೆಂಕಿ ಇಡಿಸಿದನು. ತತ್ಪರಿಣಾಮವಾಗಿ ಭೀಕರ ಕ್ಷಾಮವು ತಲೆದೋರಿ ಕೆಲವು ವರ್ಷಗಳ ಕಾಲ ಆ ಪ್ರದೇಶಗಳು ವಾಸಕ್ಕೆ ಅಯೋಗ್ಯವಾಗಿ ಮಾರ್ಪಟ್ಟವು.

ತೈಮೂರನ ಧಾಳಿಯಿಂದ ಭಾರತೀಯರು ಆದರಲ್ಲೂ ಹಿಂದೂಗಳು ಅಪಾರ ನಷ್ಟಗಳಿಗೊಳಗಾದರು. ತೈಮೂರನು ಐಶ್ವರ್ಯವನ್ನು ದೋಚಿಕೊಂಡುಹೋದುದೇ ಅಲ್ಲದೆ ತಾನು ಬಿಟ್ಟುಹೋಗಬೇಕಾಗಿದ್ದು ದೆಲ್ಲವನ್ನೂ ನಾಶ ಮಾಡಿಹೋದನು. ಈ ನಷ್ಟ ಪರಿಸ್ಥಿತಿಯಿಂದ ಸುಧಾರಿಸಿಕೊಳ್ಳಲು ಹಲವಾರು ವರ್ಷಗಳೇ ಬೇಕಾದವು. ತೈಮೂರನ ಈ ಧಾಳಿಯಿಂದ ಮುಸ್ಲಿಮುರ ಬಗ್ಗೆ ಫಿರೋಜನ ಕಾಲದಲ್ಲಿದ್ದುದಕ್ಕಿಂತಲೂ ಹಿಂದುಗಳದ್ವೇಷವು ಇನ್ನೂ ಹೆಚ್ಚಾಯಿತು. ದೆಹಲಿಯ ಸುಲ್ತಾನತ್ವದ ಬಗ್ಗೆ ಹಿಂದುಗಳು ತಮ್ಮ ವಿಶ್ವಾಸಗೌರವಗಳನ್ನು ಕಳೆದುಕೊಂಡರು ಮತ್ತು ತಮ್ಮ ರಕ್ಷಣೆಗಾಗಿ ತಮ್ಮದೇ ಆದ ವ್ಯವಸ್ಥೆಗಳನ್ನು ಮಾಡಿಕೊಳ್ಳಬೇಕೆಂದು ಮನಗಂಡರು. ತೈಮೂರನ ಧಾಳಿಯಿಂದ ದೆಹಲಿಯ ಸುಲ್ತಾನತ್ವವು ಸಂಪೂರ್ಣವಾಗಿ ನಾಶವಾಯಿತು. ಸುಲ್ತಾನರ ಬಗ್ಗೆ ಪ್ರಜೆಗಳಲ್ಲಿ ಯಾವ ಗೌರವವೂ ಉಳಿಯಲಿಲ್ಲ. ಗುಜರಾತಿನಲ್ಲಿ ಮುಜಾಫರ್‌ಷಹನೂ, ಜಾನ್ಪುರದಲ್ಲಿ ಷಾರ್ಕಿ. ದೊರೆಗಳು ಮಾಳವದಲ್ಲಿ ದಿಲ್‌ವರ್‌ಖಾನನು ತಮ್ಮ ಸ್ವಾತಂತ್ರ್ಯವನ್ನು ಘೋಷಿಸಿಕೊಂಡರು. ಸಿಂಧ್ ಮತ್ತು ಪಂಜಾಬುಗಳು ತೈಮೂರನ ಪ್ರತಿನಿಧಿಯಾದ ಖಿಜರ್‌ಖಾನನ ಆಡಳಿತಕ್ಕೊಳಪಟ್ಟವು. ಸಮಾನ, ಬಯಾನ, ಕಲ್ಪಿ ಮತ್ತು ಮಹೋಬದ ರಾಜ್ಯಪಾಲರುಗಳು ಹಾಗೂ ಸ್ಥಳೀಯ ಹಿಂದೂ ರಾಜರುಗಳು ತಮ್ಮ ಮನಬಂದಂತೆ ನಡೆದುಕೊಳ್ಳಲಾರಂಭಿಸಿದರು. ಹೀಗೆ ತೈಮೂರನ ಧಾಳಿಯಿಂದ ಸುಲ್ತಾನನೂ ಅವನ ಪ್ರಜೆಗಳೂ ಅಪಾರ ಕಷ್ಟನಷ್ಟಗಳಗೊಳಗಾದರೆ ಮತ್ತೊಂದು ಕಡೆ ತೈಮೂರನು ಅಪಾರ ಲಾಭವನ್ನು ಪಡೆದನು. ಬಾರತದ ಮೇಲಿನ ಅವನ ಈ ಧಾಳಿಯಿಂದ ಅವನ ಗೌರವ ಪ್ರತಿಷ್ಠೆಗಳು ಹೆಚ್ಚಿದುವಲ್ಲದೆ ಅವನ ರಾಜ್ಯದ ಶ್ರೀಮಂತಿಕೆಯು ಹೆಚ್ಚಿತು. ಅವನು ತನ್ನ ರಾಜಧಾನಿಯನ್ನು ಭಾರತೀಯ ಕುಶಲ ಕರ್ಮಿಗಳ ಶ್ರಮದಿಂದ ಭವ್ಯವಾದ ಕಟ್ಟಡಗಳಿಂದ ಅಲಂಕೃತಗೊಳಿಸಿದನು. ಕೊನೆಯದಾಗಿ ಅವನ ಸಾಮ್ರಾಜ್ಯದ ಎಲ್ಲೆಯು ಪಂಜಾಬಿನವರೆಗೂ ವಿಸ್ತರಿಸಲ್ಪಟ್ಟು ಅವನಿಗೆ ವಾರ್ಷಿಕ ಪೊಗದಿಯು ಸಲ್ಲತೊಡಗಿತು.

### ತುಘಲಕ್ ಸಂತತಿಯವರ ಆಳ್ವಿಕೆಯ ಕೊನೆ

ತೈಮೂರನೂ ಬಾರತದಿಂದ ಹಿಂದಿರುಗಿ ಹೋದ ಮೇಲೆ ದೆಹಲಿಯಲ್ಲಿ ಅಧಿಕಾರಕ್ಕಾಗಿ ಆಸ್ಥಾನದ ಪ್ರಮುಖರಲ್ಲಿ ಪೈಪೋಟಿಯು ಆರಂಭವಾಗಿ ಪಿತೂರಿ ಮತ್ತು ದಂಗೆಗಳಿಂದ ಗೊಂದಲಮಯ ವಾತಾವರಣವೇರ್ಪಟ್ಟಿತು. ದೆಹಲಿಯ ಮೇಲೆ ತೈಮೂರನು ಆಕ್ರಮಣ ಮಾಡಿದಾಗ ಸುಲ್ತಾನ್ ಮಹಮದ್‌ಷಹ ತುಘಲಕನು ಗುಜರಾತಿಗೆ ಓಡಿ ಹೋಗಿ ರಕ್ಷಣೆ ಪಡೆದಿದ್ದನು. ಈಗ ದೆಹಲಿಯ ಸಿಂಹಾಸನಕ್ಕೆ ಮಹಹಮದ್‌ಷಹ ತುಘಲಕನ ವಜೀರನಾದ ಮಲ್ಲುಖಾನನಿಗೂ ಫಿರೋಜನ ಮೊಮ್ಮಕ್ಕಳಲ್ಲೊಬ್ಬನಾಗಿದ್ದ ನಜ ರತ್‌ಷಹನಿಗೂ ಸ್ಪರ್ಧೆಯೇರ್ಪಟ್ಟಿತು. ಮಲ್ಲುಖಾನನು ದೆಹಲಿಯನ್ನು ವಶಪಡಿಸಿಕೊಂಡು ತನ್ನ ಕಡೆಯವನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಲು ಹೆಣಗಾಡಿದನು. ಗುಜ ರಾತಿಗೆ ಓಡಿಹೋಗಿದ್ದ ಸುಲ್ತಾನ್ ಮಹಮದ್‌ಷಹನು ಅಲ್ಲಿ ಅಪಾರ ಅಪಮಾನಕ್ಕೊಳಗಾಗಿ ಧಾರ್‌ಗೆ ಹೋದನು. ಅಲ್ಲಿ ದಿಲವರ್‌ಖಾನನಿಂದ ಅವನಿಗೆ ಸಿಕ್ಕಿದ ಗೌರವವು ಗುಜರಾತಿಗಿಂತಲೂ ಅಸಹ್ಯಕರವಾಗಿತ್ತು. ಅಲ್ಲಿಂದ ಅವನು ದೆಹಲಿಗೆ ಬಂದನು. ದೆಹಲಿಯಲ್ಲಿ ಮಲ್ಲುಖಾನನ ಕುತಂತ್ರವನ್ನು ತಿಳಿದು ಅವನು ಜಿಗುಪ್ಸೆಗೊಂಡು ಕನೂಜಿಗೆ ಹೋದನು.

ಈ ನಡುವೆ ಮಲ್ಲುಖಾನನು 1415ರಲ್ಲಿ ಮುಲ್ತಾನಿನ ಖಿಜರ್‌ಖಾನನೊಂದಿಗೆ ಯುದ್ಧದಲ್ಲಿ ಹತನಾದನು. ಮಹಮದ್‌ಷಹ ತುಘಲಕನು ಸಿಂಹಾಸನವನ್ನು ಪಡೆದುಕೊಳ್ಳಲು, ಮತ್ತೊಮ್ಮೆ ದೆಹಲಿಗೆ ಬಂದನು. ಈ ವೇಳೆಗಾಗಲೆ ದೆಹಲಿ ಸಾಮ್ರಾಜ್ಯವು ದೋಬ್‌ಪ್ರಾಂತ್ಯಕ್ಕೆ ಸೀಮಿತವಾಗಿತ್ತು. ಮಹಮದ್‌ಷಹ ತುಘಲಕನು ಏಳು ವರ್ಷಗಳ ಕಾಲ ಅಧಿಕಾರದಲ್ಲಿದ್ದು 1412ರಲ್ಲಿ ಕಾಲವಾದನು. ಇವನು ಕಾಲವಾದ ಮೇಲೆ ದೌಲತ್‌ಖಾನ್ ಎಂಬವನು ಎರಡು ವರ್ಷಗಳ ಕಾಲ ದೆಹಲಿಯ ಒಡೆಯನಾಗಿದ್ದನು. ಅವನನ್ನು ಖಿಜರ್‌ಖಾನ್ ಸೈಯದನು 1414ರ ಸೋಲಿಸಿ ಸೈಯದ್ ಸಂತತಿಯವರ ಆಳ್ವಿಕೆಯನ್ನಾರಂಭಿಸಿದನು.

## ಅಧ್ಯಾಯ 21

# ಸೈಯದ್ ಸಂತತಿ (1414-1451)

ತುಘಲಕ್ ಸಂತತಿಯವರ ಆಳ್ವಿಕೆಯು ಕೊನೆಗೊಂಡ ಮೇಲೆ ಸೈಯದ್ ಸಂತತಿಯವರು ಮೂವತ್ತೇಳು ವರ್ಷಗಳ ಕಾಲ ದೆಹಲಿ ಸಮ್ರಾಜ್ಯವನ್ನಾಳಿದರು. ಈ ಸಂತತಿಯಲ್ಲಿ ಒಟ್ಟು ನಾಲ್ಕು ಜನ ಸುಲ್ತಾನರು ರಾಜ್ಯವಾಳಿದರು. ಅವರುಗಳೆಂದರೆ ಖಿಜರ್ ಖಾನ್ (1414-1421) ಮುಬಾರಕ್‌ಷಹ (1421-1434) ಮಹಮದ್‌ಷಹ (1434-1444) ಆಲ್ಲಾವುದ್ದೀನ್ ಆಳಂಷಹ (1444-1451) ಈ ಸಂತತಿಯ ಸ್ಥಾಪಕನಾದ ಖಿಜರ್‌ಖಾನನು ಮೊದಲಿಗೆ ಫಿರೋಜ್ ತುಘಲಕನ ಸೇವೆಯಲ್ಲಿದ್ದನು. ಫಿರೋಜನು ಅವನನ್ನು ಮುಲ್ತಾನಿನ ರಾಜ್ಯಪಾಲನನ್ನಾಗಿ ನೇಮಿಸಿದ್ದನು. ಆದರೆ ವಾಯುವ್ಯ ಭಾಗದಲ್ಲಿ ಪ್ರಬಲನಾಗಿದ್ದ ಸಾರಂಗ್‌ಖಾನ್ ಎಂಬವನು ಖಿಜರ್‌ಖಾನನನ್ನು ಮುಲ್ತಾನಿನಿಂದ ಓಡಸಲು ಅವನು ದೆಹಲಿಗೆ ಬಂದನು. ತೈಮೂರನು ಭಾರತದ ಮೇಲೆ ಧಾಳಿ ಮಾಡಿದಾಗ ಖಿಜರ್‌ಖಾನನು ಅವನ ಪಕ್ಷವನ್ನು ಸೇರಿ ಅವನ ವಿಶ್ವಾಸಕ್ಕೆ ಪಾತ್ರನಾದನು. ತೈಮೂರನು ಅವನನ್ನು ಮುಲ್ತಾನ್, ದೀಪಾಲ್‌ಪುರ ಮತ್ತು ಲಾಹೋರ್‌ಗಳ ರಾಜ್ಯಪಾಲನನ್ನಾಗಿ ಮಾಡಿದ್ದಲ್ಲದೆ ದೆಹಲಿಗೂ ಅವನನ್ನು ತನ್ನ ಪ್ರತಿನಿಧಿಯನ್ನಾಗಿ ನೇಮಿಸಿದನು. ತರುವಾಯದಲ್ಲಿ ಖಿಜರ್‌ಖಾನನು ತನ್ನ ಸೈನ್ಯವನ್ನು ಪುನರ್ ವ್ಯವಸ್ಥೆಗೊಳಿಸಿಕೊಂಡು ತನ್ನ ಶತ್ರುಗಳನ್ನು ಸೋಲಿಸಿ ದೆಹಲಿಯಲ್ಲಿ ಸೈಯದ್ ಸಂತತಿಯವರ ಆಳ್ವಿಕೆಯನ್ನು ಆರಂಭಿಸಿದನು.

### ಖಿಜರ್ ಖಾನ್ (1414-1421)

ಖಿಜರ್‌ಖಾನನು ದೆಹಲಿಯ ಸಿಂಹಾಸನಕ್ಕೆ ಒಡೆಯನಾದರೂ ಅವನು ಅನೇಕ ಅಡ್ಡಿ ಆತಂಕಗಳನ್ನು ಎದುರಿಸಬೇಕಾಗಿದ್ದು ಬಹಿರಂಗವಾಗಿ ತಾನು ಸ್ವತಂತ್ರ ರಾಜನೆಂದು ಹೇಳಿಕೊಳ್ಳಲು ಹಿಂಜರಿದನು. ತೈಮೂರನಿಂದ ಪ್ರಸಿದ್ಧಿಗೆ ಬಂದ ಅವನು ತೈಮೂರನ ಪ್ರತಿನಿಧಿಯಾಗಿ ರಾಜ್ಯವಾಳುವುದಾಗಿ ತಿಳಿಸಿದನು. ತೈಮೂರನ ಮಗನಾದ ಷಹಾರುಖ್‌ನಿಗ ತನ್ನ ಸ್ವಾಮಿನಿಷ್ಠೆಯನ್ನು ತೋರಿಸಿದ್ದಲ್ಲದೆ ಅವನಿಗೆ ಪೊಗದಿಯನ್ನು ಸಲ್ಲಿಸಿದನು. ಅಲ್ಲದೆ ಷಹಾರುಖ್‌ನ ಹೆಸರಿನಲ್ಲಿ ನಾಣ್ಯಗಳನ್ನು ಅಚ್ಚು ಹಾಕಿಸಿದನು. ಖಿಜರ್‌ಖಾನನು ಅಧಿಕಾರ ರೂಢನಾದಾಗ ದೆಹಲಿಯಲ್ಲಿ ಗೊಂದಲ ಪರಿಸ್ಥಿತಿಯು ಏರ್ಪಟ್ಟಿದ್ದಿತು. ದೆಹಲಿಯಲ್ಲಿ ವಿವಿಧ ಪಕ್ಷಗಳು ಅಧಿಕಾರಕ್ಕಾಗಿ, ಪೈಪೋಟಿ ನಡೆಸುತ್ತಿದ್ದವು. ಪ್ರಾಂತೀಯ ಗೌರ್ನರುಗಳು ಪ್ರಬಲರಾಗಿ ಸಾಮ್ರಾಜ್ಯದ ಅನೇಕ

ಭಾಗಗಳನ್ನು ವಶಪಡಿಸಿಕೊಂಡಿದ್ದರು. ದೋಬ್ ಪ್ರಾಂತ್ಯವು ಸಾಮ್ರಾಜ್ಯದಲ್ಲಿ ಮೊದಲಿನಿಂದಲೂ ಅಂಕೆಗೊಳಪಡದ ಪ್ರಾಂತ್ಯವಾಗಿತ್ತು. ಎಟಾವ, ಕಾಥೇವಾರ್, ಕನೂಜ್ ಮತ್ತು ಬದಾವನ್‌ಗಳಲ್ಲಿನ ರಾಥೋರ್ ಪಂಗಡಕ್ಕೆ ಸೇರಿದ ರಜಪೂತರ ನಾಯಕರು ದೆಹಲಿಗೆ ತಾವು ಸಲ್ಲಿಸುತ್ತಿದ್ದ ಕಪ್ಪ ಕಾಣಿಕೆಗಳನ್ನು ನಿಲ್ಲಿಸಿ ದೆಹಲಿಯ ಅಧಿಕಾರವನ್ನು ಅಲಕ್ಷಿಸಿದ್ದರು. ಮಾಳವ ಗುಜರಾತ್ ಮತ್ತು ಜಾನ್ಪುರ ರಾಜ್ಯಗಳು ದೆಹಲಿಯಿಂದ ಸ್ವತಂತ್ರವಾಗಿದ್ದವು. ರಾಜದಾನಿಗೆ ಸಮೀಪದಲ್ಲಿದ್ದ ಮೀವಾಟಿಗಳು ಸಾಕಷ್ಟು ತೊಂದರೆ ಕೊಡುತ್ತಿದ್ದರು. ಸಾಮ್ರಾಜ್ಯದ ಉತ್ತರ ಭಾಗದಲ್ಲಿ ಕೊಕ್ಕಾರರು ಮುಲ್ತಾನ್ ಮತ್ತು ಲಾಹೋರ್‌ಗಳ ಮೇಲೆ ಧಾಳಿಮಾಡಿ ಸಾಮ್ರಾಜ್ಯದಲ್ಲಿ ಉದ್ಭವಿಸಿದ್ದ ಅರಾಜಕತೆಯಿಂದ ಲಾಭ ಪಡೆಯುವ ಪ್ರಯತ್ನದಲ್ಲಿದ್ದರು. ಸರ್ ಹಿಂಧ್‌ನ ಟರ್ಕೋಬಾಕರು ಕೂಡ ಅವರಂತೆಯೇ ಪುಂಡಾಟದಲ್ಲಿ ತೊಡಗಿದ್ದರು. ಹೀಗೆ 15ನೇ ಶತಮಾನದ ಆರಂಭದಲ್ಲಿ ದೆಹಲಿಯ ರಾಜಕೀಯ ಪರಿಸ್ಥಿತಿಯು ಅರಾಜಕತೆಯಿಂದ ಕೂಡಿದ್ದಿತು.

ಇಂತಹ ಪರಿಸ್ಥಿತಿಯಲ್ಲಿ ಸಿಂಹಾಸನವನ್ನೇರಿದ ಖಿಜರ್‌ಖಾನನು ತನ್ನ ಏಳು ವರ್ಷಗಳ ಆಳ್ವಿಕೆಯ ಕಾಲವನ್ನೆಲ್ಲಾ ದಂಗೆಗಳನ್ನು ಅಡಗಿಸುವುದರಲ್ಲೇ ಕಳೆಯಬೇಕಾಯಿತು. ಅವನು ತನ್ನ ಈ ಪ್ರಯತ್ನದಲ್ಲಿ ಹೆಚ್ಚಿನದೇನನ್ನೂ ಸಾಧಿಸಲಾಗದೆ ದೆಹಲಿಯ ಸುತ್ತ ಮುತ್ತಲಿನ ಕೆಲವು ಜಿಲ್ಲೆಗಳನ್ನು ವಶಪಡಿಸಿಕೊಳ್ಳುವುದರಲ್ಲಿ ಮಾತ್ರ ಯಾಶಸ್ವಿಯಾದನು. ಎಟಾವ, ಕಂಪಿಲ, ಗ್ವಾಲಿಯರ್ ಮತ್ತು ಬಿಯಾನಗಳ ಮೇಲೆ ದಂಡಯಾತ್ರೆಗಳನ್ನು ನಿಯೋಜಿಸಿ ಕಳುಹಿಸಿದನು. ಆದರೆ ಇವುಗಳ ವಿರುದ್ಧ ಗಳಿಸಿದ ವಿಜಯಗಳು ಕ್ಷಣಿಕವಾಗಿದ್ದವು. 1418ರಲ್ಲಿ ಗುಜರಾತಿನ ಸುಲ್ತಾನನು ನಾಗೌರ್ ಮೇಲೆ ಆಕ್ರಮಣ ಮಾಡಲು ಖಿಜರ್‌ಖಾನನು ಅವನ ವಿರುದ್ಧ ದಂಡೆತ್ತಿಹೋದನು. ದೆಹಲಿಯ ಸೈನ್ಯವು ನಾಗೌರ್ ಅನ್ನು ಸಮೀಪಿಸಲು ಗುಜರಾತಿನ ಸೈನ್ಯವು ಹಿಮ್ಮೆಟ್ಟಿತು. ಖಿಜರ್‌ಖಾನನುತನ್ನ ಆಳ್ವಿಕೆಯ ಕೊನೆಯ ಭಾಗದಲ್ಲಿ ಮೀವಾಟ್, ಗ್ವಾಲಿಯರ್ ಮತ್ತು ಎಟಾವಗಳ ಮೇಲೆ ದಂಡೆತ್ತಿಹೋಗಿ ಅಲ್ಲಿನ ಮುಖಂಡರನ್ನು ತನಗೆ ವಿಧೇಯರನ್ನಾಗಿ ಮಾಡಿಕೊಂಡನು. ಆದರೆ ಈ ಕಾರ್ಯಾಚರಣೆಯಲ್ಲಿ ತೊಡಗಿದ್ದಾಗಲೇ ಅವನು ಖಾಯಿಲೆ ಬಿದ್ದು ರಾಜಧಾನಿಗೆ ಹಿಂದಿರುಗಿದ ಕೆಲವೇ ದಿವಸಗಳಲ್ಲಿ ಮೇ 20, 1421ರಲ್ಲಿ ಕಾಲವಾದನು.

ಖಿಜರ್‌ಖಾನನು ತನ್ನ ಆಡಳಿತದಲ್ಲಿ ಸಮನ್ವಯ ನೀತಿಯನ್ನು ಅನುಸರಿಸಿದನು. ಅವನು ನ್ಯಾಯದ ವಿಷಯದಲ್ಲಿ ನಿಷ್ಪಕ್ಷಪಾತದಿಂದ ನಡೆದುಕೊಳ್ಳುತ್ತಿದ್ದನು. ಪ್ರಜೆಗಳ ಹಿತಾಸಕ್ತಿಗಳನ್ನು ಗಮನದಲ್ಲಿಟ್ಟುಕೊಂಡಿದ್ದು ಅವರ ಪ್ರೀತಿವಿಶ್ವಾಸಗಳಿಗೆ ಪಾತ್ರನಾಗಿದ್ದನು. ಅವನು ತನ್ನ ಬೆಂಬಲಿಗರಿಗೆ ಉನ್ನತ ಹುದ್ದೆಗಳನ್ನು ಮತ್ತು ಬಿರುದುಬಾವಲಿಗಳನ್ನು ಕೊಟ್ಟು ಅವರ ಸಹಕಾರವನ್ನು ಪಡೆದುಕೊಳ್ಳಲು ಪ್ರಯತ್ನಿಸಿದನು. ಅವನು ತನ್ನ ಅಧಿಕಾರವನ್ನು ಭದ್ರಗೊಳಿಸಿಕೊಳ್ಳಲು ದಂಗೆಕೋರರ ವಿರುದ್ಧ ಸತತ ಹೋರಾಟದಲ್ಲಿ ತೊಡಗಿದ್ದರೂ ಸಾಮ್ರಾಜ್ಯದ ಆಡಳಿತವನ್ನು ನಿರ್ಲಕ್ಷಿಸಿರಲಿಲ್ಲ. ಅವನ ಆಳ್ವಿಕೆಯಲ್ಲಿ ಜನಗಳು ಸುಖಿಗಳಾಗಿದ್ದರೆಂದೂ, ಚಿಕ್ಕವರು ಮತ್ತು ದೊಡ್ಡವರು ಗುಲಾಮರು ಮತ್ತು ಗುಲಾಮರಲ್ಲದವರು ಅವನ ಸಾವಿನ ಬಗ್ಗೆ ಕಪ್ಪು ಉಡುಪನ್ನು ಧರಿಸಿ ತಮ್ಮ ಶೋಕವನ್ನು ವ್ಯಕ್ತಪಡಿಸಿದರೆಂದು ಇತಿಹಾಸಕಾರ ಫರಿಶ್ತಾನು ಹೇಳುತ್ತಾನೆ.

## ಮುಬಾರಕ್ ಷಹ (1421-1434)

ಖಿಜರ್‌ಖಾನನ ಮರಣಾನಂತರ ಅವನ ಮಗನಾದ ಮುಬಾರಕ್ ಷಹನು ದೆಹಲಿಯ ಸಿಂಹಾಸನವನ್ನೇರಿದನು. ಇವನ ಹದಿನಾಲ್ಕು ವರ್ಷಗಳ ಕಾಲದ ಆಳ್ವಿಕೆಯು ಅಂತರಿಕದಂಗೆಗಳನ್ನು ಅಡಿಗಿಸುವುದು ಮತ್ತು ವಿದೇಶಿಯರ ಆಕ್ರಮಣಗಳನ್ನು ಹಿಮ್ಮೆಟ್ಟಿಸುವುದರಲ್ಲಿಯೆ ಕಳೆಯಿತು. ಕೊಕ್ಕಾರರು, ಟರ್ಕೋಬಾಕರು ಮತ್ತು ಮಂಗೋಲರು ವಾಯುವ್ಯ ಗಡಿ ಪ್ರದೇಶದಲ್ಲಿ ತಮ್ಮ ಧಾಳಿಗಳಿಂದ ಅಶಾಂತ ವಾತಾವರಣವನ್ನೇರ್ಪಡಿಸಿದ್ದರು. ಜಾನ್ಪುರ ಮತ್ತು ಮಾಳವದ ದೊರೆಗಳು ಸಾಮ್ರಾಜ್ಯದ ಒಳಗೆ ತೊಂದರೆ ಕೊಡಲಾರಂಭಿಸಿದರು. ಹೀಗಾಗಿ ಮುಬಾರಕನು ತನ್ನ ಕಾಲವನ್ನೆಲ್ಲಾ ಗಲಭೆ ಮತ್ತು ದಂಗೆಗಳನ್ನು ಅಡಗಿಸುವುದರಲ್ಲಿಯೇ ಕಳೆಯಬೇಕಾಯಿತು. ಯುದ್ಧ ಪ್ರಿಯರಾದ ಪಂಜಾಬಿನ ಕೊಕ್ಕಾರರು ಬಹಳ ಅಪಾಯಕಾರಿ ಜನವಾಗಿದ್ದರು. ಜಸರತ್ ಎಂಬವನು ಅವರ ನಾಯಕನಾಗಿದ್ದನು. ಅವನು ತೈಮೂರನ ವಿರುದ್ಧ ಮಾಡಿದ ಹೋರಾಟದಲ್ಲಿ ವಿಫಲವಾಗಿ, ಪ್ರಾಣ ರಕ್ಷಣೆಗಾಗಿ ಗುಡ್ಡಗಾಡಿಗೆ ಓಡಿಹೋಗಿದ್ದನು. ತೈಮೂರನು ಭಾರತವನ್ನು ಬಿಟ್ಟು ಹಿಂದಿರುಗಿ ಹೋದ ಮೇಲೆ ಅವನು ಲಾಹೋರನ್ನು ವಶಪಡಿಸಿಕೊಂಡನು. ಖಿಜರ್‌ಖಾನನು ಕಾಲವಾದಾಗ ಆ ಸನ್ನಿವೇಶದ ಅನುಕೂಲವನ್ನು ಪಡೆದುಕೊಂಡು ಅವನು ದೆಹಲಿಯನ್ನು ವಶಪಡಿಸಿಕೊಳ್ಳಲು ಸೈನ್ಯದೊಂದಿಗೆ ಬಂದನು. ಆದರೆ ಸರ್‌ಹಿಂಧ್ ಸಮೀಪದಲ್ಲಿ ಅವನ ಸೈನ್ಯವನ್ನು ಇಸ್ಲಾಖಾನ್ ಲೂದಿಯ ಸೈನ್ಯವು ತಡೆಹಿಡಿಯಿತು. ಈ ಸಂದರ್ಭದಲ್ಲಿ ಮುಬಾರಕ್ ಷಹನು ಅವನ ವಿರುದ್ಧ ದಂಡೆತ್ತಿ ಹೋಗಿ ಜಸರತ್‌ನ ಸೈನ್ಯವನ್ನು ಸಂಪೂರ್ಣವಾಗಿ ಸೋಲಿಸಿದನು. ಜಸರತ್‌ನು ಪ್ರಾಣ ರಕ್ಷಣೆಗಾಗಿ, ಗುಡ್ಡಗಾಡಿಗೆ ಓಡಿಹೋದನು. ಅವನು ಇಷ್ಟಾದರೂ ಧೈರ್ಯಗೆಡದೆ ಸೈಯದರನ್ನು ದೆಹಲಿಯಿಂದ ಉಚ್ಚಾಟನೆ ಮಾಡಲು ಕಾಶ್ಮೀರ ಮತ್ತು ಕಾಬೂಲುಗಳ ಅರಸರುಗಳೊಂದಿಗೆ ಮೈತ್ರಿಯನ್ನೇರ್ಪಡಿಸಿಕೊಂಡನು. ಆದರೆ ಈ ಮೈತ್ರಿಯಿಂದ ಅವನ ಪ್ರಯತ್ನವು ಈಡೇರಲಿಲ್ಲ. ತರುವಾಯದಲ್ಲಿ ಅವನು ಜಲಂಧರ್ ಮತ್ತು ಲಾಹೋರ್‌ಗಳ ಮೇಲೆ ಆಕ್ರಮಣಮಾಡಿ ಅವುಗಳ ಮೇಲೆ ಕೆಲವು ದಿವಸಗಳವರೆಗೆ ತನ್ನ ಅಧಿಕಾರವನ್ನು ಸ್ಥಾಪಿಸಿದನು. ಆದರೆ ಅದು ಬಹಳಕಾಲ ಮುಂದುವರಿಯಲಿಲ್ಲ. ದೆಹಲಿಯನ್ನು ವಶಪಡಿಸಿಕೊಳ್ಳುವ ಪ್ರಯತ್ನದಲ್ಲಿ ವಿಫಲನಾದ ಅವನು ಸೈಯದರ ವಿರುದ್ಧ ಲೂದಿಗಳಿಗೆ ಸಹಾಯಮಾಡಲು ಮುಂದೆ ಬಂದನು. ಆದರೆ ಸೈಯದರ ಅಧಿಕಾರವು ಕೊನೆಗೊಳ್ಳುವುದಕ್ಕೆ ಮೊದಲೆ ಅವನು ಕೊಲೆಮಾಡಲ್ಪಟ್ಟನು. ಮುಬಾರಕ್‌ಷಹನು ಲಾಹೋರ್‌ಕೋಟೆಯನ್ನು ದುರಸ್ತುಗೊಳಿಸಿ, ಕೊಕ್ಕಾರರ ಮತ್ತು ಟರ್ಕೋಬಾಕರ ಆಕ್ರಮಣಗಳನ್ನು ತಡೆಗಟ್ಟಲು ಅಲ್ಲಿ ಒಂದು ಸೈನ್ಯವನ್ನಿರಿಸಿದನು.

ಮುಬಾರಕ್‌ಷಹನು ಕೊಕ್ಕಾರರ ದಂಗೆಯನ್ನು ಅಡಿಗಿಸಿದ ತರುವಾಯದಲ್ಲೇ ಟರ್ಕೋಬಾಕರ ದಂಗೆಯನ್ನು ಅಡಗಿಸಬೇಕಾಯಿತು. ಪೌಲದ್ ಎಂಬವನು ಇವರ ನಾಯಕನಾಗಿದ್ದನು. ಪೌಲದ್‌ನು ತಬರ್‌ಹಿಂದ್ ಕೋಟೆಯ ಮೇಲೆ ಆಕ್ರಮಣ ಮಾಡಿ ಅಲ್ಲಿದ್ದ ಅಪಾರ ಐಶ್ವರ್ಯವನ್ನು ವಶಪಡಿಸಿಕೊಂಡು ದಂಗೆಯೆದ್ದನು. ಅವನ ದಂಗೆಯನ್ನಡಗಿಸಲು ಸುಲ್ತಾನನು ಕಳುಹಿಸಿದ ಸೈನ್ಯವು ಸೋತು ಹಿಂದಿರುಗಿತು. ಈಗ ಸುಲ್ತಾನನೇ ದಂಡೆತ್ತಿ ಹೋದನು. ಪೌಲದ್ ಸೋತು ಕೊಲ್ಲಲ್ಪಟ್ಟನು. ಬಿಯಾನ, ಕಲ್ಪಿ ಮತ್ತು ಮೀವಾಟ್‌ಗಳಲ್ಲಿನ ದಂಗೆಗಳನ್ನು ಅಡಗಿಸಲಾಯಿತು. ಅಂತೆಯೆ

ಬದಾವನ್, ಕಾಥೇಹಾರ್ ಮತ್ತು ಗ್ವಾಲಿಯರ್‌ಗಳಲ್ಲಿನ ದಂಗೆಗಳನ್ನೂ ಸುಲ್ತಾನನು ಅಡಗಿಸುವುದರಲ್ಲಿ ಯಶಸ್ವಿಯಾದನು.

ಮುಬಾರಕ್‌ಷಹನು ದೆಹಲಿಯ ಸುಲ್ತಾನತ್ವವನ್ನು ಕಾಪಾಡಲು ವಿಶೇಷವಾಗಿ ಹೋರಾಡಿದನು. ಅವನು ಸಾಮ್ರಾಜ್ಯದ ಪಶ್ಚಿಮ ಗಡಿಯನ್ನು ರಕ್ಷಿಸಿ ಮಂಗೋಲರ ಪ್ರಯತ್ನವನ್ನು ಭಗ್ನಗೊಳಿಸಿದನು. ಲಾಹೋರ್ ಪಟ್ಟಣವನ್ನು ಜೀರ್ಣೋದ್ಧಾರ ಮಾಡಿ ಅದರ ಹಿಂದಿನ ವೈಭವವನ್ನು ಮತ್ತೊಮ್ಮೆ ಸ್ಥಾಪಿಸಿದನು. ಯಮುನಾ ನದಿಯ ದಂಡೆಯ ಮೇಲೆ ಮುಬಾರಕ್‌ಬಾದ್ ಎಂಬ ಹೊಸ ಪಟ್ಟಣವನ್ನು ನಿರ್ಮಿಸಿದನು ಮತ್ತು ಅಲ್ಲಿ ಸುಂದರವಾದ ಮಸೀದಿಯನ್ನು ಕಟ್ಟಿಸಿದನು. ತಾರಿಕ್-ಇ-ಮುಬಾರಕ್ ಷಾಹಿ ಕೃತಿಯ ಕರ್ತೃವಾದ ಯಹ್ಯಾ ಸರ್‌ಹಿಂದಿಯು ಅವನ ಉದಾರಾಶ್ರಯ ಪಡೆದಿದ್ದನು. ಮುಬಾರಕ್‌ಷಹನು ಸೈಯದ್ ಸಂತತಿಯ ದೊರೆಗಳಲ್ಲಿ ಶ್ರೇಷ್ಠನಾದವನು. ಇವನು ಹೊಸದಾಗಿ ನಿರ್ಮಾಣವಾಗುತ್ತಿದ್ದ ಮುಬಾರಕ್‌ಬಾದ್ ಪಟ್ಟಣದ ಪ್ರಗತಿಯನ್ನು ವೀಕ್ಷಿಸಲು ಹೋಗಿದ್ದಾಗ ಪಿತೂರಿಗಾರರು ಫೆಬ್ರವರಿ 1434ರಲ್ಲಿ ಅವನನ್ನು ಮೋಸದಿಂದ ಕೊಂದುಹಾಕಿದರು.

**ಮಹಮದ್‌ಷಹ (1434-1444)**

ಮುಬಾರಕ್‌ಷಹನ ಮರಣಾನಂತರ ಸೈಯದ್ ಸಂತತಿಯವರ ಆಳ್ವಿಕೆಯ ಅವನತಿ ಪ್ರಾರಂಭವಾಯಿತು. ಮುಬಾರಕ್‌ಷಹನ ದತ್ತು ಮಗನೂ ಮತ್ತು ಖಿಜರ್‌ಖಾನನ ಮೊಮ್ಮಗನೂ ಆದ ಮಹಮದ್‌ಷಹನು ಅಸಮರ್ಥ ಸುಲ್ತಾನನಾಗಿದ್ದನು. ಅವನಿಗೆ ಅನಾಯಕತ್ವ ಮತ್ತು ದಂಗೆಗಳಿಂದ ಕೂಡಿದ್ದ ಪರಿಸ್ಥಿತಿಯನ್ನು ಎದುರಿಸುವುದು ಬಹಳ ಕಷ್ಟವಾಗಿ ಕಂಡುಬಂದಿತು. ಜಾನ್ಪುರದ ಇಬ್ರಾಹಿಂಷಹನು ದೆಹಲಿಗೆ ಸೇರಿದ್ದ ಅನೇಕ ಫರಗಣಗಳನ್ನು ವಶಪಡಿಸಿಕೊಂಡನು. ಗ್ವಾಲಿಯರ್‌ನ ರಾಜನು ಪೊಗದಿ ಕೊಡುವುದನ್ನು ನಿಲ್ಲಿಸಿದನು. ಮಾಳವದ ರಾಜನಾಗಿದ್ದ ಮಹಮದ್ ಖಿಲ್ಜಿಯು 1440ರಲ್ಲಿ ದೆಹಲಿಯನ್ನು ವಶಪಡಿಸಿಕೊಳ್ಳಲು ಬಂದಾಗ ಸುಲ್ತಾನನು ಲಾಹೋರ್ ಮತ್ತು ಸರ್‌ಹಿಂದ್‌ನ ಗೌವರ್ನರ್ ಆಗಿದ್ದ ಬಹಲೂಲ್ ಲೂದಿಯನ್ನು ತನ್ನ ಸಹಾಯಕ್ಕೆ ಕರೆದು ರಾಜಧಾನಿಯನ್ನು ಕಾಪಾಡಿಕೊಂಡನು. ಬಹಲೂಲ್ ಲೂದಿಯು ಹಿಂದಿರುಗಿ ಹೋಗುತ್ತಿದ್ದ ಮಾಳವದ ಸೈನ್ಯವನ್ನು ಛಿನ್ನಟ್ಟಿಹೋಗಿ ಅವರ ಸಾಮಗ್ರಿಗಳೆಲ್ಲವನ್ನೂ ವಶಪಡಿಸಿಕೊಂಡನು. ಸುಲ್ತಾನನು ಅವನಿಗೆ ಖಾನ್-ಇ-ಖಾನನ್ ಎಂಬ ಬಿರುದನ್ನು ನೀಡಿದನು. ಅಲ್ಲದೆ ಸುಲ್ತಾನನು ಅವನನ್ನು ತನ್ನ ಮಗನೆಂದು ಸಂಬೋಧಿಸಿ ತನ್ನ ಪ್ರೀತಿವಿಶ್ವಾಸಗಳನ್ನು ವ್ಯಕ್ತಪಡಿಸಿದನು. ಆದರೆ ಬಹಲೂಲ್ ಲೂದಿಯ ನಿಷ್ಠೆಯು ಬಹಳ ಕಾಲ ಮುಂದುವರಿಯಲಿಲ್ಲ. ಅವನು ಸರ್‌ಹಿಂಧ್‌ಗೆ ಹಿಂದಿರುಗಿ ಪಂಜಾಬಿನ ಕೆಲವು ಭಾಗಗಳನ್ನು ವಶಪಡಿಸಿಕೊಂಡು ತನ್ನ ಸ್ಥಾನವನ್ನು ಭದ್ರಪಡಿಸಿಕೊಂಡನು. ಕೊಕ್ಕಾರರ ವಿರೋಧವು ಇವನ ಕಾಲದಲ್ಲೂ ಮುಂದುವರಿಯಿತು. ಈ ಎಲ್ಲ ಗಲಭೆಗಳ ನಡುವೆ ಸುಲ್ತಾನನು 1445ರಲ್ಲಿ ಕಾಲವಾದನು.

**ಅಲ್ಲಾವುದ್ದೀನ್ ಆಲಂಷಹ (1444-1451)**

ಮಹಮದ್ ಷಹನು ಕಾಲವಾದ ಮೇಲೆ ಅವನ ಮಗನಾದ ಅಲ್ಲಾವುದ್ದೀನ್

ಆಲಂಷಹನು ಸಿಂಹಾಸನವನ್ನೇರಿದನು. ಆಲಂಷಹನು ತನ್ನ ತಂದೆಗಿಂತಲೂ ಅಸಮರ್ಥ ರಾಜನಾಗಿದ್ದನು. ಇವನ ಆಳ್ವಿಕೆಯ ಕಾಲದಲ್ಲಿ ಆಫ್‌ಘನ್ನರು ಇನ್ನೂ ಹೆಚ್ಚು ಪ್ರಬಲರಾಗಿ ಬಹಲೂಲ್ ಲೂದಿಯು ಪಂಜಾಬಿಗೂ ಒಡೆಯನಾದನು. ಸುಲ್ತಾನನ ವಜೀರನಾಗಿದ್ದ ಹಮೀದ್‌ಖಾನನು ಸುಲ್ತಾನನ ಅಧಿಕಾರವನ್ನು ಕಾಪಾಡಲು ಸರ್ವಪ್ರಯತ್ನ ಮಾಡಿದನು. ಆದರೆ ಸುಲ್ತಾನನು ತನಗೆ ಶತ್ರುಗಳಾರು, ಸ್ನೇಹಿತರಾರು ಎಂಬುದನ್ನು ತಿಳಿದುಕೊಳ್ಳುವಷ್ಟು ಬುದ್ಧಿ ಇಲ್ಲದವನಾಗಿದ್ದನು. ಇದಲ್ಲದೆ ಸುಲ್ತಾನನು 1447ರ ನಂತರ ದೆಹಲಿಗೆ ಬದಲಾಗಿ, ಬದಾವನ್ ಅನ್ನು ತನ್ನ ವಾಸಸ್ಥಾನವನ್ನಾಗಿ ಮಾಡಿಕೊಂಡನು. ಅವನ ಸಚಿವನಾಗಿದ್ದ ಹಮೀದ್‌ಖಾನನು ಇದನ್ನು ಎಷ್ಟೇ ವಿರೋಧಿಸಿದರೂ ಸುಲ್ತಾನನು ಆದಕ್ಕೆ ಕಿವಿಗೊಡಲಿಲ್ಲ. ದೆಹಲಿಯಲ್ಲಿ ಅನಾಯಕತ್ವ ಪರಿಸ್ಥಿತಿಯುಂಟಾಯಿತು. ಈ ಸಂದರ್ಭದಲ್ಲಿ ಹಮೀದ್‌ಖಾನನು ಬಹಲೂಲ್ ಲೂದಿಗೆ ದೆಹಲಿಗೆ ಬಂದು ಸಿಂಹಾಸನವನ್ನು ವಶಪಡಿಸಿಕೊಳ್ಳುವಂತೆ ಆಮಂತ್ರಣ ನೀಡಿದನು. ಅಂತೆಯೆ ಬಹಲೂಲ್ ಲೂದಿಯು ದೆಹಲಿಗೆ ಬಂದು ಸಿಂಹಾಸನವನ್ನು ವಶಪಡಿಸಿಕೊಂಡನು. ಇದರೊಂದಿಗೆ ಸೈಯದ್ ಸಂತತಿಯವರ ಆಳ್ವಿಕೆಯು ಕೊನೆಗಂಡಿತು. ಆಲಂ ಷಹನು 1476ರವರೆಗೂ ಬದಾವನ್‌ನಲ್ಲಿ ಜೀವಿಸಿದ್ದನು. ಆವನು ಕಾಲವಾದ ಮೇಲೆ ಬದಾವನ್ ಅನ್ನು ಜಾನ್ಪುರದ ಹುಸೈನ್‌ಷಹ ಷಾರ್ಕಿಯು ತನ್ನ ರಾಜ್ಯಕ್ಕೆ ಸೇರಿಸಿಕೊಂಡನು.

**ಲೂದಿ ಸಂತತಿ** (1451-1526)

ಕ್ರಿ.ಶ. 1451ರಲ್ಲಿ ಸೈಯದ್ ಸಂತತಿಯವರ ಆಳ್ವಿಕೆಯು ಕೊನೆಗಂಡ ಮೇಲೆ ಲೂದಿ ಸಂತತಿಯವರು ದೆಹಲಿಯ ಸಾಮ್ರಾಜ್ಯಕ್ಕೆ ಒಡೆಯರಾಗಿ ಸುಮಾರು ಎಪ್ಪತ್ತೈದು ವರ್ಷಗಳ ಕಾಲ ರಾಜ್ಯವಾಳಿದರು. ಲೂದಿಗಳು ಆಫ್‌ಘನ್ನರ ಬುಡಕಟ್ಟಿಗೆ ಸೇರಿದವರು. ಇವರು ಪಂಜಾಬಿನಲ್ಲಿ ವಾಸವಾಗಿದ್ದು ದೆಹಲಿಯ ಹಲವಾರು ಸುಲ್ತಾನರುಗಳಿಗೆ ಸೇವೆಸಲ್ಲಿಸುತ್ತಿದ್ದು ಕ್ರಮಕ್ರಮವಾಗಿ ಪ್ರಾಮುಖ್ಯತೆಗೆ ಬಂದರು. ತೊಘಲಕ್‌ರ ನಂತರ ಅಧಿಕಾರಕ್ಕೆ ಬಂದ ಸೈಯದ್ ಸಂತತಿಯವರ ದೊರೆ ಖಿಜರ್‌ಖಾನನ ಕಾಲದಲ್ಲಿ ಈ ಸಂತತಿಯ ಸ್ಥಾಪಕನಾದ ಬಹಲೂಲ್ ಲೂದಿಯು ಪ್ರಸಿದ್ಧಿಗೆ ಬಂದನು. ಬಹಲೂಲ್ ಲೂದಿಯು ಸೈನ್ಯದ ಸಮರ್ಥ ನಾಯಕನಾಗಿದ್ದು ಸುಲ್ತಾನನ ಪ್ರೀತಿ ವಿಶ್ವಾಸಗಳನ್ನು ಗಳಿಸಿ ಸರ್‌ಹಿಂದ್‌ಗೆ ಗೌವರ್ನರ್ ಆಗಿ ನೇಮಕಗೊಂಡನು. ತರುವಾಯದಲ್ಲಿ ಅವನು ಖಿಜರ್‌ಖಾನನ ಅಳಿಯನೂ ಆದನು. ಮೊದಲಿಗೆ ಲೂದಿಗಳು ತಮ್ಮ ಅಧಿಕಾರವನ್ನು ಪಂಜಾಬಿನಲ್ಲಿ ಭದ್ರಗೊಳಿಸಿಕೊಂಡು ಅನಂತರ ಒದಗಿಬಂದ ಸನ್ನಿವೇಶದ ಅನುಕೂಲ ಪಡೆದುಕೊಂಡು ದೆಹಲಿಯ ಸಿಂಹಾಸನಕ್ಕೆ ಒಡೆಯರಾದರು.

**ಬಹಲೂಲ್ ಲೂದಿ** (1451-1489)

ಬಹಲೂಲ್ ಲೂದಿಯು ಒಬ್ಬ ಮಹತ್ವಾಕಾಂಕ್ಷಿ ದೊರೆಯಾಗಿದ್ದನು. ಇವನು ತನ್ನ ಸ್ವಸಾಮರ್ಥ್ಯದಿಂದ ಮತ್ತು ಬುದ್ಧಿವಂತಿಕೆಯಿಂದ ಉನ್ನತ ಪದವಿಗೇರಿದನು. ಸೈಯದ್ ಸಂತತಿಯ ಕೊನೆಯ ಸುಲ್ತಾನನಾದ ಆಲಂಷಹನ ದುರ್ಬಲತೆಯ ಅನುಕೂಲವನ್ನು ಪಡೆದುಕೊಂಡು ಯಾವುದೇ ರೀತಿಯ ಹಿಂಸಾಕೃತ್ಯವೂ ಇಲ್ಲದೆ

ಅಧಿಕಾರದ ಕೇಂದ್ರವಾಗಿದ್ದ ದೆಹಲಿಯನ್ನು ವಶಪಡಿಸಿಕೊಂಡನು. ಅನಂತರ ಅವನು ರಾಜ್ಯವನ್ನು ಕಾಡುತ್ತಿದ್ದ ಸಮಸ್ಯೆಗಳನ್ನು ಬಗೆಹರಿಸಲು ತನ್ನ ಗಮನವನ್ನು ಹರಿಸಿದನು.

ಬಹಲೂಲ್ ಲೂದಿಯು ದೆಹಲಿಯ ಸಿಂಹಾಸನವನ್ನು ವಶಪಡಿಸಿಕೊಂಡಾಗ ಅವನಿಗೆ ಅನೇಕ ವಿರೋಧಿಗಳೂ ಇದ್ದರು. ಸಿಂಹಾಸನಕ್ಕಾಗಿ ಅನೇಕರು ತಮ್ಮ ಹಕ್ಕುಗಳನ್ನು ಮುಂದೊಡ್ಡಿದ್ದರು. ರಾಜಧಾನಿಯಾದ ದೆಹಲಿಯಲ್ಲಿ ಅರಾಜಕತೆಯುಂಟಾಗಿದ್ದಿತು. ಸಾಮ್ರಾಜ್ಯದ ಖಜಾನೆಯು ಬರಿದಾಗಿದ್ದು ಆಡಳಿತ ನಡೆಸುವುದೇ ಕಷ್ಟವಾಗಿದ್ದಿತು. ಹೀಗಾಗಿ ಬಹಲೂಲ್ ಲೂದಿಯು ಸಿಂಹಾಸನಾರೂಢನಾದಾಗ ಅನೇಕ ತೊಂದರೆಗಳನ್ನು ಎದುರಿಸಬೇಕಾಗಿತ್ತು. ದೆಹಲಿಯ ಸುಲ್ತಾನರ ಅಧಿಕಾರವನ್ನು ಪೂನರ್ ಸ್ಥಾಪಿಸಬೇಕಾಗಿತ್ತು. ದಂಗೆಗಳನ್ನು ಅಡಗಿಸಬೇಕಿತ್ತು ಮತ್ತು ಸಾಮ್ರಾಜ್ಯದಿಂದ ಕೈಬಿಟ್ಟು ಹೋಗಿದ್ದ ಪ್ರಾಂತ್ಯಗಳನ್ನು ಪುನಃ ಪಡೆದುಕೊಳ್ಳಬೇಕಿತ್ತು. ಈ ಎಲ್ಲ ಸಮಸ್ಯೆಗಳನ್ನು ಬಹಲೂಲ್ ಲೂದಿಯು ಧೈರ್ಯದಿಂದ ಎದುರಿಸಿ ಲೂದಿಯವರ ಅಧಿಕಾರವನ್ನು ನೆಲೆಗೊಳಿಸಿದನು.

ಬಹಲೂಲ್ ಲೂದಿಯು ಎದುರಿಸಬೇಕಾಗಿದ್ದ ಶತ್ರುಗಳು ಹಲವಾರು, ಅವರಲ್ಲಿ ಜಾನ್ಪುರದ ಷಾರ್ಕಿ ದೊರೆಗಳು ಅವನ ಪ್ರಬಲ ಶತ್ರುಗಳಾಗಿದ್ದರು. ಅಂತೆಯೆ ಆಫ್ಘನ್ ನೋಬಲ್ಲರನ್ನು ಸಮಾಧಾನಗೊಳಿಸಬೇಕಿತ್ತು. ಆಡಳಿತವನ್ನು ಪುನರ್ ವ್ಯವಸ್ಥೆಗೊಳಿಸಬೇಕಿತ್ತು. ಈ ಎಲ್ಲ ಪ್ರತಿಕೂಲ ಸನ್ನಿವೇಶಗಳನ್ನು ಬಹಲೂಲ್ ಲೂದಿಯು ಬುದ್ಧಿವಂತಿಕೆಯಿಂದ ಎದುರಿಸಿ ತನ್ನ ಪ್ರಭಾವವನ್ನು ಹೆಚ್ಚಿಸಿಕೊಂಡನು. ಸುಲ್ತಾನನು ಸರ್ಕಾರದ ಖಜಾನೆಯ ಮೇಲ್ವಿಚಾರಣೆಯನ್ನು ತನ್ನ ಸಂಬಂಧಿಕರಿಗೆ ವಹಿಸಿ ಹಣಕಾಸಿನ ವ್ಯವಸ್ಥೆಯನ್ನೇರ್ಪಡಿಸಿದನು. ಆಫ್ಘನ್ ನೋಬಲ್ಲರಿಗೆ ಅನೇಕ ರಿಯಾಯಿತಿಗಳನ್ನು ಕೊಟ್ಟು ಅವರನ್ನು ಸಮಾಧಾನಗೊಳಿಸಿ ಅವರ ಸಹಕಾರವನ್ನು ಪಡೆದುಕೊಂಡನು. ಅಲ್ಲದೆ ಸೈನ್ಯದ ಠಾಣೆಗಳ ಮೇಲ್ವಿಚಾರಣೆಯನ್ನು ನೋಡಿಕೊಳ್ಳಲು ಆಫ್ಘನ್ನರನ್ನು ನೇಮಿಸಿ, ಸೈನ್ಯವನ್ನು ಬಲಗೊಳಿಸಿದನು. ಹೀಗೆ ಬಹಲೂಲ್ ಲೂದಿಯು ರಾಜಧಾನಿಯಲ್ಲಿ ಶಾಂತಿ ವ್ಯವಸ್ಥೆಗಳನ್ನು ಏರ್ಪಡಿಸಿ, ಅನಂತರ ದಂಗೆಗಳನ್ನು ಅಡಗಿಸಲು ಕ್ರಮಗಳನ್ನು ಕೈಗೊಂಡನು. ಮೊದಲಿಗೆ ಅವನು ಮುಲ್ತಾನಿನ ಮೇಲೆ ದಂಡೆತ್ತಿಹೋಗಿ ಅದನ್ನು ಅಧೀನಕ್ಕೊಳಪಡಿಸಿಕೊಂಡನು. ಬಹಲೂಲ್ ಲೂದಿಯು ರಾಜಧಾನಿಯಲ್ಲಿಲ್ಲದ ಈ ಸಂದರ್ಭದಲ್ಲಿ ಜಾನ್ಪುರದ ಷಾರ್ಕಿ ದೊರೆ ಸುಲ್ತಾನ್ ಮಹಮದ್ ಷಾರ್ಕಿಯು ದರಿಯಾಖಾನ್ ಲೂದಿಯ ಸಹಕಾರದೊಂದಿಗೆ ದೆಹಲಿಗೆ ಮುತ್ತಿಗೆ ಹಾಕಿದನು. ಈ ಸುದ್ದಿಯನ್ನು ತಿಳಿದ ಕೂಡಲೆ ಬಹಲೂಲ್ ಲೂದಿಯು ಸೈನ್ಯವನ್ನು ತಕ್ಷಣವೇ ರಾಜಧಾನಿಯ ಕಡೆ ತಿರುಗಿಸಿ ಜಾನ್ಪುರದ ಸೈನ್ಯವನ್ನು ಸೋಲಿಸಿ ಓಡಿಸಿದನು.

ಬಹಲೂಲ್ ಲೂದಿಯು ಷಾರ್ಕಿ ದೊರೆಯ ವಿರುದ್ಧ ಪಡೆದ ವಿಜಯವು ಲೂದಿಗಳು ಪಡೆದ ದೊಡ್ಡ ವಿಜಯವೇ ಆಗಿತ್ತು. ಆದರೂ ಷಾರ್ಕಿಗಳಿಂದ ಲೂದಿಗಳಿಗೆ ತೊಂದರೆಯು ತಪ್ಪಲಿಲ್ಲ. ಷಾರ್ಕಿಗಳು ದೆಹಲಿಯ ಸಿಂಹಾಸನಕ್ಕೆ ಸೈಯದರ ನಂತರ ನ್ಯಾಯವಾದ ಹಕ್ಕುದಾರರೆಂದೂ, ಮತ್ತು ಲೂದಿಗಳು ಸಿಂಹಾಸನವನ್ನು ಅತಿಕ್ರಮಿಸಿದವರೆಂದು ಭಾವಿಸಿದರು. ಅಲ್ಲದೆ ಅವರು ದೆಹಲಿಯು ತಮ್ಮ ಪ್ರತಿಸ್ಪರ್ಧಿಗಳ ಕೈಯಲ್ಲಿರುವವರೆಗೂ ಜಾನ್ಪುರದಲ್ಲಿ ತಮ್ಮ ಅಧಿಕಾರವು

ಸುರಕ್ಷಿತವಾಗಿರಲಾರದೆಂದು ಭಾವಿಸಿದರು. ಮಹಮದ್ ಷಾರ್ಕಿಯು ತನ್ನ ಹಿಂದಿನ ಸೋಲಿಗೆ ಪ್ರತೀಕಾರ ಕೈಗೊಳ್ಳಲು ನಿರ್ಧರಿಸಿ ಬಹಲೂಲ್ ಲೂದಿಯ ವಿರುದ್ಧ ಯುದ್ಧಹೂಡಿ ಎಟಾವ ಮತ್ತು ಷಂಸಾಬಾದ್‌ಗಳ ಹತ್ತಿರ ದೆಹಲಿಯ ಸೈನ್ಯದ ವಿರುದ್ಧ ಹೋರಾಡಿದನು. ಆದರೆ ಅವನು ಅನಿರೀಕ್ಷಿತವಾಗಿ ಕಾಲವಾದನು. ಅವನ ತರುವಾಯ ಸುಲ್ತಾನನಾದ ಅವನ ಮಗ ಮಹಮದ್ ಷಹನು ಶಾಂತಿ ಒಪ್ಪಂದವನ್ನು ಮಾಡಿಕೊಳ್ಳಲು ಬಯಸಿ ವಿಫಲನಾದನು. ಅಲ್ಲದೆ ಮಹಮದ್ ಷಹನು ಅವನ ಸಹೋದರ ಹುಸ್ಸೈನ್‌ನಿಂದ ಕೊಲೆಮಾಡಲ್ಪಟ್ಟನು. ಹುಸ್ಸೈನನು ದೆಹಲಿಯ ವಿರುದ್ಧ ಯುದ್ಧವನ್ನು ಮುಂದುವರಿಸಿದನು. ಬಹಲೂಲ್ ಲೂದಿಯು ಸೈನ್ಯದೊಂದಿಗೆ ಯಮುನಾ ನದಿಯನ್ನು ದಾಟಿ ಅವನ ವಿರುದ್ಧ ಹೋದನು. ಎರಡು ಪಕ್ಷದವರಿಗೂ ನಡೆದ ಕದನದಲ್ಲಿ ಹುಸ್ಸೈನ್‌ಷಹ ಸೋಲಿನ ಮೇಲೆ ಸೋಲನ್ನು ಹೊಂದಿಬಹಲೂಲ್ ಲೂದಿಯ ವಿಜೇತ ಸೈನ್ಯವು ಜಾನ್ಪುರವನ್ನು ಪ್ರವೇಶಿಸಿತು. ಹುಸ್ಸೈನನು ಬಿಹಾರಿಗೆ ಓಡಿಹೋದನು. ಜಾನ್ಪುರ ರಾಜ್ಯವು ಬಹಲೂಲ್ ಲೂದಿಯ ವಶವಾಯಿತು. ಇದರ ಜೊತೆಗೆ ಕಲ್ಪಿ ಮತ್ತು ದೋಲ್‌ಪುರ ಪ್ರದೇಶಗಳೂ ದೆಹಲಿ ಸಾಮ್ರಾಜ್ಯಕ್ಕೆ ಸೇರಿಸಲ್ಪಟ್ಟವು. ಈ ವಿಜಯದಿಂದ ಬಹಲೂಲ್ ಲೂದಿಯ ಗೌರವ ಪ್ರತಿಷ್ಠೆಗಳು ಹೆಚ್ಚಿದ್ದಲ್ಲದೆ ದೆಹಲಿ ಸಾಮ್ರಾಜ್ಯದ ಎಲ್ಲೆಗಳೂ ವಿಸ್ತಾರವಾಗಿ ಅದರ ಹಿಂದಿನ ಸ್ಥಾನಮಾನಗಳು ಮತ್ತೊಮ್ಮೆ ಪುನಶ್ಚೇತನಗೊಂಡವು ಮತ್ತು ಜಾನ್ಪುರದಲ್ಲಿ ಷಾರ್ಕಿ ದೊರೆಗಳ ಆಳ್ವಿಕೆಯ ಕೊನೆಗಂಡಿತು.

ಜಾನ್ಪುರದ ಷಾರ್ಕಿ ದೊರೆಗಳ ವಿರುದ್ಧದ ತೊಂದರೆಗಳ ಅನುಕೂಲವನ್ನು ಪಡೆದುಕೊಂಡು ದೋಬ್, ಮೇವಾಟ್, ಕೋಲಂ, ಸಂಬಾಲ್, ಎಟಾವ, ಮತ್ತು ಗ್ವಾಲಿಯರ್‌ಗಳಲ್ಲಿನ ನಾಯಕರುಗಳು ಉಪದ್ರವ ಕೊಡಲಾರಂಭಿಸಿದರು. ಇವರೆಲ್ಲರ ವಿರುದ್ಧ ಬಹಲೂಲ್ ಲೂದಿಯು ಯಶಸ್ವಿಯಾಗಿ ಹೋರಾಡಿ ಅವುಗಳನ್ನು ತನ್ನ ಅಧೀನಕ್ಕೊಳಪಡಿಸಿಕೊಂಡನು. ಈ ದಂಡಯಾತ್ರೆಗಳ ನಂತರ ಹಿಂದಿರುಗಿದ ಮೇಲೆ ಅವನು ಜ್ವರಪೀಡಿತನಾಗಿ 1489ರಲ್ಲಿ ಕಾಲವಾದನು.

ಬಹಲೂಲ್ ಲೂದಿಯು ಲೂದಿ ಸಂತತಿಯ ದೊರೆಗಳಲ್ಲಿ ಉನ್ನತ ಸ್ಥಾನ ಪಡೆದುಕೊಳ್ಳಲು ಅರ್ಹನಾಗಿದ್ದಾನೆ. ಅವನು ಶಿಥಿಲವಾಗುತ್ತಿದ್ದ ದೆಹಲಿ ಸಾಮ್ರಾಜ್ಯವನ್ನು ರಕ್ಷಿಸಿ ಅದಕ್ಕೆ ಹೊಸ ಶಕ್ತಿಯನ್ನು ತಂದುಕೊಟ್ಟನು. ಅವನ ಮುವತ್ತೆಂಟು ವರ್ಷಗಳ ಕಾಲದ ಆಳ್ವಿಕೆಯು ಸಾಮ್ರಾಜ್ಯಕ್ಕೆ ಒದಗಿದ್ದ ಪ್ರತಿಕೂಲ ಸನ್ನಿವೇಶಗಳ ವಿರುದ್ಧ ಹೋರಾಡುವುದರಲ್ಲೇ ಕಳೆಯಿತು. ಆದರೂ ಅವನ ತರುವಾಯ ಆಳಿದ ಲೂದಿ ಸಂತತಿಯ ದೊರೆಗಳಿಗೆ ಅವನು ಭದ್ರವಾದ ಅಡಿಪಾಯ ಹಾಕಿದನು. ಬಹಲೂಲ್ ಲೂದಿಯು ವೈಯಕ್ತಿಕವಾಗಿ ಸರಳತೆಯನ್ನು ಇಷ್ಟಪಡುತ್ತಿದ್ದನು. ನಿಷ್ಠಾವಂತ ಮುಸಲ್ಮಾನನಾಗಿದ್ದರೂ ಮತಭ್ರಾಂತನಾಗಿರಲಿಲ್ಲ. ನ್ಯಾಯದ ವಿಷಯದಲ್ಲಿ ಪಕ್ಷಪಾತವಿಲ್ಲದೆ ನಡೆದುಕೊಳ್ಳುತ್ತಿದ್ದನು. ಅವನು ಅಷ್ಟೇನು ವಿದ್ಯಾವಂತನಲ್ಲದಿದ್ದರೂ ವಿದ್ವಾಂಸರಿಗೆ ಹೆಚ್ಚಿನ ಗೌರವ ತೋರಿದ್ದನು. ಮೇಲಾಗಿ ಅವನು ತನ್ನ ಶಕ್ತಿ ಸಾಮರ್ಥ್ಯಗಳಿಂದ ಆಫ್‌ಘನ್ನರನ್ನು ದೆಹಲಿಯ ರಾಜಕೀಯದಲ್ಲಿ ಒಂದು ಪ್ರಮುಖ ಶಕ್ತಿಯನ್ನಾಗಿ ಮಾಡಿದನು.

## ಸಿಕಂದರ್ ಲೂದಿ (1489-1517)

ಬಹಲೂಲ್ ಲೂದಿಯ ಕಾಲವಾಗುವುದಕ್ಕೆ ಮುಂಚೆಯೆ ತನ್ನ ಮಕ್ಕಳಲ್ಲಿ ಮೂರನೆಯವನಾದ ನಿಜಾಮ್‌ಖಾನ್‌ನನ್ನು ತನ್ನ ಉತ್ತರಾಧಿಕಾರಿಯನ್ನಾಗಿ ನೇಮಿಸಿದ್ದನು. ಬಹಲೂಲ್ ಲೂದಿಯು ಕಾಲವಾದ ಮೇಲೆ ಸಿಂಹಾಸನಕ್ಕಾಗಿ ಅಣ್ಣ ತಮ್ಮಂದಿರಲ್ಲಿ ಕಲಹವು ಪ್ರಾರಂಭವಾಯಿತು. ದೆಹಲಿಯ ಕೆಲವು ನೋಬಲ್ಲರು ಬಹಲೂಲ್ ಲೂದಿಯ ಮತ್ತೊಬ್ಬ ಮಗನಾದ ಬಾರ್‌ಬಕ್ ಎಂಬುವನ ಹಕ್ಕನ್ನೂ ಮತ್ತೆ ಕೆಲವರು ಅಜಾಮ್ ಹುಮಾಯಾನನ ಹಕ್ಕನ್ನೂ ಮುಂದೊಡ್ಡಿದ್ದರು. ಆದರೆ ನಿಜಾಮ್‌ಖಾನನು ಇವರೆಲ್ಲರ ಪ್ರಯತ್ನಗಳನ್ನು ವಿಫಲಗೊಳಿಸಿ ಸಿಕಂದರ್ ಎಂಬ ಬಿರುದಿನಿಂದ ಸಿಂಹಾಸನವನ್ನೇರಿದನು.

ಲೂದಿ ಸಂತತಿಯ ದೊರೆಗಳಲ್ಲೆಲ್ಲಾ ಸಿಕಂದರ್ ಲೂದಿಯು ಹೆಚ್ಚು ಪ್ರಸಿದ್ಧನಾದವನು. ಇವನ ಕಿರೀಟ ಧಾರಣೆಯು ಜುಲೈ 27, 1489ರಲ್ಲಿ ನಡೆಯಿತು. ಸಿಕಂದರ್ ಲೂದಿಯು ಸಿಂಹಾಸನವನ್ನೇರಿದ ಮೇಲೆ ಅನೇಕ ತೊಂದರೆಗಳನ್ನು ಎದುರಿಸಬೇಕಾಗಿತ್ತು. ತನ್ನ ತಂದೆಯ ಕಾಲದಲ್ಲೇ ಜಾನ್ಪುರದ ಗೌವರ್ನರ್ ಆಗಿ ನೇಮಕಗೊಂಡಿದ್ದ ಅವನ ಸಹೋದರ ಬಾರ್‌ಬಕ್‌ನು ಅವನ ಅಧಿಕಾರಕ್ಕೆ ಗೌರವ ತೋರಿಸಲು ನಿರಾಕರಿಸಿದನು. ಇದರಿಂದಾಗಿ ಸಿಕಂದರ್ ಲೂದಿಯು ಅವನ ವಿರುದ್ಧ ಯುದ್ಧವನ್ನೇ ಮಾಡಬೇಕಾಯಿತು. ಕನೂಜಿನ ಬಳಿ ನಡೆದ ಯುದ್ಧದಲ್ಲಿ ಬಾರ್‌ಬಕ್‌ನು ಸೋತು ಶರಣಾಗತನಾದನು. ಸಿಕಂದರ್ ಅವನನ್ನು ಜಾನ್ಪುರದ ಗೌವರ್ನರ್ ಆಗಿ ಮುಂದುವರಿಸಿದನು. ಆದರೆ ಬಾರ್‌ಬಕ್‌ನು ದಂಗೆಕೋರರಾದ ಜಮೀನ್ದಾರರನ್ನು ಹತ್ತಿಕ್ಕುವುದರಲ್ಲಿ ವಿಫಲನಾಗಲು ಅವನನ್ನು ಅಧಿಕಾರದಿಂದ ತೆಗೆದುಹಾಕಿದನು. ದಂಗೆಕೋರ ಜಮೀನ್ದಾರರ ವಿರುದ್ಧ ಸೈನ್ಯವನ್ನು ಕಳುಹಿಸಿ ಸುಲ್ತಾನನು ಅವರನ್ನು ಅಂಕೆಗೊಳಪಡಿಸಿ ಜಾನ್ಪುರದಲ್ಲಿ ಲೂದಿಯವರ ಅಧಿಕಾರವನ್ನು ಭದ್ರಗೊಳಿಸಿದನು.

ಇದಾದ ನಂತರ ಸಿಕಂದರ್ ಲೂದಿಯು ತನ್ನ ಗಮನವನ್ನು ಬಿಹಾರ್ ರಾಜ್ಯದ ಕಡೆ ತಿರುಗಿಸಿದನು. ಇದಕ್ಕೆ ಮುಂಚೆ ಬಹಲೂಲ್ ಲೂದಿಯು ಷಾರ್ಕಿಗಳ ದೊರೆ ಸುಸೈನ್ ಷಾರ್ಕಿಯನ್ನು ಸೋಲಿಸಿ ಅವನನ್ನು ಬಿಹಾರಿಗೆ ಓಡಿಸಿದ್ದನು. ಬಿಹಾರಿನಲ್ಲಿದ್ದ ಹುಸೈನ್ ಷಾರ್ಕಿ ತನ್ನ ಅಧಿಕಾರವನ್ನು ಪಡೆದುಕೊಳ್ಳಲು ಮತ್ತೊಮ್ಮೆ ಪ್ರಯತ್ನಿಸಿದನು. ಅವನಿಗೆ ಬಿಹಾರಿನ ಕೆಲವು ದಂಗೆಕೋರ ಜಮೀನ್ದಾರರ ಬೆಂಬಲವೂ ಇದ್ದಿತು. ಸುಲ್ತಾನನು ಷಾರ್ಕಿಯ ವಿರುದ್ಧ ಸೈನ್ಯವನ್ನು ಕಳುಹಿಸಿ ಅವನನ್ನು ಎರಡು ಯುದ್ಧಗಳಲ್ಲಿ ಸೋಲಿಸಿ ಬಂಗಾಳಕ್ಕೆ ಓಡಿಸಿದನು. ಇದರಿಂದ ಬಂಗಾಳದ ಮೇಲೆ ದಂಡಯಾತ್ರೆಯು ಅನಿವಾರ್ಯವಾಯಿತು. ಆದರೆ ಬಂಗಾಳದ ಸುಲ್ತಾನನು ಸಿಕಂದರ್ ಲೂದಿಯೊಂದಿಗೆ ಯುದ್ಧಕ್ಕೆ ಅವಕಾಶಕೊಡದೆ ಶಾಂತಿ ಸಂಧಾನದ ಮಾತುಕತೆಗಳನ್ನಾರಂಭಿಸಿ ಎರಡು ರಾಜ್ಯಗಳ ಗಡಿಗಳನ್ನು ಗೌರವಿಸುವುದಾಗಿಯೂ ಮತ್ತು ದೆಹಲಿಯ ಶತ್ರುಗಳಿಗೆ ಆಶ್ರಯ ಕೊಡುವುದಿಲ್ಲವಾಗಿಯೂ ಒಪ್ಪಿಕೊಂಡನು. ಇಬ್ರಾಹಿಂ ಲೂದಿಯು ತಿರುಹತ್ ಮತ್ತು ಚಾಂದೇರಿಯ ಮುಖಂಡರನ್ನು ಅಂಕೆಗೊಳಪಡಿಸಿ ಅವರು ಪೊಗದಿಕೊಡುವಂತೆ ಮಾಡಿದನು.

ದೆಹಲಿಯ ಸುಲ್ತಾನರ ಅಧಿಕಾರವನ್ನು ಸುಭದ್ರಗೊಳಿಸಲು ಸಿಕಂದರ್

ಲೂದಿಯು ಇನ್ನೂ ಅನೇಕ ದಂಡಯಾತ್ರೆಗಳನ್ನು ಕೈಗೊಳ್ಳಬೇಕಾಗಿತ್ತು. ರಜಪೂತರ ಮುಖಂಡರುಗಳು ಆಗಾಗ್ಗೆ ಗಲಭೆಗಳನ್ನು ಮಾಡುತ್ತಿದ್ದರು. ಬಹಲೂಲ್ ಲೂದಿಯ ಕಾಲದಲ್ಲಿ ದೆಹಲಿಯ ಸಾರ್ವಭೌಮತ್ವವನ್ನು ಒಪ್ಪಿಕೊಂಡಿದ್ದ ಗ್ವಾಲಿಯರ್‌ನ ರಾಜನು ಅವಿಧೇಯತೆಯನ್ನು ತೋರಿದನು. 1502ರಲ್ಲಿ ಸಿಕಂದರ್ ಲೂದಿಯು ಅವನ ವಿರುದ್ಧ ದಂಡೆತ್ತಿ ಹೋಗಿ ಅವನನ್ನು ಶರಣಾಗತನನ್ನಾಗಿ ಮಾಡಿಕೊಂಡನು. ದೋಲ್‌ಪುರ ಮತ್ತು ನರ್‌ವಾರಂ ರಾಜ್ಯಗಳ ವಿರುದ್ಧ ದಂಡಯಾತ್ರೆಗಳನ್ನು ನಿಯೋಜಿಸಿ ಕಳುಹಿಸಿ ಆ ರಾಜ್ಯಗಳನ್ನು ದೆಹಲಿಯ ಸಾಮ್ರಾಜ್ಯಕ್ಕೆ ಸೇರಿಸಿಕೊಂಡನು. ರೇವಾ ರಾಜ್ಯದ ರಾಜನ ದಂಗೆಯನ್ನು ದಮನ ಮಾಡಿದನು. ಈ ಎಲ್ಲ ದಂಗೆಗಳು ಸುಲ್ತಾನನು ದೆಹಲಿಗೆ ದಕ್ಷಿಣದಲ್ಲಿ ಒಂದು ಪ್ರಬಲ ಸೈನಿಕ ಠಾಣೆಯನ್ನು ನಿರ್ಮಿಸುವುದರ ಆವಶ್ಯಕತೆಯ ಅರಿವನ್ನುಂಟುಮಾಡಿದವು. ಹಳೆಯ ದೆಹಲಿಯು ಸಾಮ್ರಾಜ್ಯದ ಆವಶ್ಯಕತೆಗಳನ್ನು ಪೂರೈಸಲು ಅನಾನುಕೂಲ ಪರಿಸ್ಥಿತಿಯಲ್ಲಿತ್ತು. ಆದ್ದರಿಂದ ಸುಲ್ತಾನ ಸಿಕಂದರ್ ಲೂದಿಯು 1504ರಲ್ಲಿ ಆಗ್ರಾಪಟ್ಟಣವನ್ನು ನಿರ್ಮಿಸಿ ಅದನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ಅಲ್ಲಿ ಒಂದು ಪ್ರಬಲ ಕೋಟೆಯನ್ನು ನಿರ್ಮಿಸಿದನು. ಇದರಿಂದ ಅವನು ಸಾಮ್ರಾಜ್ಯದ ದಕ್ಷಿಣ ಪ್ರಾಂತ್ಯಗಳ ಮೇಲೆ ತನ್ನ ಹತೋಟಿಯನ್ನಿಟ್ಟುಕೊಳ್ಳುವುದಕ್ಕೂ ಮತ್ತು ದಂಗೆಕೋರರ ಚಲನವಲನಗಳ ಮೇಲೆ ಗಮನವಿಡುವುದಕ್ಕೂ ಅನುಕೂಲವಾಯಿತು.

ಸಿಕಂದರ್ ಲೂದಿಯು ಒಳ್ಳೆಯ ಆಡಳಿತಗಾರನೂ ಆಗಿದ್ದು ಆಡಳಿತದಲ್ಲಿ ಅನೇಕ ಸುಧಾರಣೆಗಳನ್ನು ಜಾರಿಗೆ ತಂದನು. ಆಡಳಿತದ ಕೇಂದ್ರೀಕರಣವು ಅವನ ಆಡಳಿತ ಸುಧಾರಣೆಯ ಮುಖ್ಯ ಲಕ್ಷಣವಾಗಿತ್ತು. ಆಡಳಿತದಲ್ಲಿ ದಕ್ಷತೆಯನ್ನುಂಟುಮಾಡಲು ಗೂಢಚಾರ ಪದ್ಧತಿಯನ್ನು ಜಾರಿಗೆ ತಂದನು. ಅಲ್ಲದೆ ತನ್ನ ರಾಜ್ಯದಲ್ಲಿನ ಆಗುಹೋಗುಗಳ ಬಗ್ಗೆ ಸಪ್ರಮಾಣವಾಗಿ ತಿಳಿದುಕೊಳ್ಳಲು ವೇಷಮರೆಸಿಕೊಂಡು ಸಂಚಾರ ಕೈಗೊಳ್ಳುತ್ತಿದ್ದನು. ನ್ಯಾಯದ ವಿಷಯದಲ್ಲಿ ನಿಷ್ಪಕ್ಷಪಾತಿಯಾಗಿದ್ದು ನ್ಯಾಯಾಡಳಿತದಲ್ಲಿ ಅನೇಕ ಸುಧಾರಣೆಗಳನ್ನು ಜಾರಿಗೆ ತಂದನು. ಸಾಮ್ರಾಜ್ಯದ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಲು ವ್ಯವಸಾಯ ಕೈಗಾರಿಕೆಗಳಿಗೆ ಪ್ರೋತ್ಸಾಹ ನೀಡಿದನು. ಹಿಂದಿನ ಸುಲ್ತಾನರ ಸಂಪ್ರದಾಯವನ್ನೇ ಅನುಸರಿಸಿ ಸೈನ್ಯವನ್ನು ಪುನರ್ ವ್ಯವಸ್ಥೆಗೊಳಿಸಿದನು. ರಾಜ್ಯದ ಹೆದ್ದಾರಿಗಳಲ್ಲಿ ನಡೆಯುತ್ತಿದ್ದ ದರೋಡೆಗಳನ್ನು ನಿಲ್ಲಿಸಿ ಪ್ರಯಾಣಿಕರಿಗೆ ಮತ್ತು ವ್ಯಾಪಾರಿಗಳಿಗೆ ಅನುಕೂಲ ಮಾಡಿಕೊಟ್ಟನು. ಸುಲ್ತಾನನು ದಾನ ಧರ್ಮಗಳನ್ನು ಉದಾರವಾಗಿ ಮಾಡುತ್ತಿದ್ದನು. ಮತ್ತು ಇದರಿಂದ ಅವನು ಪ್ರಜೆಗಳ ಪ್ರೀತಿವಿಶ್ವಾಸಗಳಿಗೆ ಪಾತ್ರನಾಗಿದ್ದನು. ಸುಲ್ತಾನನು ವಿದ್ವಾಂಸನಾಗಿದ್ದು, ಸಾಹಿತ್ಯ, ಕಲೆಗಳಿಗೆ ಪ್ರೋತ್ಸಾಹ ನೀಡಿದ್ದನು. ಕಲಾಕೃತಿಗಳ ಬಗ್ಗೆ ಒಳ್ಳೆಯ ವಿಮರ್ಶಕನು ಆಗಿದ್ದನು. ಅವನು ಕವಿಗಳ ಮತ್ತು ವಿದ್ವಾಂಸರ ಸಹವಾಸವನ್ನು ಇಷ್ಟಪಡುತ್ತಿದ್ದನು. ಅವನ ಇಚ್ಛೆಯ ಮೇರೆಗೆ ಸಂಸ್ಕೃತದಿಂದ ಪರ್ಶಿಯನ್ ಭಾಷೆಗೆ ವೈದ್ಯಕೀಯ ಗ್ರಂಥವೊಂದು ತರ್ಜುಮೆ ಮಾಡಲ್ಪಟ್ಟಿತು. 1504ರಲ್ಲಿ ಆಗ್ರಾ ಪಟ್ಟಣವನ್ನು ನಿರ್ಮಿಸಿದನು. ಈ ಪಟ್ಟಣವು ಮುಂದೆ ಸುಂದರ ನಗರವಾಗಿ ಬೆಳೆದು ಅದು ಅವನ ಅಧಿಕಾರದ ಕೇಂದ್ರವಾಗಿ ಮಾರ್ಪಟ್ಟಿತು.

ಸಿಕಂದರ್ ಲೂದಿಯು ಈ ಎಲ್ಲ ಒಳ್ಳೆಯ ಗುಣಗಳನ್ನು ಹೊಂದಿದ್ದರೂ

ಅವನು ದೋಷರಹಿತ ವ್ಯಕ್ತಿಯಾಗಿರಲಿಲ್ಲ. ಧಾರ್ಮಿಕ ವಿಷಯಗಳಲ್ಲಿ ಅಸಹಿಷ್ಣುವಾಗಿದ್ದು ಹಿಂದುಗಳಿಗೆ ತೊಂದರೆಕೊಟ್ಟನು. ನಗರಕೋಟೆ ಮೊದಲಾದ ಕಡೆಗಳಲ್ಲಿ ಹಿಂದುಗಳ ದೇವಾಲಯಗಳನ್ನು ಕೆಡವಿಸಿ ಅವುಗಳ ಸ್ಥಾನದಲ್ಲಿ ಮಸೀದಿಗಳನ್ನು ನಿರ್ಮಿಸಿದನು. ಇಂತಹ ಕೆಲವು ದೋಷಗಳು ಅವನ ಗುಣದಲ್ಲಿ ಕಂಡುಬಂದರೂ ಅವನು ಲೂದಿ ಸಂತತಿಯ ದೊರೆಗಳಲ್ಲಿ ಒಬ್ಬ ಶ್ರೇಷ್ಠ ದೊರೆಯಾಗಿದ್ದಾನೆ. ಅವನು ತನ್ನ ತಂದೆಯಿಂದ ಪಡೆದುಕೊಂಡಿದ್ದ ರಾಜ್ಯಕ್ಕೆ ಮತ್ತಷ್ಟು ಪ್ರದೇಶಗಳನ್ನು ಸೇರಿಸಿ ಸಾಮ್ರಾಜ್ಯವನ್ನು ವಿಸ್ತರಿಸಿದ್ದಲ್ಲದೆ ಕಳೆದುಹೋಗಿದ್ದ ಸಾಮ್ರಾಜ್ಯದ ಘನತೆ ಗೌರವಗಳನ್ನು ಮತ್ತೊಮ್ಮೆ ಗಳಿಸಿಕೊಟ್ಟು ಲೂದಿ ಸಂತತಿಯ ದೊರೆಗಳಲ್ಲಿ ಒಬ್ಬ ಪ್ರಸಿದ್ಧ ದೊರೆ ಎನಿಸಿಕೊಂಡನು. ಸಿಕಂದರ್ ಲೂದಿಯು ಡಿಸಂಬರ್ 1517ರಲ್ಲಿ ಕಾಲವಾದನು.

### ಇಬ್ರಾಹಿಂ ಲೂದಿ (1517-1526)

ಸಿಕಂದರ್ ಲೂದಿಯು ಕಾಲವಾದ ಮೇಲೆ ಅವನ ಹಿರಿಯ ಮಗನಾದ ಇಬ್ರಾಹಿಂ ಲೂದಿಯು 1517ರಲ್ಲಿ ಯಾವ ವಿರೋಧವು ಇಲ್ಲದೆ ಸಿಂಹಾಸನವನ್ನೇರಿದನು. ಇವನಲ್ಲಿ ಒಳ್ಳೆಯ ಸೈನಿಕ ಪ್ರತಿಭೆಯಿದ್ದಿತು. ಆದರೆ ರಾಜಕೀಯ ವ್ಯವಹಾರಿಕ ಜ್ಞಾನವು ಅಷ್ಟಾಗಿ ಇರಲಿಲ್ಲ. ಲೂದಿಸಂತತಿಯವರಲ್ಲಿ ಕೊನೆಯವನಾದ ಇವನ ಆಳ್ವಿಕೆಯು 1526ರಲ್ಲಿ ಬಾಬರನ ವಿರುದ್ಧ ನಡೆದ ಒಂದನೇ ಪಾಣಿಪಟ್ ಯುದ್ಧದಲ್ಲಿ ಸೋಲು ಮತ್ತು ಸಾವಿನಿಂದ ದುರಂತ ರೀತಿಯಲ್ಲಿ ಕೊನೆಗಂಡಿತು.

ಇಬ್ರಾಹಿಂ ಲೂದಿಯ ಸಿಂಹಾಸನರೋಹಣವು ಶಾಂತ ರೀತಿಯಲ್ಲಿ ಆರಂಭವಾದರೂ ಅವನಿಗೆ ವಿರೋಧಿಗಳಿಲ್ಲದಿರಲಿಲ್ಲ. ಅವನು ಸಾಮ್ರಾಜ್ಯದ ಕೆಲವು ಪ್ರಮುಖ ನೋಬಲ್ಲರ ಬೆಂಬಲ ಪಡೆದಿದ್ದ ತನ್ನ ಸಹೋದರ ಜಲಾಲನಿಂದ ಅನೇಕ ತೊಂದರೆಗಳನ್ನು ಎದುರಿಸಬೇಕಾಯಿತು. ಅಧಿಕಾರವೆಲ್ಲವೂ ಒಬ್ಬನ ಕೈಯಲ್ಲೇ ಕೇಂದ್ರೀಕೃತವಾಗಿರುವುದನ್ನು ಇಚ್ಛಿಸದ ಕೆಲವು ನೋಬಲ್ಲರು ಸಾಮ್ರಾಜ್ಯವನ್ನು ಇಬ್ಬರೂ ಸೋದರರು ಹಂಚಿ ಕೊಳ್ಳುವಂತೆ ಇಬ್ರಾಹಿಂ ಲೂದಿಯನ್ನು ಒಪ್ಪಿಸಿದರು. ಇಬ್ರಾಹಿಂ ಲೂದಿಯು ಇದಕ್ಕೊಪ್ಪಿ ಜಲಾಲನನ್ನು ಜಾನ್ಪುರಕ್ಕೆ ದೊರೆಯನ್ನಾಗಿ ಮಾಡಿದನು. ಆದರೆ ಸ್ವಲ್ಪ ದಿವಸಗಳಲ್ಲಿಯೆ ಇಬ್ರಾಹಿಂ ಲೂದಿಗೆ ತನ್ನ ತಪ್ಪಿನ ಅರಿವಾಗಿ ಜಲಾಲನಿಗೆ ಆಸ್ಥಾನಕ್ಕೆ ಬರುವಂತೆ ಹೇಳಿಕಳುಹಿಸಿದನು. ಇಬ್ರಾಹಿಂ ಲೂದಿಯ ಉದ್ದೇಶಗಳ ಬಗ್ಗೆ ಸಂಶಯಗೊಂಡ ಜಲಾಲನು ಕಲ್ಪಿಯಲ್ಲಿ ಸೈನ್ಯವನ್ನು ಸಜ್ಜುಗೊಳಿಸಿಕೊಂಡು ಅವನ ವಿರುದ್ಧ ಯುದ್ಧಕ್ಕೆ ಸಿದ್ಧನಾದನು. ಇದನ್ನು ತಿಳಿದ ಇಬ್ರಾಹಿಂ ಲೂದಿಯು ಅವನ ವಿರುದ್ಧ ದಂಡೆತ್ತಿಹೋಗಿ ಕಲ್ಪಿಯನ್ನು ಮುತ್ತಿ ಅದನ್ನು ನಾಶಮಾಡಿದನು. ಜಲಾಲನು ಹೆದರಿ ರಜಪೂತರ ರಾಜ್ಯವಾದ ಗ್ವಾಲಿಯರ್‌ಗೆ ತಪ್ಪಿಸಿಕೊಂಡುಹೋದನು. ಸುಲ್ತಾನನು ಗ್ವಾಲಿಯರ್ ಮೇಲೆ ಸೈನ್ಯವನ್ನು ಕಳುಹಿಸಿದನು. ಜಲಾಲನು ಅಲ್ಲಿಂದ ತಪ್ಪಿಸಿಕೊಂಡು ಮಾಳವಕ್ಕೂ ಅನಂತರ ಅಲ್ಲಿಂದ ಕಾರಾಕಟಾಂಗಕ್ಕೂ ಓಡಿಹೋದನು. ಆದರೆ ಅವನು ಹೀಗೆ ಓಡಿಹೋಗುತ್ತಿರುವಾಗ ಅಲ್ಲಿನ ಜನರು ಅವನನ್ನು ಹಿಡಿದು ಸುಲ್ತಾನನ ಬಳಿಗೆ ಕಳುಹಿಸಿದರು. ಸುಲ್ತಾನನು ಅವನನ್ನು ಸೆರೆಮನೆಗೆ ತಳ್ಳಿಸಿ ಅನಂತರ ಕೊಲ್ಲಿಸಿದನು.

ಜಲಾಲನ ದಂಗೆಗೆ ನೋಬಲ್ಲರ ಕುತಂತ್ರಗಳೇ ಕಾರಣವೆಂದು ಮನಗಂಡ ಸುಲ್ತಾನನು ನೋಬಲ್ಲರ ಪ್ರಭಾವವನ್ನು ಹತ್ತಿಕ್ಕಲು ನಿರ್ಧರಿಸಿ ಅನೇಕ ಕ್ರಮಗಳನ್ನು ಕೈಗೊಂಡನು. ಆಫ್ಘನ್ನರ ಬುಡಕಟ್ಟಿನ ಸಂಪ್ರದಾಯದ ಪ್ರಕಾರ ತಮಗೂ ಮತ್ತು ಸುಲ್ತಾನನಿಗೂ ಸ್ಥಾನಮಾನಗಳಲ್ಲಿ ಯಾವ ಭೇದವೂ ಇಲ್ಲವೆಂದು ಆಫ್ಘನ್ ನೋಬಲ್ಲರು ವಿಶೇಷ ಹಕ್ಕುಬಾಧ್ಯತೆಗಳನ್ನು ಕೇಳುತ್ತಿದ್ದರು. ಮೊದಲಿಗೆ ಲೂದಿ ಸುಲ್ತಾನರುಗಳು ತಮ್ಮ ಅಧಿಕಾರವನ್ನು ಸಮರ್ಥಿಸಿಕೊಳ್ಳುವುದರ ಜೊತೆಗೆ ಅವರನ್ನೂ ವಿಶ್ವಾಸದಿಂದ ನೋಡಿಕೊಂಡಿದ್ದರು. ಆದರೆ ಇಬ್ರಾಹಿಂ ಲೂದಿಯು ಅವರ ಬಗ್ಗೆ ಗರ್ವದಿಂದ ನಡಕೊಂಡಿದ್ದಲ್ಲದೆ ಅವರಿಗೆ ಆಸ್ಥಾನದ ನಿಯಮಗಳಿಗನುಗುಣವಾಗಿ ನಡೆದುಕೊಳ್ಳಬೇಕೆಂದು ತಿಳಿಸಿದನು. ಇದನ್ನು ವಿರೋಧಿಸಿದ ಕೆಲವು ನೋಬಲ್ಲರನ್ನು ಸೆರೆಮನೆಗೆ ತಳ್ಳಿಸಿದನು. ಸುಲ್ತಾನನ ಈ ಕ್ರಮಕ್ಕೆ ಪ್ರತೀಕಾರವಾಗಿ ತಮ್ಮ ಬೆಂಬಲಿಗರನ್ನೆಲ್ಲಾ ಸೇರಿಸಿ ದಂಗೆಯೆದ್ದರು. ಸುಲ್ತಾನನು ದಂಗೆಕೋರರನ್ನು ನಿರ್ದಯವಾಗಿ ಅಡಗಿಸಿದನು. ಇದಾದ ನಂತರ ಅವನು ಆಫ್ಘನ್ ಪ್ರಮುಖರ ವಿರುದ್ಧ ಇನ್ನೂ ಶಿಸ್ತಿನ ಕ್ರಮಗಳನ್ನು ಕೈಗೊಂಡನು. ಸುಲ್ತಾನನ ಇಂತಹ ಕ್ರಮಗಳಿಂದ ಇನ್ನೂ ಹೆಚ್ಚಿಗೆ ಕೆರಳಿದ ನೋಬಲ್ಲರು ಸುಲ್ತಾನನಿಗೆ ತೋರಿಸುತ್ತಿದ್ದ ಅಲ್ಪಸ್ವಲ್ಪ ನಿಷ್ಠೆಯನ್ನೂ ಹಿಂದೆಗೆದುಕೊಂಡು ಸಾಮ್ರಾಜ್ಯದ ವಿವಿಧ ಭಾಗಗಳಲ್ಲಿ ಇನ್ನೂ ಹೆಚ್ಚಿನ ಗಲಭೆ ಮತ್ತು ದೊಂಬಿಗಳನ್ನು ಮಾಡತೊಡಗಿದರು. ಅವರಲ್ಲಿ ಒಬ್ಬನಾದ ಮಹಮದ್ ಎಂಬವನು ಬಿಹಾರದಲ್ಲಿ ತನ್ನ ಸ್ವಾತಂತ್ರ್ಯವನ್ನು ಘೋಷಿಸಿಕೊಂಡನು.

ಇಬ್ರಾಹಿಂ ಲೂದಿಯು ಎಲ್ಲ ಕಡೆಗಳಿಂದಲೂ ದಂಗೆಗಳಿಂದ ಸುತ್ತುವರಿಯಲ್ಪಟ್ಟಿದ್ದನು. ಅವನು ಬಿಹಾರ್ ಮತ್ತಿತರ ಕಡೆಗಳಲ್ಲಿ ದಂಗೆಗಳನ್ನು ಅಡಗಿಸಲು ತನ್ನ ಸೈನ್ಯವನ್ನು ಕಳುಹಿಸಿದ್ದ ಸಮಯದಲ್ಲಿಯೆ ಸುಲ್ತಾನನ ಬಗ್ಗೆ ಅಸಮಾಧಾನಗೊಂಡಿದ್ದ ಪಂಜಾಬಿನ ಗವರ್ನರ್ ಆಗಿದ್ದ ದೌಲತ್‌ಖಾನ್ ಲೂದಿಯು ಕಾಬೂಲಿನ ದೊರೆಯಾಗಿದ್ದ ಮೊಗಲರ ದೊರೆ ಬಾಬರನಿಗೆ ಸಹಾಯಮಾಡಬೇಕೆಂದು ಕೇಳಲು ತನ್ನ ಮಗನನ್ನು ಕಾಬೂಲಿಗೆ ಕಳುಹಿಸಿದನು. ಇಬ್ರಾಹಿಂ ಲೂದಿಯ ಚಿಕ್ಕಪ್ಪನಾದ ಆಲಂಖಾನನೂ ಮತ್ತು ರಜಪೂತರ ನಾಯಕನಾದ ರಾಣಾಸಂಗ್ರಾಮಸಿಂಹನೂ ಬಾಬರನಿಗೆ ಆಮಂತ್ರಣ ನೀಡಿದರು. ಬಾಬರನು ಇವರೆಲ್ಲರ ಅಪೇಕ್ಷೆಮೇರೆಗೆ ಕಾಬೂಲಿನಿಂದ ದಂಡೆತ್ತಿ ಬಂದು ಲೂದಿಯ ಸೈನ್ಯವನ್ನು ಸೋಲಿಸಿ ಲಾಹೋರನ್ನು ವಶಪಡಿಸಿಕೊಂಡನು. ಆದರೆ ಲಾಹೋರನ್ನು ವಶಪಡಿಸಿಕೊಳ್ಳಬೇಕೆಂದಿದ್ದ ದೌಲತ್‌ಖಾನ್ ಲೂದಿಗೆ ಇದರಿಂದ ನಿರಾಶೆಯಾಯಿತು. ಅವನು ಅನಂತರ ಆಲಂಖಾನನ ಜೊತೆ ಸೇರಿ 1525ರಲ್ಲಿ ದೆಹಲಿಯ ಮೇಲೆ ಆಕ್ರಮಣ ಮಾಡಿದನು. ಆದರೆ ಸೋತನು 1526ರಲ್ಲಿ ಒಂದನೇ ಪಾಣಿಪಟ್ ಕದನದಲ್ಲಿ ಬಾಬರನು ಇಬ್ರಾಹಿಂ ಲೂದಿಯನ್ನು ಸೋಲಿಸಿಕೊಂದನು. ಬಾಬರನ ವಿಜಯದೊಂದಿಗೆ ಲೂದಿಗಳ ಆಳ್ವಿಕೆಯು ಕೊನೆಗಂಡು ಭಾರತದಲ್ಲಿ ಮೊಗಲರ ಆಳ್ವಿಕೆಯು ಆರಂಭವಾಗಿ ಭಾರತದ ಇತಿಹಾಸದಲ್ಲಿ ಮತ್ತೊಂದು ನೂತನ ಅಧ್ಯಾಯವು ಆರಂಭವಾಯಿತು.

ದೆಹಲಿ ಸುಲ್ತಾನರ ರಾಜ್ಯದ ಕೊನೆಯ ಸುಲ್ತಾನರುಗಳಲ್ಲಿ ಲೂದಿಗಳು ಹೆಚ್ಚು ಪ್ರಬಲರೂ ಮತ್ತು ಪ್ರಸಿದ್ಧರೂ ಆದವರಾಗಿದ್ದಾರೆ. ಸೈಯದ್ ಸಂತತಿಯವರಿಂದ ದೆಹಲಿ ಮತ್ತು ಅದರ ಅಕ್ಕಪಕ್ಕದ ಭಾಗಗಳಿಗೆ ಸೀಮಿತವಾಗಿದ್ದ ಸಣ್ಣ ರಾಜ್ಯಕ್ಕೆ

ಒಡೆಯರಾದ ಲೂದಿಗಳು ಅದು ಕಳೆದುಕೊಂಡಿದ್ದ ಪ್ರದೇಶಗಳೆಲ್ಲವನ್ನೂ ಪುನಃ ಪಡೆದುಕೊಂಡು ಸಾಮ್ರಾಜ್ಯಕ್ಕೆ ಸೇರಿಸಲು ಅವರಿಂದ ಸಾಧ್ಯವಾಗದಿದ್ದರೂ ಅವರು ಸಾಮ್ರಾಜ್ಯವನ್ನು ಅಲ್ಪಸ್ವಲ್ಪ ವಿಸ್ತರಿಸಿ ಅದಕ್ಕೆ ಪುನಃ ಜೀವಕಳೆಯನ್ನು ತಂದುಕೊಟ್ಟರು. ತೈಮೂರನ ಧಾಳಿಯಿಂದ ಅಸ್ತವ್ಯಸ್ತಗೊಂಡ ರಾಜಧಾನಿ ದೆಹಲಿಯು ಲೂದಿಗಳಕಾಲದಲ್ಲಿ ಮತ್ತೊಮ್ಮೆ ಚೇತರಿಸಿಕೊಂಡಿತು. ಅಲ್ಲದೆ ಹೊಸದಾಗಿ ಸಿಕಂದರ್ ಲೂದಿಯಿಂದ ಸ್ಥಾಪಿಸಲ್ಪಟ್ಟ ಆಗ್ರಾ ಪಟ್ಟಣವು ದೆಹಲಿಗೆ ಸರಿಸಮನಾದ ಸ್ಥಾನವನ್ನು ಪಡೆದುಕೊಳ್ಳತೊಡಗಿತು. ಲೂದಿಗಳು ನೋಬಲ್ಲರ ಚಟುವಟಿಕೆಗಳನ್ನು ಹತ್ತಿಕ್ಕಿ ದೆಹಲಿಯ ಸುಲ್ತಾನರ ರಾಜ್ಯವು ಛಿದ್ರವಾಗುವುದನ್ನು ತಪ್ಪಿಸಿದರು. ಲೂದಿಗಳು ಸಾಹಿತ್ಯ ಮತ್ತು ಕಲೆಗೂ ಪ್ರೋತ್ಸಾಹ ನೀಡಿದ್ದರು.

ಲೂದಿಗಳು ಸೈಯದರಿಂದ ಅಲಕ್ಷಿಸಲ್ಪಟ್ಟಿದ್ದು ಹದಗೆಟ್ಟಿದ್ದ ಆಡಳಿತವನ್ನು ವ್ಯವಸ್ಥೆಗೊಳಿಸಲು ಪ್ರಯತ್ನಿಸಿ ಸಫಲರಾದರು. ದೇಶದಲ್ಲಿ ಶಾಂತಿ ವ್ಯವಸ್ಥೆಗಳನ್ನೇರ್ಪಡಿಸಿ ಸುಭಿಕ್ಷೆಯನ್ನು ನೆಲೆಗೊಳಿಸಿದರು. ಸಿಕಂದರ್ ಲೂದಿಯು ಭೂಕಂದಾಯ ವಸೂಲಿಯಲ್ಲಿ ನೂತನ ವ್ಯವಸ್ಥೆಯನ್ನು ಜಾರಿಗೆ ತಂದನು. ಅವನು ಕಂದಾಯವನ್ನು ಕಟ್ಟುನಿಟ್ಟಾಗಿ ವಸೂಲಿಮಾಡಲು ಕಂದಾಯ ಪಟ್ಟಿಯನ್ನು ಸಿದ್ಧಗೊಳಿಸಿ ಮುಂದಿನ ದೊರೆಗಳಿಗೆ ಮಾರ್ಗದರ್ಶನ ಮಾಡಿದನು. ಬಾಬರನ ಕಾಲದಲ್ಲಿ ಕಂದಾಯ ವಸೂಲಿಯ ಅಂಕಿಸಂಖ್ಯೆಗಳು ಸಿಕಂದರ್ ಲೂದಿಯ ರೆವಿನ್ಯೂ ಪದ್ಧತಿಯನ್ನು ಅನುಸರಿಸಿದ್ದವೆಂದು ಎಡ್ವರ್ಡ್ ಥಾಮಸ್ ಅಭಿಪ್ರಾಯಪಟ್ಟಿದ್ದಾನೆ. ಸಿಕಂದರ್ ಲೂದಿಯು ಮುಸ್ಲಿಮರ ವಿದ್ಯಾಭ್ಯಾಸ ಕ್ರಮದಲ್ಲೂ ಸುಧಾರಣೆಗಳನ್ನು ಮಾಡಲು ಪ್ರಯತ್ನಿಸಿದ್ದನು.

ಒಂದನೆ ಪಾಣಿಪಟ್ ಕದನದ ಪರಿಣಾಮವಾಗಿ ಲೂದಿಗಳು ರಾಜಕೀಯದಿಂದ ನಿರ್ಗಮಿಸಿದುದಲ್ಲದೆ ಅವರ ನಿರ್ಗಮನದೊಂದಿಗೆ ದೆಹಲಿಯ ಸುಲ್ತಾನರ ಅಧಿಕಾರವೂ ಕೊನೆಗಂಡಿತು. ದೆಹಲಿಯ ಸುಲ್ತಾನರ ಆಳ್ವಿಕೆಯ ಅವನತಿಗೆ ಲೂದಿಗಳ ಧಾರ್ಮಿಕ ಅಸಹಿಷ್ಣುತಾನೀತಿಯೂ, ನೋಬಲ್ಲರ ವಿರುದ್ಧ ಕೈಗೊಂಡ ಕ್ರಮಗಳು ಮತ್ತು ಅವರ ಸೈನಿಕ ಅಸಮರ್ಥತೆಯು ಕಾರಣಗಳಾಗಿದ್ದು ವೆಂಬುದನ್ನು ಯಾರೂ ವಿರೋಧಿಸುವಂತಿಲ್ಲ. ಆದರೆ ದೆಹಲಿಯ ಸುಲ್ತಾನರ ಆಳ್ವಿಕೆಯ ಅವನತಿಗೆ ಲೂದಿಗಳೇ ಪೂರ್ಣ ಕಾರಣರೆಂದು ಹೇಳುವುದು ಸಮಂಜಸವಲ್ಲ. ದೆಹಲಿಯು ಸುಲ್ತಾನರ ಆಳ್ವಿಕೆಯ ಅವನತಿಯು ತುಘಲಕರ ಕಾಲದಿಂದಲೇ ಆರಂಭವಾಗಿದ್ದಿತು. ಮಹಮದ್-ಬಿನ್-ತುಘಲಕನ ಧಾರ್ಮಿಕ ನೀತಿ ಮತ್ತು ಸೈನಿಕ ಸುಧಾರಣೆಯೂ ಹಾಗೂ ಸೈಯದ್ ಸಂತತಿಯ ದೊರೆಗಳ ಅಸಮರ್ಥತೆ ಮೊದಲಾದವುಗಳು ದೆಹಲಿಯ ಸುಲ್ತಾನರ ಅವನತಿಗೆ ಕಾರಣಗಳಾಗಿದ್ದುವು.

## ಅಧ್ಯಾಯ-22

# ಪ್ರಾಂತೀಯ ರಾಜ್ಯಗಳ ಏಳಿಗೆ

ಕ್ರಿ.ಶ. 14ನೆ ಶತಮಾನದಲ್ಲಿ ದೆಹಲಿಯ ಸುಲ್ತಾನರ ಅಧಿಕಾರವು ಅವನತಿ ಹೊಂದಲು, ಉತ್ತರ ಮತ್ತು ದಕ್ಷಿಣ ಭಾರತದಲ್ಲಿ ಹಲವಾರು ಹಿಂದು ಮತ್ತು ಮುಸ್ಲಿಂ ರಾಜ್ಯಗಳು ಸ್ಥಾಪಿಸಲ್ಪಟ್ಟವು. ಅವುಗಳಲ್ಲಿ ಉತ್ತರ ಭಾರತದಲ್ಲಿ ಮಾಳವ, ಗುಜರಾತು, ಜಾನ್ಪುರ, ಖಾನ್ದೇಶ ಮತ್ತು ಬಂಗಾಳವೂ, ದಕ್ಷಿಣದಲ್ಲಿ ಬಹಮನಿ ಮತ್ತು ವಿಜಯನಗರ ರಾಜ್ಯಗಳು ಬಹು ಮುಖ್ಯವಾದವುಗಳು. ಕ್ರಿ.ಶ. 16 ಮತ್ತು 17ನೆ ಶತಮಾನಗಳಲ್ಲಿ ವಿಜಯನಗರವನ್ನುಳಿದು ಉಳಿದೆಲ್ಲ ರಾಜ್ಯಗಳನ್ನು ಮೊಗಲ್ ಚಕ್ರವರ್ತಿಗಳು ಗೆದ್ದು ತಮ್ಮ ಸಾಮ್ರಾಜ್ಯಕ್ಕೆ ಸೇರಿಸಿ ದೇಶದಲ್ಲಿ ಮತ್ತೊಮ್ಮೆ ರಾಜಕೀಯ ಏಕತೆಯನ್ನೇರ್ಪಡಿಸಿದರು.

### ಮಾಳವ

ಕ್ರಿ.ಶ. ಹತ್ತನೆ ಶತಮಾನದಲ್ಲಿ ಮಾಳವದಲ್ಲಿ ರಜಪೂತ ಪಾರಮಾರರು ತಮ್ಮ ಆಳ್ವಿಕೆಯನ್ನು ಆರಂಭಿಸಿದ್ದರು. ಪಾರಮಾರರ ಪ್ರಸಿದ್ಧ ದೊರೆಯಾದ ಭೋಜರಾಜನ ಆಳ್ವಿಕೆಯಲ್ಲಿ ಧಾರ್ ನಗರವು ಮಾಳವದ ರಾಜಧಾನಿಯಾಗಿತ್ತು. ಕ್ರಿ.ಶ. 1235ರಲ್ಲಿ ಇಲ್ತಮಷ್‌ನು ಉಜ್ಜೈನಿಯ ಮೇಲೆ ಧಾಳಿಮಾಡಿ ಅಲ್ಲಿದ್ದ ಪ್ರಸಿದ್ಧ ಮಹಾಕಾಳಿ ದೇವಾಲಯವನ್ನು ನೆಲಸಮ ಮಾಡಿದನು. ಅನಂತರ 1310ರಲ್ಲಿ ಅಲ್ಲಾವುದ್ದೀನ್ ಖಿಲ್ಜಿಯು ಮಾಳವವನ್ನು ಗೆದ್ದು ವಶಪಡಿಸಿಕೊಂಡನು. ಅಲ್ಲಿಂದ ಮುಂದೆ ಅದು ದೆಹಲಿಯ ಸಾಮ್ರಾಜ್ಯವು ಒಡೆದುಹೋಗುವವರೆಗೂ ಮುಸ್ಲಿಂ ಗೌವರ್ನರುಗಳಿಂದ ಆಳಲ್ಪಡುತ್ತಿತ್ತು. ಭಾರತದ ಮೇಲೆ ತೈಮೂರನು ಮಾಡಿದ ಧಾಳಿಯ ಪರಿಣಾಮವಾಗಿ ಉಂಟಾದ ಅವ್ಯವಸ್ಥೆಯ ಸಮಯದಲ್ಲಿ ಫಿರೋಜ್ ತೊಘಲಕನ ಜಹಗೀರುದಾರನಾಗಿದ್ದ ದಿಲಾವರ್‌ಖಾನ್ ಎಂಬುವನು ಕ್ರಿ.ಶ. 1401ರಲ್ಲಿ ಮಾಳವದಲ್ಲಿ ತನ್ನ ಸ್ವಾತಂತ್ರ್ಯವನ್ನು ಘೋಷಿಸಿಕೊಂಡನು. ಅವನ ತರುವಾಯ ಅವನ ಮಗನಾದ ಅಲಫ್‌ಖಾನ್ (ಕ್ರಿ.ಶ. 1405-1434) ಎಂಬುವನು ಹುಷಾಂಗ್‌ಷಹ ಎಂಬ ಬಿರುದಿನಿಂದ ಸಿಂಹಾಸನಕ್ಕೆ ಬಂದನು. ಇವನು ರಾಜಧಾನಿಯನ್ನು ಧಾರ್‌ನಿಂದ ಮಂಡುವಿಗೆ ವರ್ಗಾಯಿಸಿ, ಅಲ್ಲಿ ಸುಂದರವಾದ ಕಟ್ಟಡಗಳನ್ನು ಕಟ್ಟಿಸಿ ಅದನ್ನು ಸುಂದರ ನಗರವನ್ನಾಗಿ ಮಾಡಿದನು. ಮಾಳವ ರಾಜ್ಯದ ಐಶ್ವರ್ಯವು ಅದರ ನೆರೆಯ ರಾಜ್ಯವಾದ ಗುಜರಾತನ್ನು ಯುದ್ಧದಲ್ಲಿ ತೊಡಗುವಂತೆ ಮಾಡಿತು. ಹುಷಾಂಗ್‌ಷಹನು ಗುಜರಾತಿನ ವಿರುದ್ಧ ಮಾಡಿದ ಯುದ್ಧದಲ್ಲಿ ಸೋತು

ಸೆರೆಹಿಡಿಯಲ್ಪಟ್ಟನು. ಆದರೆ ಅವನು ಕೆಲವು ದಿವಸಗಳಲ್ಲಿಯೆ ಬಿಡುಗಡೆ ಹೊಂದಿ ಪುನಃ ಕೆಲವು ದಿವಸಗಳು ರಾಜ್ಯವಾಳಿದನು. ಹುಷಾಂಗ್‌ಷಹನ ತರುವಾಯ ಅವನ ಮಗನಾದ ಘಸ್ನಿಖಾನ್ ಎಂಬುವನು ಅಧಿಕಾರಾರೂಢನಾದನು. ಆದರೆ ಅವನೊಬ್ಬ ಅಸಮರ್ಥ ದೊರೆಯಾಗಿದ್ದು ಅವನನ್ನು ಅವನ ಸಚಿವನಾಗಿದ್ದ ಮಹಮದ್‌ಖಿಲ್ಜಿಯು ಕೊಂದು ತಾನು ರಾಜನಾದನು.

ಮಹಮದ್‌ಖಿಲ್ಜಿಯ ಆಳ್ವಿಕೆಯಲ್ಲಿ (1436-1469) ಮಾಳವ ರಾಜ್ಯವು ಒಂದು ಪ್ರಬಲ ರಾಜ್ಯವಾಗಿ ಮಾರ್ಪಟ್ಟಿತು. ಮಹಮದ್‌ಖಿಲ್ಜಿಯು ಶ್ರೇಷ್ಠ ಯೋಧನೂ, ಒಳ್ಳೆಯ ಆಡಳಿತಗಾರನೂ, ನ್ಯಾಯಾಭಿಲಾಷಿಯೂ ಮತ್ತು ಉದಾರಿಯೂ ಆದ ರಾಜನಾಗಿದ್ದನು. ಅವನು ರಜಪುಟಾಣ, ಗುಜರಾತು ದೆಹಲಿ ಹಾಗೂ ಬಹಮನಿ ಸುಲ್ತಾನರ ವಿರುದ್ಧ ಯುದ್ಧ ಮಾಡಿ ತನ್ನ ರಾಜ್ಯವನ್ನು ಸಾಕಷ್ಟು ವಿಸ್ತರಿಸಿದನು. ಮಾಳವ ರಾಜ್ಯವು ದಕ್ಷಿಣದಲ್ಲಿ ಸಾತ್ಪುರ ಬೆಟ್ಟಗಳಿಂದ ಹಿಡಿದು ಉತ್ತರದಲ್ಲಿ ಮೇವಾರದವರೆಗೂ ಪಶ್ಚಿಮದಲ್ಲಿ ಗುಜರಾತಿನ ಗಡಿಯಿಂದ ಪೂರ್ವದಲ್ಲಿ ಬಂದೇಲ್‌ಖಂಡದವರೆಗೂ ವಿಸ್ತರಿಸಿದ್ದಿತು. ಮಹಮದ್‌ಖಿಲ್ಜಿಯು 1440ರಲ್ಲಿ ದೆಹಲಿಯ ವಿರುದ್ಧ ದಂಡೆತ್ತಿಹೋದನು. ಆದರೆ ಅವನನ್ನು ಬಹಲೂಲ್‌ಲೂದಿಯು ಹಿಮ್ಮೆಟ್ಟಿಸಿದನು. ಇದೇ ಕಾಲದಲ್ಲಿ ಅವನು ಚಿತ್ತೂರಿನ ರಾಣಾಕಂಭನೊಡನೆ ಮಾಡುತ್ತಿದ್ದ ಯುದ್ಧವು ನಿರ್ಣಾಯಕ ಘಟ್ಟವನ್ನು ಮುಟ್ಟಲಿಲ್ಲ. ಎರಡು ಕಡೆಯವರೂ ಜಯವು ತಮ್ಮದೆಂದು ಹೇಳಿಕೊಳ್ಳುತ್ತಿದ್ದರು. ಚಿತ್ತೂರಿನ ರಾಣನು ವಿಜಯವು ತನ್ನದೆಂದು ಹೇಳಿಕೊಂಡು ಅದರ ನೆನಪಿಗಾಗಿ ಚಿತ್ತೂರಿನಲ್ಲಿ ವಿಜಯಸ್ತಂಭವೊಂದನ್ನು ನಿರ್ಮಿಸಿದನು. ಅಂತೆಯೆ ಮಹಮದ್‌ಖಿಲ್ಜಿಯೂ ತನ್ನ ವಿಜಯದ ನೆನಪಿಗಾಗಿ ಮಂಡುವಿನಲ್ಲಿ ಏಳು ಅಂತಸ್ತಿನ ಗೋಪುರವೊಂದನ್ನು ನಿರ್ಮಿಸಿದನು. ಮಹಮದ್‌ಖಿಲ್ಜಿಯು 1469ರಲ್ಲಿ ಕಾಲವಾದನು. ಅವನ ತರುವಾಯ ಅವನ ಮಗನಾದ ಘಿಯಾಸುದ್ದೀನ್ ಎಂಬುವನು ಅಧಿಕಾರಕ್ಕೆ ಬಂದನು. ಆದರೆ ಅವನ ಮಗನಾದ ನಾಸಿರುದ್ದೀನನು (1500-1511) ಅವನಿಗೆ ವಿಷ ಹಾಕಿ ಕೊಂದು ತಾನು ಸಿಂಹಾಸನವನ್ನೇರಿದನು.

ನಾಸಿರುದ್ದೀನನು ಕ್ರೂರಿಯೂ ಪಾನಾಸಕ್ತನೂ ಮತ್ತು ವ್ಯಭಿಚಾರಿಯೂ ಆದ ದೊರೆಯಾಗಿದ್ದನು. ಅವನು ಕುಡಿತದ ಅಮಲಿನಲ್ಲಿ ಈಜುಕೊಳಕ್ಕೆ ಬಿದ್ದು ಅಲ್ಲಿಯೆ ಸತ್ತನು. ಅವನ ತರುವಾಯ ಎರಡನೆ ಮಹಮದ್‌ಷಹ ಎಂಬವನು ಅಧಿಕಾರಕ್ಕೆ ಬಂದನು. ಇವನನ್ನು ಗುಜರಾತಿನ ಬಹದ್ದೂರ್‌ಷಹನು ಸೋಲಿಸಿ ಮಾಳವ ರಾಜ್ಯವನ್ನು ತನ್ನ ರಾಜ್ಯಕ್ಕೆ ಸೇರಿಸಿಕೊಂಡನು.

ಮಾಳವ ರಾಜ್ಯವನ್ನು ಮೊಗಲ್ ಚಕ್ರವರ್ತಿ ಹುಮಾಯೂನನು ಗೆಲ್ಲುವ ತನಕವೂ ಅದು ಗುಜರಾತಿನ ಒಂದು ಭಾಗವಾಗಿಯೆ ಉಳಿದಿದ್ದಿತು. ಹುಮಾಯೂನನು 1535ರಲ್ಲಿ ಬಹದ್ದೂರ್‌ಷಹನನ್ನು ಮಂಡಸಾರ್ ಮತ್ತು ಮಂಡುಗಳಲ್ಲಿ ಸೋಲಿಸಿ ಮಾಳವದಿಂದ ಓಡಿಸಿದನು. ದೆಹಲಿಯಲ್ಲಿ ಷೇರ್‌ಷಹನು ಅಧಿಕಾರರೂಢನಾದಾಗ ಅವನು ಮಾಳವದ ಮೇಲ್ವಿಚಾರಣೆಯನ್ನು ತನ್ನ ಕಡೆಯ ಷುಜತ್‌ಖಾನ್ ಎಂಬವನಿಗೆ ವಹಿಸಿಕೊಟ್ಟನು. ಷುಜತ್‌ಖಾನನು ಕಾಲವಾದ ಮೇಲೆ ಅವನ ಮಗನಾದ ಮಲ್ಲಿಕ್

ಬಯಾಜಿದ್ ಎಂಬುವನು ಅಧಿಕಾರಕ್ಕೆ ಬಂದನು. ಇವನಿಗೆ ಬಾಜ್‌ಬಹದ್ದೂರ್ ಎಂಬ ಹೆಸರೂ ಇದ್ದಿತು. ಆವನು ಸಾರಂಗಪುರದ ಸುರಸುಂದರಿ ರೂಪಮತಿ ಎಂಬ ರಾಜಕುಮಾರಿಯಲ್ಲಿ ಪ್ರೇಮಾಸಕ್ತನಾಗಿದ್ದುದರಿಂದ ಜನಪದ ಕಥೆಗಳಲ್ಲಿ ಹೆಸರುವಾಸಿಯಾಗಿದ್ದನು. ಕ್ರಿ.ಶ. 1562ರಲ್ಲಿ ಅಕ್ಬರನ ಸೇನಾನಿಗಳಾದ ಆದಮ್‌ಖಾನ್ ಮತ್ತು ಪೀರ್ ಮಹಮದರು ಮಾಳವವನ್ನು ಗೆದ್ದು ಮೊಗಲ್ ಸಾಮ್ರಾಜ್ಯಕ್ಕೆ ಸೇರಿಸಿದರು. ಬಾಜ್‌ಬಹದ್ದೂರನು ಅಕ್ಬರನನ್ನು ತನ್ನ ಚಕ್ರವರ್ತಿ ಎಂದು ಒಪ್ಪಿಕೊಂಡನು. ಅಕ್ಬರನು ಅವನನ್ನು 3000 ಅಶ್ವಗಳ ಪಡೆಯ ನೇತಾರನನ್ನಾಗಿ ನೇಮಿಸಿದನು. ಮಾಳವ ರಾಜ್ಯದ ದೊರೆಗಳು ಸಂಗೀತ ಮತ್ತು ವಾಸ್ತುಶಿಲ್ಪಕಲೆಗೆ ಹೆಚ್ಚಿನ ಪ್ರೋತ್ಸಾಹ ಕೊಟ್ಟಿದ್ದರು. ಧಾರ್ ಮತ್ತು ಮಂಡುವಿನಲ್ಲಿ ಸುಂದರವಾದ ಅನೇಕ ಕಟ್ಟಡಗಳು ಈ ಕಾಲದಲ್ಲಿ ನಿರ್ಮಿತವಾಗಿದ್ದವು.

**ಗುಜರಾತು**

ಅರಬ್ಬೀ ಸಮುದ್ರಕ್ಕೆ ಚಾಚಿಕೊಂಡಿರುವ ಗುಜರಾತ್ ರಾಜ್ಯವು ಪ್ರಾಚೀನ ಕಾಲದಿಂದಲೂ ಶ್ರೀಮಂತ ಪ್ರದೇಶವಾಗಿದ್ದು ಸದಾ ವಿದೇಶೀ ಧಾಳಿಕಾರರ ಗಮನ ಸೆಳೆಯುತ್ತಿತ್ತು. ಗುಜರಾತ್ ರಾಜ್ಯದ ಮೇಲೆ ದಂಡಯಾತ್ರೆ ಕೈಗೊಂಡ ಮುಸ್ಲಿಂ ದಂಡಯಾತ್ರೆಕಾರರಲ್ಲಿ ಮಹಮದ್ ಘಸ್ನಿಯು ಮೊಟ್ಟಮೊದಲನೆಯವನು. ಅವನು ಅಲ್ಲಿನ ಪ್ರಸಿದ್ಧ ಸೋಮನಾಥ ದೇವಾಲಯದ ಮೇಲೆ ಧಾಳಿಮಾಡಿ ವಶಪಡಿಸಿಕೊಂಡ ಬೆಳ್ಳಿ ಬಂಗಾರವು ಮುಂದೆ ಭಾರತವನ್ನಾಳಿದ ಮುಸಲ್ಮಾನರ ದೊರೆಗಳಿಗೆ ಆ ರಾಜ್ಯವನ್ನು ಗೆದ್ದು ವಶಪಡಿಸಿಕೊಳ್ಳಲು ಸ್ಫೂರ್ತಿ ನೀಡಿತು. ಕ್ರಿ.ಶ. 1297ರಲ್ಲಿ ಅಲ್ಲಾವುದ್ದೀನ್‌ಖಿಲ್ಜಿಯು ಅದನ್ನು ದೆಹಲಿ ಸಾಮ್ರಾಜ್ಯಕ್ಕೆ ಸೇರಿಸಿಕೊಳ್ಳುವುದಕ್ಕೆ ಮುಂಚೆ ಅದನ್ನು ಶಾಶ್ವತವಾಗಿ ಗೆಲ್ಲುವ ಪ್ರಯತ್ನವನ್ನು ಯಾವ ಮುಸಲ್ಮಾನ ದೊರೆಯೂ ಮಾಡಿರಲಿಲ್ಲ. ಗುಜರಾತು ದೆಹಲಿ ಸಾಮ್ರಾಜ್ಯದ ಒಂದು ಭಾಗವಾದ ಮೇಲೆ ಅದು ದೆಹಲಿಯ ಸುಲ್ತಾನರ ಪ್ರತಿನಿಧಿಗಳಾದ ಮುಸ್ಲಿಮ್ ಗೌರ್ನರ್‌ಗಳ ಆಡಳಿತದಲ್ಲಿತ್ತು. ಆದರೆ ಈ ಗೌರ್ನರುಗಳ ನಿಷ್ಠೆಯು ಕೇಂದ್ರಸರ್ಕಾರದ ಬಲಾಬಲಗಳಿಗನುಗುಣವಾಗಿ ಡೋಲಾಯಮಾನವಾಗಿರುತ್ತಿತ್ತು. ತೈಮೂರನ ಧಾಳಿಯ ತರುವಾಯದಲ್ಲಿ ದೆಹಲಿ ಸಾಮ್ರಾಜ್ಯದ ರಾಜಕೀಯ ವಿದ್ಯಮಾನಗಳು ಅಸ್ತವ್ಯಸ್ತಗೊಂಡಾಗ ಗುಜರಾತಿನ ಗೌರ್ನರ್ ಆಗಿದ್ದ ಜಫರ್‌ಖಾನನು ಮುಜಾಫರ್‌ಷಹ ಎಂಬ ಬಿರುದಿನಿಂದ 1396ರಲ್ಲಿ ತನ್ನ ಸ್ವಾತಂತ್ರ್ಯವನ್ನು ಘೋಷಿಸಿಕೊಂಡನು. ಅವನ ತರುವಾಯ ಗುಜರಾತು ರಾಜ್ಯವನ್ನಾಳಿದ ದೊರೆಗಳಲ್ಲಿ ಅಹಮದ್‌ಷಹ (1411-1442) ಮಹೆಮದ್‌ಷಹ ಬಿಗಾಡ (1458-1511) ಮತ್ತು ಬಹದ್ದೂರ್ ಷಹನು (1526-1537) ಹೆಚ್ಚು ಪ್ರಸಿದ್ಧರಾದವರು.

ಅಹಮದ್‌ಷಹನು ಗುಜರಾತಿನಲ್ಲಿ ಸ್ವತಂತ್ರ ಸಂತತಿಯ ಆಳ್ವಿಕೆಯ ನಿಜವಾದ ಸ್ಥಾಪಕನಾಗಿದ್ದನು. ಅವನು ಯುದ್ಧಪ್ರಿಯನೂ, ಧೈರ್ಯಶಾಲಿಯೂ ಆಗಿದ್ದನು. ಅವನು ತನ್ನ ರಾಜ್ಯದ ಗಡಿಗಳನ್ನು ವಿಸ್ತರಿಸಲೋಸುಗ ಬಹಳಷ್ಟು ಕಾಲವನ್ನು ಯುದ್ಧಗಳನ್ನು ಮಾಡುವುದರಲ್ಲಿಯೆ ಕಳೆದನು. ಅವನು ತನ್ನ ಆಳ್ವಿಕೆಯ ಮೊದಲ ವರ್ಷದಲ್ಲಿ ಸಬರಮತಿ ನದಿಯ ಎಡದಂಡೆಯ ಮೇಲೆ ಅಹಮದಾಬಾದ್ ಎಂಬ ಹೊಸ ಪಟ್ಟಣವನ್ನು ನಿರ್ಮಿಸಿದನು. ಕುಶಲ ಕೆಲಸಗಾರರನ್ನೂ ಮತ್ತು ವ್ಯಾಪಾರಿಗಳನ್ನೂ

ಅಲ್ಲಿಗೆ ಬಂದು ನೆಲಸುವಂತೆ ಪ್ರೋತ್ಸಾಹಿಸಿದನು. ಕ್ರಿ.ಶ. 1414ರಲ್ಲಿ ಗಿರ್‌ನಾರ್ ಮತ್ತು ಚಂಪನೀರ್‌ಗಳ ಮೇಲೆ ಸೈನ್ಯದೊಂದಿಗೆ ಹೋಗಿ ಅಲ್ಲಿನ ರಾಜರನ್ನು ಸೋಲಿಸಿ ಅವರನ್ನು ತನ್ನ ಅಧೀನರನ್ನಾಗಿ ಮಾಡಿಕೊಂಡನು. ಕ್ರಿ.ಶ. 1412ರಲ್ಲಿ ಮಾಳವದ ಮೇಲೆ ದಂಡೆತ್ತಿ ಹೋಗಿ ಮಂಡುವನ್ನು ಮುತ್ತಿ ಅಲ್ಲಿನ ರಾಜನಾದ ಹುಷಾಂಗ್‌ಷಹನನ್ನು ಸೋಲಿಸಿ ತನಗೆ ಕಪ್ಪಕಾಣಿಕೆಗಳನ್ನು ಕೊಡುವಂತೆ ಮಾಡಿದನು. ಅಹಮದ್‌ಷಹನು ಕ್ರಿ.ಶ. 1441ರಲ್ಲಿ ಕಾಲವಾದನು.

ಅಹಮದ್‌ಷಹನ ತರುವಾಯ ಅವನ ಮಗನಾದ ಮಹಮದ್‌ಷಹನು ಅಧಿಕಾರಕ್ಕೆ ಬಂದನು. ಅವನು ಬಹಳ ಉದಾರಿಯಾಗಿದ್ದು 'ಜರ್‌ಭಕ್ಷ' ಅಥವ ಚಿನ್ನವನ್ನು ಕೊಡುವವನು ಎಂದು ಪ್ರಸಿದ್ಧಿ ಪಡೆದಿದ್ದನು. ಇವನ ಆಳ್ವಿಕೆಯಲ್ಲಿ ಚಂಪನೀರ್ ರಾಜ್ಯದ ರಾಜನು ಮಾಳವದ ರಾಜನ ಸಹಾಯವನ್ನು ಪಡೆದು ಅವನ ವಿರುದ್ಧ ಬಂದಿದ್ದ ಗುಜರಾತಿನ ಸೈನ್ಯವನ್ನು ಸೋಲಿಸಿ ಓಡಿಸಿದನು. ಅಹಮದ್‌ಷಹನು 1451ರಲ್ಲಿ ತನ್ನ ಆಸ್ಥಾನದ ನೋಬಲ್ಲರ ಒಳಸಂಚಿನಿಂದ ಕೊಲ್ಲಲ್ಪಟ್ಟನು. ಅನಂತರ ನೋಬಲ್ಲರು ಅವನ ಮಗ ಕುತ್ಬುದ್ದೀನ್ ಎಂಬವನನ್ನು ಸಿಂಹಾಸನಕ್ಕೇರಿಸಿದರು. ಕುತ್ಬುದ್ದೀನನು ತನ್ನ ಆಳ್ವಿಕೆಯ ಹೆಚ್ಚು ಕಾಲವನ್ನು ಚಿತ್ತೂರಿನ ರಾಣನ ವಿರುದ್ಧ ಹೋರಾಡುವುದರಲ್ಲಿಯೆ ಕಳೆದನು. ಅವನು 1458ರಲ್ಲಿ ಕಾಲವಾದನು. ಅವನ ತರುವಾಯ ಅಹಮದ್‌ಷಹನ ಮೊಮ್ಮಗನಾದ ಫತಕ್‌ಖಾನ್ ಎಂಬುವನು ಮಹಮದ್‌ಷಹ ಬಿಗಾಡ ಎಂಬ ಬಿರುದಿನಿಂದ ಸಿಂಹಾಸನಕ್ಕೆ ಬಂದನು.

ಮಹಮದ್‌ಷಹ ಬಿಗಾಡನು ಯೋಧನೂ, ಯುದ್ಧೋತ್ಸಾಹಿಯೂ ಆಗಿದ್ದನು. ಅವನು ಬಹಮನಿಯ ನಿಜಾಮ್‌ಷಹನನ್ನು ಮಾಳವದ ದೊರೆ ಮಹಮದ್ ಖಿಲ್ಜಿಯಿಂದ ರಕ್ಷಿಸಿದನು. ಜುನ್ನಾಗಡದ ರಾಜನನ್ನು ತನ್ನ ಅಧಿಕಾರಕ್ಕೆ ತಲೆಬಾಗುವಂತೆ ಮಾಡಿದ್ದನು. ಗುಜರಾತಿನ ಸಮುದ್ರತೀರದಲ್ಲಿದ್ದ ಕಡಲ್ಗಳ್ಳರನ್ನು ಅಡಗಿಸಿದನು ಮತ್ತು ಗುಜರಾತಿನ ಹಿಂದು ಮುಖಂಡರನ್ನು ತನ್ನ ಅಧೀನ ಮಾಡಿಕೊಂಡನು. ತರುವಾಯ ಕ್ರಿ.ಶ. 1484ರಲ್ಲಿ ಚಂಪನೀರ್‌ನ ರಜಪೂತರು ಅಧೀನರಾಗಿ ಚಂಪನೀರ್ ಕೋಟೆಯನ್ನು ಅವನಿಗೊಪ್ಪಿಸಿದರು. ಚಂಪನೀರ್ ಪಟ್ಟಣದ ಸುತ್ತಲೂ ಮಹಮದನು ತನ್ನ ಗೆಲುವಿನ ನೆನಪಿಗಾಗಿ ದೊಡ್ಡ ಕೋಟೆಯನ್ನು ನಿರ್ಮಿಸಿದನು. ಮತ್ತು ಚಂಪನೀರ್‌ಗೆ ತನ್ನ ಹೆಸರನ್ನಿಟ್ಟು ಮಹಮದಾಬಾದ್ ಎಂದು ಕರೆದನು.

ಮಹಮದ್‌ಷಹ ಬಿಗಾಡನು ತನ್ನ ಆಳ್ವಿಕೆಯ ಕೊನೆಯ ವರ್ಷಗಳಲ್ಲಿ ಪೋರ್ಚುಗೀಸರ ವಿರುದ್ಧ ಯುದ್ಧ ಹೂಡಿದನು. ಪೋರ್ಚುಗೀಸರು ಪಶ್ಚಿಮ ಕರಾವಳಿಯಲ್ಲಿ ನೆಲಸಿದ್ದರು. ಅವನು ಪೋರ್ಚುಗೀಸರ ವಿರುದ್ಧ ಹೋರಾಡಲು ಕಲ್ಲಿಕೋಟೆಯ ಜಾಮೋರಿನ್ ಮತ್ತು ಈಜಿಪ್ಟಿನ ದೊರೆಯೊಂದಿಗೆ ಸ್ನೇಹ ಬೆಳೆಸಿದನು. ಪೋರ್ಚುಗೀಸರಿಗೆ ದೇಶದ ಒಳಭಾಗದಲ್ಲಿ ವ್ಯಾಪಾರ ನಡೆಸಲು ಅವಕಾಶ ಕೊಡಕೂಡದೆಂಬುದು ಅವನ ಮುಖ್ಯ ಉದ್ದೇಶವಾಗಿತ್ತು. ಇದಕ್ಕೆ ಪ್ರತಿಕ್ರಿಯೆಯಾಗಿ ಪೋರ್ಚುಗೀಸರು ಮುಸ್ಲಿಮರ ವ್ಯಾಪಾರ ಸಂಪರ್ಕವನ್ನು ತಪ್ಪಿಸಿದರು. ಮಹಮದ್ ಬಿಗಾಡನು ಹನ್ನೆರಡು ಹಡಗುಗಳ ತಂಡವೊಂದನ್ನು ಜೋಡಿಸಿ 15000 ಸೈನ್ಯವನ್ನು ಪೋರ್ಚುಗೀಸರ ನೆಲೆಗಳನ್ನು ವಶಪಡಿಸಿಕೊಳ್ಳಲು ಮೀರ್ ಹೋಜೆಮ್‌ನ ನೇತೃತ್ವದಲ್ಲಿ

ಕಳುಹಿಸಿದನು. ಆದರೆ ಉತ್ತಮವಾದ ಶಸ್ತ್ರಾಸ್ತ್ರಗಳನ್ನು ಹೊಂದಿದ್ದ ಪೋರ್ಚುಗೀಸರು ವಿಜಯಗಳಿಸಿದರು. ಈ ವಿಜಯದ ನಂತರ ಪೋರ್ಚುಗೀಸರು ಪಶ್ಚಿಮ ಕರಾವಳಿಯಲ್ಲಿ ತಮ್ಮ ಅಧಿಕಾರವನ್ನು ಭದ್ರವಾಗಿ ಸ್ಥಾಪಿಸಿಕೊಂಡರು.

ಮಹಮದ್ ಬಿಗಾಡನು ಸುಮಾರು 52 ವರ್ಷಗಳ ಕಾಲ ವೈಭವದಿಂದ ರಾಜ್ಯವಾಳಿ 1511ರಲ್ಲಿ ಮರಣ ಹೊಂದಿದನು. ಅವನೊಬ್ಬ ಸಮರ್ಥ ರಾಜನಾಗಿದ್ದು ರಾಜ್ಯವನ್ನು ವಿಚಕ್ಷಣೆಯಿಂದ ಆಳಿದನು. ಇಸ್ಲಾಂ ಧರ್ಮಪ್ರಚಾರದಲ್ಲಿ ಹೆಚ್ಚು ಆಸಕ್ತಿ ಹೊಂದಿದ್ದನು. ಅವನು ಅನೇಕ ಮಸೀದಿಗಳನ್ನು ಕಟ್ಟಿಸಿದನು. ಅಂತಹ ಮಸೀದಿಗಳಲ್ಲಿ ಒಂದನ್ನು ಚಂಪನೀರ್‌ನಲ್ಲಿ ಇಂದೂ ನೋಡಬಹುದಾಗಿದೆ.

ಮಹಮದ್‌ಷಹ ಬಿಗಾಡನ ನಂತರ ಗುಜರಾತು ರಾಜ್ಯವನ್ನು ಆಳಿದ ದೊರೆಗಳಲ್ಲಿ ಬಹದ್ದೂರ್‌ಷಹ (1526-37) ನು ಹೆಚ್ಚು ಪ್ರಸಿದ್ಧನಾದವನು. ಇವನೂ ಕೂಡ ಧೈರ್ಯವಂತ ಮತ್ತು ಯುದ್ಧಪ್ರಿಯ. ಇವನು ಸಿಂಹಾಸನವನ್ನೇರಿದ ತಕ್ಷಣದಲ್ಲೇ ರಾಜ್ಯವಿಸ್ತರಣಾಕಾರ್ಯದಲ್ಲಿ ತೊಡಗಿದನು. ಮಂಡು ಮತ್ತು ಚಾಂದೇರಿಗಳನ್ನು ವಶಪಡಿಸಿಕೊಂಡು ಚಿತ್ತೂರಿನ ಮೇಲೆ ಧಾಳಿ ಮಾಡಿದನು. ಬಹದ್ದೂರ್‌ಷಹನ ಈ ವಿಜಯಗಳು ಮೊಗಲ್ ಚಕ್ರವರ್ತಿ ಹುಮಾಯೂನನನ್ನು ದಿಗಿಲುಗೊಳ್ಳುವಂತೆ ಮಾಡಿದವು. ಹುಮಾಯೂನನು ಅವನ ವಿರುದ್ಧ ದಂಡೆತ್ತಿ ಬಂದು ಮಂಡು ಮತ್ತು ಚಂಪನೀರ್‌ಗಳನ್ನೇ ಅಲ್ಲದೆ ಗುಜರಾತನ್ನೂ ವಸಪಡಿಸಿಕೊಂಡನು. ಆದರೆ ಬಹದ್ದೂರ್‌ಷಹನು ಸಮರ್ಥ ದಂಡನಾಯಕನಾಗಿದ್ದರಿಂದ ಅಪಾರ ಸೈನ್ಯವನ್ನು ಸಂಗ್ರಹಿಸಿ ದೊಗಲರ ಸೈನ್ಯವನ್ನು ಸೋಲಿಸಿ ಪುನಃ ಗುಜರಾತನ್ನು ಸ್ವಾಧೀನಪಡಿಸಿಕೊಂಡನು. ಬಹದ್ದೂರ್ ಷಹನು ಪೋರ್ಚುಗೀಸರನ್ನು ಡಿಯು ದ್ವೀಪದಿಂದ ಓಡಿಸಲು ಮಾಡಿದ ಪ್ರಯತ್ನವು ವಿಫಲವಾಯಿತು. ಪೋರ್ಚುಗೀಸರು ಅವನ ವಿರುದ್ಧ ಒಳಸಂಚು ನಡೆಸಿ ಅವನು ಹಡಗಿನಲ್ಲಿ ಪ್ರಯಾಣ ಮಾಡುತ್ತಿದ್ದಾಗ ಅವನನ್ನು ಮೋಸದಿಂದ ಕೊಲ್ಲಿಸಿದರು. ಬಹದ್ದೂರ್ ಷಹನು ಮೃತನಾದ ಮೇಲೆ ಗುಜರಾತು ಅನಾಯಕತ್ವದಿಂದ ಅವ್ಯವಸ್ಥೆಗೀಡಾಯಿತು. ಈ ಸಮಯದಲ್ಲಿ ಅನೇಕ ಅಸಮರ್ಥ ರಾಜರು ಒಬ್ಬರಾದ ಮೇಲೊಬ್ಬರಂತೆ ಅಧಿಕಾರಕ್ಕೆ ಬಂದರು. ಈ ಪರಿಸ್ಥಿತಿಯು 1572ರಲ್ಲಿ ಅಕ್ಬರನು ಆ ಪ್ರಾಂತ್ಯವನ್ನು ಮೊಗಲ್ ಸಾಮ್ರಾಜ್ಯಕ್ಕೆ ಸೇರಿಸಿಕೊಳ್ಳುವ ತನಕವೂ ಮುಂದುವರಿದಿದ್ದಿತು. ಗುಜರಾತಿನ ಸುಲ್ತಾನರುಗಳು ಗುಜರಾತಿನ ಭಾಷೆ ಮತ್ತು ಸಾಹಿತ್ಯದ ಪ್ರೋತ್ಸಾಹಕರಾಗಿದ್ದರು. ವಾಸ್ತುಶಿಲ್ಪಕ್ಕೂ ಪ್ರೋತ್ಸಾಹಕೊಟ್ಟಿದ್ದರು.

**ಜಾನ್ಪುರ**

ಫಿರೋಜ್ ತೊಘಲಕನು ದೆಹಲಿಯ ಸುಲ್ತಾನನಾದ ಮೇಲೆ ಬಂಗಾಳದಲ್ಲಿ ತನ್ನ ಸೈನಿಕ ಕಾರ್ಯಾಚರಣೆಗಳಿಗೆ ಅನುಕೂಲವಾಗುವಂತೆ ಒಂದು ಹೊಸ ಪಟ್ಟಣವನ್ನು ನಿರ್ಮಿಸಿ ಅದಕ್ಕೆ ಮಹಮದ್‌ಜುನನ ಹೆಸರನ್ನಿಟ್ಟು ಅದನ್ನು ಜಾನ್ಪುರ ಎಂದು ಕರೆದನು. ಹೀಗೆ ಸ್ಥಾಪಿಸಲ್ಪಟ್ಟ ಈ ಹೊಸ ಪಟ್ಟಣದಲ್ಲಿ ಅವನು ಸುಂದರವಾದ ಮತ್ತು ಭವ್ಯವಾದ ಅನೇಕ ಕಟ್ಟಡಗಳನ್ನು ಕಟ್ಟಿಸಿ ಅದನ್ನು ಆಕರ್ಷಕ ಪಟ್ಟಣವನ್ನಾಗಿ ಮಾಡಿದನು. ಫಿರೋಜ್ ತೊಘಲಕನು 1388ರಲ್ಲಿ ಕಾಲವಾದ ಮೇಲೆ ಜಾನ್ಪುರವನ್ನು

ಷಾರ್ಕಿ ಸಂತತಿಯ ದೊರೆಗಳು ಆಳಿದರು. ಈ ಸಂತತಿಯ ದೊರೆಗಳಲ್ಲಿ ಇಬ್ರಾಹಿಂ ಷಾರ್ಕಿ ಎಂಬವನು ಹೆಚ್ಚು ಪ್ರಸಿದ್ಧನಾದವನು. ಇವನು ದೆಹಲಿ ಮತ್ತು ಕನೂಜ್‌ಗಳ ಮೇಲೆ ಮಾಡಿದ ಯುದ್ಧಗಳಲ್ಲಿ ಹೆಚ್ಚಿನ ಯಶಸ್ಸುಗಳಿಸಲಿಲ್ಲ.

ಇಬ್ರಾಹಿಂ ಷಾರ್ಕಿಯು ಕಲೆ ಮತ್ತು ವಿದ್ಯೆಗೆ ಪ್ರೋತ್ಸಾಹ ನೀಡಿದ್ದನು. ಪೂರ್ವ ಭಾರತದಲ್ಲಿ ಜಾನ್ಪುರವನ್ನು ಜ್ಞಾನ ಪೀಠವನ್ನಾಗಿ ಮಾಡಿ ಅನೇಕ ವಿದ್ವಾಂಸರಿಗೆ ಆಶ್ರಯಕೊಟ್ಟಿದ್ದನು. ತೈಮೂರನ ಧಾಳಿಯನಂತರ ದೆಹಲಿಯಲ್ಲಿ ಉಂಟಾದ ಜೀವನದ ತೊಂದರೆಯಿಂದಾಗಿ ಅನೇಕ ಸಾಹಿತಿಗಳು ಅವನ ಆಸ್ಥಾನಕ್ಕೆ ಬಂದು ಆಶ್ರಯ ಪಡೆದರು. ಅವರಲ್ಲಿ ಷಿಹಾಬುದ್ದೀನ್ ಮಲ್ಲಿಕ್ ಉಲೇಮ ಪ್ರಸಿದ್ಧನಾದವನು. ಅವನು ತನಗೆ ಉದಾರಾಶ್ರಯ ನೀಡಿದ ರಾಜನಿಗೆ ತನ್ನ ಅನೇಕ ಕೃತಿಗಳನ್ನು ಅರ್ಪಿಸಿದನು. ಸುಲ್ತಾನನು ವಾಸ್ತು ಶಿಲ್ಪಕಲೆಗೂ ಪ್ರೋತ್ಸಾಹ ನೀಡಿದ್ದನು. ಅವನು ತನ್ನ ರಾಜಧಾನಿಯಲ್ಲಿ ಅನೇಕ ಭವನಗಳನ್ನು ನಿರ್ಮಿಸಿದನು. 'ಅತಲಾ' ಎಂಬ ಮಸೀದಿಯನ್ನು 1408ರಲ್ಲಿ ಕಟ್ಟಿಮುಗಿಸಿದನು. ಈ ಮಸೀದಿಯು ಇಬ್ರಾಹಿಂನ ಕಲಾಭಿರುಚಿಯ ಸ್ಮಾರಕವಾಗಿ ಈಗಲೂ ಉಳಿದಿದೆ.

**ಬಂಗಾಳ**

ಫಿರೋಜ್ ತೊಘಲಕನ ಆಳ್ವಿಕೆಯ ಕಾಲದಲ್ಲಿ ಬಂಗಾಳವು ದೆಹಲಿಯ ಸಾಮ್ರಾಜ್ಯದಿಂದ ಪ್ರತ್ಯೇಕವಾಯಿತು. ಬಂಗಾಳದ ರಾಜರುಗಳು ಆಗಾಗ್ಗೆ ದೆಹಲಿಯ ಸುಲ್ತಾನರಿಗೆ ಪೊಗದಿಯನ್ನು ಸಲ್ಲಿಸುತ್ತಿದ್ದರೂ ಅವರು ವಾಸ್ತವವಾಗಿ ಸ್ವತಂತ್ರರಾಗಿದ್ದರು. ಕ್ರಿ.ಶ. 15ನೆ ಶತಮಾನದಲ್ಲಿ ಬಂಗಾಳದಲ್ಲಿ ಹುಸೈನಿ ವಂಶದವರ ಅಧಿಕಾರದ ಸ್ಥಾಪನೆಯಿಂದಾಗಿ ಬಂಗಾಳದ ಇತಿಹಾಸದಲ್ಲಿ ಹೊಸ ಅಧ್ಯಾಯವೊಂದು ಆರಂಭವಾಯಿತು. ಹುಸೇನ್‌ಷಹ (1493-1519) ಎಂಬುವನು ಈ ವಂಶದ ಮೊದಲ ರಾಜ. ಅವನು ಒಬ್ಬ ಸಮರ್ಥ ರಾಜನಾಗಿದ್ದು ಉತ್ತಮ ರೀತಿಯಲ್ಲಿ ರಾಜ್ಯವಾಳಿದನು. ಅವನ ಕಾಲದಲ್ಲಿ ಬಂಗಾಳದಲ್ಲಿ ದಂಗೆಗಳಾವುವೂ ಸಂಭವಿಸಲಿಲ್ಲ. ಹುಸೇನ್‌ಷಹನು ಅನೇಕ ಮಸೀದಿಗಳನ್ನು ಕಟ್ಟಿಸಿದನು. ಅವನು ವಿದ್ವಾಂಸರಿಗೂ ಮತ್ತು ದೈವಜ್ಞರಿಗೂ ಜೀವನ ಭತ್ಯೆಯನ್ನು ಕೊಟ್ಟಿದ್ದನು. ಅವನ ತರುವಾಯ ಸಿಂಹಾಸನಕ್ಕೆ ಬಂದ ಅವನ ಮಗ ನಸರತ್‌ಷಹನೂ ಕೂಡ ಒಬ್ಬ ಪ್ರಸಿದ್ಧ ವ್ಯಕ್ತಿಯಾಗಿದ್ದನು.

ಬಾಬರನು ತನ್ನ ಆತ್ಮಕಥೆಯಲ್ಲಿ ಹಿಂದೂಸ್ಥಾನದ ದಕ್ಷ ರಾಜರುಗಳಲ್ಲಿ ನಸರತ್‌ಷಹನು ಒಬ್ಬನಾಗಿದ್ದನೆಂದು ಹೇಳುತ್ತಾನೆ. ನಸರತ್‌ಷಹನು ತನ್ನ ತಂದೆಯಂತೆಯೆ ಕಲೆಗೆ ಪ್ರೋತ್ಸಾಹ ಕೊಟ್ಟು ಕೆಲವು ಮಸೀದಿಗಳನ್ನು ಕಟ್ಟಿಸಿದನು. ಅವುಗಳು ಸೌಂದರ್ಯಕ್ಕೂ ಹಾಗೂ ಬೃಹತ್ತಿಗೂ ಹೆಸರಾಗಿವೆ. ಹುಸೈನಿ ಸಂತತಿಯವರ ಆಳ್ವಿಕೆಯು ಬಂಗಾಳದಲ್ಲಿ ಕೊನೆಗೊಂಡ ಮೇಲೆ ಅಲ್ಲಿನ ಅಧಿಕಾರವು ಆಫ್ಘನ್ನರ ಕೈ ಸೇರಿತು. ಷೇರ್‌ಷಹನು ಮೊಗಲ್ ಚಕ್ರವರ್ತಿ ಹುಮಾಯೂನನನ್ನು ಸೋಲಿಸಿ ಬಂಗಾಳ ಮತ್ತು ಬಿಹಾರಗಳ ಮೇಲೆ ತನ್ನ ಪೂರ್ಣ ಅಧಿಕಾರವನ್ನು ಸ್ಥಾಪಿಸಿದನು. ಹದಿನಾಲ್ಕು ಮತ್ತು ಹದಿನೈದನೆ ಶತಮಾನಗಳಲ್ಲಿ ಬಂಗಾಳದಲ್ಲಿ ಧಾರ್ಮಿಕ ಕ್ಷೇತ್ರದಲ್ಲಿ ಮಹತ್ವಪೂರ್ಣ ಬದಲಾವಣೆಗಳು ಜರುಗಿದವು. ಈ ಕಾಲದಲ್ಲಿ ಹಿಂದೂ ಮತ್ತು ಇಸ್ಲಾಂ ಧರ್ಮಗಳು ಪರಸ್ಪರ ಪ್ರಭಾವಿತವಾಗಿ ಅವೆರಡರ ನಡುವೆ ಹೆಚ್ಚಿನ

ಹೊಂದಾಣಿಕೆ ಕಂಡು ಬಂದಿತು. ಹಿಂದೂ ಧರ್ಮವು ಬಂಗಾಳದಲ್ಲಿ ಹೊಸರೂಪವನ್ನು ಪಡೆದು ಅಲ್ಲಿ ವೈಷ್ಣವ ಪಂಥವು ಏಳಿಗೆ ಹೊಂದಿತು. ಚೈತನ್ಯನು ಆ ಪಂಥವನ್ನು ಹೆಚ್ಚು ಜನಪ್ರಿಯಗೊಳಿಸಿದನು. ಅವನು ಭಕ್ತಿ ಮಾರ್ಗವನ್ನು ಬೋಧಿಸಿದನು. ಗುರು ಚೈತನ್ಯನ ಭಕ್ತಿಯ ಕರೆಗೆ ಓಗೊಟ್ಟುವರೆಲ್ಲರೂ ಸಾಮಾಜಿಕ ಅಂತರಗಳನ್ನು ಬದಿಗೊತ್ತಿದರು. ಅವನ ಬೋಧನೆಗಳಿಂದ ಹಿಂದುಗಳು ಮತ್ತು ಮುಸಲ್ಮಾನರು ಸೌಹಾರ್ದತೆಯ ದಾರಿಯನ್ನು ಕಂಡುಕೊಂಡರು. ಹುಸೈನ್ ಎಂಬವನು ಬಂಗಾಳದಲ್ಲಿ 'ಸತ್ಯಪೀರ್' ಎಂಬ ಹೊಸ ಪಂಥವನ್ನು ಸ್ಥಾಪಿಸಿದನು. ಈ ಪಂಥವು ಹಿಂದೂ ಮುಸ್ಲಿಮರನ್ನು ಒಂದುಗೂಡಿಸುವ ಉದ್ದೇಶವನ್ನು ಹೊಂದಿದ್ದಿತು.

**ಖಾನ್ದೇಶ**

ಖಾನ್ದೇಶವು ಪೂರ್ವದಲ್ಲಿ ಬೀರಾರ್ ಪಶ್ಚಿಮದಲ್ಲಿ ಗುಜರಾತು ರಾಜ್ಯದಿಂದಲೂ ದಕ್ಷಿಣದಲ್ಲಿ ದಖನ್ ಪ್ರಸ್ಥಭೂಮಿಯಿಂದಲೂ ಉತ್ತರದಲ್ಲಿ ವಿಂಧ್ಯ ಮತ್ತು ಸಾತ್ಪುರ ಬೆಟ್ಟಗಳಿಂದಲೂ ಸುತ್ತುವರಿದಿತ್ತು. ಅದು ಮಹಮದ್‌ಬಿನ್ ತುಘಲಕನ ಸಾಮ್ರಾಜ್ಯದ ಒಂದು ಭಾಗವಾಗಿತ್ತು. ಅನಂತರ ಫಿರೋಜ್ ತುಘಲಕನು ಸುಲ್ತಾನನಾದ ಮೇಲೆ 1370ರಲ್ಲಿ ಅದನ್ನು ತನ್ನ ಖಾಸಗಿ ಸೇವಕರಲ್ಲಿ ಒಬ್ಬನಾದ ಮಲ್ಲಿಕ್‌ರಾಜ್ ಫರೂಕಿ ಎಂಬವನಿಗೆ ವಹಿಸಿಕೊಟ್ಟನು. ಫಿರೋಜನ ಮರಣಾನಂತರ ದೆಹಲಿ ಸಾಮ್ರಾಜ್ಯವು ಒಡೆದು ಹೋಗಲು ಮಲ್ಲಿಕ್‌ರಾಜ್ ತನ್ನ ಸ್ವಾತಂತ್ರ್ಯವನ್ನು ಘೋಷಿಸಿಕೊಂಡನು. ಅವನು ತನ್ನ ಪ್ರಜೆಗಳ ಕ್ಷೇಮಾಭ್ಯುದಯದಲ್ಲಿ ಆಸಕ್ತಿ ಹೊಂದಿದ್ದನು. ಅವನ ತರುವಾಯ ಅವನ ಮಗನಾದ ಮಲ್ಲಿಕ್ ನಾಸಿರ್ ಎಂಬವನು 1399ರಲ್ಲಿ ಅಧಿಕಾರಕ್ಕೆ ಬಂದನು. ಅವನು ಅಸೀರ್‌ಘರ್ ಕೋಟೆಯನ್ನು ಗೆದ್ದುವಶಪಡಿಸಿಕೊಂಡನು. ಅವನು 1437ರಲ್ಲಿ ಕಾಲವಾದನು. ಅವನ ತರುವಾಯ ಅಧಿಕಾರಕ್ಕೆ ಬಂದ ರಾಜರುಗಳು ಅಸಮರ್ಥರಾಗಿದ್ದು ಅವರ ಆಳ್ವಿಕೆಯಲ್ಲಿ ರಾಜ್ಯವು ಅವನತಿ ಹಾದಿ ಹಿಡಿಯಿತು. ನಾಸಿರನ ಮೊಮ್ಮಕ್ಕಳಲ್ಲಿ ಒಬ್ಬನಾದ ಆದಿಲ್‌ಷಹನು 1520ರಲ್ಲಿ ಕಾಲವಾದ ಮೇಲೆ ಅನೇಕ ದುರ್ಬಲ ರಾಜರುಗಳು ಅಧಿಕಾರಕ್ಕೆ ಬಂದರು. ಅವರು ಮೊಗಲರ ಆಕ್ರಮಣಗಳನ್ನು ತಡೆಗಟ್ಟುವುದರಲ್ಲಿ ವಿಫಲರಾದರು. ಕೊನೆಗೆ 1601ರಲ್ಲಿ ಅಕ್ಬರನು ಅಸೀರ್‌ಘರ್ ಕೋಟೆಯನ್ನು ಗೆದ್ದು ವಶಪಡಿಸಿಕೊಂಡು ಖಾನ್ದೇಶವನ್ನು ತನ್ನ ಸಾಮ್ರಾಜ್ಯಕ್ಕೆ ಸೇರಿಸಿಕೊಂಡನು. ಇದರೊಂದಿಗೆ ಖಾನ್ದೇಶದಲ್ಲಿ ಸ್ಥಳೀಯ ರಾಜವಂಶದ ಆಳ್ವಿಕೆಯು ಕೊನೆಗಂಡಿತು.

## ಅಧ್ಯಾಯ-23

# ದೆಹಲಿಯ ಸುಲ್ತಾನರ ಆಡಳಿತ ಕ್ರಮ

ಭಾರತಕ್ಕೆ ಆಕ್ರಮಣಕಾರರಾಗಿ ಬಂದ ಟರ್ಕರು ಈ ದೇಶದಲ್ಲಿ ನೆಲಸಿ ಕಾಲಾನು ಕ್ರಮದಲ್ಲಿ ರಾಜಕೀಯ ಅಧಿಕಾರವನ್ನು ಸ್ಥಾಪಿಸುವುದಕ್ಕೆ ಮೊದಲು ಅವರಿಗೆ ಭಾರತೀಯರ ರಾಜಕೀಯ ಸಂಸ್ಥೆಗಳ ಪರಿಚಯವಿರಲಿಲ್ಲ. ಟರ್ಕರು ಭಾರತಕ್ಕೆ ಬಂದು ನೆಲಸಿದ ಮೇಲೂ ಅವರು ತಮ್ಮನ್ನು ತೀವ್ರವಾಗಿ ವಿರೋಧಿಸುತ್ತಿದ್ದ ಹಿಂದೂ ಮುಖಂಡರ ಮತ್ತು ರಜಪೂತರ ನಾಯಕರೊಂದಿಗೆ ಹೋರಾಡುವುದರಲ್ಲಿ ಅವರು ಕಾರ್ಯೋನ್ಮುಖರಾಗಿದ್ದರು. ಇದರಿಂದಾಗಿ ಟರ್ಕರು ಅವರ ರಾಜಕೀಯ ಆದರ್ಶಗಳಿಗನುಗುಣವಾಗಿ ಆಡಳಿತವನ್ನು ರೂಪಿಸಲಾಗಲಿಲ್ಲ. ಇದಕ್ಕೆ ಬದಲಾಗಿ ಅವರು ಅಂದು ಬಳಕೆಯಲ್ಲಿದ್ದ ವ್ಯವಸ್ಥೆಯನ್ನು ಅನುಸರಿಸಿ ಕೇಂದ್ರ ಮತ್ತು ಪ್ರಾಂತೀಯ ಘಟ್ಟಗಳಲ್ಲಿ ತಮ್ಮ ನೇರವಾದ ಅಧಿಕಾರಗಳನ್ನು ಹೊಂದಿದ್ದು ಅವುಗಳ ಕೆಳಗಿನ ಆಡಳಿತದ ವಿವಿಧ ವಿಭಾಗಗಳಲ್ಲಿ ಭಾರತೀಯ ಆಡಳಿತ ಸಿಬ್ಬಂದಿಯವರನ್ನೇ ಮುಂದುವರಿಸಿಕೊಂಡು ಆಡಳಿತ ನಿರ್ವಹಿಸತೊಡಗಿದರು. ಅವರು ಗ್ರಾಮಾಡಳಿತ ವ್ಯವಸ್ಥೆಯನ್ನು ಸ್ವಲ್ಪವೂ ಬದಲಿಸಲಿಲ್ಲ. ತತ್ಪರಿಣಾಮವಾಗಿ ಒಂದು ಕಡೆ ಇಸ್ಲಾಂ ಧರ್ಮದ ರಾಜಕೀಯ ಆದರ್ಶಗಳ ಮತ್ತು ಸಂಸ್ಥೆಗಳ ಮತ್ತೊಂದು ಕಡೆ ಆಚರಣೆಯಲ್ಲಿದ್ದ ಭಾರತೀಯ ಆಡಳಿತ ವ್ಯವಸ್ಥೆಯ ಹೊಂದಾಣಿಕೆಯಿಂದ ಕೂಡಿದ ಆಡಳಿತ ವ್ಯವಸ್ಥೆಯು ಜಾರಿಗೆ ಬಂದಿತು. ಈ ರೀತಿಯ ಹೊಂದಾಣಿಕೆಯು ಟರ್ಕರು ಭಾರತಕ್ಕೆ ಬರುವ ಮೊದಲೇ ಸಿಂಧ್‌ನಲ್ಲಿ ಅರಬ್ಬರ ಅಲ್ಪಕಾಲದ ಅಧಿಕಾರದ ಅವಧಿಯಲ್ಲೇ ಆರಂಭವಾಗಿದ್ದಿತು. ಪರಸ್ಪರ ಅರಿವು ಮತ್ತು ಸಮಾಧಾನಪಡಿಸುವ ನೀತಿಯು ಹೆಚ್ಚು ಉಪಯುಕ್ತವಾದುದೆಂಬುದನ್ನು ಅರಬ್ಬರು ಕಂಡುಕೊಂಡಿದ್ದರು. ಭಾರತೀಯರನ್ನು ಸಿವಿಲ್ ಮತ್ತು ಮಿಲಿಟರಿ ಹುದ್ದೆಗಳಿಗೆ ಅವರು ನೇಮಿಸಿಕೊಂಡಿದ್ದರು. ಭಾರತಕ್ಕೆ ತನ್ನ ಪ್ರತಿನಿಧಿಯಾಗಿ ಕಳುಹಿಸಲ್ಪಟ್ಟಿದ್ದ ಮಹಮದ್-ಬಿನ್-ಖಾಸಿಂನಿಗೆ ಹಜಾಜ್‌ನು ಹೇಳಿದ್ದ ಮಾತಿನಿಂದ ಇದು ಸ್ಪಷ್ಟವಾಗುತ್ತದೆ. "ಸುಲ್ತಾನ್ ಮತ್ತು ಪ್ರಜೆಗಳೊಂದಿಗೆ ಪ್ರಾಮಾಣಿಕವಾಗಿ ವರ್ತಿಸು. ಪಡಿತರ ವ್ಯವಸ್ಥೆಯಲ್ಲಿ ಅಸಮಾನತೆಯನ್ನು ತೋರಬೇಡ. ಕಂದಾಯವನ್ನು ಅರ್ಹತೆಗೆ ಅನುಸಾರವಾಗಿ ವಿಧಿಸು" ಎಂದು ಹೇಳಿದ್ದನು. ಅಲ್ಲಾವುದ್ದೀನ್‌ಖಿಲ್ಜಿಯ ಆಳ್ವಿಕೆಯ ಕಾಲದಲ್ಲಿ ಮುಸ್ಲಿಮರ ಆಡಳಿತ ಸ್ವಭಾವದಲ್ಲಿ ಬಹಳ ಬದಲಾವಣೆಯಾಯಿತು. ಭಾರತದಲ್ಲಿ ಆಡಳಿತದಲ್ಲಿ ಪ್ರಯೋಗಗಳನ್ನು ಮಾಡಿದ ಮುಸ್ಲಿಂ ದೊರೆಗಳಲ್ಲಿ ಅಲ್ಲಾವುದ್ದೀನ್ ಖಿಲ್ಜಿಯು ಮೊಟ್ಟ ಮೊದಲಿಗನು. ರಾಜನ ಪದವಿಯು ಯಾವುದೇ

ಒಂದು ವರ್ಗದ ಏಕಸ್ವಾಮ್ಯವಲ್ಲವೆಂಬುದನ್ನು ಮತ್ತು ಆ ಪದವಿಯು ವ್ಯಕ್ತಿಯ ಶಕ್ತಿ ಸಾಮರ್ಥ್ಯವನ್ನು ಮತ್ತು ದಕ್ಷತೆಯನ್ನು ಅವಲಂಬಿಸಿದೆಯೆಂಬುದನ್ನು ತೋರಿಸಿಕೊಟ್ಟನು. ಅಲ್ಲದೆ ಧರ್ಮಾಧಿಕಾರಿಗಳ ಬೆಂಬಲವಿಲ್ಲದೆ ರಾಜಪ್ರಭುತ್ವವು ಇರಬಲ್ಲದೆಂಬುದನ್ನೂ ಅವನು ತೋರಿಸಿಕೊಟ್ಟನು. ಮುಸಲ್ಮಾನರ ಮೊದಲ ಮೂರು ಶತಮಾನಗಳ ಕಾಲದ ಆಳ್ವಿಕೆಯು (1206-1526) ಟರ್ಕರ ಆಳ್ವಿಕೆಯ ನೀತಿಯಲ್ಲಿ ಮಹತ್ವಪೂರ್ಣವಾದ ಬದಲಾವಣೆಗಳನ್ನು ಕಂಡಿತು.

ದೆಹಲಿಯ ಸುಲ್ತಾನರ ಆಡಳಿತ ವ್ಯವಸ್ಥೆಯನ್ನು ವಿವರವಾಗಿ ತಿಳಿಯುವ ಮೊದಲು, ಸುಲ್ತಾನರ ರಾಜಕೀಯ ಆದರ್ಶಗಳನ್ನು ವಿವೇಚಿಸುವುದು ಅಗತ್ಯ. ದೆಹಲಿಯ ಸುಲ್ತಾನರ ಆರಂಭದ ದಿವಸಗಳಲ್ಲಿನ ಸರ್ಕಾರದ ಲಕ್ಷಣಗಳ ಬಗ್ಗೆ ಹಲವಾರು ತಪ್ಪು ಅಭಿಪ್ರಾಯಗಳನ್ನು ವ್ಯಕ್ತಪಡಿಸಲಾಗಿದೆ. ಟರ್ಕರ ಸರ್ಕಾರದ ಲಕ್ಷಣಗಳ ಬಗ್ಗೆ ವಿದ್ವಾಂಸರು ಹಲವಾರು ವಾದ ವಿವಾದಗಳನ್ನು ಮುಂದಿರಿಸಿದ್ದಾರೆ. ಕೆಲವು ವಿದ್ವಾಂಸರು ಅದೊಂದು ಧಾರ್ಮಿಕ ಪ್ರಭುತ್ವವಾಗಿದ್ದಿತೆಂದೂ, ಮತ್ತೆ ಕೆಲವರು ಜನತೆಯ ಬೆಂಬಲವಿಲ್ಲದೆ ತನ್ನ ಅಸ್ತಿತ್ವಕ್ಕೆ ಸೈನಿಕ ಶಕ್ತಿಯನ್ನೇ ಅವಲಂಭಿಸಿದ್ದ ಮಿಲಿಟರಿ ರಾಜ್ಯವಾಗಿದ್ದಿತೆಂದು ಅಭಿಪ್ರಾಯ ಪಟ್ಟಿರುವರು. ಆದರೆ ಈ ವಾದ ವಿವಾದಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿ ನೋಡಿದಾಗ ಅದು ಧಾರ್ಮಿಕ ಪ್ರಭುತ್ವವಾಗಲೀ ಇಲ್ಲವೆ ಮಿಲಿಟರಿ ರಾಜ್ಯವಾಗಲೀ ಆಗಿರದೆ, ಮಧ್ಯಕಾಲೀನ ಯೂರೋಪಿನಲ್ಲಿ ಕಂಡುಬರುತ್ತಿದ್ದ ಊಳಿಗಮಾನ್ಯ ಪದ್ಧತಿಯ ಲಕ್ಷಣಗಳನ್ನು ಹೊಂದಿದ್ದ ಸರ್ಕಾರ ವ್ಯವಸ್ಥೆಯಾಗಿದ್ದಿತೆಂಬುದಾಗಿ ಕಂಡುಬರುತ್ತದೆ. ಟರ್ಕರ ಸರ್ಕಾರವು ಧಾರ್ಮಿಕ ಪ್ರಭುತ್ವವಾಗಿರಲಿಲ್ಲವೆಂದು ನಿಸ್ಸಂದೇಹವಾದ ವಿಷಯವಾಗಿದೆ. ಏಕೆಂದರೆ ಅಂತಹ ಧಾರ್ಮಿಕ ಪ್ರಭುತ್ವ ಸರ್ಕಾರದಲ್ಲಿ ದೇವರೇ ಸರ್ವಶಕ್ತನೂ ಮತ್ತು ಸಾರ್ವಭೌಮನೂ ಆಗಿರುತ್ತಾನೆ. ಅಲ್ಲದೆ ಅಂತಹ ಸರ್ಕಾರ ವ್ಯವಸ್ಥೆಯಲ್ಲಿ ಧಾರ್ಮಿಕ ಸಾಧನೆಯು ಮುಖ್ಯ ಗುರಿಯಾಗಿರುತ್ತದೆ. ಕಾನೂನುಗಳು ಮಾನವ ನಿರ್ಮಿತವಾಗಿರದೆ ದೈವದತ್ತವಾಗಿ ಬಂದವುಗಳಾಗಿರಬೇಕಾಗುತ್ತದೆ. ಮತ್ತು ಈ ಕಾನೂನುಗಳನ್ನು ಜಾರಿಗೆ ಕೊಡುವ ಅಧಿಕಾರವನ್ನು ದೇವರ ಪ್ರತಿನಿಧಿಗಳೆಂದು ಪರಿಗಣಿಸಲ್ಪಡುವ ಪುರೋಹಿತ ವರ್ಗದವರು ಮಾತ್ರ ಹೊಂದಿರುತ್ತಾರೆ. ಆದರೆ ಸುಲ್ತಾನರ ಕಾಲದ ಆಡಳಿತ ವ್ಯವಸ್ಥೆಯನ್ನು ಸೂಕ್ಷ್ಮವಾಗಿ ವಿವೇಚಿಸಿ ನೋಡಿದಾಗ ಸುಲ್ತಾನರ ಸರ್ಕಾರ ವ್ಯವಸ್ಥೆಯಲ್ಲಿ ಈ ಮೇಲೆ ಹೇಳಿದ ಯಾವ ಲಕ್ಷಣಗಳೂ ಕಂಡುಬರುವುದಿಲ್ಲ. ಆಡಳಿತ ನಡೆಸಲು ಚುನಾಯಿತ ಖಲೀಫನಿರಬೇಕೆಂದು ಪ್ರತಿಪಾದಿಸುವ ಇಸ್ಲಾಂಧರ್ಮದಲ್ಲಿ ಸುಲ್ತಾನನು ವೈಯಕ್ತಿಕ ಆಡಳಿತವನ್ನು ನಡೆಸಲು ಅನುಮೋದನೆ ದೊರಕುವುದಿಲ್ಲ. ಷರಿಯತ್ ಪ್ರಕಾರ ಸುಲ್ತಾನೇಟ್ ಸಂಸ್ಥೆಯು ಕಾನೂನುರಹಿತವಾದ ಸಂಸ್ಥೆಯಾಗಿರುತ್ತದೆ. ಆದರ ಕಾನೂನುಗಳು ಸುಲ್ತಾನರುಗಳಿಗೆ ಹಲವಾರು ಕಾನೂನು ಕಟ್ಟಳೆಗಳನ್ನು ರೂಪಿಸುವ ಫಕೀರರಿಂದ ಮಾಡಿದ ನಿಯಮಗಳಾಗಿರದೆ ಸುಲ್ತಾನನು ಮಾಡಿದ ಕಾನೂನುಗಳಾಗಿರುತ್ತದೆ. ದೆಹಲಿಯ ಸುಲ್ತಾನರ ಸಾಮ್ರಾಜ್ಯದ ಆಡಳಿತಾಧಿಕಾರವು ಪೂರ್ಣವಾಗಿ ಧಾರ್ಮಿಕ ಪ್ರಭುತ್ವದ ಸಿದ್ಧಾಂತವನ್ನು ವಿರೋಧಿಸುವ ಲೌಕಿಕ ಅಧಿಕಾರ ವರ್ಗದವರ ಕೈಯಲ್ಲಿತ್ತು. ಮುಸ್ಲಿಂ ಸಮಾಜದ ಉನ್ನತ ನೋಬಲ್ಲರು ಮತ್ತು ಸರ್ಕಾರದ ಉನ್ನತ ಅಧಿಕಾರಿಗಳು ಸುಲ್ತಾನರ ಆಡಳಿತ ನೀತಿಯನ್ನು ರೂಪಿಸುವುದರಲ್ಲಿ

ಹೆಚ್ಚಿನ ಪ್ರಭಾವವನ್ನು ಬೀರಿದ್ದರು. ಸರ್ಕಾರದ ಆಡಳಿತ ವ್ಯವಸ್ಥೆಯಲ್ಲಿ ಧಾರ್ಮಿಕ ನಾಯಕರುಗಳ ಪಾತ್ರವು ಬಹಳ ಅಲ್ಪ ಪ್ರಮಾಣದಾಗಿದ್ದಿತು. ಅಲ್ಲದೆ ರಾಜಕೀಯ ಬೆಳವಣಿಗೆಯ ಗತಿಯನ್ನು ನಿರ್ಧರಿಸುವುದರಲ್ಲಿ ಸುಲ್ತಾನರು ಅವರಿಗೆ ಅವಕಾಶ ಕೊಟ್ಟಿರಲಿಲ್ಲ. ಧರ್ಮದ ಬಗ್ಗೆ ಸುಲ್ತಾನರುಗಳಿಗೆ ಗೌರವವಿದ್ದಿತಾದರೂ ಧರ್ಮವು ರಾಜ್ಯಾಡಳಿತ ವ್ಯವಸ್ಥೆಗೆ ತಳಹದಿಯಾಗಿರಲಿಲ್ಲ. ಮೇಲಾಗಿ ದೆಹಲಿಯ ಸುಲ್ತಾನರ ಅಧಿಕಾರವು ಧಾರ್ಮಿಕ ಉದ್ದೇಶಗಳನ್ನು ಈಡೇರಿಸಿ ಕೊಳ್ಳುವುದಾಗಿರಲಿಲ್ಲ. ಅಲ್ಲದೆ ಅದು ಮುಸಲ್ಮಾನರಿಗೋಸ್ಕರವೇ ಸ್ಥಾಪಿತವಾಗಿರಲಿಲ್ಲ.

ಟರ್ಕರ ಸಾಮ್ರಾಜ್ಯವು ರಾಜಕೀಯ ದೃಷ್ಟಿಯಲ್ಲಿ ಒಂದು ವರ್ಗದವರ ರಾಜ್ಯವಾಗಿತ್ತು. ಟರ್ಕರ ದೊರೆಗಳು ಇಸ್ಲಾಂ ಧರ್ಮವನ್ನು ಪ್ರಸಾರ ಮಾಡುವುದಕ್ಕಿಂತ ಹೆಚ್ಚಾಗಿ ತಮ್ಮ ಅಧಿಕಾರವನ್ನು ಮತ್ತು ಸಾಮ್ರಾಜ್ಯವನ್ನು ಸಂಘಟಿಸಿ ಭದ್ರವಾಗಿ ನೆಲೆಗೊಳಿಸುವುದರಲ್ಲಿ ಹೆಚ್ಚು ಆಸಕ್ತಿಯುಳ್ಳವರಾಗಿದ್ದರು. ಟರ್ಕರು ಇಸ್ಲಾಂ ಧರ್ಮಕ್ಕೆ ಮತಾಂತರಗೊಂಡವರಾಗಿದ್ದು ಇಸ್ಲಾಂಮಿನ ಆದರ್ಶಗಳ ಬಗ್ಗೆ ಅವರಿಗೆ ಹೆಚ್ಚಿನ ಜ್ಞಾನವಿರಲಿಲ್ಲ. ಪ್ರವಾದಿ ಮಹಮದನ ಬೋಧನೆಗಳಿಗಿಂತ ಹೆಚ್ಚಾಗಿ ಅವರು ಪರ್ಶಿಯನ್ನರ ಆಡಳಿತ ನೀತಿಗಳಿಂದ ಪ್ರಭಾವಿತರಾಗಿದ್ದರು. ಅವರು ಮಾಡಿದ ಯುದ್ಧಗಳು ಧರ್ಮಕ್ಕಾಗಿ ಮಾಡಿದ ಯುದ್ಧಗಳಾಗಿರದೆ ಭಾರತದಲ್ಲಿ ರಾಜಕೀಯ ಅಧಿಕಾರದ ಸ್ಥಾಪನೆಗಾಗಿ ಮಾಡಿದ ಯುದ್ಧಗಳಾಗಿದ್ದವು. ಅವರ ರಾಜಕೀಯ ಆದರ್ಶಗಳು ಜಾತೀಯತೆಯ ಚೌಕಟ್ಟಿನಿಂದ ಹೊರಗಿದ್ದವು. ಈ ಒಂದು ಅಂಶವು ಅಲ್ಲಾವುದ್ದೀನ್ ಖಿಲ್ಜಿಯ ಮಾತುಗಳಲ್ಲಿ ಹೊರಬಿದ್ದಿವೆ. "ಇದು ಕಾನೂನು ಬದ್ಧವೋ ಇಲ್ಲವೋ ನನಗೆ ಗೊತ್ತಿಲ್ಲ. ರಾಜ್ಯದ ಮತ್ತು ಪ್ರಜೆಗಳ ಹಿತದೃಷ್ಟಿಯಿಂದ ಯಾವುದು ಒಳ್ಳೆಯ ಕಾನೂನೆಂದು ಕಂಡುಬರುವುದೋ ಅಂತಹವನ್ನು ಜಾರಿಮಾಡಲು ಹಿಂದೆಗೆಯುವುದಿಲ್ಲವೆಂದು" ಅಲ್ಲಾವುದ್ದೀನ್ ಖಿಲ್ಜಿಯು ಸ್ಪಷ್ಟಪಡಿಸಿದನು. ಇಂತಹ ಅಭಿಪ್ರಾಯಗಳನ್ನು ಹೊಂದಿದ್ದ ಟರ್ಕಿ ಸುಲ್ತಾನರೂ ಮತೀಯ ವಿಷಯಗಳಿಗೆ ಪ್ರಾಧಾನ್ಯತೆ ಕೊಡದೆ ಲೌಕಿಕವಾದ ಆಡಳಿತಾಭಿಪ್ರಾಯಗಳನ್ನು ಆಡಳಿತದಲ್ಲಿ ಅಳವಡಿಸಿಕೊಂಡಿದ್ದರು. ಟರ್ಕರು ಧಾರ್ಮಿಕ ಭ್ರಾಂತಿಯಿಂದಲ್ಲವೆ ಜನಸಾಂದ್ರತೆಯ ಒತ್ತಡದಿಂದಾಗಿ ಭಾರತಕ್ಕೆ ಬಂದವರಾಗಿದ್ದರು.

ಟರ್ಕರ ಸರ್ಕಾರವು ಮಿಲಿಟರಿ ಸರ್ಕಾರದ ಲಕ್ಷಣಗಳಿಂದ ಕೂಡಿದ್ದಿತೆಂದು ಅಭಿಪ್ರಾಯಪಟ್ಟಿರುವ ಕೆಲವು ವಿದ್ವಾಂಸರ ಅಭಿಪ್ರಾಯವೂ ಅಷ್ಟು ಸಮಂಜಸವಾಗಿ ಕಂಡುಬರುವುದಿಲ್ಲ. ಪ್ರಜೆಗಳ ಅನುಮತಿ ಮತ್ತು ಸಹಕಾರವಿಲ್ಲದೆ ಸ್ಥಾಪಿತವಾದ ಯಾವುದೇ ರಾಜಕೀಯ ವ್ಯವಸ್ಥೆಯಾಗಲೀ ಅಥವ ಸರ್ಕಾರವಾಗಲೀ ಬಹಳ ದಿವಸ ಮುಂದುವರಿಯಲು ಸಾಧ್ಯವಿಲ್ಲ. ಆಧುನಿಕ ಕಾಲದಲ್ಲಿ ಸೈನಿಕ ಶಕ್ತಿಯನ್ನು ಅವಲಂಬಿಸಿ ಸ್ಥಾಪಿತವಾಗಿದ್ದ ಸರ್ವಾಧಿಕಾರತ್ವ ಸರ್ಕಾರಗಳು ಬಹಳ ದಿವಸಗಳು ಮುಂದುವರಿಯಲಾಗಲಿಲ್ಲ. ಸುಲ್ತಾನರ ಕಾಲದಲ್ಲಿ ಸೈನಿಕ ಕಾರ್ಯ ಚಟುವಟಿಕೆಗಳ ಕಾಲಾವಧಿಯನ್ನು ನೋಡಿದಾಗ ಅವುಗಳು ಮಿಲಿಟರಿ ಸರ್ಕಾರಗಳಾಗಿದ್ದವೆಂದು ಸಮರ್ಥಿಸಲು ಸಾಧ್ಯವಿಲ್ಲ. ಈ ಕಾಲದಲ್ಲಿ ಹಿಂದುಗಳೆಲ್ಲರೂ ಒಟ್ಟಿಗೆ ಅವರ ವಿರುದ್ಧ ದಂಗೆಯೆದ್ದ ನಿದರ್ಶನಗಳು ಎಲ್ಲಿಯೂ ಕಂಡುಬರುವುದಿಲ್ಲ. ಬಲ್ಬನ್ನನ ಆಳ್ವಿಕೆಗೆ ಸಂಬಂಧಪಟ್ಟ೧೨೮೦ರ ಹಿಂದೂ ಶಾಸನವೊಂದು ಎಲ್ಲೆಲ್ಲಿಯೂ ದೇಶದಲ್ಲಿ ಸುಭಿಕ್ಷವು

ಕಂಡುಬರುತ್ತಿದ್ದಿತೆಂದೂ, ಮತ್ತು ಸುಲ್ತಾನನ ಸೈನ್ಯವು ದೇಶಕ್ಕೆ ರಕ್ಷಣೆಯನ್ನೊದಗಿಸಿ ಶಾಂತಿಯನ್ನು ಎಲ್ಲರಿಗೂ ದೊರಕಿಸಿ ಕೊಟ್ಟದ್ದಿತೆಂದು ತಿಳಿಸುತ್ತದೆ. ದೇಶದ ರಕ್ಷಣೆಯ ಜವಾಬ್ದಾರಿಯನ್ನು ಮುಸ್ಲಿಂ ಸೈನಿಕರೂ ಆಡಳಿತದ ಜವಾಬ್ದಾರಿಯನ್ನು ಹಿಂದೂಗಳೂ ಹೊತ್ತಿದ್ದರು. ತಮ್ಮ ನಾಯಕರ ಇಲ್ಲವೆ ಇಸ್ಲಾಂ ಧರ್ಮದ ಸಂಪ್ರದಾಯ ಶರಣರ ಸಾಧನೆಗಳನ್ನು ಅತಿರೇಖ ಮಾಡಿ ಹೇಳುವ ಜಿಯಾ-ಉದ್ದೀನ್-ಭರಣಿಯಂತಹ ಆಸ್ಥಾನದ ಇತಿಹಾಸಕಾರರ ಮಾತುಗಳನ್ನೇ ನಂಬುವುದಾದರೆ ನಮಗೆ ಮಧ್ಯಕಾಲೀನ ಯುಗದ ಸ್ಪಷ್ಟ ಚಿತ್ರವು ಸಿಗಲಾರದು. ಮುಸ್ಲಿಮರು ಭಾರತಕ್ಕೆ ಬಂದಾಗ ತಮ್ಮ ಜೊತೆಯಲ್ಲಿ ಭೂಮಿಯನ್ನು ಉತ್ತು ಬಿತ್ತು ಬೆಳಸನ್ನು ಬೆಳೆಸಲು ಯಾರನ್ನೂ ಕರೆದುಕೊಂಡು ಬಂದಿರಲಿಲ್ಲ. ಅಂತೆಯೆ ಮುಸ್ಲಿಂ ಸೈನಿಕರಿಂದ ಆ ಕೆಲಸವನ್ನು ಮಾಡಿಸುವುದೂ ಸಾಧ್ಯವಿರಲಿಲ್ಲ. ವಾಸ್ತವಿಕವಾಗಿ ಭೂ ಪದ್ಧತಿಯಲ್ಲಿ ಯಾವ ಬದಲಾವಣೆಯೂ ಆಗಲಿಲ್ಲ. ಪಂಚಾಯಿತಿ ವ್ಯವಸ್ಥೆಯು ಮೊದಲಿನಂತೆಯೆ ಮುಂದುವರಿದಿದ್ದಿತು. ಹಿಂದುಗಳ ಕಾನೂನುಗಳನ್ನು ಸಂಪ್ರದಾಯಗಳನ್ನು ಹಾಗೆಯೇ ಮುಂದುವರಿಸಿಕೊಂಡು ಹೋಗಲಾಯಿತು. ಸುಲ್ತಾನನ ಅಧಿಕಾರದ ಕೇಂದ್ರಸ್ಥಾನದಲ್ಲಿ ಮಾತ್ರ ಅಲ್ಪ ಸ್ವಲ್ಪ ಬದಲಾವಣೆಗಳು ಮಾಡಲ್ಪಟ್ಟವೇ ಹೊರತು ಉಳಿದೆಲ್ಲವೂ ಎಂದಿನಂತೆಯೆ ಮುಂದುವರಿದಿದ್ದಿತು. ಈ ಎಲ್ಲ ಅಂಶಗಳಿಂದ ಟರ್ಕರ ಸರ್ಕಾರವು ಭಾರತದಲ್ಲಿ ಮಿಲಿಟರಿ ಸರ್ಕಾರವಾಗಿರಲಿಲ್ಲವೆಂದು ತಿಳಿಯಬಹುದಾಗಿದೆ.

ಟರ್ಕರು ಭಾರತಕ್ಕೆ ಬರುವ ಮೊದಲೇ ಅವರು ಪರ್ಶಿಯನ್ನರ ರೀತಿನೀತಿಗಳಿಂದ ಬಹಳಷ್ಟು ಪ್ರಭಾವಿತರಾಗಿದ್ದರು. ಪರ್ಶಿಯನ್ನರ ರಾಜತ್ವದ ಸಿದ್ಧಾಂತವನ್ನು ಅವರು ಒಪ್ಪಿಕೊಂಡಿದ್ದರು. ಪರ್ಶಿಯನ್ನರ ಹೆಸರುಗಳು, ನಾಮಧೇಯಗಳು, ಸಂಪ್ರದಾಯಗಳು ಮತ್ತು ಆಸ್ಥಾನದ ವೈಭವ ಮೊದಲಾದವು ಅವರ ಮನಸೆಳೆದಿದ್ದವು. ಟರ್ಕರು ಭಾರತದಲ್ಲಿ ಅರಬ್ಬರ ಸಂಪ್ರದಾಯಗಳಿಗೆ ಬದಲಾಗಿ ಪರ್ಶಿಯನ್ನರ ರಾಜಕೀಯ ಮತ್ತು ಆಡಳಿತ ಹಾಗೂ ಸೈನಿಕ ವ್ಯವಸ್ಥೆಗಳನ್ನು ಅನುಸರಿಸಿದರು. ಪರ್ಶಿಯನ್ನರ ರಾಜರುಗಳ ಸಂಪ್ರದಾಯಗಳು ಸುಲ್ತಾನರುಗಳ ಅವಶ್ಯಕತೆಗಳಿಗೆ ಸರಿಹೊಂದಿದವು. ಪರ್ಶಿಯನ್ನರ ಮಾದರಿಯನ್ನು ಅನುಸರಿಸಿ ಬಲ್ಬನ್ನನು ತನ್ನ ಮೊಮ್ಮಕ್ಕಳಿಗೆ ಕೈಕುಬಾದ್ ಮತ್ತು ಕೈಖುಸ್ರು ಎಂದು ಹೆಸರಿಟ್ಟಿದ್ದನು. ಸುಲ್ತಾನನಿಗೆ ಗೌರವ ತೋರಿಸುವಾಗ ತಲೆಬಾಗಿ ಭೂಮಿ ಮುಟ್ಟಿ ನಮಸ್ಕರಿಸುವ ಪದ್ಧತಿಯನ್ನು ಜಾರಿಗೆ ತರಲಾಯಿತು. ಪರ್ಶಿಯನ್ನರ ಸಡಗರದ ಹಬ್ಬವಾದ ನೌರಜ್ ಹಬ್ಬವನ್ನು ಬಹಳ ವಿಜೃಂಭಣೆಯಿಂದ ಆಚರಿಸುವ ವಿಧಾನವನ್ನು ಜಾರಿಗೆ ತರಲಾಯಿತು. ಪರ್ಶಿಯನ್ನರ ಸಂಪ್ರದಾಯಗಳು ಪರ್ಶಿಯಾದಲ್ಲಿ ಮಂಗೋಲರಿಂದ ತೀವ್ರ ಆಘಾತವನ್ನು ಹೊಂದಿದಾಗ ಅವು ದೆಹಲಿಯಲ್ಲಿ ಪ್ರಮುಖವಾಗಿ ಮುಂದುವರಿದವು. ರಾಜನ ಅಧಿರಾಕರವು ದೈವದತ್ತವಾದುದೆಂದು ಮತ್ತು ಅವನು ಭೂಮಿಯ ಮೇಲೆ ದೇವರ ಪ್ರತಿಸಿಧಿಯೆಂದು ಪರಿಗಣಿಸುವ ಪರ್ಶಿಯನ್ನರ ರಾಜಕೀಯ ಸಿದ್ಧಾಂತವನ್ನು ದೆಹಲಿಯ ಸುಲ್ತಾನರು ತಮ್ಮ ಉದ್ದೇಶ ಸಾಧನೆಗೆ ಅನುಕೂಲವಾಗಿ ಅಳವಡಿಸಿಕೊಂಡರು. ಸಮರ್ಥ ರಾಜರುಗಳ ಮತ್ತು ರಾಜಕಾರಣಿಗಳ ರಾಜಕೀಯ ತತ್ವಗಳ ಸಂಘಟನೆಯು ಮಧ್ಯಕಾಲೀನ ಯುಗದ ಪರ್ಶಿಯನ್ನರ ಜನಪ್ರಿಯ ಸಂಪ್ರದಾಯವಾಗಿತ್ತು. ಬಲ್ಬನ್ನನು ಸಹ ಮುಂದಿನ ಪೀಳಿಗೆಗೆ ಅಂತಹ ಒಂದು

ಮೇಲ್ಪಿಂಕ್ತಿಯನ್ನು ಹಾಕಿಕೊಟ್ಟನು. ಅವನ ಕೆಲವು ಅಭಿಪ್ರಾಯಗಳು ಅತ್ಯುಪಯುಕ್ತವಾಗಿದ್ದವು. ಉದಾರಹಣೆಗೆ, ಆಡಳಿತ ನಡೆಸುವುದು ಅಷ್ಟು ಸುಲಭದ ಕೆಲಸವೆಂದು ಯಾರೂ ಭಾವಿಸಬಾರದು ಎಂದು ಹೇಳುತ್ತಾನೆ. ಅತ್ಯಂತ ಹೆಚ್ಚಿನ ಜವಾಬ್ದಾರಿಯಿಂದ ಈ ಕೆಲಸವನ್ನು ನಿರ್ವಹಿಸಬೇಕು. ರಾಜನ ಹೃದಯವು ಭಗವಂತನ ಅಭೀಷ್ಟವನ್ನು ಪ್ರತಿಬಿಂಬಿಸುವಂತಿರಬೇಕು ಮತ್ತು ಅವನ ಹೃದಯವು ನಿಷ್ಕಲ್ಮಶವಾಗಿದ್ದರೆ ಮಾತ್ರ ದೇವರು ಅವನಿಗೆ ಒಲಿಯುವುದು ಸಾಧ್ಯವೆಂದು ಹೇಳಿದನು. ಯಾವನು ತನ್ನ ನಡವಳಿಕೆಗಳಿಂದ ಮುತ್ತ ಕೆಲಸಗಳಿಂದ ಜನರ ಮೆಚ್ಚಿಗೆ ಗಳಿಸುತ್ತಾನೋ ಅಂತಹವನು ಮಾತ್ರ ಸಿಂಹಾಸನದ ಮೇಲೆ ಕೂರಲು ಯೋಗ್ಯನಾಗುತ್ತಾನೆ. ರಾಜನು ಮತ್ತು ಅವನ ಅಧಿಕಾರಿಗಳು ನೀತಿ ನಿಷ್ಠೆಯುಳ್ಳವರೂ ಮತ್ತು ಪ್ರಾಮಾಣಿಕರೂ ಆಗಿರಬೇಕಾಗುತ್ತದೆ. ಅಂತವರ ಆದರ್ಶಗಳನ್ನು ಇತರರು ಅನುಸರಿಸುತ್ತಾರೆ. ರಾಜನು ವೈಭವ ಮತ್ತು ಸಾಹಸಿಯೂ ಬುದ್ಧಿವಂತನೂ ಮತ್ತು ಉಪಕಾರಿಯೂ ಆಗಿರಬೇಕು. ಅವನು ಯಶಸ್ಸು ದೊರೆಯದ ದಂಡಯಾತ್ರೆಗಳನ್ನು ಯಾವಾಗಲೂ ಕೈಗೊಳ್ಳಬಾರದು. ಅವಮರ್ಯಾದೆಯಾಗಲೀ, ಅವಮಾನವಾಗಲೀ ರಾಜನಿಗೆ ಉಚಿತವಾದುದಲ್ಲ. ಏಕೆಂದರೆ ರಾಜ ಮತ್ತು ಅವನ ಧೈರ್ಯ ಅವಳಿ ಮಕ್ಕಳಿದ್ದಂತೆ. ಈ ಕೆಲವು ಅಭಿಪ್ರಾಯಗಳಿಂದ ಸುಲ್ತಾನರ ರಾಜಕೀಯ ಆದರ್ಶಗಳ ಒಂದು ಚಿತ್ರವು ಸ್ಪಷ್ಟವಾಗಿ ಕಂಡುಬರುತ್ತದೆ.

ಈ ಮೇಲಿನ ಕೆಲವು ಅಂಶಗಳಿಂದ ಟರ್ಕರ ಸರ್ಕಾರ ವ್ಯವಸ್ಥೆಯಲ್ಲಿ ಪರ್ಶಿಯನ್ನರ ರಾಜಕೀಯ ತತ್ವಗಳು ಹೆಚ್ಚಿನ ಪ್ರಭಾವ ಬೀರಿರುವುದು ಕಂಡುಬರುತ್ತದೆ. ಪರ್ಶಿಯನ್ನರು ಇಸ್ಲಾಮಿನ ಕೆಲವು ಲಕ್ಷಣಗಳನ್ನು ತಮ್ಮ ವ್ಯವಸ್ಥೆಯಲ್ಲಿ ಅಳವಡಿಸಿಕಿಂಡಿರಲಿಲ್ಲವೆಂದು ಇದರ ಅರ್ಥವಲ್ಲ. ಟರ್ಕರು, ಪರ್ಶಿಯನ್, ಇಸ್ಲಾಮಿಕ್ ಮತ್ತು ಭಾರತೀಯ ಅಂಶಗಳನ್ನು ಸಂಯೋಜಿಸಿ ತಮ್ಮದೆ ಆದ ನೀತಿಯನ್ನು ರೂಪಿಸಿಕೊಂಡರು. ಆಡಳಿತ ವ್ಯವಸ್ಥೆಯ ಮೇಲೆ ಪರ್ಶಿಯನ್ನರ ಪ್ರಭಾವವನ್ನು ಈ ಹಿಂದೆಯೆ ವಿಚಾರಮಾಡಲಾಗಿದೆ. ಖುರಾನ್, ಹಾದಿಸ್ ಮತ್ತು ಇಜ್ಮಾಗಳಿಗನುಗುಣವಾಗಿ ನಡೆದುಕೊಳ್ಳಬೇಕೆಂಬ ಸುಲ್ತಾನನ ಅಪೇಕ್ಷೆಯು ಇಸ್ಲಾಮಿನ ಪ್ರಭಾವವನ್ನು ತೋರಿಸುತ್ತದೆ. ಷರಿಯತ್ ಎಂದು ಕರೆಯಲ್ಪಡುವ ಇಸ್ಲಾಮಿನ ಕಾನೂನುಗಳನ್ನು ಇಸ್ಲಾಂ ವಿದ್ವಾಂಸ ದಾರ್ಶನಿಕರು ರೂಪಿಸಿದರು. ಅವರು ರೂಪಿಸಿದ ಈ ಕಾನೂನುಗಳು ಷರಿಯತ್‌ಗನುಸಾರವಾಗಿವೆಯೆಂದು ಸುಲ್ತಾನರು ಭಾವಿಸಿದರು. ಇದಲ್ಲದೆ ಇಸ್ಲಾಂ ಧರ್ಮವು ಅಧಿಕಾರದಲ್ಲಿರುವವರಿಗೆ ಮುಸ್ಲಿಮರ ನಿಷ್ಠೆಯನ್ನು ಪಡೆದುಕೊಳ್ಳಲೋಸುಗ ಸುಲ್ತಾನರುಗಳು ಅವರ ಕೆಲಸಗಳು ರಾಜಕೀಯವಾಗಿದ್ದರೂ ತಾವು ಧರ್ಮದ ರಕ್ಷಕರೆಂದು ತೋರ್ಪಡಿಸಿಕೊಂಡರು. ಎರಡನೆಯದಾಗಿ ಕುತ್ಬಾದಲ್ಲಿ ಸುಲ್ತಾನನ ಹೆಸರನ್ನು ಸೇರಿಸಲಾಯಿತು. ಇದು ಒಂದು ಸಾಂಪ್ರದಾಯಿಕ ನಿಯಮ. ಸಾಮೂಹಿಕ ಪ್ರಾರ್ಥನೆಯಲ್ಲಿ ಆಡಳಿತ ನಡೆಸುವ ತಮ್ಮ ದೊರೆಯನ್ನು ಜ್ಞಾಪಿಸಿಕೊಳ್ಳುವುದು ಯೋಗ್ಯವಾದುದು. ಅಂದಿನ ದಿವಸಗಳಲ್ಲಿ ಮುಸ್ಲಿಂ ಸಮಾಜವು ಸಂಘಟಿತ ಸಮಾಜವಾಗಿದ್ದರಿಂದ ರಾಜನಾದವನು ಅವರ ಧಾರ್ಮಿಕ ಭಾವನೆಗಳಿಗೆ ನೋವುಂಟಾಗದಂತೆ ನೋಡಿಕೊಳ್ಳಲು ಹೆಚ್ಚಿನ ಎಚ್ಚರಿಕೆ ವಹಿಸುತ್ತಿದ್ದನು. ಮೂರನೆಯದಾಗಿ ಖಲೀಫನ ಹುದ್ದೆಯನ್ನೂ ಉಳಿಸಿಕೊಂಡರೂ ಅದು ನಾಮಮಾತ್ರವಾಗಿತ್ತು. ಕಲೀಫನ ಅಧೀನರೆಂಬುದನ್ನು ತೋರಿಸಿಕೊಳ್ಳುವ ಸಲುವಾಗಿ

ಅನೇಕ ಸುಲ್ತಾನರು ಈ ಬಿರುದನ್ನು ಧರಿಸಿದರು. ಇಲ್ತಮಿಷ್, ಅಲ್ಲಾವುದ್ದೀನ್ ಮತ್ತು ಘಿಯಾಸುದ್ದೀನರು ನಾಸಿರ್-ಇ-ಅಮಿರ್-ಉಲ್-ಮುಮ್‌ನಿನ್ ಅಥವ ಧರ್ಮದ ನಾಯಕನ ಸಹಾಯಕರೆಂದು ಕರೆದುಕೊಂಡರು. ಅಲ್ಲಾವುದ್ದೀನನು ಯಾಮಿನ್-ಇ-ಖಿಲಾಫತ್ ಅಥವ ಖಲೀಫನ ಬಲಗೈ ಮನುಷ್ಯ ಎಂಬ ಮತ್ತೊಂದು ಬಿರುದನ್ನು ಇಟ್ಟುಕೊಂಡಿದ್ದನು. ಅಂತೆಯೆ ಫಿರೋಜ್ ತುಘಲಕನು ನಾಯಿಬ್-ಇ-ಖಲೀಫ ಅಥವ ಖಲೀಫನ ಪ್ರತಿನಿಧಿ ಎಂದು ಕರೆದುಕೊಂಡಿದ್ದನು. ಆದರೆ ದೆಹಲಿಯ ಸುಲ್ತಾನರು ವಾಸ್ತವವಾಗಿ ಸ್ವತಂತ್ರರಾಗಿದ್ದು ಯಾವ ವಿದೇಶೀಯ ಅಧಿಕಾರಕ್ಕೂ ನಿಷ್ಠೆಯನ್ನು ತೋರಿಸುತ್ತಿರಲಿಲ್ಲ.

ದೆಹಲಿಯ ಸುಲ್ತಾನರುಗಳು ಭಾರತದಲ್ಲಿ ಆಚರಣೆಯಲ್ಲಿದ್ದ ಹಲವಾರು ವ್ಯವಸ್ಥೆಗಳನ್ನು ತಾವೂ ಅನುಸರಿಸಿದರು. ಉತ್ತರಾಧಿಕಾರತ್ವದ ನೀತಿಯು ಪೂರ್ಣವಾಗಿ ಭಾರತೀಯವಾಗಿದ್ದಿತು. ಉತ್ತರಾಧಿಕಾರಿಯಾಗಿ ಗಂಡಸನ್ನು ಮಾತ್ರ ಚುನಾಯಿಸಬೇಕೆಂದು ಹೇಳುವ ಇಸ್ಲಾಂ ಧರ್ಮದ ಕಾನೂನಿಗೆ ಬದಲಾಗಿ ರಜಪೂತರ ನೀತಿಯಾದ ವಂಶಾನುಗತವಾದ ರಾಜತ್ವ ಪದ್ಧತಿಯನ್ನು ಅನುಸರಿಸಿದರು. ಇದರಿಂದಾಗಿ ರಜಿಯಳಂತ ಹೆಂಗಸನ್ನು ಸಹ ಸಿಂಹಾಸನಕ್ಕೆ ತರಲು ಸಾಧ್ಯವಾಯಿತು. ಅಪ್ರಾಪ್ತ ವಯಸ್ಸು ಅದಕ್ಕೆ ಅಡ್ಡಬರುವಂತಿರಲಿಲ್ಲ. ಕೈಕುಬಾದನು ಪಾರ್ಶ್ವರೋಗಿಯಾಗಿದ್ದರೂ ಸುಲ್ತಾನನಾಗಿ ಮುಂದುವರಿದಿದ್ದನು. ಮೇಲಾಗಿ ತಲೆತಲಾಂತರಗಳಿಂದಲೂ ಅನೂಚಾನವಾಗಿ ಮುಂದುವರಿದು ಕೊಂಡು ಬಂದಿದ್ದ ಸ್ಥಳೀಯ ಸರ್ಕಾರ ಪದ್ಧತಿ ಹಾಗೂ ಗ್ರಾಮಾಡಳಿತವನ್ನು ಸ್ವಲ್ಪವೂ ಬದಲಿಸದೆ ಮುಂದುವರಿಸಿಕೊಂಡು ಬರಲಾಯಿತು.

**ಸರ್ಕಾರದ ರಚನೆ**

ದೆಹಲಿಯ ಸುಲ್ತಾನರ ಸರ್ಕಾರವು ಕೇಂದ್ರೀಕೃತ ದರ್ಪಿಷ್ಟ ಪ್ರಭುತ್ವವಾಗಿದ್ದಿತು. ರಾಜ್ಯದ ಸರ್ವೋಚ್ಚ ಅಧಿಕಾರಿಯಾಗಿದ್ದ ಸುಲ್ತಾನನು ಎಲ್ಲ ಅಧಿಕಾರಗಳನ್ನು ತನ್ನ ಕೈಯಲ್ಲಿ ಕೇಂದ್ರೀಕರಿಸಿಕೊಂಡಿದ್ದನು. ಅವನು ನಾಗರಿಕ ಮತ್ತು ಸೈನಿಕ ಅಧಿಕಾರಗಳೆರಡನ್ನೂ ಹೊಂದಿದ್ದನು. ಅವನು ಮುಖ್ಯ ಕಾರ್ಯನಿರ್ವಾಹನಾಗಿದ್ದನು. ಶಾಸನಕಾರನಾಗಿದ್ದನು ಮತ್ತು ನ್ಯಾಯದ ಬಗ್ಗೆ ಅಂತಿಮ ತೀರ್ಪುಗಾರನಾಗಿದ್ದನು. ಸೈನ್ಯದ ಮುಖ್ಯ ದಂಡನಾಯಕನೂ ಆಗಿದ್ದನು.

ಸುಲ್ತಾನನು ರಾಜ್ಯದ ಆಡಳಿತ ನಿರ್ವಹಣೆಗೆ ಹಲವಾರು ಅಧಿಕಾರಿಗಳನ್ನು ನೇಮಿಸಿಕೊಂಡಿದ್ದನು. ಆಡಳಿತ ನಿರ್ವಹಣೆಗೆ ಅನೇಕ ಇಲಾಖೆಗಳನ್ನು ಏರ್ಪಡಿಸಲಾಗಿತ್ತು. ಅವುಗಳಲ್ಲಿ ದಿವಾನ್-ಇ-ವಿಜಾರತ್ (Diwan-i-wizarat) ದಿವಾನ್-ಇ-ಆರಿಜ್ (Diwan-i-Ariz) ದಿವಾನ್-ಇ-ಇನ್ಶಾ (Diwan-i-Insha) ದಿವಾನ್-ಇ-ರಿಸಾಲತ್ (Diwna-i-risalat) ಎಂಬ ನಾಲ್ಕು ವಿಭಾಗಗಳು ಬಹುಮುಖ್ಯವಾಗಿದ್ದು ಅವುಗಳನ್ನು ರಾಜ್ಯದ ನಾಲ್ಕು ಆಧಾರಸ್ತಂಭಗಳೆಂದು ಪರಿಗಣಿಸಲಾಗಿತ್ತು. ಇವುಗಳಲ್ಲಿ ಮೊದಲನೆಯದಾದ ದಿವಾನ್-ಇ-ವಿಜಾರತ್‌ಗೆ ವಜೀರನು ಮುಖ್ಯನಾಗಿರುತ್ತಿದ್ದನು. ವಜೀರನು ರಾಜ್ಯದ ಪ್ರಧಾನಮಂತ್ರಿಯಾಗಿದ್ದನು. ಸುಲ್ತಾನನನ್ನು ಬಿಟ್ಟರೆ ಅವನು ರಾಜ್ಯದ ಲೌಕಿಕ ಅಧಿಕಾರಿಗಳಿಗೆ ಮುಖ್ಯ ಅಧಿಕಾರಿಯಾಗಿದ್ದನು. ರಾಜ್ಯದ ಸಾರ್ವಜನಿಕ ಆಡಳಿತದ ಯಾವ ವಿಷಯವೂ ಇವನ

ಗಮನಕ್ಕೆ ಬರದೆ ನಡೆಯುತ್ತಿರಲಿಲ್ಲವಾದರೂ ಇವನ ಇಲಾಖೆಯು ಮುಖ್ಯವಾಗಿ ಕಂದಾಯ ಮತ್ತು ಹಣಕಾಸಿನ ಮೇಲ್ವಿಚಾರಣೆಯನ್ನು ನೋಡಿಕೊಳ್ಳುತ್ತಿತ್ತು. ಇವನ ಕೈಕೆಳಗೆ ಅನೇಕ ಅಧಿಕಾರಿಗಳಿದ್ದರು. ಅವರಲ್ಲಿ ನಾಯಿಬ್-ಇ-ವಜೀರ್ (ಉಪಮಂತ್ರಿ) ಮುಸ್ರಿಫ್-ಇ-ಮುಮಲಿಕ್ (Munshrif-i-mumalik) ಅಥವ ಅಕೌಂಟೆಟ್ ಜನರಲ್ ಮತ್ತು ಮುಸ್ತಾಫಿ-ಇ-ಮುಮಲಿಕ್ (Mustaufl-i-mumalik) ಆಡಿಟರ್ ಜನರಲ್ ಬಹು ಮುಖ್ಯರಾದವರು. ಎರಡನೆಯ ವಿಭಾಗವಾದ ದಿವಾನಿ-ಇ-ಅರಿಜ್‌ಗೆ ಅರಿಜ್-ಇ-ಮುಮಲಿಕ್ ಎಂಬವನು ಮುಖ್ಯ ಅಧಿಕಾರಿಯಾಗಿದ್ದನು. ಇವನು ಸೈನಿಕ ಸಿಬ್ಬಂಧಿಯ ನೇಮಕ ಮತ್ತು ಅದರ ಮೇಲ್ವಿಚಾರಣೆ ನೋಡಿಕೊಳ್ಳುವ ಹೊಣೆಗಾರಿಕೆಯನ್ನು ಹೊತ್ತಿದ್ದನು. ಮೂರನೆಯ ವಿಭಾಗವಾದ ದಿವಾನ್-ಇ-ಇನ್ಸಾ ಎಂಬುದು ಸುಲ್ತಾನನ ಪತ್ರವ್ಯವಹಾರಗಳ ಅಂದರೆ ದಿನನಿತ್ಯದ ಆಡಳಿತದ ವ್ಯವಹಾರಗಳ ಬಗ್ಗೆ ಮತ್ತು ಸುಲ್ತಾನನಿಗೂ ರಾಜ್ಯದ ಇತರ ಪ್ರಮುಖ ಅಧಿಕಾರಿಗಳೊಂದಿಗೆ ಹಾಗೂ ಇತರ ರಾಜ್ಯಗಳ ರಾಜರುಗಳೊಂದಿಗೆ ನಡೆಯುತ್ತಿದ್ದ ರಹಸ್ಯಪತ್ರ ವ್ಯವಹಾರಗಳು ಈ ಇಲಾಖೆಯ ಮೂಲಕ ನಿರ್‍ಯಾತಗೊಳ್ಳುತ್ತಿದ್ದವು. ನಾಲ್ಕನೆಯ ವಿಭಾಗವಾದ ದಿವಾನ್-ಇ-ರಿಸಾಲತ್ ಧಾರ್ಮಿಕ ವಿಷಯಗಳ ಮತ್ತು ಧಾರ್ಮಿಕ ದತ್ತಿಗಳ ಮೇಲ್ವಿಚಾರಣೆ ನೋಡಿಕೊಳ್ಳುತ್ತಿತ್ತು. ಸಾದರ್-ಉಸ್-ಸುದರ್ (Sudar-us-Sudar) ಎಂಬವನು ಇದರ ಮುಖ್ಯಾಧಿಕಾರಿಯಾಗಿದ್ದನು. ಕಾಜಿ-ಉಲ್-ಕುಜಾತ್ ಎಂಬ ಅಧಿಕಾರಿಯು ರಾಜ್ಯದ ನ್ಯಾಯದ ಇಲಾಖೆಯ ಮುಖ್ಯಾಧಿಕಾರಿಯೂ ಆಗಿದ್ದು ಸಿವಿಲ್ ಮತ್ತು ಕ್ರಿಮಿನಲ್ ವ್ಯಾಜ್ಯಗಳ ಮೇಲ್ವಿಚಾರಣೆ ನೋಡಿಕೊಳ್ಳುತ್ತಿದ್ದನು ಮತ್ತು ಪ್ರಾಂತ್ಯಗಳ ಮಟ್ಟದಲ್ಲಿ ವ್ಯಾಜ್ಯಗಳನ್ನು ತೀರ್ಮಾನಿಸಲು ಕಾಜಿಗಳೆಂಬ ಅಧಿಕಾರಿಗಳನ್ನು ನೇಮಿಸುತ್ತಿದ್ದನು. ಸುದ್ದಿ ಸಮಾಚಾರಗಳ ಮೇಲ್ವಿಚಾರಣೆಗೆ ಬರಿದ್-ಇ-ಮುಮಲಿಕ್ ಎಂಬ ಅಧಿಕಾರಿಯಿದ್ದನು. ರಾಜ್ಯದಲ್ಲಿ ನಡೆಯುವುದನ್ನೆಲ್ಲಾ ಸುಲ್ತಾನನಿಗೆ ತಿಳಿಸುವುದು ಇವನ ಮುಖ್ಯ ಕೆಲಸವಾಗಿತ್ತು. ಈ ಮೇಲಿನ ಪ್ರಮುಖ ಅಧಿಕಾರಿಗಳೇ ಅಲ್ಲದೆ ಇವರ ಕೆಳಗೆ ಅನೇಕ ಸಂಖ್ಯೆಯಲ್ಲಿ ಇತರ ಮಂತ್ರಿಗಳಿದ್ದು ರಾಜನ ಗೃಹದ ಮೇಲ್ವಿಚಾರಣೆ, ಕೈಗಾರಿಕೆಗಳು, ವ್ಯವಸಾಯ, ಗೂಢಚಾರವ್ಯವಸ್ಥೆ, ಗುಲಾಮರ ಮೇಲ್ವಿಚಾರಣೆ, ದಾನದತ್ತಿಗಳ ನಿರ್ವಹಣೆ ಮೊದಲಾದವುಗಳನ್ನು ನೋಡಿಕೊಳ್ಳುತ್ತಿದ್ದರು. ಮಂತ್ರಿಗಳ ಸಂಖ್ಯೆಯು ಕಾಲಕಾಲಕ್ಕೆ ವ್ಯತ್ಯಾಸಗೊಳ್ಳುತ್ತಿದ್ದು ಅವರ ಅಧಿಕಾರ ಮತ್ತು ಸ್ಥಾನಮಾನಗಳಲ್ಲೂ ಏರುಪೇರುಗಳಾಗುತ್ತಿದ್ದವು. ಸುಲ್ತಾನರು ಪ್ರಬಲರಾಗಿದ್ದರೆ ಮಂತ್ರಿಗಳು ಕೇವಲ ಅವನ ಕಾರ್ಯದರ್ಶಿಗಳಾಗಿದ್ದು ಸುಲ್ತಾನನ ಆಜ್ಞೆಗಳನ್ನು ತಪ್ಪದೆ ಜಾರಿಗೆ ತರುತ್ತಿದ್ದರು.

**ಪ್ರಾಂತ್ಯಾಡಳಿತ**

ಸಾಮ್ರಾಜ್ಯವು ಆಡಳಿತದ ಅನುಕೂಲಕ್ಕಾಗಿ ಪ್ರಾಂತ್ಯಗಳು ಮತ್ತು ಅಧೀನ ರಾಜ್ಯಗಳಾಗಿ ವಿಭಾಗಿಸಲ್ಪಟ್ಟಿದ್ದಿತು. ಪ್ರಾಂತ್ಯಗಳ ಸಂಖ್ಯೆಯು ಆಗಾಗ್ಗೆ ಹೆಚ್ಚು ಕಡಿಮೆಯಾಗುತ್ತಿತ್ತು ಮತ್ತು ಅವುಗಳ ಸಂಖ್ಯೆ ಇಪ್ಪತ್ತು ಅಥವಾ ಇಪ್ಪತ್ತೈದು ಇದ್ದಿತೆಂದು ಹೇಳಲಾಗಿದೆ. ಅಂತೆಯೆ ಅವುಗಳು ವಿಸ್ತೀರ್ಣದಲ್ಲೂ ಒಂದೇ ತೆರನಾಗಿರಲಿಲ್ಲ. ಪರ್ಶಿಯನ್ ಬರಹಗಾರರ ಬರವಣಿಗೆಗಳಿಂದ ಮಿಲಿಟರಿ ದೊಡ್ಡ ಗೌರ್ನರುಗಳ ಅಧೀನದಲ್ಲಿ ವಾಲಿಸ್ (walis) ಎಂದು ಕರೆಯಲ್ಪಡುತ್ತಿದ್ದ ದೊಡ್ಡ ದೊಡ್ಡ

ಪ್ರಾಂತ್ಯಗಳಿದ್ದುವೆಂದೂ ಮತ್ತು ಈ ಅಧಿಕಾರಿಗಳು ಹೆಚ್ಚಿನ ಅಧಿಕಾರಗಳನ್ನು ಹೊಂದಿದ್ದರೆಂದು ತಿಳಿದುಬರುತ್ತದೆ. ಸಣ್ಣ ಪ್ರಾಂತ್ಯಗಳನ್ನು ಇಕ್ತಾಸ್ (Iqtas) ಎಂದು ಕರೆಯಲಾಗುತ್ತಿದ್ದು ಅವುಗಳ ಮೇಲ್ವಿಚಾರಣೆಯನ್ನು ನೋಡಿಕೊಳ್ಳಲು 'ಮುಕ್ತಿಸ್' (Muqtis) ಎಂಬ ಅಧಿಕಾರಿಗಳಿದ್ದರು. ಇವರು ಹೆಚ್ಚಿನ ಅಧಿಕಾರಗಳನ್ನು ಹೊಂದಿರಲಿಲ್ಲ. ಸಾಮಾನ್ಯವಾಗಿ ಗೌರ್ನರುಗಳು ತಮ್ಮದೇ ಆದ ಸೈನಿಕ ಸಿಬ್ಬಂದಿಯನ್ನು ಹೊಂದಿದ್ದು ತಮ್ಮ ತಮ್ಮ ಅಧೀನದಲ್ಲಿದ್ದ ಪ್ರಾಂತ್ಯಗಳಲ್ಲಿನ ಆಡಳಿತದ ಪೂರ್ಣ ಜವಾಬ್ದಾರಿಯನ್ನು ಹೊಂದಿದ್ದರು. ಕೇಂದ್ರದಲ್ಲಿ ದುರ್ಬಲ ಸುಲ್ತಾನರು ಅಧಿಕಾರರೂಢರಾಗಿದ್ದಾಗ ಪ್ರಾಂತೀಯ ಗರ್ವರುಗಳು ವಸ್ತುತಃ ಸ್ವತಂತ್ರ ರಾಜರುಗಳಂತೆ ವರ್ತಿಸಿ ಮಿತಿಯಿಲ್ಲದೆ ಅಧಿಕಾರಗಳನ್ನು ಜರುಗಿಸುತ್ತಿದ್ದರು.

**ಸ್ಥಳೀಯ ಸರ್ಕಾರ**

ಸುಲ್ತಾನರ ಸಾಮ್ರಾಜ್ಯವು ಕಾಲಕ್ರಮದಲ್ಲಿ ಹೆಚ್ಚು ಹೆಚ್ಚು ವಿಸ್ತಾರವಾದ ಹಾಗೆಲ್ಲಾ ದೊಡ್ಡ ದೊಡ್ಡ ಪ್ರಾಂತ್ಯಗಳನ್ನು ಷಿಕ್ಕಾಸ್ (Shiqqs) ಎಂದು ವಿಭಜಿಸಿ ಅವುಗಳ ಮೇಲ್ವಿಚಾರಣೆಗೆ 'ಷಿಕ್ದಾರ್ಸ್' ಎಂಬ ಮಿಲಿಟರಿ ಅಧಿಕಾರಿಗಳನ್ನು ನೇಮಕ ಮಾಡಲಾಗಿತ್ತು. ಇವುಗಳ ನಂತರದ ಹಂತವು ಅನೇಕ ಹಳ್ಳಿಗಳ ಸಮೂಹದಿಂದ ಕೂಡಿದ 'ಫರಗಣ'ಗಳಾಗಿದ್ದವು. ಇವುಗಳ ಮೇಲ್ವಿಚಾರಣೆಗೆ ಅಮಿಲ್ (Amil) ಕಾನುಂಗೋ (Kanungo) ಮತ್ತು ಕಾರಕೂನ (Karkun) ಎಂಬ ಅಧಿಕಾರಿಗಳಿದ್ದರು. ಇವರು ಬಹಳ ಮಟ್ಟಿಗೆ ಹಿಂದುಗಳಾಗಿದ್ದರು, ಹಳ್ಳಿಗಳು ಆಡಳಿತ ವ್ಯವಸ್ಥೆಯ ಕಡೆಯ ಹಂತವಾಗಿದ್ದು ಅವುಗಳ ಮೇಲ್ವಿಚಾರಣೆಯನ್ನು ನೋಡಿಕೊಳ್ಳಲು 'ಪತ್ವಾರಿ' (Patwari) ಎಂಬ ಅಧಿಕಾರಿಯಿದ್ದನು. ಗ್ರಾಮಗಳಲ್ಲಿನ 'ಪಂಚಾಯಿತಿ' ಮತ್ತಿತರ ಗ್ರಾಮಸಭೆಗಳು ಮೊದಲಿನಂತೆಯೆ ಮುಂದುವರಿದಿದ್ದವು. ನಗರಾಡಳಿತವನ್ನು ಕೊತ್ವಾಲ ಎಂಬ ಅಧಿಕಾರಿಯು ನೋಡಿಕೊಳ್ಳುತ್ತಿದ್ದನು. ನಗರದಲ್ಲಿ ಶಾಂತಿ ಶಿಸ್ತುಗಳನ್ನು ಕಾಪಾಡುವುದು ಇವನ ಕೆಲಸವಾಗಿತ್ತು.

**ಕಂದಾಯ ಪದ್ಧತಿ**

ಷರಿಯತ್ ಕಾನೂನಿನಿಂದ ಅಂಗೀಕೃತವಾದ ಸರ್ಕಾರದ ರೆವಿನ್ಯೂ ವರಮಾನ ಈ ರೀತಿ ಇದ್ದಿತು. ಮುಸಲ್ಮಾನರು ತಮ್ಮ ಭೂಮಿಯ ಉತ್ಪಾದನೆಯ ಹತ್ತನೆ ಒಂದು ಭಾಗವನ್ನು ಭೂಕಂದಾಯವಾಗಿ (ಉಷರ್) ಸರ್ಕಾರಕ್ಕೆ ಕೊಡಬೇಕಿತ್ತು. ಹಿಂದೂ ಜಮೀನ್ದಾರರಿಂದ ಮತ್ತು ಹಿಂದುಗಳ ಮುಖಂಡರಿಂದ 'ಖಿರಾಜ್' ಅಥವ ಭೂಕಂದಾಯವನ್ನು ವಸೂಲಿ ಮಾಡಲಾಗುತ್ತಿತ್ತು. ವಿಗ್ರಹಾರಾಧಕರ ವಿರುದ್ಧ ಮಾಡಿದ ಯುದ್ಧಗಳಲ್ಲಿ ವಶಪಡಿಸಿಕೊಂಡ ಐಶ್ವರ್ಯದಲ್ಲಿ ಐದನೆ ಒಂದು ಭಾಗ (ಖಾಮ್ಸ್). ಮುಸ್ಲಿಮರ ಮೇಲೆ ವಿಧಿಸಲಾಗಿದ್ದ 'ಜಕತ್' ಎಂಬ ತೆರಿಗೆ ಮತ್ತು ಮುಸ್ಲಿಮರಲ್ಲದವರ ಮೇಲೆ ವಿಧಿಸಲಾಗಿದ್ದ 'ಜಿಸಿಯಾ' ಎಂಬ ತಲೆಗಂದಾಯವು ಸರ್ಕಾರದ ವರಮಾನಗಳಾಗಿದ್ದವು. ಇವುಗಳಲ್ಲದೆ ಸರ್ಕಾರವು ಗಣಿಗಳು, ಗುಪ್ತನಿಧಿ, ವ್ಯಾಪಾರ ವಸ್ತುಗಳು ಹಾಗೂ ಇತರ ಚಿಲ್ಲರೆ ವಸ್ತುಗಳ ಮೇಲೆ ತೆರಿಗೆಗಳನ್ನು ವಿಧಿಸಿ ಆದಾಯವನ್ನು ಹೆಚ್ಚಿಸಿಕೊಳ್ಳುತ್ತಿತ್ತು.

ಇವುಗಳಲ್ಲೆಲ್ಲಾ ಭೂಕಂದಾಯವು ಸರ್ಕಾರದ ಬಹುಮುಖ್ಯ ವರಮಾನವಾಗಿತ್ತು.

ಕಂದಾಯ ವಸೂಲಿಯ ಅನುಕೂಲಕ್ಕಾಗಿ ಭೂಮಿಯನ್ನು ನಾಲ್ಕು ವರ್ಗಗಳಾಗಿ ವಿಂಗಡಿಸಲಾಗಿತ್ತು. ಕೇಂದ್ರ ಸರ್ಕಾರದ ನೇರವಾದ ಆಡಳಿತಕ್ಕೊಳಪಟ್ಟಿದ್ದ 'ಖಾಲ್ಸಾ' ಅಥವ ರಾಜನ ಭೂಮಿ, ಸೈನಿಕ ಅಧಿಕಾರಿಗಳಿಗೆ ಕೆಲವು ವರ್ಷಗಳವರೆಗೆ ಇಲ್ಲವೆ ಜೀವಂತ ಕೊಡಲಾಗಿದ್ದ 'ಇಕ್ತಾಸ್' ಮುಸ್ಲಿಂ ಧರ್ಮಗುರುಗಳಿಗೆ ಮತ್ತು ವಿದ್ವಜ್ಜನರಿಗೆ ಕೊಡಲಾಗಿದ್ದ ಇನಾಂ ಅಥವ ವಾಕ್ಪ್ (waqf) ಭೂಮಿ, ಪೊಗದಿಯನ್ನು ಕೊಡಬೇಕಾಗಿದ್ದ ಹಿಂದೂ ನಾಯಕರು ಹೊಂದಿದ್ದ ಭೂಮಿಯು ಈ ವರ್ಗಗಳಾಗಿದ್ದವು. ಈ ರೀತಿಯ ಭೂ ವಂಗಡಣೆಯು ದೆಹಲಿಯ ಸುಲ್ತಾನರ ಅಧಿಕಾರದಾದ್ಯಂತವೂ ಮುಂದುವರಿದಿದ್ದಿತು. ದೆಹಲಿಯ ಸುಲ್ತಾನರುಗಳಾದ ಅಲ್ಲಾವುದ್ದೀನ್‌ಖಿಲ್ಜಿ, ಘಿಯಾಸುದ್ದೀನ್ ತುಘಲಕ್ ಹಾಗೂ ಫಿರೋಜ್ ತುಘಲಕನು ವ್ಯಾಪಕವಾದ ಭೂ ಸುಧಾರಣೆಗಳನ್ನು ಜಾರಿಗೆ ತಂದಿದ್ದರು. ಅಲ್ಲಾವುದ್ದೀನನು ರಾಜ್ಯದ ಖಜಾನೆಯನ್ನು ತುಂಬಲು ಜಾರಿಗೆ ತಂದ ಕಟುತರ ಮತ್ತು ಸಮರ್ಥವಾದ ಕಂದಾಯ ವಸೂಲಿ ಕ್ರಮಗಳು ದಂಗೆಯೇಳಲು ಅವಕಾಶ ಕಲ್ಪಿಸಿ ಕೊಟ್ಟಿದ್ದವು. ಘಿಯಾಸುದ್ದೀನ್ ಮತ್ತು ಫಿರೋಜ್ ತುಘಲಕರು ವಸೂಲಿಯಲ್ಲಿದ್ದ ಕಟುತರ ನಿಯಮಗಳನ್ನು ಸಡಿಲಗೊಳಿಸಿದರು. ಫಿರೋಜ್‌ಷಹ ತುಘಲಕನು ವ್ಯವಸಾಯ ಸುಧಾರಣೆಗಾಗಿ ಮಾಡಿದ ದುಂದು ವೆಚ್ಚವು ಮತ್ತು ಅವನು ಜಾರಿಗೆ ತಂದ ಜಾಗೀರು ಪದ್ಧತಿಯು ಜಾಗೀರುದಾರರ ಪ್ರಾಬಲ್ಯಕ್ಕೆ ಅವಕಾಶ ಕಲ್ಪಿಸಿಕೊಟ್ಟು ಸುಲ್ತಾನನ ಅಧಿಕಾರಕ್ಕೆ ಧಕ್ಕೆಯನ್ನು ತಂದೊಡ್ಡಿತು.

ದೆಹಲಿಯ ಸುಲ್ತಾನರ ಕಾಲದಲ್ಲಿ ಕಂದಾಯ ವಿಧಿಸುತ್ತಿದ್ದುದರ ಪ್ರಮಾಣದ ಬಗ್ಗೆ ಏಕರೀತಿಯ ವ್ಯವಸ್ಥೆಯು ಇದ್ದಂತೆ ಕಂಡುಬರುವುದಿಲ್ಲ. ಅದು ಒಬ್ಬೊಬ್ಬ ಸುಲ್ತಾನನ ಕಾಲದಲ್ಲೂ ವ್ಯತ್ಯಾಸಗೊಳ್ಳುತ್ತಿದ್ದುದಾಗಿ ಕಂಡುಬರುತ್ತದೆ. ಅಲ್ಲಾವುದ್ದೀನ್ ಖಿಲ್ಜಿಯ ಕಾಲದಲ್ಲಿ ಭೂಮಿಯ ಒಟ್ಟು ಉತ್ಪಾದನೆಯ ಅರ್ಧಭಾಗವನ್ನು ಕಂದಾಯವಾಗಿ ವಸೂಲಿ ಮಾಡಲಾಗುತ್ತಿತ್ತು. ತರುವಾಯ ಆಳಿದ ದೆಹಲಿಯ ಸುಲ್ತಾನರು ಕಂದಾಯ ವಸೂಲಿಯಲ್ಲಿ ಸ್ವಲ್ಪ ಭಾಗವನ್ನು ಕಡಿಮೆ ಮಾಡಿದುದಾಗಿ ಕಂಡುಬರುತ್ತದೆ. ಒಟ್ಟಾರೆ ಹೇಳುವುದಾದರೆ ಒಟ್ಟು ಉತ್ಪಾದನೆಯ 1/5 ಭಾಗವನ್ನು ಕಂದಾಯವಾಗಿ ವಸೂಲಿ ಮಾಡಲಾಗುತ್ತಿತ್ತೆಂದು ಐ.ಎಚ್. ಖುರೇಷಿಯವರು ಅಭಿಪ್ರಾಯಪಡುವರು.

ವರಮಾನದ ಇತರ ಆದಾಯಗಳಲ್ಲಿ ಜೆಸಿಯ ಅಥವ ತಲೆಗಂದಾಯವು ಬಹಳ ಮುಖ್ಯವಾದುದಾಗಿತ್ತು. ಇದನ್ನು ಮುಸ್ಲಿಮರಲ್ಲದವರ ಮೇಲೆ ವಿಧಿಸಲಾಗಿತ್ತು. ಈ ತೆರಿಗೆಯ ಬಗ್ಗೆ ಇತಿಹಾಸಕಾರರು ಭಿನ್ನಾಭಿಪ್ರಾಯಗಳನ್ನು ವ್ಯಕ್ತಪಡಿಸಿರುವರು. ಇಸ್ಲಾಂ ಧರ್ಮದ ನಿಯಮದ ಪ್ರಕಾರ ಈ ತೆರಿಗೆಯನ್ನು ಮುಸ್ಲಿಮರಲ್ಲದವರು ಸರ್ಕಾರದಿಂದ ತಾವು ಪಡೆಯುತ್ತಿದ್ದ ರಕ್ಷಣೆಗೂ ಹಾಗೂ ಸೈನ್ಯದಲ್ಲಿ ಸೇವೆ ಸಲ್ಲಿಸುವುದರ ಬಗ್ಗೆ ಪಡೆದಿದ್ದ ರಿಯಾಯಿತಿಗೆ ಬದಲಾಗಿ ಕೊಡಬೇಕಾಗಿತ್ತು. ಆಧುನಿಕ ಕಾಲದ ಇತಿಹಾಸಕಾರರಾದ ನಿಜಾಮಿ ಮತ್ತು ಖುರೇಷಿ ಮೊದಲಾದವರು ಜೆಸಿಯ ತಲೆಗಂದಾಯವು ಮುಸ್ಲಿಮರಲ್ಲದವರು ಸೈನಿಕ ಸೇವೆಗೆ ಬದಲಾಗಿ ಕೊಡಬೇಕಾಗಿದ್ದ ಕಂದಾಯವಾಗಿದ್ದಿತೆಂದು ಅಭಿಪ್ರಾಯಪಡುವರು. ಅಲ್ಲದೆ ಅವರು ಇನ್ನೂ ಮುಂದುವರಿದು ಫಿರೋಜ್ ತುಘಲಕನು ಅಧಿಕಾರಕ್ಕೆ ಬರುವ ತನಕವೂ, ಬ್ರಾಹ್ಮಣ

ಪುರೋಹಿತರು ಸ್ತ್ರೀಯರು ಮತ್ತು ಮಕ್ಕಳು ಹಾಗೂ ವ್ಯವಸಾಯಗಾರರು ಈ ತೆರಿಗೆಯಿಂದ ವಿನಾಯಿತಿ ಪಡೆದಿದ್ದರೆಂದು ತಿಳಿಸುತ್ತಾರೆ. ಇಸ್ಲಾಮಿಕ್ ರಾಜ್ಯಗಳಲ್ಲಿ ಈ ತೆರಿಗೆಯನ್ನು ವಿಧಿಸುವುದರ ಮೂಲೋದ್ದೇಶವೇನೇ ಇದ್ದರೂ. ಸುಲ್ತಾನರ ಅಧಿಕಾರವು ಭಾರತದಲ್ಲಿ ಸ್ಥಾಪಿತವಾದ ಮೇಲೆ ಅದು ಧಾರ್ಮಿಕ ಮತ್ತು ಜಾತೀಯ ಸ್ವರೂಪವನ್ನು ಪಡೆದುಕೊಂಡಿತು. ಈ ತೆರಿಗೆಯು ವ್ಯಕ್ತಿಯ ಒಟ್ಟು ಐಶ್ವರ್ಯವನ್ನು ಅವಲಂಭಿಸಿದ್ದು ಅವನು ವರ್ಷಕ್ಕೆ ಹತ್ತು, ಇಪ್ಪತ್ತು ಇಲ್ಲವೆ ನಲವತ್ತು ಟಂಕಗಳನ್ನು ಕೊಡಬೇಕಾಗಿತ್ತು. ಈ ತೆರಿಗೆಯಿಂದ ಸರ್ಕಾರಕ್ಕೆ ಒಟ್ಟು ಎಷ್ಟು ಆದಾಯವು ಬರುತ್ತಿದ್ದಿತೆಂಬುದರ ಬಗ್ಗೆ ಒಮ್ಮತ ಅಭಿಪ್ರಾಯಗಳಿಲ್ಲ. ಸರ್ಕಾರಕ್ಕೆ ಇದರಿಂದ ಬರುತ್ತಿದ್ದ ವರಮಾನವು ಅಷ್ಟಕಷ್ಟೆ ಇದ್ದಿತೆಂದು ಆರ್.ಪಿ. ತ್ರಿಪಾಠಿಯವರು ಅಭಿಪ್ರಾಯಪಡುವರು. ಒಟ್ಟಾರೆ ಹೇಳುವುದಾದರೆ ಈ ತೆರಿಗೆಯನ್ನು ಹಿಂದುಗಳು ತಮ್ಮ ಅಧೀನತೆಯ ಸಂಕೇತವೆಂದು ದ್ವೇಷಿಸತೊಡಗಿದರು. ಬಹುಷಃ ಈ ಕಾರಣಕ್ಕಾಗಿಯೆ ಮೊಗಲ್ ಚಕ್ರವರ್ತಿ ಅಕ್ಬರನು ತನ್ನ ಆಳ್ವಿಕೆಯ ಆರಂಭದ ದಿವಸಗಳಲ್ಲಿಯೆ ಈ ತೆರಿಗೆಯನ್ನು ತೆಗೆದುಹಾಕಿದನು.

**ಸೈನ್ಯಾಡಳಿತ**

ದೆಹಲಿಯ ಸುಲ್ತಾನರ ಅಧಿಕಾರವು ಬಹಳ ಮಟ್ಟಿಗೆ ಸೈನಿಕ ಶಕ್ತಿಯ ಬಲದ ಮೇಲೆ ನಿಂತಿತ್ತು. ಆದ್ದರಿಂದ ಪ್ರತಿಯೊಬ್ಬ ಸುಲ್ತಾನನೂ ಸೈನ್ಯಕ್ಕೆ ಹೆಚ್ಚಿನ ಪ್ರಾಧಾನ್ಯತೆಯನ್ನು ಕೊಟ್ಟಿದ್ದು ಅಪಾರ ಸೈನ್ಯವನ್ನು ಇಟ್ಟುಕೊಂಡಿದ್ದನು. ಸೈನ್ಯವನ್ನು ಟರ್ಕರ ಮಾದರಿಯಲ್ಲಿ ವ್ಯವಸ್ಥೆಗೊಳಿಸಲಾಗಿತ್ತು. 'ದಿವಾನ್-ಇ-ಅರಿಜ್' ಎಂಬ ಪ್ರತ್ಯೇಕ ಇಲಾಖೆಯು ಸೈನ್ಯದ ಮೇಲ್ವಿಚಾರಣೆಗಾಗಿ ಸ್ಥಾಪಿತವಾಗಿತ್ತು. ಅರಿಜ್-ಇ-ಮುಮಲಿಕ್ ಎಂಬವನು ಈ ಇಲಾಖೆಯ ಮುಖ್ಯಾಧಿಕಾರಿಯಾಗಿದ್ದನು. ಸೈನ್ಯಾಡಳಿತದಲ್ಲಿ ವಂಚನೆ, ಮೋಸ ಮತ್ತು ಭ್ರಷ್ಟಾಚಾರಗಳು ಕಂಡುಬರುತ್ತಿದ್ದವು. ಈ ಕೆಲವು ದೋಷಗಳನ್ನು ಅಲ್ಲಾವುದ್ದೀನ್‌ಖಿಲ್ಜಿಯು ಕೊನೆಗಾಣಿಸಿ ಸೈನ್ಯವನ್ನು ಸಮರ್ಥವಾಗಿರಿಸಿದನು. ಸೈನಿಕರ ಬಗ್ಗೆ ಕ್ರಮಬದ್ಧ ದಾಖಲೆಗಳನ್ನಿಡುವುದು, ಕುದುರೆಗಳಿಗೆ ಮುದ್ರೆ ಹಾಕುವುದು. ಸೈನಿಕರಿಗೆ ಅವರ ಸೇವೆಗೆ ಕೊಡಲಾಗುತ್ತಿದ್ದ ಜಹಗೀರುಗಳಿಗೆ ಬದಲಾಗಿ ನೇರವಾಗಿ ಸಂಬಳ ಕೊಡುವ ಪದ್ಧತಿಯನ್ನು ಜಾರಿಗೆ ತಂದನು. ಸೈನ್ಯದ ಸಂಖ್ಯೆಯ ಪ್ರಮಾಣವು ಆಗಾಗ್ಗೆ ಬದಲಾವಣೆಯಾಗುತ್ತಿತ್ತಾದರೂ ಸುಲ್ತಾನರು ಅಪಾರ ಸೈನ್ಯವನ್ನಿಟ್ಟುಕೊಂಡಿದ್ದರೆಂಬುದರಲ್ಲಿ ಸಂಶಯವಿಲ್ಲ. ಸುಲ್ತಾನನ ಸೈನ್ಯವು ಅಂಗರಕ್ಷಕದಳ, ರಾಜಧಾನಿಯಲ್ಲಿ ಸದಾಸಿದ್ದವಾಗಿದ್ದ ಸೈನ್ಯ, ಗೌರ್ನರುಗಳ ಅಧೀನದಲ್ಲಿದ್ದ ಪ್ರಾಂತೀಯ ಸೈನ್ಯದಿಂದ ಕೂಡಿತ್ತು. ಸೈನ್ಯದಲ್ಲಿ ವಿವಿಧ ಜನಾಂಗಕ್ಕೆ ಸೇರಿದ ಸೈನಿಕರಿದ್ದರು. ಟರ್ಕರು, ಆಫ್‌ಘನ್ನರು ಪರ್ಶಿಯನ್ನರು ಮತ್ತು ಮತಾಂತರಗೊಂಡ ಹಿಂದುಗಳು ಸೈನ್ಯದಲ್ಲಿದ್ದರು. ಹಿಂದುಗಳು ಸೈನ್ಯಕ್ಕೆ ಸೇರಲು ನಿಷೇಧವಿರಲಿಲ್ಲ. ಪದಾತಿದಳ, ಅಶ್ವದಳ, ಗಜಸೈನ್ಯವು ಸೈನ್ಯದ ಮುಖ್ಯ ಅಂಗಗಳಾಗಿದ್ದವು. ಫಿರಂಗಿದಳವು ಆಧುನಿಕವಾಗಿರಲಿಲ್ಲವಾದರೂ ಯುದ್ಧದಲ್ಲಿ ಫಿರಂಗಿಗಳನ್ನು ಬಳಸುತ್ತಿದ್ದರು. ರಕ್ಷಣೆಗಾಗಿ ಕೋಟೆಗಳನ್ನು ಕಟ್ಟುತ್ತಿದ್ದರು ಮತ್ತು ಈ ಕಾಲದಲ್ಲಿ ಅವುಗಳ ಪಾತ್ರವು ಬಹಳ ಹಿರಿದಾಗಿತ್ತು. ಸೈನ್ಯದ ಶಿಸ್ತು ಮತ್ತು ದಕ್ಷತೆಯು ಬಹಳ ಮಟ್ಟಿಗೆ ಸುಲ್ತಾನನ ದಕ್ಷತೆಯನ್ನು ಅವಲಂಭಿಸಿದ್ದವು.

ಒಟ್ಟಾರೆ ಹೇಳುವುದಾದರೆ ಭಾರತದಲ್ಲಿ ಮೊಟ್ಟಮೊದಲಿಗೆ ಮುಸಲ್ಮಾನರ ಸಾಮ್ರಾಜ್ಯವನ್ನು ಸ್ಥಾಪಿಸಿ ದೆಹಲಿಯ ಸುಲ್ತಾನರು ಮೂರು ಶತಮಾನಗಳ ಕಾಲ ರಾಜ್ಯವಾಳಿದರು, ಅವರು ಸ್ಥಾಪಿಸಿದ ಆಡಳಿತ ವ್ಯವಸ್ಥೆಯು ಕಾಲ ಮತ್ತು ಸನ್ನಿವೇಶಗಳಿಗನುಗುಣವಾಗಿ ರೂಪಗೊಂಡು ಬೆಳೆಯಿತು. ಅವರು ತಮ್ಮ ಆಡಳಿತ ವ್ಯವಸ್ಥೆಯಲ್ಲಿ ಪರ್ಶಿಯನ್ನರ, ಅರಬ್ಬರ ಮತ್ತು ಹಿಂದುಗಳ ರಾಜಕೀಯ ನೀತಿಗಳನ್ನು ಅಳವಡಿಸಿಕೊಂಡು ಆಳ್ವಿಕೆ ನಡೆಸಿದರು. ಭಾರತೀಯ ಮತ್ತು ಇಸ್ಲಾಮಿಕ್ ತತ್ವಗಳ ಹೊಂದಾಣಿಕೆಯಿಂದ ರೂಪಿತವಾದ ಸುಲ್ತಾನರ ಸರ್ಕಾರದ ವ್ಯವಸ್ಥೆಯು ಒಂದು ಪ್ರಥಮ ಪ್ರಯೋಗವಾಗಿದ್ದು ಅದು ಮುಂದೆ ಮೊಗಲರ ಕಾಲದಲ್ಲಿ ಸಂಮೃದ್ಧವಾಗಿ ವಿಕಸಿತಗೊಂಡಿತು.

ಅಧ್ಯಾಯ-23

# ಭಕ್ತಿ ಚಳುವಳಿ

ಪ್ರಾಚೀನ ಕಾಲದಿಂದಲೂ ಭಾರತವು ಹಲವಾರು ಧರ್ಮಗಳ ತವರುಮನೆಯಾಗಿದ್ದು ಅವುಗಳು ಪರಸ್ಪರ ಪ್ರಭಾವಿತವಾಗಿ ಭಾರತೀಯ ಸಂಸ್ಕೃತಿಯ ಮೇಲೆ ಅಚ್ಚಳಿಯದ ಮುದ್ರೆಯೊತ್ತಿರುವುದು ಭಾರತದ ಇತಿಹಾಸದುದ್ದಕ್ಕೂ ಕಂಡುಬರುವ ಸಂಗತಿಯಾಗಿದೆ. ಕ್ರಿ.ಪೂ. ದಲ್ಲಿ ಹಾಗೂ ಅನಂತರದ ಶತಮಾನಗಳಲ್ಲಿ ಧಾಳಿಕಾರರಾಗಿ ಬಂದ ಗ್ರೀಕರು, ಶಕರು, ಸ್ಕಿಥಿಯನನರು, ಕುಶಾನರು ಮತ್ತು ಹೂಣರೇ ಮೊದಲಾದವರು ಕಾಲಾನುಕ್ರಮದಲ್ಲಿ ಭಾರತೀಯರಲ್ಲಿ ಬೆರೆತು ಹಿಂದೂ ಧರ್ಮೀಯರೇ ಆದರು. ಆದರೆ ಕ್ರಿ.ಶ. ಎಂಟನೆ ಶತಮಾನದಲ್ಲಿ ಭಾರತದ ಮೇಲೆ ಧಾಳಿ ಮಾಡಿದ ಅರಬ್ಬರು ಮತ್ತು ಅವರ ತರುವಾಯ ಬಂದ ಟರ್ಕರು ಪ್ರತ್ಯೇಕವಾಗಿ ಉಳಿದು ರಾಜಕೀಯವಾಗಿ ದೇಶದಲ್ಲಿ ಐಕ್ಯತೆಯನ್ನು ಏರ್ಪಡಿಸಲು ಪ್ರಯತ್ನಿಸಿದರೇ ಹೊರತು ಸಾಮಾಜಿಕವಾಗಿಯಾಗಲೀ ಅಥವ ಧಾರ್ಮಿಕವಾಗಿಯಾಗಲೀ ಹಿಂದೂ ಮತ್ತು ಮುಸ್ಲಿಮರನ್ನು ಒಟ್ಟುಗೂಡಿಸುವ ಪ್ರಯತ್ನವನ್ನು ಮಾಡಲಿಲ್ಲ. ಆದರೆ ಈ ಕಾರ್ಯವನ್ನು ಮಧ್ಯಕಾಲೀನ ಯುಗದಲ್ಲಿ ಅವತರಿಸಿದ ಕೆಲವು ಹಿಂದು ಮತ್ತು ಮುಸ್ಲಿಂ ಸಾಧುಸಂತರು ತಾವು ಆರಂಭಿಸಿದ ಭಕ್ತಿ ಪಂಥದ ಮೂಲಕ ಸಾಧಿಸಿ ಹಿಂದೂ-ಮುಸ್ಲಿಮರ ನಡುವೆ ಸಾಮರಸ್ಯವನ್ನುಂಟುಮಾಡಿ ಶಾಂತಿಯುತವಾಗಿ ಸಹಬಾಳ್ವೆ ನಡೆಸಲು ದಾರಿತೋರಿಸಿದರು. ಇವರು ಭಕ್ತಿ ಪಂಥದವರೆಂದು ಹೆಸರುವಾಸಿಯಾಗಿದ್ದಾರೆ.

ಭಕ್ತಿ ಎಂದರೆ ತದೇಕಚಿತ್ತದಿಂದ ದೇವರನ್ನು ಕುರಿತು ಧ್ಯಾನ ಮಾಡುವುದು ಅಥವ ಪ್ರಾರ್ಥಿಸುವುದು ಎಂದರ್ಥ. ದೇವರನ್ನು ಅನನ್ಯ ಭಕ್ತಿಯಿಂದ ಪ್ರಾರ್ಥಿಸಿದರೆ ಭಗವಂತನ ಕೃಪೆಯು ಮನುಷ್ಯನಿಗೆ ದೊರೆತು ಅವನು ಮುಕ್ತಿಯನ್ನು ಪಡೆಯಬಲ್ಲನೆಂದು ಭಕ್ತಿ ಪಂಥೀಯರು ತಿಳಿಸಿದರು. ಯಜ್ಞಯಾಗಾದಿಗಳನ್ನು ಮಾಡುವುದರಿಂದಾಗಲೀ ಕಠಿಣ ತಪಸ್ಸನ್ನಾಚರಿಸುವುದರಿಂದಾಗಲೀ, ವಿಗ್ರಹಗಳನ್ನು ಪೂಜಿಸುವುದರಿಂದಾಗಲೀ ಮೋಕ್ಷವು ಸಿಗದೆಂದೂ, ಅದಕ್ಕೆ ಬದಲಾಗಿ ದೇವರಲ್ಲಿ ಪ್ರೀತಿಯಿಟ್ಟು ಭಕ್ತಿಯಿಂದ ಪ್ರಾರ್ಥಿಸಿದರೆ ಭಗವಂತನ ಅನುಗ್ರಹವು ದೊರೆಯುವುದೆಂದು ತಿಳಿಸಿದರು.

### ಭಕ್ತಿ ಪಂಥದ ಉಗಮ

ಭಕ್ತಿ ಪಂಥವು ಬಹಳ ಪ್ರಾಚೀನವಾದುದಾಗಿದೆ. ಇದರ ಉಗಮವನ್ನು ಸಿಂಧೂನದಿಯ ಬಯಲಿನ ನಾಗರಿಕತೆಯಲ್ಲಿ ಕಾಣಬಹುದಾಗಿದೆ. ಇಲ್ಲಿ

ಭೂಸಂಶೋಧಕರು ಕಂಡು ಹಿಡಿದಿರುವ ಧ್ಯಾನಾಸಕ್ತನಾಗಿ ಕುಳಿತಿರುವ ಶಿವನ ವಿಗ್ರಹದಿಂದ ಈ ಅಂಶವನ್ನು ಮನಗಾಣಬಹುದಾಗಿದೆ. ಇದಲ್ಲದೆ ವೇದೋಪನಿಷತ್ತುಗಳು , ಪುರಾಣಗಳು ಹಾಗೂ ಗೀತೆಯಲ್ಲೂ ಭಕ್ತಿಯ ಪ್ರತಿಪಾದನೆಯು ಕಂಡುಬರುವುದಾದರೂ ಅದು ಈ ಕಾಲದಲ್ಲಿ ಹೆಚ್ಚಿನ ಮಹತ್ವವನ್ನು ಪಡೆದುಕೊಂಡಿರಲಿಲ್ಲ. ಆದರೆ ಮಧ್ಯಕಾಲೀನ ಯುಗದಲ್ಲಿ ಭಕ್ತಿಪಂಥವು ಹೆಚ್ಚಿನ ಮಹತ್ವವನ್ನು ಪಡೆದುಕೊಂಡು ಜನಪ್ರಿಯವಾಯಿತು.

**ಭಕ್ತಿ ಪಂಥದ ಲಕ್ಷಣಗಳು**

ಮೋಕ್ಷಸಾಧನೆಗೆ ಇರುವ ಮಾರ್ಗಗಳಲ್ಲಿ ಭಕ್ತಿಮಾರ್ಗವೂ ಒಂದಾಗಿರುತ್ತದೆ. ಜ್ಞಾನವು ಭಕ್ತಿಗೆ ಮೂಲವಾಗಿದ್ದು ಜ್ಞಾನದಿಂದ ಭಕ್ತಿಯೂ ಭಕ್ತಿಯಿಂದ ಮುಕ್ತಿಯೂ ದೊರೆಯುವುದೆಂದು ಭಕ್ತಿ ಪಂಥೀಯರು ಪ್ರತಿಪಾದಿಸಿದರು. ಇವರು ಯಜ್ಞಯಾಗಾದಿಗಳಿಂದಾಗಲೀ ವಿಗ್ರಹಾರಾಧನೆಯಿಂದಾಗಲೀ, ಕಠಿಣ ತಪಸ್ಸನ್ನು ಆಚರಿಸುವುದರಿಂದಾಗಲೀ ಮತ್ತು ಗಹನವಾದ ಪಾರಮಾರ್ಥಿಕ ಜ್ಞಾನದಿಂದಾಗಲೀ ಭಗವಂತನ ಸಾನ್ನಿಧ್ಯವನ್ನು ಪಡೆಯಲು ಸಾಧ್ಯವಿಲ್ಲವೆಂದೂ ಅದಕ್ಕೆ ಬದಲಾಗಿ ಭಜನೆ ಮತ್ತು ಕೀರ್ತನೆಗಳ ಮೂಲಕ ಅನನ್ಯಭಕ್ತಿಯಿಂದ ಭಗವಂತನನ್ನು ಪ್ರಾರ್ಥಿಸಿದರೆ ಮೋಕ್ಷವು ಲಭಿಸುವುದೆಂದು ತಿಳಿಸಿದರು ದೇವರನ್ನು ರಾಮ, ರಹೀಮ ಮತ್ತು ಕರೀಮ ಎಂಬ ಬೇರೆ ಬೇರೆ ಹೆಸರುಗಳಿಂದ ಕರೆದರೂ ಅವನು- ಒಬ್ಬನೆ ಮತ್ತು ಮಾನವರೆಲ್ಲರು ಅವನ ಮಕ್ಕಳೆಂದು ತಿಳಿಯಪಡಿಸಿದರು. ಎರಡನೆಯದಾಗಿ, ಭಕ್ತಿಪಂಥದ ಪ್ರತಿಪಾದಕರು ಮೋಕ್ಷ ಸಾಧನೆಯ ಮಾರ್ಗದಲ್ಲಿ ಗುರುವಿನ ಅವಶ್ಯಕತೆಯನ್ನು ಒತ್ತಿ ಹೇಳಿದರು. ಮೂರನೆಯದಾಗಿ, ಭಕ್ತಿ ಪಂಥೀಯರು ಸಂಸ್ಕೃತಕ್ಕೆ ಬದಲಾಗಿ ಜನರ ಆಡು ಭಾಷೆಗಳಾದ ಹಿಂದಿ, ಮರಾಠಿ, ಬಂಗಾಳಿ, ಪಂಜಾಬಿ ಮತ್ತು ಕನ್ನಡವೇ ಮೊದಲಾದ ಭಾಷೆಗಳಲ್ಲಿ ಭಕ್ತಿ ಗೀತೆಗಳ ಮೂಲಕ ತಮ್ಮ ಧರ್ಮ ಪ್ರಸಾರವನ್ನು ಮಾಡಿ ಜನಸಾಮಾನ್ಯರಿಗೂ ಮೋಕ್ಷ ಮಾರ್ಗದ ಬಗ್ಗೆ ತಿಳುವಳಿಕೆ ನೀಡಿದರು. ನಾಲ್ಕನೆಯದಾಗಿ ಮೋಕ್ಷ ಸಾಧನೆಯು ಎಲ್ಲ ಮಾನವನಿಗೂ ಸೇರಿದುದೆಂದು ಅದಕ್ಕೆ ಜಾತಿಮತಗಳ ಇಲ್ಲವೆ ಮೇಲೆ ಕೀಳೆಂಬ ಹಾಗೂ ಲಿಂಗಭೇದವಿಲ್ಲವೆಂದು, ಭಗವಂತನು ಇವೆಲ್ಲವುಗಳಿಂದ ಹೊರತಾದವನೆಂದು ತಿಳಿಸಿದ್ದಲ್ಲದೆ ಮೋಕ್ಷಸಾಧನೆಗೆ ಮುಖ್ಯವಾಗಬೇಕಾದುದು ಸದ್ಭಾವನೆ ಮತ್ತು ಸಚ್ಚಾರಿತ್ರ್ಯದಿಂದ ಕೂಡಿದ ನಡವಳಿಕೆ ಹಾಗೂ ಭಗವಂತನನ್ನು ಕಾಣಬೇಕೆಂಬ ಹಂಬಲವು ಮುಖ್ಯವೆಂದು ಬೋಧಿಸಿದರು. ಭಕ್ತಿ ಪಂಥದವರ ಭೋದನೆಗಳು ಸರಳವು ಮತ್ತು ಆಚರಿಸಲು ಯೋಗ್ಯವೂ ಆಗಿದ್ದು ಅವರು ಆರಂಭಿಸಿದ ಚಳುವಳಿಯು ಯಶಸ್ವಿಯಾಯಿತು. ಮೇಲಾಗಿ ಭಕ್ತಿ ಪಂಥದವರು ವಿಶ್ವಪ್ರೇಮ ಹಾಗೂ ಮಾನವ ಭ್ರಾತೃತ್ವವನ್ನು ಭೋಧಿಸಿದರು. ಇದರಿಂದಾಗಿ ಈ ಕಾಲದಲ್ಲಿ ಭಾರತದಲ್ಲಿ ಮುಸ್ಲಿಮರ ರಾಜಕೀಯ ಪ್ರಭುತ್ವದಿಂದ ಹಿಂದೂಗಳಲ್ಲಿ ಕಂಡುಬರುತ್ತಿದ್ದ ದ್ವೇಷಾ ಸೂಯೆಗಳು ಸಾಂತ್ವನಗೊಳಿಸಲ್ಪಟ್ಟು ಎರಡು ಜನಾಂಗದವರೂ ಸೌಹಾರ್ದತೆಯಿಂದ ಒಂದೇ ಮಣ್ಣಿನ ಮೇಲೆ ಸಹಬಾಳ್ವೆ ನಡೆಸಲು ಸಾಧ್ಯವಾಯಿತು.

ಪೂರ್ವ ಮಧ್ಯಕಾಲೀನ ಭಾರತದಲ್ಲಿ ಭಕ್ತಿ ಪಂಥವನ್ನು ಪ್ರತಿಪಾದಿಸಿದವರಲ್ಲಿ ಶ್ರೀರಾಮನುಜಾಚಾರ್ಯ, ರಮಾನಂದ, ವಲ್ಲಭಾಚಾರ್ಯ, ಚೈತನ್ಯ, ನಾಮದೇವ,

ಮೀರಾಬಾಯಿ, ಕಬೀರ್ ಮತ್ತು ಗುರುನಾನಕ್ ಮುಖ್ಯರಾದವರು. ರಾಮಾನುಜಾಚಾರ್ಯರು ಆರಂಭಿಸಿದ ಭಕ್ತಿಮಾರ್ಗವು ಕ್ರಿ.ಶ. 14 ಮತ್ತು 15ನೇ ಶತಮಾನಗಳಲ್ಲಿ ಭಾರತದ ಧಾರ್ಮಿಕ ಜೀವನದ ಮೇಲೆ ಹೆಚ್ಚಿನ ಪ್ರಭಾವವನ್ನು ಬೀರಿತು. ರಾಮಾನುಜಾಚಾರ್ಯರು ಭಕ್ತಿ ಪಂಥದ ಮೊಟ್ಟಮೊದಲ ಪ್ರತಿಪಾದಕರಾಗಿದ್ದರು. ಇವರು ಕ್ರಿ.ಶ. 12ನೇ ಶತಮಾನದಲ್ಲಿ ಜೀವಿಸಿದ್ದು ದಕ್ಷಿಣಭಾರತದಲ್ಲಿ ವಿಷ್ಣುವಿನ ಪೂಜೆಯನ್ನು ಬೋಧಿಸಿದರು. ಇವರ ಬೋಧನೆಯು ಶಂಕರರ ತತ್ವಕ್ಕೆ ವಿರುದ್ಧವಾಗಿತ್ತು. ಆತ್ಮ ಮತ್ತು ಪರಮಾತ್ಮವಿಗೂ ವ್ಯತ್ಯಾಸವಿದೆ. ಬೆಂಕಿಯಿಂದ ಹೊರಡುವ ಕಿಡಿಗಳಂತೆ ಆತ್ಮನು ಪರಮಾತ್ಮನಿಂದ ಅವತರಿಸಿದರೂ ಅವೆರಡೂ ಪೂರ್ಣವಾಗಿ ಬೇರೆ ಇರಲು ಸಾಧ್ಯವಿಲ್ಲವೆಂದು ತಿಳಿಸಿದರು. ಪರಮಾತ್ಮನು ಸದ್ಗುಣಗಳನ್ನು ಅಸಂಖ್ಯಾತ ಮೊತ್ತದಲ್ಲಿ ಹೊಂದಿರುವವನು. ಅನೇಕ ಉತ್ತಮ ಗುಣಗಳನ್ನು ಹೊಂದಿರುವ 'ಸಗುಣ', 'ಈಶ್ವರ'ಗಳಿಗೆ ಭಕ್ತಿಯಿಂದ ನಡೆದುಕೊಳ್ಳಬೇಕೆಂದು ಮತ್ತು ಆದರಿಂದ ಮುಕ್ತಿಯು ಲಭಿಸುವುದೆಂದು ತಿಳಿಸಿದರು. ರಾಮಾನುಜರ ಬೋಧನೆಗಳು ಅಪಾರ ಜನರಿಗೆ ಹಿಡಿಸಿ ಅನೇಕರು ಅವರ ಶಿಷ್ಯರಾದರು.

**ರಮಾನಂದ**

ರಾಮಾನುಜರ ಭಕ್ತಿ ಪಂಥದಿಂದ ಆಕರ್ಷಿತರಾಗಿ ಉತ್ತರಭಾರತದಲ್ಲಿ ಭಕ್ತಿಪಂಥವನ್ನು ಪ್ರತಿಪಾದಿಸಿದವರಲ್ಲಿ ರಮಾನಂದರು ಮುಖ್ಯರಾದವರು. ಇವರು ರಾಮಾನುಜರ ಶ್ರೇಣಿಯಲ್ಲಿ ಐದನೆಯವರೆಂದು ಪ್ರತೀತಿಯಿದೆ. ರಮಾನಂದರು ಕ್ರಿ.ಶ. 14ನೆ ಶತಮಾನದಲ್ಲಿ ಉತ್ತರ ಭಾರತದಲ್ಲಿ ಜೀವಿಸಿದ್ದರು. ಹಿಂದು ಮತ್ತು ಮುಸ್ಲಿಮರ ನಡುವೆ ಸಾಮಾಜಿಕ ಮತ್ತು ಧಾರ್ಮಿಕ ಸಾಮರಸ್ಯವನ್ನುಂಟುಮಾಡಲು ಪ್ರಯತ್ನಿಸಿದರು. ಹಿಂದೂ ಧರ್ಮೀಯರಲ್ಲಿದ್ದ ಜಾತಿ ಪದ್ಧತಿಯನ್ನು ಖಂಡಿಸಿದರು. ಉತ್ತರ ಭಾರತದಲ್ಲೆಲ್ಲಾ ಸಂಚರಿಸಿ ಭಕ್ತಿಪಂಥವನ್ನು ಪ್ರಸಾರ ಮಾಡಿದರು. ಅವರು ತಮ್ಮ ತತ್ವಗಳನ್ನು ಸಂಸ್ಕೃತ ಭಾಷೆಗಬದಲಾಗಿ ಉತ್ತರ ಭಾರತೀಯರ ಆಡುಬಾಷೆಯಾದ ಹಿಂದಿ ಭಾಷೆಯಲ್ಲಿ ಪ್ರಸಾರಮಾಡಿದರು. ಭಗವಂತನು ದಯೆ, ಕರುಣೆ, ಮತ್ತು ಸೌಂದರ್ಯದ ನಿಧಿಯಾಗಿದ್ದಾನೆ. ಆತನನ್ನು ಭಕ್ತಿಯಿಂದ ಪ್ರಾರ್ಥಿಸಿದರೆ ಮೋಕ್ಷವು ದೊರೆಯುವುದೆಂದು ತಿಳಿಯಪಡಿಸಿದರು. ಜಾತೀಯತೆಯನ್ನು ಖಂಡಿಸಿದ ಅವರು ಕೀಳುಜಾತಿಯವರ್ರೂ ತಮ್ಮ ಶಿಷ್ಯರನ್ನಾಗಿ ಸ್ವೀಕರಿಸಿದ್ದರು. ಅವರ ಹನ್ನೆರಡು ಜನ ಪ್ರಮುಖ ಶಿಷ್ಯರುಗಳಲ್ಲಿ ಒಬ್ಬ ಕ್ಷೌರಿಕನೂ, ಒಬ್ಬ ನೇಯ್ಗೆಯವನೂ ಮತ್ತು ಒಬ್ಬ ಮೋಚಿಯೂ ಹಾಗೂ ಮುಸ್ಲಿಮನಾದ ಕಬೀರನೂ ಇದ್ದರು. ರಮಾನಂದರ ಬೋಧನೆಗಳು ಬಹಳ ಸರಳವಾಗಿದ್ದು ಬಹು ಸಂಖ್ಯಾತ ಜನರಿಗೆ ಹಿಡಿಸಿದವು. ಅವರ ಅನುಯಾಯಿಗಳು ರಾಮನನ್ನು ವಿಷ್ಣುವಿನ ಅವತಾರವೆಂದು ತಿಳಿದು ಆರಾಧಿಸುತ್ತಾರೆ. ರಮಾನಂದರ ಶಿಷ್ಯರುಗಳಲ್ಲಿ ಕಬೀರರು ಹೆಚ್ಚು ಹೆಸರುವಾಸಿಯಾದವರು.

**ಕಬೀರ್**

ರಮಾನಂದರಂತೆ ಅಂದಿನ ಹಿಂದೂ ಸಮಾಜದಲ್ಲಿ ಕಂಡುಬರುತ್ತಿದ್ದ

ಅನಾಚಾರ, ಅನ್ಯಾಯ, ಅಸತ್ಯ. ಅಧರ್ಮ ಮೊದಲಾದವುಗಳು ತುಂಬಿ ತುಳುಕುತ್ತಿದ್ದ ಸಮಯದಲ್ಲಿ ಕಬೀರರು ಅವತರಿಸಿದರು. ಕಬೀರರ ಹುಟ್ಟಿನ ವಿಚಾರ ಇನ್ನೂ ತೊಡಕಿನ ವಿಷಯವಾಗಿ ಉಳಿದಿದೆ. ಪ್ರಚಲಿತವಿರುವ ಐತಿಹ್ಯದ ಪ್ರಕಾರ ಅವರು ಕಾಶಿಯ ಒಬ್ಬ ಬ್ರಾಹ್ಮಣ ವಿಧವೆಯ ಮಗನೆಂದು ಹೇಳಲಾಗಿದೆ. ಸಮಾಜದ ಅಪವಾದಕ್ಕೆ ಹೆದರಿದ ಆ ವಿಧವೆ ತಾಯಿಯು ಮಗು ಕಬೀರನನ್ನು ಒಂದು ಕೊಳದ ಬಳಿ ಬಿಟ್ಟುಹೋದಳೆಂದು ಹೇಳಲಾಗಿದೆ. ಅನಂತರ ಈ ಮಗುವನ್ನು 'ನಿರು' ಮತ್ತು ನಿಮಾ ಎಂಬ ಮುಸ್ಲಿಂ ದಂಪತಿಗಳು ಕಂಡು ಅದನ್ನು ಮನೆಗೆ ತಂದು ಅತ್ಯಂತ ಪ್ರೀತ್ಯಾದರಗಳಿಂದ ಸಾಕಿಬೆಳೆಸಿದರು. ಕಬೀರ್ ಪ್ರಾಪ್ತವಯಸ್ಕನಾದ ಮೇಲೆ ತನ್ನ ಸಾಕು ತಂದೆಯ ಕಸುಬನ್ನೇ ವೃತ್ತಿಯನ್ನಾಗಿ ಮಾಡಿಕೊಂಡರು. ಆದರೂ ಅವರು ಧಾರ್ಮಿಕ ಮತ್ತು ತಾತ್ವಿಕ ವಿಷಯಗಳನ್ನು ಕುರಿತು ಆಲೋಚನೆಯಲ್ಲಿ ಮಗ್ನರಾಗಿರುತ್ತಿದ್ದರು. ಕಬೀರರ ಯೋಚನೆಯ ಹಿನ್ನೆಲೆಯು ಹಿಂದೂ ಧರ್ಮವಾಗಿತ್ತು. ಅವರಿಗೆ ರಾಮನಲ್ಲಿ ಅಪಾರವಾದ ಭಕ್ತಿಯಿತ್ತು. ಕಬೀರರು ಭಕ್ತಿಯ ಮೂಲಕ ಜೀವನ್ಮುಕ್ತಿ ಪಡೆಯಲು ಭಕ್ತಿಮಾರ್ಗವನ್ನು ಅನುಸರಿಸಿದರು.

ಕಬೀರರರು ಬೋಧಿಸಿದ ತತ್ವಗಳು ಬಹಳ ಸರಳವಾಗಿದ್ದವು. ಅವರ ಪ್ರಕಾರದೇವರು ಒಬ್ಬನೆ. ಮಾನವರೆಲ್ಲರೂ ಅವನ ಮಕ್ಕಳು. ಹಿಂದುಗಳಾಗಲೀ ಮುಸ್ಲಿಮರಾಗಲೀ ಎಲ್ಲರೂ ಅವನ ಮಕ್ಕಳೇ. ಮಹದೇವನಾಗಲೀ, ಮಹಮದನಾಗಲೀ ಬೇರೆಯಲ್ಲ. ಯಾವನು ರಾಮನೋ ಅವನೇ ರಹೀಮ, ಯಾವನು ಕೃಷ್ಣನೋ ಅವನೇ ಕರೀಮ. ರಾಮರಹಿಮರಲ್ಲಾಗಲೀ. ಕೃಷ್ಣಕರೀಮರಲ್ಲಾಗಲೀ ಭೇದವೆಣಿಸಬಾರದು. ರಾಮ, ಖುದಾ, ಶಕ್ತಿ, ಶಿವ, ಎಲ್ಲರೂ ಒಂದೇ. ವೇದಗಳು ಪುರಾಣಗಳು ಮತ್ತು ಕೊರಾನ್ ಮೊದಲಾದ ಪವಿತ್ರ ಗ್ರಂಥಗಳೆಲ್ಲವೂ ಭಗವಂತನನ್ನು ಬೇರೆ ಬೇರೆ ಹೆಸರುಗಳಿಂದ ವರ್ಣಿಸುತ್ತವೆ ಎಂದು ತಿಳಿಸಿದರು.

ಕಬೀರರು ವಿಗ್ರಹಾರಾಧನೆಯನ್ನು ಖಂಡಿಸಿದರು. ಕಲ್ಲನ್ನು ಪೂಜಿಸುವುದರಿಂದ ಒಬ್ಬನಿಗೆ ಮುಕ್ತಿಯು ದೊರೆಯುವುದಾದರೆ ನಾನು ಪರ್ವತವನ್ನೇ ಪೂಜಿಸುತ್ತೇನೆ. ಹಾಗೆಯೇ ನದಿಯಲ್ಲಿ ಸ್ನಾನ ಮಾಡುವುದರ ಮೂಲಕ ಮುಕ್ತಿಯನ್ನು ಪಡೆಯುವೆನೆಂದು ತಿಳಿದು ಸ್ನಾನ ಮಾಡುವುದಾದರೆ ಮಂಡೂಕವೂ ಮುಕ್ತಿಯನ್ನು ಪಡೆಯಬಲ್ಲದು. ಮೋಕ್ಷ ಸಾಧನೆಗಾಗಿ ಸನ್ಯಾಸಿಯಾಗಿ ಕಾಡು ಮೇಡುಗಳನ್ನು ಸುತ್ತುವುದಾದರೆ ಕಾಡಿನಲ್ಲಿ ಅಲೆದಾಡುವ ಜಿಂಕೆಗಳೂ ಮೋಕ್ಷವನ್ನು ಪಡೆಯಬಲ್ಲವು. ಶಿರಮುಂಡನದಿಂದ ಶಿವನನ್ನು ಸೇರುತ್ತೇಂದು ತಿಳಿದರೆ ಕುರಿಯೂ ಮುಕ್ತಿಯನ್ನು ಪಡೆಯುತ್ತದೆ ಎಂದು ಅವರು ಮೂಢನಂಬಿಕೆಗಳನ್ನು ಅಲ್ಲಗಳೆದರು.

ಕಬೀರರು ಮೋಸಾಧನೆಗೆ ಇರುವ ಮಾರ್ಗಗಳಲ್ಲಿ ಭಕ್ತಿಮಾರ್ಗವು ಅತ್ಯಂತ ಶ್ರೇಷ್ಠವಾದುದೆಂದು ಒತ್ತಿ ಹೇಳಿದರು. ಭಕ್ತನು ದೇವರಲ್ಲಿ ಪ್ರೀತಿಯಿಡಬೇಕು. ದೇವರು ಎಲ್ಲರ ಹೃದಯದಲ್ಲೂ ಇದ್ದಾನೆ. ಅವನನ್ನು ದೇವಾಲಯಗಳಲ್ಲಾಗಲೀ, ಪವಿತ್ರ ಗ್ರಂಥಗಳಲ್ಲಾಗಲೀ ಮತ್ತು ಪರ್ವತದ ಮೇಲಾಗಲೀ ಇರುವನೆಂದು ಹುಡುಕಲು ಹೋಗುವುದು ತಪ್ಪು. ದೇವರು ನಿನ್ನ ಹೃದಯದಲ್ಲೇ ಇದ್ದಾನೆ. ಕಪಟ ಮೋಸ, ಅಸತ್ಯಗಳನ್ನು ಬಿಡು. ನಿನ್ನ ಪ್ರೀತಿಯನ್ನು ಮಾನವ ಕುಲದ ಕಡೆ ಹರಿಸು.

ಭಗವಂತನನ್ನು ಭಕ್ತಿಯಿಂದ ಪ್ರಾರ್ಥಿಸು. ಪೂಜಾವಿಧಾನಗಳು ಆವನಿಗೆ ಗಣನೀಯವಲ್ಲ. ಸಂಪ್ರದಾಯಗಳ ಗುಲಾಮರಾಗಬೇಡಿ. ವಾದವಿವಾದಗಳನ್ನು ಅವುಗಳನ್ನು ಮೆಚ್ಚಿಕೊಳ್ಳುವ ಸಲುವಾಗಿಯೆ ಪ್ರೀತಿಸಬೇಡಿ. ಯಾರೂ ತುಳಿಯದಿದ್ದ ದಾರಿಯ ಮೇಲೆ ಓಡಾಡಲು ಅಂಜಬೇಡಿ. ಅಂತಹ ದಾರಿಗಳು ದೇವರ ಸನ್ನಿಧಿಗೆ ಹತ್ತಿರವಾಗದ್ದರೆ ಅವುಗಳನ್ನೇ ಅನುಸರಿಸಿ ಎಂದು ಹೇಳಿದರು.

ಕಬೀರರು ಭಕ್ತರಾಗಿದ್ದಂತೆ, ಜ್ಞಾನಿಗಳೂ, ಕವಿಗಳೂ ಮತ್ತು ಸಮಾಜ ಸುಧಾರಕರೂ ಆಗಿದ್ದರು. ಅವರು ಭಕ್ತಿಮಾರ್ಗವನ್ನು ಅನುಸರಿಸಿದರೂ ಜ್ಞಾನಮಾರ್ಗವನ್ನು ಬಿಡಲಿಲ್ಲ. ಕಬೀರರ ದೃಷ್ಟಿಯಲ್ಲಿ ಜ್ಞಾನವು ಭಕ್ತಿಯ ಪೋಷಕ. ವೇದೋಪನಿಷತ್ತುಗಳಲ್ಲಿ ಯಜ್ಞಯಾಗಾದಿಗಳ ಕರ್ಮಭಾಗವನ್ನು ಖಂಡಿಸಿದರೂ ಅವುಗಳ ಜ್ಞಾನ ಭಾಗವನ್ನು ತಿರಸ್ಕರಿಸಲಿಲ್ಲ. ಕಬೀರರು ದೇವರಿಗೆ ಕೊಟ್ಟ ಪ್ರೀತಿಯ ಹೆಸರು 'ರಾಮ' ಮುಕ್ತಿಗೆ ಭಕ್ತಿಯೊಂದೇ ಸಾಕು ಎಂಬುದು ಅವರ ಅಚಲ ನಂಬಿಕೆಯಾಗಿತ್ತು. ಕಬೀರರು ಹಿಂದೂ ಮುಸ್ಲಿಮರ ನಡುವೆ ಬೇಧವೆಣಿಸದೆ, ಅವರಿಬ್ಬರೂ ಒಟ್ಟಿಗೆ ಸೌಹಹಾರ್ದದಿಂದ ಬಾಳಲು ಕರೆಕೊಟ್ಟರು. ಕಬೀರರು 1518ರಲ್ಲಿ ಕಾಲವಾದರು. ಅವರು ಕಾಲವಾದ ಮೇಲೆ ಅವರ ಶಿಷ್ಯರು ಅವರ ತತ್ವಗಳನ್ನು ಸಂಗ್ರಹಿಸಿ 'ಬೀಜಕ' ಎಂಬ ಗ್ರಂಥರೂಪದಲ್ಲಿ ಪ್ರಕಟಿಸಿದರು. ಕಬೀರರ ಅನುಯಾಯಿಗಳನ್ನು ಕಬೀರ ಪಂಥೀಯರೆಂದು ಕರೆಯುತ್ತಾರೆ.

**ವಲ್ಲಭಾಚಾರ್ಯ**

ಭಕ್ತಿಪಂಥವನ್ನು ಪ್ರತಿಪಾದಿಸಿದ ಆಚಾರ್ಯರಲ್ಲಿ ವಲ್ಲಭಾಚಾರ್ಯರೂ ಒಬ್ಬರಾಗಿದ್ದಾರೆ. ಇವರು ಕ್ರಿ.ಶ. 1479ರಲ್ಲಿ ದಕ್ಷಿಣದ ತೆಲುಗು ರಾಜ್ಯದಲ್ಲಿ ನತೈಲಾಂಗ್ ಬ್ರಾಹ್ಮಣ ಕುಟುಂಬವೊಂದರಲ್ಲಿ ಜನಿಸಿದರು. ವಲ್ಲಭಾಚಾರ್ಯರು ವೈಷ್ಣವ ಪಂಥದ ಮತ್ತೊಂದು ಶಾಖೆಯಾದ ಕೃಷ್ಣನ ಪಂಥವನ್ನು ಪ್ರಚಾರ ಮಾಡಿದರು. ಕೃಷ್ಣನ ಜೀವನಕ್ಕೆ ಸಂಬಂಧಿಸಿದ ಮಥುರ, ಬೃಂದಾವನ ಮತ್ತಿತರ ಪವಿತ್ರ ಸ್ಥಳಗಳನ್ನು ಸಂದರ್ಶಿಸಿ ಅನಂತರ ಬೆನಾರಿಸ್‌ನಲ್ಲಿ ನೆಲಸಿ ತಮ್ಮ ಕೆಲಸವನ್ನು ಮುಂದುವರಿಸಿದರು. ಇವರಿಗೆ ಕೃಷ್ಣನಲ್ಲಿ ಅಪಾರವಾದ ಭಕ್ತಿಯಿತ್ತು. ಮಾನವನು ದೇವರ ಸೇವೆಗಾಗಿ ತನ್ನ ಜೀವನವನ್ನು ಮೀಸಲಾಗಿಡಬೇಕು. ಏಕೆಂದರೆ ಮನುಷ್ಯನನ್ನು ಅವನ ಕಷ್ಟಗಳಿಂದ ಪಾರುಮಾಡುವ ಶಕ್ತಿಯನ್ನು ಹೊಂದಿರುವವನು ದೇವರೊಬ್ಬನೆ. ದೇವರನ್ನು ಒಲಿಸಿಕೊಳ್ಳಲು ಯಾರೂ ತಪಸ್ಸನ್ನಾಚರಿಸಬೇಕಾಗಿಲ್ಲವೆಂದೂ, ಅವನನ್ನು ಚಿತ್ತ ಶುದ್ಧಿಯಿಂದ ಪ್ರಾರ್ಥಿಸಿದರೆ ಮೋಕ್ಷವು ಲಭಿಸುವುದೆಂದು ತಿಳಿಸಿದರು. ವಲ್ಲಭಾಚಾರ್ಯರು ತಮ್ಮ ತತ್ವ ಬೋಧನೆಯನ್ನು ನೀತಿಬೋಧನೆಗಳ ರೂಪದಲ್ಲಿ ಬೋಧಿಸಿದರು.

**ಚೈತನ್ಯ**

ವೈಷ್ಣವ ಧರ್ಮಪ್ರಸಾರ ಕಾರ್ಯದಲ್ಲಿ ಹೆಸರುವಾಸಿಯಾದ ಮತ್ತೊಬ್ಬ ಗುರುವೆಂದರೆ ನವದ್ವೀಪದ ಚೈತನ್ಯ, ವಲ್ಲಭಾಚಾರ್ಯರ ಸಮಕಾಲೀನರಾದ ಇವರು 1485ರಲ್ಲಿ ಬಂಗಾಳದ ನುದಿಯ ಎಂಬ ಊರಿನಲ್ಲಿ ಒಂದು ಸಂಪ್ರದಾಯಸ್ತ

ಬ್ರಾಹ್ಮಣಕುಟುಂಬವೊಂದರಲ್ಲಿ ಜನಿಸಿದರು. ಇವರ ಮೊದಲ ಹೆಸರು ವಿಶ್ವಾಂಬರ. ಚೈತನ್ಯ ತನ್ನ ಇಪ್ಪತ್ತೈದನೆ ವಯಸ್ಸಿನಲ್ಲಿ ಪ್ರಾಪಂಚಿಕ ಜೀವನವನ್ನು ತೊರೆದು ಸನ್ಯಾಸಿಯಾದರು. ದೇಶದಲ್ಲೆಲ್ಲಾ ಸಂಚರಿಸಿ ಕೃಷ್ಣನ ಪಂಥವನ್ನು ಪ್ರಚಾರ ಮಾಡಿದರು. ಕೃಷ್ಣಪರಮಾತ್ಮನಲ್ಲಿ ಅವರಿಗೆ ಅಪಾರ ಭಕ್ತಿಯಿದ್ದಿತು. ಸರ್ವಶಕ್ತನಾದ ಕೃಷ್ಣನು ಎಲ್ಲರ ಹೃದಯದಲ್ಲೂ ನೆಲೆಸಿದ್ದಾನೆ. ಅವನನ್ನು ನಿಶ್ಚಿಲ ಭಕ್ತಿಯಿಂದ ಪ್ರಾರ್ಥಿಸಿದರೆ ಮುಕ್ತಿಯು ದೊರೆಯುವುದೆಂದು ತಿಳಿಸಿದರು. ಯಾವನು ರಾಧೆಯಂತೆ ಕೃಷ್ಣನನ್ನು ಪ್ರೀತಿ ಮತ್ತು ಭಕ್ತಿಯಿಂದ ಆರಾಧಿಸುವರೋ ಅವನಿಗೆ ಕೃಷ್ಣನು ಒಲಿಯುವನು ಎಂದು ಚೈತನ್ಯ ಉಪದೇಶಿಸಿದರು. ಕೃಷ್ಣನಲ್ಲಿ ಚೈತನ್ಯನಿಗೆ ಅಪಾರವಾದ ಪ್ರೀತಿಯಿತ್ತು. ಕೃಷ್ಣನು ಬೃಂದಾವನದಲ್ಲಿ ತನ್ನ ಕೊಳಲಿನಲ್ಲಿ ಹಾಡುತ್ತಿದ್ದ ಸನ್ನಿವೇಶದ ಜ್ಞಾಪಕವು ಅವರಿಗೆ ಬಂದ ತಕ್ಷಣವೇ ಆನಂದ ಪರವಶರಾಗುತ್ತಿದ್ದರು. ಚೈತನ್ಯ ಪ್ರೀತಿಯ ಪ್ರತೀಕವಾಗಿದ್ದರು. ಪ್ರೇಮದ ವೇದಿಕೆಯಲ್ಲಿ ಎಲ್ಲವನ್ನೂ ತ್ಯಾಗಮಾಡಬೇಕೆಂದು ಹೇಳುತ್ತಿದ್ದರು. ನಿಜವಾದ ಭಕ್ತನು ತನ್ನ ಪ್ರೀತಿಯನ್ನು ಅಹೋರಾತ್ರಿ ಕೃಷ್ಣನಿಗೆ ಅರ್ಪಿಸುವುದರ ಮೂಲಕ ತೋರಿಸಬೇಕು. ವೈಷ್ಣವ ಧರ್ಮವು ಕೇವಲ ಸನ್ಯಾಸಿಗಳ ಮತ್ತು ವಿರಕ್ತರ ಮತವಾಗದೆ ಅದೊಂದು ಜೀವಂತ ಧರ್ಮವಾಗಿರಬೇಕೆಂದು ತಿಳಿಸಿದರು.

ಚೈತನ್ಯ ಜಾತಿ ಪದ್ಧತಿಯನ್ನು ಖಂಡಿಸಿ, ಮಾನವ ಸಹೋದರತ್ವವನ್ನು ಬೋಧಿಸಿದರು. ಶಾಶ್ವತವಾದ ಮುಕ್ತಿಯನ್ನು ಪಡೆಯಲು ಹರಿಯ ನಾಮಸ್ಮರಣೆಯು ಮುಖ್ಯಮಾರ್ಗವೆಂದು ತಿಳಿಸಿದರು. ಕೃಷ್ಣನ ಹೆಸರಿಗೆ ಯಾವ ಜಾತಿ ಪದ್ಧತಿಯ ಆತಂಕಗಳೂ ಇಲ್ಲ. ಅವರು ಮೇಲು ಕೀಳೆಂಬ ಭೇದವಿಲ್ಲದೆ ಎಲ್ಲರನ್ನೂ ತನ್ನ ಶಿಷ್ಯರನ್ನಾಗಿ ಸ್ವೀಕರಿಸಿದ್ದರು. ಮಾನವರ ಕಷ್ಟಗಳನ್ನು ನೋಡಿದಾಗ ಮಮ್ಮಲ ಮರುಗುತ್ತಿದ್ದರು. ಎಲ್ಲರ ಶರೀರವೂ ಒಂದೇ ಅದರಲ್ಲಿ ತ್ಯಾಗದ ಮತ್ತು ಪ್ರೇಮದ ಚೇತನವು ಅಡಿಗಿದೆ. ಜೀವವಿರುವ ಯಾವ ಪ್ರಾಣಿಗೂ ನುಡಿಯಿಂದಾಗಲೀ ನಡತೆಯಿಂದಾಗಲೀ ನೋವನ್ನುಂಟುಮಾಡಬೇಡಿ. ದೇವರ ದಯಾಳುತನವನ್ನು ಸದಾ ನೆನಪಿನಲ್ಲಿಟ್ಟುಕೊಳ್ಳಿ. ಅವನನ್ನು ಭಕ್ತಿಯಿಂದ ಆರಾಧಿಸಿ, ಅವನು ಏನನ್ನು ನಿಮ್ಮಿಂದ ಮಾಡಲಚ್ಚಿಸುತ್ತಾನೋ ಅದನ್ನು ಅವನ ಸೇವಕನಂತೆ ಮಾಡಿ. ಅವನನ್ನು ನಿಮ್ಮ ಸ್ನೇಹಿತನಂತೆ ನಂಬಿ, ನಿಮ್ಮ ಸರ್ವಸ್ವ ವೆಲ್ಲವನ್ನೂ ಅವನಿಗೆ ಅರ್ಪಿಸಿ ಎಂದು ತಿಳಿಸಿದನು. ಚೈತನ್ಯನ ಬೋಧನೆಗಳು ಬಂಗಾಳದಲ್ಲಿ ಹೆಚ್ಚು ಜನಪ್ರಿಯವಾದವು ಮತ್ತು ಅವನ ಹೆಸರು ಬಂಗಾಳದಲ್ಲಿ ಇಂದೂ ಮನೆ ಮಾತಾಗಿದೆ. ಚೈತನ್ಯರು ಕೃಷ್ಣನ ಅವತಾರವೆಂದು ಕೆಲವರು ನಂಬಿ ಅವರ ಗೀತೆಗಳನ್ನು ಭಕ್ತಿಯಿಂದ ಸ್ತುತಿಸುತ್ತಾರೆ.

**ಗುರುನಾನಕ್ (1469-1539)**

ಸಿಖ್ ಧರ್ಮ ಸ್ಥಾಪಕರಾದ ಗುರುನಾನಕರು ಮಧ್ಯಕಾಲೀನ ಯುಗಧ ಧರ್ಮಸುಧಾರಕರಲ್ಲಿ ಮತ್ತೊಬ್ಬ ಸುಪ್ರಸಿದ್ಧ ವ್ಯಕ್ತಿಯಾಗಿದ್ದಾರೆ. ಇವರು ಸ್ಥಾಪಿಸಿದ ಮತವು 'ಸಿಖ್ ಮತ' ಅಥವ 'ಸಿಖ್ ಧರ್ಮ'ವೆಂದು ಹೆಸರುವಾಸಿಯಾಗಿದೆ. ಗುರುನಾನಕರು ಕ್ರಿ.ಶ. 1469ರಲ್ಲಿ ಪಂಜಾಬಿನ ಲಾಹೋರ್ ಜಿಲ್ಲೆಯ (ಈಗ

ಪಾಕೀಸ್ಥಾನದಲ್ಲಿದೆ) ತಲವಾಂಡಿ ಎಂಬ ಹಳ್ಳಿಯಲ್ಲಿ ಜನಿಸಿದರು. ಇವರು ಚಿಕ್ಕಂದಿನಿಂದಲೂ ಧಾರ್ಮಿಕ ಮನೋಭಾವನೆಯುಳ್ಳವರಾಗಿದ್ದು ತಮ್ಮ ವಿದ್ಯಾಭ್ಯಾಸದ ಕಡೆ ಹೆಚ್ಚಿನ ಗಮನ ಕೊಡಲಿಲ್ಲ. ನಾನಕರು ಕಬೀರರಂತೆ ದೇವರ ಏಕತಿಯನ್ನು ಬೋಧಿಸಿದರು. ವಿಗ್ರಹರಾಧನೆಯನ್ನು ಖಂಡಿಸಿದರು. ಮಾನವರೆಲ್ಲರೂ ದೇವರ ಮಕ್ಕಳು. ಅವರೆಲ್ಲರೂ ಭ್ರಾತೃಸಮಾನರು. ದೇವರ ಮುಂದೆ ಜಾತಿಪದ್ಧತಿಗಳಾಗಲೀ ಜನಾಂಗಗಳಾಗಲೀ ಯಾವುದೂ ಇಲ್ಲ. ದೇವರಲ್ಲಿ ಪ್ರೀತಿಯಿಡಬೇಕು ಮತ್ತು ಭಕ್ತಿಯಿಂದ ಅವನನ್ನು ಪ್ರಾರ್ಥಿಸಬೇಕು ಮೋಕ್ಷ ಸಾಧಕನು ಶುಚಿ ಜೀವನ ನಡೆಸಬೇಕು ಮತ್ತು ಸತ್ಕಾರ್ಯಗಳನ್ನು ಮಾಡಬೇಕು ಎಂದು ತಿಳಿಸಿದರು. ಧರ್ಮವೆಂಬುದು ಕೇವಲ ಶಬ್ದಗಳಲ್ಲಿ ಅಡಕವಾಗಿಲ್ಲ. ಯಾವ ಮಾನವನು ಎಲ್ಲರನ್ನೂ ಸರಿಸಮಾನವೆಂದು ನೋಡುತ್ತಾನೋ ಅವನೇ ನಿಜವಾದ ಧಾರ್ಮಿಕ, ಧರ್ಮವು ಗುಡಿಯಲ್ಲಿ ದೇವರನ್ನು ಪೂಜಿಸುವುದರಿಂದಾಗಲೀ ಮಸೀದಿಯಲ್ಲಿ ಪ್ರಾರ್ಥನೆ ಮಾಡುವುದರಿಂದಾಗಲೀ, ಸುಡುಗಾಡಿನಲ್ಲಿ ಅಲೆದಾಡುವುದರಿಂದಾಗಲೀ ಇಲ್ಲವೆ ಸನ್ಯಾಸಿಯಾಗಿ ಕಾಡಿನಲ್ಲಿ ಕಣ್ಣುಮುಚ್ಚಿಕೊಂಡು ಕುಳಿತು ತಪಸ್ಸನ್ನು ಮಾಡುವುದರಿಂದಾಗಲೀ ಅಥವ ನದಿಯಲ್ಲಿ ಮುಳುಗಿ ಏಳುವುದರಿಂದಾಗಲೀ ಕೂಡಿರುವುದಿಲ್ಲ. ಅಶುಚಿಯಿಂದ ಕೂಡಿರುವ ಪ್ರಪಂಚದ ಮಧ್ಯದಲ್ಲಿ ಶುಚಿಯಿಂದ ಕೂಡಿದ ಜೀವನ ನಡೆಸಲು ಪ್ರಯತ್ನಿಸಿದರೆ ಅದು ನಿಜವಾದ ಧರ್ಮವಾಗುತ್ತದೆ ಎಂದು ತಿಳಿಸಿದರು.

ಗುರುನಾನಕರು ತಮ್ಮ ಅನುಯಾಯಿಗಳಿಗೆ ಸಚ್ಚಾರಿತ್ರ್ಯದಿಂದ ಕೂಡಿದ ಜೀವನ ನಡೆಸಬೇಕೆಂದು ಕರೆಕೊಟ್ಟರು. ಅಲ್ಲದೆ ದೇವರನ್ನು ನಿಷ್ಕಲ್ಮಶ ಮನಸ್ಸಿನಿಂದ ಪ್ರೀತಿಸಬೇಕೆಂದು ಒತ್ತಿ ಹೇಳಿದರು. ದೇವರ ನ್ಯಾಯಾಲಯದಲ್ಲಿ ಎಲ್ಲ ಜನರ ಕೃತ್ಯಗಳ ತನಿಖೆ ತೆಗೆದುಕೊಳ್ಳಲಾಗುವುದೆಂದು ಮತ್ತು ಸತ್ಕಾರ್ಯಗಳನ್ನು ಮಾಡದ ಯಾರನ್ನೂ ರಕ್ಷಿಸುವುದಿಲ್ಲವೆಂದು ತಿಳಿಸಿದರು. ಪರಸ್ಪರ ವಿರುದ್ಧವೂ ಮತ್ತು ಪ್ರತ್ಯೇಕವೂ ಆದ ಹಿಂದೂ ಮತ್ತು ಇಸ್ಲಾಂ ಧರ್ಮಗಳ ತತ್ವಗಳನ್ನು ಒಂದುಗೂಡಿಸುವುದರ್ಲಿ ಗುರುನಾನಕರು ಮಾಡಿದ ಪ್ರಯತ್ನವು ಅತ್ಯಂತ ಯಶಸ್ವಿಯಾಯಿತು. ಮಾನವನ ಸಮಾನತೆಯ ತತ್ವವನ್ನು ಬೋಧಿಸಿದ ಇಸ್ಲಾಂ ಮತ್ತು ಸಿಖ್ ಮತಗಳು ಹಿಂದೂ ಸಮಾಜದ ಮೇಲೆ ಹೆಚ್ಚಿನ ಪ್ರಭಾವವನ್ನು ಬೀರಿ ಸಾಮಾಜಿಕ ಕ್ರಾಂತಿಯನ್ನುಂಟು ಮಾಡಿದವು. ಒಟ್ಟಾರೆ ಹೇಳುವುದಾದರೆ ಗುರುನಾನಕರು ಹಿಂದೂ ಮತ್ತು ಮುಸ್ಲಿಂ ಜನಾಂಗಗಳ ನಡುವೆ ಅನ್ಯೋನ್ಯತೆ ಹಾಗೂ ಸಾಮಾಜಿಕ ಭ್ರಾತೃತ್ವ ಭಾವನೆ ಬೆಳೆಯುವಂತೆ ಮಾಡುವುದರಲ್ಲಿ ಫಲಪ್ರದ ಪ್ರಯತ್ನ ಮಾಡಿದರು. ನಾನಕರು ದೇಶೀಯ ಭಾಷೆಯ ಬೆಳವಣಿಗೆಗೂ ಕಾರಣರಾದರು. ಅವರ ಬೋಧನೆಗಳು ಸಿಖ್ಖರ ಪವಿತ್ರ ಗ್ರಂಥವಾದ 'ಗ್ರಂಥಸಾಹಿಬ್' ಕೃತಿಯಲ್ಲಿ ಅಡಕವಾಗಿವೆ. ಈ ಗ್ರಂಥವು ಗುರುಮುಖಿ ಲಿಪಿಯಲ್ಲಿ ಬರೆಯಲ್ಪಟ್ಟಿದೆ.

### ದಕ್ಷಿಣ ಭಾರತದಲ್ಲಿ ಭಕ್ತಿ ಚಳವಳಿ

ಭಕ್ತಿ ಪಂಥವು ಕೇವಲ ಉತ್ತರ ಭಾರತಕ್ಕೆ ಸೀಮಿತವಾಗಿರಲಿಲ್ಲ. ಈ ಚಳವಳಿಯು ದಕ್ಷಿಣ ಭಾರತದಲ್ಲೂ ಜನಾನುರಾಗಿಯಾಗಿತ್ತು. ಭಕ್ತಿ ಚಳಿವಳಿಯು

ದ್ರಾವಿಡ (ತಮಿಳುನಾಡಿನಲ್ಲಿ ಆರಂಭವಾಯಿತೆಂದು ಭಾಗವತ ಪುರಾಣದ ಪ್ರಕಾರ ತಿಳಿದು ಬರುತ್ತದೆ. ಪ್ರಾಚೀನ ತಮಿಳು ಸಾಹಿತ್ಯದಲ್ಲಿ ಭಕ್ತಿ ಚಳುವಳಿಯ ಬಗ್ಗೆ ಸಾಕಷ್ಟು ಆಧಾರಗಳು ದೊರಕುತ್ತವೆ. ಕ್ರಿ.ಶ. ಏಳನೆ ಮತ್ತು ಎಂಟನೆ ಶತಮಾನಗಳಲ್ಲಿ ವೈಷ್ಣವ ಮತ್ತು ಶೈವ ಪಂಥಕೆ ಕ ಸೇರಿದ ಆರ್ಚಾಯರು ಭಕ್ತಿಪ್ರತಿಪಾದನ ಕಾರ್ಯದಲ್ಲಿ ನಿರತರಾಗಿದ್ದುದು ಕಂಡು ಬರುತ್ತದೆ. ಇವರುಗಳು ಸಮಾಜದ ವಿವಿಧ ವರ್ಗಗಳಿಂದ ಬಂದವರಾಗಿದ್ದು ದೇವರನ್ನು ಕುರಿತು ಆಡು ಭಾಷೆಗಳಲ್ಲಿ ಕೀರ್ತನೆಗಳನ್ನು ರಚಿಸಿ, ಅವುಗಳನ್ನು ಹಳ್ಳಿ ಹಳ್ಳಿಗಳಲ್ಲಿ ಸಂಚರಿಸಿ ಪ್ರಸಾರ ಮಾಡಿದರು.

ಭಗವದ್ಗೀತೆಗೂ ರಾಮಾನುಜರಿಗೂ ನಡುವೆ ಹನ್ನೆರಡು ಜನ ಆಳ್ವಾರರೆಂದು ಪ್ರಸಿದ್ಧರಾದ ವೈಷ್ಣವ ಸಂತರು ಭಕ್ತಿ ಚಳುವಳಿಯ ಸೇತುವೆಯಾಗಿದ್ದರು. ಇವರಲ್ಲಿ ನಮ್ಮಾಳ್ವಾರ್ ಮತ್ತು ತಿರುಮಂಗೈ ಆಳ್ವಾರ್ ಹೆಚ್ಚು ಪ್ರಸಿದ್ಧರಾದವರು. ಇವರೆಲ್ಲರ ಶ್ಲೋಕಗಳು 'ಲನಯಿರ ಪ್ರಭಂದಂ' ಎಂಬ ಕೃತಿಯಲ್ಲಿ ಅಡಕವಾಗಿವೆ. ಈ ಕೃತಿಯನ್ನು 'ತಮಿಳರ ವೇದ'ವೆಂದೂ ಕರೆಯುತ್ತಾರೆ.

ವೈಷ್ಣವ ಧರ್ಮದ ಪ್ರತಿಪಾದಕರಾದ ಆಳ್ವಾರರಂತೆ ಶೈವ ಧರ್ಮದ ಪ್ರತಿಪಾದಕರಾದ ನಾಯನಾನರು ಭಕ್ತಿ ಚಳವಳಿಯ ಪ್ರತಿಪಾದಕರಾಗಿದ್ದರು. ಇವರಲ್ಲಿ ಅಪ್ಪರ್, ಸಂಬಂದರ್ ಸುಂದರಾರ್ ಮತ್ತು ಮಾಣಿಕ್ಯ ವಾಚಗರ್ ಹೆಚ್ಚು ಪ್ರಸಿದ್ಧರಾದವರು. ಅಪ್ಪರ್, ಸಂಬಂದರ್ ಮತ್ತು ಸುಂದರಾರ್‌ರವರು ಹಾಡಿದ ಭಕ್ತಿಗೀತೆಗಳು 'ತೇವಾರಂ' ಎಂಬ ಗ್ರಂಥದಲ್ಲೂ ಮತ್ತು ಮಾಣಿಕ್ಯ ವಾಚಗರ್ ರಚಿಸಿದ ತಿರುವಾಚಗಮ್ ಎಂಬ ಗ್ರಂಥದಲ್ಲೂ ಅಡಕವಾಗಿವೆ. ಈ ಎರಡು ಕೃತಿಗಳನ್ನೂ ಕ್ರಿ.ಶ. ಹತ್ತನೆ ಶತಮಾನದ ಅಂತ್ಯಭಾಗದಲ್ಲಿ ನಂಬಿಯಂದರ್ ನಂಬಿ ಎಂಬಾತನು ಸಂಗ್ರಹಿಸಿ 'ತಿರುಮುರೈ' ಎಂಬ ಕೃತಿಯನ್ನು ರಚಿಸಿ ಒಟ್ಟಿಗೆ ಪ್ರಕಟಿಸಿದನು. ತಿರುಮುರೈ ಮತ್ತು ಪ್ರಭಂದಂ ಕೃತಿಗಳು ಪ್ರಪಂಚದಲ್ಲಿ ಭಕ್ತಿಗೀತೆಗಳ ಗಣಿಗಳಾಗಿವೆಯೆಂದು ಹೇಳಲಾಗಿದೆ.

ಇದೇ ಅವಧಿಯಲ್ಲಿ ಭಕ್ತಿಮಾರ್ಗದ ತತ್ವಗಳನ್ನು ನಾರದ ಮತ್ತು ಸಂದಿಲ್ಯರು ತಮ್ಮ ಭಕ್ತಿ ಸೂತ್ರಗಳಲ್ಲಿ ಕ್ರಮಬದ್ಧಗೊಳಿಸಿದರು. ಕ್ರಿ.ಶ.ಹನ್ನೆರಡನೆ ಶತಮಾನದಲ್ಲಿ ಶ್ರೀ ರಾಮಾನುಜರು ಭಕ್ತಿಮಾರ್ಗವನ್ನು ಭದ್ರಬುನಾದಿಯ ಮೇಲೆ ನಿಲ್ಲಿಸಿದರು. ಅವರ ತರುವಾಯ ಮಾಧ್ವ, ನಿಂಬಾರಕ ಮತ್ತು ವಲ್ಲಭಾಚಾರ್ಯರು ಅವರ ಮೇಲ್ಪಂಕ್ತಿಯನ್ನು ಅನುಸರಿಸಿದರು. ಕ್ರಿ.ಶ. ಹದಿಮೂರನೆ ಶತಮಾನದಲ್ಲಿ ಮಾಯಕಂದರ್ ಎಂಬವರು ಶೈವ ಸಿದ್ಧಾಂತವನ್ನು ಕ್ರಮಬದ್ಧಗೊಳಿಸಿದರು. ಇದಕ್ಕೆ ಸ್ವಲ್ಪ ಮುಂಚೆ ಶ್ರೀ ಬಸವೇಶ್ವರರು ವೀರ ಶೈವ ಧರ್ಮವನ್ನು ಪ್ರತಿಪಾದಿಸಿದರು. ಅನಂತರ ಮಹಾ ಶಿವ ಭಕ್ತರಾದ ಅಲ್ಲಮ ಪ್ರಭು ಅಕ್ಕಮಹಾದೇವಿ ಮತ್ತು ಚೆನ್ನಬಸವ ಮೊದಲಾದವರು ಬಸವೇಶ್ವರರ ಕಾರ್ಯವನ್ನು ಮುಂದುವರಿಸಿದರು. ಅವರು ರಚಿಸಿದ ವಚನಗಳಲ್ಲಿ ಭಕ್ತಿರಸವು ತುಂಬಿ ತುಳುಕುತ್ತಿರುವುದನ್ನು ಯಾರೂ ಗಮನಿಸಬಹುದು.

ದಕ್ಷಿಣ ಭಾರತದಿಂದ ಭಕ್ತಿ ಚಳವಳಿಯು ಉತ್ತರ ಭಾರತಕ್ಕೆ ಮಹಾರಾಷ್ಟ್ರದ ಮೂಲಕ ಹರಿಯತೊಡಗಿತು. ಕ್ರಿ.ಶ. ಹದಿಮೂರನೇ ಶತಮಾನದ ಕೊನೆಯಲ್ಲಿ

ಜ್ಞಾನದೇವ ಎಂಬ ಮರಾಠ ಸಂತನು ಗೀತೆಯ ಮೇಲಿನ ವ್ಯಾಖ್ಯಾನ ರೂಪವಾದ 'ಜ್ಞಾನೇಶ್ವರಿ' ಎಂಬ ಕೃತಿಯನ್ನು ಮರಾಠಿ ಭಾಷೆಯಲ್ಲಿ ರಚಿಸಿದನು. ಈ ಕೃತಿಯು ಮರಾಠಿ ಜನಗಳಿಗೆ ಭಕ್ತಿಯ ಬೈಬಲ್ ಗ್ರಂಥವಾಗಿದೆ, ನಾಮದೇವ ಈ ಕಾಲದ ಮತ್ತೊಬ್ಬ ಪ್ರಸಿದ್ಧ ಸಂತ ನಾಮದೇವ ದರ್ಜಿ ಜಾತಿಗೆ ಸೇರಿದವನಾಗಿದ್ದನು. ಈತನೂ ಸಹ ಆ ಕಾಲದ ಇತರ ಬೋಧಕರಂತೆ ಜಾತಿ ಪದ್ಧತಿ ಬಹು ದೇವತಾರಾಧನೆ ಮತ್ತು ಮೂಢ ನಂಬಿಕೆಗಳನ್ನು ಖಂಡಿಸಿ, ನಿಜವಾದ ನಂಬಿಕೆ, ನಿಷ್ಠೆ ಮತ್ತು ನಿಷ್ಕಲ್ಮಶ ಜೀವನವನ್ನು ನಡೆಸುವಂತೆ ಕರೆಕೊಟ್ಟನು. ಹಿಂದುಗಳ, ಮುಸ್ಲಿಮರ ಬ್ರಾಹ್ಮಣರ ಹಾಗೂ ಚಂಡಾಲರ ದೇವರುಗಳೆಲ್ಲರೂ ಒಬ್ಬನೆ, ಅವನ ಮುಂದೆ ಎಲ್ಲರೂ ಸರಿಸಮಾನರು ಎಂಬುದು ನಾಮ ದೇವನ ಉಪದೇಶಗಳ ಮುಖ್ಯ ತತ್ವವಾಗಿತ್ತು. ನಾಮದೇವನು ಪಂಡರಾಪುರದ ವಿಠಲ ಸ್ವಾಮಿಯನ್ನು ಕುರಿತು ನೂರಾರು 'ಅಭಂಗ'ಗಳನ್ನು ರಚಿಸಿದನು ಮತ್ತು ಮಹಾರಾಷ್ಟ್ರದಲ್ಲಿ 'ವಿಠಲ ಪಂಥ'ವನ್ನು ಆರಂಭಿಸಿದನು. ಈ ಪಂಥವು ಇಂದಿಗೂ ಮಹಾರಾಷ್ಟ್ರದಲ್ಲಿ ಅತ್ಯಂತ ಜನಪ್ರಿಯವಾಗಿದೆ. ಅಲ್ಲದೆ ಮುಂದಿನ ಶತಮಾನಗಳಲ್ಲಿ ಮಹಾರಾಷ್ಟ್ರದಲ್ಲಿ ಧರ್ಮ ಭೋಧನೆಯನ್ನು ಕೈಗೊಂಡ ಏಕನಾಥ ಮತ್ತು ತುಕಾರಾಮ್ ವಿಠಲ ಪಂಥದಿಂದ ಹೆಚ್ಚು ಪ್ರಭಾವಿತರಾಗಿದ್ದರೆಂದು ಹೇಳಲಾಗಿದೆ.

ವಿಜಯನಗರದ ಅರಸರ ಕಾಲದಲ್ಲಿ ಅನೇಕ ಸಂತರು ಜೀವಿಸಿದ್ದು ಭಕ್ತಿಮಾರ್ಗವನ್ನು ಬೋಧಿಸಿದರು. ಅವರಲ್ಲಿ ಪುರಂದರದಾಸರು ಪ್ರಖ್ಯಾತರಾದವರು. ಇವರು ತಮ್ಮ ಆರಾಧ್ಯ ದೇವರಾದ ಪುರಂದರ ವಿಠಲಸ್ವಾಮಿ ಬಗ್ಗೆ ಭಕ್ತಿಪೂರ್ಣವಾದ ಅನೇಕ ಕೀರ್ತನೆಗಳನ್ನು ರಚಿಸಿ ಭಕ್ತಿಮಾರ್ಗವನ್ನು ಜನಪ್ರಿಯಗೊಳಿಸಿದರು. ಪುರಂದರದಾಸರ ತರುವಾಯ ಕೀರ್ತನಕಾರರ ಪರಂಬರೆಯೇ ಆರಂಭವಾಯಿತು. ದಾಸ ಪರಂಬರೆ ಎಂದು ಇಂದೂ ಪ್ರಸಿದ್ಧಿಯಾಗಿದೆ. ಅವರಲ್ಲಿ ಕನಕದಾಸ, ವಿಜಯದಾಸ, ಗೋಪಾಲದಾಸ ಜಗನ್ನಾಥದಾಸ ಬಹುಮುಖ್ಯರಾದವರು. ಇವರೆಲ್ಲರೂ ಕರ್ಣಾಟಕದವರೇ ಆಗಿದ್ದರು.

ಒಟ್ಟಿನಲ್ಲಿ ಪೂರ್ವ ಮಧ್ಯಕಾಲೀನ ಭಾರತದ ಧಾರ್ಮಿಕ ಜೀವನದ ಮೇಲೆ ಭಕ್ತಿ ಚಳುವಳಿಯು ಮಹತ್ವಪೂರ್ಣ ಪ್ರಭಾವವನ್ನು ಬೀರಿತು. ಭಕ್ತಿ ಚಳುವಳಿಯ ಮಹಾಪ್ರವಾಹವು ಹಲವಾರು ಶತಮಾನಗಳಿಂದಲೂ ಹಿಂದೂ ಸಮಾಜದಲ್ಲಿ ಬಲವಾಗಿ ಬೇರೂರಿದ್ದ ಮೂಢನಂಬಿಕೆಗಳ ಹಾಗೂ ಜಾತಿ ಪದ್ಧತಿಗಳ ವಿರುದ್ಧದ ಪ್ರಭಲ ಕೋಟೆಯನ್ನು ಭೇದಿಸಿ ಜನತೆಗೆ ಮೋಕ್ಷಸಾಧನೆಗೆ ಸರಳ ಮಾರ್ಗವನ್ನು ತೋಲಿಸಿಕೊಡುವುದರಲ್ಲಿ ಯಶಸ್ವಿಯಾಯಿತು. ಭಕ್ತಿಮಾರ್ಗದ ಪ್ರಪಾದಕರೆಲ್ಲರೂ ಬಹಳ ಮಟ್ಟಿಗೆ ಸಮಾಜದ ಸಾಮಾನ್ಯ ಜನರ ವರ್ಗಕ್ಕೆ ಸೇರಿದವರಾಗಿದ್ದು ಅವರು ತಮ್ಮ ನಡೆನುಡಿಗಳಿಂದ ಮತ್ತು ಆಚರಣೆಗಳಿಂದ ಜನತೆಗೆ ಮಾರ್ಗದರ್ಶನ ಹಾಕಿಕೊಟ್ಟರು. ಅವರ ಪ್ರಭಾವವು ಇಂದಿಗೂ ಅನೂಚಾನವಾಗಿ ಮುಂದುವರಿದುಕೊಂಡು ಬರುತ್ತಿರುವುದು ಸಂತಸದ ಸಂಗತಿಯಾಗಿದೆ.

**ಸುಫಿಸಂತರು**

ಹಿಂದೂ ಧರ್ಮಸುಧಾರಕರ ಸುವಾರ್ತೆಗಳು ಹಿಂದುಗಳಲ್ಲಿ ಹರಡುತ್ತಿದ್ದಂತೆ ಇಸ್ಲಾಂ ಧರ್ಮದ ಸುಫಿಸಂತರ ತತ್ವಗಳು ಮುಸಲ್ಮಾನರ ಮೇಲೆ ತಮ್ಮ ಪ್ರಭಾವವನ್ನು ಬೀರುತ್ತಿದ್ದುವು. ಸುಫಿಧರ್ಮದ ಪ್ರತಿಪಾದಕರು ಮೂಢನಂಬಿಕೆಗಳನ್ನು ಮತ್ತು ಕುಸಂಸ್ಕಾರಗಳನ್ನೂ ಹಾಗೂ ಬಹುದೇವತಾರಾಧನೆ ಮತ್ತು ವಿಗ್ರಹಾರಾಧನೆಯನ್ನು ಖಂಡಿಸಿದರು. ಧರ್ಮವನ್ನು ಅರ್ಥರಹಿತವಾದ ಸಂಸ್ಕಾರಗಳಿಂದ ಸ್ವತಂತ್ರಗೊಳಿಸಿ ಸರಳವೂ ಮತ್ತು ಸುಲಭವೂ ಆದ ಮಾರ್ಗದ ಮೂಲಕ ದೇವರ ಸಾನಿಧ್ಯವನ್ನು ಪಡೆಯಲು ದಾರಿತೋರಿಸಬೇಕೆಂಬುದು ಸುಫಿಗಳು ಉದ್ದೇಶವಾಗಿತ್ತು. ಸುಫಿಧರ್ಮದ ಪ್ರತಿಪಾದಕರಲ್ಲಿ ದೆಹಲಿಯ ನಿಜಾಮ್-ಉದ್ದೀನ್-ಔಲಿಯ ಮತ್ತು ಅಜ್ಮೀರದ ಕವಾಜ ಮಯಿನ್-ಉದ್ದೀನ್-ಚಿಸ್ತಿ ಬಹುಮುಖ್ಯರಾದವರು.

ಸುಫಿಸಂತರು ದೇವರು ಒಬ್ಬನೆ ಮಾನವರೆಲ್ಲರೂ ಆತನ ಮಕ್ಕಳು ಮತ್ತು ಸರಿಸಮಾನರು ಎಂದು ಬೋಧಿಸಿದ ತತ್ವಗಳು ಧರ್ಮಸುದಾರಕರ ಮೇಲೆ ಹೆಚ್ಚಿನ ಪ್ರಭಾವ ಬೀರಿದವು. ದೇವರು ಒಬ್ಬನೆ ಎಂಬ ತತ್ವವು ಹಿಂದುಗಳಿಗೆ ಗೊತ್ತಿಲ್ಲದಿರಲಿಲ್ಲ. ಆದರೆ ಈ ತತ್ವವು ಇಸ್ಲಾಂ ಧರ್ಮದಲ್ಲಿ ಒತ್ತಿಹೇಳಲ್ಪಟ್ಟಿರುವುದರಿಂದ ನಾಮದೇವ, ರಮಾನಂದ, ಕಬೀರ್ ಮತ್ತು ನಾನಕ್ ಮೊದಲಾದವರ ಮೇಲೆ ಅದು ವೇಶೇಷ ಪ್ರಭಾವವನ್ನು ಬೀರುತು. ಸುಫಿಸಂತರು ಎರಡು ಜಾತಿಗಳ ಜನರನ್ನೂ ತಮ್ಮ ಶಿಷ್ಯರನ್ನಾಗಿ ಸ್ವೀಕರಿಸಿದ್ದರು. ಅವರ ಬೋಧನೆಗಳು ಎಲ್ಲ ಜಾತಿಮತಗಳ ಜನರಿಗೂ ಹಿಡಿಸಿದವು. ಅವರ ಸಮ್ಮುಖದಲ್ಲಿ ಎಲ್ಲ ಭಿನ್ನಾಭಿಪ್ರಾಯಗಳನ್ನೂ ಮರೆತುಬಿಡುತ್ತಿದ್ದರು. ಹೀಗೆ ಅವರು ತಮ್ಮ ಪ್ರಭಾವಕ್ಕೊಳಗಾದವರನ್ನೂ ಒಟ್ಟುಗೂಡಿಸಿ ಅವರಲ್ಲಿ ಪರಸ್ಪರ ಪ್ರೀತಿ ಮತ್ತು ಸಹಾನುಭೂತಿ ಬೆಳೆಯುವಂತೆ ಮಾಡಿದರು. ಸುಫಿಸಂತರ ತತ್ವಗಳು ಹಿಂದೂ ಧರ್ಮ ಸುಧಾರಕರ ಮೇಲೆ ಪ್ರಭಾವ ಬೀರು ಮತ್ತು ಇಸ್ಲಾಂ ಧರ್ಮದ ತತ್ವಗಳು ಸೊಗಸಾಗಿ ಸಂವಿಳನಗೊಂಡು ಭಕ್ತಿಮಾರ್ಗದ ರೂಪದಲ್ಲಿ ಹೊರಹೊಮ್ಮಿತು. ಭಕ್ತಿ ಮಾರ್ಗದ ಪ್ರತಿಪಾದಕರು ಎರಡು ಜನಾಂಗಗಳಲ್ಲೂ ಪರಸ್ಪರ ಅರಿವನ್ನುಂಟುಮಾಡಲು ಪ್ರಯತ್ನಿಸಿದರು. ಧಾರ್ಮಿಕ ಏಕತೆಗಾಗಿ ಅವರು ಅಪಾರವಾಗಿ ಶ್ರಮಿಸಿದರು. ಹಿಂದುಗಳು ಮುಸಲ್ಮಾನರ ಗುರುಗಳನ್ನು ಆರಾಧಿಸತೊಡಗಿದರು. ಅಂತೆಯೆ ಮುಸ್ಲಿಮರು ಹಿಂದುಗಳ ದೇವರುಗಳಿಗೆ ಗೌರವ ತೋರಿಸಲಾರಂಭಿಸಿದರು. ಇಂತಹ ಪರಸ್ಪರ ಗೌರವ ಆಧಾರಗಳು ಜಾನ್‌ಪುರದ ಹುಸೇನ್‌ಷಹನಿಂದ ಸ್ಥಾಪಿತವಾದ 'ಸತ್ಯಪೀರ್‌ಪಂಥ'ದಲ್ಲಿ ಅಭಿವ್ಯಕ್ತಗೊಂಡವು. ಈ ಪಂಥವು ಎರಡು ಧರ್ಮಗಳ ಸಂಮೇಳನವನ್ನು ಪ್ರತಿಬಿಂಬಿಸುತ್ತಿತ್ತು. ಆದರೆ ಈ ದಿಸೆಯಲ್ಲಿ ಹೆಚ್ಚಿನ ಯಶಸ್ಸು ಕಾಣಲು ಕಾಲವಿನ್ನೂ ಪಕ್ವವಾಗಿರಲಿಲ್ಲ. ಭಾರತವು ತನ್ನ ಪ್ರಖ್ಯಾತ ಗುರುಗಳ ಆದರ್ಶಗಳನ್ನು ಕಾರ್ಯರೂಪಕ್ಕೆ ತರಲು ಅಕ್ಬರನು ಸಿಂಹಾಸನಕ್ಕೆ ಬರುವತನಕ ಕಾಯಬೇಕಾಗಿತ್ತು. ಅಕ್ಬರನ ಕಾಲದಲ್ಲಿ ಹಿಂದುಗಳು ಮತ್ತು ಮುಸ್ಲಿಮರು ಅಬರಿಬ್ಬರಿಗೂ ಸೇರಿದ ಸಾಮ್ರಾಜ್ಯಕ್ಕೆ ಸೇವೆ ಸಲ್ಲಿಸುವುದರಲ್ಲಿ ತಮ್ಮ ತಮ್ಮ ಧಾರ್ಮಿಕ ದ್ವೇಷಗಳನ್ನು ಒತ್ತರಿಸಿ ಒಬ್ಬರಿಗೊಬ್ಬರು ಬೆಂಬಲವಾಗಿ ನಿಂತರು. ಅಂತಹ ಒಂದು ಪ್ರಯತ್ನವನ್ನು ಮುಸ್ಲಿಮರು ಈ ದೇಶವನ್ನು ಗೆದ್ದು ಜಯಿಸಿದಾಗಿನಿಂದಲೂ ಮಾಡಿರಲಿಲ್ಲ. ಕಬೀರ್ ಮತ್ತು ನಾನಕ್‌ರ ಕರೆಯು ಅಕ್ಬರನ

ಮೂಲಕ ಕಾರ್ಯರೂಪಕ್ಕೆ ಬಂದು ಸಂಪ್ರದಾಯವಾದಿಗಳ ಸಮುದಾಯದಲ್ಲಿ ಬಿರುಗಾಳಿಯನ್ನೆಬ್ಬಿಸಿತು.

ಕೊನೆಯದಾಗಿ ಧಾರ್ಮಿಕ ಸುಧಾರಣಾ ಚಳುವಳಿಯಿಂದ ಮುಖ್ಯವಾಗಿ ಎರಡು ಪರಿಣಾಮಗಳುಂಟಾದವು. ಮೊದಲನೆಯದಾಗಿ ಧರ್ಮಸುಧಾರಕರು ಬಹಳ ಮಟ್ಟಿಗೆ ಹಿಂದೂ ಮುಸ್ಲಿಮರಲ್ಲಿದ್ದ ಭಿನ್ನಾಭಿಪ್ರಾಯಗಳನ್ನು ಕಡಿಮೆ ಮಾಡುವುದರಲ್ಲಿ ಯಶಸ್ವಿಯಾದರು. ಇವರಿಂದ ಮುಂದೆ ಅಕ್ಬರನ ಉದಾರ ಧಾರ್ಮಿಕ ನೀತಿಗೆ ಅನುಕೂಲವಾಯಿತು. ಎರಡನೆಯದಾಗಿ ಧರ್ಮಸುಧಾರಕರು ತಮ್ಮ ಧರ್ಮಪ್ರಸಾರದಲ್ಲಿ ಪ್ರಾದೇಶಿಕ ಭಾಷೆಗಳನ್ನು ಬಳಸಿ ಜನಸಾಮಾನ್ಯರಿಗೂ ಧಾರ್ಮಿಕ ತತ್ವಗಳು ತಲುಪಲು ಕಾರಣರಾದರು. ಇದರಿಂದ ಪ್ರಾದೇಶಿಕ ಭಾಷೆಗಳೂ ಬೆಳವಣಿಗೆ ಹೊಂದಲು ಅನುಕೂಲವಾಯಿತು. ಬಂಗಾಳಿ, ಮರಾಠಿ, ಹಿಂದಿ ಪಂಜಾಬಿ, ಕನ್ನಡ ಮತ್ತಿತರ ಭಾಷೆಗಳಲ್ಲಿ ಅಪಾರ ಸಾಹಿತ್ಯವು ಸೃಷ್ಟಿಯಾಯಿತು.

## ಅಧ್ಯಾಯ 25

# ಪೂರ್ವ ಮಧ್ಯಕಾಲೀನ ಭಾರತದ ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳು

ಭಾರತಕ್ಕೆ ಪರ್ಶಿಯನ್ನರ ಟರ್ಕರ ಮತ್ತು ಆಫ್‌ಘನ್ನರ ಆಗಮನದಿಂದಾಗಿ ಹಿಂದೂ ಸಮಾಜದಲ್ಲಿ ತೀವ್ರ ಬಂಲಾವಣೆಗಳುಂಟಾದವು. ಸಾಮಾಜಿಕ ವ್ಯವಸ್ಥೆಯ ಬಗ್ಗೆ ಇಸ್ಲಾಮಿನ ದೃಷ್ಟಿಕೋನವು ಪ್ರಜಾಪ್ರಭುತ್ವವಾದಿಯಾದುದಾಗಿತ್ತು. ಅದು ಹುಟ್ಟಿಗಾಗಲೀ ಆನುಮಂಶೀಯತೆಗಾಗಲೀ ಹೆಚ್ಚಿನ ಮಾನ್ಯತೆ ಕೊಟ್ಟಿರಲಿಲ್ಲ. ಇಸ್ಲಾಂ ಧರ್ಮದ ಸಮಾನತೆ ನೀತಿಯ ಪ್ರಭಾವವು ಹಿಂದುಗಳ ಮೇಲೆ ಸ್ವಲ್ಪ ಕಾಲದಲ್ಲಿಯೆ ಪ್ರಭಾವ ಬೀರಿ ಸಾಮಾಜಿಕ ಕಟ್ಟು ಪಾಡುಗಳಲ್ಲಿ ಏರುಪೇರುಗಳಾದವು. ಕ್ರಿ.ಶ. ಹದಿಮೂರನೇ ಶತಮಾನಕ್ಕೆ ಮುಂಚೆ ಹಿಂದೂ ಸಮಾಜವು ಲಂಬ ರೇಖೆಯ ರೀತಿಯಲ್ಲಿ ವಿಭಜಗೊಂಡಿತ್ತು. ಈ ವ್ಯವಸ್ಥೆಯನ್ನು ಜೈನ ಮತ್ತು ಭೌದ್ಧ ಧರ್ಮಗಳಿಂದಲೂ ಬದಲಿಸಲು ಸಾಧ್ಯವಾಗದೆ ಈ ಎರಡು ಧರ್ಮಗಳೂ ಹಿಂದೂ ಸಮಾಜದೊಳಗೆ ಸೇರ್ಪಡೆಯಾದವು. ಇಸ್ಲಾಂ ಧರ್ಮವು ಭಾರತೀಯ ಸಮಾಜವನ್ನು ಪ್ರಮುಖವಾಗಿ ಎರಡು ಭಾಗವಾಗಿ ವಿಭಜಿಸಿ ಎರಡು ಸಮಾಜಗಳನ್ನು ಒಂದೇ ಮಣ್ಣಿನ ಮೇಲೆ ನೆಲೆಗೊಳಿಸಿತು. ಕಾಲಾನುಕ್ರಮದಲ್ಲಿ ಎರಡು ಸಮಾಜಗಳೂ ಪರಸ್ಪರ ಪ್ರಭಾವಿತವಾಗಿ ಆಚಾರ ವಿಚಾರಗಳಲ್ಲಿ, ಜೀವನ ವಿಧಾನದಲ್ಲಿ. ಉಡುಗೆಗಳಲ್ಲಿ, ಹಬ್ಬಹರಿದಿನಗಳ ಆಚರಣೆಯಲ್ಲಿ ಆಸ್ಥಾನಿಕ ಆಚರಣೆ ಮೊದಲಾದವುಗಳಲ್ಲಿ ಸಾಮ್ಯತೆ ಏರ್ಪಟ್ಟು ದೆಹಲಿಯ ಸುಲ್ತಾನರ ಮೂರು ಶತಮಾನಗಳ ಕಾಲದ ಆಳ್ವಿಕೆಯ ಅವಧಿಯಲ್ಲಿ ಹಿಂದೂ ಮುಸ್ಲಿಮರಿಬ್ಬರೂ ಪರಸ್ಪರ ಪ್ರಭಾವಿತರಾಗಿ ಹಿಂದು ಇಲ್ಲವೆ ಮುಸ್ಲಿಂ ಎರಡೂ ಅಲ್ಲದ ಹಿಂದೂಸ್ಥಾನೀ ಜೀವನ ವಿಧಾನವು ಆಚರಣೆಗೆ ಬಂದಿತು.

ಟರ್ಕರು ಭಾರತಕ್ಕೆ ಬಂದಾಗ ಜಾತಿಪದ್ಧತಿಯಿಂದ ಕೂಡಿದ್ದ ಇಲ್ಲಿನ ಸಾಮಾಜಿಕ ವ್ಯವಸ್ಥೆಯು ಅವರ ಗಮನ ಸೆಳೆಯಿತು. ಏಕೆಂದರೆ ಅಂತಹ ಜಾತಿಪದ್ಧತಿಯ ವ್ಯವಸ್ಥೆಯನ್ನು ಇದಕ್ಕೆ ಮೊದಲು ಅವರು ಮುಸ್ಲಿಂ ಪ್ರಪಂಚದಲ್ಲಿ ಎಲ್ಲೂ ಕಂಡಿರಲಿಲ್ಲ. ಹಿಂದುಗಳು ತಮ್ಮ ಸಮಾಜದಲ್ಲಿನ ಕೆಳವರ್ಗದವರನ್ನು ಅಪವಿತ್ರ ಜನಗಳೆಂದು ಪರಿಗಣಿಸಿದ್ದಲ್ಲದೆ ಮುಸ್ಲಿಮರನ್ನು ಮ್ಲೇಚ್ಚರೆಂದು ಕರೆದರು. ಉನ್ನತ ಹಿಂದುಗಳ ಈ ಧೋರಣೆಯು ಮುಸ್ಲಿಮರು ಕೆಳವರ್ಗದವರನ್ನು ತಮ್ಮ ಸಮಾಜಕ್ಕೆ ಆಹ್ವಾನಿಸುವಂತೆ ಮಾಡಿತು. ಅಲ್ಬರೂನಿಯು ಭಾರತಕ್ಕೆ ಬಂದಾಗ ಭಾರತೀಯ ಸಮಾಜವು ಜಾತೀಯತೆಯಿಂದ ಕೂಡಿದ ಸಂಪ್ರದಾಯಶರಣ ಸಮಾಜವಾಗಿತ್ತು. ಯುದ್ಧದ

ಸಮಯದಲ್ಲಿ ಹಿಂದುಗಳು ಸೆರೆಹಿಡಿದ ಮುಸಲ್ಮಾನರನ್ನು ಅವರು ಬಿಡುಗಡೆ ಹೊಂದಿದ ಮೇಲೆ ಮುಸ್ಲಿಂ ಸಮಾಜವು ಅವರನ್ನು ತನ್ನ ಸಮಾಜಕ್ಕೆ ಸೇರಿಸಿಕೊಳ್ಳುತ್ತಿತ್ತು. ಆದರೆ ಮುಸಲ್ಮಾನರಿಗೆ ಸೆರೆಸಿಕ್ಕಿದ ಹಿಂದುಗಳು ಬಿಡುಗಡೆ ಹೊಂದಿದ ಮೇಲೆ ಅವರನ್ನು ಹಿಂದುಗಳು ತಮ್ಮ ಸಮಾಜಕ್ಕೆ ಸೇರಿಸಿಕೊಳ್ಳುತ್ತಿರಲಿಲ್ಲವೆಂದು ಅಲ್ಬರೂನಿಯ ಹೇಳುತ್ತಾನೆ. ಹಿಂದುಗಳ ದಾರ್ಶನಿಕತೆ, ಧರ್ಮ, ಕಲೆ, ವಿಜ್ಞಾನಮೊದಲಾದ ಕ್ಷೇತ್ರಗಳಲ್ಲಿ ಅವರ ಸಾಧನೆಗಳ ಬಗ್ಗೆ ಅಲ್ಬರೂನಿಯು ತನ್ನ ಮೆಚ್ಚಿಗೆಯನ್ನು ವ್ಯಕ್ತಪಡಿಸಿರುವನು. ಆದರೆ ಇಂತಹ ಒಂದು ಮೇದಾವಿತನವು ಹರ್ಷವರ್ಧನ ನಂತರ ಕಂಡುಬರದೆ ಹಿಂದೂ ಸಮಾಜದಲ್ಲಿ ಜಡತ್ವವು ಕಂಡುಬಂದಿತು. ಟರ್ಕರು ಭಾರತಕ್ಕೆ ಬಂದಮೇಲೆ ಈ ಜಡತ್ವವು ಅಲುಗಿ ಸಮಾಜದಲ್ಲಿ ಅನೇಕ ಬದಲಾವಣೆಗಳಾಗತೊಡಗಿದವು. ಈ ಪರಿಸ್ಥಿತಿಯನ್ನರಿತ ಹಿಂದುಗಳು ಪ್ರಮುಖ ಪಾತ್ರವನ್ನು ನಿರ್ವಹಿಸಿದರು. ಕ್ರಿ.ಶ. ಹನ್ನೆರಡನೆ ಶತಮಾನದಲ್ಲಿ ಧರ್ಮ ಮತ್ತು ರಾಜಕೀಯವನ್ನು ಕುರಿತು ರಚಿತವಾಗಿರುವ ಕೃತಿಗಳನ್ನು ಅವಲೋಕಿಸಿದಾಗ, ಅಪರಿಶುದ್ಧರಾದ ಹಿಂದುಗಳು ಉಪವಾಸ ಮತ್ತಿತರ ಶುದ್ಧೀಕೃತ ಆಚರಣೆಗಳನ್ನು ಕೈಗೊಳ್ಳುವುದರ ಮೂಲಕ ಪುನಃ ತಮ್ಮ ಹಿಂದಿನ ಜಾತಿಗೆ ಸೇರಿಕೊಳ್ಳಲು ಸಾಧ್ಯವಿದ್ದಿತೆಂಬುದಾಗಿ ತಿಳಿದುಬರುತ್ತದೆ. ಆದರೆ ಈ ಬದಲಾವಣೆಗೆ ಸಾಕಷ್ಟು ಸಮಯವು ಬೇಕಾಗಿದ್ದಿತು.

ಮುಸಲ್ಮಾನರ ಆಳ್ವಿಕೆಯ ಆರಂಭದ ವರ್ಷಗಳಲ್ಲಿ ಹಿಂದೂ ಮುಸ್ಲಿಮರ ನಡುವೆ ಪರಸ್ಪರ ಅಪನಂಬಿಕೆ ಮತ್ತು ದ್ವೇಷಗಳು ಕಂಡುಬಂದವು. ಆದರೆ ಈ ಪರಿಸ್ಥಿತಿಯು ಬಹಳ ಕಾಲ ಮುಂದುವರಿಯಲು ಸಾಧ್ಯವಾಗಲಿಲ್ಲ. ಕಾಲಕ್ರಮದಲ್ಲಿ ಎರಡು ಜನಾಂಗಗಳ ನಡುವೆ ಪರಸ್ಪರ ಅರಿವುಂಟಾಗಿ ಸೌಹಾರ್ದತೆಯು ಏರ್ಪಡತೊಡಗಿತು. ಈ ದಿಸೆಯಲ್ಲಿ ಸುಫಿಸಂತರು, ಹಿಂದೂಧರ್ಮ ಮತ್ತು ಸಮಾಜ ಸುಧಾರಕರು ಹೆಚ್ಚಿನ ಕೆಲಸಮಾಡಿದರು. ಹಿಂದುಗಳ ಜಾತ್ರೆ ಉತ್ಸವ ಸಮಾರಂಭಗಳಲ್ಲಿ ಮುಸ್ಲಿಮರೂ ಮುಸ್ಲಿಮರ ಹಬ್ಬಹರಿದಿನಗಳ ಆಚರಣೆಯ ಸಮಾರಂಭಗಳಲ್ಲಿ ಹಿಂದುಗಳು ಭಾಗವಹಿಸತೊಡಗಿದರು. ಮುಸ್ಲಿಮರು ಹಿಂದುಗಳ ಹಬ್ಬಗಳ ಆಚರಣೆಯ ಕೆಲವು ಲಕ್ಷಣಗಳನ್ನು ಅನುಸರಿಸಲಾರಂಭಿಸಿದರು. ಹಿಂದು ಸೈನಿಕರು ಸುಲ್ತಾನರ ಸೈನ್ಯದಲ್ಲೂ, ಮುಸ್ಲಿಮರು ಹಿಂದೂ ರಾಜರುಗಳ ಸೈನ್ಯದಲ್ಲೂ ಸೇವೆ ಸಲ್ಲಿಸಲಾರಂಭಿಸಿದರು. ತೈಮೂರನು ಭಾರತದ ಮೇಲೆ ಆಕ್ರಮಣ ಮಾಡಿದಾಗ ಹಿಂದು ಮುಸ್ಲಿಮರಿಬ್ಬರೂ ಒಟ್ಟುಗೂಡಿ ಆಕ್ರಮಣ ಕಾರಣ ವಿರುದ್ಧ ಹೋರಾಡಿದರು. ಮಧ್ಯಕಾಲೀನ ಯುಗಾದಾದ್ಯಂತವೂ ಹಿಂದುಗಳು ಮುಸ್ಲಿಮರಿಗೂ ಮುಸ್ಲಿಮರು ಹಿಂದುಗಳಿಗೂ ಆಶ್ರಯ ಕೊಟ್ಟಿರುವ ನಿದರ್ಶನಗಳು ಬೇಕಾದಷ್ಟಿವೆ. ರಾಷ್ಟ್ರಿಯ ಐಕ್ಯತೆಯನ್ನು ಸಾಧಿಸಲು ತಮ್ಮ ಬೋಧನೆಗಳ ಮೂಲಕ ಪ್ರಯತ್ನಿಸಿದ ನಾಮದೇವ, ಕಬೀರ್ ಮತ್ತು ನಾನಕ್ ವೊದಲಾದವರ ದಿವ್ಯವಾಣಿಯಿಂದ ಸಾಮಾಜಿಕ ಜೀವನದಲ್ಲಿ ಮಹತ್ತರ ಬದಲಾವಣೆಗಳಾಗಿ, ಹಿಂದೂಗಳಲ್ಲಿನ ಕೆಳವರ್ಗದವರ ಸ್ಥಾನಮಾನಗಳ ಸುಧಾರಿತವಾದವು.

ಸ್ತ್ರೀಯರಿಗೆ ಸಮಾಜದಲ್ಲಿ ಗೌರವಯುತವಾದ ಸ್ಥಾನ ಕೊಡಲಾಗಿತ್ತು. ಹಿಂದೂ ಕುಟುಂಬದಲ್ಲಿ ಸ್ತ್ರೀಯು ಮನೆಯ ಒಡತಿಯಾಗಿದ್ದುದಲ್ಲದೆ ಆಕೆಯು ಭಾಗವಹಿಸದೆಯಾವ ಧಾರ್ಮಿಕ ಸಮಾರಂಭಗಳು ನೆರವೇರುವಂತಿರಲಿಲ್ಲ. ಎಲ್ಲಿ ಸ್ತ್ರೀಯು ಗೌರವಿಸಲ್ಪಡುವಳೋ ಅಲ್ಲಿ ದೇವರು ನೆಲೆಸಿರುತ್ತಾನೆ ಎಂದು ಸ್ಮೃತಿ ಪುರಣಗಳು

ತಿಳಿಸುತ್ತವೆ. ಸ್ತ್ರೀಯರು ವಿದ್ಯಾಭ್ಯಾಸ ಮಾಡಲು ಅವಕಾಶವಿದ್ದಿತು ಮತ್ತು ಈ ಕಾಲದಲ್ಲಿ ಕೆಲವು ಘನ ಸ್ತ್ರೀ ವಿದ್ವಾಂಸರು ಇದ್ದುದಾಗಿ ಕಂಡುಬರುತ್ತದೆ. ಮಂಡನ ಮಿಶ್ರರ ಪತ್ನಿಯು ಶ್ರೀ ಶಂಕರಾಚಾರ್ಯರನ್ನು ದಾರ್ಶನಿಕ ಸಂವಾದದಲ್ಲಿ ಸೋಲಿಸಿದ್ದಳು. ಅಂತೆಯೇ ರಾಜಶೇಖರನ ಪತ್ನಿಯಾದ ಅವಂತಿಸುಂದರಿಯು ಪ್ರಾಕೃತ ಭಾಷೆಯ ಪದಗಳಿಂದ ಕೂಡಿದ ಶಬ್ದಕೋಶವನ್ನು ರಚಿಸಿದಳು. ಮೀರಾಬಾಯಿ ಮತ್ತು ಶರಣೆ ಅಕ್ಕಮಹಾದೇವಿಯವರು ಭಕ್ತಿಗೀತೆಗಳನ್ನು ರಚಿಸಿದರು. ಸಂಗೀತ, ನೃತ್ಯ ಮತ್ತು ಚಿತ್ರಕಲೆಯನ್ನುಸ್ತ್ರೀಯರು ಹೆಚ್ಚಾಗಿ ಕಲಿಯುತ್ತಿದ್ದರು. ಈ ಕಲೆಯಲ್ಲಿ ಅನೇಕರು ಪಾಂಡಿತ್ಯಗಳಿಸಿದ್ದರು. ಸ್ತ್ರೀಯರು ಅಲಂಕಾರಪ್ರಿಯರಾಗಿದ್ದು ವಿವಿಧ ರೀತಿಯ ಆಭರಣಗಳಿಂದ ಸುಗಂಧದ್ರವ್ಯಗಳಿಂದ ಅಲಂಕರಿಸಿಕೊಳ್ಳುತ್ತಿದ್ದರು.

ಹೀಗಿದ್ದರೂ ಈ ಕಾಲದಲ್ಲಿ ಸ್ತ್ರೀಯರನ್ನು ಪುರುಷರಿಗೆ ಸಮಾನವೆಂದು ಪರಿಗಣಿಸಲಾಗಿರಲಿಲ್ಲ. ಅವರ ಸ್ವಾತಂತ್ರ್ಯವನ್ನು ಬಹಳ ಮಟ್ಟಿಗೆ ಮೊಟಕುಗೊಳಿಸಲಾಗಿತ್ತು. ಮಕ್ಕಳನ್ನು ಹೆರುವುದು ಮತ್ತು ಪಾಲಿಸುವುದು ಅಡಿಗೆ ಮಾಡುವುದು ಮತ್ತು ಗೃಹ ಕೃತ್ಯದ ಜವಾಬ್ದಾರಿಯನ್ನು ನೋಡಿಕೊಳ್ಳುವುದು ಅವರ ಮುಖ್ಯ ದಿನಚರಿಯಾಗಿತ್ತು. ರಾಜನ ಮತ್ತು ಸಮಾಜದ ಪ್ರತಿಷ್ಠಿತ ಕುಟುಂಬಗಳಲ್ಲಿ ಬಹುಪತ್ನಿತ್ವವು ರೂಢಿಯಲ್ಲಿತ್ತು. ಸಹಧರ್ಮಿಣಿಯರಲ್ಲಿ ದ್ವೇಷಾಸೂಯೆಗಳು ಕಂಡುಬರುತ್ತಿದ್ದವು. ಹಿಂದು ಸಮಾಜದಲ್ಲಿ ವಿಧವೆಯರು ಪುನಃ ವಿವಾಹವಾಗಲು ಅವಕಾಶವಿರಲಿಲ್ಲ. ಅವರು ಒಂದು ರೀತಿಯ ಸನ್ಯಾಸ ಜೀವನ ನಡೆಸಬೇಕಾಗಿತ್ತು. ಕೆಲವು ಭಾಗಗಳಲ್ಲಿ ಸತಿಪದ್ಧತಿಯು ರೂಢಿಯಲ್ಲಿತ್ತು. ಬಾಲ್ಯವಿವಾಹವು ಅಲ್ಲಲ್ಲಿ ಕಂಡುಬರುತ್ತಿತ್ತು. ಹೆಣ್ಣುಮಗುವು ಜನಿಸಿದರೆ ಅದನ್ನು ದುರದೃಷ್ಟವೆಂದು ಭಾವಿಸುತ್ತಿದ್ದರು. ಗಂಡುಮಗುವಿನ ಜನನವನ್ನು ಅದ್ದೂರಿಯಿಂದ ಆಚರಿಸಿ ಸಂತೋಷಪಡುತ್ತಿದ್ದರು. ಆಸ್ತಿಯ ಮೇಲೆ ಸ್ತ್ರೀಯರಿಗೆ ಹಕ್ಕಿರಲಿಲ್ಲ, ಒಟ್ಟಾರೆ ಹೇಳುವುದಾದರೆ ಈ ಕಾಲದಲ್ಲಿನ ಕುಟುಂಬ ವ್ಯವಸ್ಥೆಯು ಮಾತೃ ಪ್ರಧಾನವಾದ ಕುಟುಂಬ ವ್ಯವಸ್ಥೆಯಾಗಿತ್ತು.

ಮುಸ್ಲಿಂ ಸ್ತ್ರೀಯರನ್ನು ಹಿಂದೂ ಸ್ತ್ರೀಯರಿಗೆ ಹೋಲಿಸಿ ನೋಡಿದಾಗ ಅವರ ಸ್ಥಾನಮಾನಗಳು ಹಿಂದೂ ಸ್ತ್ರೀಯರ ಸ್ಥಾನಮಾನಗಳಿಗಿಂತ ಉತ್ತಮವಾಗಿದ್ದವು. ವಿಧವಾ ವಿವಾಹಕ್ಕೆ ಅವರಲ್ಲಿ ಅವಕಾಶವಿತ್ತು. ಬಾಲ್ಯವಿವಾಹವು ಅಷ್ಟು ಪ್ರಿಯವಾಗಿರಲಿಲ್ಲ. ಸಹಗಮನ ಪದ್ಧತಿಯು ರೂಢಿಯಲ್ಲಿರಲಿಲ್ಲ. ಆಸ್ತಿಯ ಮೇಲೆ ಹಕ್ಕು ಅವಳಿಗಿದ್ದಿತು. ಕೆಲವು ವಿಶೇಷ ಸಂದರ್ಭಗಳಲ್ಲಿ ಅವಳು ವಿವಾಹ ವಿಚ್ಛೇದನ ಮಾಡಿಕೊಳ್ಳಬಹುದಿತ್ತು. ಆದರೂ ಮುಸ್ಲಿಂ ಸ್ತ್ರೀಯೂ ಸಹ ಕೆಲವು ಅನಾನುಕೂಲಗಳನ್ನು ಹೊಂದಿದ್ದಳು. ಪರದಾ ಪದ್ಧತಿಯು ಜಾರಿಯಲ್ಲಿದ್ದುದರಿಂದ ಅವಳು ಮನೆಯ ನಾಲ್ಕು ಗೋಡೆಗಳ ಮಧ್ಯದಲ್ಲಿ ಸದಾ ಕಾಲಕಳೆಯಬೇಕಿತ್ತು. ಅವಳ ಸ್ವಾತಂತ್ರ್ಯವನ್ನು ಮೊಟಕುಗೊಳಿಸಲಾಗಿತ್ತು. ನಗರದ ಹೊರಗಡೆ ಇದ್ದ ಪವಿತ್ರ ಸಮಾಧಿಗಳಿಗೆ ಅವಳು ಭೇಟಿಕೊಡುವಂತಿರಲಿಲ್ಲ. ಬಹುಪತ್ನಿತ್ವಕ್ಕೆ ಅವಕಾಶವಿದ್ದಿತು ಮತ್ತು ಮುಸಲ್ಮಾನರ ಕೆಲವು ಗಂಡಸರು ಅನೇಕ ಪತ್ನಿಯರನ್ನು ಹೊಂದಿದ್ದರು. ಟರ್ಕರು ಬಂದ ಮೇಲೆ ರಾಣೀ ವಾಸದವರ ಸಂಖ್ಯೆ ಏರತೊಡಗಿತು ಮತ್ತು ಸ್ತ್ರೀಯರ ಸ್ಥಾನವು ಸಮಾಜದಲ್ಲಿ ಇನ್ನೂ ಕಡಿಮೆಯಾಯಿತು. ವ್ಯಭಿಚಾರಿಗಳಿಗೆ ಇಸ್ಲಾಂ ಧರ್ಮದಲ್ಲಿ ಕಠಿಣ ಶಿಕ್ಷೆಗಳನ್ನು ಗೊತ್ತುಪಡಿಸಿದ್ದರೂ ಕೆಲವು ಶ್ರೀಮಂತ ಮುಸಲ್ಮಾನರು ವ್ಯಭಿಚಾರ ಮೊದಲಾದ ಕೆಟ್ಟ ಕೆಲಸಗಳಲ್ಲಿ ತೊಡಗಿರುತ್ತಿದ್ದರು.

ಈ ಕಾಲದಲ್ಲಿ ಗುಲಾಮಿ ಪದ್ಧತಿಯು ಸರ್ವಸಾಮಾನ್ಯವಾಗಿದ್ದು ಹಿಂದೂ ಮುಸ್ಲಿಮರಿಬ್ಬರೂ ಅನೇಕ ಸಂಖ್ಯೆಯಲ್ಲಿ ಖಾಸಗೀ ಗುಲಾಮರನ್ನಿಟ್ಟುಕೊಂಡಿರುತ್ತಿದ್ದರು. ಹಿಂದುಗಳಲ್ಲಿ ಹದಿನೈದು ರೀತಿಯ ಗುಲಾಮರಿದ್ದುದಾಗಿ ಹಿಂದು ಸ್ಮೃತಿಗಳು ತಿಳಿಸುತ್ತವೆ. ಅಂತೆಯೆ ಮುಸಲ್ಮಾನರ ಗುಲಾಮರಲ್ಲಿ ನಾಲ್ಕು ರೀತಿಯವರಿದ್ದುದಾಗಿ ಕಂಡುಬರುತ್ತದೆ. ಕೆಲವರು ಕೊಂಡುಕೊಂಡವರು, ಮತ್ತೆ ಕೆಲವರು ಉಡುಗೊರೆಯಾಗಿ ಕೊಡಲ್ಪಟ್ಟವರು. ಮತ್ತೆ ಕೆಲವರು ಖೈದಿಗಳಾದವರು ಮತ್ತೆ ಕೆಲವರು ತಮ್ಮನ್ನು ತಾವೇ ಮಾರಿಕೊಂಡವರು. ಮುಸ್ಲಿಮ್ ಜನಾಂಗದಲ್ಲಿ ಗುಲಾಮಿ ಹೆಂಗಸು ಒಂದು ಮಗುವಿಗೆ ಜನ್ಮವಿತ್ತ ಮೇಲೆ ಆ ಮಗುವು ಸ್ವತಂತ್ರ ಪ್ರಜೆಯ ಸ್ಥಾನವನ್ನು ಪಡೆದುಕೊಳ್ಳುತ್ತಿತ್ತು. ಅವಳು ತನ್ನ ಒಡೆಯನ ಹೆಂಡತಿಯಾಗುತ್ತಿದ್ದಳು ಮತ್ತು ತನ್ನ ಒಡೆಯನ ಆಸ್ತಿಯಲ್ಲಿ ತನ್ನ ಮಕ್ಕಳಿಗೂ ಭಾಗ ಸಿಗುತ್ತಿತ್ತು. ಇಸ್ಲಾಂ ಧರ್ಮವು ಗುಲಾಮರೂ ಕೂಡ ಉನ್ನತ ಪದವಿಗೇರಲು ಅವಕಾಶ ನೀಡಿದೆ. ಮಹಮದ್ ಘೋರಿಯ ಗುಲಾಮರಾದ ತಾಜುದ್ದೀನ್ ಯಾಲ್ಡೋಜ್, ನಾಸಿರುದ್ದೀನ್ ಕುಬೈಚ ಮತ್ತು ಕುತ್ಬುದ್ದೀನ್ ಐಬಕ್ ಉನ್ನತ ಪದವಿ ಗೇರಿದರು. ಅಂತೆಯೆ ಇಲ್ತಮಷ್ ಮತ್ತು ಬಲ್ಬನ್ ಕೂಡ ದೆಹಲಿಯ ಸುಲ್ತಾನರಾದರು. ಸಮರ್ಥ ದಂಡನಾಯಕನಾಗಿದ್ದ ಮಲ್ಲಿಕ್‌ಕಪೂರನು ಗುಲಾಮನಾಗಿದ್ದನು. ಮುಸ್ಲಿಮರಲ್ಲಿ ಯೋಗ್ಯತೆಯಿದ್ದ ಗುಲಾಮಗಿರಿಗೆ ಗೌರವವಿದ್ದಿತು.

ಈ ಕಾಲದ ಸಮಾಜದ ಇನ್ನಿತರ ಕೆಲವು ಪ್ರಮುಖ ಲಕ್ಷಣಗಳೆಂದರೆ ಜನಗಳು ಹಣವನ್ನು ಅಪಾರವಾಗಿ ಪ್ರೀತಿಸುತ್ತಿದ್ದು ಅದನ್ನು ಭೂಮಿಯಲ್ಲಿ ಬಚ್ಚಿಡುತ್ತಿದ್ದರು. ಜನಗಳು ಮಾಯ ಮಂತ್ರ, ಮಾಟ ಮೊದಲಾದವುಗಳಲ್ಲಿ ನಂಬಿಕೆಯಿಟ್ಟಿದ್ದರು. ಸುಲ್ತಾನರುಗಳೂ ಕೂಡ ಇವುಗಳನ್ನು ನೋಡಿ ಆನಂದಿಸುತ್ತಿದ್ದರು. ದಾನಧರ್ಮಗಳನ್ನು ಹೆಚ್ಚಾಗಿ ಮಾಡುತ್ತಿದ್ದರು. ಅಥಿತಿ ಸತ್ಕಾರಕ್ಕೆ ಹಿಂದು ಮುಸ್ಲಿಮರಿಬ್ಬರೂ ಹೆಸರುವಾಸಿ ಯಾಗಿದ್ದರು. ಮನೆಗಳನ್ನು ಅಭಿರುಚಿಗೆ ತಕ್ಕಂತೆ ಅಲಂಕರಿಸುತ್ತಿದ್ದರು. ಬ್ರಾಹ್ಮಣರನ್ನು ಮತ್ತು ಗುರುಗಳನ್ನು ಹೆಚ್ಚಿನ ಗೌರವದಿಂದ ಕಾಣಲಾಗುತ್ತಿತ್ತು. ಹಿಂದುಗಳಲ್ಲಿ ಬಹು ಸಂಖ್ಯಾತರು ಸಸ್ಯಾಹಾರಿಗಳಾಗಿದ್ದರು. ಪ್ರಾಣಿಗಳಿಗೆ ಹಿಂಸೆ ಕೊಡುವುದನ್ನು ಖಂಡಿಸುತ್ತಿದ್ದರು. ತೀರಪ್ರದೇಶಗಳಲ್ಲಿ ಮೀನು ತಿನ್ನುವುದು ಸರ್ವಸಾಮಾನ್ಯವಾಗಿತ್ತು. ಎಲ್ಲಾ ರೀತಿಯ ಆಭರಣಗಳನ್ನು ತೊಡುತ್ತಿದ್ದರು. ಹತ್ತಿ ಉಣ್ಣೆ ಮುತ್ತ ರೇಷ್ಮೆಯಿಂದ ಮಾಡಿದ ಬಟ್ಟೆಗಳನ್ನು ಧರಿಸುತ್ತಿದ್ದರು. ನೋಬಲ್ಲರು ಹೆಚ್ಚು ಬೆಲೆಬಾಳುವ ಉಡುಪುಗಳನ್ನು ತೊಟ್ಟು ಹೆಚ್ಚು ಆಡಂಬರ ಪ್ರದರ್ಶನ ಮಾಡುತ್ತಿದ್ದರು. ನೃತ್ಯ, ಸಂಗೀತ, ನಾಟಕ, ಜಾತ್ರೆ ಮತ್ತು ಹಬ್ಬಗಳು ಮನರಂಜನೆಯ ಕಾರ್ಯಕ್ರಮಗಳಾಗಿದ್ದವು. ಇವುಗಳಲ್ಲಿದೆ ಪಗಡೆಯಾಡುವುದು. ಬೇಟೆ, ಕುಸ್ತಿ ಜೂಜು ಮತ್ತು ಕುಡಿತ ಮೊದಲಾದವುಗಳು ಕೂಡ ವಿನೋದಗಳಾಗಿದ್ದವು. ಕೆಳವರ್ಗದವರು ಸಾರಾಯಿ ಮೊದಲಾದವುಗಳನ್ನು ಕುಡಿದು ಸಾಮೂಹಿಕ ನೃತ್ಯಗಳನ್ನು ಮಾಡುತ್ತಿದ್ದರು. ಕುಡಿಯುವುದು ಮತ್ತು ಜೂಜಾಡುವುದು ಈ ಕಾಲದಲ್ಲಿ ಸರ್ವಸಾಮಾನ್ಯ ವಿಷಯಗಳಾಗಿದ್ದವು. ಬಲ್ಬನ್ ಮತ್ತು ಅಲ್ಲಾವುದ್ದೀನ್ ಮಾದಕ ಪಾನೀಯಗಳ ಸೇವನೆಯನ್ನು ನಿಷೇಧಿಸಿದ್ದರು. ಒಟ್ಟಾರೆ ಹೇಳುವುದಾದರೆ ಮೇಲ್ವರ್ಗದವರ ಜೀವನವು ವಿಲಾಸಯುತವಾಗಿದ್ದು ಜನ ಸಾಮಾನ್ಯರ ಜೀವನವು ಅಸಮಾಧಾನಕರವಾಗಿತ್ತು.

**ಆರ್ಥಿಕ ಪರಿಸ್ಥಿತಿ**

ಭಾರತವು ಪೂರ್ವಮಧ್ಯಕಾಲೀನ ಯುಗದಲ್ಲಿ ಸಂಪದ್ಭ ಶ್ರೀಮಂತ ದೇಶವಾಗಿದ್ದಿತು. ಆಗಾಗ್ಗೆ ದೇಶದ ಮೇಲೆ ಪರಕೀಯರ ಧಾಳಿಗಳು ಮತ್ತು ಯುದ್ಧಗಳು ನಡೆಯುತ್ತಿದ್ದರೂ, ರೈತರಿಗೆ ಮತ್ತು ವರ್ತಕರಿಗೆ ಇವುಗಳಿಂದ ಹೆಚ್ಚಿನ ತೊಂದರೆಯಾಗುತ್ತಿರಲಿಲ್ಲ. ಏಕೆಂದರೆ ಘರ್ಷಣೆ ಅಥವ ಹೋರಾಟವು ಯುದ್ಧರಂಗಭೂಮಿಗೆ ಸೀಮಿತಗೊಂಡಿರುತ್ತಿತ್ತು. ಅಲ್ಲದೆ ದೇಶದ ಆಧಾಯದ ಬೆನ್ನೆಲುಬಾಗಿದ್ದ ರೈತಾಪಿ ಜನಗಳ ಜೀವನವನ್ನು ಕದಡುವುದರಿಂದ ಯಾವ ಪ್ರಯೋಜನವೂ ಆಗುವುದಿಲ್ಲವೆಂದು ಆಕ್ರಮಣಕಾರರು ತಿಳಿದಿದ್ದರು. ಅಂತೆಯೆ ಮುಂದೆ ಭಾರತದಲ್ಲಿ ಅಧಿಕಾರ ಸ್ಥಾಪನೆ ಮಾಡಿದ ಟರ್ಕರೂ ಸಹ, ರೈತರು, ವರ್ತಕರು ಮತ್ತಿತರ ಉದ್ಯೋಗಸ್ತರಿಗೆ ಎಲ್ಲ ರೀತಿಯ ಪ್ರೋತ್ಸಾಹವನ್ನು ನೀಡಲು ಎಚ್ಚರಿಕೆ ವಹಿಸಿದ್ದರು. ಇದರಿಂದಾಗಿ ದೇಶವು ಮತ್ತಷ್ಟು ಸಂಪದ್ಯುಕ್ತವಾಗಿ ಮುಂದುವರಿಯಿತು. ವ್ಯಾಪಾರ ಮತ್ತು ಕೈಗಾರಿಗೆಗಳು ಊರ್ಜಿತಗೊಂಡವು. ವಿದೇಶಿ ವರ್ತಕರು ಭಾರತದ ಸಂಬಾರ ಪದಾರ್ಥಗಳು, ಬಟ್ಟೆ, ದಂತದ ಸಾಮಾನುಗಳು ಹಾಗೂ ಮತ್ತಿತರ ವಸ್ತುಗಳನ್ನು ಕೊಂಡುಕೊಳ್ಳಲು ಬೆಳ್ಳಿ ಬಂಗಾರವನ್ನು ಈ ದೇಶಕ್ಕೆ ತಂದರು. ಜನಗಳು ಆಗಂತುಕರಿಗೆ ತೋರಿಸುತ್ತಿದ್ದ ಅತಿಥಿ ಸತ್ಕಾರ ಹಾಗೂ ಅವರು ಅದ್ದೂರಿಯಿಂದ ಆಚರಿಸುತ್ತಿದ್ದ ಹಬ್ಬ ಹರಿದಿನಗಳು ದೇಶದ ಶ್ರೀಮಂತಿಕೆಯನ್ನು ಸೂಚಿಸುತ್ತಿದ್ದುದಾಗಿ ಅಧಿಕೃತ ದಾಖಲೆಗಳಿಂದ ತಿಳಿದು ಬರುತ್ತದೆ. ಫಿರೋಜ್‌ಷಹ ತುಘಲಕ್ ಹಾಗೂ ಇಬ್ರಾಹಿಂ ಲೂದಿಯವರ ಕಾಲದಲ್ಲಿ ಆಹಾರ ಧಾನ್ಯಗಳು ಬಹಳ ಕಡಿಮೆ ಬೆಲೆಗೆ ದೊರೆಯುತ್ತಿವು. ವಿವಿಧ ರೀತಿಯ ವಸ್ತುಗಳನ್ನು ತಯಾರಿಸುತ್ತಿದ್ದ ಕೈಕಸುಬುದಾರರಿಗೆ ಸುಲ್ತಾನರುಗಳು ಎಲ್ಲ ರೀತಿಯ ಪ್ರೋತ್ಸಾಹವನ್ನು ಕೊಟ್ಟಿದ್ದರು. ಮಹಮದ್-ಬಿನ್-ತುಘಲಕನ ಕಾಲದಲ್ಲಿ ಹಣದ ಸರಬರಾಜು ಹೆಚ್ಚಾಗಿದ್ದಿತು. ಬಹಮನಿ ಮತ್ತು ವಿಜಯನಗರ ಸಾಮ್ರಾಜ್ಯಗಳು ಅತುಳೈಶ್ವರ್ಯವನ್ನು ಹೊಂದಿದ್ದು ಆ ಕಾಲದ ದೇಶದ ಶ್ರೀಮಂತಿಕೆಯ ದ್ಯೋತಕಗಳಾಗಿದ್ದವು.

ವ್ಯವಸಾಯ ಮತ್ತು ಪಶುಪಾಲನೆಯು ಜನರ ಮುಖ್ಯ ಕಸುಬಾಗಿದ್ದಿತು. ಭೂಮಿಯು ಹೆಚ್ಚು ಫಲವತ್ತಾಗಿದ್ದಿತು ಮತ್ತು ವರ್ಷಕ್ಕೆ ಎರಡು ಫಸಲನ್ನು ತೆಗೆಯುತ್ತಿದ್ದರು. ಹತ್ತಿ, ಗೋಧಿ, ಬಾರ್ಲಿ, ಭತ್ತ, ಎಣ್ಣೆ ಬೀಜಗಳು ಹಾಗೂ ದ್ವಿದಳ ಧಾನ್ಯಗಳನ್ನು ಹೆಚ್ಚಾಗಿ ಬೆಳೆಯುತ್ತಿದ್ದರು. ಕಬ್ಬನ್ನು ಹೆಚ್ಚಾಗಿ ಬೆಳೆಯುತ್ತಿದ್ದರು. ಇವುಗಳಲ್ಲದೆಮಾವು, ಹಲಸು, ಕಿತ್ತಳೆ, ನಿಂಬೆ, ಮೊದಲಾದ ಹಣ್ಣುಗಳನ್ನು ಹೇರಳವಾಗಿ ಬೆಳೆಯುತ್ತಿದ್ದರು. ತೀರ ಪ್ರದೇಶದಲ್ಲಿ ಭತ್ತವನ್ನು ಮಲಬಾರ್ ಪ್ರದೇಶದಲ್ಲಿ ತೆಂಗು, ಮೆಣಸು, ಏಲಕ್ಕಿ, ದಾಲ್ಚಿನ್ನ ಮೊದಲಾದವುಗಳನ್ನು ಉತ್ಕೃಷ್ಟವಾಗಿ ಬೆಳೆಯುತ್ತಿದ್ದರು. ಹಳ್ಳಿಗಳು ಸ್ವಸಂತುಷ್ಟವಾಗಿದ್ದು ಅವುಗಳು ಭಾರತದ ಆರ್ಥಿಕ ಜೀವನದ ಬೆನ್ನು ಲುಬುಗಳಾಗಿದ್ದವು. ನಗರಗಳಲ್ಲೂ ಆರ್ಥಿಕ ಜೀವನವು ಚಟುವಟಿಕೆಯಿಂದ ಕೂಡಿತ್ತು ವಿಜಯನಗರ ಸಾಮ್ರಾಜ್ಯದಲ್ಲಿ ವ್ಯವಸಾಯವು ಅತ್ಯುತ್ತಮವಾಗಿದ್ದಿತೆಂದು ವಿದೇಶಿ ಬರಹಗಾರರ ಬರವಣಿಗೆಗಳಿಂದ ತಿಳಿದುಬರುತ್ತದೆ. ಫಿರೋಜ್ ತುಘಲಕನ ಕಾಲದಲ್ಲಿ ಒರಿಸ್ಸ ರಾಜ್ಯದಲ್ಲಿ ದನಕುರಿಗಳು ಎಷ್ಟು ಹೇರಳವಾಗಿದ್ದುವೆಂದರೆ ಅವುಗಳನ್ನು

ಕೊಳ್ಳುವವರು ಕಡಿಮೆಯಿದ್ದರು. ಬಂಗಾಳದಲ್ಲಿ ಎರಡು ಬೆಳೆ ಭತ್ತವನ್ನು ಬೆಳೆಯುತ್ತಿದ್ದರೆಂದು ಚೀನೀ ಪ್ರವಾಸಿಗ ಮಾಹುಆನ ತಿಳಿಸುವುದಲ್ಲದೆ ಅಲ್ಲಿ ಎರಡು ರೀತಿಯ ಸಾವೆಯನ್ನೂ, ಎಳ್ಳು, ಹುರುಳಿ, ಶುಂಠಿ, ಸಾಸುವೆ, ಈರುಳ್ಳಿ, ಬೆಳ್ಳುಳ್ಳಿ, ಸೌತೆಕಾಯಿ ಮತ್ತು ಬದನೆಕಾಯಿ ಮೊದಲಾದವುಗಳನ್ನು ಹೇರಳವಾಗಿ ಬೆಳೆಯುತ್ತಿದ್ದರೆಂದು ತಿಳಿಸುತ್ತಾನೆ. ದನಕುರಿಗಳು, ಕೋಳಿಗಳು ಮತ್ತು ಕುದುರೆಗಳು ಹೆಚ್ಚಾಗಿ ದೊರೆಯುತ್ತಿದ್ದವು.

ಭಾರತವು ನಯವಾದ ಹತ್ತಿ ಬಟ್ಟೆಗಳ ಕೈಗಾರಿಕೆಗೆ ಈ ಕಾಲದಲ್ಲಿ ಪ್ರಸಿದ್ಧಿ ಪಡೆದಿತ್ತು. ಗುಜರಾತು ಮತ್ತು ಬೊಂಬಾಯಿಗಳು ಹತ್ತಿಬಟ್ಟೆಯ ಉತ್ಪಾದನೆಯ ಪ್ರಮುಖಕೇಂದ್ರಗಳಾಗಿದ್ದವು. ಚೀಟಿಬಟ್ಟೆ, ರೇಷ್ಮೆಬಟ್ಟೆ, ವೆಲ್ವೆಟ್, ಸಾಟಿನ್, ರತ್ನಗಂಬಳಿ, ಮೊದಲಾದವುಗಳನ್ನು ಇಲ್ಲಿ ತಯಾರಿಸಲಾಗುತ್ತಿತ್ತು, ದಕ್ಷಿಣದಲ್ಲಿ ಕಲ್ಲಿಕೋಟೆಯ ಸಮೀಪದ ಷಾಲಿಯಟ್ ಎಂಬಲ್ಲಿ ಹತ್ತಿ ಬಟ್ಟೆಗಳನ್ನು ತಯಾರಿಸಲಾಗುತ್ತಿತ್ತು. ಇವೆಲ್ಲಕ್ಕಿಂತ ಹೆಚ್ಚಾಗಿ ಬಂಗಾಳದಲ್ಲಿ ಉತ್ತಮ ದರ್ಜೆಯ ಹತ್ತಿಬಟ್ಟೆಯು ತಯಾರಿಸಲ್ಪಡುತ್ತಿದ್ದು ಕಡಿಮೆ ಬೆಲೆಗೆ ದೊರೆಯುತ್ತಿತ್ತು. ಆಭರಣಗಳ ತಯಾರಿಕೆ, ದಂತದ ಕೆಲಸ, ಮುತ್ತುಗಳಿಗೆ ಹೊಳಪುಕೊಡುವದು, ಕಲ್ಲಿನಲ್ಲಿ ನಯವಾದ ಮತ್ತು ಸುಂದರವಾದ ಕೆಲಸಗಳನ್ನು ಮಾಡುವುದು ಬಹಳ ಮುಂದುವರಿದಿದ್ದತು. ಚಿನ್ನದ ಮತ್ತು ಬೆಳ್ಳಿಯ ಆಭರಣಗಳಿಗೆ ಹೆಚ್ಚಿನ ಬೇಡಿಕೆಯಿದ್ದಿತು. ಗುಜರಾತು ಈ ಕೈಗಾರಿಕೆಗಳಿಗೆ ಹೆಚ್ಚು ಪ್ರಸಿದ್ದಿಯಾಗಿತ್ತು. ಹವಳ ಮತ್ತು ಪ್ರಶಸ್ತ ಹರಳುಗಳನ್ನು ಕ್ಯಾಂಬೆಯಲ್ಲಿ ತಯಾರಿಸುತ್ತಿದ್ದರು. ದಂತವನ್ನು ಅಲಂಕಾರಕ್ಕಾಗಿ ಉಪಯೋಗಿಸುತ್ತಿದ್ದರು. ಮುತ್ತುಗಳನ್ನು ತಿನ್ನವೆಲ್ಲಿಯಲ್ಲಿ ಉತ್ಪಾದಿಸುತ್ತಿದ್ದರು. ವಜ್ರಗಳನ್ನು ಕತ್ತರಿಸಿ ಹೊಳಪುಕೊಡುವುದು, ಮಾಣಿಕ್ಯ ಮತ್ತು ನೀಲಮಣಿಗಳನ್ನು ಅಂದವಾಗಿ ವಿಜಯನಗರ ಸಾಮ್ರಾಜ್ಯದಲ್ಲಿ ಮಾಡಲಾಗುತ್ತಿತ್ತು.

ದೇಶೀಯ ಮತ್ತು ವಿದೇಶೀಯ ವ್ಯಪಾರವು ಬಹಳ ಬಿರುಸಿನಿಂದ ನಡೆಯುತ್ತಿತ್ತೆಂಬುದಾಗಿ ವಿದೇಶಿ ಪ್ರವಾಸಿಗರೆಲ್ಲರೂ ಅಭಿಪ್ರಾಯಪಟ್ಟಿರುವರು. ದೆಹಲಿಯು ಆಗಿನ ಕಾಲದಲ್ಲಿ ಒಂದು ಪ್ರಮುಖ ವ್ಯಾಪಾರ ಕೇಂದ್ರವೂ ಆಗಿದ್ದಿತೆಂದು ಇಬನ್ ಬಟೂಟನು ಹೇಳುತ್ತಾನೆ. ಮಹಮದ್-ಬಿನ್-ತುಘಲಕನ ನೂತನ ರಾಜದಾನಿಯಾಗಿದ್ದ ದೌಲತಾಬಾದ್ ರತ್ನಪಡಿಗಳ ವ್ಯಾಪಾರದ ಕೇಂದ್ರವಾಗಿದ್ದು ಅಲ್ಲಿನ ವರ್ತಕರು ಹೆಚ್ಚುಧನಿಕರಾಗಿದ್ದರು. ವ್ಯಾಪಾರದ ಅನುಕೂಲಕ್ಕಾಗಿ ಉತ್ತಮವಾದ ರಸ್ತೆಗಳು ನಿರ್ಮಿತವಾಗಿದ್ದುವು. ದೆಹಲಿಗೂ ಮತ್ತು ದೌಲತಾಬಾದಿಗೂ ಇದ್ದ ರಸ್ತೆಯು ಉತ್ತಮವಾಗಿದ್ದು ಮಾರ್ಗಮಧ್ಯದಲ್ಲಿ ಮೂರುಕಡೆ ತಪಾಸಣೆ ಕೇಂದ್ರಗಳಿದ್ದವು. ಗೋವ, ಮಂಗಳೂರು, ಭಟ್ಕಳ, ಕಲ್ಲಿಕೋಟೆ, ಕ್ವಿಲಾನ್, ದೇಬಲ್ ಪ್ರಮುಖ ರೇವು ಪಟ್ಟಣಗಳಾಗಿದ್ದವು. ವ್ಯಾಪಾರವು ಬಹಳ ಮಟ್ಟಿಗೆ ಮುಸ್ಲಿಮರ ಕೈಯಲ್ಲಿದ್ದಿತು. ಭಾರತದಿಂದ ಹತ್ತಿಬಟ್ಟೆಗಳು, ಸಂಬಾರ ಪದಾರ್ಥಗಳು ಮೆಣಸು, ಶ್ರೀಗಂಧಪನ್ನಿರು, ಕರ್ಪೂರ, ಕೇಸರಿ, ಪಾದರಸ ಕಸ್ತೂರಿ ಹಾಗೂ ಲೋಹಗಳನ್ನು ರಫ್ತು ಮಾಡಲಾಗುತ್ತಿತ್ತು. ಅರೆಬೀಯಾದಿಂದ ಉತ್ತಮತಳಿಯ ಕುದುರೆಗಳನ್ನು ಆಮದು ಮಾಡಿಕೊಳ್ಳಲಾಗುತ್ತಿತ್ತು. ಮುತ್ತುಗಳನ್ನು ಆರ್ಮಜ್, ಕಾಯಲ್‌ಗಳಿಂದಲೂ ಚೈನಾ ಮತ್ತು ಅಲೆಗ್ಸಾಂಡ್ರಿಯಗಳಿಂದ

ಜರತಾರಿ ಬಟ್ಟೆಗಳನ್ನು ತರಿಸಿಕೊಳ್ಳಲಾಗುತ್ತಿತ್ತು. ವಿಜಯನಗರದ ವರ್ತಕರು ಬರ್ಮಾದ ಪ್ರಶಸ್ತ ಶಿಲೆ ಮತ್ತು ಕಸ್ತೂರಿಯನ್ನು ಮಾರಲು ಪ್ರಸಿದ್ಧ ವ್ಯಪಾರ ಸ್ಥಳವಾಗಿದ್ದ ಪುಲಕಾಟ್‌ಗೆ ಹೋಗುತ್ತಿದ್ದರು. ವಿದೇಶೀ ವ್ಯಾಪಾರವು ಪರ್ಶಿಯಾಕೊಲ್ಲಿ ಅರೆಬೀಯಾ ಮತ್ತು ಪೂರ್ವ ಆಫ್ರಿಕದೊಂದಿಗೆ ನಡೆಯುತ್ತಿತ್ತು. ಪದಾರ್ಥಗಳ ಸಾಗಾಣಿಕೆಯು ಮೆಸಪಟೋಮಿಯ ಮಾರ್ಗವಾಗಿ ಪರ್ಶಿಯಾ ಕೊಲ್ಲಿಯ ಮೂಲಕ ಮೆಡಿಟರೇನಿಯನ್ ತೀರ ಪ್ರದೇಶದೊಂದಿಗೆ ನಡೆಯುತ್ತಿತ್ತು. ಇಲ್ಲಿಂದ ಮುಂದೆ ಅವು ಯೂರೋಪಿಗೆ ರವಾನಿಸಲ್ಪಟ್ಟಿದ್ದವು. ಏಡನ್ ಮತ್ತು ಜೆಡ್ಡಾಗಳು ಭಾರತೀಯ ವಸ್ತುಗಳ ಸಂಗ್ರಹಾಲಯಗಳಾಗಿದ್ದಿವು.

ಒಟ್ಟಿನಲ್ಲಿ ಹೇಳುವುದಾದರೆ ಜನಗಳ ಆರ್ಥಿಕ ಸ್ಥಿತಿಯು ಈ ಕಾಲದಲ್ಲಿ ಉತ್ತಮವಾಗಿತ್ತು. ದೇಶವು ಸಂಪತ್ಸಮೃದ್ಧಿಗಳಿಂದ ಕೂಡಿದ್ದು ಸಾಂಸ್ಕೃತಿಕ ಕ್ಷೇತ್ರದ ಉತ್ತರೋತ್ತರ ಪ್ರಗತಿಯು ಕಂಡುಬಂದಿತು. ಜನಗಳ ಜೀವನಕ್ಕೆ ಮುಖ್ಯ ಆಸರೆಯಾಗಿದ್ದ ವ್ಯವಸಾಯಕ್ಕೆ ಸುಲ್ತಾನರುಗಳು ಸೌಲಭ್ಯಗಳನ್ನು ಕಲ್ಪಿಸಿಕೊಟ್ಟಿದ್ದರು. ಅಲ್ಲಾವುದ್ದೀನ್ ಖಿಲ್ಜಿಯ ಕಾಲದಲ್ಲಿ ಆರ್ಥಿಕ ಪರಿಸ್ಥಿತಿಯು ತೀವ್ರವಾಗಿ ಬದಲಾವಣೆಗೊಂಡಿತು. ಅಲ್ಲಾವುದ್ದೀನ್ ಖಿಲ್ಜಿಯು, ದಿನನಿತ್ಯ ಉಪಯೋಗಿಸುತ್ತಿದ್ದ ಎಲ್ಲ ಪದಾರ್ಥಗಳ ಬೆಲೆಗಳನ್ನು ನಿಗಧಿಪಡಿಸಿದ್ದನು. ರಾಜನ ಉಗ್ರಾಣದಲ್ಲಿ ಧಾನ್ಯವನ್ನು ಶೇಖರಿಸಿಡಲಾಗುತ್ತಿತ್ತು. ವರ್ತಕರು ಹೆಚ್ಚಿನ ಪ್ರಮಾಣದಲ್ಲಿ ಪದಾರ್ಥಗಳನ್ನು ಕೊಂಡು ಮಾರಲು ಸರ್ಕಾರವು ಅವರಿಗೆ ಮುಂಗಡವಾಗಿ ಹಣ ಕೊಡುವ ವ್ಯವಸ್ಥೆ ಮಾಡಿದ್ದಿತು. ಮಾರುಕಟ್ಟೆಯ ನಿಯಂತ್ರಣಕ್ಕಾಗಿ ಅಲ್ಲಾವುದ್ದೀನನು ಪ್ರತ್ಯೇಕ ಅಧಿಕಾರಗಳನ್ನು ನೇಮಿಸಿದ್ದನು. ಅಪ್ರಮಾಣಿಕ ವರ್ತಕರಿಗೆ ಕಠಿಣವಾದ ಶಿಕ್ಷೆಗಳನ್ನು ಕೊಡಲಾಗುತ್ತಿತ್ತು. ಪದಾರ್ಥಗಳ ಬೆಲೆಗಳು ಎಷ್ಟು ಕಡಿಮೆಯಿದ್ದುವೆಂದರೆ ಒಂದು ತಾಮ್ರದ ನಾಣ್ಯಕ್ಕೆ (ಜೆತಾಲ್) ಒಂದು ಸೇರು ಧಾನ್ಯವು ಸಿಕ್ಕುತ್ತಿತ್ತು. ಹತ್ತಿಯನ್ನು ಹೆಚ್ಚಾಗಿ ಬೆಳೆಯುತ್ತಿದ್ದರೆಂದು ಹತ್ತಿಗಿಡಗಳು ವಿಲ್ಲೊ ಮತ್ತು ಪ್ಲೇನ್ ಮರಗಳಂತೆ ರೆಂಬೆಗಳನ್ನು ಎಲ್ಲಾ ಕಡಿಗೂ ಹರಡಿ ಹೆಚ್ಚಿನ ಫಸಲನ್ನು ಕೊಡುತ್ತಿದ್ದುವೆಂದು ಮಾರ್ಕೋಪೋಲೋ ತಿಳಿಸುತ್ತಾನೆ. ದ್ರಾಕ್ಷಿತೋಟಗಳಲ್ಲಿ ವರ್ಷಕ್ಕೆ ಎರಡು ಬೆಳೆ ತೆಗೆಯುತ್ತಿದ್ದರು. ಮೆಣಸು ಶುಂಠಿ ಮತ್ತು ನೀಲಿಯನ್ನು ಹೆಚ್ಚಿನ ಪ್ರಮಾಣದಲ್ಲಿ ಬೆಳೆಯುತ್ತಿದ್ದರು. ದೇಶದಲ್ಲಿ ಆಗಾಗ್ಗೆ ಕ್ಷಾಮಗಳು ಕಂಡು ಬಂದರೂ ಅವುಗಳ ನಿವಾರಣೆಗೆ ಸರ್ಕಾರವು ಪರಿಹಾರ ಕ್ರಮಗಳನ್ನು ಕೈಗೊಂಡು ಜನರ ಜೀವನವು ಕಂಗೆಡದಂತೆ ನೋಡಿಕೊಳ್ಳುತ್ತಿತ್ತು. ಫೀರೋಜನು ನೀರಾವರಿ ವ್ಯವಸಾಯಕ್ಕೆ ಮಾಡಿಕೊಟ್ಟ ಸೌಲಭ್ಯಗಳಿಂದ ವ್ಯವಸಾಯವು ಮತ್ತಷ್ಟು ಮುಂದುವರಿಯಿತು. ದೆಹಲಿಯು ಜನಸಂಖ್ಯೆಯಲ್ಲಿ ಮತ್ತು ವಿಸ್ತೀರ್ಣದಲ್ಲಿ ಹೆಚ್ಚಾಗಿ ಬೆಳೆಯಿತು. ಈ ಕಾಲದ ಆರ್ಥಿಕ ಜೀವನದ ಮತ್ತೊಂದು ಪ್ರಮುಖ ಲಕ್ಷಣವೆಂದರೆ ಕುಶಲ ಕರ್ಮಿಗಳು ಏರ್ಪಡಿಸಿದ ವಸ್ತುಪ್ರದರ್ಶನವಾಗಿತ್ತು. ಟರ್ಕೋ-ಆಫ್ಘನ್ನರು ವಾಣಿಜ್ಯ ಬಂಡವಾಳದ ಮೇಲೆ ಆದಾರಿತವಾದ ಪಟ್ಟಣ ಆರ್ಥಿಕ ವ್ಯವಸ್ಥೆಯನ್ನು ಜಾರಿಗೆ ತಂದರು. ವ್ಯಾಪಾರದಲ್ಲಿ ಸ್ವತಂತ್ರ ಪೈಪೋಟಿಯು ಈ ಆರ್ಥಿಕತೆಯ ಹಿನ್ನೆಲೆಯಗಿತ್ತು.

ಕ್ರಿ.ಶ. ಹದಿನಾಲ್ಕನೆ ಶತಮಾನದ ಅಂತ್ಯದವೇಳಿಗೆ ಆರ್ಥಿಕ ಮುಗ್ಗಟ್ಟು ದೇಶದಲ್ಲಿ ಪ್ರಾರಂಭವಾಯಿತು. ದೆಹಲಿಯ ಸಾಮ್ರಾಜ್ಯವು ಅನೇಕ ಪಾಳೆಯ ಪಟ್ಟುಗಳಾಗಿ

ಒಡೆಯಲ್ಪಟ್ಟಿತು. 1399ರಲ್ಲಿ ತೈಮೂರನು ಭಾರತದ ಮೇಲೆ ಧಾಳಿಮಾಡಿ ದೇಶದ ಐಶ್ವರ್ಯವನ್ನೆಲ್ಲಾ ದೋಚಿದನು. ಆಕ್ರಮಣಕಾರನು ತನ್ನ ದಾರಿಯಲ್ಲಿದ್ದ ನಗರಗಳಲ್ಲಿನ ಐಶ್ವರ್ಯವನ್ನೆಲ್ಲಾ ಲೂಟಿ ಹೊಡೆದನು. ಇದರಿಂದಾಗಿ ಆರ್ಥಿಕ ಮುಗ್ಗಟ್ಟು ಉಂಟಾಗಿ ವ್ಯವಸಾಯ ಮತ್ತು ವ್ಯಾಪಾರದ ಚಟುವಟಿಕೆಗಳು ಸ್ಥಾನಪಲ್ಲಟಗೊಂಡವು. ದೆಹಲಿಯ ಸಾಮ್ರಾಜ್ಯವು ತನ್ನ ಪ್ರಾಮುಖ್ಯತೆಯನ್ನು ಕಳೆದುಕೊಂಡಿತು. ಅದರ ಸ್ಥಾನದಲ್ಲಿ ಪ್ರಾಂತೀಯ ರಾಜ್ಯಗಳು ಅಸ್ತಿತ್ವಕ್ಕೆ ಬಂದು ಅವುತಮ್ಮ ಐಶ್ವರ್ಯಕ್ಕೆ ಮತ್ತು ಆರ್ಥಿಕ ಚಟುವಟಿಕೆಗಳಿಗೆ ಹೆಸರಾದವು.

**ಕಲೆ ಮತ್ತು ಸಾಹಿತ್ಯ**

ಮಧ್ಯಕಾಲೀನ ಯುಗದಲ್ಲಿ ಕಲೆಯು ಅಭಿವೃದ್ಧಿ ಹೊಂದಿದ್ದಿತು. ಭಾರತೀಯ ಕಲೆಯಿಂದ ಮುಸ್ಲಿಮರ ಕಲೆಯು ಎಷ್ಟರ ಮಟ್ಟಿಗೆ ಪ್ರಭಾವಿತವಾಗಿದೆಯೆಂಬುದು ಚರ್ಚಾಸ್ಪದ ವಿಷಯವಾಗಿ ಉಳಿದಿದೆ. ಇಂಡೋ ಮುಸ್ಲಿಮ್ ಶೈಲಿಗಳೆರಡರು ಸಂಮಿಳನದಿಂದ ರೂಪಿತವಾದ ಈ ಕಾಲದ ವಾಸ್ತುಶಿಲ್ಪಕ್ಕೆ ಇಂಡೋ ಮುಸ್ಲಿಂ ಶೈಲಿ ಅಥವ ಸಾರ್‌ಸೆನಿಕ್ ಶೈಲಿ ಎಂದು ಕರೆಯಲಾಗಿದೆ. ಇಂಡೋ ಮುಸ್ಲಿಂ ಶೈಲಿಯು ಇಸ್ಲಾಮಿಕ್ ಕಲೆಯ ವಿವಿಧ ರೂಪವೆಂದು ಕೆಲವರು ಅಭಿಪ್ರಾಯಪಟ್ಟರೆ ಹಾವೆಲ್ ಮೊದಲಾದವರು ಅದು ಹಿಂದೂ ಕಲೆಯ ರೂಪಾಂತರವೆಂದು ಅಭಿಪ್ರಾಯಪಟ್ಟಿರುವರು. ಆದರೆ ನಿಜಾಂಶವು ಈ ಎರಡು ಪ್ರಬಲ ಅಭಿಪ್ರಾಯಗಳ ನಡುವೆ ಇದೆ. ಹಿಂದೂ ಕಲೆಯ ನಿರ್ಮಾಮಕಾರರಿಂದ ಇಸ್ಲಾಂ ಕಲೆಯು ರೂಪಾಂತರಗೊಂಡಿರುವುದೆಂಬ ವಿಷಯದಲ್ಲಿ ಸಂಶಯವಿಲ್ಲವಾದರೂ ಅದು ತನ್ನದೇ ಆದ ಶೈಲಿಯನ್ನು ಹೊಂದಿಲ್ಲವೆಂದು ಬಾವಿಸಲಾಗದು. ಮುಸ್ಲಿಮರು ಭಾರತದಲಿ್ಲ ತಮ್ಮ ಅಧಿಕಾರವನ್ನು ಸ್ಥಾಪಿಸುವ ವೇಳೆಗಾಗಲೇ ಅವರು ಕಟ್ಟಡಗಳ ನಿರ್ಮಾಣದಲ್ಲಿ ವಿಶೇಷ ಅಭಿರುಚಿಯನ್ನು ಹೊಂದಿದ್ದು ಕಲೆಯ ವಿಚಾರವಾಗಿ ತಮ್ಮದೇ ಆದ ಭಾವನೆಗಳನ್ನು ಬೆಳೆಸಿಕೊಂಡಿದ್ದರು. ಅವರು ಬಾಗ್ದಾದ್ ಮೊದಲಾದ ಕಡೆಗಳಲ್ಲಿ ಕಟ್ಟಲಾಗಿದ್ದ ಕಟ್ಟಡಗಳ ಪರಿಚಯ ಪಡೆದಿದ್ದರು. ಅವರು ಭಾರತಕ್ಕೆ ಬಂದ ಮೇಲೆ ಹಿಂದುಗಳ ಕಲೆಯ ಹಲವಾರು ವಿಶಿಷ್ಟ ಲಕ್ಷಣಗಳನ್ನು ಕಂಡರು ಮತ್ತು ಅವುಗಳನ್ನು ಇಸ್ಲಾಮಿಕ್ ಕಲೆಯ ಲಕ್ಷಣಗಳೊಂದಿಗೆ ಅಳವಡಿಸಿಕೊಂಡು ಕಟ್ಟಡಗಳನ್ನು ನಿರ್ಮಿಸ ತೊಡಗಿದರು. ಹೀಗೆ ಎರಡು ಶೈಲಿಗಳ ಸಂಮಿಳನದಿಂದ ನಿರ್ಮಿತವಾದ ಕಟ್ಟಡಗಳು ಇಂಡೋ ಮುಸ್ಲಿಂ ಶೈಲಿಯ ಅಥವ ಇಂಡೋ ಸಾರ್‌ಸೆನಿಕ್ ಶೈಲಿಯ ಕಟ್ಟಡಗಳೆಂದು ಕರೆಯಲ್ಪಟ್ಟವು.

ಭಾರತದ ಮೇಲೆ ಮೊಟ್ಟಮೊದಲಿಗೆ ಧಾಳಿಮಾಡಿದ ಅರಬ್ಬರು ಭಾರತದಲ್ಲಿಯಾವ ಕಟ್ಟಡಗಳನ್ನು ನಿರ್ಮಿಸಲಿಲ್ಲ. ಅವರು ಹಿಂದೂ ಸಂಸ್ಕೃತಿಯನ್ನು ಮೆಚ್ಚಿಕೊಂಡಿದ್ದರಲ್ಲದೆ ಹಿಂದೂ ಕಲಾಕಾರರ ಕೌಶಲದಿಂದ ವಿಸ್ಮಿತರಾಗಿದ್ದರು. ಕ್ರಿ.ಶ. ಹತ್ತನೆ ಶತಮಾನದಲ್ಲಿ ಭಾರತದ ಮೇಲೆ ದಂಡಯಾತ್ರೆ ಮಾಡಿದ ಘಸ್ನಿ ಮಹಮದನು ಹಿಂದು ಕಲಾಕಾರರ ಪ್ರತಿಭೆಗೆ ಮಾರುಹೋಗಿ ಸಾವಿರಾರು ಕುಶಲ ಕರ್ಮಿಗಳನ್ನು ಘಸ್ನಿಗೆ ಕರೆದುಕೊಂಡು ಹೋಗಿ ಘಸ್ನಿಯಲ್ಲಿ 'ಸ್ವರ್ಗೀಯ ಕಟ್ಟಡ' (Celestial bride) ವೆಂದು ಹೆಸರಾಗಿರುವ ಮಸೀದಿಯ ನಿರ್ಮಾಣಕಾರ್ಯಕ್ಕೆ ಅವರನ್ನು

ನೇಮಿಸಿದನು. ಅನಂತರ ಭಾರತದಲ್ಲಿ ಮುಸಲ್ಮಾನರ ಅಧಿಕಾರವನ್ನು ಸ್ಥಾಪಿಸಿದ ಗುಲಾಮಿ ಸಂತತಿಯ ದೊರೆಗಳು ತಮ್ಮ ಕಟ್ಟಡಗಳ ನಿರ್ಮಾಣ ಕಾರ್ಯದಲ್ಲಿ ಹಿಂದು ಕುಶಲ ಕರ್ಮಿಗಳನ್ನು ನೇಮಿಸಿಕೊಂಡಿದ್ದರು. ಕುತ್ಬುದ್ದೀನ್ ಮತ್ತು ಇಲ್ತಮಷ್‌ರ ಕಾಲದಲ್ಲಿ ನಿರ್ಮಿತವಾದ ಕಟ್ಟಡಗಳಲ್ಲಿ ದೆಹಲಿಯ ಕುತಬ್‌ಮಿನಾರ್, ಅಜ್ಮೀರದಲ್ಲಿನ ಕುತ್ಬಿಮಸೀದಿ ಹಾಗೂ ಬದಾವನ್‌ನಲ್ಲಿ ಕಟ್ಟಲ್ಪಟ್ಟ ಕೆಲವು ಕಟ್ಟಡಗಳು ಹೆಚ್ಚು ಪ್ರಸಿದ್ಧವಾದವುಗಳು. ಕುತಬ್‌ಮಿನಾರ್ ಕಟ್ಟಡವು ಮುಸ್ಲಿಮರ ವಾಸ್ತುಶಿಲ್ಪಕಲೆಯ ಅದ್ಭುತ ಸಾಧನೆಯಾಗಿದೆ. ಕುತ್ಬುದ್ದೀನ್ ಎಂಬ ಮುಸ್ಲಿಂ ಸಂತನ ಜ್ಞಾಪಕಾರ್ಥವಾಗಿ ಕಟ್ಟಲು ಕುತ್ಬುದ್ದೀನ್ ಐಬಕನಿಂದ ಪ್ರಾರಂಭವಾದ ಈ ಕಟ್ಟಡವು ಇಲ್ತಮಷ್‌ನ ಕಾಲದಲ್ಲಿ ಪೂರ್ಣಗೊಂಡಿತು. ಈ ಕಟ್ಟಡವು ಮೊದಲಿಗೆ 225 ಅಡಿಗಳು ಎತ್ತರವಾಗಿದ್ದು ಗೋಪುರಗಳ ನಿರ್ಮಾಣ ಕಾರ್ಯದಲ್ಲಿ ಒಂದು ಅದ್ಭುತಸಾಧನೆಯಾಗಿತ್ತು. ಫಿರೋಜ್‌ಷಹ ತುಘಲಕನ ಕಾಲದಲ್ಲಿ ಇದರ ಮೇಲುತುದಿಯು ಸಿಡಿಲಿನ ಅಪಘಾತಕ್ಕೊಳಗಾಯಿತು. ಅವನು ಆ ಭಾಗವನ್ನು ಕೆಡವಿಸಿ ಅದರಲ್ಲಿ ಎರಡು ಚಿಕ್ಕ ಮಹಡಿಗಳನ್ನು ಕಟ್ಟಿಸಿದನು. ಇದರಿಂದ ಅದರ ಎತ್ತರವು ಮತ್ತಷ್ಟು ಜಾಸ್ತಿಯಾಗಿ ಈಗ ಅದರ ಎತ್ತರವು 235 ಅಡಿಗಳಷ್ಟಿದೆ. 1503ರಲ್ಲಿ ಇದಕ್ಕೆ ಮತ್ತೊಮ್ಮೆ ಸಿಡಿಲು ಬಡಿಯಲು ಸಿಕಂದರ್ ಲೂದಿಯು ಪುನಃ ಅದನ್ನು ಜೀರ್ಣೋದ್ಧಾರ ಮಾಡಿದನು. ಈ ಕಾಲದಲ್ಲಿ ದೆಹಲಿಯಲ್ಲಿ ನಿರ್ಮಾಣಗೊಂಡ ಇತರ ಕಟ್ಟಡಗಳಲ್ಲಿ ಖುವಾತ್-ಉಲ್-ಇಸ್ಲಾಂ ಮಸೀದಿಯು ಹೆಸರುವಾಸಿಯಾದುದು. ಕುತ್ಬುದ್ದೀನನಿಂದ ಅಜ್ಮೀರದಲ್ಲಿ ನಿರ್ಮಿತವಾದ 'ಅದೈ-ದಿನ್-ಕಾ-ಜೋಂಪ್ರ' ಎಂಬ ಕಟ್ಟಡವನ್ನು ಇಲ್ತಮಷ್‌ನು ಜವನಿಕೆಗಳಿಂದ ಇನ್ನೂ ಹೆಚ್ಚು ಸುಂದರಗೊಳಿಸಿದನು. ಈ ಕಾಲದ ಹೆಸರುವಾಸಿಯಾದ ಇತರ ಕಟ್ಟಡಗಳಲ್ಲಿ ಇಲ್ತಮಷ್‌ನು ಬದಾವನ್ ರಾಜ್ಯದ ರಾಜ್ಯಪಾಲನಾಗಿದ್ದಾಗ (1203-9) ಕಟ್ಟಲ್ಪಟ್ಟ ಹೌಜ್-ಇ-ಷಾಮ್ಸಿ ಮಸೀದಿ, ಷಾಮ್‌ಸಿ-ಇದ್‌ಗಾ, ಹಾಗೂ ಅವನು ಸಿಂಹಾ ಸನಕ್ಕೆ ಬಂದ ಹನ್ನೆರಡು ವರ್ಷಗಳನಂತರ 1223ರಲ್ಲಿ ಕಟ್ಟಲ್ಪಟ್ಟ ಜಾಮಿ-ಮಸೀದಿ ಮತ್ತು ಜೋದ್‌ಪುರದಲ್ಲಿನ ಅತಾರ್‌ಕಿನ್-ಕ-ದರ್ವಾಜ ಮುಖ್ಯವಾದವುಗಳು. ಬಲ್ಬನ್ ಕೂಡ ಹೆಸರಾಂತ ನಿರ್ಮಾಣಕಾರನಾಗಿದ್ದು ಅನೇಕ ಕೋಟೆಗಳನ್ನು ನಿರ್ಮಿಸಿದನು. ಅವನ ಕಾಲದಲ್ಲಿ ಕಟ್ಟಲಾದ ಕಟ್ಟಡಗಳಲ್ಲಿ ದೆಹಲಿಯಲ್ಲಿ ಚಚ್ಚೌಕವಾಗಿ ಕಟ್ಟಲಾಗಿರುವ ಅವನ ಗೋರಿಯು ಮುಖ್ಯವಾದುದಾಗಿದೆ.

ಅಲ್ಲಾವುದ್ದೀನ್ ಖಿಲ್ಜಿಯ ಕಾಲದಲ್ಲಿ ದೆಹಲಿಯ ಸುಲ್ತಾನರ ಅಧಿಕಾರವು ಹೆಚ್ಚು ಪ್ರಬಲವಾಯಿತು. ಅವನು ತನ್ನ ಹೆಚ್ಚು ಕಾಲವನ್ನು ಯುದ್ಧಗಳಲ್ಲಿಯೆ ಕಳೆದರೂ ಅವನು ಅನೇಕ ಕೋಟೆಗಳನ್ನು, ಅರಮನೆಗಳನ್ನೂ, ಮಹಾದ್ವಾರವನ್ನು ಮತ್ತು ಕೆರೆ ಕಟ್ಟೆಗಳನ್ನು ಕಟ್ಟಿಸಿದನು. ಇವನ ಕಾಲದಲ್ಲಿ ಇಂಡೋ-ಇಸ್ಲಾಮಿಕ್ ಕಲೆಯು ಒಂದು ನಿರ್ದಿಷ್ಟ ಹಂತವನ್ನು ತಲುಪಿತು, ಕಿಲ್‌ರಾಯ್ ಪಿತರದಿಂದ ಈಶಾನ್ಯಕ್ಕೆ ಎರಡು ಮೈಲಿಗಳ ದೂರದಲ್ಲಿ ದೆಹಲಿಯ ಏಳು ನಗರಗಳಲ್ಲಿ ಎರಡನೆಯದಾದ 'ಸಿರಿ' ಎಂಬ ಹೊಸ ಪಟ್ಟಣವನ್ನು ನಿರ್ಮಿಸಿದನು. ಈ ಪಟ್ಟಣದ ಒಳಗೆ ಅಲ್ಲಾವುದ್ದೀನನು ಸಾವಿರ ಕಂಬಗಳಿಂದ ಕೂಡಿದ್ದ ಹಜಾರ್-ಸಿತೌನ್ ಮಬ ಅರಮನೆಯನ್ನು ನಿರ್ಮಿಸಿದ್ದನು. ಆದರೆ ಈಗ ಈ ಅರಮನೆಯು ನೆಲಸಮವಾಗಿದ್ದು ಅಲ್ಲಿ ದೊರೆತಿರುವ ಅದರ

ಪಳಿಯುಳಿಕೆಗಳು ಅಲ್ಲಾವುದ್ದೀನನ ವಾಸ್ತುಶಿಲ್ಪದ ಬೃಹತ್ ಕಲ್ಪನೆಯ ಮೇಲೆ ಬೆಳಕುಚೆಲ್ಲುತ್ತವೆ. ಅಲ್ಲದೆ ಈ ಪಟ್ಟಣದ ಪಶ್ಚಿಮಕ್ಕೆ ಹೌಜ್-ಇ-ಕಾಸ್ ಎಂಬ ದೊಡ್ಡ ಕೆರೆಯನ್ನು ನಿರ್ಮಿಸಿದ್ದನು. ಅಲ್ಲಾವುದ್ದೀನನು 1311ರಲ್ಲಿ ದೆಹಲಿಯಲ್ಲಿ ಕಟ್ಟಿಸಿದ 'ಅಲೈದರ್ವಾಜ' ಎಂಬ ಮಹಾದ್ವಾರವು ಇಸ್ಲಾಂ ವಾಸ್ತುಶಿಲ್ಪದಲ್ಲಿ ರತ್ನಪ್ರಾಯವಾದುದಾಗಿತ್ತೆಂದು ಪರಿಗಣಿಸಲ್ಪಟ್ಟಿತ್ತು. ನಿಜಾಮುದ್ದೀನ್ ಔಲಿಯನ ಗೋರಿಗೆ ಸಮೀಪದಲ್ಲಿ ಕಟ್ಟಲ್ಪಟ್ಟಿರುವ ಜಮತ್ ಖಾನ ಮಸೀದಿ, ಮತ್ತು ಬಯಾನದಲ್ಲಿ ಕುತ್ಬುದ್ದೀನ್ ಮುಬಾರಕ್‌ಷಹನು ನಿರ್ಮಿಸಿದ್ದ ಉಕ ಮಸೀದಿಯು ಖಿಲ್ಜಿಗಳ ಕಾಲದ ಇತರ ಪ್ರಸಿದ್ಧ ಕಟ್ಟಡಗಳಾಗಿದ್ದವು.

ಖಿಲ್ಜಿಗಳನಂತರ ಅಧಿಕಾರಕ್ಕೆ ಬಂದ ತುಘಲಕರ ಕಾಲದಲ್ಲಿ ಕಟ್ಟಲ್ಪಟ್ಟ ಕಟ್ಟಡಗಳು ಖಿಲ್ಜಿಗಳ ಕಾಲದಲ್ಲಿ ಕಟ್ಟಲ್ಪಟ್ಟ ಕಟ್ಟಡಗಳಿಗಿಂತ ಭಿನ್ನವಾಗಿದ್ದವು. ಇವುಗಳಲ್ಲಿ ಅಲಂಕಾರವು ಕಂಡುಬರದೆ ಸರಳವಾಗಿವೆ. ಘಿಯಾಸಿದ್ದೀನ್ ತುಘಲಕನು ಕುತುಬ್‌ಮಿನಾರ್‌ಗೆ ಪೂರ್ವಕ್ಕೆ ದೆಹಲಿಯ ಏಳು ನಗರಗಳಲ್ಲಿ ಮೂರನೆಯದಾದ ತೊಘಲಕಾಬಾದ್ ಪಟ್ಟಣವನ್ನು ನಿರ್ಮಿಸಿದನು. ಈ ನಗರವು ಸಹ ಸಂಪೂರ್ಣವಾಗಿ ಹಾಳಾಗಿಹೋಗಿದೆ ಮತ್ತು ಘಿಯಾಸುದ್ದೀನನು ನಿರ್ಮಿಸಿದ ಅರಮನೆಯ ಅವಶೇಷಗಳೂ ಸಹ ಒಂದೂ ಉಳಿದಿಲ್ಲ. ಆದರೂ ಈ ಅರಮನೆಯು ಚಿನ್ನದ ಇಟ್ಟಿಗೆಗಳಿಂದ ನಿರ್ಮಿಸಲ್ಪಟ್ಟಿದ್ದು ಸೂರ್ಯೋದಯದ ಸಮಯದಲ್ಲಿ ಅದರ ಮೇಲೆ ಬಿದ್ದ ಬೆಳಕಿನಿಂದ ಹೊರಟ ರಶ್ಮಿಗಳು ಕಣ್ಣುಕುಕ್ಕುತ್ತಿದ್ದುವೆಂದು ಇಬನ್ ಬಟೂಟನು ಹೇಳುತ್ತಾನೆ. ಮಹಮದ್-ಬಿನ್-ತುಘಲಕನು ನಾಲ್ಕನೆ ಪಟ್ಟಣವಾದ ಜೆಹಾನ್‌ಪಾನಹ್ ಎಂಬ ಪಟ್ಟಣವನ್ನು ನಿರ್ಮಿಸಿದನು ಮತ್ತು ತುಘಲಕಾಬಾದ್ ಪಟ್ಟಣದ ಪಕ್ಕದಲ್ಲಿ ಅದೈಲಬಾದ್ ಎಂಬ ಕೋಟೆಯನ್ನು ಕಟ್ಟಿಸಿದನು. ಫಿರೋಜ್‌ಷಹ ತುಘಲಕನು ಒಬ್ಬ ಹೆಸರಾಂತ ನಿರ್ಮಾಣಕಾರನಾಗಿದ್ದನು. ಅವನು ಅನೇಕ ಪಟ್ಟಣಗಳನ್ನು, ಕೋಟೆಗಳನ್ನು, ಅರಮನೆಗಳನ್ನು, ಮಸೀದಿಗಳನ್ನು, ಕಾಲೇಜುಗಳನ್ನು, ಗೋರಿಗಳನ್ನು, ಕೆರೆಕಟ್ಟೆ ಮತ್ತು ಜಲಾಶಯಗಳನ್ನು ಮತ್ತು ಉದ್ಯಾನವನಗಳನ್ನು ನಿರ್ಮಿಸಲು ಅಪಾರ ಹಣವನ್ನು ವೆಚ್ಚಮಾಡಿದನು. ದೆಹಲಿಯಲ್ಲಿ ಐದನೆ ಪಟ್ಟಣವಾದ ಫಿರೋಜಾಬಾದ್ ಎಂಬ ಪಟ್ಟಣವನ್ನು ನಿರ್ಮಿಸಿದನು. ಈ ನಗರದಲ್ಲಿ ಅವನು ಒಂಬತ್ತು ಮಸೀದಿಗಳನ್ನು ಮತ್ತು ಮೂರು ಅರಮನೆಗಳನ್ನು ಕಟ್ಟಿಸಿದನು. ಈ ನಗರದ ಅವಶೇಷಗಳನ್ನು ಶಹಜಾನ್‌ಬಾದ್ ನಗರದ ನಿವೇಶನದಲ್ಲಿ ಇಂದೂ ನೋಡಬಹುದಾಗಿದೆ. ಇವುಗಳಲ್ಲದೆ ಅವನು ಫತಹಾಬಾದ್ ಮತ್ತು ಹಿಸಾರ್-ಫಿರೋಜ್ ಎಂಬ ಮತ್ತೆರಡು ನಗರಗಳನ್ನೂ ತನ್ನ ಚಿಕ್ಕಪ್ಪ ಮಹಮದ್-ಬಿನ್-ತುಘಲಕನ ಜ್ಞಾಪಕಾರ್ಥವಾಗಿ ಗೋಮತಿ ನದಿಯ ದಡದ ಮೇಲೆ ಜಾನ್ಪುರ ಎಂಬ ಪಟ್ಟಣದ ನಿರ್ಮಾಣಕ್ಕೆ ಶಂಕು ಸ್ಥಾಪನೆಯನ್ನು ಮಾಡಿದನು. ಹೌಜ್-ಇ-ಕಾಸ್‌ನಲ್ಲಿ ಕಾಲೇಜೊಂದನ್ನು ಕಟ್ಟಿಸಿದನು. ಇಲ್ಲಿ ನಿರ್ಮಿಸಲಾಗಿರುವ ಫಿರೋಜ್‌ಷಹನ ಗೋರಿಯನ್ನು ಇಂದೂ ನೋಡಬಹುದಾಗಿದೆ. ಇವನ ಕಾಲದಲ್ಲಿ ಕಟ್ಟಲಾದ ಇತರ ಪ್ರಸಿದ್ಧ ಕಟ್ಟಡಗಳಲ್ಲಿ ಕಾನ್-ಇ-ಜೆಹಾನ್‌ನಗೋರಿ, ಕಬೀರ್-ಉದ್ದೀನ್ ಔಲಿಯನಗೋರಿ, ಕಲಿ-ಮಸೀದಿ, ಕಿರ್ಕಿ ಮಸೀದಿಗಳು ಹೆಸರುವಾಸಿಯಾದವುಗಳಾಗಿವೆ. ಫಿರೋಜನು ಕಾಲುವೆಗಳು ನಿರ್ಮಾಣದಲ್ಲೂ ಆಸಕ್ತಿ ಹೊಂದಿದ್ದನು.

ಅವನು ನಿರ್ಮಿಸಿದ ಹೊಸ ಪಟ್ಟಣಗಳ ನೀರು ಪೂರೈಕೆಗಾಗಿ ಒಳ್ಳೆಯ ಕಾಲುವೆಗಳನ್ನು ನಿರ್ಮಿಸಿದ್ದನು. ರಾಜಧಾನಿ ದೆಹಲಿಯಲ್ಲಿ ಉದ್ಯಾನವಗಳನ್ನು ನಿರ್ಮಿಸಿ ಸುಂದರ ಗೊಳಿಸಿದ್ದನು. ಫಿರೋಜನ ಕಾಲದಲ್ಲಿ ಗಮನಿಸಬೇಕಾದ ಮತ್ತೊಂದು ಸಂಗತಿಯೆಂದರೆ ಅಂಬಾಲ ಜಿಲ್ಲೆಯ ತೋಪು ಮತ್ತು ಮೀರತ್‌ಜಿಲ್ಲೆಯ ಮತ್ತೊಂದು ಹಳ್ಳಿಯಲ್ಲಿದ್ದ ಅಶೋಕ ಚಕ್ರವರ್ತಿಯ ಎರಡು ಶಿಲಾಸ್ಥಂಭಗಳನ್ನು ದೆಹಲಿಗೆ ಸಾಗಿಸಿ ದೆಹಲಿಯಲ್ಲಿರಿಸಿದನು. ಫಿರೋಜ್ ತುಘಲಕನಿಗೆ ಕಟ್ಟಡಗಳ ನಿರ್ಮಾಣದಲ್ಲಿ ಎಷ್ಟರ ಮಟ್ಟಿನ ಆಸಕ್ತಿಯಿತ್ತೆಂದರೆ ಅವನು ಅದಕ್ಕಾಗಿ ದಿವಾನ್-ಇ-ವಿಜಾರತ್ ಎಂಬ ಪ್ರತ್ಯೇಕ ಇಲಾಖೆಯನ್ನೇ ಏರ್ಪಡಿಸಿದ್ದನು. ಯಾವ ಹೊಸ ಕಟ್ಟಡಗಳನ್ನು ಕಟ್ಟಬೇಕಾದರೂ ಆ ಕಟ್ಟಡಗಳ ನಕ್ಷೆಯನ್ನು ಈ ಇಲಾಖೆಗೆ ಪರಿಶೀಲನೆಗೆ ಕಳುಹಿಸಬೇಕಿತ್ತು ಮತ್ತು ಅದಕ್ಕೆ ಸುಲ್ತಾನನ ಅನುಮತಿಯನ್ನು ಪಡೆಯಬೇಕಿತ್ತು.

ತುಘಲಕರ ನಂತರ ದೆಹಲಿ ಸಾಮ್ರಾಜ್ಯವನ್ನಾಳಿದ ಸೈಯದ್ ಮತ್ತು ಲೂದಿಸುಲ್ತಾನರುಗಳ ಕಾಲದಲ್ಲಿ ಕಟ್ಟಡಗಳ ನಿರ್ಮಾಣ ಕಾರ್ಯವು ಸ್ಥಗಿತಗೊಂಡಿತು. 1399ರಲ್ಲಿ ತೈಮೂರನು ಭಾರತದ ಮೇಲೆ ಧಾಳಿಮಾಡಿ ಅಪಾರ ಐಶ್ವರ್ಯವನ್ನು ಮತ್ತು ಹಣವನ್ನು ದೋಚಿದನು. ಹಣಕಾಸಿನ ಕೊರತೆಯಿಂದಾಗಿ ಸುಲ್ತಾನರುಗಳು ದೊಡ್ಡ ದೊಡ್ಡ ಕಟ್ಟಡಗಳನ್ನು ನಿರ್ಮಿಸಲಾಗಲಿಲ್ಲ. ಆದಾಗ್ಯೂ ಸೈಯದ್ ಸಂತತಿಯ ಮೊದಲಿನ ಇಬ್ಬರು ಸುಲ್ತಾನರುಗಳು ಖಿಜಿರಾಬಾದ್ ಮತ್ತು ಮುಬಾರಕಾಬಾದ್ ಎಂಬೆರಡು ಪಟ್ಟಣಗಳನ್ನು ನಿರ್ಮಿಸಿದರು. ಸೈಯದರು ಮತ್ತು ಲೂದಿಗಳ ಕಾಲದಲ್ಲಿ ಹೆಚ್ಚಾಗಿ ಗೋರಿಗಳು ಮತ್ತು ಮಸೀದಿಗಳು ನಿರ್ಮಾಣಗೊಂಡವು. ಅವುಗಳಲ್ಲಿ ಬಾರ-ಖಾನ್ ಕಾಗುಂಬಜ್, ಛೋಟೇಕಾನ್‌ಗುಂಬಜ್, ಷಿಸ್‌ಗುಂಬಜ್, ದಾದಿಕಾಗುಂಬಜ್, ಸಿಕಂದರ್ ಲೂದಿಯು ದೆಹಲಿಯಲ್ಲಿ ಕಟ್ಟಿಸಿದ್ದ ಮೋತಿ-ಕಿ-ಮಸೀದಿಯು ಮುಖ್ಯವಾದವುಗಳು. ಲೂದಿಸುಲ್ತಾನರ ಆಳ್ವಿಕೆಯೊಂದಿಗೆ ದೆಹಲಿಯ ಸುಲ್ತಾನರ ಆಳ್ವಿಕೆಯು ಕೊನೆಗಂಡುಮೊಗಲರ ಅಧಿಕಾರವು ಸ್ಥಾಪಿಸಲ್ಪಟ್ಟು ಭಾರತದ ಇತಿಹಾಸದಲ್ಲಿ ಮತ್ತೊಂದು ಹೊಸ ಅಧ್ಯಾಯವು ಆರಂಭವಾಯಿತು.

ಈ ಕಾಲದಲ್ಲಿ ಪ್ರಾದೇಶಿಕ ಶೈಲಿಯಲ್ಲಿ ಬಂಗಾಳ ಜಾನ್ಪುರ ಗುಜರಾತು ಬಹಮನಿ ಮತ್ತು ವಿಜಯನಗರ ರಾಜ್ಯಗಳಲ್ಲೂ ನೂರಾರು ಕಟ್ಟಡಗಳು ನಿರ್ಮಿತವಾದವು. ಬಂಗಾಳದಲ್ಲಿ ಭಕ್ತಿಯಾರ್-ಉದ್ದೀನ್-ಖಿಲ್ಜಿಯು ಮಸೀದಿಗಳು. ಕಾಲೇಜುಗಳು, ವಿಶ್ರಾಂತಿ ಗೃಹಗಳು ಹಾಗೂ ಮತ್ತಿತರ ಸಾರ್ವಜನಿಕ ಕಟ್ಟಡಗಳನ್ನು ಕಟ್ಟಿಸಿದನು. ಘೋರ್‌ನ ಸುನ್ನಿ ಅರಸರು ಸಹ ಕಟ್ಟಡಗಳ ನಿರ್ಮಾಣದಲ್ಲಿ ಹೆಚ್ಚಿನ ಉತ್ಸಾಹ ತೋರಿಸಿದ್ದರು. ಅವರು ದೆಹಲಿ ಮತ್ತು ಜಾನ್ಪುರದ ಕಲೆಗಿಂತ ಭಿನ್ನರೀತಿಯ ಕಲೆಯನ್ನು ಬೆಳೆಸಿದರು. ಘೋರ್‌ನ ಕಟ್ಟಡಗಳೆಲ್ಲವೂ ಇಟ್ಟಿಗೆಯಿಂದ ಕಟ್ಟಲ್ಪಟ್ಟು ಹಿಂದೂ ದೇವಾಲಯಗಳ ಮಾದರಿಯನ್ನು ಅನುಸರಿಸಿದಂತೆ ಕಂಡುಬರುತ್ತದೆ. ಹುಸೇನ್‌ಷಹನ ಗೋರಿ, ಹಾಗೂ ಸುಲ್ತಾನ್‌ನಸರತ್‌ಷಹನಿಂದ ಕಟ್ಟಿಸಲ್ಪಟ್ಟ ಕಾದಮ್-ರಾಸುಲ್ ಕಟ್ಟಡಗಳು ಅತ್ಯಂತ ಹೆಸರುವಾಸಿಯಾದ ಕಟ್ಟಡಗಳಾಗಿವೆ. ಇವೆಲ್ಲವುಗಳಿಗಿಂತ ಘೋರ್‌ಗೆ ಇಪ್ಪತ್ತೈದು ಮೈಲಿಗಳ ದೂರದಲ್ಲಿ ಪಾಂಡುವ ಎಂಬಲ್ಲಿ ಕಟ್ಟಲಾಗಿರುವ ಅಧೀನ ಮಸೀದಿಯು ಹೆಚ್ಚು ಆಕರ್ಷಕವಾಗಿದೆ. ಈ ಮಸೀದಿಯನ್ನು 1368ರಲ್ಲಿ ಸಿಕಂದರ್‌ಷಹನು ಕಟ್ಟಿಸಿದನು.

ಜಾನ್ಪುರದ ದೊರೆಗಳು ಕಲೆ ಮತ್ತು ಸಾಹಿತ್ಯಕ್ಕೆ ಉದಾರಾಶ್ರಯ ಕೊಟ್ಟಿದ್ದರು. ಸುಲ್ತಾನ್ ಇಬ್ರಾಹಿಂನ ಕಾಲದಲ್ಲಿ ಪೂರ್ಣಗೊಂಡ ಅಟಲ ಮಸೀದಿ, ಹುಸೇನ್‌ಷಹನ ಕಾಲದಲ್ಲಿ ಕಟ್ಟಲಾದ ಜಾಮ್-ಇ-ಮಸೀದಿ, ಲಾಲ್‌ದರ್‍ವಾಜ ಮಸೀದಿ, ಮತ್ತು ಕಾಲಿಸ್ ಮುಖಾಲಿಸ್‌ಗಳೇ ಮೊದಲಾದವುಗಳು ಜಾನ್ಪುರದ ಶೈಲಿಗೆ ಉತ್ತಮ ನಿದರ್ಶನಗಳಾಗಿವೆ.

ಪ್ರಾದೇಶಿಕ ಶೈಲಿಗಳಲ್ಲಿ ನಿರ್ಮಿತವಾದ ಕಟ್ಟಡಗಳಲ್ಲಿ ಗುಜರಾತಿನಲ್ಲಿ ಕಟ್ಟಲಾಗಿರುವ ಕಟ್ಟಡಗಳು ಹೆಚ್ಚು ಸುಂದರವಾಗಿವೆ. ಮುಸಲ್ಮಾನರ ಆಕ್ರಮಣಕ್ಕೆ ಮೊದಲು ಗುಜರಾತಿನಲ್ಲಿ ಕಟ್ಟಲ್ಪಟ್ಟಿದ್ದ ಕಟ್ಟಡಗಳಲ್ಲಿ ಹಿಂದೂ ಮತ್ತು ಜೈನಮತಗಳ ಪ್ರಭಾವವು ಕಂಡುಬರುತ್ತಿತ್ತು. ಗುಜರಾತು ಮುಸಲ್ಮನರ ವಶವಾದ ಮೇಲೆ ಮುಸಲ್ಮಾನರು ತಮ್ಮ ಕಟ್ಟಡಗಳನ್ನು ಕಟ್ಟಲು ಅಲ್ಲಿನ ಕಲಾ ನಿಪುಣರನ್ನು ನೇಮಿಸಿಕೊಂಡರು. ಅವರು ಇಸ್ಲಾಂ ಧರ್ಮದ ಅಭಿರುಚಿಗೆ ತಕ್ಕಂತೆ ಅಗತ್ಯ ಮಾರ್ಪಾಟುಗಳೊಂದಿಗೆ ಹಿಂದು ಮತ್ತು ಜೈನರ ಮಾದರಿಗಳನ್ನು ಅಳವಡಿಸಿಕೊಂಡರು. ಅಹಮದ್‌ಷಹನು ಕಟ್ಟಡಗಳ ನಿರ್ಮಾಣದಲ್ಲಿ ಆಸಕ್ತಿಯುಳ್ಳವನಾಗಿದ್ದನು. ಅಹಮದ್‌ಷಹನು 15ನೇ ಶತಮಾನದ ಪೂರ್ವಾರ್ಧದಲ್ಲಿ ಅಹಮದಾಬಾದ್ ಪಟ್ಟಣವನ್ನು ನಿರ್ಮಿಸಿದನು ಮತ್ತು ಅಲ್ಲಿ ಅನೇಕ ಮಸೀದಿಗಳನ್ನು ಅರಮನೆಗಳನ್ನು ಕಟ್ಟಿಸಿದನು. 15ನೇ ಶತಮಾನದಲ್ಲಿ ಅಹಮದಾಬಾದ್, ಕ್ಯಾಂಬೆ ಚಂಪನೀರ್ ಮತ್ತಿತರ ಸ್ಥಳಗಳಲ್ಲಿ ಅನೇಕ ಕಟ್ಟಡಗಳು ನಿರ್ಮಾಣವಾದವು. ಅವುಗಳಲ್ಲಿ ಮುಹಾಫಿಜ್-ಖಾನನ ಮಸೀದಿಯು ಹೆಚ್ಚು ಸುಂದರವಾದುದಾಗಿದೆ. ಗುಜರಾತ್ ರಾಜ್ಯವು ಮಸೀದಿಗಳು, ಗೋರಿಗಳೇ ಅಲ್ಲದೆ, ಮೆಟ್ಟಲುಗಳಿಂದ ಕೂಡಿದ ಬಾವಿಗಳಿಗೂ, ನೀರಾವರಿ ಕಾಲುವೆಗಳಿಗೂ, ಸಾರ್ವಜನಿಕ ಉದ್ಯಾನವನಗಳಿಗೂ ಹೆಸರುವಾಸಿಯಾಗಿತ್ತು.

15ನೇ ಶತಮಾನದಲ್ಲಿ ಮಾಳವ ರಾಜ್ಯದಲ್ಲೂ ಅನೇಕ ಕಟ್ಟಡಗಳು ನಿರ್ಮಾಣಗೊಂಡವು. ಮಾಳವದ ರಾಜಧಾನಿ 'ಮಂಡು'ವಿನಲ್ಲಿ ಇಂದೂ ಕೂಡ ನೋಡಬಹುದಾದ ದೊಡ್ಡ ದೊಡ್ಡ ಕಟ್ಟಡಗಳು ಮಂಡು ಸುಲ್ತಾನರ ಕಲಾಭಿರುಚಿಗೆ ಸಾಕ್ಷಿಯಾಗಿವೆ. ಜಾಮಿ-ಮಸೀದಿ, ಹಿಂದೋಲ-ಮಹಲ್ ಜಹಾಜ್-ಮಹಲ್ ಹುಷಾಂಗ್‌ಷಹನ ಗೋರಿ, ಬಾಜ್‌ಬಹದ್ದೂರ್ ಮತ್ತು ರಾಣಿ 'ರೂಪವತಿ'ಯ ಅರಮನೆಗಳು ಹೆಚ್ಚು ಹೆಸರುವಾಸಿಯಾದ ಕಟ್ಟಡಗಳಾಗಿವೆ.

ದಕ್ಷಿಣಭಾರತದಲ್ಲಿ ಬಹಮನಿ ಮತ್ತು ವಿಜಯನಗರದ ಅರಸರುಗಳು ಕಟ್ಟಡಗಳ ನಿರ್ಮಾಣದಲ್ಲಿ ಯಾರಿಗೂ ಹಿಂದುಳಿದಿರಲಿಲ್ಲ. ಬಹಮನಿ ದೊರೆಗಳು ಬೀದರ್ ಮೊದಲಾದ ಪಟ್ಟಣಗಳನ್ನು ಸ್ಥಾಪಿಸಿದ್ದಲ್ಲದೆ ಮಸೀದಿಗಳನ್ನು ಮತ್ತು ಕೋಟೆಕೊತ್ತಲಗಳನ್ನು ಕಟ್ಟಿಸಿದರು. ಗುಲ್ಬರ್ಗ ಮತ್ತು ಬೀದರ್‌ಗಳಲ್ಲಿರುವ ಮಸೀದಿಗಳು ದಖನ್ನಿನ ಕಲೆಯ ಅತ್ಯುತ್ತಮ ನಿದರ್ಶನಗಳಾಗಿವೆ. ಬಹಮನಿಯವರಿಂದ ಕಟ್ಟಲ್ಪಟ್ಟ ಹೆಸರುವಾಸಿಯಾದ ಕಟ್ಟಡಗಳಲ್ಲಿ ಗುಲ್ಬರ್ಗದಲ್ಲಿ ಪರ್ಶಿಯನ್ ಕಲಾಕಾರರಿಂದ ಕಟ್ಟಲ್ಪಟ್ಟ ಜಾಮಿ-ಮಸೀದಿ, ದೌಲತಾಬಾದಿನಲ್ಲಿರುವ ಚಾಂದ್‌ಮಿನಾರ್, ಮಹಮದ್ ಗವಾನನಿಂದ ಪರ್ಶಿಯನ್ ಮಾದರಿಯಲ್ಲಿ ಬೀದರ್‌ನಲ್ಲಿ ಕಟ್ಟಿಸಲ್ಪಟ್ಟಿದ್ದ ಕಾಲೇಜು ಬಹು ಮುಖ್ಯವಾದವುಗಳು. ಬಹಮನಿ ದೊರೆಗಳು ಕೋಟೆಕೊತ್ತಲಗಳನ್ನು ನಿರ್ಮಿಸಿ ಹೆಸರುವಾಸಿಯಾಗಿದ್ದಾರೆ. ಅವರು ಕಟ್ಟಿಸಿದ ಕೋಟೆಗಳಲ್ಲಿ ಮಹೂರ್ ಕೋಟೆಯು ಸಾತ್ಪುರ ಬೆಟ್ಟಗಳ ಶ್ರೇಣಿಗಳಲ್ಲಿನ

ಹಿಂದೂ ರಾಜರುಗಳ ವಿರುದ್ಧ ರಕ್ಷಣೆಗಾಗಿ ಕಟ್ಟಿದುದಾಗಿತ್ತು. ಇವುಗಳಲ್ಲದೆ ಪರೆಂದ ನಾಲ್‌ದುರ್ಗ ಮತ್ತು ಪನ್ಹಲಗಳಲ್ಲೂ ತಮ್ಮ ಅಧಿಕಾರವನ್ನು ಭದ್ರಪಡಿಸಿಕೊಳ್ಳಲು ಕೋಟೆಗಳನ್ನು ನಿರ್ಮಿಸಿದ್ದರು. ಗುಲ್ಬರ್ಗದಲ್ಲಿ ಅನೇಕ ಗೋರಿಗಳನ್ನು ನಿರ್ಮಿಸಿದರು ಅವುಗಳಲ್ಲಿ ಅಲ್ಲಾವುದ್ದೀನ್ ಹಸನ್‌ಷಹನ ಗೋರಿ, ಒಂದನೆ ಮತ್ತು ಎರಡನ ಮಹಮದ್‌ಷಹನ ಗೋರಿಗಳು, ಮುಜಾಹಿದ್‌ಷಹ ದಾವುದ್‌ಷಹ, ಘಿಯಾಸುದ್ದೀನ್ ಮತ್ತು ಫಿರೋಜ್‌ಷಹ ಹಾಗೂ ಅವರ ಕುಟುಂಬದವರ ಗೋರಿಗಳು ಪ್ರಖ್ಯಾತಿ ಪಡೆದಿವೆ. ಇವುಗಳೆಲ್ಲವನ್ನೂ 'ಸಪ್ತಗುಂಬಜ್'ಗಳೆಂದು ಒಟ್ಟಿಗೆ ಕರೆಯಲಾಗಿದೆ. ಬೀದರ್ ನಗರವನ್ನು ಅಹಮದ್‌ಷಹನು ಸ್ಥಾಪಿಸಿದನು. ಇಲ್ಲಿ ಮುಖ್ಯವಾಗಿ ಕಂಡುಬರುವ ಕಟ್ಟಡಗಳಲ್ಲಿ ಅಹಮದ್‌ಷಹವಾಲಿಯ ಗೋರಿ, ಮತ್ತು ಮೂರನೆ ಮಹಮದ್ ಷಹನು ಕಟ್ಟಿಸಿದ ಸೋಲಾ ಮಸೀದಿ ಮುಖ್ಯವಾದವು. ದಖನ್ನಿನ ಷಾಹಿ ರಾಜ್ಯಗಳಲ್ಲಿ ಅತ್ಯುತ್ತಮವಾದ ಕಲೆಯು ಬಿಜಾಪುರದಲ್ಲಿ ಕಂಡುಬರುತ್ತದೆ. ಗೋಲ್‌ಗುಂಬಜ್ ಎಂದು ಹೆಸರುವಾಸಿಯಾಗಿರುವ ಮಹಮದ್ ಅದಿಲ್‌ಷಹನ ಗೋರಿಯು ಹೆಚ್ಚು ಸುಂದರವಾಗಿದೆ.

ಕಲಾಭಿಮಾನಿಗಳಾಗಿದ್ದ ವಿಜಯನಗರದ ಅರಸರು ಕಟ್ಟಡಗಳ ನಿರ್ಮಾಣದಲ್ಲಿ ಹೆಚ್ಚಿನ ಉತ್ಸಾಹ ಹೊಂದಿದ್ದರು. ಅವರು ಅನೇಕ ಸೌಧಗಳನ್ನು ಮಂತ್ರಾಲೋಚನಾ ಸಭಾಂಗಣಗಳನ್ನೂ, ಸಾರ್ವಜನಿಕ ಕಛೇರಿಗಳನ್ನೂ ಕಾಲುವೆಗಳನ್ನು ಸ್ನಾನಘಟ್ಟಗಳನ್ನು ದೇವಾಲಯಗಳು, ಅರಮನೆಗಳು ಹಾಗೂ ನಾಗಲಾಪುರವೇ ಮೊದಲಾದ ಪಟ್ಟಣಗಳನ್ನು ನಿರ್ಮಿಸಿದರು. ನಗರದ ನೀರು ಪೂರೈಕೆಗಾಗಿ ನೀರಿನ ಕೊಳಾಯಿಗಳನ್ನೂ ನಿರ್ಮಿಸಿದರು ಅವರು ಕಟ್ಟಿಸಿದ ದೇವಾಲಯಗಳ ಸಂಖ್ಯೆಯು ನೂರಾರು. ಅವುಗಳಲ್ಲಿ ಮುಖ್ಯವಾದವುಗಳೆಂದರೆ ಹಜಾರ ರಾಮಸ್ವಾಮಿ ದೇವಾಲಯ, ವಿರೂಪಾಕ್ಷ ದೇವಾಲಯ ವಿಠಲಸ್ವಾಮಿ ದೇವಾಲಯ, ವೀರಭದ್ರಸ್ವಾಮಿ ದೇವಾಲಯ, ದುರ್ಗಿದೇವಾಲಯ ಗಾಣಗಿತ್ತಿ ದೇವಾಲಯ, ಉದ್ದನ ವೀರಭದ್ರ ದೇವಾಲಯ, ಸರಸ್ವತಿ ದೇವಾಲಯ ವಿಜಯನಗರದ ಅರಸರು ಶಿಲ್ಪಕಲೆ ಮತ್ತು ಚಿತ್ರಕಲೆಗೂ ಪ್ರೋತ್ಸಾಹ ಕೊಟ್ಟಿದ್ದರು ಪರ್ಶಿಯದ ಪ್ರವಾಸಿ ಅಬ್ದುರ್ ರಜಾಕ್ ಮತ್ತು ಪೋರ್ಚುಗಲ್ಲಿನ ಪ್ರವಾಸಿ ನ್ಯೂನಿಜ್‌ರವರ ಬರವಣಿಗೆಯ ವರ್ಣನೆಗಳಿಂದ ಶಿಲ್ಪಕಲೆ ಮತ್ತು ಚಿತ್ರಕಲೆಯಲ್ಲಿ ಕಲಾಕಾರರು ಹೆಚ್ಚಿನ ಪ್ರಾವೀಣ್ಯತೆ ಹೊಂದಿದ್ದರೆಂದು ತಿಳಿದುಬರುವುದಲ್ಲದ ವಿಜಯನಗರದ ಸಾಮ್ರಾಜ್ಯದಲ್ಲಿ ಕಂಡುಬರುತ್ತಿದ್ದ ಗುಡಿಗೋಪುರಗಳಿಂದ ಅದೊಂದು ದೇವಲೋಕವೇ ಆಗಿದ್ದಿತೆಂಬುದಾಗಿ ಅಭಿಪ್ರಾಯಪಡಬಹುದಾಗಿದೆ.

**ಸಾಹಿತ್ಯ**

ಮಧ್ಯಕಾಲೀನಯುಗದಲ್ಲಿ ವಿವಿಧ ಭಾಷೆಗಳಲ್ಲಿ ವಿಪುಲವಾಗಿ ರಚಿತವ ಸಾಹಿತ್ಯದ ದೀರ್ಘವಿವರಣೆಯನ್ನು ಇಲ್ಲಿ ಕೊಡುವುದು ಕಷ್ಟ. ದೆಹಲಿಯ ಸುಲ್ತಾನ ಕೆಲವರು ಸಾಹಿತ್ಯ ಮತ್ತು ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹವಿತ್ತಿದ್ದರು. ಸುಲ್ತಾನರು ಮಾದ್ರಸಗಳು ಅಥವ ಕಾಲೇಜು ಮತ್ತು ಮಕ್ತಾಬ್ಸ್ ಅಥವ ಪ್ರೈಮರಿ ಶಾಲೆಗಳ ಸ್ಥಾಪಿಸಿದ್ದರು. ಮಾದ್ರಸಗಳಲ್ಲಿ ಮುಖ್ಯವಾಗಿ, ರಾಜಕೀಯಶಾಸ್ತ್ರ, ತತ್ವಶಾಸ್ತ್ರ, ಕಾನೂ ಧರ್ಮಶಾಸ್ತ್ರ, ವ್ಯಾಕರಣ, ತರ್ಕಶಾಸ್ತ್ರ ಮತ್ತು ದರ್ಶನಶಾಸ್ತ್ರಗಳನ್ನೂ ಮಕ್ತಾಬ್ಸ್‌ಗ